


ಕನ್ನಡ ವೇದಭಾಷ್ಯ ಸಂಪುಟ - ೧೫

# ಋಗ್ವೇದ ಭಾಷ್ಯ

## ಭಾಗ - ೩

ಸ್ವಾಮೀ ದಯಾನಂದ ಸರಸ್ವತೀ

ವೇದಭಾಷ್ಯ ಪ್ರಕಾಶನ ಸಮಿತಿ, ಬೆಂಗಳೂರು.

ಕನ್ನಡ ವೇದಭಾಷ್ಯ ಯೋಜನೆ ಸಂಪುಟ - ೧೫

# ಋಗ್ವೇದ ಭಾಷ್ಯ

## {ಭಾಗ - ೩}

ಭಾಷ್ಯಕಾರರು :

**ಸ್ವಾಮೀ ದಯಾನಂದ ಸರಸ್ವತೀ**

ಭಾಷ್ಯಾನುವಾದ:

**ವಿದ್ವಾನ್ ವಾಸುದೇವ ಪರಾಂಜಪೆ**

ಪ್ರಧಾನ ಸಂಪಾದಕರು : **ಪಂ. ಸುಧಾಕರ ಚತುರ್ವೇದೀ**

ಸಂಪಾದಕರು : **ಶ್ರುತಿಪ್ರಿಯ**

ಆರ್ಯಸಮಾಜ

ಪ್ರಕಾಶನ ವಿಭಾಗ

ವೇದಭಾಷ್ಯ ಪ್ರಕಾಶನ ಸಮಿತಿ

ಸ್ವಾಮೀ ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ,

ಬೆಂಗಳೂರು - 560 004

ದೂರವಾಣಿ: 080 - 2234 2715

ವೈವಸ್ವತ ಮನ್ವಂತರ ೨೮ನೆಯ ಚತುರ್ಯುಗ ಯುಗಾಬ್ದ ೫೧೧೦ ಶ್ರೀ ವಿರೋಧೀ ಸಂ|| ಪುಷ್ಯ

ಪ್ರತಿಗಳು 4000 ಇಸವಿ 2009 ಸದಸ್ಯರ ವಿತರಣೆಗೆ

# ऋग्वेद भाष्यम् (तृतीयो भागः)

# RIGVEDA BHASHYAM - (PART III)


| | | |
|---|---|---|
| Rigveda commented upon by (in Sanskrit & Hindi) | - | Swami Dayananda Saraswathi |
| Kannada Translation | - | Vidwan Vasudeva paranjape |
| First Edition | - | 2009 A.D. |
| Copies | - | 4000 |
| Pages | - | 500+14 |
| D.T.P. | - | *Shivaranjini* |
| Printing and Cover page Design by | - | **Abhimaani Publications Ltd. Bangalore-10 Ph : 23123141** |

Published by :

Arya Samaj

Publication Division

Vedabhashya Prakashana Samithi,

Arya Samaj, Swami Shraddhananda Bhavan, V.V.Puram, Bangalore - 04

Phone : 080- 2234 2715


---

# ಪ್ರಧಾನ ಸಂಪಾದಕರ ನುಡಿ

ಋಗ್ವೇದದ ಕನ್ನಡ ಭಾಷಾಂತರವನ್ನು ವಾಚಕರ ಕೈಗಿಡುವಾಗ ಪೀಠಿಕೆಯ ರೂಪದಲ್ಲಿ ನಾಲ್ಕು ಮಾತುಗಳನ್ನಾಡುವುದು ಆವಶ್ಯಕವೆಂದು ತೋರುತ್ತದೆ. ಈ ಕನ್ನಡ ಭಾಷ್ಯವು ಸ್ವಾಮಿ ದಯಾನಂದ ಸರಸ್ವತಿಗಳ ಸಂಸ್ಕೃತ - ಹಿಂದಿ ಭಾಷ್ಯವನ್ನು ಅನುಸರಿಸಿಯೇ ಮಾಡಲ್ಪಟ್ಟಿದೆ. ಇದನ್ನು ಅಕ್ಷರಶಃ ಅನುವಾದವೆಂದು ಭಾವಿಸದೆ ಛಾಯಾನುವಾದವೆಂದು ಭಾವಿಸಬಹುದು. ಎಲ್ಲಿಯವರೆಗೆ ಸ್ವಾಮೀಜಿಯವರ ಭಾಷ್ಯ ಲಭ್ಯವಾಗಿದೆಯೋ ಅಲ್ಲಿಯವರೆಗೆ ಪದ-ಪದವಲ್ಲದಿದ್ದರೂ ಅವರದೇ ಶೈಲಿಯನ್ನು ಅನುಸರಿಸಿದ್ದೇವೆ.

ಋಗ್ವೇದವನ್ನು ಪಾರಂಪರಿಕವಾಗಿ ಎಂಟು ಅಷ್ಟಕಗಳಲ್ಲಿ ಮತ್ತು ಹತ್ತು ಮಂಡಲಗಳಲ್ಲಿ ವಿಭಾಗಿಸಲಾಗಿದೆ. ಅಷ್ಟಕಗಳಿಗಿಂತಲೂ ಮಂಡಲದ ಗಣನೆ ಸುಲಭವಾಗಿರುವುದರಿಂದ ನಾವು ಮಂಡಲ, ಸೂಕ್ತ ಮತ್ತು ಮಂತ್ರ ಇದೇ ಕ್ರಮವನ್ನು ಅನುಸರಿಸಿದ್ದೇವೆ.

ಈವರೆಗೆ ಸಿಕ್ಕಿರುವ ಸಾಯಣ, ಉವ್ವಟ, ಮಹೀಧರ, ವೆಂಕಟಮಾಧವ ಇವರೆಲ್ಲರೂ ಪರಂಪರೆಯಿಂದ ನಡೆದು ಬಂದ ಕ್ರಮವನ್ನು ಅನುಸರಿಸಿದ್ದಾರೆಯೇ ಹೊರತು ಸ್ವಾಮಿ ದಯಾನಂದರಂತೆ ವೈಜ್ಞಾನಿಕವೂ, ಬುದ್ಧಿಪೂರ್ವಕವೂ ಆದ ಶೈಲಿಯನ್ನು ಅನುಸರಿಸಿಲ್ಲ. ಹೀಗಾಗಿ ವೇದಗಳು ದಿನದಿನದ ಜೀವನಕ್ಕೆ ಬೇಕಾದ ಮಾರ್ಗದರ್ಶನ ನೀಡದೆ ಕೇವಲ ಪರಲೋಕದ ಮಾತುಗಳನ್ನೇ ಹೇಳುತ್ತವೆ ಎಂಬ ಭಾವನೆ ಜನರ ಮನಸ್ಸಿಗೆ ಮೂಡಿಬಂದಿದೆ. ಇದಕ್ಕೆ ಕಾರಣವೂ ಇದೆ. ನಮ್ಮವರೇ ಸ್ವತಃ ಯಜ್ಞ ಯಾಗಾದಿಗಳ ಮಟ್ಟಿಗೆ ವೇದಗಳು ಬೇಕಾಗಿವೆ; ಅಧ್ಯಾತ್ಮ ವಿದ್ಯೆ ಅದರಲ್ಲಿಲ್ಲ, ಅಧ್ಯಾತ್ಮ ವಿದ್ಯೆ ಉಪನಿಷತ್ತುಗಳ ಕೊಡುಗೆಯಾಗಿದೆ ಎಂಬ ಭಾವನೆಯನ್ನು ಪ್ರಚುರಪಡಿಸಿದ್ದಾರೆ. ಬಹುಶಃ ಆಚಾರ್ಯರುಗಳು ಸಂಹಿತೆಗಳೊಂದಿಗೆ ಉಪನಿಷತ್ತುಗಳನ್ನೂ ಕೂಡ ಶ್ರುತಿ ಎಂದೇ ಸಾಧಿಸುತ್ತ ಬಂದಿದ್ದಾರೆ. ವೈದಿಕ ಭಾಷೆಯೇ ಬೇರೆ, ಉಪನಿಷತ್ತುಗಳ ಭಾಷೆಯೇ ಬೇರೆ. ಉಪನಿಷತ್ತುಗಳನ್ನು ಸಾಧಾರಣ ಸಂಸ ತಜ್ಞರೂ ಸಹ ಅರ್ಥಮಾಡಿಕೊಳ್ಳಬಲ್ಲರು. ಹೀಗಾಗಿ ವೇದಗಳನ್ನು ಕೇವಲ ಮಂತ್ರ ಪಾಠಕ್ಕಾಗಿ ಉಳಿಸಿಕೊಂಡು ಸಸ್ವರ ಪಾಠ ಮಾಡಿದ ಮಾತ್ರಕ್ಕೆ ಇಷ್ಟಾರ್ಥ ಸಿದ್ಧಿಯಾಗುವುದು ಎಂಬ ತಪ್ಪು ಕಲ್ಪನೆ ಜನಜನಿತವಾಗಿದೆ. ಈ ಎಲ್ಲ ತಪ್ಪು ಕಲ್ಪನೆಗಳನ್ನು ನಿರಾಕರಿಸಲೆಂದೇ ಸ್ವಾಮಿ ದಯಾನಂದ ಸರಸ್ವತಿಯವರು ವೇದ ಭಾಷ್ಯವನ್ನು ರಚಿಸಿದ್ದಾರೆ.

ಸ್ವಾಮಿ ದಯಾನಂದ ಸರಸ್ವತಿಯವರು ತಮ್ಮ ವೇದಭಾಷ್ಯವನ್ನು ಶಿಕ್ಷಾ, ವ್ಯಾಕರಣ, ಛಂದ, ನಿರುಕ್ತ, ಜ್ಯೋತಿಷ ಹಾಗೂ ಕಲ್ಪ ಎಂಬ ವೇದಾಂಗಗಳನ್ನು ಆಧರಿಸಿ ರಚಿಸಿದ್ದಾರೆ. ಹೀಗಾಗಿ ಲುಪ್ತವಾಗಿದ್ದ ಆರ್ಷ ಪರಂಪರೆಯನ್ನು ಮತ್ತೆ ಎತ್ತಿ ಹಿಡಿದು ವೇದಗಳ ಹಿರಿಮೆಯನ್ನು ಪುನಃ ಸ್ಥಾಪಿಸಿದ್ದಾರೆ.

ಸೃಷ್ಟಿಯ ಆರಂಭದಲ್ಲಿ ಪರಮಾತ್ಮನು ಮಾನವರಿಗೆ ಅವರ ಅಂತಃಕರಣಗಳಲ್ಲಿ ಮಂತ್ರಗಳನ್ನು ಪ್ರೇರೇಪಿಸುವುದರ ಜೊತೆಗೆ ಅವುಗಳ ಅರ್ಥವನ್ನು ಸ್ಫುರಣಗೊಳಿಸಿದನು. ಈ ರೀತಿ ಪ್ರೇರಣೆ ಜ್ಞಾನ ಹಾಗೂ ಅದರ ಅರ್ಥವನ್ನು ಗ್ರಹಿಸಿದವರು ಇತರರಿಗೆ ಆ ಜ್ಞಾನವನ್ನು ನೀಡಿದರು. ಹೀಗೆ ಪಡೆದವರು ಅವರ ಮುಂದಿನ ಪೀಳಿಗೆಗೂ ಈ ಜ್ಞಾನವನ್ನು ಕ್ರಮವಾಗಿ ದಾಟಿಸಿದರು. ಮುಂದೆ ಸಂಹಿತಾ ರೂಪದಲ್ಲಿರುವ ಮಂತ್ರಗಳನ್ನು ಪದಚ್ಛೇದದೊಂದಿಗೆ ವೇದಜ್ಞರು ತೋರಿಸಿದಾಗ ಶಿಷ್ಯರು ಅವುಗಳ ಅರ್ಥಗಳನ್ನು ತಿಳಿಯಲು ಶಕ್ತರಾದರು. ಕಾಲಕ್ರಮೇಣ ಶಿಷ್ಯರಲ್ಲಿ ಗ್ರಹಣ ಶಕ್ತಿಯು ಕುಂದಿದಾಗ ಇವರುಗಳು ವ್ಯಾಖ್ಯಾನ ರೂಪದಲ್ಲಿ ಸ್ಪಷ್ಟೀಕರಣ ನೀಡತೊಡಗಿದರು. ಈ ಸ್ಪಷ್ಟೀಕರಿಸಲ್ಪಟ್ಟ ವ್ಯಾಖ್ಯಾನಗಳನ್ನು ವೇದ ಶಾಖೆಗಳೆಂದು ಗುರುತಿಸಲಾಯಿತು. ನಂತರ ಮಂತ್ರದ್ರಷ್ಟಾ ಋಷಿ ಮತ್ತು ಅವರ ಶಿಷ್ಯ ಪರಂಪರೆ ಸಮಾಪ್ತವಾದ ಮೇಲೆ ತರ್ಕದಿಂದ ವೇದ ಮಂತ್ರಗಳ ಅರ್ಥವನ್ನು ಗ್ರಹಿಸುವ ರೂಢಿ ಪ್ರಚಲಿತವಾಯಿತು. ಇವುಗಳಿಗೆ ಸಹಾಯಕವಾಗಿ ಶಿಕ್ಷಾ, ಕಲ್ಪ, ನಿರುಕ್ತ, ಜ್ಯೋತಿಷ, ವ್ಯಾಕರಣ, ಛಂದ ಇವುಗಳ ಸಹಾಯದಿಂದ ವೇದಾರ್ಥವನ್ನು ಗುರುತಿಸುವ, ಗುರುತಿಸಿದ ವೇದಾರ್ಥವನ್ನು ರಕ್ಷಿಸುವ ಪರಂಪರೆ ಪ್ರಾರಂಭವಾಯಿತು. ಸುದೀರ್ಘ ಕಾಲದವರೆಗೆ ಈ ಪರಂಪರೆ ಉಳಿದು ಬೆಳೆದು ಬಂತು.

ವೇದಮಂತ್ರಗಳ ವ್ಯಾಖ್ಯಾನಕ್ಕಾಗಿಯೇ ರೂಪಗೊಂಡವು ಬ್ರಾಹ್ಮಣ ಗ್ರಂಥಗಳು. ಯಾಜ್ಞಿಕ ಪರಂಪರೆ ಅತಿ ಪುಷ್ಟವಾಗಿ ವೇದಗಳು ಯಜ್ಞದ ವಿನಿಯೋಗಕ್ಕಾಗಿಯೇ ಇವೆ ಎಂಬ ಭಾವನೆ ಬಂದಾಗ ಬ್ರಾಹ್ಮಣ ಗ್ರಂಥಗಳು ತಮ್ಮ ಯಥಾರ್ಥ ಉದ್ದೇಶ್ಯವನ್ನೂ ಸ್ವರೂಪವನ್ನೂ ಕಳೆದುಕೊಂಡು ಯಜ್ಞ ವ್ಯಾಖ್ಯಾನ ಗ್ರಂಥಗಳಾಗಿ ಉಳಿದವು. ಇವುಗಳ ಪುಷ್ಟಿಗಾಗಿ ಶ್ರೌತ ಸೂತ್ರಗಳೂ, ಕಲ್ಪಸೂತ್ರಗಳೂ ರಚಿಸಲ್ಪಟ್ಟವು. ಆ ಯಜ್ಞ ಪರಂಪರೆಯೂ ಕಾಲಕ್ರಮೇಣ ಭ್ರಷ್ಟವಾಗಿ ಪಶು ಬಲಿ, ನರಬಲಿಯಂತಹ ವಿಕೃತಿಗಳು ವೇದಗಳ ಹೆಸರಿನಲ್ಲಿಯೇ ತಲೆ ಎತ್ತಿದವು. ಮುಂದೆ ವಿದೇಶಿಯರ ದಾಳಿನಡೆದು ಆ ವಿದೇಶಿ ಚಿಂತನೆಗಳನ್ನು ಅಳವಡಿಸಿಕೊಂಡ ವೇದಗಳ ಅಪವ್ಯಾಖ್ಯಾನಗಳು ಪ್ರಾರಂಭವಾದವು.

ಇಂತಹ ವಿಕಟ ಪರಿಸ್ಥಿತಿಯಲ್ಲಿ ವೇದಗಳ ಗೌರವವನ್ನು, ಅವುಗಳ ಪ್ರಾಚೀನ ಪರಂಪರೆಯನ್ನು ಎತ್ತಿ ಹಿಡಿಯಲು ಜಗತ್ತು ಸ್ವಾಮಿ ದಯಾನಂದ ಸರಸ್ವತಿಯವರ ಬರುವಿಕೆಯವರೆಗೂ ಕಾಯಬೇಕಾಯಿತು. ವಿದೇಶಿ ಗುಲಾಮಗಿರಿಯನ್ನು ಧಿಕ್ಕರಿಸಿ, ಜನತೆಯಲ್ಲಿ ಆತ್ಮಗೌರವವನ್ನು ಉದ್ದೀಪಿಸಲು ಪ್ರಾಚೀನ ವೇದಪರಂಪರೆಯ ಪುನರುದ್ಧಾರವೇ ತಾರಕ ಎಂಬುದನ್ನು ಸ್ವಾಮಿ ದಯಾನಂದರು ಕಂಡುಕೊಂಡು ಈ ನಿಟ್ಟಿನಲ್ಲಿ ಉದ್ಯಮಶೀಲರಾದರು. ವೇದಗಳನ್ನು ಸಮಸ್ತ ಸತ್ಯ ವಿದ್ಯೆಗಳ ಪುಸ್ತಕವೆಂದು ಪ್ರತಿಪಾದಿಸುವುದಕ್ಕಾಗಿ ಹಾಗೂ ವೇದದ ಅಪೌರುಷೇಯ ಸಿದ್ಧಾಂತವನ್ನು ಬೆಳಕಿಗೆ ತರುವುದಕ್ಕಾಗಿ, ವೇದದ ಆಜ್ಞಾಪಾಲನೆಯೇ ಧರ್ಮ; ಇದಕ್ಕೆ ವಿರುದ್ಧವಾದದುದು ಅಧರ್ಮ ಎಂದು ತೋರಿಸುವುದಕ್ಕಾಗಿ ಅವರು ವೇದ ಭಾಷ್ಯವನ್ನು ಕೈಗೆತ್ತಿಕೊಂಡರು. ಇದಕ್ಕಾಗಿ ಮೊಟ್ಟಮೊದಲು "ಚತುರ್ವೇದ ವಿಷಯ ಸೂಚಿ" ಎಂಬ ಪುಸ್ತಕವನ್ನು ರಚಿಸಿ ಇದರಲ್ಲಿ ನಾಲ್ಕೂ ವೇದಗಳ ಪ್ರತ್ಯೇಕ ಅಧ್ಯಾಯ, ವರ್ಗ, ಸೂಕ್ತ, ದಶತಿ ಹಾಗೂ ಮಂತ್ರ ಮೊದಲಾದವುಗಳಲ್ಲಿನ ಪ್ರತಿಪಾದ್ಯ ವಿಷಯಗಳ ಉಲ್ಲೇಖ ಮಾಡಿದರು. ಈ ಎಲ್ಲ ವಿವರಗಳನ್ನು ಈಗಾಗಲೇ ಪ್ರಕಟಿಸಿರುವ ಪ್ರಥಮ ಸಂಪುಟವಾಗಿ ಮೂಡಿಬಂದಿರುವ ಅವರ 'ಋಗ್ವೇದಾದಿ ಚತುರ್ವೇದ ಭಾಷ್ಯ ಭೂಮಿಕೆ'ಯಲ್ಲಿ ತೋರಿಸಲಾಗಿದೆ. ಸ್ವಾಮಿ ದಯಾನಂದರ ಭಾಷ್ಯದ ಉದ್ದೇಶ್ಯ ಹಾಗೂ ಶೈಲಿಯನ್ನು ಆ ಸಂಪುಟದಲ್ಲಿ ಸ್ಪಷ್ಟವಾಗಿ ಪ್ರಕಾಶ ಪಡಿಸಿರುವುದರಿಂದ ಇಲ್ಲಿ ಅದರ ವಿಸ್ತಾರ ಮಾಡಬೇಕಾದ ಅಗತ್ಯವಿಲ್ಲ. ಪ್ರಾರಂಭದ ಮಂತ್ರದಲ್ಲಿ ಸ್ವಾಮಿ ದಯಾನಂದರು ಯಾವ ಶೈಲಿಯಲ್ಲಿ ಋಷಿ, ದೇವತಾ, ಛಂದಸ್ಸು, ಸ್ವರಗಳನ್ನು ಮಂತ್ರದ ಪ್ರಾರಂಭದಲ್ಲಿ ನೀಡಿ ನಂತರ ಮಂತ್ರದ ಪದಪಾಠ, ಪದಾರ್ಥ, ಅನ್ವಯ, ವ್ಯಾಖ್ಯಾನ ಇವುಗಳನ್ನು ಪ್ರಮಾಣ ಸಹಿತವಾಗಿ ಸಂಸ್ಕೃತದಲ್ಲಿ ನೀಡಿದ್ದಾರೋ ಅದೇ ರೀತಿ ತೋರಿಸಲಾಗಿದೆ. ಮುಂದೆ ಗ್ರಂಥ ವಿಸ್ತಾರದ ಶಂಕೆಯಿಂದ ಕೇವಲ ಕನ್ನಡದಲ್ಲಿ ಪ್ರತಿಪದಾರ್ಥವನ್ನೂ, ಭಾವಾರ್ಥವನ್ನೂ ತೋರಿಸಲಾಗಿದೆ.

ದಯಾನಂದ ಭಾಷ್ಯದ ವಿಶೇಷತೆಯು ಅದರ ಸಾರ್ವಕಾಲಿಕ ಉಪಯೋಗಿತ್ವದಲ್ಲಿದೆ. ಯಾಜ್ಞಿಕರಂತೆ ಕೇವಲ ಕರ್ಮಕಾಂಡಕ್ಕಷ್ಟೇ ವೇದಗಳನ್ನು ಸೀಮಿತಗೊಳಿಸದೆ, ಪಾಶ್ಚಿಮಾತ್ಯ ಭಾಷ್ಯಕಾರರಂತೆ ಕೇವಲ ಇತಿಹಾಸ ನಿರೂಪಣೆಗಾಗಿಯೇ ಬಳಸದೆ ವೇದಾರ್ಥ ಚಿಂತನೆಯನ್ನು ಅಧ್ಯಾತ್ಮಪರಕವಾಗಿಯೂ ಲೌಕಿಕ ಬದುಕಿಗೆ ಬೇಕಾದ ವ್ಯಕ್ತಿಗತ, ಪಾರಿವಾರಿಕ, ಸಾಮಾಜಿಕ, ರಾಷ್ಟ್ರೀಯ ಹಾಗೂ ವೈಶ್ವಿಕ ಉನ್ನತಿಯ ಅನುಪಮ ಸಾಧನವಾಗಿಯೂ ವೇದಗಳ ಹಿರಿಮೆಯನ್ನು ಎತ್ತಿ ಹಿಡಿದಿದ್ದಾರೆ. ಇಲ್ಲಿ ಐತಿಹಾಸಿಕ ಕಥಾನಕಗಳು ಯಾವುದೋ ಒಂದು ಸೀಮಿತ ಕಾಲಘಟ್ಟಕ್ಕೆ ಸೇರಿದ್ದಾಗಿರದೆ ಸಾರ್ವಕಾಲಿಕ ಸ್ವರೂಪವನ್ನು ಬಿತ್ತರಿಸುವಂತಹವು ಆಗಿವೆ. ದಯಾನಂದ ಭಾಷ್ಯದಲ್ಲಿ, ವೇದಗಳಲ್ಲಿ ಪಶುಬಲಿ, ನರಬಲಿ, ಬಾಲ್ಯವಿವಾಹ, ವೃದ್ಧವಿವಾಹ, ಸ್ತ್ರೀಶೋಷಣೆ, ವ್ಯಕ್ತಿಗತ ಬದುಕಿನಲ್ಲಿ ಮಾಂಸಾಹಾರ-ಮದ್ಯಪಾನ, ಜನ್ಮದಿಂದ ಬರುವ ಜಾತಿ-ಪದ್ಧತಿ, ಮೇಲುಕೀಳು ಭಾವನೆ ಇವೆಲ್ಲದರ ಸ್ಪಷ್ಟ ನಿರಾಕರಣೆಯನ್ನು ಕಾಣಬಹುದು. ವೇದಗಳನ್ನು ಈ ರೀತಿ ಇಹ ಪರಗಳೆರಡರ ಸಮನ್ವಯಕ್ಕಾಗಿ ಜಗತ್ತಿನೆದುರು ಪುನಃ ಸ್ಥಾಪಿಸಿದ ಶ್ರೇಯಸ್ಸು ಈ ಅನುಪಮ ಭಾಷ್ಯಕಾರರಾದ ಸ್ವಾಮಿ ದಯಾನಂದ ಸರಸ್ವತಿಯರಿಗೆ ಸಲ್ಲುತ್ತದೆ.

**- ಸುಧಾಕರ ಚತುರ್ವೇದೀ**

* * *

# ಹದಿನೈದನೆಯ ಸಂಪುಟವನ್ನು ಕುರಿತು........

ಅಪ್ರತಿಮ ವೇದಜ್ಞ, ವೇದೋದ್ಧಾರಕ ಮಹರ್ಷಿ ದಯಾನಂದ ಸರಸ್ವತಿಯವರ ಋಗ್ವೇದ ಭಾಷ್ಯದ ಮೂರನೆಯ ಭಾಗವನ್ನು ವೇದಪ್ರೇಮಿಗಳಾದ ಕನ್ನಡ ಬಾಂಧವರ ಕೈಲಿಡುತ್ತ ಹರ್ಷದ ಅನುಭವವಾಗುತ್ತಿದೆ. ಈ ಸಂಪುಟದಲ್ಲಿ ಋಗ್ವೇದ ಮೂರನೆಯ ಮಂಡಲದ ೭ನೆಯ ಸೂಕ್ತದಿಂದ ಪ್ರಾರಂಭವಾಗಿ ೫ನೆಯ ಮಂಡಲದ ೮ನೆಯ ಸೂಕ್ತದವರೆಗೆ ಅಂದರೆ ತೃತೀಯಾಷ್ಟಕದವರೆಗೆ ಭಾಷ್ಯವನ್ನು ನೀಡಲಾಗಿದೆ. ಈ ಸಂಪುಟದ ಪೂರ್ಣ ಭಾಷ್ಯಾನುವಾದವನ್ನು ಮೈಸೂರಿನ ಸುಪ್ರಸಿದ್ಧ ವೇದ - ಮೀಮಾಂಸಾ ವಿದ್ವಾನ್ ವಾಸುದೇವ ಪರಾಂಜಪೆಯವರು ಮಾಡಿಕೊಟ್ಟಿದ್ದಾರೆ. ತುಂಬಾ ಶ್ರದ್ಧೆಯಿಂದ ಸುವ್ಯವಸ್ಥಿತವಾಗಿ ಅನುವಾದಿಸಿಕೊಟ್ಟ ವಿದ್ವಾನ್ ವಾಸುದೇವ ಪರಾಂಜಪೆಯವರಿಗೆ ವೇದಭಾಷ್ಯಪ್ರಕಾಶನ ಸಮಿತಿಯು ತುಂಬು ಹೃದಯದ ಧನ್ಯವಾದಗಳನ್ನು ಅರ್ಪಿಸುತ್ತದೆ.

ಹದಿನಾಲ್ಕನೆಯ ಸಂಪುಟದ ಲೋಕಾರ್ಪಣೆಯನ್ನು ಕಳೆದ ದಿನಾಂಕ ೧೨.೦೯.೨೦೦೮ರಂದು ಎಂದಿನಂತೆಯೇ ಬೆಂಗಳೂರಿನ ಆರ್.ವಿ. ಟೀಚರ್ಸ್ ಕಾಲೇಜು ಸಭಾಂಗಣದಲ್ಲಿ, ಧರ್ಮಸ್ಥಳದ ಧರ್ಮಾಧಿಕಾರಿಗಳಾದ ರಾಜರ್ಷಿ ಡಾ॥ ಡಿ. ವೀರೇಂದ್ರ ಹೆಗ್ಗಡೆಯವರು ನೆರವೇರಿಸಿದರು. ಭಾಷ್ಯಾನುವಾದಕರಾದ ವಿದ್ವಾನ್ ವಾಸುದೇವ ಪರಾಂಜಪೆಯವರು ಋಗ್ವೇದ ಭಾಷ್ಯ ಪರಿಚಯವನ್ನು ಮಾಡಿಕೊಟ್ಟರು. ಅವರನ್ನು ಧರ್ಮಾಧಿಕಾರಿಗಳು ಸನ್ಮಾನಿಸಿದರು. ಮುಖ್ಯ ಅಭ್ಯಾಗತರಾಗಿ ಬೆಂಗಳೂರಿನ ಶ್ರೀ ರಾಮಕೃಷ್ಣ ಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಸ್ವಾಮೀ ಹರ್ಷಾನಂದಜೀ ಅವರು ಆಗಮಿಸಿ ವೇದಗಳ ಹಿರಿಮೆಯ ಬಗೆಗೆ ವಿದ್ವತ್ಪೂರ್ಣ ಉಪನ್ಯಾಸ ನೀಡಿದರು. "ಮೂಲ ವೈದಿಕಸಿದ್ಧಾಂತಗಳು" ಎಂಬ ವಿಷಯವಾಗಿ ವಿಚಾರ ಪ್ರಚೋದಕ ವ್ಯಾಖ್ಯಾನ ಮಾಡಿದವರು ವೇದಾಧ್ಯಾಯೀ ಶ್ರೀ ಸುಧಾಕರ ಶರ್ಮಾರವರು. ಅಧ್ಯಕ್ಷತೆಯನ್ನು ಶತಾಯುಷೀ ವೇದಜ್ಞರಾದ ಪಂ॥ ಸುಧಾಕರ ಚತುರ್ವೇದಿಯವರು ವಹಿಸಿದ್ದರು. ಹೀಗೆ ಲೋಕಾರ್ಪಣೆ ಮಾಡಿದವರಿಗೂ, ಆಗಮಿಸಿದ ವಿದ್ವದ್ವರೇಣ್ಯರಿಗೂ ವೇದಭಾಷ್ಯ ಪ್ರಕಾಶನ ಸಮಿತಿಯು ಹಾರ್ದಿಕ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತದೆ.

ವೇದಭಾಷ್ಯದ ೧೫ ಸಂಪುಟಗಳು ಹೊರಬರುವುದರಲ್ಲಿ ಮಹತ್ತರ ಪ್ರೇರಣೆ ನೀಡಿದವರು ಶತಾಯುಷೀ, ಚತುರ್ವೇದ ವಿದ್ವಾಂಸ, ವೇದರತ್ನ, ವೇದವಾರಿಧೀ, ವೇದಶ್ರೀ ಪಂ॥ ಸುಧಾಕರ ಚತುರ್ವೇದಿಯವರು. ಚೈತನ್ಯದ ಚಿಲುಮೆಯಾದ ಇವರು ಪ್ರಧಾನ ಸಂಪಾದಕರಾಗಿ ಇಂದಿಗೂ ಕ್ರಿಯಾಶೀಲರಾಗಿರುವುದು ನಮ್ಮೆಲ್ಲರ ಸೌಭಾಗ್ಯವೇ ಸರಿ. ಅವರಿಗೆ ಹೃದಯದ ಅಂತರತಮದಿಂದ ಕೃತಜ್ಞತಾಪೂರ್ವಕ ನಮನಗಳನ್ನು ವೇದಭಾಷ್ಯ ಪ್ರಕಾಶನ ಸಮಿತಿಯು ಸಲ್ಲಿಸುತ್ತದೆ. ಪ್ರಧಾನ ಸಂಪಾದಕರ ಸುಯೋಗ್ಯ ಮಾರ್ಗದರ್ಶನದಲ್ಲಿ ಭಾಷ್ಯದ ಸಂಪಾದನ, ಪರಿಷ್ಕರಣ, ಶುದ್ಧಿ ವಾಚನಾದಿಗಳನ್ನು ನಿರ್ವಹಿಸುತ್ತಿರುವ ಶ್ರೀ ಶ್ರುತಿಪ್ರಿಯ ಅವರಿಗೂ ವೇದಭಾಷ್ಯ ಪ್ರಕಾಶನ ಸಮಿತಿಯು ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಸ್ವ॥ ವೈ.ವಿ. ತಿಮ್ಮಯ್ಯ (ಅಪ್ಪಾಜಿ) ಅವರು ವೇದಭಾಷ್ಯ ಯೋಜನೆಯ ಹಿಂದಿನ ರೂವಾರಿ. ಅವರನ್ನು ಸ್ಮರಿಸದೆ ಮುಂದುವರಿಯುವುದು ಸಾಧ್ಯವೇ ಇಲ್ಲ. ಅವರ ದಿವ್ಯಚೇತನಕ್ಕೆ ಹೃದಯಾಂತರಾಳದ ನಮನಗಳು. ಹಾಗೆಯೇ ವೇದ

ಸಂಪುಟಗಳ ಲೋಕಾರ್ಪಣೆ, ವೇದಗೋಷ್ಠಿಗಳು ಸುಸೂತ್ರವಾಗಿ, ಅಭೂತಪೂರ್ವವಾಗಿ ನಡೆಯುತ್ತಿರುವುದಕ್ಕೆ ಕಾರಣ ರಾಷ್ಟ್ರೀಯ ಶಿಕ್ಷಣ ಸಮಿತಿಯವರು ನಮಗೆ ಆರ್. ವಿ. ಟೀಚರ್ಸ್ ಕಾಲೇಜು ಸಭಾಭವನವನ್ನು ಉಚಿತವಾಗಿ ನೀಡಿ ಪ್ರೋತ್ಸಾಹಿಸುತ್ತಾ ಬಂದಿರುವುದೇ ಆಗಿದೆ. ರಾಷ್ಟ್ರೀಯ ಶಿಕ್ಷಣ ಸಮಿತಿಯ ಎಲ್ಲ ಸಹೃದಯೀ ಪದಾಧಿಕಾರಿಗಳಿಗೆ ವಂದನೆಗಳು, ಅಭಿನಂದನೆಗಳು.

ಈ ಐತಿಹಾಸಿಕವಾದ ಕನ್ನಡವೇದ ಭಾಷ್ಯ ಯೋಜನೆಯನ್ನು ತಮ್ಮ ಉದಾರವೂ, ಉದಾತ್ತವೂ, ಆದ ಆರ್ಥಿಕ, ಭಾವನಾತ್ಮಕ ಸಹಕಾರದೊಂದಿಗೆ ಹರಸಿ, ಅನುಗ್ರಹಿಸಿ, ಮುನ್ನಡೆಯಲು ಕಾರಣರಾಗಿರುವ ಧರ್ಮಸ್ಥಳದ ಧರ್ಮಾಧಿಕಾರೀ ರಾಜರ್ಷಿ ಡಾ|| ಡಿ. ವೀರೇಂದ್ರ ಹೆಗ್ಗಡೆಯವರಿಗೆ ವೇದಭಾಷ್ಯ ಪ್ರಕಾಶನ ಸಮಿತಿ ಆದರಪೂರ್ವಕವಾದ, ಶ್ರದ್ಧಾಪೂರ್ವಕವಾದ ಅಭಿವಂದನೆಗಳನ್ನು ಸಲ್ಲಿಸುತ್ತದೆ.

ತಮ್ಮ ಔದಾರ್ಯಪೂರ್ಣ ಕೊಡುಗೆಯಿಂದ ತಮ್ಮ ಸಹಾಯ ಹಸ್ತವನ್ನು ಚಾಚಿರುವ ವೇದ ಸಂರಕ್ಷಕರಾದ ಶ್ರೀಮತಿ ಲಕ್ಷ್ಮೀಕಾಂತಮ್ಮ-ಎಂ. ನಾರಾಯಣ ಗುಪ್ತರಿಗೂ, ಶ್ರೀ ಎ. ನಂಜುಂಡಪ್ಪನವರಿಗೂ ನಮ್ಮ ವಂದನೆಗಳು ಸಲ್ಲುತ್ತವೆ. ಅದೇ ರೀತಿ ವೇದ ಮಹಾಪೋಷಕರಾಗಿ, ವೇದಾಭಿಮಾನಿಗಳಾಗಿ, ವೇದಚಿಂತಕರಾಗಿ, ವೇದಸಹಕಾರಿಗಳಾಗಿ ವಿವಿಧ ಪ್ರಕಾರಗಳಲ್ಲಿ ನೆರವು ನೀಡುತ್ತಾ ಬಂದಿರುವ ಎಲ್ಲ ವೇದಪ್ರೇಮಿಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ವೇದಭಾಷ್ಯದ ಪ್ರಕಟಣೆಯ ಮಹಾಯಜ್ಞದಲ್ಲಿ ತಮ್ಮ ಆಹುತಿಗಳನ್ನು ನೀಡಿರುವ ಸಹೃದಯೀ ವೇದಪ್ರೇಮಿಗಳ ಸಂಖ್ಯೆ ಅಪಾರ. ಈ ಮಹಾನ್ ಕಾರ್ಯದಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ತಮ್ಮ ಸಹಕಾರವನ್ನು ನೀಡಿರುವ, ನೀಡುತ್ತ ಬಂದಿರುವ ಎಲ್ಲರಿಗೂ ವೇದಭಾಷ್ಯ ಪ್ರಕಾಶನ ಸಮಿತಿಯು ತನ್ನ ಆತ್ಮೀಯವೂ, ಭಾವಪೂರ್ಣವೂ ಆದ ವಂದನೆಗಳನ್ನು ಸಲ್ಲಿಸುತ್ತಿದೆ.

ಈ ಗ್ರಂಥವನ್ನು ಅಚ್ಚುಕಟ್ಟಾಗಿ, ಸಕಾಲದಲ್ಲಿ, ಸರ್ವಾಂಗ ಸುಂದರವಾಗಿ, ಮುದ್ರಿಸಿಕೊಟ್ಟ ಮೇ|| ಅಭಿಮಾನಿ ಪಬ್ಲಿಕೇಷನ್ ಲಿ. ಬೆಂಗಳೂರು ಇದರ ಮಾಲೀಕರಾದ ಸನ್ಮಾನ್ಯ ಶ್ರೀ ಟಿ. ವೆಂಕಟೇಶ್ ಅವರಿಗೆ ವೇದಭಾಷ್ಯ ಪ್ರಕಾಶನ ಸಮಿತಿಯು ಹೃತ್ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತದೆ.

**ಧರ್ಮದರ್ಶಿ ಮಂಡಳಿ, ವೇದಭಾಷ್ಯ ಪ್ರಕಾಶನ ಸಮಿತಿ**

## ಪ್ರಕಾಶಕರ ಎರಡು ಮಾತು

ಮಾನವೀಯತೆಯ ಮೇರು ಕೃತಿ ವೇದಗಳು. ಮಾನವ ಸಮಾಜ ಸುಖ ಶಾಂತಿಯಿಂದ ಬಾಳಲು ಪ್ರೇರಣೆ ನೀಡುವ ವೇದಗಳು ಯಾವುದೇ ನಿಟ್ಟಿನಿಂದ ನೋಡಲಿ, ಸಾರ್ವಭೌಮ ಹಾಗೂ ಸಾರ್ವಕಾಲಿಕವಾದವುಗಳಾಗಿವೆ. ವೇದಗಳು ಪ್ರತಿಪಾದಿಸುವ ರಾಷ್ಟ್ರೀಯತೆ, ಪ್ರಕೃತಿ ಸಂಪತ್ತಿನ ಮಾಲಿಕತ್ವ, ಎಲ್ಲರಿಗೂ ಜ್ಞಾನದ ಬೆಳಕನ್ನು ಹಂಚುವ ವಿಶಾಲತೆ, ಪ್ರಾಣಿ- ಪಕ್ಷಿ-ಕೀಟ- ಪತಂಗಗಳೂ ಸೇರಿದಂತೆ ಜಗತ್ತಿನ ಎಲ್ಲ ಸಹಜೀವಿಗಳೊಂದಿಗೆ ಸಹಬಾಳ್ವೆ, ಅವು ಪ್ರತಿಪಾದಿಸುವ ಮನನ ಶೀಲತೆ, ಅನುಕಂಪ, ಜ್ಞಾನ- ಕರ್ಮ- ಉಪಾಸನೆಗಳ ಸುಂದರ ಸಮನ್ವಯ - ಇವುಗಳ ಬಗೆಗೆ ಪರಿಶೀಲನಾತ್ಮಕ ನೋಟವನ್ನು ಹಾಯಿಸಿದಾಗ ವೇದಗಳ ಹಿರಿಮೆ- ಗರಿಮೆಗಳು ಸಹಜವಾಗಿಯೇ ಅರಿವಿಗೆ ಬರುತ್ತವೆ. ಮುಕ್ತ ಮನಸ್ಸಿನಿಂದ, ಪೂರ್ವಗ್ರಹ ಪೀಡಿತವಲ್ಲದ ದೃಷ್ಟಿಯಿಂದ ನೋಡುವವರಾಗಬೇಕು ನಾವು, ಅಷ್ಟೇ!

ಸುಖ-ಶಾಂತಿ- ನೆಮ್ಮದಿಯಿಂದ ಬಾಳಬೇಕೆಂಬುದು ಮಾನವರೆಲ್ಲರ ಸಹಜ ಕಾಮನೆ. ಅದನ್ನು ಹೊಂದುವ ಸಾಧನಗಳ ಬಗೆಗೆ ಅಭಿಪ್ರಾಯ ಭೇದವಿರಬಹುದಾದರೂ, ಈ ಗುರಿಯ ಬಗೆಗೆ ಎಲ್ಲರದೂ ಒಂದೇ ನೆಟ್ಟ ನೋಟ; ಸಮರ್ಪಿತವಾದ ಚಿತ್ತ. ಆದರೆ ಈ ಮಾನವ ಸಹಜ ಕಾಮನೆಯು ಕ್ರಿಯಾನ್ವಿತವಾಗದಿರಲು ಕಾರಣ, ಸಾಧನಗಳ ಕುರಿತ ಅಜ್ಞಾನ ಅಥವಾ ಅಲ್ಪಜ್ಞಾನ. ವೇದಗಳು ಈ ಬಗ್ಗೆ ಸಂದೇಹಕ್ಕೆಡೆಯಿಲ್ಲದ ಮಾತುಗಳಲ್ಲಿ ಮಾರ್ಗದರ್ಶನ ಮಾಡಬಲ್ಲವಾದದುರಿಂದಲೇ ಅವು ನಮಗೆ ಸ್ವೀಕರಿಸಲು ಯೋಗ್ಯವಾಗಿವೆ.

ವೇದಗಳು ಪ್ರತಿಪಾದಿಸುವ ರಾಷ್ಟ್ರೀಯತೆಯ ಬಗೆಗೆ ಗಮನ ಹರಿಸಿದರೆ ಅವುಗಳ ಅನನ್ಯ ವಿಶಾಲ ಮನೋಭಾವವು ಗೋಚರವಾಗುತ್ತದೆ. ವೇದಗಳ ರಾಷ್ಟ್ರೀಯತೆಯು ಇಂದಿನ ಮಾನವ ನಿರ್ಮಿತ ರಾಷ್ಟ್ರೀಯತೆಗಿಂತಲೂ ಭಿನ್ನವಾದುದು. ಮಾನವ ನಿರ್ಮಿತ ರಾಷ್ಟ್ರಕ್ಕೂ ವೇದಗಳು ಹೇಳುವ ರಾಷ್ಟ್ರಕ್ಕೂ ಅಜಗಜಾಂತರ. ಮಾನವ ನಿರ್ಮಿತ ಗಡಿಗಳು ವೇದಗಳಿಗೆ ಒಪ್ಪಿತವಲ್ಲ. ವೇದಗಳ ಪ್ರಕಾರ ಇಡೀ ಪೃಥ್ವಿಯೇ ನಮ್ಮ ರಾಷ್ಟ್ರ. ಭೂಮಾತೆಯೇ ನಮ್ಮ ತಾಯಿ; ಭೂಮಿಯಲ್ಲಿ ವಾಸಿಸುವ ಜೀವಿಗಳೆಲ್ಲರೂ ಆಕೆಯ ಮಕ್ಕಳು. ಆದುದರಿಂದ ಭೂಮಿಯಲ್ಲಿ ವಾಸಿಸುವವರೆಲ್ಲರೂ ಒಂದೇ ಕುಟುಂಬದ ಅಣ್ಣ ತಮ್ಮಂದಿರು- ಅಕ್ಕತಂಗಿಯರು. ವೇದಗಳ ಈ ದೃಷ್ಟಿಕೋನ ನಮ್ಮದಾದಾಗ ಜಗತ್ತಿನಲ್ಲಿ ಕಲಹ, ಯುದ್ಧ, ಹಿಂಸಾಚಾರಗಳು ತಪ್ಪಿಹೋಗಿ ಶಾಂತಿ ನೆಮ್ಮದಿ ನೆಲೆಸುತ್ತವೆ. ಮಾನವನು ತನ್ನ ನಿಹಿತ ಸ್ವಾರ್ಥಕ್ಕಾಗಿ ರೂಪಿಸಿಕೊಂಡ ಗಡಿಗಳು ಕೃತಕ ಹಾಗೂ ಪರಿವರ್ತನ ಶೀಲ. ಪ್ರಕೃತಿ ಸಂಪತ್ತಿನ ಮೇಲೆ ಒಡೆತನ ಸ್ಥಾಪಿಸಲು ಮಾಡಿದ ತಂತ್ರ ಮಾತ್ರ. ಇವು ಇರುವವರೆಗೆ ಯುದ್ಧಭಯ, ಹಿಂಸೆಯ ಭಯ, ಅಸುರಕ್ಷತೆಯ ಭಯ ತಪ್ಪಿದ್ದಲ್ಲ. ಈ ಕೃತಕ ಗಡಿಗಳ ರಕ್ಷಣೆಗಾಗಿ ವಿನಿಯೋಗಿಸುವ ಶಕ್ತಿ, ಮಾನವ ಸಂಪತ್ತು, ಅಮೂಲ್ಯ ಸಮಯ, ಮಾಡುವ ರಾಜಕೀಯ ದೊಂಬರಾಟಗಳು ಅವೆಷ್ಟೋ!?

ಗಡಿಗಳನ್ನು ಅತಿಕ್ರಮಿಸಿ ಮಾಡಲಾಗುವ ನೆಲ-ಜಲ-ಸಸ್ಯ ಸಂಪತ್ತು-ಜನಶಕ್ತಿಯ ಅಪವ್ಯಯದ ಹಿಂದೆಯಂತೂ ಮಾನವನ (?) ರಾಕ್ಷಸೀ ಪ್ರವೃತಿಯೇ ತಾಂಡವವಾಡುತ್ತಿದೆ. ಅಪಾರ ನೆಲ-ಜಲ-ವಾಯು ಸೈನ್ಯಕ್ಕಾಗಿ ವಿನಿಯೋಗಿಸುವ ಸಂಪತ್ತು, ಪರಮಾಣು ವಿಸ್ಫೋಟಕಗಳು, ಕ್ಷಿಪಣಿಗಳು ಮೊದಲಾದವುಗಳಿಂದ ಆಗುವ ಅನರ್ಥ ಪರಂಪರೆಗಳು ಇವೆಲ್ಲವೂ ಕೇವಲ ಮಾನವನಿರ್ಮಿತ ಗಡಿಗಳ ರಕ್ಷಣೆಯ ಅನಿವಾರ್ಯ ಪರಿಣಾಮಗಳೇ. ರಾಷ್ಟ್ರೀಯತೆಯ ಬಗ್ಗೆ ವೇದಗಳ ವಿಶಾಲದೃಷ್ಟಿ ನಮ್ಮದಾದಾಗ ಈ ಎಲ್ಲ ಅನರ್ಥಗಳಿಗೆ ಶಾಶ್ವತವಾದ ಮುಕ್ತಾಯವನ್ನು ಘೋಷಿಸಬಹುದು.

ವೇದಗಳು ಅತಿ ಸ್ಪಷ್ಟವಾದ ಮಾತುಗಳಲ್ಲಿ, ಮಾನವರು ಪ್ರಕೃತಿ ಸಂಪತ್ತಿನ ಪಾಲಕರೇ ಹೊರತು ಮಾಲೀಕರಲ್ಲ- ಎಂದು ಘೋಷಿಸುತ್ತಿವೆ. ಆದರೆ ಮಾನವನು ಪ್ರಾಕೃತಿಕ ಸಂಪನ್ಮೂಲಗಳು ತಾನೇ, ತಾನೊಬ್ಬನೇ ಅದರ ಮಾಲಿಕನೆಂಬಂತೆ ಶೋಷಿಸಲು ಪ್ರಾರಂಭಿಸಿದಾಗಿನಿಂದ ಜಗತ್ತಿನಲ್ಲಿ ಮಾನವ- ಮಾನವರ ನಡುವೆ ಅನಾರೋಗ್ಯಕರ, ಅನೈತಿಕ ಸ್ಪರ್ಧೆಗಳು ಉಂಟಾಗಿ, ಅದರ ಪರಿಣಾಮವಾಗಿ ದ್ವೇಷ,ವೈಷಮ್ಯಗಳು ಹತ್ತಿ ಉರಿಯಲಾರಂಭಿಸಿದವು. ಮಾನವನು, ಈ ಪ್ರಾಕೃತಿಕ ಸಂಪದವಿರುವುದು ತನಗೋರ್ವನಿಗಾಗಿ, ಈ ಪ್ರಾಣಿ- ಪಕ್ಷಿ- ಕೀಟ-ಪತಂಗಾದಿ ಸಕಲ ಜೀವಿಗಳೂ ಇರುವುದು ತನ್ನ ಉಪಭೋಗಕ್ಕಾಗಿ, ಎಂಬ ರಾಕ್ಷಸೀ ಭಾವನೆಯನ್ನು ಹೊಂದಿದಾಗಿನಿಂದ ಪ್ರಾಣಿಜಗತ್ತಿನಲ್ಲಿ ಸಹಜವಾಗಿ ಇರಬೇಕಾಗಿದ್ದ ಪ್ರಾಕೃತಿಕ ಸಮತೋಲನ ತಪ್ಪಿಹೋಗಿ ಹಲವಾರು ಭೀಕರ ಸಮಸ್ಯೆಗಳು ತಲೆದೋರಿವೆ. ಸಹಜೀವಿಗಳೊಂದಿಗೆ ಸಹಬಾಳ್ವೆ ಇಲ್ಲದುದರಿಂದ, ಒಂದು ಇನ್ನೊಂದರ ಬಲಿ ತೆಗೆದುಕೊಳ್ಳುವ ಪ್ರವೃತ್ತಿ ಬಲಿಯಿತು. ಪರಿಣಾಮವಾಗಿ ಮಾನವನು ಇತರ ಜೀವ ಜಗತ್ತಿನೊಂದಿಗಿರಲಿ, ತನ್ನ ಸಹಮಾನವರೊಂದಿಗೆ ಹೊಂದಿರಬೇಕಾಗಿದ್ದ ಮಾನವೀಯ ಅನುಕಂಪಕ್ಕೇ ಎರವಾದನು. ಮನನಶೀಲನಾದುದರಿಂದಲೇ ಅವನನ್ನು ಮಾನವನೆನ್ನಲಾಗುತ್ತದೆ. ಮನನಶೀಲತೆ ಪ್ರಕಟವಾಗುವುದು ಈ ಅನುಕಂಪದಲ್ಲಿ, ಆದರೆ ಮಾನವನು ಅಮಾನವೀಯತೆಯ ಮನೋರೋಗಕ್ಕೆ ಈಡಾಗಿರುವುದು ಇಂದಿನ

ದುರಂತ. ಮನನಶೀಲನಾದವನು ಅಮಾನವೀಯನನ್ನು ಪರಿವರ್ತಿಸುವಂತಾದಾಗಲೇ ಮಾನವೀಯತೆಯ ವಿಜಯ. ವೇದಗಳು ಪ್ರತಿಪಾದಿಸುವ ತ್ಯಾಗ ಪೂರ್ವಕ ಭೋಗ ಬೇರೆಯಲ್ಲ; ಸಹಜೀವಿಗಳೊಂದಿಗಿನ ಮಾನವೀಯ ಅನುಕಂಪ ಬೇರೆಯಲ್ಲ; ಮನನಶೀಲತ್ವ ಬೇರೆಯಲ್ಲ. ಇವು ಮುಪ್ಪುರಿಗೊಂಡಾಗಲೇ ಮನುಜಕುಲ ಸುಖ-ಶಾಂತಿ- ನೆಮ್ಮದಿಯ ಬಾಳನ್ನು ಬಾಳಬಲ್ಲದು.ಈ ಪರಮ ಸತ್ಯವನ್ನು ವೇದಗಳಿಗಿಂತ ನಿಖರವಾಗಿ ಪ್ರತಿಪಾದಿಸುವ ಶಾಸ್ತ್ರಗಳನ್ನು ಇನ್ನೆಲ್ಲಿ ನೋಡೋಣ!

ಜ್ಞಾನವಿಲ್ಲದ ಕರ್ಮ ಅನರ್ಥಕಾರಿ,ಅದೇ ರೀತಿ ಕ್ರಿಯಾಶೀಲತೆಗೆ ಅಳವಡದ ಜ್ಞಾನ, ವ್ಯರ್ಥ,ಭಾರ. ಜ್ಞಾನ ಕರ್ಮಗಳು ಒಂದಕ್ಕೊಂದು ಪೂರಕ; ಪೋಷಕ. ಜಗತ್ತಿನಲ್ಲಿ ಕಂಡು ಬರುತ್ತಿರುವ ಅಶಾಂತಿ- ಗೊಂದಲಗಳ ಹಿಂದೆ ಒಂದೋ ಜ್ಞಾನವಿಲ್ಲದ ಕರ್ಮವಿರುತ್ತದೆ. ಇಲ್ಲವೇ ಕರ್ಮಕ್ಕಳವಡದ ಜ್ಞಾನವಿರುತ್ತದೆ. ನಿಷ್ಕ್ರಿಯ ಜ್ಞಾನವು ವ್ಯರ್ಥವಾಗುವಂತೆ, ಜ್ಞಾನರಹಿತ ಕರ್ಮವು ಅಪಾಯಕಾರಿಯಾಗುತ್ತದೆ. ಜ್ಞಾನವನ್ನು ಅವಲಂಬಿಸಿದ ಕರ್ಮವು ಸಫಲತೆಯತ್ತ ನಮ್ಮನ್ನೊಯ್ಯುತ್ತದೆ. ಇಂತಹ ಯಶಸ್ಸುಗಳ ಮೊತ್ತವು ಹೆಚ್ಚಾದಾಗ ಮಾನವನ ತಲೆತಿರುಗಿ, ಅಹಂಕಾರದಿಂದ ಬೀಗಿ ತನ್ನೆಲ್ಲ ಸದ್ಗುಣಗಳಿಗೂ ಎರವಾಗುವ ಸಂಭವ ಇದೆ. ಇದಕ್ಕಾಗಿ ತನ್ನ ಎಲ್ಲ ಸಫಲತೆಗಳನ್ನೂ ವಿಶ್ವಚೇತನ ಶಕ್ತಿಯೊಂದಕ್ಕೆ ಸಮರ್ಪಿಸಿ, ತನ್ನ ಅಣುಚೇತನತ್ವವನ್ನು ಮರೆಯದೆ ವಿನಮ್ರತೆಯನ್ನು ಸಾಧಿಸುವುದು ಆವಶ್ಯಕ. ಈ ಸಮರ್ಪಣೆ ಗುಲಾಮಗಿರಿಯಲ್ಲ ; ಕೀಳರಿಮೆಯ ಪರಿಣಾಮವೂ ಅಲ್ಲ. ವಿಶ್ವಚೇತನ ಸತ್ತೆಯ ಅಸ್ತಿತ್ವವನ್ನು ಬುದ್ಧಿ ಪೂರ್ವಕವಾಗಿ ಸ್ವೀಕರಿಸಿ ತನ್ನ ಮಿತಿಗಳನ್ನೂ ಗುರುತಿಸಿಕೊಳ್ಳುತ್ತಾ, ಜೊತೆಗೆಯೇ ಮಿತಿಗಳನ್ನು ಮೀರಿ ಬೆಳೆಯುವ, ಸತ್ಯದ ಬಗೆಗೆ ಬದ್ಧತೆಯ ಪ್ರಕ್ರಿಯೆಯೇ ಉಪಾಸನೆ. ಹೀಗೆ ವೇದಗಳು ಜ್ಞಾನ-ಕರ್ಮ- ಉಪಾಸನೆಗಳ ಸುಂದರ ಸಮನ್ವಯದ ಹಾದಿಯನ್ನು ಅಚ್ಚುಕಟ್ಟಾಗಿ ತೋರಿಸುತ್ತವೆ. ಪ್ರತಿಯೊಬ್ಬ ಸತ್ಯಾನ್ವೇಷಕನ ಪ್ರಶ್ನೆಗೂ, ಸಂಶಯಕ್ಕೂ ಖಚಿತ ಉತ್ತರ ಈ ಜ್ಞಾನ ಭಂಡಾರದಲ್ಲಿ ಮಾನವೀಯತೆಯ ತಳಹದಿಯ ಮೇಲೆ ಸಿಕ್ಕೇ ಸಿಗುತ್ತದೆ. ಈ ಮಾತನ್ನು ಯಾರು ಬೇಕಾದರೂ ಪರೀಕ್ಷಿಸಿ ಸ್ವೀಕರಿಸಬಹುದು.

ವಿಶ್ವಮಾನವ ಸಮಾಜಕ್ಕೆ ಬುದ್ಧಿಜೀವಿಗಳು , ಶಕ್ತಿಜೀವಿಗಳು, ಉದ್ಯಮ ಜೀವಿಗಳು ಮತ್ತು ಶ್ರಮಜೀವಿಗಳು- ಈ ನಾಲ್ಕೂ ಬಗೆಯ ಜೀವಿಗಳ ಅವಶ್ಯಕತೆ ಇದ್ದೇ ಇದೆ. ಈ ಪಂಗಡಗಳಿಗೆ ಕೊಡುವ ಹೆಸರು ಯಾವುದೇ ಅದರೂ ಈ ಪಂಗಡಗಳ ಅಸ್ತಿತ್ವಕ್ಕೆ ಬಾಧಕವಿಲ್ಲ. ಹುಟ್ಟಿನಿಂದ ಮನುಷ್ಯ ಜಾತಿಗೆ ಸೇರಿದ ಯಾರೇ ಆದರೂ ತಮ್ಮ ಗುಣ- ಕರ್ಮ-ಸ್ವಭಾವಗಳಿಗನುಸಾರ ಮೇಲಿನ ಯಾವುದೇ ಪಂಗಡವನ್ನು ಆಯ್ಕೆ ಮಾಡಿಕೊಂಡು ಅದಕ್ಕೆ ಸೇರಿಕೊಳ್ಳಬಹುದು. ಬೇಕಾದಾಗ ಒಂದು ಪಂಗಡದಿಂದ ಇನ್ನೊಂದು ಪಂಗಡಕ್ಕೆ ಜಿಗಿಯಬಹುದು. ಏನೇ ಆದರೂ ಮಾನವ ಜಾತಿ ಹಾಗೇ ಇರುತ್ತದೆ. ವಿಶ್ವ ಶಾಂತಿಯ ಮೂಲ ಸುಭದ್ರ ಸಾಮಾಜಿಕ ವ್ಯವಸ್ಥೆಯಲ್ಲೂ ಸುಭದ್ರ ಸಮಾಜದ ಬೇರು ಸುಭದ್ರ ಕುಟುಂಬ- ಪರಿವಾರಗಳಲ್ಲೂ ಇದೆ. ಕೌಟುಂಬಿಕ ಜೀವನ-ಗೃಹಸ್ಥಾಶ್ರಮ - ಸುವ್ಯವಸ್ಥಿತವಾಗಲು ಬೇಕಾದ ಸರ್ವಕಾಲಿಕ ಮಾರ್ಗದರ್ಶನಗಳ ಮಹಾಪೂರವೇ ವೇದಗಳಲ್ಲಿವೆ. ಇವುಗಳ ಪಾಲನೆ ಎಲ್ಲೂ, ಯಾರೂ ಮಾಡಬಹುದಾಗಿದೆ. ಇದೇ ವೇದೋಕ್ತ ಸಾಮಾಜಿಕ ವ್ಯವಸ್ಥೆ. ಸಮಾಜದ ಪ್ರತಿಯೊಬ್ಬ ಮಾನವ- ಮನನಶೀಲನಿಗೂ ಈ ವ್ಯವಸ್ಥೆಯ ಅರಿವು ಅನಿವಾರ್ಯ. ಈ ಅರಿವಿಗಾಗಿ ಪ್ರತಿಯೊಬ್ಬ ಮಾನವನನ್ನು ಅಧ್ಯಯನಕ್ಕಾಗಿ ವೇದಗಳು ಕೈಬೀಸಿ ಕರೆಯುತ್ತವೆ.

## ಇತಿಹಾಸದಲ್ಲೊಂದು ಮೈಲಿಗಲ್ಲು

ಮೇಲೆ ಹೇಳಲಾದ ತಥ್ಯಗಳನ್ನು ನಮ್ಮ ಈ ವೇದಭಾಷ್ಯದಲ್ಲಿ ಸಂದೇಹಕ್ಕೆಡೆಯಿಲ್ಲದೆ ಉದ್ಘಾಟನೆ ಮಾಡಲಾಗುತ್ತದೆ. ಆದುದರಿಂದ ಇದನ್ನು ವೈಜ್ಞಾನಿಕ - ಬುದ್ಧಿಸಂಗತ- ಸಾರ್ವಕಾಲಿಕ - ಸಾರ್ವದೇಶಿಕ ಭಾಷ್ಯ ಎನ್ನಲು ಯಾವುದೇ ಅಡ್ಡಿಯಿಲ್ಲ. ೧೪ ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಆಶ್ರಯದಲ್ಲಿ ನಾಲ್ಕೂ ವೇದಗಳಿಗೆ ಸಂಸ್ಕೃತದಲ್ಲಿ ರಚಿಸಿದ ಸಾಯಣಭಾಷ್ಯವೇ ಇಂದು ನಮಗೆ ಉಪಲಬ್ಧವಿರುವ ವಿಸ್ತೃತ ವೇದಭಾಷ್ಯ. ಕ್ರಿ.ಶ. ೧೯೪೭ ರಲ್ಲಿ ಮೈಸೂರು ಮಹಾರಾಜರು ಇದೇ ಸಾಯಣಭಾಷ್ಯದ ಆಧಾರದ ಮೇಲೆ ಕನ್ನಡದಲ್ಲಿ ವಿಸ್ತೃತವಾದ ಋಗ್ವೇದ ಭಾಷ್ಯವನ್ನು ಪ್ರಕಟಿಸುವ ಸಾಹಸ ಮಾಡಿದರು. ಇವೆರಡು ಪ್ರಯತ್ನಗಳ ನಂತರ ಸಮಗ್ರವಾಗಿ ನಾಲ್ಕು ವೇದಗಳ ಭಾಷ್ಯಗಳನ್ನು ಮೊಟ್ಟ ಮೊದಲ ಬಾರಿಗೆ ಕನ್ನಡದಲ್ಲಿ ರಚಿಸುವ ಐತಿಹಾಸಿಕ ಯೋಜನೆಯು ರೂಪುಗೊಂಡಿದೆ. ಮಾತ್ರವಲ್ಲದೆ ದಕ್ಷಿಣ ಭಾರತೀಯ ಭಾಷೆಯಲ್ಲಿಯೇ ಇಂತಹ ಪ್ರಯತ್ನ ಪ್ರಥಮ ಬಾರಿಗೆ ನಡೆಯುತ್ತಿದೆ. ಆದುದರಿಂದ ಈ ವೇದಭಾಷ್ಯಯೋಜನೆಯನ್ನು ಇತಿಹಾಸದ ಮೈಲಿಗಲ್ಲು ಎಂದು ಹೇಳಬಹುದು.

ವೇದಭಾಷ್ಯದ ಕಾರ್ಯ ಸಾಮಾನ್ಯ ಸಂಗತಿಯೇನಲ್ಲ. ಅದು ಹಿಮಾಲಯದಂತಹ ಮಹತ್ವದ ಕಾರ್ಯ. ವಿಜಯನಗರ ಸಾಮ್ರಾಜ್ಯದ ಆಶ್ರಯದಲ್ಲಿ, ಮೈಸೂರು ಮಹಾರಾಜರಂತಹವರ ರಾಜಾಶ್ರಯದಲ್ಲಿ ನಡೆಯಬಹುದಾದ ಈ ಕಾರ್ಯವನ್ನು ಯಾವುದೇ ಆರ್ಥಿಕತೆ ಅಥವಾ ಜನಪ್ರಿಯತೆಯ ವೈಭವದ ಹಿನ್ನಲೆಯಿಲ್ಲದ ಒಂದು ಸಂಸ್ಥೆ ಕೈಗೊಂಡಿರುವುದು ಸಾಮಾನ್ಯ ಸಂಗತಿಯೇನಲ್ಲ! ಆದರೆ, ವೇದಗಳ ಬಗೆಗೆ ನಮ್ಮ ಜನರಿಗೆ ಇರುವ ಅಚ್ಚಳಿಯದ ಗೌರವಾದರಗಳು ನಮ್ಮನ್ನು ಈ ಬೃಹದ್ಯೋಜನೆಯನ್ನು ಕೈಗೆತ್ತಿಕೊಳ್ಳುವಂತೆ ಮಾಡಿದವು. ಅಲ್ಪ ಸಾಧನ- ಸಂಪತ್ತುಗಳ ಹೊರತಾಗಿಯೂ ಈ ಕಾರ್ಯ ಸಂಪನ್ನವಾಗುತ್ತಿರುವುದಕ್ಕೆ ಕಾರಣ ನಮ್ಮ ಜನರಲ್ಲಿರುವ ವೇದಪ್ರೇಮ- ವೇದಭಕ್ತಿ- ವೇದನಿಷ್ಠೆಗಳೇ ಆಗಿವೆ. ಆ ವೇದ ಪ್ರೇಮೀ ಜನತಾ ಜನಾರ್ಧನನಿಗೆ ನಮ್ಮ ಕೃತಜ್ಞತೆಯ ಮೊದಲ ಪುಷ್ಪ ಸಮರ್ಪಿತ.

* * *

# ಋಗ್ವೇದ ಭಾಷ್ಯ

## ಭಾಗ-೩

(ಮಂಡಲ ೩, ಸೂಕ್ತ ೭-೬೨ ;
ಮಂಡಲ ೪, ಸೂಕ್ತ ೧ ರಿಂದ ೫೮ ;
ಮಂಡಲ ೫, ಸೂಕ್ತ ೧ ರಿಂದ ೮)

# ಋಗ್ವೇದ-ಭಾಷ್ಯಮ್

# ತೃತೀಯೋಽಷ್ಟಕಃ

## ಪ್ರಥಮೋಽಧ್ಯಾಯಃ

### ಸೂಕ್ತ ೭

ಮಂತ್ರಸಂಖ್ಯೆ ೧೧ । ವಿಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧, ೬, ೯, ೧೦ ತ್ರಿಷ್ಟುಪ್, ೨-೫, ೭ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೮ ವಿರಾಟ್ ಪಂಕ್ತಿಃ, ೧೧ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಸೂಕ್ತದ ಪ್ರಥಮ ಮಂತ್ರದಲ್ಲಿ ವಿದ್ಯುತ್ತಿನ ಗುಣವನ್ನು ತಿಳಿಸಲಾಗಿದೆ.

**ಪ್ರ ಯ ಆರುಃ ಶಿತಿಪೃಷ್ಠಸ್ಯ ಧಾಸೇ-ರಾ ಮಾತರಾ ವಿವಿಶುಃ ಸಪ್ತ ವಾಣೀಃ ।**
**ಪರಿಕ್ಷಿತಾ ಪಿತರಾ ಸಂ ಚರೇತೇ ಪ್ರ ಸರ್ಸ್ರಾತೇ ದೀರ್ಘಮಾಯುಃ ಪ್ರಯಕ್ಷೇ ॥೧॥**

**ಪದಾರ್ಥ:-** **[ಯೇ]** ಯಾರು **[ಶಿತಿಪೃಷ್ಠಸ್ಯ]** ಸೂಕ್ಷ್ಮ ಪ್ರಶ್ನೆಯ **[ಧಾಸೇಃ]** ಧಾರಣ ಮಾಡುವ ವಿದ್ಯುತ್ ರೂಪಿ ಅಗ್ನಿಯ ಸೂಕ್ಷ್ಮರೂಪ ಸಂಬಂಧವು **[ಪರಿಕ್ಷಿತಾ]** ಎಲ್ಲ ಕಡೆಗಳಿಂದಲೂ ನೆಲೆಸಿರುವ **[ಪಿತರಾ]** ಪಾಲಕನಾದ **[ಮಾತರಾ]** ನೀರು ಮತ್ತು ಅಗ್ನಿಯನ್ನು **[ಪ್ರ, ಆರುಃ]** ಪಡೆದುಕೊಳ್ಳುವರು. **[ಸಂ, ಚರೇತೇ]** ಯಾವುದು ನೀರು ಮತ್ತು ಅಗ್ನಿ ಇವೆರಡನ್ನು ಸರಿಯಾದ ರೀತಿಯಲ್ಲಿ ಸಂಚಲನಗೊಳಿಸುತ್ತದೆಯೋ ಮತ್ತು **[ಪ್ರ, ಸಸ್ರಾತೇ]** ವಿಸ್ತಾರ ರೂಪದಲ್ಲಿ ಪಡೆದುಕೊಳ್ಳುತ್ತದೆ. **[ದೀರ್ಘಂ, ಆಯುಃ]** ಆ ವಿದ್ಯುತ್ತನ್ನು ಪಡೆದವರು ಸುದೀರ್ಘವಾದ ಜೀವನಕಾಲವನ್ನು **[ಪ್ರಯಕ್ಷೇ]** ಉತ್ತಮವಾದ ಯಜ್ಞ ಕ್ರಿಯೆಗಳನ್ನು ಮಾಡುವುದಕ್ಕಾಗಿ **[ಸಪ್ತ, ವಾಣೀಃ]** ನಾಭಿಯಿಂದ ಮಸ್ತಿಷ್ಕದವರೆಗೆ ಏಳು ದ್ವಾರಗಳಲ್ಲಿ ಹರಡಿರುವ ನುಡಿಯನ್ನು **[ಆ, ವಿವಿಶುಃ]** ಪ್ರವೇಶ ಮಾಡಿದವರಾಗಿ ಹಿರಿತನವನ್ನು ಪಡೆಯುತ್ತಾರೆ.

**ಭಾವಾರ್ಥ:-** ಒಂದು ವೇಳೆ ಶರೀರದಲ್ಲಿ ವಿದ್ಯುತ್ ರೂಪವಾದ ಅಗ್ನಿಯು ಪ್ರಸರಿಸಿಕೊಂಡು ಇರದಿದ್ದರೆ, ಯಾವುದೇ ರೀತಿಯ ವಾಕ್ ವ್ಯವಹಾರವು ನಡೆಯುತ್ತಿರಲಿಲ್ಲ. ಯಾರು ಅಂತಹ ವಿದ್ಯುತ್ ರೂಪಿ ಅಗ್ನಿಯನ್ನು ಬ್ರಹ್ಮಚರ್ಯಾದಿ ನಿಯಮ ನಿಷ್ಠೆಗಳಿಂದ ಯೋಗ್ಯರೀತಿಯಲ್ಲಿ ಸೇವನೆ ಮಾಡುತ್ತಾರೋ ಅವರು ಬಹು ದೀರ್ಘಕಾಲದ ಜೀವನಾವಸ್ಥೆಯನ್ನು ಪಡೆದುಕೊಳ್ಳುತ್ತಾರೆ.

ಈ ಮಂತ್ರದಲ್ಲಿ ಮನುಷ್ಯರು ಯಾವ ರೀತಿಯ ವಾಣಿಯನ್ನು ಸೇವಿಸಬೇಕು ಎಂಬುದನ್ನು ತಿಳಿಸಲಾಗಿದೆ.

**ದಿವಕ್ಷಸೋ ಧೇನವೋ ವೃಷ್ಣೋ ಅಶ್ವಾ ದೇವೀರಾ ತಸ್ಥೌ ಮಧುಮದ್ವಹಂತೀಃ ।**
**ಋತಸ್ಯ ತ್ವಾ ಸದಸಿ ಕ್ಷೇಮಯಂತಂ ಪರ್ಯೇಕಾ ಚರತಿ ವರ್ತನಿಂ ಗೌಃ ॥೨॥**

**ಪದಾರ್ಥ:-** **[ಋತಸ್ಯ]** ಸತ್ಯದ **[ಸದಸಿ]** ಸಭೆಯಲ್ಲಿ **[ದಿವಕ್ಷಸಃ]** ಬೆಳಕಿನಿಂದ ವ್ಯಾಪ್ತವಾಗಿ **[ವೃಷ್ಣಃ]** ಬಲಿಷ್ಠ ಪುರುಷನ **[ಅಶ್ವಾಃ]** ಶೀಘ್ರಗಾಮಿ ಕುದುರೆಗಳಿಗೆ ಸಮಾನವಾದ **[ದೇವೀಃ]** ದಿವ್ಯರೂಪದ **[ಮಧುಮತ್]** ಕೋಮಲವಾದ

ವಿಜ್ಞಾನರೂಪ ಸುಖವನ್ನು [**ವಹಂತೀಃ**] ಪಡೆದುಕೊಂಡಿರುವ [**ಧೇನವಃ**] ವಾಣಿಯು [**ಕ್ಷೇಮಯಂತಮ್**] ರಕ್ಷಣೆ ಮಾಡುತ್ತ [**ತ್ವಾ**] ನಿನ್ನನ್ನು [**ಏಕಾ, ಗೌಃ**] ಒಂದೇ ರೀತಿಯಲ್ಲಿ ತನ್ನ ಕಕ್ಷೆಯಲ್ಲಿ ಚಲಿಸುವ ಭೂಮಿಯು [**ವರ್ತನಿಂ**] ದಾರಿಯನ್ನು [**ಪರಿ, ಚರತಿ**] ಎಲ್ಲ ಕಡೆಯಿಂದಲೂ ಚಲಿಸುತ್ತಿದೆಯೋ ಎಂಬ ರೀತಿಯಲ್ಲಿ [**ಆ, ತಸ್ಥೌ**] ಉಪಸ್ಥಿತಳಾಗುವಳು. ಅಂತಹ ವಾಣಿಯನ್ನು ಪಡೆದು ಯಥಾಸ್ಥಿತಿಯನ್ನು ತಿಳಿಯಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಅಸಹಾಯಕಳಾದ ಭೂದೇವಿಯು ತನ್ನ ಕಕ್ಷೆಯಲ್ಲಿ ಪ್ರತಿದಿನವೂ ಚಲಿಸುವಳೋ, ಅದೇ ರೀತಿಯಲ್ಲಿ ಸಭ್ಯ ಜನರ ವಾಣಿಯು ಮಿಥ್ಯಾ ಭಾಷಣವನ್ನು ತ್ಯಜಿಸಿ ನಿಯತವಾಗಿ ಸತ್ಯಮಾರ್ಗದಲ್ಲಿ ಚಲಿಸುತ್ತದೆ. ಯಾರು ಇಂತಹ ವಾಣಿಯನ್ನು ಸೇವನೆ ಮಾಡುತ್ತಾರೆಯೋ ಅವರಿಗೆ ಯಾವ ರೀತಿಯ ಹಾನಿಯೂ ಆಗುವುದಿಲ್ಲ.

ಈ ಮಂತ್ರದಲ್ಲಿ ರಾಜನು ಏನು ಮಾಡಬೇಕು ಎಂಬುದನ್ನು ತಿಳಿಸಲಾಗಿದೆ.

**ಆ ಸೀಮರೋಹತ್ಸುಯಮಾ ಭವಂತೀಃ ಪತಿಶ್ಚಿಕಿತ್ವಾನ್ರಯಿವಿದ್ರಯೀಣಾಮ್ ।**
**ಪ್ರ ನೀಲಪೃಷ್ಠೋ ಅತಸಸ್ಯ ಧಾಸೇ-ಸ್ತಾ ಅವಾಸಯತ್ ಪುರುಧಪ್ರತೀಕಃ ॥೩॥**

**ಪದಾರ್ಥ:-** [**ಚಿಕಿತ್ವಾನ್**] ಜ್ಞಾನವಂತನು [**ರಯಿವಿತ್**] ದ್ರವ್ಯವನ್ನರಿತವನು [**ರಯೀಣಾಂ**] ಧನಗಳಿಗೆ [**ಪತಿಃ**] ಒಡೆಯನಾದ ನಿನ್ನಂತಹ [**ಪುರುಧಪ್ರತೀಕಃ**] ಅನೇಕರ ಪೋಷಣ ಧಾರಣರೂಪವಾದ ಕೆಲಸ ಮಾಡುವವನು [**ನೀಲಪೃಷ್ಠಃ**] ಯಾವನ ಪೃಷ್ಠಭಾಗದಲ್ಲಿ ನೀಲವರ್ಣವಿದೆಯೋ ಅಂತಹ [**ಸೀಂ**] ಸೂರ್ಯ ಮಂಡಲವು [**ಅತಸಸ್ಯ**] ವ್ಯಾಪ್ತವಾದ [**ಧಾಸೇಃ**] ಪೋಷಣ ಮಾಡುವ ರಾಜನ [**ಭವಂತೀಃ**] ವರ್ತಮಾನವಾದ [**ಸುಯಮಾಃ**] ನಿಯತ ರೂಪದಲ್ಲಿರುವ ಪ್ರಜೆಗಳನ್ನು [**ಪ್ರ, ಆ, ಅವಾಸಯತ್**] ಉತ್ತಮ ರೀತಿಯಲ್ಲಿ ನೆಲೆಗೊಳಿಸುವವನಾಗಿ [**ಆರೋಹತ್**] ತನ್ನ ಕೆಲಸದಲ್ಲಿ ಮಗ್ನನಾಗುತ್ತಾನೆ [**ತಾಃ**] ಅಂತಹ ನಿಯಮಯುಕ್ತ ಪ್ರಜೆಗಳನ್ನು ಉತ್ತಮ ರೀತಿಯಲ್ಲಿ ನೆಲೆಗೊಳಿಸುವಂತೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಪ್ರಜೆಗಳನ್ನು ಜಾಗೃತ ಗೊಳಿಸಿ ಉತ್ತಮ ರೀತಿಯಲ್ಲಿ ನೆಲೆಗೊಳಿಸುತ್ತಾನೆಯೋ, ಅದೇರೀತಿಯಲ್ಲಿ ರಾಜನೂ ಸಹ ಸುಶಿಕ್ಷಿತರೂ ತನ್ನ ರಕ್ಷಣೆಗೊಳಪಟ್ಟವರೂ ಆದ ಪ್ರಜೆಗಳನ್ನು ಭೂಮಂಡಲದ ಎಲ್ಲ ದಿಕ್ಕುಗಳಲ್ಲಿಯೂ ನೆಲೆಗೊಳಿಸಿ ಧನಾಢ್ಯರನ್ನಾಗಿ ಮಾಡಬೇಕು.

ಪುನಃ ಈ ಮಂತ್ರದಲ್ಲಿ ಮನುಷ್ಯರ ಕಾರ್ಯವನ್ನು ತಿಳಿಸಲಾಗಿದೆ.

**ಮಹಿ ತ್ವಾಷ್ಟ್ರಮೂರ್ಜಯಂತೀರಜುರ್ಯಂ ಸ್ತಭೂಯಮಾನಂ ವಹತೋ ವಹಂತಿ ।**
**ವ್ಯಂಗೇಭಿರ್ದಿದ್ಯುತಾನಃ ಸಧಸ್ಥ ಏಕಾಮಿವ ರೋದಸೀ ಆ ವಿವೇಶ ॥೪॥**

**ಪದಾರ್ಥ:-** [**ಅಜುರ್ಯಂ**] ಜೀರ್ಣಾವಸ್ಥಾರಹಿತವಾದ [**ಮಹಿ**] ಮಹತ್ತರವಾದ [**ಸ್ತಭೂಯಮಾನಂ**] ಲೋಕವನ್ನು ಧಾರಣ ಮಾಡಿರುವ [**ತ್ವಾಷ್ಟ್ರಂ**] ತೇಜಸ್ಸನ್ನು [**ಊರ್ಜಯಂತೀಃ**] ವೃದ್ಧಿಪಡಿಸುವ ಶಕ್ತಿಯನ್ನು [**ವಹತಃ**] ಯಥಾಸ್ಥಾನಗಳಿಗೆ ತಲುಪಿಸುವ ಕಿರಣವು [**ವ್ಯಂಗೇಭಿಃ**] ವಿವಿಧ ರೀತಿಯ ಅಂಗಗಳಿಂದ [**ವಹಂತಿ**] ತಲುಪಿಸುತ್ತವೆ. [**ವಿದ್ಯುತಾನಃ**] ಬೆಳಗುತ್ತಲಿರುವ ಅಗ್ನಿಯ ರೀತಿಯಲ್ಲಿ [**ಸಧಸ್ಥೇ**] ಏಕಸ್ಥಾನದಲ್ಲಿ ನೆಲೆಗೊಂಡ [**ಏಕಾಮಿವ**] ಒಬ್ಬಳನ್ನೇ ಸೇವಿಸುವ ಪತಿಯಂತೆ, [**ರೋದಸೀ**] ಭೂಮಿ ಆಕಾಶಗಳನ್ನು [**ಆ, ವಿವೇಶ**] ಆವೃತನಾಗುವನು. ಅಂತಹ ವಿದ್ಯುದ್ರೂಪಿ ಅಗ್ನಿಯನ್ನು ತನ್ನ ಕಾರ್ಯಸಿದ್ಧಿಗೋಸ್ಕರ ತೊಡಗಿಸಿಕೊ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಎಲ್ಲ ಕಡೆಗಳಲ್ಲೂ ವ್ಯಾಪಕವಾಗಿರುವ ಮಿಂಚಿನ ರೂಪದಲ್ಲಿರುವ ಅಗ್ನಿಯ ಗುಣ ಕರ್ಮ ಸ್ವಭಾವಗಳನ್ನು ಅರಿತು ತಮ್ಮ ಕಾರ್ಯಸಿದ್ಧಿಯನ್ನು ಮಾಡಿಕೊಳ್ಳಬೇಕು.

ಎಲ್ಲರೂ ಎಲ್ಲ ಕಡೆಗಳಲ್ಲೂ ಹೇಗೆ ಮಹಾತ್ಮರಾಗುತ್ತಾರೆ ಎಂಬುದನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಜಾನಂತಿ ವೃಷ್ಣೋ ಅರುಷಸ್ಯ ಶೇವ-ಮುತ ಬ್ರಧ್ನಸ್ಯ ಶಾಸನೇ ರಣಂತಿ । ದಿವೋರುಚಃ**
**ಸುರುಚೋ ರೋಚಮಾನಾ ಇಳಾ ಯೇಷಾಂ ಗಣ್ಯಾ ಮಾಹಿನಾ ಗೀಃ ॥೫॥**

**ಪದಾರ್ಥ:-** **[ಯೇಷಾಂ]** ಯಾರ **[ಗಣ್ಯಾ]** ಗಣನೆಗೆ ಯೋಗ್ಯವಾದ **[ಇಡಾ]** ಸ್ತುತಿಗೆ ಯೋಗ್ಯವಾದ **[ಮಾಹಿನಾ]** ಗೌರವಕ್ಕೆ ಯೋಗ್ಯವಾದ **[ಗೀಃ]** ವಾಣಿಯಿದೆಯೋ ಅವರು **[ರೋಚಮಾನಾಃ]** ಆಪ್ಯಾಯಮಾನವಾದ **[ದಿವೋರುಚಃ]** ವಿಜ್ಞಾನವೆಂಬ ಬೆಳಕಿನಲ್ಲಿ ಆಸಕ್ತಿ ಮೂಡಿಸುವ, **[ಸುರುಚಃ]** ಉತ್ತಮ ಪ್ರೀತಿಯನ್ನು ಉತ್ಪಾದಿಸುವ ಜನರು **[ರಣಂತಿ]** ಶಬ್ದ ಘೋಷಗಳನ್ನು ಮಾಡುತ್ತಾರೋ ಹಾಗೇ **[ವೃಷ್ಣಃ]** ಬಲಿಷ್ಠವಾದ **[ಅರುಷಸ್ಯ]** ಅಶ್ವವೇಗಕ್ಕೆ ಸಮನಾದ **[ಬ್ರಧ್ನಸ್ಯ]** ಶ್ರೇಷ್ಠ ರಾಜಪುರುಷನ **[ಶಾಸನೇ]** ಆಳ್ವಿಕೆಯಲ್ಲಿ **[ಶೇವಂ]** ಸುಖವನ್ನೂ **[ಉತ]** ಮತ್ತು ವಿಜ್ಞಾನವನ್ನೂ **[ಜಾನಂತಿ]** ಕಂಡುಕೊಳ್ಳುವರು.

**ಭಾವಾರ್ಥ:-** ಯಾವ ಮನುಷ್ಯರು ವಿದ್ಯಾವಂತರ ಶಾಸನಕ್ಕೊಳಪಡುತ್ತಾರೆಯೋ ಅಂತಹ ಮನುಷ್ಯರು ಪ್ರಸಿದ್ಧ ವಿದ್ಯಾವಂತರೆನಿಸಿಕೊಂಡು ಮಹಾತ್ಮರಾಗುತ್ತಾರೆ.

ಈ ಮಂತ್ರದಲ್ಲಿಯೂ ಪುನಃ ಮನುಷ್ಯರ ಕರ್ತವ್ಯವನ್ನೇ ತಿಳಿಸಲಾಗಿದೆ.

**ಉತೋ ಪಿತೃಭ್ಯಾಂ ಪ್ರವಿದಾನು ಘೋಷಂ ಮಹೋ ಮಹದ್ಭ್ಯಾಮನಯಂತ ಶೂಷಮ್।**
**ಉಕ್ಷಾ ಹ ಯತ್ರ ಪರಿ ಧಾನಮಕ್ತೋ-ರನು ಸ್ವಂ ಧಾಮ ಜರಿತುರ್ವವಕ್ಷ ॥೬॥**

**ಪದಾರ್ಥ:-** **[ಮಹದ್ಭ್ಯಾಂ]** ಮಹಾತ್ಮರಾದ ಅಧ್ಯಾಪಕ ಉಪದೇಶಕರಿಂದ **[ಮಹಃ]** ಬ್ರಹ್ಮಚರ್ಯಾದಿ ನಿಯಮಗಳನ್ನೂ **[ಉತೋ]** ಹಾಗೂ **[ಪಿತೃಭ್ಯಾಂ]** ತಂದೆ ತಾಯಿಯರೊಂದಿಗೆ **[ಪ್ರವಿದಾ]** ಪ್ರಕೃಷ್ಟ ಜ್ಞಾನದೊಂದಿಗೆ **[ಘೋಷಂ]** ಶಿಕ್ಷಣಪ್ರದಾಯಕ ವಾಣಿಯನ್ನು **[ಶೂಷಂ]** ಬಲವನ್ನು **[ಅನು, ಅನಯಂತ]** ಅನುಕೂಲಕರವಾಗಿ ಪಡೆದುಕೊಳ್ಳುತ್ತಾರೋ **[ಯತ್ರ]** ಎಲ್ಲಿ **[ಉಕ್ಷಾ]** ಆಸೇಚನ ಮಾಡುವ ಸೂರ್ಯನು **[ಅಕ್ತೋಃ]** ರಾತ್ರಿಯ **[ಪರಿ, ಧಾನಂ]** ಸುತ್ತಲೂ ಧಾರಣ ಮಾಡಿರುವ ಪ್ರಾವರ್ಣವನ್ನು **[ಜರಿತುಃ]** **[ಹ]** ಸ್ತುತಿ ಮಾಡುವವನ **[ಸ್ವಂ, ಧಾಮ]** ತನ್ನ ಸ್ಥಾನವನ್ನು ಅಂದರೆ ಪ್ರಾಪ್ತವಾದ ಅವಸ್ಥೆಯನ್ನು **[ಅನು, ವವಕ್ಷ]** ತಲುಪುತ್ತಾನೆಯೋ ಅವನನ್ನು ಗೌರವಿಸಿರಿ.

**ಭಾವಾರ್ಥ:-** ಯಾವ ಮನುಷ್ಯರು ಬ್ರಹ್ಮಚರ್ಯ ಆಶ್ರಮದಲ್ಲಿ ತಂದೆ ತಾಯಿ ಆಚಾರ್ಯ ಮುಂತಾದ ಮಹಾಪುರುಷರ ಸೇವೆ ಮಾಡಿ ವಿದ್ಯೆಯನ್ನು ತೇಜಸ್ಸನ್ನು ಹೇಗೆ ಪಡೆದುಕೊಳ್ಳುತ್ತಾರೋ ಅದೇ ರೀತಿ ಎಲ್ಲ ಜನರೂ ಪ್ರಾತಃಕಾಲದಲ್ಲಿ ಭಗವಂತನ ಸ್ತುತಿ ಪೂಜಾದಿಗಳಿಂದ ಧರ್ಮಾಚರಣೆಯಿಂದ ಸುಖವನ್ನು ಪಡೆದುಕೊಳ್ಳಬೇಕು.

ಈ ಮಂತ್ರದಲ್ಲಿ ಉಪದೇಶಕ ಜನರು ಯಾರಂತೆ ಏನು ಮಾಡುತ್ತಾರೆ ಎಂಬ ವಿಚಾರವನ್ನು ತಿಳಿಸಲಾಗಿದೆ.

**ಅಧ್ವರ್ಯುಭಿಃ ಪಂಚಭಿಃ ಸಪ್ತ ವಿಪ್ರಾಃ ಪ್ರಿಯಂ ರಕ್ಷಂತೇ ನಿಹಿತಂ ಪದಂ ವೇಃ ।**
**ಪ್ರಾಂಚೋ ಮದಂತ್ಯುಕ್ಷಣೋ ಅಜುರ್ಯಾ ದೇವಾ ದೇವಾನಾಮನು ಹಿ ವ್ರತಾ ಗುಃ ॥೭॥**

**ಪದಾರ್ಥ:-** [**ಪ್ರಾಂಚಃ**] ಉತ್ಕೃಷ್ಟವಾದ ವಿದ್ಯೆಯೊಂದಿಗೆ [**ಉಕ್ಷಣಃ**] ಸುಖವನ್ನು ಬಿತ್ತರಿಸುವವನು [**ಅಜುರ್ಯಾಃ**] ಶರೀರಾತ್ಮದ ಜೀರ್ಣಾವಸ್ಥೆ ರಹಿತನಾದ [**ದೇವಾಃ**] [**ಹಿ**] ವಿದ್ಯಾವಂತ ಜನತೆಯೇ [**ದೇವಾನಾಂ**] ಪಂಡಿತರ [**ವ್ರತಾ**] ಸತ್ಯಭಾಷಣಾದಿ ನಿಯತ ಸ್ವಭಾವವನ್ನು [**ಅನು ಗುಃ**] ಅನುಕೂಲಕರವಾಗಿ ಪಡೆದುಕೊಳ್ಳುವರು. [**ಅಧ್ವರ್ಯುಭಿಃ**] ಯಾಜ್ಞಿಕನು, [**ಪಂಚಭಿಃ**] ಹೋತಾ, ಅಧ್ವರ್ಯು, ಉದ್ಗಾತ, ಬ್ರಹ್ಮ, ಸದಸ್ಯರೆಂಬ ಐದು ಋತ್ವಿಜರು ಪತ್ನೀ ಯಜಮಾನರೊಂದಿಗೆ ಇರುವವನಾಗಿ [**ಸಪ್ತ**] [**ವಿಪ್ರಾಃ**] ಈ ಏಳು ಬುದ್ಧಿವಂತ ಜನರು [**ವೇಃ**] ವ್ಯಾಪಕನಾದ ಪರಮೇಶ್ವರನ [**ಪ್ರಿಯಂ**] ಪ್ರಿಯಕರವಾಗಿ [**ನಿಹಿತಂ**] ಇರುವ [**ಪದಂ**] ಪಡೆಯಲು ಯೋಗ್ಯವಾದ ಸ್ವರೂಪವನ್ನು [**ರಕ್ಷಂತೇ**] ರಕ್ಷಣೆ ಮಾಡುವರು; [**ಮದಂತಿ**] ಅದರಿಂದ ಆನಂದಿತರಾಗುವರು.

**ಭಾವಾರ್ಥ:-** ಏಳು ಜನ ಋತ್ವಿಜರು ಹೇಗೆ ಯಜ್ಞವನ್ನು ಮಾಡಿ ಪ್ರಜಾಕೋಟಿಯನ್ನು ಸುಖಿಗಳನ್ನಾಗಿ ಮಾಡುತ್ತಾರೋ ಹಾಗೆಯೇ ಉಪದೇಶ ಮಾಡುವ ಪಂಡಿತರು ತಾವೂ ಸುಶೀಲರೂ, ಧಾರ್ಮಿಕರೂ ಆಗಿ ಬೋಧನೆ, ಉಪದೇಶಗಳಿಂದ ಸಮಸ್ತ ಮನುಷ್ಯ ಕೋಟಿಯನ್ನು ಆನಂದಿತರನ್ನಾಗಿ ಮಾಡುತ್ತಾರೆ.

ಪುನಃ ಉಪದೇಶಕರ ವಿಷಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ದೈವ್ಯಾ ಹೋತಾರಾ ಪ್ರಥಮಾ ನ್ಯೃಂಜೇ ಸಪ್ತ ಪೃಕ್ಷಾಸಃ ಸ್ವಧಯಾ ಮದಂತಿ ।**
**ಋತಂ ಶಂಸಂತ ಋತಮಿತ್ತ ಆಹು-ರನು ವ್ರತಂ ವ್ರತಪಾ ದೀಧ್ಯಾನಾಃ ॥೮॥**

**ಪದಾರ್ಥ:-** [**ಸಪ್ತ**] ಏಳು ಜನ [**ವೃಕ್ಷಾಸಃ**] ಕೋಮಲ ಸ್ವಭಾವದವರು [**ಸ್ವಧಯಾ**] ಅನ್ನಾಹಾರದಿಂದ [**ಮದಂತಿ**] ಆನಂದಗೊಳಿಸುತ್ತಾರೆ. [**ಋತಂ**] ಸತ್ಯದ [**ಶಂಸಂತಃ**] ಸ್ತುತಿಯನ್ನು ಮಾಡುತ್ತಾರೆ. [**ಋತಂ**], [**ವ್ರತಂ**] ಸತ್ಯ ಆಚರಣೆಯನ್ನು [**ಇತ್**] ಅದನ್ನೇ [**ತೇ**] ಅವರು [**ವ್ರತಪಾಃ**] ರಕ್ಷಿಸುತ್ತಾರೆ. [**ದೀಧ್ಯಾನಾಃ**] ವಿದ್ಯಾಸದ್ಗುಣಗಳಿಂದ ಪ್ರಕಾಶಮಾನರಾದ ಅವರು [**ಅನುಪ್ರಾಹುಃ**] ಅನುಕೂಲಕರವಾದ ಉಪದೇಶ ಮಾಡುತ್ತಾರೆ [**ದೈವ್ಯಾಃ**] ವಿದ್ವಾಂಸರಲ್ಲಿ [**ಪ್ರಥಮಾ**] ಪ್ರಖ್ಯಾತರಾಗಿ [**ಹೋತಾರಾ**] ವಿದ್ಯೆಯ ಬೋಧಕ ಮತ್ತು ಉಪದೇಶಕರಿಬ್ಬರೂ ಅನುಕೂಲಕರ ಬೋಧನೆ ಮತ್ತು ಉಪದೇಶ ಮಾಡುತ್ತಾರೆ. [ನಿ] ನಿರಂತರವಾಗಿ [**ಋಂಜೆ**] ನಾನೂ ಅದನ್ನು ಪ್ರಸಿದ್ಧಗೊಳಿಸುತ್ತೇನೆ.

**ಭಾವಾರ್ಥ:-** ಯಾರು ಧರ್ಮಯುಕ್ತ ವ್ಯವಹಾರದಿಂದ ಧನಧಾನ್ಯಾದಿಗಳನ್ನು ಸಂಪಾದಿಸಿಕೊಂಡು ಸತ್ಯದ ಉಪದೇಶವನ್ನು ಮಾಡಿ, ತಾವೂ ಅದನ್ನು ಆಚರಣೆಯಲ್ಲಿಟ್ಟುಕೊಂಡು ಎಲ್ಲರಿಗೂ ಶಿಕ್ಷಣವನ್ನು ನೀಡುತ್ತಾರೋ ಅವರು ಎಲ್ಲರಿಂದಲೂ ಗೌರವಕ್ಕೆ ಪಾತ್ರರಾಗುತ್ತಾರೆ.

ಈ ಮಂತ್ರದಲ್ಲಿ ಪುನಃ ವಿದ್ಯಾವಂತರ ಸ್ವಭಾವವನ್ನು ಹೇಳಲಾಗಿದೆ.

**ವೃಷಾಯಂತೇ ಮಹೇ ಅತ್ಯಾಯ ಪೂರ್ವೀ-ರ್ವೃಷ್ಣೇ ಚಿತ್ರಾಯ ರಶ್ಮಯಃ ಸುಯಾಮಾಃ।**
**ದೇವ ಹೋತರ್ಮಂದ್ರತರಶ್ಚಿಕಿತ್ವಾನ್ ಮಹೋ ದೇವಾನ್ ರೋದಸೀ ಏಹ ವಕ್ಷಿ ॥೯॥**

**ಪದಾರ್ಥ:-** [**ದೇವ**] ಪ್ರಕಾಶಮಾನನಾದ [**ಪೋತಃ**] ಎಲ್ಲರಿಗೂ ಸುಖವನ್ನು ಕೊಡುವ ವಿದ್ಯಾವಂತನೇ! [**ಮಂದ್ರತರಃ**] ಆನಂದದಾಯಕನು [**ಚಿಕಿತ್ವಾನ್**] ಚೇತನವನ್ನು ನೀಡುವವನೂ ಆದ ನೀನು [**ಸುಯಾಮಾಃ**] ಸುಂದರವಾದ ಯಾಮಗಳನ್ನು (ಜಾವಗಳನ್ನು) ಹೊಂದಿರುವ [**ರಶ್ಮಯಃ**] ಕಿರಣಗಳನ್ನು [**ಮಹೇ**] ಹಿರಿದಾದ [**ಅತ್ಯಾಯ**] ಎಲ್ಲ ವಿದ್ವಾಂಸರಲ್ಲೂ ವ್ಯಾಪನಶೀಲವಾದ [**ಚಿತ್ರಾಯ**] ಆಶ್ಚರ್ಯಕರವಾದ [**ವೃಷ್ಣೇ**] ವಿದ್ಯಾಪ್ರಚಾರ

ಮಾಡುವ ವಿದ್ವಾಂಸರಿಗಾಗಿ **[ಪೂರ್ವೀಃ]** ಮೊದಲಿನ ಪ್ರಜಾ ಜನರಿಗಾಗಿ **[ವೃಷಾಯಂತೇ]** ವೃಷಭದಂತೇ ಹುರಿದುಂಬಿಸುತ್ತ **[ರೋದಸೀ]** ಸೂರ್ಯ ಮತ್ತು ಭೂಮಿ ಪ್ರಕಟಗೊಳಿಸುವ ರೀತಿಯಲ್ಲಿ **[ಇಹ]** ಇಹ ಪ್ರಪಂಚದಲ್ಲಿ **[ಮಹಃ]** ಮಹಾತ್ಮರಾದ **[ದೇವಾನ್]** ವಿದ್ಯಾವಂತರನ್ನು **[ಆ, ವಕ್ಷಿ]** ಉತ್ತಮ ರೀತಿಯಲ್ಲಿ ಎಲ್ಲ ಕಡೆಗಳಿಂದಲೂ ಧಾರಣ ಮಾಡುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನ ಕಿರಣಗಳು ಬೆಳಕನ್ನು ನೀಡುತ್ತ ಮಳೆಯ ಮೂಲಕ ಎಲ್ಲಾ ಪ್ರಜೆಗಳನ್ನು ಹೇಗೆ ಸುಖಿಗಳನ್ನಾಗಿ ಮಾಡುತ್ತವೆಯೋ ಹಾಗೆ ವಿದ್ಯಾವಂತರು ಸಹ ಎಲ್ಲ ಪ್ರಜೆಗಳನ್ನು ವಿದ್ಯಾವಂತರೂ ಹಾಗೂ ಜ್ಞಾನವಂತರೂ ಆಗುವಂತೆ ಮಾಡುತ್ತಾರೆ.

ಈ ಮಂತ್ರದಲ್ಲೂ ವಿದ್ಯಾವಂತರು ಏನು ಮಾಡಬೇಕು ಎಂದು ತಿಳಿಸಲಾಗಿದೆ.

**ಪೃಕ್ಷಪ್ರಯಜೋ ದ್ರವಿಣಃ ಸುವಾಚಃ ಸುಕೇತವ ಉಷಸೋ ರೇವದೂಷುಃ ।**
**ಉತೋ ಚಿದಗ್ನೇ ಮಹಿನಾ ಪೃಥಿವ್ಯಾಃ ಕೃತಂ ಚಿದೇನಃ ಸಂ ಮಹೇ ದಶಸ್ಯ ॥೧೦॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ದ್ರವಿಣಃ]** ಉತ್ತಮ ದ್ರವ್ಯಗಳಿರುವವನೇ! ನೀನು **[ಮಹಿನಾ]** ನಿನ್ನ ಮಹಿಮೆಯಿಂದ **[ಮಹೇ]** ಸೌಭಾಗ್ಯಕ್ಕಾಗಿ **[ಪೃಕ್ಷಪ್ರಯಜಃ]** ಶುಭಗುಣಗಳಿಂದ ಕೋಮಲ ಭಾವದಿಂದ, ಸಂಗತೀಕರಣ ಮಾಡುವಂತಹ **[ಉಷಸಃ]** ಪ್ರಭಾತಕಾಲದಂತಿರುವ **[ಸುವಾಚಃ]** ಸತ್ಯನುಡಿಗಳಿಂದ ಯುಕ್ತನಾಗಿ **[ಸುಕೇತವಃ]** ಉತ್ತಮ ಬುದ್ಧಿ ಸಂಪನ್ನನಾಗಿ **[ರೇವತ]** ದ್ರವ್ಯಪೂರ್ಣವಾಗಿ **[ಊಷುಃ]** ನೆಲೆಗೊಳಿಸು. **[ಉತೋ]** ಪ್ರಭಾತ ಕಿರಣಗಳು ಅಂಧಕಾರವನ್ನು ನಿವೃತ್ತಿಗೊಳಿಸುವಂತೆ **[ಪೃಥಿವ್ಯಾಃ]** ಭೂಮಿಯಲ್ಲಿ **[ಕೃತಂ]** ಮಾಡಲಾಗಿರುವ **[ಏನಃ]** ಪಾಪಕರ್ಮಗಳನ್ನು **[ಚಿತ್]** ಶೀಘ್ರವಾಗಿ **[ಸಂ, ದಶಸ್ಯ]** ಸಂಪೂರ್ಣ ನಷ್ಟಗೊಳಿಸು; **[ಚಿತ್]** ಉತ್ತಮ ಕರ್ಮಗಳನ್ನು ಪ್ರಾಪ್ತಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರೇ! ನೀವೆಲ್ಲರೂ ಪ್ರಭಾತ ಕಾಲದಂತೆ ಮನುಷ್ಯರ ಆತ್ಮವನ್ನು ಜಾಗೃತಗೊಳಿಸಿ ಪ್ರಕಾಶಮಾನ ಮಾಡಿ ವಿಜ್ಞಾನವನ್ನು ಕೊಡಿ. ಅಧರ್ಮಾಚರಣೆ ಯಿಂದ ಅವರನ್ನು ದೂರಮಾಡಿ ಧರ್ಮಾಚರಣೆಯಲ್ಲಿ ತೊಡಗಿಸಿ, ಸತ್ಯವಾದಿಗಳನ್ನಾಗಿ ಮಾಡಿರಿ. ಅದರಿಂದ ಭೂಮಿಯಲ್ಲಿ ನಡೆಯುವ ಪಾಪಾಚರಣೆಯು ಹೆಚ್ಚದಂತಾಗಲಿ.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।**
**ಸ್ಯಾನ್ನಃ ಸೂನುಸ್ತನಯೋ ವಿಜಾವಾ-ಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥೧೧॥**

**ಪದಾರ್ಥ:-** **[ಅಗ್ನೇ]** ಶರೀರಾತ್ಮವನ್ನು ಬೆಳಗಿಸುವಂತಹ ಜ್ಞಾನವಂತನಾದ ನೀನು **[ಪುರುದಂಸಂ]** ಬಹು ಕರ್ಮೋಪಯೋಗಿಯಾದ **[ಸನಿಂ]** ಚೆನ್ನಾಗಿ ಸೇವಿಸಲು ಯೋಗ್ಯಳಾದ **[ಇಳಾಂ]** ಪ್ರಶಂಸಾರ್ಹವಾಣಿಯನ್ನು **[ಸಾಧ]** ಸಾಧಿಸಿಕೊ. **[ಗೋಃ]** ಭೂಮಿಯಲ್ಲಿ **[ಹವಮಾನಾಯ]** ಪಡೆದುಕೊಳ್ಳುವವನಿಗಾಗಿ **[ಶಶ್ವತ್ತಮಂ]** ಶಾಶ್ವತವಾಗಿ ಇರುವಂತಹ ಜ್ಞಾನವನ್ನು ನೆಲೆಗೊಳಿಸು. **[ನಃ]** ನಮ್ಮೆಲ್ಲರಿಗೆ **[ವಿಜಾವಾ]** ವಿಶೇಷ ರೀತಿಯಲ್ಲಿ ಪ್ರಖ್ಯಾತವಾಗುವ **[ತನಯಃ]** ವಿದ್ಯೆಸುಖಿಗಳನ್ನು ಪ್ರಚುರಪಡಿಸುವಂತಹ **[ಸೂನುಃ]** **[ಸ್ಯಾತ್]** ಸಂತಾನವು ಲಭಿಸಲಿ. **[ಅಗ್ನೇ]** ವಿದ್ಯಾವಂತನೇ! **[ತೇ]** ನಿನ್ನ **[ಸಾ ಸುಮತಿಃ]** ಆ ಉತ್ತಮ ಬುದ್ಧಿಯು **[ಅಸ್ಮೇ]** ನಮ್ಮೆಲ್ಲರಿಗೆ **[ಭೂತು]** ಪ್ರಾಪ್ತವಾಗಲಿ.

**ಭಾವಾರ್ಥ:-** ಮನುಷ್ಯರು ವಿದ್ಯಾವಂತರ ಮಾತುಗಳನ್ನು ಮತ್ತು ಬುದ್ಧಿಶಕ್ತಿಯನ್ನು ಯಾವಾಗಲೂ ಪಡೆದುಕೊಳ್ಳಬೇಕು. ತಮ್ಮ ಸಂತಾನಗಳಿಗೆ ಉತ್ತಮ ಶಿಕ್ಷಣವನ್ನು ನೀಡಿ ಅನಾದಿಯಾದ ಸುಖವನ್ನು ಪಡೆಯಬೇಕು ಮತ್ತು ಸತ್ಯ ವಿಚಾರವನ್ನು, ಸದ್ಬುದ್ಧಿಯನ್ನು ಎಲ್ಲ ಕಡೆಗಳಲ್ಲೂ ಪ್ರಚಾರ ಮಾಡಬೇಕು.

ಈ ಸೂಕ್ತದಲ್ಲಿ ವಿದ್ಯಾವಂತರ ಧರ್ಮಯುಕ್ತ ನಡವಳಿಕೆಯ ಉಲ್ಲೇಖವಿರುವುದರಿಂದ ಹಿಂದಿನ ಸೂಕ್ತದೊಂದಿಗೆ ಈ ಸೂಕ್ತದ ಸಂಗತಿಯಾಗುತ್ತದೆ.

**ಏಳನೆಯ ಸೂಕ್ತ ಸಮಾಪ್ತ**

## ಸೂಕ್ತ ೮

ಮಂತ್ರಸಂಖ್ಯೆ ೧೧ । ವಿಶ್ವಾಮಿತ್ರ ಋಷಿಃ । ವಿಶ್ವೇದೇವಾ ದೇವತಾಃ । ೧, ೮-೧೦ ನಿಚೃತ್ ತ್ರಿಷ್ಟುಪ್, ೨, ೫, ೬, ೧೧ ತ್ರಿಷ್ಟುಪ್, ೪ ಸ್ವರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩, ೭ ಸ್ವರಾಡನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ಈ ಸೂಕ್ತದ ಪ್ರಥಮ ಮಂತ್ರದಲ್ಲಿ ಮನುಷ್ಯರು ಏನನ್ನು ಬಯಸಬೇಕು ಎಂಬುದನ್ನು ಹೇಳಲಾಗಿದೆ.

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾ-ದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ॥೧॥**

**ಪದಾರ್ಥ:-** [ವನಸ್ಪತೇ] ಕಿರಣಗಳನ್ನು ರಕ್ಷಣೆ ಮಾಡುವ ಸೂರ್ಯನಂತೆ ಇರುವ ತೇಜಸ್ವೀ ವಿದ್ವಾಂಸರೇ! [ಮಧುನಾ] ಮಧುರ ಸ್ವಭಾವದಿಂದ [ದೈವ್ಯೇನ] ದಿವ್ಯರಲ್ಲಿ ಇರಬೇಕಾದ ಕೋಮಲ ಸ್ವಭಾವದಿಂದ [ದೇವಯಂತಃ] ಕಾಮನೆ ಮಾಡುವವನಾಗಿ [ಯತ್] [ತ್ವಾಂ] ಯಾವ ನಿನ್ನನ್ನು [ಅಧ್ವರೇ] ಪಠನ-ಪಾಠನ ಮತ್ತು ರಾಜ್ಯಪಾಲನಾದಿ ವ್ಯವಹಾರಗಳಲ್ಲಿ [ಅಂಜಂತಿ] ಯಾಚಿಸುತ್ತಾರೆ. [ಊರ್ಧ್ವಃ] ಶ್ರೇಷ್ಠಗುಣಗಳಿಂದ ವೃದ್ಧಿಹೊಂದಿರುವ [ತಿಷ್ಠಾಃ] ಸ್ಥಿರವಾಗಿ ನೆಲೆಸಿರುವ [ವಾ] ಮತ್ತು [ಇಹ] ಈ ಸಂಸಾರದಲ್ಲಿ [ದ್ರವಿಣ] ಧನವನ್ನು [ಧತ್ತಾತ್] ನೀನು ಧಾರಣೆ ಮಾಡು. [ಅಸ್ಯಾಃ] [ಮಾತುಃ] ಈ ಮಾನನಿಯ, ಭೂದೇವಿಯ [ಉಪಸ್ಥೇ] ಮಡಿಲಿನಲ್ಲಿ [ಯತ್] [ಕ್ಷಯಃ] ಯಾವ ನಿವಾಸ ಸ್ಥಾನವಿದೆಯೋ ಅದನ್ನು ಗ್ರಹಣ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಪ್ರಾಣಿವರ್ಗವು ಬೆಳಕನ್ನು ಬಯಸುತ್ತದೆಯೋ, ಅದೇ ರೀತಿ ಎಲ್ಲ ಜನರೂ ಉತ್ತಮ ವಿದ್ಯಾವಂತರನ್ನು ಬಯಸಬೇಕು. ಹೀಗೆ ಎಲ್ಲರೂ ಸೇರಿ ಪ್ರೀತಿಯಿಂದ ಉತ್ತಮನೆಲೆ, ಧನ, ಕನಕಗಳನ್ನು ಸಿದ್ಧಿಪಡಿಸಿಕೊಳ್ಳಬೇಕು.

ಈ ಮಂತ್ರದಲ್ಲಿ ಯಾರು ಶುಭವನ್ನು ಪಡೆಯುತ್ತಾರೆ ಎಂಬುದನ್ನು ತಿಳಿಸಲಾಗಿದೆ.

**ಸಮಿದ್ಧಸ್ಯ ಶ್ರಯಮಾಣಃ ಪುರಸ್ತಾ-ದ್ಬ್ರಹ್ಮ ವನ್ವಾನೋ ಅಜರಂ ಸುವೀರಮ್ ।**
**ಆರೇ ಅಸ್ಮದಮತಿಂ ಬಾಧಮಾನ ಉಚ್ಛ್ರಯಸ್ವ ಮಹತೇ ಸೌಭಗಾಯ ॥೨॥**

**ಪದಾರ್ಥ:-** [ಪುರಸ್ತಾತ್] ಮೊದಲಿನಿಂದಲೂ [ಸಮಿದ್ಧಸ್ಯ] ದೇದೀಪ್ಯಮಾನನಾದ ವಿದ್ಯಾವಂತನ [ಶ್ರಯಮಾಣಃ] ಸೇವೆ ಮಾಡುತ್ತಾನೆಯೋ [ಅಜರಂ] ಕ್ಷಯವಾಗದ [ಸುವೀರಂ] ಉತ್ತಮ ತೇಜಸ್ವೀ ಪುರುಷನಾಗುವಂತಹ [ಬ್ರಹ್ಮ] ವಿದ್ಯಾಧನವನ್ನು [ವನ್ವಾನಃ] ಸೇವನ ಮಾಡುತ್ತಾನೆಯೋ ಅವನು [ಅಸ್ಮತ್] ನಮ್ಮ [ಆರೇ] ಸಮೀಪದಲ್ಲಿ ಅಥವಾ

ದೂರದಲ್ಲಿ [ಅಮತಿಂ] ಅಧರ್ಮಯುಕ್ತ ವಿರೋಧ ಬುದ್ಧಿಯನ್ನು [ಬಾಧಮಾನಃ] ವಿನಾಶಗೊಳಿಸುತ್ತ [ಮಹತೇ] ಶ್ರೇಷ್ಠವಾದ [ಸೌಭಗಾಯ] ಉತ್ತಮ ಐಶ್ವರ್ಯಕ್ಕಾಗಿ [ಉತ್, ಶ್ರಯಸ್ವ] ನಿರಂತರವಾಗಿ ಸೇವನೆ ಮಾಡುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಹಿಂದಿನ ಮಂತ್ರದಿಂದ ವನಸ್ಪತೇ ಎಂಬ ಪದದ ಅರ್ಥವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಯಾವ ಮನುಷ್ಯನು ಉತ್ತಮ ಶಿಕ್ಷಣ ನೀಡುವುದರ ಮೂಲಕ ಕುಬುದ್ಧಿಯನ್ನು ನಿವಾರಣೆ ಮಾಡುತ್ತಾನೆಯೋ ಮತ್ತು ಧನ-ಕನಕಾದಿ ಐಶ್ವರ್ಯದೊಂದಿಗೆ ಉತ್ತಮ ಶಿಕ್ಷಣ ವಿದ್ಯೆ ಹಾಗೂ ಧರ್ಮಗಳ ಪ್ರಚಾರ ಮಾಡುತ್ತ ಎಲ್ಲರಿಗೂ ಮಂಗಳವಾಗಲಿ ಎಂಬ ಸದಿಚ್ಛೆಯಿಂದ ಇರುತ್ತಾನೋ ಅವನು ಯಾವಾಗಲೂ ಶುಭವನ್ನೇ ಪಡೆಯುತ್ತಾನೆ.

ಪುನಃ ಈ ಮಂತ್ರದಲ್ಲಿ ಮನುಷ್ಯನ ಕರ್ತವ್ಯವನ್ನು ತಿಳಿಸಲಾಗಿದೆ.

**ಉಚ್ಛ್ರಯಸ್ವ ವನಸ್ಪತೇ ವರ್ಷ್ಮನ್ ಪೃಥಿವ್ಯಾ ಅಧಿ ।**
**ಸುಮಿತೀ ಮೀಯಮಾನೋ ವರ್ಚೋ ಧಾ ಯಜ್ಞವಾಹಸೇ ॥೩॥**

**ಪದಾರ್ಥ:-** [ವರ್ಷ್ಮನ್] ಶ್ರೇಷ್ಠಗುಣಗಳನ್ನು ಪ್ರಚಾರ ಮಾಡುವವನಾದ [ವನಸ್ಪತೇ] ಸೇವನ ಯೋಗ್ಯಧನದ ರಕ್ಷಕನೇ! ನೀನು [ಪೃಥಿವ್ಯಾಃ] ಭೂಮಿಯ ಮೇಲುಭಾಗದಲ್ಲಿ [ಉತ, ಶ್ರಯಸ್ವ] ಕಂಬದಂತೆ ಎತ್ತರವಾಗಿ ಬೆಳೆ. [ಮೀಯಮಾನಃ] ಸತ್ಕಾರಕ್ಕೆ ಒಳಗಾಗಿ [ಸುಮತೀ] ಶ್ರೇಷ್ಠ ಬುದ್ಧಿಯಿಂದ [ಯಜ್ಞವಾಹಸೇ] ಅಧ್ಯಯನ-ಅಧ್ಯಾಪನ ರೂಪಿ ಜ್ಞಾನಯಜ್ಞವನ್ನು ಮಾಡುವ ವಿದ್ಯಾರ್ಥಿಗಳಿಗೆ [ವರ್ಚಃ] ಅಧ್ಯಾಪನರೂಪವಾದ ತೇಜಸ್ಸನ್ನು [ಧಾಃ] ಧಾರಣ ಮಾಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ವೃಕ್ಷರೂಪಿ ವನಸ್ಪತಿಯು ಬೇರು, ಕಾಂಡ, ಕೊಂಬೆ ಮುಂತಾಗಿ, ಸರ್ವಾವಯವಗಳೊದಿಗೆ ವೃದ್ಧಿ ಹೊಂದುತ್ತದೆಯೋ, ಅದೇ ರೀತಿ ಪುರುಷಾರ್ಥ ಸಾಧಕವಾದ ವಿದ್ಯೆಯ ಪ್ರಚಾರ ಮಾಡುತ್ತ ಮನುಷ್ಯರನ್ನು ಸರ್ವಾಂಗೀಣವಾಗಿ ವೃದ್ಧಿಪಡಿಸಬೇಕು.

ಎಂತಹ ಮನುಷ್ಯನು ವಿದ್ಯಾವಂತನಾಗುತ್ತಾನೆ ಎಂಬುದನ್ನು ತಿಳಿಸಿದೆ.

**ಯುವಾ ಸುವಾಸಾಃ ಪರಿವೀತ ಆಗಾತ್ ಸ ಉ ಶ್ರೇಯಾನ್ ಭವತಿ ಜಾಯಮಾನಃ ।**
**ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ (ಽ)೩ ಮನಸಾ ದೇವಯಂತಃ ॥೪॥**

**ಪದಾರ್ಥ:-** [ಯುವಾ] ಯುವಾವಸ್ಥೆಯನ್ನು ಪಡೆದಿರುವ [ಸುವಾಸಾಃ] ಸುಂದರ ವಸ್ತ್ರಧಾರಣೆ ಮಾಡಿರುವ [ಪರಿವೀತಃ] ಎಲ್ಲ ಕಡೆಗಳಿಂದಲೂ ವಿದ್ಯೆಯಿಂದ ವ್ಯಾಪ್ತವಾದ ಮನೆಗೆ [ಆ, ಅಗಾತ್] ಪ್ರಾಪ್ತನಾಗಬೇಕು. [ಸ, ಉ] ಅವನೇ ವಿದ್ಯೆಯಲ್ಲಿ [ಜಾಯಮಾನಃ] ಪ್ರಸಿದ್ಧನಾಗುವನು. [ಶ್ರೇಯಾನ್] [ಭವತಿ] ಶ್ರೇಯಸ್ಕರನೂ ಆಗುತ್ತಾನೆ. [ತಂ] ಅವನನ್ನು [ದೇವಯಂತಃ] ಪಡೆಯಲು ಬಯಸುವವನಾಗಿ [ಧೀರಾಸಃ] ಬುದ್ಧಿವಂತನೂ [ಸ್ವಾಧ್ಯಃ] ವಿದ್ಯಾಧ್ಯಯನ ಮಾಡುವವನೂ [ಕವಯಃ] ಉತ್ಕೃಷ್ಟ ವಿದ್ಯಾವಂತನೂ [ಮನಸಾ] ವಿಜ್ಞಾನದಿಂದ ಮತ್ತು ಅಂತಃಕರಣದಿಂದ [ಉತ್, ನಯಂತಿ] ಉನ್ನತಿಗೊಳಿಸುತ್ತಾನೆ.

**ಭಾವಾರ್ಥ:-** ಯಾವನೇ ಮನುಷ್ಯನು ಉತ್ತಮ ವಿದ್ಯೆ, ಶಿಕ್ಷಣ, ಬ್ರಹ್ಮಚರ್ಯಪಾಲನೆ ಇವುಗಳ ಹೊರತಾಗಿ ಆಯುಷ್ಮಂತನೂ ಸಭಾಯೋಗ್ಯನೂ ಆದ ವಿದ್ಯಾವಂತನಾಗಲಾರನು ಮತ್ತು ಈ ನಿಯಮವನ್ನು ಪಾಲಿಸುವ ಮನುಷ್ಯನೇ ಗೌರವಾರ್ಹನೂ ಯೋಗ್ಯನೂ ಆಗುತ್ತಾನೆ. ಯಾರನ್ನು ಧಾರ್ಮಿಕರು, ವಿದ್ಯಾವಂತರು ಪ್ರಶಂಸೆ ಮಾಡುತ್ತಾರೋ ಅವನೇ ವಿದ್ವಾಂಸನೆನಿಸಿಕೊಳ್ಳುತ್ತಾನೆ.

ಪುನಃ ಅದೇ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

ಜಾತೋ ಜಾಯತೇ ಸುದಿನತ್ವೇ ಅಹ್ನಾಂ ಸಮರ್ಯ ಆ ವಿದಥೇ ವರ್ಧಮಾನಃ ।
ಪುನಂತಿ ಧೀರಾ ಅಪಸೋ ಮನೀಷಾ ದೇವಯಾ ವಿಪ್ರ ಉದಿಯರ್ತಿ ವಾಚಮ್ ॥೫॥

**ಪದಾರ್ಥ:-** [ಸಮರ್ಯೇ] ಯುದ್ಧವನ್ನೆದುರಿಸುವ ವೀರಪುರುಷನಂತೆ [ಅಹ್ನಾಂ] ದಿನಗಳಲ್ಲಿ [ಸುದಿನತ್ವೇ] ಉತ್ತಮ ದಿನವು ಪ್ರಾಪ್ತವಾದಾಗ [ವಿದಥೇ] ಜ್ಞಾನ ಸಂಬಂಧೀ ವ್ಯವಹಾರದಲ್ಲಿ [ಜಾತಃ] ಪ್ರಸಿದ್ಧಿ ಪಡೆದು [ವರ್ಧಮಾನಃ] ಏಳಿಗೆಯನ್ನು ಹೊಂದುತ್ತ [ಜಾಯತೇ] ಉತ್ಪನ್ನನಾಗುತ್ತಾನೆ. [ಮನೀಷಾ] ಬುದ್ಧಿಯಿಂದ [ಅಪಸಃ] ಕೆಲಸಗಳನ್ನು ಮಾಡುವವನಾಗಿ [ದೇವಯಾಃ] ವಿದ್ಯಾವಂತರಿಂದ ಗೌರವಿಸಲು ಯೋಗ್ಯನಾದ ನಿಯತಾತ್ಮನಾಗಿ [ವಿಪ್ರಃ] ವಿದ್ಯಾಬುದ್ಧಿ ಸಂಪನ್ನನು [ವಾಚಂ] ಪರಿಶುದ್ಧ ವಾಣಿಯನ್ನು [ಉತ, ಇಯರ್ತಿ] ಪಡೆದುಕೊಳ್ಳುತ್ತಾನೆ. ಅಂತಹ ಮನುಷ್ಯನನ್ನು [ಧೀರಾಃ] ಬುದ್ಧಿವಂತ ಜನರು [ಆ, ಪುನಂತಿ] ಪುನೀತನನ್ನಾಗಿ ಮಾಡುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ವಿದ್ಯೆ ಮತ್ತು ಶಿಕ್ಷಣಗಳನ್ನು ಪಡೆದು ವಿದ್ಯಾವಂತನಾಗುತ್ತಾನೋ, ಅವನಿಗೆ ಎಲ್ಲಾ ದಿನಗಳೂ ಸುದಿನಗಳೇ ಆಗಿರುತ್ತವೆ. ಹೇಗೆ ಶೂರ ವೀರ ಪುರುಷನು ದುಷ್ಟರನ್ನು ನಾಶಮಾಡಿ ಧನ ಕನಕಾದಿ ಸಂಪತ್ತುಗಳಿಂದ ಏಳಿಗೆ ಹೊಂದುತ್ತಾನೋ ಹಾಗೆ ಉತ್ತಮ ವಿದ್ಯೆ ಶಿಕ್ಷಣಗಳಿಂದ ದುಷ್ಕೃತ್ಯವನ್ನು ದಮನ ಮಾಡಿ ವಿದ್ಯಾವಂತರೂ ಏಳಿಗೆ ಹೊಂದುತ್ತಾರೆ.

ಮನುಷ್ಯರು ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ತ್ಯಜಿಸಬೇಕು ಎಂಬುದನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

ಯಾನ್ ವೋ ನರೋ ದೇವಯಂತೋ ನಿಮಿಮ್ಯು-ರ್ವನಸ್ಪತೇ ಸ್ವಧಿತಿರ್ವಾ ತತಕ್ಷ ।
ತೇ ದೇವಾಸಃ ಸ್ವರವಸ್ತಸ್ಥಿವಾಂಸಃ ಪ್ರಜಾವದಸ್ಮೇ ದಿಧಿಷಂತು ರತ್ನಮ್ ॥೬॥

**ಪದಾರ್ಥ:-** [ನರಃ] ನಾಯಕ ಜನರೇ! [ಯಾನ್] [ವಃ] ಯಾವ ನಿಮ್ಮನ್ನು [ದೇವಯಂತಃ] ಇಚ್ಛಿಸುವ ಜನರು, [ನಿಮಿಮ್ಯುಃ] ನಿರಂತರವಾಗಿ ಗೌರವಿಸುತ್ತಾರೆಯೋ [ತೇ] ಅವರು [ಸ್ವರವಃ] ತಮ್ಮ ವಿದ್ಯಾಬೋಧಕ ಶಬ್ದಗಳಿಂದ ಯುಕ್ತರಾಗಿ [ತಸ್ಥಿವಾಂಸಃ] ಸ್ಥಿರಮತಿಯ [ದೇವಾಸಃ] ವಿದ್ಯಾವಂತ ಜನರು [ಅಸ್ಮೆ] ನಮ್ಮ [ಪ್ರಜಾವತ್] ಪ್ರಜಾರೂಪವಾದ [ರತ್ನಂ] ಧನದ [ದಿಧಿಷಂತು] ಉಪದೇಶ ಮಾಡಲಿ. [ವಾ] ಅಥವಾ [ವನಸ್ಪತೇ] ವನರಕ್ಷಕ ಪುರುಷರೇ! [ಸ್ವಧಿತಿಃ] ಹೇಗೆ ವಜ್ರಾಯುಧವು ಮೇಘವನ್ನು [ತತಕ್ಷ] ಛೇದಿಸುತ್ತದೆಯೋ ಹಾಗೆ ನೀವು ದುಷ್ಟತನವನ್ನು ಛೇದಿಸಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಕುಲ ಜನ್ಯರೇ! ಯಾರ ಸಹವಾಸದಿಂದ ಅನ್ಯ ಜನರು ಸಭ್ಯರೂ, ವಿದ್ಯಾವಂತರೂ ಆಗುತ್ತಾರೋ, ಅಂತಹ ಜನರ ಸತ್ಸಂಗವನ್ನೇ ನೀವೂ ಮಾಡಿರಿ. ಯಾರ ಸಮಾಗಮದಿಂದ ದುರ್ವ್ಯವಹಾರಗಳು ಹೆಚ್ಚುತ್ತವೆಯೋ ಅಂತಹವರ ಸಂಗವನ್ನು ತ್ಯಜಿಸಿರಿ.

ವಿದ್ಯೆಯಿಂದ ಏನು ಸಾಧಿಸಲಾಗುತ್ತದೆ ಎಂಬ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

ಯೇ ವೃಕ್ಣಾಸೋ ಅಧಿ ಕ್ಷಮಿ ನಿಮಿತಾಸೋ ಯತಸ್ರುಚಃ ।
ತೇ ನೋ ವ್ಯಂತು ವಾರ್ಯಂ ದೇವತ್ರಾ ಕ್ಷೇತ್ರಸಾಧಸಃ ॥೭॥

**ಪದಾರ್ಥ:-** [**ಯೇ**] ಯಾರು [**ವೃಕ್ಣಾಸಃ**] ಅವಿದ್ಯೆಯಿಂದ ಬೇರೆಯಾಗಿದ್ದಾರೆಯೋ [**ನಿಮಿತಾಸಃ**] ಯಾವಾಗಲೂ ಸತ್ಯ ಜ್ಞಾನವಂತರಾಗಿರುತ್ತಾರೆಯೋ [**ಯತಸ್ರುಚಃ**] ಯಾರು ನಿಯತವಾಗಿ ಯಜ್ಞವನ್ನು ಮಾಡುತ್ತಾರೋ [**ಕ್ಷಮೀ**] [**ಅಧಿ**] ಭೂಮಿಯ ಮೇಲೆ ನೆಲೆಸಿರುವರೋ [**ತೇ**] ಅವರು [**ದೇವತ್ರಾ**] ವಿದ್ವಾಂಸರಲ್ಲಿ [**ಕ್ಷೇತ್ರಸಾಧಸಃ**] ಕೃಷಿ ಭೂಮಿಯನ್ನು ಸಾಧಿಸುವ [**ನಃ**] ನಮ್ಮ [**ವಾರ್ಯಂ**] ಸ್ವೀಕಾರಾರ್ಹ ಜ್ಞಾನವನ್ನು [**ವ್ಯಂತು**] ಪಡೆದುಕೊಳ್ಳುವವರಾಗಲಿ.

**ಭಾವಾರ್ಥ:-** ಕೊಡಲಿಯಿಂದ ಭೇದಿಸಿ ಇಬ್ಭಾಗ ಮಾಡಿದ ಮರವು ಹೇಗೆ ಮತ್ತೆ ಒಂದುಗೂಡಲಾರದೋ ಹಾಗೆಯೇ ವಿದ್ಯೆಯಿಂದ ಭೇದಿಸಿ ಬೇರೆ ಮಾಡಿದ ಅವಿದ್ಯೆಯು ಮತ್ತೆ ಒಂದಾಗಿ ಬೆಳೆಯಲಾರದು. ಹೀಗೆ ವಿದ್ಯೆಯಿಂದ ಅವಿದ್ಯೆಯ ನಾಶವು ಶಾಶ್ವತವಾಗಿ ಆಗುತ್ತದೆ.

ಈ ಮಂತ್ರದಲ್ಲಿ ಅಹಿಂಸಾ ಧರ್ಮದ ಉನ್ನತಿಯ ವಿಷಯವನ್ನು ತಿಳಿಸಲಾಗಿದೆ.

**ಆದಿತ್ಯಾ ರುದ್ರಾ ವಸವಃ ಸುನೀಥಾ ದ್ಯಾವಾಕ್ಷಾಮಾ ಪೃಥಿವೀ ಅಂತರಿಕ್ಷಮ್ ।**
**ಸಜೋಷಸೋ ಯಜ್ಞಮವಂತು ದೇವಾ ಊರ್ಧ್ವಂ ಕೃಣ್ವಂತ್ವಧ್ವರಸ್ಯ ಕೇತುಮ್ ॥೮॥**

**ಪದಾರ್ಥ:-** [**ಆದಿತ್ಯಾಃ**] ಹನ್ನೆರಡು ಮಾಸಗಳು [**ರುದ್ರಾಃ**] ಏಕಾದಶ ಪ್ರಾಣಗಳು [**ವಸವಃ**] ಭೂಮ್ಯಾದಿ ಅಷ್ಟ ವಸುಗಳು [**ಪೃಥಿವೀ**] ವಿಸ್ತಾರವಾದ [**ದ್ಯಾವಾ ಕ್ಷಾಮಾ**] ಸೂರ್ಯ ಮತ್ತು ಭೂಮಿ [**ಅಂತರಿಕ್ಷಂ**] ಹಾಗೂ ಆಕಾಶ, ಈ ಎಲ್ಲವೂ [**ಸಜೋಷಸಃ**] ಎಲ್ಲರೊಂದಿಗೂ ಸಮಾನ ಪ್ರೀತಿಯಿಂದ ವ್ಯವಹರಿಸುವ [**ಸುನೀಥಾಃ**] ಉತ್ತಮ ಸಹವಾಸವನ್ನು ಪಡೆದ [**ಯಜ್ಞಂ**] ಯಜ್ಞವನ್ನು [**ವರ್ಧಂತಿ**] ಹೇಗೆ ವೃದ್ಧಿಪಡಿಸುತ್ತಾರೋ ಹಾಗೆ [**ಸಜೋಷಸಃ**] ಸಮಾನ ಪ್ರೀತಿಯ [**ದೇವಾಃ**] ಇಚ್ಛೆಯನ್ನು ಮಾಡುವ ಜನರು ಯಜ್ಞವನ್ನು [**ಅವಂತು**] ರಕ್ಷಣೆ ಮಾಡಲಿ. [**ಅಧ್ವರಸ್ಯ**] ರಕ್ಷಣೆಗೆ ಯೋಗ್ಯವಾದ ಧರ್ಮದ [**ಕೇತುಂ**] ಬುದ್ಧಿಯನ್ನು [**ಊರ್ಧ್ವಂ**] ಉತ್ತೇಜಿತವಾಗಿ [**ಕೃಣ್ವಂತು**] ಮಾಡಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರೇ! ಮಾಸಗಳು, ಪ್ರಾಣಗಳು ಹಾಗೂ ಭೂಮ್ಯಾದಿ ಪದಾರ್ಥಗಳು ಹೇಗೆ ಪರಸ್ಪರ ಅವಿರೋಧವಾಗಿ ನೆಲೆಸಿವೆಯೋ ಅದೇ ರೀತಿ ಎಲ್ಲರೂ ಎಲ್ಲರೊಂದಿಗೂ ಪ್ರೀತಿಯನ್ನು ಬೆಳೆಸಿಕೊಂಡು, ತಮ್ಮ ಜ್ಞಾನವನ್ನು ಹೆಚ್ಚಿಸಿಕೊಂಡು ಯಾರನ್ನೂ ಹಿಂಸಿಸದೇ ಅಹಿಂಸಾಧರ್ಮದ ಏಳಿಗೆಯನ್ನು ಸಾಧಿಸಬೇಕು.

ಯಾರು ಪರಿಪೂರ್ಣ ಸುಖವನ್ನು ಪಡೆಯುತ್ತಾರೆ ಎಂಬುದನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಹಂಸಾ ಇವ ಶ್ರೇಣಿಶೋ ಯತಾನಾಃ ಶುಕ್ರಾ ವಸಾನಾಃ ಸ್ವರವೋ ನ ಆಗುಃ ।**
**ಉನ್ನೀಯಮಾನಾಃ ಕವಿಭಿಃ ಪುರಸ್ತಾ-ದ್ದೇವಾ ದೇವಾನಾಮಪಿ ಯಂತಿ ಪಾಥಃ ॥೯॥**

**ಪದಾರ್ಥ:-** [**ದೇವಾಃ**] ಯಾರು ದಿವ್ಯಗುಣಕರ್ಮ ಸ್ವಭಾವದ ಪಂಡಿತ ಜನರೋ [**ಶ್ರೇಣಿಶಃ**] ಪಂಕ್ತಿಯನ್ನು ರಚಿಸಿಕೊಂಡು [**ಯತಮಾನಾಃ**] ಪ್ರಯತ್ನಶೀಲರಾಗಿರುತ್ತಾರೋ ಮತ್ತು [**ಶುಕ್ರಾಃ**] ಜಲರಾಶಿನ್ನು [**ವಸಾನಾಃ**] ಮರೆ ಮಾಡುವವರಾಗಿ [**ಸ್ವರವಃ**] ಮಧುರ ಧ್ವನಿಯನ್ನು ಸೇವನೆ ಮಾಡುವ [**ಹಂಸಾಇವ**] ಹಂಸ ಪಕ್ಷಿಗಳಂತೆ ದರ್ಶನೀಯವಾಗಿರುವ [**ನಃ**] ನಮ್ಮನ್ನು [**ಉನ್ನೀಯಮಾನಾಃ**] ಏಳಿಗೆಯ ಮಾರ್ಗದಲ್ಲಿ ತೊಡಗಿಸುತ್ತ [**ಪುರಸ್ತಾತ್**] ಮೊದಲಿನಿಂದಲೂ [**ಕವಿಭಿಃ**] ಬುದ್ಧಿವಂತರೊಂದಿಗೆ ಒಡಗೂಡಿರುವ [**ದೇವಾನಾಂ**] ಪಂಡಿತರ [**ಪಾಥಃ**] ಮಾರ್ಗವನ್ನು [**ಅಪಿಯಂತಿ**] ಬಯಸುತ್ತಾರೆ. ಅಂತಹವರು [**ಆ, ಆಗುಃ**] ಯಾವಾಗಲೂ ನಮ್ಮನ್ನು ಸಮೀಪಿಸುವಂತಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಹಂಸ ಪಕ್ಷಿಗಳಂತೆ ಪರಸ್ಪರ ಹೊಂದಾಣಿಕೆಯಿಂದ ಎಲ್ಲರ ಏಳಿಗೆಯನ್ನೂ ಸಾಧಿಸಿ, ತಮ್ಮ ಏಳಿಗೆಯನ್ನೂ ಮಾಡಿಕೊಳ್ಳುತ್ತಾರೆಯೋ, ಯಾರು ಸತ್ಪವಂತರ ಮಾರ್ಗದಲ್ಲಿ ಚಲಿಸುತ್ತಾರೆಯೋ ಹಾಗೂ ತಮ್ಮ ಶೌರ್ಯ ಪರಾಕ್ರಮಗಳನ್ನು ಹೆಚ್ಚಿಸಿಕೊಳ್ಳುತ್ತಾರೆಯೋ ಅವರು ಪರಿಪೂರ್ಣ ಸುಖವನ್ನು ಪಡೆಯುತ್ತಾರೆ.

ಎಂತಹ ವಿದ್ಯಾವಂತರು ಗೌರವಕ್ಕೆ ಪಾತ್ರರಾಗುತ್ತಾರೆ ಎಂಬುದನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಶೃಂಗಾಣೀವೇಚ್ಛೃಂಗಿಣಾಂ ಸಂ ದದೃಶ್ರೇ ಚಷಾಲವಂತಃ ಸ್ವರವಃ ಪೃಥಿವ್ಯಾಮ್ ।**
**ವಾಘದ್ಭಿರ್ವಾ ವಿಹವೇ ಶ್ರೋಷಮಾಣಾ ಅಸ್ಮಾಁ ಅವಂತು ಪೃತನಾಜ್ಯೇಷು ॥೧೦॥**

**ಪದಾರ್ಥ:-** **[ಚಷಾಲವಂತಃ]** ಬಹಳಷ್ಟು ಭೋಗ ಸಾಮಗ್ರಿಗಳನ್ನು ಪಡೆದುಕೊಂಡವರು **[ಸ್ವರವಃ]** ಪ್ರಶಂಸೆಗೆ ಒಳಗಾದವರು **[ವಿಹವೇ]** ಅಧ್ಯಯನ ಅಧ್ಯಾಪನದ ಸ್ವರ ಘೋಷಗಳು ಮೊಳಗುವಂತಹ ಸ್ಥಾನದಲ್ಲಿ **[ಶ್ರೋಷಮಾಣಾಃ]** ಕೇಳಿಸಿಕೊಳ್ಳುವವರಾಗಿ **[ವಾಘದ್ಭಿಃ]** ಋತ್ವಿಜರೊಂದಿಗೆ ಒಡಗೂಡಿದವರಾಗಿ **[ಪೃಥಿವ್ಯಾಂ]** ಭೂಮಿಯಲ್ಲಿ **[ಶೃಂಗಿಣಾಂ]** ಗೋ-ಮಹಿಷಾದಿಗಳ **[ಶೃಂಗಾಣೀವ]** ಕೊಂಬುಗಳಿಗೆ ಸಮನಾಗಿ **[ಸಂ, ದದೃಶ್ರೇ]** ಉತ್ತಮ ರೀತಿಯಲ್ಲಿ ಕಂಡು ಬರುತ್ತಾರೆ. **[ಇತ್]** ಅವರೇ **[ಪೃತನಾಜ್ಯೇಷು]** ಸಂಗ್ರಾಮಗಳಲ್ಲಿ **[ವಾ]** ಅಥವಾ ಅನ್ಯವ್ಯವಹಾರಗಳಲ್ಲಿ **[ಅಸ್ಮಾತ್]** ನಮ್ಮನ್ನು **[ಅವಂತು]** ರಕ್ಷಣೆ ಮಾಡಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಬಹಳಷ್ಟು ತಿಳಿದುಕೊಂಡಿರುವ ವಿದ್ಯಾವಂತರು ತನ್ನ ರಕ್ಷಣೆಯೊಂದಿಗೆ ಬೇರೆಯವರ ದೇಹದಲ್ಲಿ ಶ್ರೇಷ್ಠವೆನಿಸಿಕೊಂಡ ಅಂಗ ಮಸ್ತಿಷ್ಕದಲ್ಲಿ ವರ್ತಮಾನವಾಗಿರುವ ಎಲ್ಲ ಪಶುಗಳ ಕೊಂಬುಗಳಿಗೆ ಸಮನಾಗಿ ಉತ್ತಮ ಸ್ಥಾನವನ್ನು ಪಡೆದುಕೊಂಡು ಜೀವನದಲ್ಲಿ ಎಲ್ಲರಿಂದಲೂ ಹೊಗಳಿಕೆಗೆ ಯೋಗ್ಯರಾಗಿ ಎಲ್ಲರ ಗೌರವಕ್ಕೆ ಪಾತ್ರರಾಗುತ್ತಾರೆ.

ಬ್ರಹ್ಮಚರ್ಯಾನುಷ್ಠಾನದಿಂದ ಏನು ಲಭಿಸುತ್ತದೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ವನಸ್ಪತೇ ಶತವಲ್ಶೋ ವಿ ರೋಹ ಸಹಸ್ರವಲ್ಶಾ ವಿ ವಯಂ ರುಹೇಮ ।**
**ಯಂ ತ್ವಾಮಯಂ ಸ್ವಧಿತಿಸ್ತೇಜಮಾನಃ ಪ್ರಣಿನಾಯ ಮಹತೇ ಸೌಭಗಾಯ ॥೧೧॥**

**ಪದಾರ್ಥ:-** **[ವನಸ್ಪತೇ]** ವೃಕ್ಷಗಳಂತೆ ಪರೋಪಕಾರಿಗಳಾದ ಸಜ್ಜನರೇ! **[ಶತವಲ್ಶಃ]** ನೂರಾರು ಶಾಖೋಪಶಾಖೆಗಳಿಂದ ಹೇಗೆ ಬೆಳೆಯುತ್ತದೆಯೋ ಹಾಗೆ ನೀವು **[ವಿ, ರೋಹ]** ಬುದ್ಧಿವಂತಿಕೆಯಿಂದ ಬೆಳೆಯುವವರಾಗಿರಿ. **[ಪ್ರಣಿನಾಯ]** ಪ್ರಾಣಿಗಳಿಗೆ/ಜೀವಿಗಳಿಗೆ ಉತ್ತಮ ಸುಖವನ್ನು ದೊರಕಿಸಿ ಕೊಡಿರಿ, **[ಸಹಸ್ರವಲ್ಶಾಃ]** ಸಾವಿರಾರು ಅಂಕುರಗಳಿಂದ ಸರ್ವಾಂಗೀಣವಾಗಿ ಬೆಳೆಯುವಂತಹ ದೂರ್ವಾದಿ ಮೂಲಿಕೆಗಳಂತೆ **[ವಯಂ]** ನಾವೆಲ್ಲರೂ **[ವಿರುಹೇಮ]** ವಿಶೇಷರೀತಿಯಲ್ಲಿ ಬೆಳೆಯೋಣ. **[ಅಯಂ]** **[ತೇಜಮಾನಃ]** ಈ ಹರಿತಗೊಳಿಸಿರುವ **[ಸ್ವಧಿತಿಃ]** ವಜ್ರಾಯುಧದ ರೂಪದಲ್ಲಿರುವ ವಿದ್ಯುದ್ರೂಪ ಅಗ್ನಿಯು **[ಮಹತೇ]** **[ಸೌಭಗಾಯ]** ಹೆಚ್ಚಿನ ಧನಕನಕಾದಿ ಸಂಪತ್ತುಗಳಿಗಾಗಿ **[ಯಂ]** **[ತ್ವಾಂ]** ಯಾವ ನಿನ್ನನ್ನು ಬೆಳೆಸುತ್ತೇವೆಯೋ ಹಾಗೆ ನೀನು ನಮ್ಮನ್ನು ಬೆಳೆಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಬ್ರಹ್ಮಚರ್ಯ, ವಿದ್ಯೆ, ಉತ್ತಮ ಶಿಕ್ಷಣ, ಧರ್ಮ ಮತ್ತು ಪುರುಷಾರ್ಥ ಇವುಗಳಿಂದ ಯುಕ್ತನಾಗಿ ಕಾರ್ಯಸಿದ್ಧಿಗಾಗಿ ಪ್ರಯತ್ನ ಮಾಡುತ್ತಾನೋ ಅವನು ಬಿದಿರು ವೃಕ್ಷ ಮುಂತಾದವುಗಳಂತೆ ತನ್ನೊಂದಿಗೆ ಇನ್ನೊಬ್ಬರನ್ನೂ ಸರ್ವಾಂಗೀಣವಾಗಿ

ಬೆಳೆಸುತ್ತಾನೆ. ಸುಂದರ ಹಾಗೂ ಹರಿತವಾದ ಆಯುಧಗಳಿಂದ ಹೇಗೆ ಶತ್ರುಗಳನ್ನು ನಾಶಮಾಡಿ ಅಜಾತ ಶತ್ರುಗಳಾಗುತ್ತಾರೋ, ಹೇಗೆ ಮಿಂಚು ಮೋಡವನ್ನು ದಹಿಸುತ್ತದೆಯೋ ಹಾಗೆ ಶತ್ರುದಳವನ್ನು ದಹಿಸಲು ಸಮರ್ಥನಾಗಿ ಮಹದೈಶ್ವರ್ಯವನ್ನು ಗಳಿಸಿಕೊಳ್ಳುತ್ತಾನೆ.

ಈ ಸೂಕ್ತದಲ್ಲಿ ವಿದ್ಯಾವಂತರು ವೇದಪಾಠಿಗಳು ಮತ್ತು ಬ್ರಹ್ಮಚಾರಿಗಳು ಇವರ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಕರಣವಾಗಿದೆ ಎಂಬುದನ್ನು ತಿಳದುಕೊಳ್ಳಬೇಕು.

**ಎಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೯

**ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧,೪ ಬೃಹತೀ, ೨, ೫-೭ ನಿಚೃತ್ ಬೃಹತೀ, ೩, ೮ ವಿರಾಟ್ ಬೃಹತೀ ಛಂದಃ । ಮಧ್ಯಮಃ ಸ್ವರಃ । ೯ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.**

ಮಾನವರು ಅಹಿಂಸಾಧರ್ಮವನ್ನು ಸ್ವೀಕರಿಸಬೇಕು ಎಂಬ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಸಖಾಯಸ್ತ್ವಾ ವವೃಮಹೇ ದೇವಂ ಮರ್ತಾಸ ಊತಯೇ ।**
**ಅಪಾಂ ನಪಾತಂ ಸುಭಗಂ ಸುದೀದಿತಿಂ ಸುಪ್ರತೂರ್ತಿಮನೇಹಸಮ್ ॥೧॥**

**ಪದಾರ್ಥಃ-** **[ಮರ್ತಾಸಃ]** ಮನನಶೀಲರಾದ **[ಸಖಾಯಃ]** ಸ್ನೇಹಿತರಾದ ನಾವು **[ಊತಯೇ]** ರಕ್ಷಣಾದಿ ಏಳಿಗೆಗಾಗಿ **[ಅಪಾಂ]** ಪ್ರಾಣಗಳಲ್ಲಿ **[ನಪಾತಂ]** ಆತ್ಮಭಾವದಿಂದ ನಾಶರಹಿತವಾದ **[ಅನೇಹಸಂ]** ಮಾರಣಯೋಗ್ಯವಲ್ಲದ **[ಸುಪ್ರತೂರ್ತಿಂ]** ತ್ವರಿತಗತಿಯ **[ಸುದೀದಿತಿಂ]** ವಿದ್ಯಾ ವಿನಯಗಳಿಂದ ಪ್ರಕಾಶಮಾನವಾದ **[ಸುಭಗಂ]** ಉತ್ತಮ ಐಶ್ವರ್ಯಯುಕ್ತವಾದ **[ದೇವಂ]** ವಿದ್ಯಾವಂತನಾದ **[ತ್ವಾ]** ನಿನ್ನನ್ನು **[ವವೃಮಹೇ]** ಸ್ವೀಕರಿಸುವೆನು.

**ಭಾವಾರ್ಥಃ-** ಮನುಷ್ಯರು ವಿದ್ಯಾದಿ ಸೌಭಾಗ್ಯವನ್ನು ಅರಿತುಕೊಳ್ಳುವುದಕ್ಕಾಗಿ ಎಲ್ಲರೊಂದಿಗೂ ಮಿತ್ರಭಾವವನ್ನು ಆಶ್ರಯಿಸಬೇಕು ಮತ್ತು ವಿದ್ಯಾವಂತನು ಪ್ರಾಪ್ತ ಧರ್ಮ ಗುಣ ಸಂಪನ್ನನೂ ಆದ ಪಂಡಿತನನ್ನು ಆಶ್ರಯಿಸಬೇಕು. ಅಹಿಂಸಾಧರ್ಮದ ಸಂಗ್ರಹ ಮಾಡಬೇಕು.

ವಿದ್ಯಾರ್ಥಿಯು ಯಾರನ್ನು ಪಡೆದರೆ/ ಆಶ್ರಯಿಸಿದರೆ ಸುಖಿಯಾಗುತ್ತಾನೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ಕಾಯಮಾನೋ ವನಾ ತ್ವಂ ಯನ್ಮಾತೃರಜಗನ್ನಪಃ ।**
**ನ ತತ್ತೇ ಅಗ್ನೇ ಪ್ರಮೃಷೇ ನಿವರ್ತನಂ ಯದ್ದೂರೇ ಸನ್ನಿಹಾಭವಃ ॥೨॥**

**ಪದಾರ್ಥಃ-** **[ಅಗ್ನೇ]** ಶುಭಗುಣಗಳಿಂದ ಶೋಭಿಸುತ್ತಲಿರುವ ಸಜ್ಜನನೇ! **[ಕಾಯಮಾನಃ]** ಪಾಠ ಮಾಡುತ್ತ / ಉಪದೇಶ ಮಾಡುತ್ತ **[ಸನ್]** ಅದೇ ಕೆಲಸದಲ್ಲಿ ನಿರತನಾದ **[ತ್ವಂ]** ನೀನು **[ಯತ್]** ಯಾವ ಕಾರಣದಿಂದಾಗಿ **[ಮಾತೃಃ]** ತಾಯಂದಿರಿಗೆ ಸಮನಾಗಿ, ರಕ್ಷಕನೂ ಪ್ರಿಯನೂ ಆಗಿದ್ದು, **[ಅಪಃ]** ಪ್ರಾಣಗಳನ್ನು **[ಅಜಗನ್]** ಪಡೆದುಕೊಳ್ಳುವವನಾಗು. **[ಯತ್]** ಯಾವ ಕಾರಣದಿಂದ **[ನಿವರ್ತನಂ]** ಅನ್ಯಾಯ್ಯಾಚರಣೆಗಳಿಂದ ನಿವೃತ್ತಿಗೊಳ್ಳುವುದಕ್ಕಾಗಿ **[ದೂರೇ]** ಅದನ್ನು ದೂರ ಎಸೆದು, **[ಇಹ]** ಇಲ್ಲಿ ಮಂಗಲಾರ್ಥಗಳನ್ನು **[ಅಭವಃ]** ಪಡೆಯುವವನಾಗು. **[ತತ್]** ಅದರಿಂದ **[ತೇ]** ತಮ್ಮ ತಮ್ಮಲ್ಲಿ **[ವನಾ]** ಪಡೆಯಲು ಯೋಗ್ಯವಾದ ಪದಾರ್ಥಗಳನ್ನು **[ಪ್ರಮೃಷೇ]** ಸುಖಮಯವನ್ನಾಗಿಸುವೆನು. ನೀನು ನನ್ನಿಂದ ದೂರನಾಗಬೇಡ.

**ಭಾವಾರ್ಥ:-** ಬಾಯಾರಿದವನು ನೀರನ್ನು ಪಡೆದು ಹೇಗೆ ಸಂತೃಪ್ತನಾಗುತ್ತಾನೋ, ಅದೇ ರೀತಿ ವಿದ್ಯಾರ್ಜನೆಯೆಂಬ ತೃಷೆಯಲ್ಲಿರುವ ವಿದ್ಯಾರ್ಥಿಯು ಯೋಗ್ಯನಾದ ಅಧ್ಯಾಪಕ ಮತ್ತು ಉಪದೇಶಕನನ್ನು ಪಡೆದು ಎಲ್ಲ ರೀತಿಯಿಂದಲೂ ಸುಖಿಯಾಗುತ್ತಾನೆ.

ಎಂತಹ ಮನುಷ್ಯನು ಪ್ರಪಂಚದಲ್ಲಿ ಪೂಜ್ಯನಾಗುತ್ತಾನೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ಅತಿ ತೃಷ್ಟಂ ವವಕ್ಷಿಥಾ-ಥೈವ ಸುಮನಾ ಅಸಿ ।**
**ಪ್ರಪ್ರಾನ್ಯೇ ಯಂತಿ ಪರ್ಯನ್ಯ ಆಸತೇ ಯೇಷಾಂ ಸಖ್ಯೇ ಅಸಿ ಶ್ರಿತಃ ॥೩॥**

**ಪದಾರ್ಥ:-** **[ತೃಷ್ಟಂ]** ಬಾಯಾರಿದವನನ್ನು **[ವವಕ್ಷಿಥ]** ಪ್ರಾಪ್ತಿಗೊಳಿಸಿಕೊಳ್ಳಬೇಕು. **[ಅಥ]** ಅಥವಾ **[ಸುಮನಾಃ]** **[ಏವ]** ಪ್ರಸನ್ನಚಿತ್ತನಾಗಿಯೇ **[ಅಸಿ]** ಇರುವವನಾಗು **[ಯೇಷಾಂ]** ಯಾರ **[ಸಖ್ಯೇ]** ಮಿತ್ರಭಾವದಲ್ಲಿ / ಮಿತ್ರನ ಕೆಲಸದಲ್ಲಿ **[ಶ್ರಿತಃ]** **[ಅಸಿ]** ಸಂಯುಕ್ತಗೊಂಡವನಾಗು. **[ಅನ್ಯೇ]** ಅವರಲ್ಲಿ ಕೆಲವರು **[ಪ್ರಪ್ರ, ಅತಿ, ಯಂತಿ]** ವಿಶೇಷ ರೀತಿಯಲ್ಲಿ ಅತಿ ಸಮೀಪದಲ್ಲಿ ಪ್ರಾಪ್ತರಾಗುತ್ತಾರೆ. **[ಅನ್ಯೇ]** ಇನ್ನು ಕೆಲವರು **[ಪರಿ, ಆಸತೇ]** ಸುತ್ತಮುತ್ತಲೂ ಕುಳಿತುಕೊಳ್ಳುತ್ತಾರೆ.

**ಭಾವಾರ್ಥ:-** ಯಾರು ಬಾಯಾರಿದವನಿಗೆ ನೀರು ಕೊಟ್ಟಂತೆ ವಿದ್ಯಾಕಾಂಕ್ಷಿಗೆ ವಿದ್ಯೆಯನ್ನು ಕೊಟ್ಟು ಸಂತೋಷಗೊಳಿಸುತ್ತಾರೋ ಅವರೇ ಜಗತ್ತಿನಲ್ಲಿ ಪೂಜ್ಯರೆನಿಸಿಕೊಳ್ಳುತ್ತಾರೆ. ವಿದ್ಯೆಯನ್ನು ಬಯಸಿ ಬಂದ ವಿದ್ಯಾರ್ಥಿಗಳಲ್ಲಿ ನಿಜವಾದ ವಿದ್ಯಾಕಾಂಕ್ಷಿಗಳು ಅತ್ಯಂತ ಸಮೀಪದಲ್ಲೂ ಸಾಮಾನ್ಯ ವಿದ್ಯಾರ್ಥಿಗಳು ಅವರ ಸುತ್ತಮುತ್ತಲೂ ಕುಳಿತು ಉಪದೇಶವನ್ನಾಲಿಸುತ್ತಾರೆ.

ಪಾಖಂಡಿಗಳು ಹೇಗೆ ದೂರವೇ ಉಳಿಯುತ್ತಾರೆ ಎಂಬುದನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಈಯಿವಾಂಸಮತಿ ಸ್ರಿಧಃ ಶಶ್ವತೀರತಿ ಸಶ್ಚತಃ ।**
**ಅನ್ವೀಮವಿಂದನ್ನಿಚಿರಾಸೋ ಅದ್ರುಹೋಽಪ್ಸು ಸಿಂಹಮಿವ ಶ್ರಿತಮ್ ॥೪॥**

**ಪದಾರ್ಥ:-** **[ಅತಿ, ಸ್ರಿಧಃ]** ಅತ್ಯಂತ ಸಹನಶೀಲರು **[ಶಶ್ವತೀಃ]** ಸನಾತನಿಗಳು **[ಅತಿ, ಶಶ್ವತಃ]** ಪರಸ್ಪರರಲ್ಲಿ ಒಗ್ಗಟ್ಟಿನಿಂದಿರುವವರು, **[ನಿಚಿರಾಸಃ]** ಚಿರಂತನಿಗಳು **[ಅದ್ರುಹಃ]** ದ್ರೋಹರಹಿತರೂ ಆದ ಪ್ರಜೆಗಳು **[ಈಯಿವಾಂಸಂ]** ಸಮೀಪಿಸುತ್ತಿರುವವನನ್ನು **[ಅಪ್ಸು]** **[ಶ್ರಿತಂ]** ನೀರಿನಲ್ಲಿ ಆಶ್ರಯ ಪಡೆದಿರುವ **[ಸಿಂಹಮಿವ]** ಸಿಂಹಕ್ಕೆ ಸಮನಾಗಿ **[ಈಂ, ಅನು, ಅವಿಂದನ್]** ಸುತ್ತಮುತ್ತಲಿನಿಂದ ಅನುಕೂಲವಾಗಿ ಪ್ರಾಪ್ತನಾಗುವಂತೆ, ಅಂತಹ ಜನರನ್ನು ಸುಖಾನುಭವಿಗಳೆಂದು ಭಾವಿಸಬೇಕು.

**ಭಾವಾರ್ಥ:-** ಹೇಗೆ ಸಿಂಹವನ್ನು ನೋಡಿ ದುರ್ಬಲ ಪ್ರಾಣಿಗಳು ಓಡಿ ಹೋಗುತ್ತವೆಯೋ, ಅದೇ ರೀತಿ ಸುಶಿಕ್ಷಿತ ವಿದ್ಯಾವಂತ ಪ್ರಜೆಗಳನ್ನು ನೋಡಿ ಪಾಖಂಡಿ/ ಹೇಡಿ ಜನರು ನಷ್ಟ ಭ್ರಷ್ಟರಾಗಿ ಪಲಾಯನ ಮಾಡುತ್ತಾರೆ.

ಆತ್ಮಜ್ಞಾನದ ವಿಚಾರವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಸಸೃವಾಂಸಮಿವ ತ್ಮನಾ-ಗ್ನಿಮಿತ್ಥಾ ತಿರೋಹಿತಮ್ ।**
**ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ॥೫॥**

**ಪದಾರ್ಥ:-** **[ಮಾತರಿಶ್ವಾ]** ವಾಯುದೇವನು **[ಪರಾವತಃ]** ದೂರದೇಶದಿಂದ **[ದೇವೇಭ್ಯಃ]** ವಿದ್ಯಾವಂತರಿಗಾಗಿ **[ಮಥಿತಂ]** ಮಥನ ಮಾಡಿ ಉತ್ಪಾದಿಸಿದ **[ತಿರೋಹಿತಂ]** ನಿಗೂಢವಾಗಿರುವ **[ಅಗ್ನಿಂ]** ಅಗ್ನಿಯನ್ನು **[ಸಸ್ನೃವಾಂಸಮಿವ]** ಪಡೆದುಕೊಳ್ಳುವ ಮನುಷ್ಯನಂತೆ **[ಪರಿ, ಆ, ನಯತ್]** ಎಲ್ಲ ಕಡೆಗಳಿಂದಲೂ ಎಲ್ಲ ರೀತಿಯಿಂದಲೂ ಪ್ರಾಪ್ತಿಗೊಳಿಸಿಕೊಳ್ಳುತ್ತಾನೆ. **[ಇತ್ಥಾ]** ಈ ರೀತಿಯಾಗಿ **[ಏನಂ]** ಈ ಅಗ್ನಿಯನ್ನು **[ತ್ಮನಾ]** ಆತ್ಮ ಬಲದಿಂದ ನೀವೆಲ್ಲರೂ ಪಡೆದುಕೊಳ್ಳಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಪ್ರಯತ್ನ ಪೂರ್ವಕವಾಗಿ ಮಥನ ಮಾಡಿ ಉತ್ಪಾದಿಸಿದ ಅಗ್ನಿಯನ್ನು ವಾಯುದೇವನು ಹೇಗೆ ವೃದ್ಧಿ ಪಡಿಸುತ್ತಾನೋ, ಬಹುದೂರ ತಲುಪಿಸುತ್ತಾನೋ ಮತ್ತು ಅಗ್ನಿಯ ದಾರಿಯಲ್ಲಿ ಸಿಕ್ಕಿದ ಪದಾರ್ಥಗಳನ್ನು ದಹಿಸುತ್ತಾನೋ ಹಾಗೂ ತನ್ನ ದಾರಿಯಿಂದ ದೂರವಿರುವ ಪದಾರ್ಥಗಳನ್ನು ಅರಿಯಲಾರನೋ ಅದೇ ರೀತಿ ಬ್ರಹ್ಮಚರ್ಯಾಶ್ರಮದಲ್ಲಿ ವಿದ್ಯಾಭ್ಯಾಸ ಮಾಡಿ ಜ್ಞಾನವನ್ನು ಪಡೆದು ಯೋಗಾಭ್ಯಾಸ ಮಾಡಿ ಇಂದ್ರಿಯಗಳನ್ನು ನಿಗ್ರಹಿಸಿ ಧರ್ಮಾನುಷ್ಠಾನ, ಸತ್ಪುರುಷರ ಸಂಗ ಇವುಗಳಿಂದ ಆತ್ಮ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವನೋ ಅಂತಹ ಆತ್ಮಜ್ಞಾನಿಯು ದೋಷಗಳನ್ನು ದಹಿಸಿ ಪ್ರಜ್ವಲವಾದ ವಿದ್ಯೆಯನ್ನು ಪ್ರಕಟಿಸುತ್ತಾನೆ.

ಉಪದೇಶಕನ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ತಂ ತ್ವಾ ಮರ್ತಾ ಅಗೃಭ್ಣತ ದೇವೇಭ್ಯೋ ಹವ್ಯವಾಹನ ।**
**ವಿಶ್ವಾನ್ ಯದ್ಯಜ್ಞಾ ಅಭಿಪಾಸಿ ಮಾನುಷ ತವ ಕ್ರತ್ವಾ ಯುವಿಷ್ಠ್ಯ ॥೬॥**

**ಪದಾರ್ಥ:-** **[ಮಾನುಷ]** ಮನನಶೀಲನಾದ **[ಹವ್ಯವಾಹನ]** ಗ್ರಹಣಯೋಗ್ಯವಾದ ಶಾಸ್ತ್ರೀಯ, ಯುಕ್ತಿಯುಕ್ತ ವಚನಗಳನ್ನು ಉಪದೇಶಿಸುವವನಾದ **[ಯುವಿಷ್ಠ್ಯ]** ವಿದ್ಯಾಭ್ಯಾಸದಿಂದ ಯುವಾವಸ್ಥೆಯಲ್ಲಿ ಪ್ರಾಪ್ತವಿದ್ಯನಾದ ಉಪದೇಶಕನೇ! **[ಯತ್]** ಯಾವ ನೀನು **[ವಿಶ್ವಾನ್]** ಸಮಸ್ತವಾದ **[ಯಜ್ಞಾನ್]** ಜ್ಞಾನ ಯಜ್ಞದ ವ್ಯವಹಾರಗಳ **[ಅಭಿ, ಪಾಸಿ]** ಎಲ್ಲ ರೀತಿಯಿಂದಲೂ ರಕ್ಷಣೆ ಮಾಡುತ್ತಿರುವೆ. **[ತವ]** ನಿನ್ನ **[ಕ್ರತ್ವಾ]** ಬುದ್ಧಿಯಿಂದ **[ಮರ್ತಾಃ]** ಮರಣಧರ್ಮಿಗಳಾದ ಮನುಷ್ಯರು **[ದೇವೇಭ್ಯಃ]** ವಿದ್ವಾಂಸರಿಗಾಗಿ **[ತ್ವಂ]** **[ತ್ವಾಂ]** ಆ ನಿನ್ನನ್ನು **[ಅಗೃಭ್ಣತ]** ಗ್ರಹಣ ಮಾಡುವವರಾಗಲಿ.

**ಭಾವಾರ್ಥ:-** ಮನುಷ್ಯರೇ! ಯಾರ ಉಪದೇಶದಿಂದ ಜ್ಞಾನವನ್ನು ಪಡೆದುಕೊಂಡು ಸಮಗ್ರ ಸುಖಗಳನ್ನು ಅನುಭವಿಸುತ್ತಿರುವಿರೋ ಅವನ ಸತ್ಕಾರವನ್ನು ನೀವು ಎಲ್ಲ ರೀತಿಯಿಂದಲೂ ಮಾಡುವವರಾಗಿರಿ.

ಮನುಷ್ಯರು ಭಯರಹಿತರಾಗುವುದು ಹೇಗೆ ಎಂಬುದನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ತದ್ಭದ್ರಂ ತವ ದಂಸನಾ ಪಾಕಾಯ ಚಿಚ್ಛದಯತಿ ।**
**ತ್ವಾಂ ಯದಗ್ನೇ ಪಶವಃ ಸಮಾಸತೇ ಸಮಿದ್ಧಮಪಿಶರ್ವರೇ ॥೭॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದವನೇ **[ಯತ್]** ಯಾವ ಮನುಷ್ಯನು **[ಅಪಿಶರ್ವರೇ]** ಅಂಧಕಾರಮಯವಾದ ರಾತ್ರಿಯಲ್ಲೂ ಸಹ **[ಸಮಿದ್ಧಂ]** ಉರಿಯುತ್ತಿರುವ ಅಗ್ನಿಯ ಸಮೀಪದಲ್ಲಿ ಹೇಗೋ ಹಾಗೆ **[ಪಶವಃ]** ಗವಾದಿ ಪಶುಗಳು ಶೀತ ನಿವಾರಣೆಗೆ ಹೇಗೋ ಹಾಗೆ **[ತ್ವಾಂ]** ನಿನ್ನ ಸುತ್ತಲೂ, **[ಸಮಾಸತೇ]**

ಕುಳಿತುಕೊಳ್ಳುವರು. [ಪಾಕಾಯ] ಪಾಕವು ಪಕ್ವವಾಗಲು ಹೇಗೆ ಅಗ್ನಿಗೆ [ಚಿತ್] ಸಮನಾಗಿ [ತತ್] [ಭದ್ರಂ] ಆ ಕಲ್ಯಾಣಕರವಾದ ಬುದ್ಧಿಯಿಂದ ಮೂಡಿ ಬಂದ ಜ್ಞಾನವನ್ನು [ತವ] ನಿನ್ನ [ದಂಸನಾ] ದರ್ಶನ ಶಾಸ್ತ್ರವು [ಭದಯತಿ] ವೃದ್ಧಿಪಡಿಸುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ವನದಲ್ಲಿ ಇರುವ ಅಗ್ನಿಯ ಸುತ್ತಲೂ ನೆಲೆಸಿರುವ ಸಿಂಹಾದಿ ಪ್ರಾಣಿಗಳು ಹೇಗೆ ರಕ್ಷಣೆಯನ್ನು ಪಡೆಯುತ್ತವೆಯೋ ಹಾಗೆಯೇ ವಿದ್ಯಾವಂತರ ಜ್ಞಾನಾಶ್ರಯವನ್ನು ಪಡೆದ ಮನುಷ್ಯರು ಎಲ್ಲ ರೀತಿಯ ಭಯಗಳಿಂದಲೂ ರಕ್ಷಣೆ ಪಡೆಯುತ್ತಾರೆ.

ಎಲ್ಲರೂ ಯಾವಾಗಲೂ ಈಶ್ವರನನ್ನೇ ಧ್ಯಾನಿಸಬೇಕು ಎಂಬುದನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಆ ಜುಹೋತಾ ಸ್ವಧ್ವರಂ ಶೀರಂ ಪಾವಕಶೋಚಿಷಮ್ ।**
**ಆಶುಂ ದೂತಮಜಿರಂ ಪ್ರತ್ನಮೀಡ್ಯಂ ಶ್ರುಷ್ಟೀ ದೇವಂ ಸಪರ್ಯತ ॥೮॥**

**ಪದಾರ್ಥ:-** [ಸ್ವಧ್ವರಂ] ಹಿಂಸಾರಹಿತವಾದ [ಕ್ಷೀರಂ] ಮಿಂಚಿನಿಂದ ಆವರಿಸಿರುವ [ಪಾವಕ ಶೋಚಿಷಂ] ಪ್ರಕಾಶದಿಂದ ಬೆಳಗುತ್ತಲಿರುವ [ಆಶುಂ] ಶೀಘ್ರಗಾಮಿ [ದೂತಂ] ದೂತನಂತೆ ದೇಶಾಂತರಗಳಿಗೆ ಸಮಾಚಾರವನ್ನು ತಲುಪಿಸುವವನಾದ [ಅಜಿರಂ] ಎಸೆಯುವವನಾದ [ಪ್ರತ್ನಂ] ಪ್ರಾಚೀನವಾದ [ಈಡ್ಯಂ] ಅನ್ವೇಷಣ ಯೋಗ್ಯ ವಿದ್ಯುತ್ ರೂಪಾಗ್ನಿಯನ್ನು [ಆ, ಜುಹೋತ್] ಉತ್ತಮ ರೀತಿಯಲ್ಲಿ ಗ್ರಹಣ ಮಾಡಿರಿ. [ದೇವಂ] ಉತ್ತಮ ಗುಣಕರ್ಮ ಸ್ವಭಾವಯುಕ್ತ ಆನಂದಾಯಕ ಪರಮಾತ್ಮನನ್ನು [ಶ್ರುಷ್ಟೀ] ಬೇಗನೆ [ಸಪರ್ಯತ] ಸೇವೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಮಿಂಚಿನಂತೆ ಸರ್ವತ್ರ ವ್ಯಾಪಕನಾದ ಸ್ವಯಂ ಪ್ರಕಾಶನಾದ ಅನಾದಿಯೂ, ದೋಷ ನಾಶಕನೂ ಆದ ಸನಾತನನಾದ ಅವಿದ್ಯಾರಹಿತನಾಗಿ ಪ್ರಶಂಸಾರ್ಹನಾದ ಪರಮಾತ್ಮನನ್ನು ನಿತ್ಯವೂ ಧ್ಯಾನ ಮಾಡುವವರಾಗಿರಿ.

ಅಗ್ನಿಯು ಏನು ಮಾಡುತ್ತಾನೆ ಎಂಬ ವಿಚಾರವನ್ನು ಸೂಕ್ತದ ಕೊನೆಯ ಈ ಮಂತ್ರದಲ್ಲಿ ತಿಳಿಸಲಾಗಿದೆ.

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।**
**ಔಕ್ಷನ್ ಘೃತೈರಸ್ತೃಣನ್ ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥೯॥**

**ಪದಾರ್ಥ:-** [ಅಗ್ನಿಂ] ಅಗ್ನಿಯನ್ನು [ತ್ರೀಣಿ] [ಶತಾ] ಮೂರುನೂರು [ತ್ರೀ] [ಸಹಸ್ರಾಣಿ] ಮೂರು ಸಾವಿರ, ತತ್ವಗಳನ್ನು [ಚ] ಮತ್ತು [ತ್ರಿಂಶತ] ಪೃಥಿವ್ಯಾದಿ ಮುವತ್ತು ಮತ್ತು ಮೂರು ಅಂದರೆ ಮುವತ್ತಮೂರು [ಚ] ಮತ್ತು [ನವ] ಹಿರಣ್ಯಗರ್ಭಾದಿ ಒಂಬತ್ತು. [ದೇವಾಃ] ದಿವ್ಯಗುಣ ಸಂಪನ್ನ ಪದಾರ್ಥಗಳ [ಅಸಪರ್ಯನ್] ಸೇವನೆ ಮಾಡುವವರಾಗಿ [ಘೃತೈಃ] ನೀರಿನಿಂದ [ಔಕ್ಷನ್] ಸೇಚನೆ ಮಾಡುತ್ತ [ಅಸ್ಮೈ] ಈ ಅಗ್ನಿಗಾಗಿ [ಬರ್ಹಿಃ] ಪದಾರ್ಥ ವೃದ್ಧಿಯ [ಅಸ್ತೃಣನ್] ವಿಸ್ತಾರಗೊಳಿಸುತ್ತ [ಆತ್] ವಿದ್ಯಾಪ್ರಾಪ್ತಿಯ ನಂತರ [ಹೋತಾರಂ] [ಇತ್] ಗೌರವಾರ್ಹನಾದ ಕಾರ್ಯಸಾಧಕನನ್ನೇ [ನಿ, ಅಸಾದಯಂತ] ನೀವು ನಿಮ್ಮ ಕಾರ್ಯಗಳಲ್ಲಿ ನಿರಂತರವಾಗಿ ಸಂಯೋಜನಗೊಳಿಸಿರಿ.

**ಭಾವಾರ್ಥ:-** ಮನುಷ್ಯರೇ! ಯಾವನ ಆಶ್ರಯದಲ್ಲಿ ಮುವತ್ತಮೂರು ಸಾವಿರ, ಮುವತ್ಮೂರು ನೂರು ಹಾಗೂ ನಲವತ್ತೆರಡು ತತ್ವಗಳು ಇವೆಯೋ ಯಾವನು ಈ ಎಲ್ಲ ತತ್ವಗಳಲ್ಲೂ ಮಿಂಚಿನ ರೂಪದಲ್ಲಿ

ವ್ಯಾಪ್ತವಾಗಿರುವನೋ ಅಂತಹ ಅಗ್ನಿಯ ಆಶ್ರಯವನ್ನು ಪಡೆದು ನೀವೆಲ್ಲರೂ ನಿಮ್ಮ ಕಾರ್ಯ ಸಿದ್ಧಿಯನ್ನು ಮಾಡಿಕೊಳ್ಳಿರಿ.

ಈ ಸೂಕ್ತದಲ್ಲಿ ಅಗ್ನಿ ಹಾಗೂ ಮನುಷ್ಯಾದಿಯರ ಗುಣಗಳ ವರ್ಣನೆ ಇರುವುದರಿಂದ ಹಿಂದಿನ ಸೂಕ್ತದೊಂದಿಗೆ ಈ ಸೂಕ್ತಾರ್ಥವೂ ಸಂಗತವಾಗಿರುತ್ತದೆ.

**ಒಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೧೦

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧, ೫, ೮ ವಿರಾಡುಷ್ಣಿಕ್, ೩ ಉಷ್ಣಿಕ್, ೪, ೬, ೭, ೯ ನಿಚೃತ್ ಉಷ್ಣಿತ್ ಛಂದಃ । ಋಷಭಃ ಸ್ವರಃ । ೨ ಭೂರಿಕ್ ಗಾಯತ್ರಿ ಛಂದಃ । ಷಡ್ಜಃ ಸ್ವರಃ.

ಈಶ್ವರನು ಏನು ಮಾಡುವನು ಎಂಬ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ತ್ವಾಮಗ್ನೇ ಮನೀಷಿಣಃ ಸಮ್ರಾಜಂ ಚರ್ಷಣೀನಾಮ್ । ದೇವಂ ಮರ್ತಾಸ ಇಂಧತೇ ಸಮಧ್ವರೇ ॥೧॥**

**ಪದಾರ್ಥ:-** **[ಅಗ್ನೇ]** ಸ್ವಯಂಪ್ರಕಾಶ ರೂಪ ಜಗದೀಶ್ವರನೇ! **[ಮನೀಷಿಣಃ]** ಮನನಶೀಲನಾದ **[ಮರ್ತಾಸಹ]** ಮನುಷ್ಯನು **[ಚರ್ಷಣೀನಾಂ]** ಮನುಷ್ಯಾದಿ ಪ್ರಜೆಗಳ **[ಸಮ್ರಾಜಂ]** ಉತ್ತಮ ನ್ಯಾಯಾಧೀಶನಾದ ರಾಜನು **[ದೇವಂ]** ಎಲ್ಲ ರೀತಿಯ ಸುಖಗಳನ್ನು ಕೊಡುವವನಾದ **[ತ್ವಾಂ]** ನಿನ್ನನ್ನು **[ಅಧ್ವರೇ]** ಧಾರ್ಮಿಕ ವ್ಯವಹಾರಗಳಲ್ಲಿ **[ಸಂ, ಇಂಧತೇ]** ಉತ್ತಮ ರೀತಿಯಲ್ಲಿ ಪ್ರಕಾಶಗೊಳಿಸುತ್ತಾನೆ. ಅಂತಹ ಜಗದೀಶ್ವರನನ್ನೇ ನಾವೆಲ್ಲರೂ ಉಪಾಸನೆ ಮಾಡೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನಿಯು ಸೂರ್ಯಾದಿ ರೂಪಗಳಿಂದ ಪ್ರಪಂಚವನ್ನು ಹೇಗೆ ಪ್ರಕಾಶಗೊಳಿಸುತ್ತಾನೆಯೋ, ಉಪಕಾರ ಮಾಡಿ ಆನಂದಗೊಳಿಸುತ್ತಾನೆಯೋ ಹಾಗೆಯೇ ಪರಮಾತ್ಮನು ಅಂತರ್ಯಾಮಿ ರೂಪದಿಂದ ಜಿಜ್ಞಾಸುಗಳಿಗೆ ಯೋಗೀ ಜನರಿಗೆ ಅವರವರ ಆತ್ಮವನ್ನು ವಿಶೇಷರೂಪ ದಿಂದಲೂ ಸಾಮಾನ್ಯರೂಪದಿಂದಲೂ ಪ್ರಕಾಶಮಾನಗೊಳಿಸಿ ಜಗತ್ತಿನ ಅಸಂಖ್ಯ ಪದಾರ್ಥಗಳಿಂದ ಉಪಕಾರ ಮಾಡಿಸಿ ಇಹದಲ್ಲಿಯೂ ಪರದಲ್ಲಿಯೂ ಸುಖ ಕೊಡುವುದರ ಮೂಲಕ ಸದಾ ಸುಖಿಗಳನ್ನಾಗಿ ಮಾಡುತ್ತಾನೆ.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ತ್ವಾಂ ಯಜ್ಞೇಷ್ವೃತ್ವಿಜ-ಮಗ್ನೇ ಹೋತಾರಮೀಳತೇ । ಗೋಪಾ ಋತಸ್ಯ ದೀದಿಹಿ ಸ್ವೇ ದಮೇ ॥೨॥**

**ಪದಾರ್ಥ:-** **[ಅಗ್ನೇ]** ಅವಿದ್ಯಾದಿ ದೋಷಗಳನ್ನು ನಾಶ ಮಾಡುವ ಜಗದೀಶ್ವರನೇ ! **[ಋತಸ್ಯ]** **[ಗೋಪಾಃ]** ಸತ್ಯದ ರಕ್ಷಣೆ ಮಾಡುವ ವಿದ್ಯಾವಂತ ಜನರು **[ಯಜ್ಞೇಷು]** ಉತ್ತಮ ವ್ಯವಹಾರಗಳಲ್ಲಿ ಅಂದರೆ ಸಂಗತಿಕರಣ ರೂಪ ಯಜ್ಞದಲ್ಲಿ **[ಋತ್ವಿಜಂ]** ಋತ್ವಿಜರಿಗೆ ಸಮನಾದ ಸುಖಸಾಧಕನಾದ **[ಹೋತಾರಂ]** ಎಲ್ಲವನ್ನೂ ಧಾರಣ ಮಾಡಿರುವ **[ತ್ವಾಂ]** ನಿನ್ನನ್ನು **[ಈಡತೇ]** ಸ್ತುತಿ ಮಾಡುತ್ತಾರೆ. **[ಸ್ವೇ]** ಅಂತಹ ನೀನು ನಿನ್ನ **[ದಮೇ]** ನಿಯಮರೂಪ ವ್ಯವಹಾರದಲ್ಲಿ **[ದೀದಿಹಿ]** ಅಂತಹ ವಿದ್ಯಾವಂತರಿಗೆ ಜ್ಞಾನದಾನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸತ್ಯಭಾಷಣಾದಿ ಧರ್ಮಾನುಷ್ಠಾನ ಮಾಡುತ್ತ ಅಸತ್ಯ ಭಾಷಣಾದಿರೂಪ ಅಧರ್ಮವನ್ನು ತ್ಯಾಗ ಮಾಡಿ ನಿನ್ನ ಸ್ತವನವನ್ನು ಮಾಡುತ್ತಾರೋ ಅಂತಹವರು ನಿನ್ನನ್ನು ಪಡೆದುಕೊಂಡವರಾಗಿ ಆನಂದತುಂದಿಲರಾಗಿ ಪ್ರಪಂಚದಲ್ಲಿ ನೆಲಸುತ್ತಾರೆ.

ಈ ಮಂತ್ರದಲ್ಲಿ ಮನುಷ್ಯರು ಹೇಗೆ ಸುಖವನ್ನು ಪಡೆಯಬಹುದು ಎಂಬ ವಿಚಾರವನ್ನು ತಿಳಿಸಲಾಗಿದೆ.

**ಸ ಘಾ ಯಸ್ತೇ ದದಾಶತಿ ಸಮಿಧಾ ಜಾತವೇದಸೇ । ಸೋ ಅಗ್ನೇ ಧತ್ತೇ ಸುವೀರ್ಯಂ ಸ ಪುಷ್ಯತಿ ॥೩॥**

**ಪದಾರ್ಥ:-** [**ಅಗ್ನೇ**] ಎಲ್ಲರನ್ನೂ ಬೆಳಗಿಸುವ ಮನುಷ್ಯನೇ! [**ಯಃ**] ಯಾವ [**ಸಮಿಧಾ**] ಚೆನ್ನಾಗಿ ಉರಿಯುವ ಇಂಧನವು ಅಥವಾ ಸುಂದರ ವಿಜ್ಞಾನ ಅದರಿಂದ [**ಜಾತವೇದಸೇ**] ಉತ್ಪನ್ನವಾದ ಪದಾರ್ಥಗಳಲ್ಲಿ ವಿದ್ಯಮಾನವಾದ ಅಥವಾ ಬುದ್ಧಿಗೆ ಎಟಕುವಂತಹ [**ತೇ**] ನಿನಗೋಸ್ಕರ, ಆತ್ಮನು ತನ್ನ ಸ್ವರೂಪವನ್ನು [**ದದಾಶತಿ**] ಪ್ರಾಪ್ತಗೊಳಿಸುತ್ತಾನೆ. [**ಸಃ, ಘ**] ಅವನೇ [**ಸುವೀರ್ಯಂ**] ವಿಜ್ಞಾನಾದಿ ಸಂಪತ್ತನ್ನು ಅಥವಾ ಅತಿಶಯ ಪರಾಕ್ರಮವನ್ನು [**ಧತ್ತೇ**] ಧಾರಣ ಮಾಡುತ್ತಾನೆ. [**ಸಃ**] [**ಪುಷ್ಯತಿ**] ಅವನೇ ಎಲ್ಲ ರೀತಿಯಿಂದಲೂ ವೃದ್ಧಿ ಹೊಂದುತ್ತಾನೆ. [**ಸಃ**] ಅವನೇ ಅನ್ಯರನ್ನು ವೃದ್ಧಿಗೊಳಿಸುತ್ತಾನೆ.

**ಭಾವಾರ್ಥ:-** ಅಗ್ನಿಯಲ್ಲಿ ಉತ್ತಮ ಘೃತಾದಿ ಹವಿಃ ಪದಾರ್ಥಗಳನ್ನು ಹೋಮ ಮಾಡಿ ವಾಯ್ವಾದಿ ವಾತಾವರಣವನ್ನು ಶುದ್ಧಿ ಮಾಡುವುದರ ಮೂಲಕ ಉತ್ತಮ ಜನರು ಎಲ್ಲರನ್ನೂ ಸಂತೋಷಗೊಳಿಸುತ್ತಾರೋ ಅದೇ ರೀತಿ ಜ್ಞಾನವಂತರು ಪರಮಾತ್ಮನನ್ನೇ ಪಡೆದವರಾಗಿ ಶಾಶ್ವತ ಸುಖವನ್ನು ಪಡೆಯುತ್ತಾರೆ.

ಉಪದೇಶಕನ ಕರ್ತವ್ಯವನ್ನು ಇಲ್ಲಿ ತಿಳಿಸಲಾಗಿದೆ.

**ಸ ಕೇತುರಧ್ವರಾಣಾ-ಮಗ್ನಿರ್ದೇವೇಭಿರಾ ಗಮತ್ । ಅಂಜಾನಃ ಸಪ್ತ ಹೋತೃಭಿರ್ಹವಿಷ್ಮತೇ ॥೪॥**

**ಪದಾರ್ಥ:-** [**ಸಃ**] ಅವನು [**ಕೇತುಃ**] ಧ್ವಜದಂತೆ ಜ್ಞಾಪಿಸುವವನಾದ [**ಅಂಜಾನಃ**] ದಿವ್ಯಗುಣಗಳಿಂದ ಪ್ರಸಿದ್ಧನಾದ [**ಅಗ್ನಿಃ**] ಅಗ್ನಿಯು [**ದೇವೇಭಿಃ**] ದಿವ್ಯಗುಣಗಳಿರುವ ಪದಾರ್ಥಗಳಂತೆ ವಿದ್ಯಾವಂತರು [**ಹೋತೃಭಿಃ**] ಮತ್ತು ಗ್ರಹಣ ಮಾಡುವವರು [**ಸಪ್ತ**] ಏಳರೊಂದಿಗೆ, ಪಂಚ ಪ್ರಾಣ ಮನೋಬುದ್ಧಿಗಳೊಂದಿಗೆ [**ಅಧ್ವರಾಣಾಂ**] ಅಹಿಂಸಾರೂಪ ಯಜ್ಞಗಳ ಸಂಬಂಧೀ [**ಹವಿಷ್ಮತೇ**] ದಾನಯೋಗ್ಯ ಪದಾರ್ಥಗಳಿರುವ ಜನರಿಗಾಗಿ [**ಆ, ಅಗಾತ್**] ಪ್ರಾಪ್ತನಾಗು. ಅಗ್ನಿ ವಿದ್ಯಾಯುಕ್ತನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಜ್ಞಾನದೊಂದಿಗೆ ಉತ್ತಮ ರೀತಿಯಲ್ಲಿ ಸೇವೆಗೊಳಗಾದ ಅಗ್ನಿಯು ಹೇಗೆ ದಿವ್ಯಗುಣಗಳನ್ನು ಕೊಡುತ್ತಾನೋ, ಹಾಗೆಯೇ ಸೇವೆ ಮಾಡುವ ಆಪ್ತ ಜನರಿಗೆ ವಿದ್ಯಾವಂತರು ಅಹಿಂಸಾದಿ ಧರ್ಮಗಳನ್ನು ಉಪದೇಶಿಸಿ ಶ್ರೋತೃಗಳಿಗೆ ದಿವ್ಯ ಸುಖವನ್ನು ಕೊಡುತ್ತಾರೆ.

ಈ ಮಂತ್ರದಲ್ಲಿ ಅಧ್ಯಾಪಕರ ಮತ್ತು ವಿದ್ವಾಂಸರ ಕರ್ತವ್ಯಗಳನ್ನು ಹೇಳಲಾಗಿದೆ.

**ಪ್ರ ಹೋತ್ರೇ ಪೂರ್ವ್ಯಂ ವಚೋಽಗ್ನಯೇ ಭರತಾ ಬೃಹತ್ ।**
**ವಿಪಾಂ ಜ್ಯೋತೀಂಷಿ ಬಿಭ್ರತೇ ನ ವೇಧಸೇ ॥೫॥**

**ಪದಾರ್ಥ:-** [**ಹೋತ್ರೇ**] ಹವಿಷ್ಪದಾರ್ಥಗಳನ್ನು ಗ್ರಹಣ ಮಾಡುವ [**ಅಗ್ನಯೇ**] [**ನ**] ಅಗ್ನಿಗೆ ಸಮನಾಗಿ [**ವಿಪಾಂ**] ಉತ್ತಮ ಬುದ್ಧಿವಂತರಿಗೆ [**ಜ್ಯೋತೀಂಷಿ**] ವಿದ್ಯಾರೂಪ ತೇಜಸ್ಸನ್ನು [**ಬಿಭ್ರತೇ**] ಧಾರಣ ಮಾಡಿಸುತ್ತ [**ವೇಧಸೇ**] ಬುದ್ಧಿವಂತನಿಗಾಗಿ [**ಬೃಹತ್**] ಬಹು ಪ್ರಯೋಜನಕಾರಿಯಾದ [**ಪೂರ್ವ್ಯಂ**] ಪ್ರಾಚೀನ ವಿದ್ವಾಂಸರಿಂದ ಉಪದೇಶಿಸಲ್ಪಟ್ಟ [**ವಚಃ**] ವಚನಗಳನ್ನು [**ಪ್ರ, ಭರತ**] ಉಪದೇಶ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾಜ್ಞಿಕನು ಯಜ್ಞಕ್ಕಾಗಿ ಘೃತಾದಿ ಪದಾರ್ಥಗಳಿಂದ ಉತ್ತಮ ರೀತಿಯಲ್ಲಿ ಪಾಕ ಮಾಡಿದ ಹವಿಷ್ಯದಾರ್ಥಗಳಿಂದ ಅಗ್ನಿಯನ್ನು ವೃದ್ಧಿಪಡಿಸುತ್ತಾನೆಯೋ ಹಾಗೆ ಅಧ್ಯಾಪಕರು ಅಂಗೋಪಾಂಗಗಳ ಸಹಿತ ಸಂಪೂರ್ಣ ವಿದ್ಯೆಯನ್ನು ಉಪದೇಶ ಮಾಡಿ ವಿದ್ಯಾರ್ಥಿಗಳನ್ನು ಮತ್ತು ಶ್ರೋತೃವರ್ಗದವರನ್ನು ತೃಪ್ತಿಗೊಳಿಸುತ್ತಾರೆ.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಅಗ್ನಿಂ ವರ್ಧಂತು ನೋ ಗಿರೋ ಯತೋ ಜಾಯತ ಉಕ್ಥ್ಯಃ ।**
**ಮಹೇ ವಾಜಾಯ ದ್ರವಿಣಾಯ ದರ್ಶತಃ ॥೬॥**

**ಪದಾರ್ಥ:-** **[ಅಗ್ನಿಂ]** ನೀವು ಹೇಗೆ ಅಗ್ನಿಯನ್ನು ವೃದ್ಧಿ ಪಡಿಸುತ್ತಿರೋ ಹಾಗೆ **[ನಃ]** **[ಗಿರಃ]** ನಮ್ಮೆಲ್ಲರ ಸುಶಿಕ್ಷಿತ ವಾಣಿಯನ್ನು **[ವರ್ಧಂತು]** ವೃದ್ಧಿಪಡಿಸಿರಿ. **[ಯತಃ]** ಯಾವುದರಿಂದ ಶ್ರೇಷ್ಠವಾದ **[ವಾಜಾಯ]** ವಿಜ್ಞಾನಕ್ಕೆ ಮತ್ತು **[ದ್ರವಿಣಾಯ]** ಐಶ್ವರ್ಯಕ್ಕಾಗಿ **[ದರ್ಶತಃ]** ನೋಡಲು ಯೋಗ್ಯ ರೀತಿಯಲ್ಲಿ **[ಉಕ್ಥ್ಯಃ]** ಪ್ರಶಂಸನೀಯ ಪಂಡಿತನು **[ಜಾಯತೇ]** ಪ್ರಕಟಗೊಳ್ಳುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವುದರಿಂದ ಓದುಗರು ಮತ್ತು ಕೇಳುಗರು ಉತ್ತಮ ಶಿಕ್ಷಣ, ವಿದ್ಯೆ ಮತ್ತು ಸಭ್ಯತೆಗಳನ್ನು ಪಡೆದುಕೊಂಡು ಧನವಂತರಾಗುವರೋ ಆ ರೀತಿ ಅಧ್ಯಾಪಕರು ಮತ್ತು ಉಪದೇಶಕರು ಪ್ರಯತ್ನಿಸಬೇಕು.

ಈ ಮಂತ್ರದಲ್ಲೂ ವಿದ್ಯಾವಂತರ ಗುಣಗಳನ್ನೇ ತಿಳಿಸಲಾಗಿದೆ.

**ಅಗ್ನೇ ಯಜಿಷ್ಠೋ ಅಧ್ವರೇ ದೇವಾನ್ದೇವಯತೇ ಯಜ ।**
**ಹೋತಾ ಮಂದ್ರೋ ವಿ ರಾಜಸ್ಯತಿ ಸ್ರಿಧಃ ॥೭॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತಿರುವ **[ಹೋತಾ]** ದಾನಿಯಾದ **[ಮಂದ್ರಃ]** ಸಂತುಷ್ಟಗೊಳಿಸುವ **[ಯಜಿಷ್ಠಃ]** ಸತತವಾಗಿ ಯಜ್ಞ ಮಾಡುವವನೇ! ನೀನು **[ಅಧ್ವರೇ]** ಅಹಿಂಸಾರೂಪ ಯಜ್ಞದಲ್ಲಿ **[ದೇವಯತೇ]** ದಿವ್ಯ, ಗುಣಕರ್ಮ ಸ್ವಭಾವಗಳನ್ನು ಬಯಸುವವನಿಗೋಸ್ಕರ **[ದೇವಾನ್]** ದಿವ್ಯಗುಣಗಳನ್ನು **[ಯಜ]** ಸಂಯೋಜಿಸುವವನಾಗು. **[ಅತಿ]** **[ಸ್ರಿಧಃ]** ವಿದ್ಯಾದಿ ಉತ್ತಮ ವ್ಯವಹಾರಗಳನ್ನು ವಿರೋಧಿಸುವ ಜನರನ್ನು ಅಧಿಕಾರದಿಂದ ಪ್ರತ್ಯೇಕಗೊಳಿಸಿ **[ವಿ]** **[ರಾಜಸಿ]** ವಿಶೇಷವಾಗಿ ಪ್ರಕಾಶಮಾನನಾಗಿರುವೆ. ಆದ್ದರಿಂದ ಸತ್ಕಾರಯೋಗ್ಯನಾಗಿರುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಅಗ್ನಿಯು ಉತ್ತಮ ರೀತಿಯಲ್ಲಿ ಯಂತ್ರಗಳಲ್ಲಿ ಸಂಯೋಜಿಸಿದಾಗ ಶಿಲ್ಪಾದಿ ವಿದ್ಯೆಗಳನ್ನು ಸಿದ್ಧಿಪಡಿಸಿ ಬಡತನವನ್ನು ನಾಶ ಮಾಡುತ್ತಾನೋ ಹಾಗೆಯೇ ಗೌರವಕ್ಕೊಳಗಾದ ವಿದ್ಯಾವಂತರು ವಿದ್ಯೆಯ ಪ್ರಚಾರವನ್ನು ಮಾಡಿ ಅವಿದ್ಯಾದಿ ದುಷ್ಟ ಸ್ವಭಾವಗಳನ್ನು ನಾಶಪಡಿಸುತ್ತಾರೆ.

ಪುನಃ ಅದೇ ವಿಚಾರವನ್ನು ಇಲ್ಲಿ ಹೇಳಲಾಗಿದೆ.

**ಸ ನಃ ಪಾವಕ ದೀದಿಹಿ ದ್ಯುಮದಸ್ಮೇ ಸುವೀರ್ಯಮ್ ।**
**ಭವಾ ಸ್ತೋತೃಭ್ಯೋ ಅಂತಮಃ ಸ್ವಸ್ತಯೇ ॥೮॥**

**ಪದಾರ್ಥ:-** [ಪಾವಕ] ಅಗ್ನಿಯಂತೆ ಪವಿತ್ರಕಾರಕನಾದ ವಿದ್ಯಾವಂತನೇ! ನೀನು [ಸ್ತೋತೃಭ್ಯಃ] ವಿದ್ಯೆಗಳ ಪ್ರಚಾರ ಮಾಡುವ [ಅಸ್ಮೇ] ನಮ್ಮನ್ನು [ದ್ಯುಮತ್] ಪ್ರಶಂಸೆ ಮಾಡಲು ಯೋಗ್ಯವಾದ ಸದ್ವಿದ್ಯೆಗಳಿಂದ ಯುಕ್ತರನ್ನಾಗಿ ಮಾಡು. [ಸುವೀರ್ಯಂ] ಶ್ರೇಷ್ಠ ಸಂಪತ್ತನ್ನು ಕೊಡು. [ಸಃ] ಅಂತಹ ನೀನು [ನಃ] ನಮ್ಮೆಲ್ಲರಿಗೆ [ದೀದಿಹಿ] ಪ್ರಸಿದ್ಧರನ್ನಾಗಿ ಮಾಡು. [ಸ್ವಸ್ತಯೇ] ಸುಖಪ್ರಾಪ್ತಿಗಾಗಿ [ಅಂತಮಃ] [ಭವ] ನಮ್ಮ ಸಮೀಪದಲ್ಲಿ ಇರುವವನಾಗು.

**ಭಾವಾರ್ಥ:-** ವಿದ್ಯಾವಂತರು ಸ್ವಯಂ ಪವಿತ್ರಭಾವವಿರುವವರಾಗಿ ಬೇರೆಯವರನ್ನೂ ವಿದ್ಯೆ ಶಿಕ್ಷಣಗಳಿಂದ ಪವಿತ್ರ ಭಾವದವರಾಗುವಂತೆ ಮಾಡಬೇಕು. ಅದರಿಂದ ಎಲ್ಲ ಜನರೂ ಸ್ನೇಹಿತರಾಗಿ ಪರಸ್ಪರರ ಸುಖಕ್ಕೆ ಕಾರಣರಾಗಿ ಸಮರ್ಥರೆನಿಸಿಕೊಳ್ಳುವರು.

ಈ ಮಂತ್ರದಲ್ಲೂ ಅದೇ ವಿಚಾರವನ್ನು ತಿಳಿಸಲಾಗಿದೆ.

**ತಂ ತ್ವಾ ವಿಪ್ರಾ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ।**
**ಹವ್ಯವಾಹಮಮರ್ತ್ಯಂ ಸಹೋವೃಧಮ್ ॥೯॥**

**ಪದಾರ್ಥ:-** [ಜಾಗೃವಾಂಸಃ] ಅವಿದ್ಯಾರೂಪ ನಿದ್ದೆಯಿಂದೆದ್ದು ವಿದ್ಯೆ ಎಂಬ ಜಾಗೃತಾವಸ್ಥೆಯಲ್ಲಿರುವವರು [ವಿಪನ್ಯಃ] ವಿಶೇಷ ರೀತಿಯ ಪ್ರಶಂಸೆಗೊಳಗಾದವರೂ ಆದ [ವಿಪ್ರಾಃ] ಬುದ್ಧಿವಂತ ಜನರು [ತಂ] ಆ ಸಂಪೂರ್ಣ ವಿದ್ಯೆಗಳನ್ನು ಪ್ರಕಟಗೊಳಿಸುವ ವಾಗ್ಮಿ [ಹವ್ಯವಾಹಂ] ದಾನ ಯೋಗ್ಯ ವಿಜ್ಞಾನವನ್ನು ದಾನ ಮಾಡುವವನು [ಅಮರ್ತ್ಯಂ] ಮನುಷ್ಯ ಸ್ವಭಾವ ರಹಿತನಾಗಿ ದೇವತಾ ಸ್ವಭಾವವನ್ನು ಹೊಂದಿದವನು [ಸಹೋವೃಧಂ] ತಾನೂ ಬಲಿಷ್ಠನಾಗಿ, ಅನ್ಯರನ್ನೂ ಬಲಿಷ್ಠಗೊಳಿಸುವಂತಹ [ತ್ವಾ] ನಿನ್ನನ್ನು [ಸಂ, ಇಂಧತೇ] ಪ್ರಜ್ವಲಿತಗೊಳಿಸುತ್ತೇನೆ. ನೀನು ನನ್ನನ್ನು ಶುಭಗುಣಗಳಿಂದ ಪ್ರಕಾಶಮಾನಗೊಳಿಸು.

**ಭಾವಾರ್ಥ:-** ವಿದ್ಯಾವಂತರೇ ವಿದ್ಯಾವಂತರ ಪರಿಶ್ರಮವನ್ನು ತಿಳಿದುಕೊಳ್ಳುತ್ತಾರೆ. ಬೇರೆಯವರಿಗೆ ಅದು ಸಾಧ್ಯವಿಲ್ಲ. ಆದ್ದರಿಂದ ವಿದ್ಯಾವಂತರು ವಿದ್ಯಾವಂತರನ್ನೇ ಗೌರವಿಸಬೇಕು. ಮೂರ್ಖರನ್ನಲ್ಲ.

ಈ ಸೂಕ್ತದಲ್ಲಿ ಪರಮಾತ್ಮನ ಮತ್ತು ವಿದ್ಯಾವಂತರ ಗುಣಗಳ ವರ್ಣನೆ ಮಾಡಿರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಯಾಗಿರುತ್ತದೆ.

**ಹತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೧೧

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧, ೨, ೫, ೭, ೮ ನಿಚೃತ್ ಗಾಯತ್ರೀ, ೩, ೯ ವಿರಾಟ್ ಗಾಯತ್ರಿ, ೪, ೬ ಗಾಯತ್ರಿ ಛಂದಃ । ಷಡ್ಜಃ ಸ್ವರಃ.

ಅಗ್ನ್ಯಾದಿಗಳ ದೃಷ್ಟಾಂತದಿಂದ ವಿದ್ವಾಂಸರು ಏನು ಮಾಡಬೇಕು ಎಂಬ ವಿಚಾರವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಅಗ್ನಿರ್ಹೋತಾ ಪುರೋಹಿತೋಽಧ್ವರಸ್ಯ ವಿಚರ್ಷಣಿಃ । ಸ ವೇದ ಯಜ್ಞಮಾನುಷಕ್ ॥೧॥**

**ಪದಾರ್ಥ:-** [ಅಧ್ವರಸ್ಯ] ಹಿಂಸಾರಹಿತ ಕರ್ಮದ [ವಿಚರ್ಷಣಿಃ] ಪ್ರಕಾಶಕರ್ತನಾದ [ಹೋತಾ] ದಾನಕಾರಕನಾದ [ಪುರೋಹಿತಃ] ಎಲ್ಲ ಜೀವಿಗಳಿಗೆ ಹಿತವನ್ನೇ ಮಾಡುವ [ಅಗ್ನಿಃ] ಅಗ್ನಿಗೆ ಸಮನಾದ [ಸಃ] ವಿದ್ಯಾವಂತನು [ಆನುಷಕ್] ಅನುಕೂಲಕರವಾದ [ಯಜ್ಞಂ] ಕರ್ಮವಿಧಾನಗಳನ್ನು [ವೇದ] ತಿಳಿದುಕೊಂಡಿರುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಬ್ರಹ್ಮಚರ್ಯ ಧಾರಣ ಮಾಡಿ ವಿದ್ಯಾದಿ ಗುಣಗಳನ್ನು ಗ್ರಹಣ ಮಾಡುವುದರಲ್ಲಿ ತತ್ಪರನಾಗಿರುತ್ತಾನೆಯೋ ಅವನು ಅಗ್ನ್ಯಾದಿ ಪದಾರ್ಥಗಳನ್ನು ಅರಿತವನಾಗಿ ಶಿಲ್ಪವಿದ್ಯೆಯಲ್ಲಿ ನಿಪುಣನಾಗಿ ಪ್ರಪಂಚದಲ್ಲಿ ಪ್ರಶಂಸಾತ್ಮಕ ಕರ್ಮಗಳನ್ನು ಮಾಡಲು ಯೋಗ್ಯನಾಗಿರುತ್ತಾನೆ.

ಪುನಃ ಅದೇ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ಸ ಹವ್ಯವಾಳಮರ್ತ್ಯ ಉಶಿಗ್ದೂತಶ್ಚನೋಹಿತಃ । ಅಗ್ನಿರ್ಧಿಯಾ ಸಮೃಣ್ವತಿ ॥೨॥**

**ಪದಾರ್ಥ:-** **[ಅಗ್ನಿಃ]** ಅಗ್ನಿಗೆ ಸಮನಾದ ತೇಜಸ್ವಿಯು **[ಹವ್ಯವಾಟ್]** ಹವಿಃ ಪದಾರ್ಥಗಳನ್ನು ಪಡೆದುಕೊಂಡು **[ಅಮರ್ತ್ಯಃ]** ಮರಣಧರ್ಮ ರಹಿತವಾದ **[ಉಶಿಕ್]** ಕಾಮನೆಗಳನ್ನು ಮಾಡುತ್ತ **[ದೂತಃ]** ಅವಿದ್ಯಾದಿ ರಹಿತವಾದ ದೂರವಿದ್ಯೆಯನ್ನು / ಪರಾವಿದ್ಯೆಯನ್ನು ಪಡೆದುಕೊಳ್ಳುವವನು **[ಚನೋಹಿತಃ]** ಆಹಾರ ಪದಾರ್ಥಗಳಲ್ಲಿ ವೃದ್ಧಿಪರಕರ್ಮ ಮಾಡುವವನಾದ ವಿದ್ಯಾವಂತ ಪುರುಷನು **[ಧಿಯಾ]** ಉತ್ತಮ ಕರ್ಮ / ಉತ್ತಮ ಬುದ್ಧಿಯಿಂದ **[ಸಂ]** **[ಋಣ್ವಂತಿ]** ಮುಂದುವರೆಯುವವನು / ಶ್ರೇಷ್ಠ ಬುದ್ಧಿವಂತನಾಗಿ ಬೌದ್ಧಿಕ ಕರ್ಮಗಳನ್ನು ತಿಳಿದುಕೊಳ್ಳುವನು. **[ಸಃ]** ಅವನೇ ನಮ್ಮೆಲ್ಲರಿಗೆ ಉತ್ತಮ ಶಿಕ್ಷಣವನ್ನು ನೀಡಬಲ್ಲದು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನಿಯು ಹೇಗೆ ತನ್ನ ವ್ಯಾಪಾರದಿಂದ ದೂತನಕಾರ್ಯವನ್ನು ಸಿದ್ಧಗೊಳಿಸುತ್ತಾನೋ ಹಾಗೆ ವಿದ್ಯಾವಂತರು ರಾಜ್ಯದ ಕಾರ್ಯಗಳನ್ನು ಸಿದ್ಧಗೊಳಿಸುತ್ತಾರೆ.

ಮನುಷ್ಯರು ಯಾರನ್ನು ಸೇವಿಸಬೇಕು ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ಅಗ್ನಿರ್ಧಿಯಾ ಸ ಚೇತತಿ ಕೇತುರ್ಯಜ್ಞಸ್ಯ ಪೂರ್ವ್ಯಃ । ಅರ್ಥಂ ಹ್ಯಸ್ಯ ತರಣಿ ॥೩॥**

**ಪದಾರ್ಥ:-** **[ಅಗ್ನಿಃ]** ಅಗ್ನಿಯಂತೆ ತೇಜಸ್ವಿ **[ಕೇತುಃ]** ಉಪದೇಶದಿಂದ ಬುದ್ಧಿಯನ್ನು ಪ್ರಕಾಶಗೊಳಿಸುವವನು **[ತರಣಿ]** ಸದ್ವಿದ್ಯೆಯಿಂದ ದುಃಖ ಸಾಗರವನ್ನು ದಾಟಿಸುವವನು **[ಪೂರ್ವ್ಯಃ]** ಪ್ರಾಚೀನ ಪಂಡಿತರಲ್ಲಿ ಚತುರನು **[ಧಿಯಾ]** ಬುದ್ಧಿಕರ್ಮದಿಂದ **[ಹಿ]** ಯಾವ ಕಾರಣದಿಂದಾಗಿ **[ಅಸ್ಯ]** **[ಯಜ್ಞಸ್ಯ]** ಈ ವಿದ್ವಾಂಸರನ್ನು ಗೌರವಿಸುವಂತಹ ವ್ಯವಹಾರದಲ್ಲಿ **[ಅರ್ಥಂ]** ಪ್ರಯೋಜನವನ್ನು **[ಚೇತತಿ]** ತಾನು ತಿಳಿದುಕೊಂಡು ಇನ್ನೊಬ್ಬರಿಗೂ ತಿಳಿಸುತ್ತಾನೆ. ಆದ್ದರಿಂದ ಅವನೇ ಸೇವಾಯೋಗ್ಯನಾಗಿರುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾವ ಪುರುಷನು ವಿದ್ಯಾರೂಪ ಯಜ್ಞವನ್ನು ಉತ್ತಮ ರೀತಿಯಲ್ಲಿ ತಿಳಿದುಕೊಂಡಿರುತ್ತಾನೋ ಅವನೇ ವಿದ್ಯೆಯ ಏಳಿಗೆಗಾಗಿ ಪರಿಶ್ರಮ ಪಡುತ್ತಾನೆ.

ಸಂತಾನಗಳಿಗೆ ಶಿಕ್ಷಣ ನೀಡುವ ವಿಷಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಅಗ್ನಿಂ ಸೂನುಂ ಸನಶ್ರುತಂ ಸಹಸೋ ಜಾತವೇದಸಮ್ । ವಹ್ನಿಂ ದೇವಾ ಅಕೃಣ್ವತ ॥೪॥**

**ಪದಾರ್ಥ:-** **[ದೇವಾಃ]** ವಿದ್ಯಾವಂತರಾದ ನಿಮ್ಮಂತಹ ಜನರು **[ಸಹಸಃ]** ಪ್ರಶಂಸಾರ್ಹ ವಿದ್ಯಾಬಲ ಸಂಪನ್ನನು **[ಸೂನುಂ]** ಪುತ್ರನಿಗೆ ಸಮನಾಗಿ ಸೇವೆ ಮಾಡಲು **[ವಹ್ನಿಂ]** ಉತ್ತಮ ಗುಣಗಳನ್ನು ಧಾರಣ ಮಾಡಲು

[**ಸನಶ್ರುತಂ**] ಸನಾತನ ಧರ್ಮವನ್ನು ಶ್ರವಣ ಮಾಡುವವನು [**ಜಾತವೇದಸಂ**] ವಿದ್ಯಾಯುಕ್ತನಾಗಿ ಜಿಜ್ಞಾಸುಗಳಾದವರಿಗೆ [**ಅಗ್ನಿಂ**] ಅಗ್ನಿಗೆ ಸಮನಾದ ತೇಜಸ್ಸುಳ್ಳವರಾಗಿ [**ಅಕೃಣ್ವತ**] ಮಾಡುವವನಾಗು.

**ಭಾವಾರ್ಥ:-** ವಿದ್ಯಾವಂತರು ಬೇರೆಯವರ ಮಕ್ಕಳನ್ನು ತಮ್ಮ ಮಕ್ಕಳೆಂಬಂತೆ ಭಾವಿಸಿ ಸ್ನೇಹಭಾವದಿಂದ ವಿದ್ಯಾವಂತರೂ ಬಹು ಶಾಸ್ತ್ರವನ್ನರಿತವರೂ ಆಗಿ ಆನಂದಿತರಾಗುವಂತೆ ಮಾಡಬೇಕು.

ವಿದ್ಯಾವಂತರು ಏನು ಮಾಡಬೇಕು ಎಂಬ ವಿಷಯವನ್ನು ಮತ್ತೆ ಇಲ್ಲಿ ಹೇಳಲಾಗಿದೆ.

**ಅದಾಭ್ಯಃ ಪುರಏತಾ ವಿಶಾಮಗ್ನಿರ್ಮಾನುಷೀಣಾಮ್ । ತೂರ್ಣೀ ರಥಃ ಸದಾ ನವಃ ॥೫॥**

**ಪದಾರ್ಥ:-** [**ತೂರ್ಣೀಃ**] ಶೀಘ್ರಗಾಮಿಯಾದ [**ನವಃ**] ಹೊಸತಾದ [**ರಥಃ**] ಉತ್ತಮ ರಥವು [**ಅಗ್ನಿಃ**] ಅಗ್ನಿಯಂತೆ ಪ್ರಕಾಶಮಾನವಾದ [**ಮಾನುಷಿಣಾಂ**] ಮನುಷ್ಯರಿಗೆ ಸಂಬಂಧಿಸಿದ [**ವಿಶಾಂ**] ಪ್ರಜೆಗಳ [**ಸದಾ**] ಯಾವಾಗಲೂ [**ಅದಾಭ್ಯಃ**] ಪರಸ್ಪರರ ಹಿಂಸಾದಿ ಆಚರಣೆಯನ್ನು ನಿವಾರಣೆ ಮಾಡುವವನು [**ಪುರಏತಾ**] ಅಗ್ರಗಾಮಿ ಎಂದರೆ ಮುಂದಾಳು ಆಗಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರು ಹೇಗೆ ಶೀಘ್ರಗಾಮಿ ಹೊಸ ರಥದಿಂದ ತಮ್ಮ ಇಚ್ಛಿಕ ಸ್ಥಳವನ್ನು ತಲುಪುತ್ತಾರೋ, ಅದೇ ರೀತಿ ವೈರಭಾವವನ್ನು ತ್ಯಜಿಸಿ ಎಲ್ಲ ಪ್ರಜೆಗಳನ್ನು ತಮ್ಮ ತಮ್ಮ ಇಚ್ಛಾನುಕೂಲ ಉತ್ತಮ ವಿದ್ಯೆಗಳ ಶಿಕ್ಷಣವನ್ನು ನೀಡಿ ಅವರ ಜನ್ಮವನ್ನು ಸಾರ್ಥಕಗೊಳಿಸಬೇಕು.

ಪುನಃ ಅದೇ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಸಾಹ್ವಾನ್ ವಿಶ್ವಾ ಅಭಿಯುಜಃ ಕ್ರತುರ್ದೇವಾನಾಮಮೃಕ್ತಃ । ಅಗ್ನಿಸ್ತುವಿಶ್ರವಸ್ತಮಃ ॥೬॥**

**ಪದಾರ್ಥ:-** [**ಅಮೃಕ್ತಃ**] ಯಾವನು ಬೇರೆಯವರಿಂದ ಹಿಂಸೆಗೊಳಗಾಗಲಾರನೋ [**ಸಾಹ್ವಾನ್**] ಕ್ರೋಧರಹಿತನೂ [**ಕ್ರತುಃ**] ಬುದ್ಧಿವಂತನೋ ಮತ್ತು [**ಅಗ್ನಿಃ**] ಅಗ್ನಿಯಂತೆ ಪರಿಶುದ್ಧ ಸ್ವಭಾವದವನೋ [**ತುವಿಶ್ರವಸ್ತಮಃ**] ಯಾವನು ಬಹು ಶಾಸ್ತ್ರಗಳನ್ನು ಕೇಳಿ ತಿಳಿದಿರುವನೋ [**ದೇವಾನಾಂ**] ಪಂಡಿತರ ಸಮೂಹದಲ್ಲಿ [**ವಿಶ್ವಾಃ**] ಸಂಪೂರ್ಣವಾಗಿ [**ಅಭಿಯುಜಃ**] ತನಗನುಕೂಲಕರರಾದ ಪ್ರಜೆಗಳನ್ನು ಎಲ್ಲ ರೀತಿಯಿಂದಲೂ ರಕ್ಷಿಸುವವನೋ ಅವನೇ ಪ್ರಜೆಗಳಿಂದ ಸತ್ಕಾರ ಪಡೆಯಲು ಯೋಗ್ಯನಾಗಿರುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಯಾರನ್ನು ಹಿಂಸಿಸುವುದಿಲ್ಲವೋ ಅವನನ್ನು ಹಿಂಸಿಸಲು ಯಾರೂ ಬಯಸುವುದಿಲ್ಲ. ಯಾವನು ಬಹಳಷ್ಟು ಶಾಸ್ತ್ರಗಳನ್ನು ಓದಲೂ, ಕೇಳಲೂ ಬಯಸುತ್ತಾನೋ ಅವನೇ ಅತಿಶಯ ಬುದ್ಧಿವಂತನಾಗುತ್ತಾನೆ, ಯಾರು ಯಾವ ರೀತಿಯ ಭಾವನೆಯಿಂದ ಪ್ರಜೆಗಳೊಂದಿಗೆ ವ್ಯವಹರಿಸುತ್ತಾರೋ ಅವರೊಂದಿಗೆ ಪ್ರಜೆಗಳೂ ಅದೇ ರೀತಿಯ ಭಾವನೆಯಿಂದ ವ್ಯವಹರಿಸುತ್ತಾರೆ.

ಪುನಃ ಅದೇ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಅಭಿ ಪ್ರಯಾಂಸಿ ವಾಹಸಾ ದಾಶ್ವಾ ಅಶ್ನೋತಿ ಮರ್ತ್ಯಃ । ಕ್ಷಯಂ ಪಾವಕಶೋಚಿಷಃ ॥೭॥**

**ಪದಾರ್ಥ:-** **[ದಾಶ್ವಾನ್]** ದಾನ ಮಾಡುವವನು **[ಮರ್ತ್ಯಃ]** ಮನುಷ್ಯನು **[ಪಾವಕಶೋಚಿಷಃ]** ಅಗ್ನಿಯ ತೇಜಸ್ವಿಯಾದ ಪುರುಷನ **[ಕ್ಷಯಂ]** ವಿದ್ಯಾಸ್ಥಾನವನ್ನು **[ಅಶ್ನೋತಿ]** ಪಡೆದುಕೊಳ್ಳುತ್ತಾನೆಯೋ ಅವನು **[ವಾಹಸಾ]** ಉತ್ತಮ ಸ್ಥಾನವನ್ನು ಪಡೆಯುವುದರಿಂದ **[ಪ್ರಯಾಂಸಿ]** ಕಾಮನೆ ಅಭಿಲಾಷೆಗಳನ್ನು ಯೋಗ್ಯ ಅನ್ನಾದಿ ಪದಾರ್ಥಗಳನ್ನು **[ಅಭಿ]** ಪಡೆದುಕೊಳ್ಳುತ್ತಾನೆ.

**ಭಾವಾರ್ಥ:-** ಸಾಮಾನ್ಯ ಮನುಷ್ಯರು ಯಾವಾಗ ವಿದ್ಯಾವಂತರ ವಿದ್ಯೆ ಮತ್ತು ಪದವಿಯನ್ನು ಪಡೆದುಕೊಳ್ಳುತ್ತಾರೆಯೋ ಆಗಲೇ ಅವರ ಇಷ್ಟಾರ್ಥವು ಪೂರ್ಣಗೊಳ್ಳುತ್ತದೆ.

ಅದೇ ವಿಚಾರವನ್ನು ಈ ಮಂತ್ರದಲ್ಲಿ ಮತ್ತೆ ಇಲ್ಲಿ ಹೇಳಲಾಗಿದೆ.

**ಪರಿ ವಿಶ್ವಾನಿ ಸುಧಿತಾ-ಗ್ನೇರಶ್ಯಾಮ ಮನ್ಮಭಿಃ । ವಿಪ್ರಾಸೋ ಜಾತವೇದಸಃ ॥೮॥**

**ಪದಾರ್ಥ:-** **[ಜಾತವೇದಸಃ]** ವಿದ್ಯಾವಂತರಾದ **[ವಿಪ್ರಾಸಃ]** ಬುದ್ಧಿವಂತರೂ ಆದ ನಾವು **[ಮನ್ಮಭಿಃ]** ವಿಜ್ಞಾನ ವಿಶೇಷಗಳೊಂದಿಗೆ **[ಅಗ್ನೇಃ]** ಅಗ್ನಿಗೆ ಸಮನಾಗಿ **[ವಿಶ್ವಾನಿ]** ಸಮಸ್ತವಾದ **[ಸುಧಿತಾ]** ಧಾರಣ ಮಾಡಿರುವ ಶಾಸ್ತ್ರಗಳನ್ನು **[ಪರಿ]** **[ಅಶ್ಯಾಮ]** ಎಲ್ಲ ಕಡೆಗಳಿಂದಲೂ ಪಡೆದುಕೊಳ್ಳೋಣ. ನೀವು ಹಾಗೆಯೇ ಪಡೆದುಕೊಳ್ಳುವವರಾಗಿರಿ.

**ಭಾವಾರ್ಥ:-** ವಿದ್ಯಾವಂತ ಮನುಷ್ಯರು, ಬುದ್ಧಿವಂತರಾಗಲು, ವಿದ್ಯಾವಂತರಾಗಲು, ಬಾಹ್ಯ ಪ್ರಪಂಚ ಮತ್ತು ಆತ್ಮ ವಿದ್ಯೆ ಇವುಗಳನ್ನು ಗ್ರಹಿಸಲು ಪ್ರಯತ್ನಿಸುತ್ತಾರೋ ಹಾಗೇ ಎಲ್ಲರೂ ವಿದ್ಯಾವೃದ್ಧಿಗಾಗಿ ಪ್ರಯತ್ನಿಸಬೇಕು.

ಈ ಮಂತ್ರದಲ್ಲೂ ಅದೇ ವಿಚಾರವನ್ನು ತಿಳಿಸಲಾಗಿದೆ.

**ಅಗ್ನೇ ವಿಶ್ವಾನಿ ವಾರ್ಯಾ ವಾಜೇಷು ಸನಿಷಾಮಹೇ । ತ್ವೇ ದೇವಾಸ ಏರಿರೇ ॥೯॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ವಿದ್ಯೆಯಿಂದ ಪ್ರಕಾಶಮಾನವಾದ ಪಂಡಿತನೇ! **[ತ್ವೇ]** ನಿನ್ನ ವಿಷಯದಲ್ಲಿ **[ದೇವಾಸಃ]** ವಿದ್ಯಾವಂತರಾದ ನಮ್ಮಂತಹ ಜನರನ್ನು **[ಆ]** **[ಈರಿರೇ]** ಪ್ರೇರಣೆ ನೀಡುವವನಾಗು. ನಿನ್ನಿಂದ ಪ್ರೇರಣೆ ಪಡೆದ ನಾವು **[ವಾಜೇಷು]** ಸಂಗ್ರಾಮಾದಿ ವ್ಯವಹಾರಗಳಲ್ಲಿ **[ವಿಶ್ವಾನಿ]** ಸಮಗ್ರವಾದ **[ವಾರ್ಯಾ]** ಸ್ವೀಕಾರಾರ್ಹವಾದ ಧನಾದಿ ವಸ್ತುಗಳನ್ನು **[ಸನಿಷಾಮಹೇ]** ನಮ್ಮ ಭಾಗಗಳನ್ನು ಪಡೆದುಕೊಳ್ಳುತ್ತೇವೆ.

**ಭಾವಾರ್ಥ:-** ಯಾರು ಧರ್ಮಯುಕ್ತ ಪುರುಷಾರ್ಥಗಳಲ್ಲಿ, ವಿದ್ಯಾವಂತರಾದ ನಿಮ್ಮಂತಹ ಜನರನ್ನು ಪ್ರೇರಣೆ ನೀಡುತ್ತಾರೋ ಅದೇ ರೀತಿ ನೀವೆಲ್ಲರೂ ಅವರ ಆಜ್ಞೆಗೆ ಅನುಕೂಲಕರರಾಗಿದ್ದು ವಿದ್ಯೆ, ಧನಗಳನ್ನು ಪಡೆದುಕೊಳ್ಳಿರಿ ಹಾಗೂ ಅವರ ಆಜ್ಞೆಗೆ ಅನುಕೂಲಕರವಾಗಿ ವ್ಯವಹರಿಸಿರಿ. ಆಗ ನೀವೂ ಸಹ ವಿದ್ಯಾವಂತರೂ ಧನವಂತರೂ ಆಗುತ್ತೀರಿ.

ಈ ಸೂಕ್ತದಲ್ಲಿ ವಿದ್ಯಾವಂತ ಜನರ ಗುಣಗಳ ವರ್ಣನೆ ಮಾಡಿರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಯಾಗಿರುತ್ತದೆ.

**ಹನ್ನೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೧೨

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಇಂದ್ರಾಗ್ನೀ ದೇವತೆ । ೧, ೩, ೫, ೮, ೯ ನಿಚೃತ್ ಗಾಯತ್ರೀ, ೨, ೪, ೬, ಗಾಯತ್ರೀ, ೭ ಯವಮಧ್ಯಾವಿರಾಟ್ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಅಧ್ಯಾಪಕೋಪದೇಶಕರ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಇಂದ್ರಾಗ್ನೀ ಆ ಗತಂ ಸುತಂ ಗೀರ್ಭಿರ್ನಭೋ ವರೇಣ್ಯಮ್ । ಅಸ್ಯ ಪಾತಂ ಧಿಯೇಷಿತಾ ॥೧॥**

**ಪದಾರ್ಥ:-** ಅಧ್ಯಾಪಕೋಪದೇಶಕರೇ! ನೀವಿಬ್ಬರೂ **[ಇಂದ್ರಾಗ್ನೀ]** ವಾಯು ಮತ್ತು ವಿದ್ಯುತ್ತಿನಂತೆ **[ಅಸ್ಯ]** ಈ ಸಂಸಾರದಲ್ಲಿ ಇರುವವರಾಗಿ **[ಇಷಿತಾ]** ಬೋಧನೆ ಮಾಡುತ್ತ **[ಗೀರ್ಭಿಃ]** ಉತ್ತಮ ಶಿಕ್ಷಣ ಪೂರಿತ ವಾಣಿಯೊಂದಿಗೆ **[ಧಿಯಾ]** ಉತ್ಕೃಷ್ಟ ಬುದ್ಧಿಯೊಂದಿಗೆ **[ನಭಃ]** ಆಕಾಶದ ಕಡೆಗೆ **[ವರೇಣ್ಯಂ]** ಸ್ವೀಕಾರಾರ್ಹವಾದ **[ಸುತಂ]** ವಿದ್ಯೆಯನ್ನು ಪಡೆದ ಧನ ಸಂಪನ್ನನಾದ ಪುತ್ರನ/ಶಿಷ್ಯನ **[ಪಾತಂ]** ರಕ್ಷಣೆ ಮಾಡಿರಿ **[ಆ, ಗತಂ]** ಮತ್ತು ವಿದ್ಯಾಪ್ರಚಾರಕ್ಕಾಗಿ ಬರುವವರಾಗಿರಿ.

**ಭಾವಾರ್ಥ:-** ವಾಯು, ಸೂರ್ಯರು ಹೇಗೆ ಸಂಪೂರ್ಣ ಜಗತ್ತಿನ ರಕ್ಷಕರೋ ಹಾಗೆಯೇ ಅಧ್ಯಾಪಕ ಉಪದೇಶಕರಾದ ನೀವಿಬ್ಬರೂ ವಿದ್ಯೆ ಶಿಕ್ಷಣಗಳಿಂದ ಸಂಪೂರ್ಣ ಜಗತ್ತಿನ ರಕ್ಷಕರಾಗಿರಿ.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಇಂದ್ರಾಗ್ನೀ ಜರಿತುಃ ಸಚಾ ಯಜ್ಞೋ ಜಿಗಾತಿ ಚೇತನಃ । ಅಯಾ ಪಾತಮಿಮಂ ಸುತಮ್ ॥೨॥**

**ಪದಾರ್ಥ:-** **[ಇಂದ್ರಾಗ್ನೀ]** ಧನವಂತರೂ ವಿದ್ಯಾವಂತರೂ ಆದ ಜನರೇ! **[ಚೇತನಃ]** ಉತ್ತಮ ರೀತಿಯ ಜ್ಞಾನವಂತರಾದ **[ಯಜ್ಞಃ]** ಪೂಜಾ ಯೋಗ್ಯರಾದ ನೀವಿಬ್ಬರೂ **[ಜಿಗಾತಿ]** ಪ್ರಾಪ್ತರಾಗಿರಿ. **[ಜರಿತುಃ]** ಸ್ತುತಿ ಮಾಡುವ ಪುರುಷರ **[ಸಚಾ]** ಸಂಬಂಧಿಯಾದ **[ಅಯಾ]** ಈ ವಿದ್ಯಾಪೂರ್ಣ ವಾಣಿಯಿಂದ **[ಇಮಂ]** **[ಸುತಂ]** ಈ ವರ್ತಮಾನ ಪ್ರಪಂಚವನ್ನು **[ಪಾತಂ]** ಪಾಲನೆ ಮಾಡಿರಿ.

**ಭಾವಾರ್ಥ:-** ಅಧ್ಯಾಪಕ ಉಪದೇಶಕರೇ! ಯಾವ ಮನುಷ್ಯರು ವಿದ್ಯೆಯ ಉಪದೇಶವನ್ನು ಪಡೆದುಕೊಳ್ಳುವುದಕ್ಕಾಗಿ ನಿಮ್ಮ ಸಮೀಪಕ್ಕೆ ಬಂದು ಶರಣಾಗುವರೋ, ಅವರನ್ನು ವಾಯು ಸೂರ್ಯರು ಜಗತ್ತಿನ ರಕ್ಷಣೆ ಮಾಡುವಂತೆ ನೀವೂ ನಿರಂತರ ರಕ್ಷಣೆ ಮಾಡಿರಿ.

ಈ ಮಂತ್ರದಲ್ಲಿ ಮನುಷ್ಯರ ಕಾರ್ಯವೇನು? ಎಂಬುದನ್ನು ತಿಳಿಸಲಾಗಿದೆ.

**ಇಂದ್ರಮಗ್ನಿಂ ಕವಿಚ್ಛದಾ ಯಜ್ಞಸ್ಯ ಜೂತ್ಯಾ ವೃಣೇ । ತಾ ಸೋಮಸ್ಯೇಹ ತೃಂಪತಾಮ್ ॥೩॥**

**ಪದಾರ್ಥ:-** **[ಜೂತ್ಯಾ]** ವೇಗಗತಿಯಲ್ಲಿರುವ **[ಕವಿಚ್ಛದಾ]** ವಿದ್ಯಾವಂತರ ಸಂಗ ಮಾಡುವವನಾದ **[ಇಂದ್ರಂ]** ದುಷ್ಟರ ದೋಷವನ್ನು ನಿವಾರಿಸುವವನಾದ **[ಅಗ್ನಿಂ]** ಅಗ್ನಿಯಂತೆ ದುಷ್ಟರನ್ನು ಭಸ್ಮ ಮಾಡುವವರಾದ ಜನರನ್ನು **[ವೃಣೇ]** ಸ್ವೀಕರಿಸುವೆನು. **[ತಾ]** ಅವರು **[ಇಹ]** ಈ ಪ್ರಪಂಚದಲ್ಲಿ **[ಸೋಮಸ್ಯ]** ಸಂಪತ್ತಿನ ಮತ್ತು **[ಯಜ್ಞಸ್ಯ]** ಧರ್ಮ ಸಂಬಂಧಿ ವ್ಯವಹಾರಗಳಲ್ಲಿ **[ತೃಂಪತಾಂ]** ಸುಖವನ್ನನುಭವಿಸಲಿ, ಎಲ್ಲರಿಗೂ ಸುಖವನ್ನು ನೀಡಲಿ.

**ಭಾವಾರ್ಥ:-** ಮನುಷ್ಯರು ಮೂರ್ಖರ ಸಹವಾಸವನ್ನು ತ್ಯಜಿಸಿ ವಿದ್ಯಾವಂತರ ಸಹವಾಸವನ್ನು ಬೆಳೆಸಿ ಉತ್ತಮ ಆಚರಣೆಯನ್ನು ಮಾಡುವುದರಿಂದ ಈ ಪ್ರಪಂಚದಲ್ಲಿ ಐಶ್ವರ್ಯವನ್ನು ಸಂಗ್ರಹಿಸಿ ಸದಾ ಆನಂದಮಯರಾಗಲಿ.

ರಾಜಧರ್ಮ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ತೋಶಾ ವೃತ್ರಹಣಾ ಹುವೇ ಸಜಿತ್ವಾನಾಪರಾಜಿತಾ । ಇಂದ್ರಾಗ್ನೀ ವಾಜಸಾತಮಾ ॥೪॥**

**ಪದಾರ್ಥ:-** **[ವೃತ್ರಹಣಾ]** ಅಸುರ ಸ್ವಭಾವದ ದುಷ್ಟರನ್ನು ನಾಶ ಮಾಡುವವನಾದ **[ಇಂದ್ರಾಗ್ನೀ]** ಸೂರ್ಯ ಮತ್ತು ವಿದ್ಯುತ್ತಿನ ರೂಪದಲ್ಲಿರುವ **[ತೋಶಾ]** ವೃದ್ಧಿ ಹೊಂದುವ / ವಿಜ್ಞಾನಶೀಲನಾದ **[ಸಜಿತ್ವಾನಾ]** ಜಯಶೀಲರಾದ ವೀರರೊಂದಿಗೆ ಇರುವವನು **[ಅಪರಾಜಿತಾ]** ಎಂದೂ ಪರಾಜಯವನ್ನು ಕಾಣದವನು **[ವಾಜಸಾತಮಾ]** ವಿಜ್ಞಾನ ಮತ್ತು ಧನಗಳನ್ನು ಅತಿಶಯವಾಗಿ ವಿಭಾಗ ಮಾಡುವವನೂ ಆದ ನಿನ್ನನ್ನು **[ಹುವೇ]** ಪ್ರಶಂಸೆ ಮಾಡುತ್ತೇನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಯಾವಾಗಲೂ ಶತ್ರುಗಳನ್ನು ಗೆಲ್ಲುತ್ತಾನೋ ಯಾವನನ್ನು ಶತ್ರುಗಳು ಸೋಲಿಸಲು ಸಾಧ್ಯವೇ ಇಲ್ಲವೋ ಪ್ರಜೆಗಳಿಗೆ ನ್ಯಾಯವನ್ನು ದೊರಕಿಸುತ್ತಾನೋ ಅಂತಹ ರಾಜಪುರುಷನನ್ನು ಗೌರವಪೂರ್ವಕವಾಗಿ ಸ್ವೀಕರಿಸಬೇಕು. ಅವನು ಯಾವಾಗಲೂ ವಿಜಯಿಯಾಗುತ್ತಾನೆ.

ಪುನಃ ಅದೇ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಪ್ರ ವಾಮರ್ಚಂತ್ಯುಕ್ಥಿನೋ ನೀಥಾವಿದೋ ಜರಿತಾರಃ । ಇಂದ್ರಾಗ್ನೀ ಇಷ ಆ ವೃಣೇ ॥೫॥**

**ಪದಾರ್ಥ:-** [ಇಂದ್ರಾಗ್ನೀ] ಮಿಂಚು ಮತ್ತು ಸೂರ್ಯನಂತೆ ಪ್ರಕಾಶಮಾನರಾದ ಸಭಾಪತಿ ಸೇನಾಧಿಪತಿಗಳೇ! [ನಿಥಾವಿದಃ] ನಮ್ರತೆಯಿಂದ ಕೂಡಿದವರೇ, **[ಉಕ್ಥಿನಃ]** ಉತ್ತಮ ಗುಣಗಳ ಪ್ರಶಂಸೆ ಮಾಡಲು **[ಜರಿತಾರಃ]** ಈಶ್ವರನ ಸ್ತುತಿ ಮಾಡುವವರು **[ವಾಂ]** ಆದ ನಿಮ್ಮಿಬ್ಬರನ್ನು **[ಪ್ರ, ಅರ್ಚಂತಿ]** ವಿಶೇಷ ರೀತಿಯಲ್ಲಿ ಸತ್ಕಾರ ಮಾಡುತ್ತಾರೆ. **[ಇಷಃ]** ಅನ್ನಾದಿಗಳನ್ನು **[ಆವೃಣೇ]** ಎಲ್ಲ ಕಡೆಗಳಿಂದಲೂ ಪಡೆದುಕೊಳ್ಳುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜ ಪುರುಷನು ಪೃಥಿವ್ಯಾದಿ ಪದಾರ್ಥಗಳ ಗುಣ, ಕರ್ಮ, ಸ್ವಭಾವಗಳನ್ನು ಚೆನ್ನಾಗಿ ತಿಳಿದುಕೊಂಡು ಯೋಗ್ಯ ರೀತಿಯಲ್ಲಿ ಉಪಯೋಗಿಸಿ ಕೊಳ್ಳುತ್ತಾನೋ ಅವನೇ ಯುದ್ಧ ಕ್ರಿಯೆ, ನ್ಯಾಯಾಚರಣೆ ಇವುಗಳನ್ನು ಸಮರ್ಥವಾಗಿ ಮಾಡಲು ಯೋಗ್ಯನಾಗಿರುತ್ತಾನೆ.

ಪುನಃ ಅದೇ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಇಂದ್ರಾಗ್ನೀ ನವತಿಂ ಪುರೋ ದಾಸಪತ್ನೀರಧೂನುತಮ್ । ಸಾಕಮೇಕೇನ ಕರ್ಮಣಾ ॥೬॥**

**ಪದಾರ್ಥ:-** [ಇಂದ್ರಾಗ್ನೀ] ವಾಯು ಮತ್ತು ಅಗ್ನಿಯರನ್ನು **[ಸಾಕಂ]** ಜೊತೆ ಜೊತೆಯಾಗಿ **[ಏಕೇನ]** **[ಕರ್ಮಣಾ]** ಒಂದೇ ಕರ್ಮದಿಂದ **[ನವತಿಂ]** ತೊಂಬತ್ತು ಸಂಖ್ಯೆಯನ್ನು ಒಳಗೊಂಡ **[ಪುರಃ]** ಪಾಲನೆ ಮಾಡುವವಳಾದ **[ದಾಸಪತ್ನೀಃ]** ಯುದ್ಧದಲ್ಲಿ ಶತ್ರುಗಳನ್ನು ನಿವಾರಿಸುವ ಪುರುಷರ ಸ್ತ್ರೀಯರಿಗೆ ಸಮನಾದ ಸೂರ್ಯನ ಕಿರಣಗಳು **[ಅಧೂನುತಂ]** ಹೇಗೆ ಕಂಪಿಸುತ್ತವೆಯೋ ಅದೇ ರೀತಿ ಸೇನಾಪತಿ ಸಭಾಪತಿಗಳಾದ ನೀವಿಬ್ಬರು ನಿಮ್ಮ ಸೇನಾದಿಗಳಿಂದ ಶತ್ರುಗಳು ಕಂಪಿಸುವಂತೆ ಮಾಡಿರಿ.

**ಭಾವಾರ್ಥ:-** ಸಭಾಧ್ಯಕ್ಷ, ಸೇನಾಪತಿ ಮುಂತಾದ ವೀರಪುರುಷರು, ಪರಸ್ಪರರು ಒಮ್ಮತದಿಂದ ದುಷ್ಟಪುರುಷರನ್ನು ಉತ್ತಮ ಸ್ಥಾನಗಳಿಂದ ದೂರಗೊಳಿಸಿ ಶ್ರೇಷ್ಠ ಪುರುಷರ ಸತ್ಕಾರ ಮಾಡಿ ಧರ್ಮ ಪೂರ್ವಕವಾದ ವ್ಯವಹಾರದಿಂದ ರಾಜ್ಯವನ್ನು ಸುವ್ಯವಸ್ಥಿತಗೊಳಿಸಬೇಕು.

ಮನುಷ್ಯರು ಏನು ಮಾಡಬೇಕೆಂಬ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಇಂದ್ರಾಗ್ನೀ ಅಪಸಸ್ಪರ್ಯುಪ ಪ್ರ ಯಂತಿ ಧೀತಯಃ । ಋತಸ್ಯ ಪಥ್ಯಾ (ಅ) ೩ ಅನು ॥೭॥**

**ಪದಾರ್ಥ:-** [ಇಂದ್ರಾಗ್ನೀ] ಗಾಳಿ ಮತ್ತು ಮಿಂಚುಗಳು [ಋತಸ್ಯ] ಸತ್ಯದ [ಅಪಸಃ] ಕರ್ಮಗಳ [ಪರಿ] ಸುತ್ತಲಿನಿಂದ [ಪಥ್ಯಾಃ] ಮಾರ್ಗದಲ್ಲಿ ಸುಖಕರ ದಾಳಿಯ [ಅನು] ಅನುಕೂಲಕರವಾಗಿ ಹೋಗುತ್ತಿರುವ ಗಾಳಿ-ಮಿಂಚಿನ ಗತಿಯ [ಧೀತಯಃ] ಬೆರಳುಗಳಿಗೆ ಸಮನಾದ [ಉಪ] ಸಮೀಪದಲ್ಲಿ [ಪ್ರ, ಯಂತಿ] ಪ್ರಾಪ್ತವಾಗುತ್ತದೆಯೋ ಅದೇ ರೀತಿ ನೀವೆಲ್ಲರೂ ಶ್ರೇಷ್ಠ ಮಾರ್ಗದಲ್ಲಿ ನಿಯಮವರಿತು ಚಲಿಸುವವರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಭಗವಂತನ ಸೃಷ್ಟಿಯಲ್ಲಿ ಸೂರ್ಯಾದಿ ಪದಾರ್ಥಗಳು ನಿಯತವಾದ ಗತಿಯಲ್ಲಿ ತಮ್ಮ ತಮ್ಮ ಮಾರ್ಗಗಳಲ್ಲಿ / ದಾರಿಯಲ್ಲಿ ಚಲಿಸುತ್ತವೆಯೋ ಅದೇ ರೀತಿ ಮನುಷ್ಯರಾದ ನೀವೆಲ್ಲರೂ ಧರ್ಮಯುಕ್ತ ದಾರಿಯಲ್ಲಿ ಚಲಿಸುವವರಾಗಬೇಕು.

ಈ ಮಂತ್ರದಲ್ಲಿ ರಾಜಧರ್ಮದ ವಿಷಯವಾಗಿ ಹೇಳಲಾಗಿದೆ.

**ಇಂದ್ರಾಗ್ನೀ ತವಿಷಾಣಿ ವಾಂ ಸಧಸ್ಥಾನಿ ಪ್ರಯಾಂಸಿ ಚ । ಯುವೋರಪ್ತೂರ್ಯಂ ಹಿತಮ್ ॥೮॥**

**ಪದಾರ್ಥ:-** [ಇಂದ್ರಾಗ್ನೀ] ಗಾಳಿ ಮಿಂಚುಗಳು ಹೇಗೆ ಜೊತೆ ಜೊತೆಯಾಗಿ ಕೆಲಸ ಮಾಡುತ್ತವೆಯೋ ಅದೇರೀತಿ ಚಲಿಸುವ ಸೇನೆ ಮತ್ತು ಸೇನಾಪತಿಗಳೇ! [ವಾಂ] ನೀವಿಬ್ಬರು [ಸಧಸ್ಥಾನಿ] ಸಮಾನ ಸ್ಥಾನದಲ್ಲಿ ಇರುವವರಾಗಿ [ಪ್ರಯಾಂಸಿ] ಬಯಸಲು ಯೋಗ್ಯವಾದ [ತವಿಷಾಣಿ] ಬಲ ಪರಾಕ್ರಮಗಳನ್ನು [ಚ] ಮತ್ತು [ಯುವೋಃ] ನಿಮ್ಮಿಬ್ಬರ [ಅಪ್ತೂರ್ಯಂ] ಕರ್ಮಗಳನ್ನು ಶೀಘ್ರಗತಿಯಲ್ಲಿ ಮಾಡಲು [ಹಿತಂ] ಸುಖ ಸಾಧಕರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಾಯು ಮತ್ತು ಮಿಂಚುಗಳು ಪರಸ್ಪರ ಸಹಯೋಗದಿಂದ ಹೇಗೆ ಕೆಲಸ ಮಾಡುತ್ತವೆಯೋ, ಅದೇ ರೀತಿ ಸೇನೆ ಮತ್ತು ಸೇನಾಪತಿಗಳಿಬ್ಬರೂ ಪ್ರೇಮ ಭಾವದಿಂದ ವಿರೋಧ ತ್ಯಜಿಸಿ ವ್ಯವಹರಿಸಿದರೆ ಸಂಪೂರ್ಣ ಮನೋರಥವು ಸಿದ್ಧವಾಗುತ್ತದೆ.

ಮತ್ತೆ ಅದೇ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಇಂದ್ರಾಗ್ನೀ ರೋಚನಾ ದಿವಃ ಪರಿ ವಾಜೇಷು ಭೂಷಥಃ । ತದ್ವಾಂ ಚೇತಿ ಪ್ರ ವೀರ್ಯಮ್ ॥೯॥**

**ಪದಾರ್ಥ:-** [ಇಂದ್ರಾಗ್ನೀ] ಗಾಳಿ ಮಿಂಚುಗಳು [ದಿವಃ] ಬೆಳಕಿನ ಮಧ್ಯದಲ್ಲಿ [ರೋಚನಾ] ಪ್ರೀತಿಕಾರಕ ಕಾರ್ಯಗಳನ್ನು [ಪರಿ] ಎಲ್ಲ ಕಡೆಗಳಿಂದ [ಭೂಷಥಃ] ಶೋಭಾಯಮಾನಗೊಳಿಸುತ್ತವೆಯೋ ಹಾಗೆ [ವಾಜೇಷು] ಯುದ್ಧದಲ್ಲಿ ವಿಜಯಿಗಳಾದ ಸೇನಾಪುರುಷರು ನಿಮ್ಮಿಬ್ಬರನ್ನು ಸುಶೋಭಿತರನ್ನಾಗಿ ಮಾಡಲು [ತತ್] ಆ ಕೆಲಸವು [ವಾಂ] ನಿಮ್ಮಿಬ್ಬರ [ಪ್ರ], [ವೀರ್ಯಂ] ಉತ್ತಮ ಪರಾಕ್ರಮವನ್ನು [ಚೇತಿ] ಚೆನ್ನಾಗಿ ಅರಿತುಕೊಳ್ಳುವರು.

**ಭಾವಾರ್ಥ:-** ಯಾವ ರಾಜ ಪುರುಷರು ರಾಜಕಾರ್ಯದಲ್ಲಿ ಎಲ್ಲ ರೀತಿಯ ನಿಪುಣತೆ ತೋರುತ್ತ ಸೇನೆ ಮತ್ತು ಸೇನಾಪತಿಯರನ್ನು ಅವರವರ ಅಧಿಕಾರದಲ್ಲಿ ಆಯ್ಕೆ ಮಾಡಿಕೊಳ್ಳುತ್ತಾರೋ ಅಂತಹ ಜನರ ಜೀವಿತ ಕಾಲವು ವಿಜಯದಲ್ಲಿಯೇ ಕಳೆಯುತ್ತದೆ.

ಈ ಸೂಕ್ತದಲ್ಲಿ ಇಂದ್ರ, ಅಗ್ನಿ, ಅಧ್ಯಾಪಕ, ಉಪದೇಶಕ ಹಾಗೂ ಸೇನೆ, ಸೇನಾನಾಯಕರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತದ ಅರ್ಥದೊಂದಿಗೆ ಸಂಗತಿಯಾಗಿದೆ ಎಂಬುದನ್ನು ಅರಿತುಕೊಳ್ಳಬೇಕು.

**ಹನ್ನೆರಡನೆಯ ಸೂಕ್ತ ಸಮಾಪ್ತ**

## ಸೂಕ್ತ ೧೩

ಮಂತ್ರಸಂಖ್ಯೆ ೭ । ಋಷಭೋ ವೈಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ ೧ ಭೂರಿಗುಷ್ಣಿಕ್ ಛಂದಃ । ಋಷಭಃ ಸ್ವರಃ ।

೨, ೩, ೫-೭ ನಿಚೃತ್ ಅನುಷ್ಟುಪ್ ಛಂದಃ । ೪ ವಿರಾಡನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ವಿದ್ವಾಂಸರ ಕಾರ್ಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಪ್ರ ವೋ ದೇವಾಯಾಗ್ನಯೇ ಬರ್ಹಿಷ್ಠಮರ್ಚಾಸ್ಮೈ ।**
**ಗಮದ್ದೇವೇಭಿರಾ ಸ ನೋ ಯಜಿಷ್ಠೋ ಬರ್ಹಿರಾ ಸದತ್ ॥೧॥**

**ಪದಾರ್ಥ:-** **[ದೇವೇಭಿಃ]** ಯಾವ ಮನುಷ್ಯರು ಉತ್ತಮ ಗುಣಗಳೊಂದಿಗೆ **[ಅಸ್ಮೈ]** **[ದೇವಾಯ]** ಈ ದಿವ್ಯ ಗುಣ ಸಂಪನ್ನನಾದ **[ಅಗ್ನಯೇ]** ಅಗ್ನಿಯಂತೆ ತೇಜಸ್ವಿಯಾದವನಿಗೆ **[ವಃ]** ನಿಮ್ಮನ್ನು **[ಆ, ಗಮತ್]** ಎಲ್ಲ ರೀತಿಯಿಂದಲೂ ಪಡೆದುಕೊಳ್ಳುವಂತಾಗಲಿ. **[ಬರ್ಹಿಷ್ಠಂ]** ಯಜ್ಞದಲ್ಲಿ ಆಸೀನನಾಗುವವನ **[ಪ್ರ, ಅರ್ಚ]** ಸತ್ಕಾರವನ್ನು ವಿಶೇಷ ರೀತಿಯಲ್ಲಿ ಮಾಡು. **[ಸಃ]** ಅವನು **[ಯಜಿಷ್ಠಃ]** ಅತಿಶಯ ಯಜ್ಞ ಮಾಡುವವನು **[ನಃ]** ನಮ್ಮೆಲ್ಲರಿಗೆ **[ಬರ್ಹಿಃ]** ಅಂತರಿಕ್ಷದಲ್ಲಿ **[ಆ, ಸದತ್]** ಪ್ರಾಪ್ತನಾಗುವಂತಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲೈ ಮನುಷ್ಯರೇ! ಯಾರು ನಿಮ್ಮನ್ನು ಗೌರವಿಸುವರೋ ನೀವೂ ಅವರನ್ನು ಗೌರವಿಸಿರಿ. ವಿದ್ಯಾವಂತರು ಹೇಗೆ ವಿದ್ವಜ್ಜನರಿಗೆ / ವಿದ್ವಾಂಸರಿಗೆ ವಿಧಿಯುಕ್ತವಾಗಿ ಶುಭಗುಣಗಳ ಗ್ರಹಣ ಮಾಡಿಸುತ್ತಾರೋ ಅಂತಹ ವಿದ್ಯಾವಂತರ ಗೌರವವನ್ನು ನೀವೂ ಮಾಡಿರಿ. ಮತ್ತು ನಮ್ಮೆಲ್ಲರಿಗೂ ಸಹ ಹಾಗೆಯೇ ಉತ್ತಮ ಗುಣಗಳನ್ನು ಗ್ರಹಣ ಮಾಡಿಸಿರಿ ಎಂಬ ಇಚ್ಛೆಯನ್ನು ಪ್ರಕಟಿಸಿರಿ.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಋತಾವಾ ಯಸ್ಯ ರೋದಸೀ ದಕ್ಷಂ ಸಚಂತ ಊತಯಃ ।**
**ಹವಿಷ್ಮಂತಸ್ತಮೀಳತೇ ತಂ ಸನಿಷ್ಯಂತೋಽವಸೇ ॥೨॥**

**ಪದಾರ್ಥ:-** **[ಋತಾವಾ]** ಸತ್ಯದ ಪ್ರಾರ್ಥನೆಯನ್ನು ಮಾಡುವ ನೀವು **[ಯಸ್ಯ]** ಯಾವನ ಪರಾಕ್ರಮವನ್ನು / ಚತುರತೆಯನ್ನು **[ಊತಯಃ]** ರಕ್ಷಣೆ ಮಾಡುವ ಗುಣವನ್ನು **[ರೋದಸಿ]** ಅಂತರಿಕ್ಷ ಮತ್ತು ಭೂಮಿಯನ್ನು

[ಸಚಂತೇ] ಸಂಬಂಧಗೊಳಿಸುತ್ತಾರೆ. ಅಂದರೆ ಅದರಲ್ಲಿ ವ್ಯಾಪ್ತವಾಗುವಂತೆ ಮಾಡುತ್ತಾರೆ. [ತಂ] ಅದರ [ಹವಿಷ್ಮಂತಃ] ಪ್ರಶಂಸನೀಯ ದಾನಶೀಲ ಜನರಿಗೆ ಸಂಬಂಧಿಸಿದ [ತಂ] ಅದನ್ನು [ಅವಸೇ] ರಕ್ಷಣಾದಿಗಳಿಗಾಗಿ [ಸನಿಷ್ಯಂತಃ] ಸೇವನೆ ಮಾಡುವ ಜನರು [ಈಳತೇ] ಸ್ತುತಿ ಮಾಡುವರು. ನೀವೂ ಅವರ ಪ್ರಶಂಸೆಯನ್ನು ಮಾಡಿರಿ.

**ಭಾವಾರ್ಥ:-** ಎಲೈ ಮನುಷ್ಯರೇ! ಯಾರ ಕೀರ್ತಿಯು ಭೂಮ್ಯಾಕಾಶಗಳಲ್ಲಿ ವ್ಯಾಪಕವಾಗಿ ಹರಡಿದೆಯೋ, ಯಾವನ ಕೆಲಸವು ನ್ಯಾಯಸಮ್ಮತವೂ ರಕ್ಷಣಾದಿರೂಪವೂ ಆಗಿರುತ್ತದೆಯೋ ಅಂತಹ ವಿದ್ಯಾವಂತ ಸಭಾಪತಿಯ ರಕ್ಷಣೆಗಾಗಿ ಆಶ್ರಯವನ್ನು ನೀವು ಮಾಡಿರಿ.

ಈ ಮಂತ್ರದಲ್ಲಿ ಮತ್ತೆ ಅದೇ ವಿಚಾರವನ್ನು ತಿಳಿಸಲಾಗಿದೆ.

**ಸ ಯಂತಾ ವಿಪ್ರ ಏಷಾಂ ಸ ಯಜ್ಞಾನಾಮಥಾ ಹಿ ಷಃ ।**
**ಅಗ್ನಿಂ ತಂ ವೋ ದುವಸ್ಯತ ದಾತಾ ಯೋ ವನಿತಾ ಮಘಮ್ ॥೩॥**

**ಪದಾರ್ಥ:-** [ಯಃ] ಯಾವ [ವಿಪ್ರಃ] ಬುದ್ಧಿವಂತ ಪುರುಷನು [ಏಷಾಂ] ಈ ಉತ್ತಮ ವಿದ್ಯಾ ಶಿಕ್ಷಣ ಸಂಪನ್ನನು [ಯಜ್ಞಾನಾಂ] ಮಾಡಲು ಯೋಗ್ಯವಾದ ವ್ಯವಹಾರಗಳ ಮತ್ತು [ವಃ] ನಿಮ್ಮೆಲ್ಲರ [ಯಂತಾ] ಕುಮಾರ್ಗಗಳನ್ನು ನಿವಾರಣೆ ಮಾಡುವವನು [ದಾತಾ] ದಾನಶೀಲನು [ವನಿತಾ] ಯಾಚಿಸುವವನು [ತಂ] [ಅಗ್ನಿಂ] ಅಗ್ನಿಗೆ ಸದೃಶನಾಗಿ ತೇಜಸ್ವಿಯಾದ ಆ ತೇಜಸ್ಸಿನಿಂದ ಪ್ರಾಪ್ತವಾದ [ಮಘಂ] ಶ್ರೇಷ್ಠವಾದ ಸಂಪತ್ತನ್ನು [ದುವಸ್ಯತ] ಸೇವಿಸುವವರಾಗಿರಿ. [ಸಃ] ಅವನು [ಹಿ] ಯಾವುದರಿಂದ ಸ್ವಯಂ ಜಿತೇಂದ್ರಿಯನಾಗಿರುವನೋ [ಸಃ] ಯಾವನು ಸ್ವಯಂ ಬುದ್ಧಿವಂತನಾಗಿರುವನೋ [ಅಥ] ಅನಂತರ [ಸಃ] ಅವನು ದಾನಶೀಲನೂ ಯಜ್ಞಶೀಲನೂ ಉತ್ತಮ ಗುಣಗಳ ಯಾಚಕನೂ ಆಗುವನು.

**ಭಾವಾರ್ಥ:-** ಎಲೈ ಮನುಷ್ಯರೇ! ಯಾವ ಮನುಷ್ಯನು ಸ್ವಯಂ ಧರ್ಮಾತ್ಮನೂ, ಜಿತೇಂದ್ರಿಯನೂ, ಸತ್ಯಪ್ರಚಾರಕನೂ, ಶ್ರೇಷ್ಠ ಗುಣಗಳ ಆದಾನ ಪ್ರದಾನ ಮಾಡುವವನೂ, ತನ್ನ ಸ್ವಭಾವವನ್ನೇ ಧರ್ಮ ಮಾರ್ಗದಲ್ಲಿ ಪ್ರವೃತ್ತಿಗೊಳಿಸುವವನೂ ಆಗಿರುತ್ತಾನೆಯೋ ಅವನನ್ನು ಎಲ್ಲ ರೀತಿಯಿಂದಲೂ ಸೇವಿಸುವವರಾಗಿರಿ.

ಈ ಮಂತ್ರದಲ್ಲಿ ಅದೇ ವಿಚಾರವನ್ನು ತಿಳಿಸಲಾಗಿದೆ.

**ಸ ನಃ ಶರ್ಮಾಣಿ ವೀತಯೇಽಗ್ನಿರ್ಯಚ್ಛತು ಶಂತಮಾ ।**
**ಯತೋ ನಃ ಪ್ರುಷ್ಣವದ್ವಸು ದಿವಿ ಕ್ಷಿತಿಭ್ಯೋ ಅಪ್ಸ್ವಾ ॥೪॥**

**ಪದಾರ್ಥ:-** [ಸಃ] ಹಿಂದೆ ತಿಳಿಸಿದ ಆ ವಿದ್ಯಾವಂತನು [ಅಗ್ನಿಃ] ಅಗ್ನಿಯಂತೆ [ವೀತಯೇ] ವಿಜ್ಞಾನಾದಿ ಸಂಪತ್ತಿಗಾಗಿ [ನಃ] ನಮ್ಮನ್ನು [ಶಂತಮಾ] ಅತಿಶಯ ಕಲ್ಯಾಣಕಾರಕವಾದ [ಶರ್ಮಾಣಿ] ಉತ್ತಮ ಮನೆಗಳನ್ನು [ಕ್ಷಿತಿಭ್ಯಃ] ಭೂಮಿಯಲ್ಲಿ ವಿರಾಜಮಾನವಾದ ದೇಶಗಳಲ್ಲಿ [ದಿವಿ] ಬೆಳಕಿನಲ್ಲಿ [ಅಪ್ಸು] ಪ್ರಾಣ / ನೀರು / ಅಂತರಿಕ್ಷದಲ್ಲಿ [ಆ] [ಯಚ್ಛತು] ಆಕಾಶದಲ್ಲಿ ಎಲ್ಲ ಕಡೆಗಳಿಂದಲೂ ಕೊಡುವವನಾಗಲಿ, [ಯತಃ] ಯಾವುದರಿಂದ ನಮ್ಮೆಲ್ಲರಿಗೆ [ಪ್ರುಷ್ಣವತ್] ಉತ್ತಮ ಸಂಪನ್ಮೂಲಗಳಿರುವ [ವಸು] ಧನರಾಶಿಗಳನ್ನು ಧಾರಣ ಮಾಡಿಸಲಿ.

**ಭಾವಾರ್ಥ:-** ಗೃಹಸ್ಥರು ಯಾವಾಗಲೂ ಸುಖವನ್ನು ನೀಡುವಂತಹ ಮನೆಗಳನ್ನು ನಿರ್ಮಾಣ ಮಾಡಿಕೊಳ್ಳಬೇಕು. ಜಲ, ಸ್ಥಳ, ಅಂತರಿಕ್ಷಗಳಲ್ಲಿ ಸಂಚಾರಕ್ಕೆ ಅನುಕೂಲವಾಗುವಂತಹ ವಾಹನಗಳನ್ನು ನಿರ್ಮಾಣ ಮಾಡಿಕೊಳ್ಳಬೇಕು.

ಅನ್ಯಯಂತ್ರಾದಿ ಸಾಧನಗಳನ್ನು ರಚಿಸಿಕೊಂಡು ಸಮೃದ್ಧಿಯನ್ನು ಸಂಪಾದಿಸಿ ಮತ್ತೆ ಅದರಿಂದ ತಮ್ಮ ವಿಜ್ಞಾನವನ್ನು ಬೆಳೆಸಿಕೊಳ್ಳಬೇಕು.

ಪುನಃ ಮನುಷ್ಯರು ಏನು ಮಾಡಬೇಕೆಂಬುದನ್ನು ಇಲ್ಲಿ ತಿಳಿಸಲಾಗಿದೆ.

**ದೀದಿವಾಂಸಮಪೂರ್ವ್ಯಂ ವಸ್ವೀಭಿರಸ್ಯ ಧೀತಿಭಿಃ ।**
**ಋಕ್ವಾಣೋ ಅಗ್ನಿಮಿಂಧತೇ ಹೋತಾರಂ ವಿಶ್ಪತಿಂ ವಿಶಾಮ್ ॥೫॥**

**ಪದಾರ್ಥ:-** **[ಋಕ್ವಾಣಃ]** ಯಾವನು ಸ್ತುತಿ ಯೋಗ್ಯವಾದ ಗುಣಗಳಿಂದ ಸ್ತುತಿ ಮಾಡುತ್ತಾನೋ **[ಧೀತಿಭಿಃ]** ಬೆರಳುಗಳಿಗೆ ಸದೃಶವಾಗಿ **[ವಸ್ವೀಭಿಃ]** ಧನ ಪ್ರಾಪ್ತಿಗೊಳಿಸುವಂತಹ ಕಾರ್ಯಗಳಿಂದ **[ಅಸ್ಯ]** ಈ ಪ್ರಪಂಚದ ಮಧ್ಯದಲ್ಲಿ **[ಅಗ್ನಿಂ]** ಅಗ್ನಿಗೆ ಸಮನಾಗಿರುವ **[ದೀದಿವಾಂಸಂ]** ಉತ್ತಮ ಗುಣಗಳಿಂದ ಶೋಭಿಸುತ್ತಲಿರುವ **[ಅಪೂರ್ವ್ಯಂ]** ಹಿಂದೆಂದೂ ಕಾಣದ ಶ್ರೇಷ್ಠ ಗುಣಗಳಲ್ಲಿ ನಿಪುಣನಾದ **[ಹೋತಾರಂ]** ಸುಖದಾಯಕನಾದ **[ವಿಶಾಂ]** ಪ್ರಜೆಗಳ ಮಧ್ಯದಲ್ಲಿ **[ವಿಶ್ಪತಿಂ]** ವಿಶಿಷ್ಟ ಜನರ ಪಾಲನೆ ಮಾಡುವವನಾದ ಮನುಷ್ಯನನ್ನು **[ಇಂಧತೇ]** ಪ್ರಕಟಗೊಳಿಸುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲೈ ಮನುಷ್ಯರೇ! ನೀವೆಲ್ಲರೂ ಈ ಪ್ರಪಂಚದಲ್ಲಿ ಶ್ರೇಷ್ಠ ಪುರುಷನ ಆಶ್ರಯವನ್ನು ಪಡೆದುಕೊಳ್ಳಬೇಕು. ದುಷ್ಟರ ಸಹವಾಸವನ್ನು ತ್ಯಜಿಸಬೇಕು. ವಿದ್ಯಾಧನವನ್ನು ವೃದ್ಧಿಪಡಿಸಿಕೊಳ್ಳಬೇಕು. ವಿದ್ಯಾವಿನಯ ಸಂಪನ್ನನಾದ ರಾಜನನ್ನು ಆಯ್ಕೆ ಮಾಡಿಕೊಳ್ಳಬೇಕು. ಅವನನ್ನೇ ಸೇವಿಸಬೇಕು.

ಅದೇ ವಿಷಯವನ್ನು ಮತ್ತೆ ಇಲ್ಲಿ ತಿಳಿಸಲಾಗಿದೆ.

**ಉತ ನೋ ಬ್ರಹ್ಮನ್ನವಿಷ ಉಕ್ಥೇಷು ದೇವಹೂತಮಃ ।**
**ಶಂ ನಃ ಶೋಚಾ ಮರುದ್ವೃಧೋऽಗ್ನೇ ಸಹಸ್ರಸಾತಮಃ ॥೬॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಕೀರ್ತಿಯಿಂದ ಶೋಭಿಸುತ್ತಿರುವವನೇ! **[ಬ್ರಹ್ಮನ್]** ಧನ ಮತ್ತು **[ಉಕ್ಥೇಷು]** ಪ್ರಶಂಸನೀಯ ಪದಾರ್ಥಗಳ ಕಾರಣದಿಂದಾಗಿ **[ನಃ]** **[ಆವಿಷಃ]** ನಮ್ಮನ್ನು ಒಂದುಗೂಡಿಸು. **[ಉತ]** ಮತ್ತು **[ದೇವಹೂತಮಃ]** ವಿದ್ಯಾವಂತರಿಂದ ಪ್ರಶಂಸೆಯನ್ನು ಪಡೆದು **[ಸಹಸ್ರಸಾತಮಃ]** ಅಸಂಖ್ಯಾತ ಉಪದೇಶಗಳನ್ನು / ಗಣನೆಗೆ ಎಟುಕದ ಸಂಪತ್ತನ್ನು ಪಡೆದಿರುವ ನೀನು **[ಮರುದ್ವೃಧಃ]** ಮನುಷ್ಯರಿಗಿಂತಲೂ ವೃದ್ಧಿ ಹೊಂದುತ್ತ **[ನಃ]** ನಮ್ಮೆಲ್ಲರ **[ಶಂ]** **[ಶೋಚ]** ಸುಖದ ಬಗ್ಗೆ ವಿಚಾರ ಮಾಡು. ಸುಖವನ್ನು ಪಡೆದುಕೋ.

**ಭಾವಾರ್ಥ:-** ಮನುಷ್ಯರು ಮೊದಲು ವಿದ್ಯಾವಂತರ ಆಶ್ರಯವನ್ನು ಪಡೆದು ಬ್ರಹ್ಮಚರ್ಯ ಪಾಲನೆ ಮಾಡುತ್ತ ವಿದ್ಯಾದಿಗಳ ಗ್ರಹಣ ಮಾಡಬೇಕು. ಅನಂತರ ಧನ ಐಶ್ವರ್ಯಗಳ ವೃದ್ಧಿಗೆ ಬೇಕಾಗುವ ಉಪಾಯಗಳನ್ನು ಪ್ರಾರ್ಥಿಸಿಕೊಳ್ಳಬೇಕು. ಅನಂತರ ಧನ ಸಂಪತ್ತುಗಳನ್ನು ಪಡೆದು ವಿದ್ಯಾವಂತರು ಆಚರಿಸುವಂತಹ ಶ್ರೇಷ್ಠ ಮಾರ್ಗಗಳಲ್ಲಿ ತಾನು ಗಳಿಸಿದ ಸಂಪತ್ತನ್ನು ವ್ಯಯಿಸಬೇಕು.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ನೂ ನೋ ರಾಸ್ವ ಸಹಸ್ರವ-ತ್ತೋಕವತ್ ಪುಷ್ಟಿಮದ್ವಸು ।**
**ದ್ಯುಮದಗ್ನೇ ಸುವೀರ್ಯಂ ವರ್ಷಿಷ್ಠಮನುಪಕ್ಷಿತಮ್ ॥೭॥**

**ಪದಾರ್ಥ:-** **[ಅಗ್ನೇ]** ಜಗದೀಶ್ವರನೇ/ವಿದ್ಯಾವಂತನೇ! **[ನಃ]** ನಮ್ಮೆಲ್ಲರಿಗಾಗಿ **[ಸಹಸ್ರವತ್]** ಅಸಂಖ್ಯಾತ ಸಂಖ್ಯೆಗಳಲ್ಲಿರುವಂತೆ **[ತೋಕವತ್]** ಪ್ರಶಂಸಾರ್ಹ ಸಂತಾನಗಳಿರುವಂತೆ **[ಪುಷ್ಟಮತ್]** ಬಹುರೀತಿಯ ಸಮೃದ್ಧಿ ಒಳಗೊಂಡಂತೆ **[ಸುವೀರ್ಯಂ]** ಪ್ರಚಂಡ ಬಲವನ್ನು ಬೆಳೆಸಿಕೊಳ್ಳುವವನಾದ **[ದ್ಯುತಂ]** ಜ್ಞಾನದಿಂದ ಬೆಳಗುತ್ತಲಿರುವ **[ವರ್ಷಿಷ್ಠಂ]** ಅತಿಶಯ ಸಮೃದ್ಧಿಯಿಂದ ಕೂಡಿದ **[ಅನುಪಕ್ಷಿತಂ]** ಖರ್ಚು ಮಾಡುವುದರಿಂದ ಕಡಿಮೆಯಾಗದಂತಹ **[ವಸು]** ವಿದ್ಯಾಧನವನ್ನು **[ನು]** **[ರಾಸ್ವ]** ಶೀಘ್ರವಾಗಿ ಪ್ರಾಪ್ತಿಗೊಳಿಸು.

**ಭಾವಾರ್ಥ:-** ಮನುಷ್ಯರು ಪರಮೈಶ್ವರ್ಯ ಸಂಪನ್ನ ಭಗವಂತನನ್ನು ಅಥವಾ ತತ್ವದೃಶನಾದ ವಿದ್ಯಾವಂತನನ್ನು, ಪ್ರಾಪ್ತಿಗೆ ಯೋಗ್ಯವಾದ ವಿದ್ಯೆ, ಐಶ್ವರ್ಯ, ಉತ್ತಮ ಸಂತಾನ, ಶ್ರೇಷ್ಠಬಲ, ಪುರುಷಾರ್ಥದಿಂದ ಏಳಿಗೆ ಇವೆಲ್ಲವೂ ಶೀಘ್ರವಾಗಿ ಲಭಿಸುವಂತೆ ಮತ್ತು ವೃದ್ಧಿ ಹೊಂದುವಂತೆ ಪ್ರಾರ್ಥಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ವಿದ್ಯಾವಂತರ ಮತ್ತು ಅಗ್ನಿಯ ಗುಣ ವರ್ಣನೆಗಳಿರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತದ ಅರ್ಥದೊಂದಿಗೆ ಸಂಗತವಾಗಿರುತ್ತದೆ.

**ಹದಿಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೧೪

ಮಂತ್ರಸಂಖ್ಯೆ ೭ । ಋಷಭೋ ವೈಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧, ೭ ನಿಚೃತ್ ತ್ರಿಷ್ಟುಪ್, ೨, ೫ ತ್ರಿಷ್ಟುಪ್, ೩, ೪ ವಿರಾಟ್ ತ್ರಿಷ್ಟುಪ್ ಛಂದಃ । ಗಾಂಧಾರ ಸ್ವರಃ । ೬ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಶಿಲ್ಪವಿದ್ಯಾ ವಿಷಯವನ್ನು ಹೇಳಲಾಗಿದೆ.

**ಆ ಹೋತಾ ಮಂದ್ರೋ ವಿದಥಾನ್ಯಸ್ಥಾತ್ ಸತ್ಯೋ ಯಜ್ವಾ ಕವಿತಮಃ ಸ ವೇಧಾಃ ।**
**ವಿದ್ಯುದ್ರಥಃ ಸಹಸಸ್ಪುತ್ರೋ ಅಗ್ನಿಃ ಶೋಚಿಷ್ಕೇಶಃ ಪೃಥಿವ್ಯಾಂ ಪಾಜೋ ಅಶ್ರೇತ್ ॥೧॥**

**ಪದಾರ್ಥ:-** **[ಮಂದ್ರಃ]** ಉತ್ತಮಗೊಳಿಸಲು ಮತ್ತು ಪ್ರಸನ್ನಗೊಳಿಸಲು **[ಸತ್ಯಃ]** ಶ್ರೇಷ್ಠ ಪುರುಷರನ್ನು ಗೌರವಿಸಲು **[ಯಜ್ವಾ]** ಸಂಗತಿಕರಣಗೊಳಿಸಲು **[ಹೋತಾ]** ವಿದ್ಯಾದಾನವನ್ನು ಮಾಡುವವನಾದ **[ಕವಿತಮಃ]** ವಿದ್ಯಾವಂತನಾದ **[ವೇಧಾಃ]** ಬುದ್ಧಿವಂತ ಪುರುಷನು **[ಸಃ]** ಅವನು **[ವಿದಥಾನಿ]** ವಿಜ್ಞಾನಗಳನ್ನು **[ಆ, ಅಸ್ಥಾತ್]** ಪಡೆದುಕೊಂಡು ಸೃಜನಗೊಳಿಸಲಿ. **[ವಿದ್ಯುದ್ರಥಃ]** ಮಿಂಚಿನಿಂದ ರಥವನ್ನು ನಡೆಸುವವನು **[ಸಹಸಃ]** ಬಲಿಷ್ಠವಾಯುವಿನ **[ಪುತ್ರಃ]** ಸಂತಾನದಂತೆ **[ಶೋಚಿಷ್ಕೇಶಃ]** ಕೇಶರಾಶಿಗಳಂತೆ ತೇಜಸ್ಸನ್ನು ಧರಿಸಿರುವ **[ಅಗ್ನಿಃ]** ಅಗ್ನಿಯಂತೆ ತೇಜಸ್ವಿಯಾದವನು **[ಪೃಥಿವ್ಯಾಂ]** ಭೂಮಿಯಲ್ಲಿ **[ಪಾಜಃ]** **[ಅಶ್ರೇತ್]** ಬಲವನ್ನು ಆಶ್ರಯಿಸಲಿ, ಅದರಿಂದ ವೈಮಾನಿಕ ವಿದ್ಯೆಯನ್ನು ಮತ್ತು ಶಿಲ್ಪ ವಿದ್ಯೆಯನ್ನು ಅರಿತು ಕುಶಲನಾಗಲಿ.

**ಭಾವಾರ್ಥ:-** ಯಾವ ಮನುಷ್ಯನು ಪದಾರ್ಥ ವಿದ್ಯೆಯಲ್ಲಿ ಕುಶಲನಾಗಿದ್ದು ಕರಕುಶಲ ಕೆಲಸದಿಂದ ಯಂತ್ರಕಲೆಯನ್ನು ಸಿದ್ಧಗೊಳಿಸಿಕೊಂಡು ಮಿಂಚಿನಿಂದ ಚಲಿಸಲು ಯೋಗ್ಯವಾದ ರಥಾದಿ ವಾಹನಗಳನ್ನು ತಯಾರಿಸಿಕೊಂಡರೆ ಅದರಿಂದ ಅತ್ಯಂತ ಸುಖವನ್ನು ಪಡೆದುಕೊಳ್ಳಬಹುದು.

ಅಧ್ಯಯನ ಅಧ್ಯಾಪನದ ವಿಚಾರವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಅಯಾಮಿ ತೇ ನಮಉಕ್ತಿಂ ಜುಷಸ್ವ ಋತಾವಸ್ತುಭ್ಯಂ ಚೇತತೇ ಸಹಸ್ವಃ ।**
**ವಿದ್ವಾँ ಆ ವಕ್ಷಿ ವಿದುಷೋ ನಿ ಷತ್ಸಿ ಮಧ್ಯ ಆ ಬರ್ಹಿರೂತಯೇ ಯಜತ್ರ ॥೨॥**

**ಪದಾರ್ಥ:-** **[ಋತಾವಃ]** ಸತ್ಯಪ್ರಕಾಶನ ಶೀಲನಾದ ನಾನು **[ತೇ]** ನಿಮ್ಮ **[ನಮ ಉಕ್ತಿಂ]** ನಮಸ್ಕಾರ ರೂಪ ವಚನವನ್ನು **[ಅಯಾಮಿ]** ಸ್ವೀಕರಿಸುವೆನು. **[ಜುಷಸ್ವ]** ನೀನು ಅದನ್ನು ಗೌರವ ಪೂರ್ವಕ ಗ್ರಹಣ ಮಾಡು. **[ಸಹಸ್ವಃ]** ಅತಿ ಬಲಶಾಲಿಯಾಗಿದ್ದು ಸಮಗ್ರ ವಿದ್ಯೆಯನ್ನು ತಿಳಿದಿರುವವನಾದ **[ವಿದ್ವಾನ್]** ಪಂಡಿತನಾದ ನೀನು **[ವಿದುಷಃ]** ವಿದ್ಯಾವಂತರಿಗೆ **[ಆ]**, **[ವಕ್ಷಿ]** ಎಲ್ಲ ರೀತಿಯ ಉಪದೇಶಗಳನ್ನು ಮಾಡುವ ನಿನ್ನೊಂದಿಗೆ ವಿದ್ಯಾವಂತರನ್ನು ಸಂದರ್ಶಿಸುವೆನು. **[ಯಜತ್ರ]** ಪೂಜನೀಯನಾದ ನೀನು **[ಊತಯೇ]** ಏಳಿಗೆಗಾಗಿ **[ಬರ್ಹಿಃ]** **[ಮಧ್ಯೆ]** ಅಂತರಿಕ್ಷದ ಮಧ್ಯದಲ್ಲಿ **[ಆ]** **[ನಿ]** **[ಸತ್ಸಿ]** ಉತ್ತಮ ರೀತಿಯಲ್ಲಿ ನಿಶ್ಚಿತವಾಗಿಯೂ ರಾರಾಜಿಸುವೆ **[ಚೇತತೆ]** ಜಾಗೃತಗೊಳಿಸುವವನಾದ **[ತುಭ್ಯಂ]** ನಿನಗೆ ನಮನರೂಪವಾದ ವಚನವನ್ನು ಅರ್ಪಿಸುತ್ತೇನೆ.

**ಭಾವಾರ್ಥ:-** ವಿದ್ಯಾರ್ಥಿಗಳು ನಮಸ್ಕಾರಾದಿ ಸೇವೆಗಳಿಂದ ಹೇಗೆ ಅಧ್ಯಾಪಕರನ್ನು ಪ್ರಸನ್ನಗೊಳಿಸುತ್ತಾರೋ ಹಾಗೆ ಅಧ್ಯಾಪಕ ಜನರೂ ಸಹ ಉತ್ತಮ ಶಿಕ್ಷಣ ವಿದ್ಯಾದಾನ ಮಾಡುವುದರ ಮೂಲಕ ವಿದ್ಯಾರ್ಥಿಗಳನ್ನು ಸಂತುಷ್ಟಿಗೊಳಿಸಬೇಕು.

ಈ ಮಂತ್ರದಲ್ಲಿ ಮನುಷ್ಯರು ನಿಯಮವನ್ನಾಶ್ರಯಿಸಲೇಬೇಕು ಎಂಬುದನ್ನು ಹೇಳಲಾಗಿದೆ.

**ದ್ರವತಾಂ ತ ಉಷಸಾ ವಾಜಯಂತೀ ಅಗ್ನೇ ವಾತಸ್ಯ ಪಥ್ಯಾಭಿರಚ್ಛ ।**
**ಯತ್ಸೀಮಂಜಂತಿ ಪೂರ್ವ್ಯಂ ಹವಿರ್ಭಿ-ರಾ ವಂಧುರೇವ ತಸ್ಥತುರ್ದುರೋಣೇ ॥೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಪ್ರಕಾಶಮಾನನಾದ ವಿದ್ಯಾವಂತನೇ! **[ತೇ]** ನಿನಗಾಗಿ **[ವಾಜಯಂತೀ]** ಎಚ್ಚರಗೊಳಿಸುವವಳಾದ **[ಉಷಸಾ]** ಬೆಳಗಿನ ಮತ್ತು ಸಂಜೆಯ ಸಂಧಿಯ ಕಾಲವು **[ದ್ರವತಾಂ]** ಪ್ರವಾಹದ ರೀತಿಯಲ್ಲಿ ಚಲಿಸಲಿ. **[ವಾತಸ್ಯ]** ಗಾಳಿಯ **[ಪಥ್ಯಾಭಿಃ]** ಮಾರ್ಗದಲ್ಲಿ ಉತ್ತಮರೀತಿಯ ಗಮನದಿಂದಾಗಿ **[ದುರೋಣೆ]** ವಸತಿಯ ಸ್ಥಳದಲ್ಲಿ / ಮನೆಯಲ್ಲಿ **[ಅಚ್ಛ]** **[ತಸ್ಥತುಃ]** ಉತ್ತಮ ರೀತಿಯಲ್ಲಿ ನೆಲೆಗೊಳ್ಳಲಿ. **[ಬಂಧುರೇವ]** ಬಂಧುಗಳಂತಿರುವ ಕುಶಲಕರ್ಮಿ ಜನರು **[ಹವಿರ್ಭಿಃ]** ಗ್ರಹಣಯೋಗ್ಯ ಸಾಧನಗಳಿಂದ **[ಯತ್]** **[ಪೂರ್ವ್ಯಂ]** ಯಾವುದು ಪ್ರಾಚೀನ ವಿಜ್ಞಾನಿಗಳಿಂದ ತಯಾರಿಸಲ್ಪಟ್ಟ ವಾಹನ ವಿಶೇಷಗಳನ್ನು **[ಸೀಂ]** **[ಆ, ಅಂಜಂತಿ]** ಎಲ್ಲ ಕಡೆಗಳಿಂದಲೂ ಪಡೆದವರಾಗಿ ಪ್ರಾತಃ ಸಾಯಂಕಾಲದಲ್ಲಿ ಯಥಾ ಯೋಗ್ಯ ಸೇವೆ ಮಾಡಿರಿ.

**ಭಾವಾರ್ಥ:-** ಈಶ್ವರನಿಂದ ನಿಯಮಕ್ಕೊಳಪಡಿಸಿದ ಸಂಧ್ಯಾಕಾಲ ಮತ್ತು ಪ್ರಾತಃಕಾಲಗಳು ಹೇಗೆ ನಿಯಮದ ಕಟ್ಟಳೆಗಳಲ್ಲಿ ಇರುತ್ತವೆಯೋ ಮತ್ತು ಚತುರನಾದ ಕರಕುಶಲ ಕಾರ್ಮಿಕನಿಂದ ತಯಾರಿಸಲ್ಪಟ್ಟ ಕಲಾಯಂತ್ರಗಳನ್ನಳವಡಿಸಿರುವ ವಾಹನವು ಹೇಗೆ ನಿಯಮವರಿತು ಚಲಿಸುತ್ತದೆಯೋ ಹಾಗೇ ಮನುಷ್ಯರಾದ ನೀವು ನಿಯಮಪೂರ್ವಕ ವ್ಯವಹಾರಗಳನ್ನು ಆಚರಿಸಿ ನಿಶ್ಚಿತ ವಾಹನಗಳನ್ನು ತಯಾರಿಸಿಕೊಂಡು ತಮ್ಮ ಇಚ್ಛಾನುಕೂಲವಾಗಿ ವ್ಯವಹಾರಗಳನ್ನು ಮಾಡಿದರೆ ಅದರಲ್ಲಿ ನಿಶ್ಚಯವಾಗಿಯೂ ಯಶಸ್ಸು ಪಡೆಯುವಿರಿ.

ಈ ಮಂತ್ರದಲ್ಲಿಯೂ ಈ ಹಿಂದೆ ತಿಳಿಸಿದ ವಿಚಾರವನ್ನೇ ಹೇಳಲಾಗಿದೆ.

**ಮಿತ್ರಶ್ಚ ತುಭ್ಯಂ ವರುಣಃ ಸಹಸ್ವೋಽಗ್ನೇ ವಿಶ್ವೇ ಮರುತಃ ಸುಮ್ನಮರ್ಚನ್ ।**
**ಯಚ್ಛೋಚಿಷಾ ಸಹಸಸ್ಪುತ್ರ ತಿಷ್ಠಾ ಅಭಿ ಕ್ಷಿತೀಃ ಪ್ರಥಯನ್ ತ್ಸೂರ್ಯೋ ನೄನ್ ॥೪॥**

**ಪದಾರ್ಥ:-** **[ಸಹಸ್ವಃ]** ಅತ್ಯಂತ ಬಲಿಷ್ಠನಾದ **[ಅಗ್ನೇ]** ಅಗ್ನಿಗೆ ಸದೃಶನಾದ ಪ್ರತಾಪೀ ಪುರುಷನೇ! **[ಚ]** ಹಾಗೂ ವ್ಯವಹಾರ ಕುಶಲಿಯಾದವನು **[ತುಭ್ಯಂ]** ನಿನಗಾಗಿ **[ವರುಣಃ]** ಶ್ರೇಷ್ಠನಾದ **[ಮಿತ್ರಃ]** ಗೆಳೆಯನಾದ

ಗೌರವಿಸುತ್ತಾನೆ, [ಸಹಸಃ] ಬಲಿಷ್ಠನ [ಪುತ್ರ] ಪುತ್ರನಂತೇ ತೇಜಸ್ವಿಯಾದ [ಯತ್] [ಶೋಚಿಷಾ] ಯಾವ ಕಾರಣಕ್ಕಾಗಿ ಪ್ರಕಾಶದಿಂದ [ಸೂರ್ಯಃ] ಸೂರ್ಯ ಸದೃಶನಾದ ನೀನು [ಕ್ಷಿತೀಃ] ಮನುಷ್ಯರನ್ನು [ನೃನ್] ಮುಖ್ಯ ಪುರುಷರನ್ನು [ಪ್ರಥಯನ್] ಪ್ರಕಟಗೊಳಿಸುತ್ತ [ಅಭಿ] [ತಿಷ್ಠಾಃ] ಸಮ್ಮುಖವಾಗಿ ಉಪಸ್ಥಿತರಾಗಿರಿ. [ವಿಶ್ವೇ] ಅದರಿಂದ ಸಂಪೂರ್ಣ [ಮರುತಃ] ಜನತೆಯು [ಸುಮ್ನಂ] ಸುಖಪೂರ್ವಕವಾದ [ಅರ್ಚನ್] ಸ್ತವನ ಮಾಡಲಿ.

**ಭಾವಾರ್ಥ:-** ಯಾವ ಮನುಷ್ಯರು ಅಗ್ನ್ಯಾದಿ ಪದಾರ್ಥಗಳ ಸಹಯೋಗವನ್ನು ವಿದ್ಯೆಯ ಮೂಲಕ ಪಡೆದುಕೊಂಡು ಉಪಕಾರ ಮಾಡುತ್ತಾರೋ ಅಂತಹ ಜನರು ಪರಸ್ಪರ ಸ್ನೇಹಿತರಂತೆ ಸುಖವನ್ನುನುಭವಿಸುತ್ತಾರೆ.

ಮತ್ತೆ ಅಧ್ಯಾಪಕ ಅಧ್ಯೇತೃಗಳ ವಿಷಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ವಯಂ ತೇ ಅದ್ಯ ರರಿಮಾ ಹಿ ಕಾಮ-ಮುತ್ತಾನಹಸ್ತಾ ನಮಸೋಪಸದ್ಯ ।**
**ಯಜಿಷ್ಠೇನ ಮನಸಾ ಯಕ್ಷಿ ದೇವಾ-ನಸ್ರೇಧತಾ ಮನ್ಮನಾ ವಿಪ್ರೋ ಅಗ್ನೇ ॥೫॥**

**ಪದಾರ್ಥ:-** [ಅಗ್ನೇ] ವಿದ್ಯಾವಂತನೇ! [ಹಿ] ಯಾವ ಕಾರಣದಿಂದ [ವಿಪ್ರಃ] ಬುದ್ಧಿವಂತನಾದ ನೀನು [ಯಜಿಷ್ಠೇನ] ಅತಿಶಯ ಸಂಗತಗೊಂಡಿರುವ [ಅಸ್ರೇಧತಾ] ಖಿನ್ನಗೊಳ್ಳದಿರುವ [ಮನ್ಮನಾ] ವಿಜ್ಞಾನದಿಂದ ಕೂಡಿರುವ [ಮನಸಾ] ಮನಸ್ಸಿನಿಂದ [ದೇವಾನ್] ವಿದ್ಯಾವಂತರ [ಯಕ್ಷಿ] ಸಂಗವನ್ನು ಮಾಡು. [ಅದ್ಯ] ಈ ದಿನ [ಉತ್ತಾನಹಸ್ತಾಃ] ಕೈಯೆತ್ತಿ ನಿಂತಿರುವ [ವಯಂ] ನಾವೆಲ್ಲರೂ [ನಮಸಾ] ಗೌರವದಿಂದ / ಅನ್ನಾದಿಗಳಿಂದ [ಉಪ, ಸದ್ಯ] ನಿನ್ನನ್ನು ಸಮೀಪಿಸಿ [ತೇ] ನಿನಗೆ [ಕಾಮಂ] ಇಷ್ಟಾರ್ಥವನ್ನು [ರರಿಮ] ಕರುಣಿಸುವೆವು.

**ಭಾವಾರ್ಥ:-** ಅಧ್ಯಾಪಕ ಜನರು ಶಿಷ್ಯರ ವಿದ್ಯಾ ವಿಷಯಕ ಇಚ್ಛೆಯನ್ನು ಹೇಗೆ ಸಂತೃಪ್ತಿಗೊಳಿಸುತ್ತಾರೋ ಅದೇ ರೀತಿ ವಿದ್ಯಾರ್ಥಿ ಜನರೂ ಸಹ ಅಧ್ಯಾಪಕರ ಮನೋರಥವನ್ನು ಸಫಲಗೊಳಿಸಬೇಕು ಮತ್ತು ಎಲ್ಲಾ ಕಾಲಗಳಲ್ಲೂ ಸಂಪೂರ್ಣ ಪುರುಷವಿದ್ಯೆ ಮುಂತಾದ ಶುಭಗುಣಗಳನ್ನು ಅನುಗ್ರಹಿಸುವವರಾಗಬೇಕು.

ಈ ಮಂತ್ರದಲ್ಲೂ ಅದೇ ವಿಚಾರವನ್ನು ತಿಳಿಸಲಾಗಿದೆ.

**ತ್ವದ್ಧಿ ಪುತ್ರ ಸಹಸೋ ವಿ ಪೂರ್ವೀ-ರ್ದೇವಸ್ಯ ಯಂತ್ಯೂತಯೋ ವಿ ವಾಜಾಃ ।**
**ತ್ವಂ ದೇಹಿ ಸಹಸ್ರಿಣಂ ರಯಿಂ ನೋಽದ್ರೋಘೇಣ ವಚಸಾ ಸತ್ಯಮಗ್ನೇ ॥೬॥**

**ಪದಾರ್ಥ:-** [ಸಹಸಃ] ಬಲಿಷ್ಠನಾದ [ಪುತ್ರಃ] ಪವಿತ್ರ ಕರ್ತೃವಾದವನು [ಹಿ] ಯಾವ ಕಾರಣದಿಂದ [ದೇವಸ್ಯ] ಜಗದೀಶ್ವರನ [ಪೂರ್ವೀಃ] ಅತೀತ ಕಾಲದಿಂದ ಉತ್ಪನ್ನವಾದ [ವಾಜಾಃ] ವಿಜ್ಞಾನ ಅನ್ನಾದಿ ಗುಣಗಳಿಂದ ಯುಕ್ತನಾದ [ಊತಯಃ] ರಕ್ಷಣಾದಿ ಗುಣಗಳಿಂದ ಕೂಡಿರುವ ನಮಗೆ [ತ್ವತ್] ನಿನ್ನ ದೆಸೆಯಿಂದ [ವಿ, ಯಂತಿ] ಪ್ರಾಪ್ತವಾಗುತ್ತಿದೆ. [ಅಗ್ನೇ] ಅಗ್ನಿಯಂತೆ ತೇಜಸ್ವಿಯಾದವನ [ತ್ವಂ] ನೀನು [ಅದ್ರೋಘೇಣ] ವೈರ ರಹಿತನಾಗಿ [ವಚಸಾ] ವಚನದಿಂದ [ನಃ] ನಮಗೋಸ್ಕರ [ಸತ್ಯಂ] ಉತ್ತಮ ವ್ಯವಹಾರದಲ್ಲಿ ವ್ಯಯಿಸಲು ಯೋಗ್ಯವಾದ [ಸಹಸ್ರಿಣಂ] ಅಸಂಖ್ಯ ವಸ್ತುಗಳಿಂದ ಕೂಡಿರುವ [ರಯಿಂ] ಸಂಪತ್ತನ್ನು [ವಿ, ದೇಹಿ] ಕೊಡುವವನಾಗು.

**ಭಾವಾರ್ಥ:-** ಶಿಷ್ಯರು, ಅಧ್ಯಾಪಕರು, ರಾಜಪುರುಷರು, ಸಮಸ್ತ ಪ್ರಜಾಜನತೆಯು, ವೈರಭಾವ ಮುಂತಾದ ದೋಷಕರ್ಮಗಳನ್ನು ತ್ಯಾಗ ಮಾಡಿ ಪರಸ್ಪರರು ಸ್ನೇಹ ಭಾವವನ್ನು ಮೂಡಿಸಿಕೊಂಡು ಒಂದುಗೂಡಿ ಸಹಕಾರಮಯ ಜೀವನ ನಡೆಸಿದರೆ ಧನ ವಿಜ್ಞಾನ ಇವುಗಳನ್ನು ಪರಸ್ಪರರು ವೃದ್ಧಿಪಡಿಸಿಕೊಳ್ಳಲು ಸಾಧ್ಯವಾಗುತ್ತದೆ.

ಈ ಮಂತ್ರದಲ್ಲಿ ಅನ್ಯಜನರು ವಿದ್ಯಾವಂತರ ಆಚಾರ ವಿಚಾರಗಳನ್ನೇ ಆಚರಿಸಬೇಕು ಎಂಬ ವಿಚಾರವನ್ನು ತಿಳಿಸಲಾಗಿದೆ.

**ತುಭ್ಯಂ ದಕ್ಷ ಕವಿಕ್ರತೋ ಯಾನೀಮಾ ದೇವ ಮರ್ತಾಸೋ ಅಧ್ವರೇ ಅಕರ್ಮ ।**

**ತ್ವಂ ವಿಶ್ವಸ್ಯ ಸುರಥಸ್ಯ ಬೋಧಿ ಸರ್ವಂ ತದಗ್ನೇ ಅಮೃತ ಸ್ವದೇಹ ॥೭॥**

**ಪದಾರ್ಥ:-** [ದಕ್ಷ] ಚತುರನಾದ [ಕವಿಕ್ರತೋ] ಪಂಡಿತರಿಗೆ ಸಮನಾದ ಬುದ್ಧಿವಂತನು [ದೇವ] ಶ್ರೇಷ್ಠ ಗುಣ ಕರ್ಮ ಸ್ವಭಾವಗಳನ್ನು ಕರುಣಿಸುವವನು [ಅಮೃತ] ಆತ್ಮ ಸ್ವರೂಪಕ್ಕೆ ನಾಶವಿಲ್ಲದವನು ಆದ [ಅಗ್ನೇ] ವಿದ್ಯಾವಂತ ಪುರುಷನೇ, [ಮರ್ತಾ ಸಹ] ಮನುಷ್ಯರಾದ ನಾವು [ಅಧ್ವರೇ] ಅಹಿಂಸಾದಿ ರೂಪ ಧರ್ಮದಲ್ಲಿ [ತುಭ್ಯಂ] ನಿನಗಾಗಿ [ಯಾನಿ] [ಇಮಾ] ಯಾವುವು ಈ ಧರ್ಮ ಸಂಬಂಧಿ ಕ್ರಿಯಾಕಲಾಪಗಳೋ ಅವುಗಳಿಗೆ [ಇಹ] ಈ ಜಗತ್ತಿನಲ್ಲಿ [ಅಕರ್ಮ] ಮಾಡೋಣ. [ತತ್] ಅದು [ಸರ್ವಂ] ಸಂಪೂರ್ಣ ಕರ್ಮವನ್ನು [ತ್ವಂ] ನೀನು [ವಿಶ್ವಸ್ಯ] [ಸುರಥಸ್ಯ] ಸಮಗ್ರವಾದ ಅಂಗಾಂಗಗಳಿಂದ ಕೂಡಿರುವ ಸುಂದರವಾದ ರಥಗಳು ಯಾವ ಕಾರ್ಯದಲ್ಲೋ ಅಂತಹ ವ್ಯವಹಾರಗಳನ್ನು [ಬೋಧಿ] ತಿಳಿದುಕೊ/ಅರಿತುಕೊ ಮತ್ತು [ಸ್ವದ] ಅದನ್ನು ಆಸ್ವಾದಿಸು.

**ಭಾವಾರ್ಥ:-** ಸಮಗ್ರ ಮನುಷ್ಯರು ವಿದ್ಯಾವಂತರು ಯಾವ ಧರ್ಮ ಯೋಗ್ಯ ಕರ್ಮಗಳನ್ನು ಮಾಡುತ್ತಾರೋ ಅದನ್ನೇ ಮಾಡಬೇಕು. ಎಲ್ಲ ಜನರು ಒಂದುಗೂಡಿ ಈ ಪ್ರಪಂಚದಲ್ಲಿ ವಿದ್ಯೆ ಮತ್ತು ಸುಖ ಇವುಗಳನ್ನು ಬೆಳೆಸಬೇಕು. ಆಗಲೇ ವಿಶ್ವವು ಸುಖಮಯವಾಗುತ್ತದೆ.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣಗಳ ವರ್ಣನೆ ಮಾಡಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಹದಿನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೧೫

ಮಂತ್ರಸಂಖ್ಯೆ ೭ । ಉತ್ಕೀಲಃ ಕಾತ್ಯ ಋಷಿಃ । ಅಗ್ನಿರ್ದೇವತಾ । ೧, ೪ ತ್ರಿಷ್ಟುಪ್, ೫ ವಿರಾಟ್ ತ್ರಿಷ್ಟುಪ್, ೬ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಪಂಕ್ತಿಃ, ೩, ೭ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ವಿದ್ಯಾವಂತರು ಮಾಡಬೇಕಾದ ಕಾರ್ಯವನ್ನು ತಿಳಿಸಿದೆ.

**ವಿ ಪಾಜಸಾ ಪೃಥುನಾ ಶೋಶುಚಾನೋ ಬಾಧಸ್ವ ದ್ವಿಷೋ ರಕ್ಷಸೋ ಅಮೀವಾಃ ।**

**ಸುಶರ್ಮಣೋ ಬೃಹತಃ ಶರ್ಮಣಿ ಸ್ಯಾ-ಮಗ್ನೇರಹಂ ಸುಹವಸ್ಯ ಪ್ರಣೀತೌ ॥೧॥**

**ಪದಾರ್ಥ:-** [ಶೋಚುಶಾನಃ] ಅತಿ ಪವಿತ್ರನಾದ ನೀನು [ಪೃಥುನಾ] ವಿಸ್ತಾರವಾದ [ಪಾಜಸಾ] ಬಲದಿಂದ [ಅಮೀವಾಃ] ರೋಗದಂತೆ ಅನ್ಯರನ್ನು ಪೀಡಿಸುತ್ತ [ರಕ್ಷಸಃ] ನಿಕೃಷ್ಟ ಸ್ವಭಾವದ [ದ್ವಿಷಃ] ವೈರಿ ಜನರನ್ನು [ವಿ, ಬಾಧಸ್ವ] ವಿಶೇಷ ರೀತಿಯಲ್ಲಿ ನಿವಾರಣೆ ಮಾಡು. [ಅಹಂ] ನಾನು [ಸುಹವಸ್ಯ] ಉತ್ತಮ ರೀತಿಯಲ್ಲಿ ಪ್ರಶಂಸೆಗೊಳಗಾದ [ಸುಶರ್ಮಣಃ] ಶ್ರೇಷ್ಠ ಮನೆಗಳನ್ನು ಪಡೆದವನಾಗಿ [ಬೃಹತಃ] ವಿದ್ಯಾದಿ ಶುಭ ಗುಣಗಳಿಂದ ಪ್ರವೃದ್ಧಮಾನನಾಗಿ [ಅಗ್ನೇಃ] ಅಗ್ನಿಯಂತೆ ಉತ್ತಮ ಗುಣಗಳನ್ನು ಪ್ರಕಾಶಿಸುವ ನಿನ್ನನ್ನು [ಪ್ರಣೀತೌ] ಉತ್ಕೃಷ್ಟ ನೀತಿಯೊಂದಿಗೆ [ಶರ್ಮಣಿ] ಮನೆಯಲ್ಲಿ [ಸ್ಯಾಮ] ಸ್ಥಿರನಾಗುವೆನು.

**ಭಾವಾರ್ಥ:-** ವಿದ್ಯಾವಂತರು ಸ್ವಯಂ ದೋಷರಹಿತರಾಗಿ ಅನ್ಯರ ದೋಷವನ್ನು ನಿವಾರಿಸಿ ಗುಣವಂತರನ್ನಾಗಿ ಮಾಡಿ ಉತ್ತಮ ಶಿಕ್ಷಣವನ್ನು ಕೊಡಬೇಕು. ಅದರಿಂದ ಎಲ್ಲಾ ಜನರು ಪಕ್ಷಪಾತರಹಿತರಾಗಿ ಧರ್ಮದಲ್ಲಿ ದೃಢಭಾವದಿಂದ ಪ್ರವೃತ್ತರಾಗಲಿ.

ಮನುಷ್ಯರು ಏನು ಮಾಡಬೇಕು ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ತ್ವಂ ನೋ ಅಸ್ಯಾ ಉಷಸೋ ವ್ಯುಷ್ಟೌ ತ್ವಂ ಸೂರ ಉದಿತೇ ಬೋಧಿ ಗೋಪಾಃ ।**
**ಜನ್ಮೇವ ನಿತ್ಯಂ ತನಯಂ ಜುಷಸ್ವ ಸ್ತೋಮಂ ಮೇ ಅಗ್ನೇ ತನ್ವಾ ಸುಜಾತ ॥೨॥**

**ಪದಾರ್ಥ:-** **[ಸುಜಾತ]** ಶ್ರೇಷ್ಠ ಪ್ರಸಿದ್ಧಿ ಪಡೆದವನೇ! **[ಅಗ್ನೇ]** ಅಗ್ನಿಯಂತೆ ತೇಜಸ್ವಿಯೇ! **[ಗೋಪಾಃ]** ಎಲ್ಲರನ್ನೂ ರಕ್ಷಣೆ ಮಾಡುವ ವಿದ್ಯಾವಂತನೇ! **[ತ್ವಂ]** ನೀನು **[ಅಸ್ಯಾಃ]** **[ಉಷಸಃ]** ಈ ಪ್ರಭಾತ ಕಾಲದ **[ವ್ಯುಷ್ಟೌ]** ಬೆಳಕು ಹರಡುತ್ತಿರುವಂತೆ **[ನಃ]** ನಮ್ಮೆಲ್ಲರನ್ನೂ **[ಬೋಧಿ]** ಎಚ್ಚರಗೊಳಿಸು. **[ತ್ವಂ]** ನೀನು **[ಸೂರೇ]** **[ಉದಿತೇ]** ಸೂರ್ಯೋದಯವಾಗುತ್ತಿದ್ದಂತೆ ನಮ್ಮನ್ನು ಎಚ್ಚರಗೊಳಿಸು **[ನಿತ್ಯಂ]** ಅನುದಿನವೂ **[ತನಯಂ]** ಪುತ್ರನನ್ನು **[ಜನ್ಮೇವ]** ಪ್ರಾಪ್ತವಾದ ಕೆಲಸ ಕಾರ್ಯಗಳನ್ನು ಪ್ರಕಟಿಸುವ ರೀತಿಯಲ್ಲಿ **[ಮೇ]** **[ತನ್ವಾ]** ನನ್ನ ಶರೀರದಿಂದ **[ಸ್ತೋಮಂ]** ವಿದ್ಯಾಸಂಬಂಧೀ ಪ್ರಶಂಸೆಯನ್ನು **[ಜುಷಸ್ವ]** ಸ್ವೀಕರಿಸುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಗರ್ಭಾಶಯದಲ್ಲಿ ಇರುವ ಶಿಶುವು ಹೇಗೆ ಗರ್ಭದ ಸ್ವರೂಪವನ್ನು ತಿಳಿಯಲಾರದೋ ಹಾಗೆಯೇ ನಿದ್ರಾವಸ್ಥೆಯಲ್ಲಿರುವ ಮನುಷ್ಯನು ಅವಿದ್ಯೆಯಲ್ಲಿ ಮುಳುಗಿದ ಪುರುಷನು ವಿಜ್ಞಾನದಿಂದ ದೂರವಿರುವುದರಿಂದ ಹೇಗೆ ಜನ್ಮಧಾರಣೆಯಾದ ಮೇಲೆ ಶರೀರ ಸಹಿತವಾದ ಜೀವಾತ್ಮನು ಪ್ರಕಟನಾಗುತ್ತಾನೋ ಹಾಗೆಯೇ ನಿದ್ರೆಯನ್ನು ಬಿಟ್ಟು ಪ್ರಾತಃಕಾಲವಾದ ಮೇಲೆ ಪುರುಷನು ಜಾಗೃತನಾಗುತ್ತಾನೋ ಹಾಗೆ ಅವಿದ್ಯೆಯನ್ನು ತ್ಯಜಿಸಿ ವಿದ್ಯೆಯಲ್ಲಿ ಕುಶಲನಾದ ಮೇಲೆ ಅಂತಹ ಜನರು ಪ್ರಶಂಸನೀಯರಾಗುತ್ತಾರೆ.

ಮನುಷ್ಯನ ಕರ್ತವ್ಯವನ್ನು ಮತ್ತೆ ಇಲ್ಲಿ ತಿಳಿಸಲಾಗಿದೆ.

**ತ್ವಂ ನೃಚಕ್ಷಾ ವೃಷಭಾನು ಪೂರ್ವೀಃ ಕೃಷ್ಣಾಸ್ವಗ್ನೇ ಅರುಷೋ ವಿ ಭಾಹಿ ।**
**ವಸೋ ನೇಷಿ ಚ ಪರ್ಷಿ ಚಾತ್ಯಂಹಃ ಕೃಧೀ ನೋ ರಾಯ ಉಶಿಜೋ ಯವಿಷ್ಠ ॥೩॥**

**ಪದಾರ್ಥ:-** **[ಯವಿಷ್ಠ]** ಅತ್ಯಂತ ಯುವಾವಸ್ಥೆಯಲ್ಲಿರುವವನು **[ವೃಷಭಃ]** ಬಲಿಷ್ಠನೂ ಆದ **[ಅಗ್ನೇ]** ಅಗ್ನಿಯಂತೆ ವಿದ್ಯೆಯಿಂದ ಪ್ರಕಾಶಮಾನನಾದ **[ತ್ವಂ]** ನೀನು **[ಅರುಷಃ]** ಸೂರ್ಯನಂತೆ ರಕ್ಷಕನೂ **[ನೃಚಕ್ಷಾಃ]** ಮನುಷ್ಯರ ಸದಸತ್ ಕರ್ಮಗಳಲ್ಲಿ ವಿವೇಕಿಯಾಗಿದ್ದು **[ಕೃಷ್ಣಾಸು]** ಅವಿದ್ಯಾಂಧಕಾರದಲ್ಲಿ ಮುಳುಗಿದ ನೀಚ ಪ್ರಜೆಗಳಲ್ಲಿ **[ಅನು]** **[ಪೂರ್ವೀಃ]** ಅನುಕ್ರಮವಾಗಿ ಈಶ್ವರನಿಂದ ಸೃಷ್ಟಿಸಲ್ಪಟ್ಟ ಪ್ರಜೆಗಳನ್ನು **[ವಿ]** **[ಭಾಹಿ]** ಪ್ರಕಾಶಮಾನರನ್ನಾಗಿಸು. **[ವಸೋ]** ಉತ್ತಮ ಗುಣಧಾರಿಯೆ! ನೀನು **[ರಾಯೇ]** ಸಂಪತ್ತಿಗೋಸ್ಕರ **[ಉಶಿಜಃ]** ಕಾಮನಾವಿಶಿಷ್ಟ ಪುರುಷರಿಗೆ ಯೋಗ್ಯವಾದುದನ್ನು **[ನೇಷಿ]** ಪ್ರಾಪ್ತಗೊಳಿಸುತ್ತ **[ಚ]** ಮತ್ತು ಮನೋರಥವನ್ನು ಪೂರ್ಣಗೊಳಿಸುತ್ತ **[ಚ]** **[ಪರ್ಷಿ]** ಮತ್ತು ದುಃಖದಿಂದ ದೂರಗೊಳಿಸುತ್ತ **[ಅಂಹಃ]** ಕುತ್ಸಿತ ಆಚರಣೆಗಳನ್ನು **[ಅತಿ]** ಅತಿ ದೂರಗೊಳಿಸು. **[ನಃ]** ನಮ್ಮೆಲ್ಲರನ್ನು **[ಕೃಧಿ]** ಶ್ರೇಷ್ಠರನ್ನಾಗಿ ಮಾಡು.

**ಭಾವಾರ್ಥ:-** ಎಲೈ ವಿದ್ವಾಂಸರೇ! ನೀವೆಲ್ಲರೂ, ಸೂರ್ಯನು ಹೇಗೆ ತನ್ನ ಕಿರಣಗಳ ಮೂಲಕ ಎಲ್ಲರ ಪಾಲನೆ ಮಾಡುತ್ತಾನೋ ಹಾಗೆ ವಿದ್ಯೆ ಮತ್ತು ಉತ್ತಮ ಶಿಕ್ಷಣಗಳಿಂದ ಸಮಸ್ತ ಪ್ರಜೆಗಳನ್ನು ವಿದ್ಯಾಧನಯುಕ್ತರನ್ನಾಗಿ ಮಾಡಿ ಪಾಪದಿಂದ ನಿವೃತ್ತಿಗೊಳಿಸಿ ಪುಣ್ಯಕರ್ಮಗಳಲ್ಲಿ ಪ್ರವೃತ್ತರಾಗುವಂತೆ ಮಾಡಿರಿ.

ಈ ಮಂತ್ರದಲ್ಲೂ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಅಷಾಳ್ಹೋ ಅಗ್ನೇ ವೃಷಭೋ ದಿದೀಹಿ ಪುರೋ ವಿಶ್ವಾಃ ಸೌಭಗಾ ಸಂಜಿಗೀವಾನ್ ।**
**ಯಜ್ಞಸ್ಯ ನೇತಾ ಪ್ರಥಮಸ್ಯ ಪಾಯೋ-ರ್ಜಾತವೇದೋ ಬೃಹತಃ ಸುಪ್ರಣೀತೇ ॥೪॥**

**ಪದಾರ್ಥ:-** **[ಸುಪ್ರಣೀತೇ]** ಶ್ರೇಷ್ಠ ನ್ಯಾಯಕಾರಕನಾದ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ **[ಅಷಾಳ್ಹಃ]** ಅನ್ಯರಿಂದ ಎಂದೂ ಪರಾಜಯನಾಗದವನೂ ಆದ **[ವೃಷಭಃ]** ಬಲಿಷ್ಠ ಪುರುಷನೇ! ನೀನು **[ವಿಶ್ವಾ]** ಸಮಗ್ರವಾಗಿ **[ಸೌಭಗಾ]** ಉತ್ತಮ ಐಶ್ವರ್ಯಯುಕ್ತವಾದ **[ಪುರಃ]** ನಗರಗಳಲ್ಲಿ **[ದಿದೀಹಿ]** ಧರ್ಮ ಮಿಶ್ರಿತ ಕರ್ಮಗಳನ್ನು ಪ್ರಚುರ ಪಡಿಸು. **[ಜಾತವೇದಃ]** ಸಕಲ ವಿದ್ಯಾ ಸಂಪನ್ನ ಪುರುಷನೇ! **[ಪ್ರಥಮಸ್ಯ]** ಪ್ರಥಮಾಶ್ರಮವಾದ ಬ್ರಹ್ಮಚರ್ಯದ **[ಪಾಯೋಃ]** ಪಾಲಕನು **[ಬೃಹತಃ]** ಶ್ರೇಷ್ಠವಾದ **[ಯಜ್ಞಸ್ಯ]** ಅಹಿಂಸಾಧರ್ಮದ **[ನೇತಾ]** ನಿರ್ವಾಹಕನಾಗು. **[ಸಂಜಿಗೀವಾನ್]** ಅದರಲ್ಲಿ ವಿಜಯಶಾಲಿಯಾಗು.

**ಭಾವಾರ್ಥ:-** ರಾಜಪುರುಷರೇ! ವಿದ್ಯಾವಿನಯಗಳಿಂದ ಸಮಗ್ರ ಪ್ರಜೆಗಳನ್ನು ಸಂತುಷ್ಟಗೊಳಿಸಿ ಬ್ರಹ್ಮಚರ್ಯಾದಿ ಆಶ್ರಮಗಳ ನಿರ್ವಹಣೆಯಿಂದ ಅವರಲ್ಲಿ ವಿದ್ಯೆ, ಉತ್ತಮ ಶಿಕ್ಷಣ, ಶ್ರೇಷ್ಠತೆ, ಬಹುಕಾಲ ಜೀವನ ಮುಂತಾದ ಗುಣ ಧರ್ಮಗಳನ್ನು ವೃದ್ಧಿಪಡಿಸಿ ರಾಜ್ಯದ ಸಂಪತ್ತನ್ನು ಅಭಿವೃದ್ಧಿಪಡಿಸಿರಿ.

ಪುನಃ ಅದೇ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಅಚ್ಛಿದ್ರಾ ಶರ್ಮ ಜರಿತಃ ಪುರೂಣಿ ದೇವಾ ಅಚ್ಛಾ ದೀದ್ಯಾನಃ ಸುಮೇಧಾಃ ।**
**ರಥೋ ನ ಸಸ್ನಿರಭಿ ವಕ್ಷಿ ವಾಜ-ಮಗ್ನೇ ತ್ವಂ ರೋದಸೀ ನಃ ಸುಮೇಕೇ ॥೫॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಪ್ರತಾಪವುಳ್ಳವನೇ! **[ತ್ವಂ]** ನೀನು **[ಸುಮೇಕೇ]** ಉತ್ತಮ ರೀತಿಯಲ್ಲಿ ಪ್ರಸರಣ ಹೊಂದಿದವನಾಗಿ **[ರೋದಸೀ]** ಭೂಮಿ ಆಕಾಶಗಳಲ್ಲಿ ಬೆಳಕನ್ನು ಚೆಲ್ಲುತ್ತಿಯೇ. ಅದೇ ರೀತಿ **[ನಃ]** ನಮ್ಮೆಲ್ಲರನ್ನು **[ದೀದ್ಯಾನಃ]** ಪ್ರಕಾಶಗೊಳಿಸುವವನಾಗು. **[ಸುಮೇಧಾಃ]** ಶ್ರೇಷ್ಠ ಬುದ್ಧಿವಂತನು **[ಸಸ್ನಿಃ]** ಶುದ್ಧವಾದ **[ರಥಃ]** **[ನ]** ಉತ್ತಮ ರಥಕ್ಕೆ ಸದೃಶರಾದ ನಮ್ಮೆಲ್ಲರಿಗೆ **[ಅಭಿ]** ಸಮ್ಮುಖವಾಗಿ **[ವಾಜಂ]** ವಿಜ್ಞಾನವನ್ನು **[ವಕ್ಷಿ]** ಹೇಳುವವನಾಗು. **[ಜರಿತಃ]** ಸತ್ಯಗುಣಗಳನ್ನು ಪ್ರಶಂಸೆ ಮಾಡುವ ವಿದ್ಯಾವಂತನೇ! ನೀನು **[ಅಚ್ಛಿದ್ರಾ]** ಅತಿ ಪುಷ್ಟವಾದ **[ಪುರೂಣಿ]** ಬಹು ಸಂಖ್ಯಾತ **[ಶರ್ಮ]** ಗ್ರಹಗಳನ್ನು **[ದೇವಾನ್]** ಉತ್ತಮ ಗುಣಗಳಿಂದ ಪ್ರಸನ್ನತೆಯನ್ನೂ **[ಅಚ್ಛ]** ಉತ್ತಮ ರೀತಿಯಲ್ಲಿ ಸಂಯೋಜನೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇಗೆ ಉತ್ತಮ ರೀತಿಯಲ್ಲಿ ಸಂಸ್ಕರಿಸಿದ, ಸುದೃಢಗೊಳಿಸಿದ ರಥದಿಂದ ಬಯಸಿದ ಸ್ಥಳವನ್ನು ಶೀಘ್ರವಾಗಿ ತಲುಪುತ್ತಾರೋ, ಹಾಗೆ ಯಾವ ಪುರುಷನು ಆಲಸ್ಯವನ್ನು ತ್ಯಜಿಸಿ ಪುರುಷಾರ್ಥ ಪ್ರಾಪ್ತಿಗಾಗಿ ಉತ್ತಮ ಸ್ಥಾನದ ಇಚ್ಛೆಯನ್ನು ಮಾಡುತ್ತಾನೋ ಅದಕ್ಕಾಗಿ ವಿದ್ಯಾವಂತರ ಸಂಗ ಮಾಡಿ ಶ್ರೇಷ್ಠ ಗುಣಗಳನ್ನು ಪಡೆದುಕೊಳ್ಳುತ್ತಾನೋ ಬೇರೆಯವರಿಗೂ ಅದನ್ನು ಉಪದೇಶಿಸುತ್ತಾನೋ ಅಂತಹ ಪುರುಷನು ಅತ್ಯಂತ ಶ್ರೇಷ್ಠವಾದ ಸುಖವನ್ನು ಅನುಭವಿಸುತ್ತಾನೆ.

ಈ ಮಂತ್ರದಲ್ಲೂ ಮತ್ತೆ ಅದೇ ವಿಚಾರ ತಿಳಿಸಲಾಗಿದೆ.

**ಪ್ರ ಪೀಪಯ ವೃಷಭ ಜಿನ್ವ ವಾಜಾ-ನಗ್ನೇ ತ್ವಂ ರೋದಸೀ ನಃ ಸುದೋಘೇ ।**
**ದೇವೇಭಿರ್ದೇವ ಸುರುಚಾ ರುಚಾನೋ ಮಾ ನೋ ಮರ್ತಸ್ಯ ದುರ್ಮತಿಃ ಪರಿ ಷ್ಠಾತ್ ॥೬॥**

**ಪದಾರ್ಥ:-** **[ವೃಷಭ]** ಶರೀರಬಲ, ಆತ್ಮಬಲದಿಂದ ಯುಕ್ತನಾದ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದವನೇ **[ತ್ವಂ]** ನೀನು **[ಸುದೋಘೇ]** ಕಾಮನೆಗಳನ್ನು ಉತ್ತಮರೀತಿಯಲ್ಲಿ ಪೂರ್ತಿಗೊಳಿಸುವವನು **[ರೋದಸೀ]** ಭೂಮ್ಯಾಕಾಶಗಳಲ್ಲಿ ಸೂರ್ಯನು ಬೆಳಕನ್ನು ಬೀರಿ ಸುಖಮಯ ಮಾಡುವಂತೆ **[ವಾಜಾನ್]** ವಿಜ್ಞಾನಯುಕ್ತರಾದ **[ನಃ]** ನಮ್ಮೆಲ್ಲರನ್ನು **[ಪೀಪಯ]** ಸಂಪದ್ಭರಿತರನ್ನಾಗಿ ಮಾಡು. **[ದೇವ]** ಉತ್ತಮ ಗುಣ ಪ್ರದಾಯಕನೇ! ನೀನು **[ದೇವೇಭಿಃ]** ವಿದ್ಯಾವಂತರೊಂದಿಗೆ **[ಸುರುಚಾ]** ತೇಜೋಮಯ ಪ್ರೀತಿ ಸಹಿತ **[ರುಚಾನಃ]** ಸ್ನೇಹ ಭಾವವುಳ್ಳವನಾಗಿ **[ನಃ]** ನಮ್ಮೆಲ್ಲರನ್ನು **[ಪ್ರ]** **[ಜಿನ್ವ]** ಆನಂದಿತರನ್ನಾಗಿ ಮಾಡು. ನಮಗೋಸ್ಕರ **[ಮರ್ತಸ್ಯ]** ಮನುಷ್ಯರಿಗೆ ಸಂಬಂಧಿಸಿದ **[ದುರ್ಮತಿಃ]** ದುಷ್ಟಬುದ್ಧಿಗಳು **[ಮಾ]** **[ಪರಿ]** **[ಸ್ಥಾತ್]** ಯಾವ ಕಡೆಗಳಿಂದಲೂ ಬಾರದಂತೆ ಮಾಡು.

**ಭಾವಾರ್ಥ:-** ಯಾವ ಪ್ರದೇಶದಲ್ಲಿ ವಿದ್ಯಾವಂತರು ಪ್ರೀತಿಪೂರ್ವಕವಾಗಿ ಸಮಸ್ತ ಜನರೂ ವೃದ್ಧಿ ಹೊಂದಬೇಕು ಎಂಬ ಇಚ್ಛೆ ಇರುವವರಾಗಿರುತ್ತಾರೋ ಮತ್ತು ದುಷ್ಟಬುದ್ಧಿಗಳ ನಾಶ ಮಾಡುವವರಾಗಿರುತ್ತಾರೋ ಅಂತಹ ಪ್ರದೇಶದಲ್ಲಿ ನೆಲೆಸಿರುವ ಸಮಸ್ತ ಜನರೂ ಬುದ್ಧಿವಂತರೂ, ಜ್ಞಾನವಂತರೂ, ಧನವಂತರೂ ಆಗುತ್ತಾರೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಚಾರವನ್ನು ತಿಳಿಸಲಾಗಿದೆ.

**ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।**
**ಸ್ಯಾನ್ನಃ ಸೂನುಸ್ತನಯೋ ವಿಜಾವಾ-ಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥೭॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ವಿದ್ಯಾಪ್ರಕಾಶಕಾರಕನಾದ ಪಂಡಿತನೇ! ನೀನು **[ಹವಮಾನಾಯ]** ಪ್ರಶಂಸೆ ಮಾಡುವವನಿಗೆ **[ಶಶ್ವತ್ತಮಂ]** ಅನಾದಿ ಕಾಲದಿಂದಲೂ ಪ್ರಾಪ್ತವಾದ **[ಪುರುದಂಸಂ]** ಶ್ರೇಷ್ಠವಾದ ಧರ್ಮ ಕರ್ಮಗಳಿಂದೊಡಗೂಡಿದ **[ಇಳಾಂ]** ಉತ್ತಮ ಶಿಕ್ಷಣ ಪ್ರದವಾದ ಮಾತನ್ನು **[ಗೋಃ]** ಪೃಥ್ವಿಯ ಮಧ್ಯದಲ್ಲಿ **[ಸನಿಂ]** ನ್ಯಾಯಯುತವಾಗಿ ಸತ್ಯಾಸತ್ಯಗಳನ್ನು ವಿಭಾಗಿಸುವಂತಹ ಸಂಪತ್ತನ್ನು **[ಸಾಧ]** ಸಿದ್ಧಪಡಿಸು. **[ನಃ]** ನಮ್ಮೆಲ್ಲರ **[ಸೂನುಃ]** ಸಂತಾನರೂಪವಾದ **[ತನಯಃ]** ಧಾರ್ಮಿಕ ಪುತ್ರನು **[ವಿಜಾವಾ]** ವಿಜಯಶೀಲನಾಗುವಂತೆ **[ಸ್ಯಾತ್]** ಮಾಡು. **[ಅಗ್ನೇ]** ವಿದ್ಯಾವಂತನೇ! **[ತೇ]** ನಿನ್ನ **[ಸುಮತಿಃ]** ಯಾವ ಉತ್ತಮ ಬುದ್ಧಿಯೋ **[ಸಾ]** ಆ ಬುದ್ಧಿಯು **[ಅಸ್ಮೇ]** ನಮ್ಮೆಲ್ಲರಿಗೂ **[ಭೂತು]** ಲಭಿಸುವಂತೆ ಮಾಡು.

**ಭಾವಾರ್ಥ:-** ವಿದ್ಯಾವಂತರು ಜಿಜ್ಞಾಸುಗಳಿಗೆ ಉತ್ತಮ ವಿದ್ಯೆಯನ್ನು ಉತ್ತಮ ಶಿಕ್ಷಣವನ್ನು ಧರ್ಮಾನುಷ್ಠಾನ ಪ್ರವೃತ್ತಿಯನ್ನೂ ಹಾಗೂ ಐಶ್ವರ್ಯ ವೃದ್ಧಿಯನ್ನೂ ಸಿದ್ಧಿಗೊಳಿಸಿ ಅವರ ಸಂಪೂರ್ಣ ಸಂತಾನವನ್ನು ಅಂದರೆ ಪುತ್ರ ಪುತ್ರಿಯರನ್ನೂ ಉತ್ತಮ ವಿದ್ಯಾವಂತರೂ ಕರ್ಮಠರೂ ಆಗುವಂತೆ ಪ್ರಯತ್ನಿಸಬೇಕು.

ಈ ಸೂಕ್ತದಲ್ಲಿ ವಿದ್ವಾಂಸರು, ಅಧ್ಯಾಪಕರು, ವಿದ್ಯಾರ್ಥಿಗಳು ಮತ್ತು ಅಗ್ನಿ ಇವರೆಲ್ಲರ ಗುಣಗಳ ಪ್ರಶಂಸೆ ಇರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಜ್ಞಾನರೂಪ ಸಂಗತಿಯಾಗಿದೆ.

**ಹದಿನೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೧೬

ಮಂತ್ರಸಂಖ್ಯೆ ೬ । ಉತ್ಕೀಲಃ ಕಾತ್ಯ ಋಷಿಃ । ಅಗ್ನಿರ್ದೇವತಾ । ೧, ೫ ಭುರಿಗನುಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೨, ೬ ನಿಚೃತ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೩ ನಿಚೃತ್ ಬೃಹತೀ, ೪ ಭುರಿಕ್ ಬೃಹತೀ ಛಂದಃ । ಮಧ್ಯಮಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ಗುಣಗಳನ್ನು ತಿಳಿಸಲಾಗಿದೆ.

**ಅಯಮಗ್ನಿಃ ಸುವೀರ್ಯಸ್ಯೇ-ಶೇ ಮಹಃ ಸೌಭಗಸ್ಯ ।**
**ರಾಯ ಈಶೇ ಸ್ವಪತ್ಯಸ್ಯ ಗೋಮತ ಈಶೇ ವೃತ್ರಹಥಾನಾಮ್ ॥೧॥**

**ಪದಾರ್ಥ:-** [ವೃತ್ರಹತಾನಾಂ] ಮೇಘಕ್ಕೆ ಸಮನಾದ ಶತ್ರುಗಳನ್ನು ಹನನ ಮಾಡುವವರ ಮಧ್ಯದಲ್ಲಿ [ಅಯಂ] [ಅಗ್ನಿಃ] ಈ ಅಗ್ನಿಗೆ ಸಮನಾದ ರಾಜನು [ಮಹಃ] ಶ್ರೇಷ್ಠವಾದ [ಸುವೀರ್ಯಸ್ಯ] ಉತ್ತಮ ಬಲದ [ಈಶೇ] ಒಡೆಯನು ಹಾಗೂ [ಸೌಭಗಸ್ಯ] ಶ್ರೇಷ್ಠ ಐಶ್ವರ್ಯ ಭಾವದ [ರಾಯಃ] [ಈಶೇ] ಸಂಪತ್ತಿನ ಒಡೆಯನು ಆಗಿರುವನು. [ಗೋಮತಃ] ಉತ್ತಮ ನುಡಿ ಹಾಗೂ ಭೂಮ್ಯಾದಿಗಳನ್ನು ಪಡೆದಿರುವ ಮನುಷ್ಯರ ಸ್ವಾಮಿಯೂ ಅಹುದು. [ಸ್ವಪತ್ಯಸ್ಯ] ಉತ್ತಮ ಸಂತಾನವಿರುವ ಮನುಷ್ಯನ ಸ್ವಾಮಿಯೂ ಆಗಿರುವನು. ಹಾಗೂ [ಈಶೇ] ಆ ಪುರುಷರಲ್ಲಿರುವ ದೋಷಗಳಿಗೆ ಸ್ವಾಮಿಯೂ ಆಗಿರುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಉತ್ತಮ ರೀತಿಯ ಹೋಮ ಹವನಾದಿಗಳಿಂದ ಹಾಗೂ ಯಂತ್ರಗಳಿಂದ ಉತ್ಪಾದಿಸಿಕೊಂಡಿರುವ ಅಗ್ನಿಯಿಂದ ಉತ್ತಮ ಬಲ, ಶ್ರೇಷ್ಠ ಸಂಪತ್ತು ಹಾಗೂ ಉತ್ತಮ ಸಂತಾನಗಳನ್ನು ಪಡೆದುಕೊಂಡು ಶತ್ರು ಸಂಹಾರ ಮಾಡುತ್ತಾರೋ ಹಾಗೇ ಮನುಷ್ಯರೂ ಸಹ ಉತ್ತಮ ಪುರುಷಾರ್ಥದಿಂದ ಉತ್ತಮ ಸೇನೆ, ಅತುಲ ಐಶ್ವರ್ಯ, ಶರೀರಬಲ, ಆತ್ಮಬಲದಿಂದ ಬಲಿಷ್ಠರಾದ ಸಂತಾನಗಳನ್ನು ಪಡೆದು ಶತ್ರುಗಳ ರೀತಿಯಲ್ಲಿರುವ ಕ್ರೋಧ ಮೋಹಾದಿ ದೋಷಗಳನ್ನು ತ್ಯಜಿಸಬೇಕು.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಇಮಂ ನರೋ ಮರುತಃ ಸಶ್ಚತಾ ವೃಧಂ ಯಸ್ಮಿನ್ ರಾಯಃ ಶೇವೃಧಾಸಃ ।**
**ಅಭಿ ಯೇ ಸಂತಿ ಪೃತನಾಸು ದೂಢ್ಯೋ ವಿಶ್ವಾಹಾ ಶತ್ರುಮಾದಭುಃ ॥೨॥**

**ಪದಾರ್ಥ:-** [ಮರುತಃ] ವಾಯುವಿನಂತೆ ಬಲಿಷ್ಠರಾದ ಮನುಷ್ಯರೇ! [ನರಃ] ವಿದ್ಯಾವಿನಯಗಳ ನಾಯಕರಾದ ಜನರೇ! ನೀವು [ಯಸ್ಮಿನ್] ಯಾವ ವ್ಯವಹಾರದಲ್ಲಿ [ಶೇವೃಧಾಸಃ] ಸುಖ, ವೃದ್ಧಿಕಾರಕವಾದ [ರಾಯಃ] [ಸಂತಿ] ಯಾವ ಧನ ಸಂಪತ್ತಿದೆಯೋ ಅದು [ಇಮಂ] [ವೃಧಂ] ಈ ಪುತ್ರಾದಿ ವೃದ್ಧಿಕಾರಕ ವ್ಯವಹಾರಗಳನ್ನು [ವಿಶ್ವಾಹಾ] ಯಾವಾಗಲೂ [ಸಶ್ಚತ] ಪಡೆಯುವವರಾಗಿರಿ. [ಯೇ] ಯಾರು [ಪೃತನಾಸು] ಮನುಷ್ಯರ ಸೇನೆಗಳಲ್ಲಿ [ದೂಢ್ಯಃ] ಕನಿಷ್ಠ ರೀತಿಯಲ್ಲಿ ಪರಾಜಿತರಾಗಲು ಯೋಗ್ಯ ಪುರುಷರೋ [ಶತ್ರುಂ] ಅಂತಹ ಶತ್ರುಗಳನ್ನು [ಆದಭುಃ] ಎಲ್ಲ ರೀತಿಯಿಂದಲೂ ನಾಶಗೊಳಿಸಿರಿ. ಅಂತಹ ಪುರುಷರನ್ನು [ಅಭಿ] ಅಭಿಮುಖರಾಗಿ ಪ್ರಾಪ್ತರಾಗಿರಿ.

**ಭಾವಾರ್ಥ:-** ರಾಜಪುರುಷರೇ! ಯಾವ ರೀತಿಯಲ್ಲಿ ಸಂಪತ್ತು ರಾಜ್ಯದ ಸ್ಥಿತಿ ಮತ್ತು ಕೀರ್ತಿ ಹೆಚ್ಚಾಗುವುದೋ, ಯಾವ ರೀತಿಯಿಂದ ಸೇನೆಗಳಲ್ಲಿ ಉತ್ತಮ ಪುರುಷರು ಇರುವರೋ ಅಂತಹ ಸತ್ಯ ವ್ಯವಹಾರವನ್ನು ಸರ್ವದಾ ಮಾಡುವವರಾಗಿರಿ.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಸ ತ್ವಂ ನೋ ರಾಯಃ ಶಿಶೀಹಿ ಮೀಢ್ವೋ ಅಗ್ನೇ ಸುವೀರ್ಯಸ್ಯ ।**

**ತುವಿದ್ಯುಮ್ನ ವರ್ಷಿಷ್ಠಸ್ಯ ಪ್ರಜಾವತೋಽನಮೀವಸ್ಯ ಶುಷ್ಮಿಣಃ ॥೩॥**

**ಪದಾರ್ಥ:-** **[ಮೀಢ್ವಃ]** ಸುಖದಾತನಾದ **[ತುವಿದ್ಯುಮ್ನಃ]** ಬಹು ರೀತಿಯ ಧನ ಮತ್ತು ಯಶಸ್ಸುಗಳನ್ನು ಪಡೆದಿರುವ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದವನೇ! **[ಸಃ]** **[ತ್ವಂ]** ಅಂತಹ ನೀನು **[ನಃ]** ನಮ್ಮೆಲ್ಲರಿಗಾಗಿ **[ಸುವೀರ್ಯಸ್ಯ]** ಉತ್ತಮ ವೀರರಲ್ಲಿ ಉತ್ಪನ್ನನಾದ **[ವರ್ಷಿಷ್ಠಸ್ಯ]** ಅತಿ ಹಿರಿಯನಾದ **[ಪ್ರಜಾವತಃ]** ಬಹು ಪ್ರಜೆಗಳನ್ನು ಹೊಂದಿರುವ **[ಅನಮೀವಸ್ಯ]** ರೋಗರಹಿತನಾದ **[ಶುಷ್ಮಿಣಃ]** ಅತಿ ಬಲಿಷ್ಠ ಪುರುಷನ **[ರಾಯಃ]** ಧನಸಂಪತ್ತನ್ನು **[ಶಿಶೀಹಿ]** ವೃದ್ಧಿಪಡಿಸು.

**ಭಾವಾರ್ಥ:-** ಯಾವ ಮನುಷ್ಯನು ಧನಬಲದಿಂದ ಸೇನೆಯನ್ನು ಕೀರ್ತಿಯನ್ನು ಪ್ರಜೆಗಳನ್ನು ಆರೋಗ್ಯವನ್ನು ಮತ್ತು ಶಕ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಾನೋ ಅಂತಹ ಮನುಷ್ಯನು ಯಾವಾಗಲೂ ವಿಪುಲ ಧನವಂತನಾಗುತ್ತಾನೆ.

ಈ ಮಂತ್ರದಲ್ಲಿ ಪುನಃ ಅದೇ ವಿಷಯವನ್ನು ಹೇಳಲಾಗಿದೆ.

**ಚಕ್ರಿರ್ಯೋ ವಿಶ್ವಾ ಭುವನಾಭಿ ಸಾಸಹಿ-ಶ್ಚಕ್ರಿರ್ದೇವೇಷ್ವಾ ದುವಃ ।**

**ಆ ದೇವೇಷು ಯತತ ಆ ಸುವೀರ್ಯ ಆ ಶಂಸ ಉತ ನೃಣಾಮ್ ॥೪॥**

**ಪದಾರ್ಥ:-** **[ಯಃ]** ಯಾವನು **[ವಿಶ್ವಾ]** **[ಭುವನಾ]** ಸಮಗ್ರ ಲೋಕಗಳನ್ನು **[ಅಭಿ, ಚಕ್ರಿಃ]** ಸಮ್ಮುಖಗೊಳಿಸಿಕೊಳ್ಳುತ್ತಾನೋ **[ದೇವೇಷು]** ಉತ್ತಮ ಗುಣವಂತರಲ್ಲಿ **[ಸಾಸಹಿಃ]** ಅತಿ ಸಹನಶೀಲನಾಗಿರುತ್ತಾನೋ **[ದುವಃ]** ಪರಿಚರ್ಯೆಯನ್ನು **[ಆ, ಚಕ್ರಿಃ]** ಉತ್ತಮ ರೀತಿಯಲ್ಲಿ ಮಾಡುತ್ತಾನೋ **[ದೇವೇಷು]** ಸ್ತುತಿಕಾರಕರಲ್ಲಿ **[ಆ]** **[ಯತತೇ]** ಉತ್ತಮ ಪ್ರಯತ್ನ ಮಾಡುತ್ತಾನೋ **[ಉತ]** ಮತ್ತು **[ನೃಣಾಂ]** ವೀರ ಪುರುಷರ **[ಆ, ಶಂಸೇ]** ಸ್ತುತಿಯಲ್ಲಿ **[ಸುವೀರ್ಯೇ]** ಶ್ರೇಷ್ಠ ಬಲದಲ್ಲಿ **[ಆ]**, **[ಸೇವಧ್ವಂ]** ಎಲ್ಲ ರೀತಿಯಿಂದಲೂ ಪ್ರಯತ್ನ ಮಾಡುತ್ತಾನೋ ಅವನ ಸೇವೆ ಮಾಡಿರಿ.

**ಭಾವಾರ್ಥ:-** ಮನುಷ್ಯರೇ! ಯಾವನಿಂದ ಸಂಪೂರ್ಣ ಲೋಕವು ಮತ್ತು ಮನುಷ್ಯರಾದಿಯಾಗಿ ಎಲ್ಲ ಜೀವರಾಶಿಗಳು ರಚಿಸಲ್ಪಟ್ಟಿವೆಯೋ, ಯಾವನಿಂದ ಅಂತಹ ಜೀವರಾಶಿಗಳಿಗೆ ಜೀವನಕ್ಕಾಗಿ ಅನ್ನಾದಿ ಪದಾರ್ಥಗಳು ಸೃಷ್ಟಿ ಮಾಡಲ್ಪಟ್ಟಿದೆಯೋ ಮತ್ತು ಯಾವನು ವಿದ್ಯಾವಂತರಿಂದಲೇ ತಿಳಿದುಕೊಳ್ಳಲು ಯೋಗ್ಯನಾಗಿರುವನೋ ಅಂತಹ ಪರಮಾತ್ಮನ ಸೇವೆಯನ್ನು ನಿರಂತರವಾಗಿ ಮಾಡುವವರಾಗಿರಿ.

ಪುನಃ ಅದೇ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ಮಾ ನೋ ಅಗ್ನೇಽಮತಯೇ ಮಾವೀರತಾಯೈ ರೀರಧಃ ।**

**ಮಾಗೋತಾಯೈ ಸಹಸಸ್ಪುತ್ರ ಮಾ ನಿದೇಽಪ ದ್ವೇಷಾಂಸ್ಯಾ ಕೃಧಿ ॥೫॥**

**ಪದಾರ್ಥ:-** **[ಸಹಸಃ]** ಶಕ್ತಿಯ **[ಪುತ್ರ]** ಪಾಲಕನಾದ **[ಅಗ್ನೇ]** ವಿದ್ಯಾವಂತ ಪುರುಷನೇ! ನೀನು **[ನಃ]** ನಮ್ಮೆಲ್ಲರ **[ಅಮತಯೇ]** ವಿಪರೀತ ಬುದ್ಧಿಗಾಗಿ **[ಮಾ ರೀರಧಃ]** ಆರಾಧಿಸದಿರು. **[ಅವೀರತಾಯೈ]** ಹೇಡಿತನಕ್ಕಾಗಿ

[ಮಾ] ಆರಾಧಿಸದಿರು [ಅಗೋತಾಯೈ] ಇಂದ್ರಿಯವೈಕಲ್ಯಕ್ಕಾಗಿ [ಮಾ] ಆರಾಧಿಸದಿರು [ನಿದೇ] ನಿಂದಕ ಪುರುಷನಿಗಾಗಿ [ದ್ವೇಷಾಂಸಿ] ದ್ವೇಷಭಾವಗಳನ್ನು [ಮಾ] ತೋರದಿರು. [ಅಪ] ಪ್ರತ್ಯೇಕಗೊಳಿಸುವುದರಲ್ಲಿ [ಆ] [ಕೃಧಿ] ಎಲ್ಲವನ್ನೂ ಮಾಡು.

**ಭಾವಾರ್ಥ:-** ಜ್ಞಾನ, ಸುಖ ಇವುಗಳನ್ನು ಬಯಸುವ ಮನುಷ್ಯರು ವಿದ್ಯಾವಂತರನ್ನು ಸಮೀಪಿಸಿ. ಬುದ್ಧಿ, ಪರಾಕ್ರಮ, ಜಿತೇಂದ್ರಿಯತೆ, ವಿದ್ಯೆ, ಉತ್ತಮ ಶಿಕ್ಷಣ, ಧರ್ಮಜ್ಞಾನ ಮತ್ತು ಬ್ರಹ್ಮಜ್ಞಾನ ಇವುಗಳನ್ನು ಕೊಡುವಂತೆ ಪ್ರಾರ್ಥಿಸಬೇಕು ಹಾಗೂ ನಿಂದನೆ ಮುಂತಾದ ದೋಷಗಳನ್ನು ನಿಂದಕ ಪುರುಷರ ಸಹವಾಸವನ್ನೂ ತ್ಯಜಿಸಬೇಕು. ಸಭ್ಯತೆಯನ್ನು ಗ್ರಹಣ ಮಾಡಬೇಕು.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಶಗ್ಧಿ ವಾಜಸ್ಯ ಸುಭಗ ಪ್ರಜಾವತೋಽಗ್ನೇ ಬೃಹತೋ ಅಧ್ವರೇ ।**
**ಸಂ ರಾಯಾ ಭೂಯಸಾ ಸೃಜ ಮಯೋಭುನಾ ತುವಿದ್ಯುಮ್ನ ಯಶಸ್ವತಾ ॥೬॥**

**ಪದಾರ್ಥ:-** [ತುವಿದ್ಯುಮ್ನ] ವಿಪುಲ ಸಂಪತ್ತು ಕೀರ್ತಿಗಳನ್ನು ಪಡೆದವನೇ [ಸುಭಗ] ಉತ್ತಮ ಐಶ್ವರ್ಯಧಾರಕನೇ! [ಅಗ್ನೇ] ಅಗ್ನಿಯಂತೆ ಇರುವ ವಿದ್ಯಾವಂತನೇ! ನೀನು [ಪ್ರಜಾವತಃ] ಪ್ರಶಂಸಾರ್ಹ ಪ್ರಜೆಗಳೊಂದಿಗೆ [ಬೃಹತಃ] ಶ್ರೇಷ್ಠವಾದ [ವಾಜಸ್ಯ] ಅನ್ನಾದಿ ಪದಾರ್ಥಗಳು ಮತ್ತು ವಿಜ್ಞಾನಮಯವಾದ [ಅಧ್ವರೇ] ಅಹಿಂಸಾತ್ಮಕ ವ್ಯವಹಾರದಲ್ಲಿ [ಶಗ್ಧಿ] ಸಮರ್ಥನಾಗಿರುವೆ. [ಭೂಯಸಾ] ಅತಿಶಯವಾಗಿ [ಮಯೋಭುನಾ] ಸುಖಕಾರಕವಾದ [ಯಶಸ್ವತಾ] ಉತ್ತಮ ಯಶಸ್ಸನ್ನು ತಂದುಕೊಡುವ [ರಾಯಾ] ಧನದೊಂದಿಗೆ [ಸಂಸೃಜ] ನಮ್ಮನ್ನು ಸಂಯುಕ್ತಗೊಳಿಸು.

**ಭಾವಾರ್ಥ:-** ಮನುಷ್ಯರೇ ನೀವು ವಿದ್ಯಾವಂತರ ಸಹವಾಸದಿಂದ ಈ ರೀತಿ ಪ್ರಾರ್ಥನೆ ಮಾಡಿರಿ. ವಿದ್ಯಾವಂತರೇ! ನೀವು ನಮ್ಮೆಲ್ಲರಿಗೂ ವಿದ್ಯೆ, ವಿನಯ, ಧನ ಮತ್ತು ಸುಖ ಇವುಗಳೊಂದಿಗೆ ಸಂಯುಕ್ತರನ್ನಾಗಿ ಮಾಡಿರಿ.

ಈ ಸೂಕ್ತದಲ್ಲಿ ವಿದ್ಯಾವಂತರ ಗುಣಗಾನ ಮಾಡಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಪ್ರತಿಷ್ಠಾರೂಪ ಸಂಗತಿಯನ್ನು ಹೊಂದಿದೆ ಎಂಬುದನ್ನು ಅರಿಯಿರಿ.

**ಹದಿನಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೧೭

**ಮಂತ್ರಸಂಖ್ಯೆ ೫ । ಉತ್ಕೀಲಃ ಕಾತ್ಯ ಋಷಿಃ । ಅಗ್ನಿರ್ದೇವತಾ । ೧, ೨ ತ್ರಿಷ್ಟುಪ್, ೪ ವಿರಾಟ್ ತ್ರಿಷ್ಟುಪ್, ೫ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ನಿಚೃತ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.**

ಈ ಮಂತ್ರದಲ್ಲಿ ಅಗ್ನಿಯ ಗುಣಗಳನ್ನು ತಿಳಿಸಲಾಗಿದೆ.

**ಸಮಿಧ್ಯಮಾನಃ ಪ್ರಥಮಾನು ಧರ್ಮಾ ಸಮಕ್ತುಭಿರಜ್ಯತೇ ವಿಶ್ವವಾರಃ ।**
**ಶೋಚಿಷ್ಕೇಶೋ ಘೃತನಿರ್ಣಿಕ್ಪಾವಕಃ ಸುಯಜ್ಞೋ ಅಗ್ನಿರ್ಯಜಥಾಯ ದೇವಾನ್ ॥೧॥**

**ಪದಾರ್ಥ:-** **[ಸಮಿಧ್ಯಮಾನಃ]** ಪ್ರಕಾಶಮಾನನಾದ **[ವಿಶ್ವವಾರಃ]** ಸಮಸ್ತ ಜನರಿಗೆ ಪ್ರಿಯನಾದ **[ಶೋಚಿಷ್ಕೇಶಃ]** ಮಿಂಚುವ ಕೇಶ ರಾಶಿಗಳಿರುವ **[ಘೃತನಿರ್ಣಿಕ್]** ತೇಜಸ್ವಿಯಾದ **[ಪಾವಕಃ]** ಪವಿತ್ರವನ್ನಾಗಿಸುವ **[ಸುಯಜ್ಞಃ]** ಯಜ್ಞಗಳನ್ನು ಉತ್ತಮಗೊಳಿಸುವ **[ಸಮಕ್ತುಭಿಃ]** ಉತ್ತಮ ರಾತ್ರಿಗಳಿಂದ **[ಯಜಥಾಯ]** ಸಂಗತಿಗೊಳ್ಳಲು **[ಪ್ರಥಮಾ]** ಪ್ರಸಿದ್ಧವಾದ **[ಧರ್ಮಾ]** ಧರ್ಮಗಳನ್ನು **[ಅಜ್ಯತೇ]** ಪ್ರಸಿದ್ಧಿಗೊಳಿಸುವ **[ದೇವಾನ್]** ಉತ್ತಮ ಗುಣಗಳ **[ಅನು]** ವಿಸ್ತಾರಗೊಳಿಸುವ ಅಗ್ನಿಗೆ ಎಲ್ಲ ರೀತಿಯ ಪ್ರೇರಣೆಯನ್ನು ನೀಡಿರಿ.

**ಭಾವಾರ್ಥ:-** ಯಾವನು ಅತಿಶಯ ಗುಣವಂತನಾಗಿ ಅಗ್ನ್ಯಾದಿ ಪದಾರ್ಥಗಳಿಂದ ತನ್ನ ಕಾರ್ಯಸಿದ್ಧಿಯನ್ನು ಮಾಡಿಕೊಳ್ಳುತ್ತಾನೋ, ಅಂತಹ ಮನುಷ್ಯನು ತನ್ನ ಸಮಸ್ತ ಕಾರ್ಯದಲ್ಲಿ ಸಫಲನಾಗುತ್ತಾನೆ.

ಈ ಮಂತ್ರದಲ್ಲಿ ಪುನಃ ಅದೇ ವಿಚಾರವನ್ನು ತಿಳಿಸಲಾಗಿದೆ.

**ಯಥಾಯಜೋ ಹೋತ್ರಮಗ್ನೇ ಪೃಥಿವ್ಯಾ ಯಥಾ ದಿವೋ ಜಾತವೇದಶ್ಚಿಕಿತ್ವಾನ್ ।**
**ಏವಾನೇನ ಹವಿಷಾ ಯಕ್ಷಿ ದೇವಾನ್ ಮನುಷ್ವದ್ಯಜ್ಞಂ ಪ್ರ ತಿರೇಮಮದ್ಯ ॥೨॥**

**ಪದಾರ್ಥ:-** **[ಜಾತವೇದಃ]** ಬುದ್ಧಿವಂತನಾದ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ಪುರುಷನೇ! ನೀನು **[ಯಥಾ]** ಹೇಗೆ **[ಪೃಥಿವ್ಯಾಃ]** ಭೂಮಿ ಅಂತರಿಕ್ಷಗಳ ಮಧ್ಯದಲ್ಲಿ **[ಹೋತ್ರಂ]** ಹವನ ಮಾಡುವ ಅಭ್ಯಾಸವನ್ನು **[ಅಯಜಃ]** ಮಾಡುವವನಾಗು. **[ಯಥಾ]** ಹೇಗೆ **[ದಿವಃ]** ಬೆಳಕಿನ **[ಯಥಾ]** ಹೇಗೆ **[ಚಿಕಿತ್ವಾನ್]** ಜ್ಞಾನಿ ಪುರುಷನಾದ ನೀನು **[ಅನೇನ]** **[ಹವಿಷಾ]** ಈ ಹವನ ಸಾಮಗ್ರಿಗಳಿಂದ **[ಏವ]** ಹವಿಸ್ಸುಗಳಿಂದಲೇ **[ದೇವಾನ್]** ವಿದ್ಯಾವಂತರ **[ಯಕ್ಷಿ]** ಆದರವನ್ನು ಮಾಡು. **[ಅದ್ಯ]** ಈ ಸಮಯದಲ್ಲಿ **[ಇಮಂ]** **[ಯಜ್ಞಂ]** ಈ ಸಂಗತಿಕರಣ ಕಾರ್ಯ ಮಾಡಲು **[ಪ್ರ]** **[ತಿರ]** ವಿಶೇಷ ರೀತಿಯ ಪ್ರಯತ್ನ ಮಾಡು. **[ಮನುಷ್ವತ್]** ನಾನೂ ಸಹ ಮನುಷ್ಯರಂತೆ ಸಫಲಗೊಳಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಮನುಷ್ಯನು ಸೃಷ್ಟಿಯಲ್ಲಿ ಪ್ರಾಣಾದಿಗಳೊಂದಿಗೆ ಕಾರ್ಯವು ಸಂಪೂರ್ಣವಾಗುವಂತೆ ವ್ಯವಹಾರವನ್ನು ಸಿದ್ಧಗೊಳಿಸುತ್ತಾನೋ ಅಂತಹ ಮನುಷ್ಯನು ಶ್ರೇಷ್ಠ ವಿಜ್ಞಾನವನ್ನು ಪಡೆದುಕೊಳ್ಳುತ್ತಾನೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಚಾರವನ್ನು ತಿಳಿಸಲಾಗಿದೆ.

**ತ್ರೀಣ್ಯಾಯೂಂಷಿ ತವ ಜಾತವೇದ-ಸ್ತಿಸ್ರ ಆಜಾನೀರುಷಸಸ್ತೇ ಅಗ್ನೇ ।**
**ತಾಭಿರ್ದೇವಾನಾಮವೋ ಯಕ್ಷಿ ವಿದ್ವಾ-ನಥಾ ಭವ ಯಜಮಾನಾಯ ಶಂ ಯೋಃ ॥೩॥**

**ಪದಾರ್ಥ:-** **[ಜಾತವೇದಃ]** ಸೃಷ್ಟಿಯ ಸಂಪೂರ್ಣ ಪದಾರ್ಥ ಜ್ಞಾನವನ್ನು ಪಡೆದಿರುವ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ **[ವಿದ್ವಾನ್]** ಸತ್ಯಾಸತ್ಯತೆಯನ್ನು ವಿವೇಚಿಸುವ ಜ್ಞಾನವಂತ ಪುರುಷನೇ! **[ತೇ]** ನೀನು ಅರಿತಿರುವ ಅಗ್ನಿಯು **[ಯಜಮಾನಾಯ]** ಯಾವುದೇ ಪದಾರ್ಥದಲ್ಲಿ ಅಗ್ನಿ ಸಂಯೋಗ ಮಾಡುವವನಿಗೆ **[ಶಂ]** ಕಲ್ಯಾಣಕಾರಕವಾಗುತ್ತದೆಯೋ ಹಾಗೆ **[ತವ]** ನಿನಗೆ ಸಂಬಂಧಿಸಿದ **[ತ್ರೀಣಿ]** ಶರೀರ, ಆತ್ಮ, ಮನಸ್ಸುಗಳೆಂಬ ಮೂರು ಬಗೆಯ ಸುಖಕಾರಕ **[ಆಯೂಂಷಿ]** ಜೀವಿತಕಾಲವು **[ತಿಸ್ರಃ]** ಮೂರು ಬಗೆಯ **[ಆಜಾನೀಃ]** ಎಲ್ಲ ಕಡೆಗಳಲ್ಲೂ ಪ್ರಸಿದ್ಧವಾದ **[ಉಷಸಃ]** ಬೆಳಗಿನ ಸಮಯದಂತೆ **[ಯೋಃ]** ಸಂಯೋಗ ವಿಭಾಗಕಾರಕನಾದ ನೀನು

**[ಯಕ್ಷಿ]** ಪ್ರಾಪ್ತನಾಗುವೆ **[ತಾಭಿಃ]** ಆ ಸಮಯದೊಂದಿಗೆ **[ದೇವಾನಾಂ]** ದಿವ್ಯ ಪದಾರ್ಥಗಳ / ವಿದ್ಯಾವಂತ ಜನರ **[ಅವಃ]** ರಕ್ಷಣೆ ಮಾಡುವವನಾಗು. **[ಭವ]** ಕಲ್ಯಾಣಕಾರಕನೂ ಆಗು.

**ಭಾವಾರ್ಥ:-** ಮನುಷ್ಯರು ದೀರ್ಘ ಬ್ರಹ್ಮಚರ್ಯ, ನಿಯತ ಆಹಾರ ವಿಹಾರ ಇವುಗಳಿಂದ ತನ್ನ ಆಯುಸ್ಸನ್ನು ಹೆಚ್ಚಿಸಿಕೊಳ್ಳುವ ಇಚ್ಛೆ ಮಾಡಿದರೆ ತ್ರಿಗುಣ ಎಂದರೆ ಮೂರು ನೂರು ವರ್ಷಗಳವರೆಗೂ ಜೀವಿಸಿರಲು ಸಾಧ್ಯವಾಗುತ್ತದೆ.

ಪುನಃ ಅದೇ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಅಗ್ನಿಂ ಸುದೀತಿಂ ಸುದೃಶಂ ಗೃಣಂತೋ ನಮಸ್ಯಾಮಸ್ತ್ವೇಡ್ಯಂ ಜಾತವೇದಃ ।**
**ತ್ವಾಂ ದೂತಮರತಿಂ ಹವ್ಯವಾಹಂ ದೇವಾ ಅಕೃಣ್ವನ್ನಮೃತಸ್ಯ ನಾಭಿಮ್ ॥೪॥**

**ಪದಾರ್ಥ:-** **[ಜಾತವೇದಃ]** ಬ್ರಹ್ಮಸೃಷ್ಟಿಯ ಪದಾರ್ಥಗಳಲ್ಲೇ ಪ್ರಸಿದ್ಧನಾದ ಪಂಡಿತನೇ! **[ತ್ವಾ]** ನಿನ್ನನ್ನು **[ದೂತಂ]** ದೂತನಂತೆ ಸಂತಾಪಗೊಳಿಸುವ **[ಅರತಿಂ]** ಪ್ರಾಪ್ತಿಕಾರಕ **[ಹವ್ಯವಾಹಂ]** ಹವನ ಮಾಡಿದ ಪದಾರ್ಥಗಳನ್ನು ಪಡೆದುಕೊಳ್ಳುವ ಅಗ್ನಿಯಂತೆ **[ಅಮೃತಸ್ಯ]** ಮೋಕ್ಷ ಪದವಿಯ **[ನಾಭಿಂ]** ನಾಭಿಯಂತೆ ಬಂಧಕನಾದ **[ದೇವಾಃ]** ವಿದ್ಯಾವಂತ ಜನರು **[ಅಕೃಣ್ವನ್]** ಮಾಡಿರುವರು. **[ಸುದೀತಿಂ]** ಉತ್ತಮ ರಕ್ಷಾಕಾರಕನಾದ **[ಸುದೃಶಂ]** ನೋಡಲು ಯೋಗ್ಯನಾದ / ದರ್ಶಕನಾದ **[ಈಡ್ಯಂ]** ಪ್ರಶಂಸಾರ್ಹ **[ಅಗ್ನಿಂ]** ಅಗ್ನಿಯಂತೆ ತೇಜಸ್ವಿಯಾದ **[ತ್ವಾಂ]** ಪಂಡಿತನಾದ ನಿನ್ನನ್ನು **[ಗೃಣಂತಃ]** ಸ್ತುತಿ ಮಾಡುವ ನಾವೆಲ್ಲರೂ **[ನಮಸ್ಯಾಮಃ]** ನಮನಗಳನ್ನು ಸಲ್ಲಿಸುತ್ತೇವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಅಗ್ನಿಯಂತೆ ತೇಜಸ್ವಿಯಾಗಿದ್ದು ವಿಜ್ಞಾನವನ್ನು ತಿಳಿಸುವ ವಿದ್ವಾಂಸರಾಗಿದ್ದು, ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳ ಸಾಧನಾ ಮಾರ್ಗವನ್ನು ಉಪದೇಶ ಮಾಡುತ್ತಾರೋ ಅಂತಹವರು ಅನುದಿನವೂ ನಮಸ್ಕಾರ ಪೂರ್ವಕ ಎಲ್ಲರಿಂದಲೂ ಸೇವಾರ್ಹರಾಗಿರುತ್ತಾರೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಚಾರವನ್ನು ತಿಳಿಸಲಾಗಿದೆ.

**ಯಸ್ತ್ವದ್ಧೋತಾ ಪೂರ್ವೋ ಅಗ್ನೇ ಯಜೀಯಾನ್ ದ್ವಿತಾ ಚ ಸತ್ತಾ ಸ್ವಧಯಾ ಚ ಶಂಭುಃ ।**
**ತಸ್ಯಾನು ಧರ್ಮ ಪ್ರ ಯಜಾ ಚಿಕಿತ್ವೋಽಥಾ ನೋ ಧಾ ಅಧ್ವರಂ ದೇವವೀತೌ ॥೫॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ಪುರುಷನೇ! **[ತ್ವತ್]** ನಿನ್ನ ಸಮೀಪದಿಂದ **[ಹೋತಾ]** ದಾನಶೀಲನೂ **[ಪೂರ್ವಃ]** ಪ್ರಾಚೀನ ಪಂಡಿತನೂ **[ಯಜ್ಞೀಯಾನ್]** ಅತಿಶಯ ಯಜ್ಞಕಾರಕನು ಅಥವಾ ಸಂಗತಿಕರಣ ಮಾಡುವವನು **[ದ್ವಿತಾ]** ಉಭಯರೂಪದ **[ಚ]** ಮತ್ತು **[ಸತ್ತಾ]** ಸ್ಥಿರನಾದವನು **[ಸ್ವಧಯಾ]** **[ಚ]** ಅನ್ನದಿಂದಲೂ **[ಶಂಭುಃ]** ಸುಖದಾಯಕನಾಗಲಿ. **[ತಸ್ಯ]** ಅವನ **[ಧರ್ಮ]** ಧಾರಣ ಯೋಗ್ಯವಾದ ಗುಣಗಳನ್ನು **[ಅನು]** **[ಪ್ರ]** **[ಯಜ]** ಪಡೆದುಕೊಳ್ಳುವವರಾಗಿರಿ. **[ಅಥ]** ಅನಂತರ **[ಚಿಕಿತ್ವಃ]** ವಿಜ್ಞಾನವಂತನಾದ ನೀನು **[ದೇವವೀತೌ]** ವಿದ್ಯಾವಂತರ ಸಮೂಹದಲ್ಲಿ **[ನಃ]** ನಮ್ಮೆಲ್ಲರ **[ಅಧ್ವರಂ]** ಅಹಿಂಸಾದಿರೂಪ ಗುಣಯುಕ್ತ ವ್ಯವಹಾರಗಳನ್ನು **[ಧಾಃ]** ಧಾರಣ ಮಾಡುವವನಾಗು.

**ಭಾವಾರ್ಥ:-** ಎಲೈ ಮನುಷ್ಯರೇ! ಯಾವ ವಿದ್ಯಾವಂತರು ನಿಮ್ಮೆಲ್ಲರ ಅಪೇಕ್ಷೆ ಮಾಡುತ್ತಾರೋ ಪ್ರಾಚೀನ ಪದಾರ್ಥಗಳ ಮತ್ತು ಅನ್ನಾದಿ ಸಾಮಗ್ರಿಗಳಿಂದ ಅಹಿಂಸಾತ್ಮಕ ವ್ಯವಹಾರಗಳನ್ನು ಧಾರಣ ಮಾಡಿರುತ್ತಾರೋ ಅವರಿಂದ ನೀವು, ಆ ಕಾರಣದಿಂದ ಅವರೂ ಸರ್ವದಾ ಸುಖಭೋಗಿಗಳಾಗಿರಿ/ಸುಖಭೋಗಿಗಳಾಗಲಿ.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣವರ್ಣನೆ ಮಾಡಿರುವುದರಿಂದ ಈ ಮಂತ್ರಾರ್ಥವು ಹಿಂದಿನ ಮಂತ್ರಾರ್ಥದೊಂದಿಗೆ ಸಮಾನ ಸಂಗತಿಯಾಗಿದೆ.

**ಹದಿನೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೧೮

ಮಂತ್ರಸಂಖ್ಯೆ ೫ । ಕತೋವೈಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧, ೩, ೫ ತ್ರಿಷ್ಟುಪ್, ೨, ೪ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ವಿದ್ವಾಂಸರು ಏನು ಮಾಡಿದರೆ ಯೋಗ್ಯ ಎಂಬ ವಿಷಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಭವಾ ನೋ ಅಗ್ನೇ ಸುಮನಾ ಉಪೇತೌ ಸಖೇವ ಸಖ್ಯೇ ಪಿತರೇವ ಸಾಧುಃ ।**
**ಪುರುದ್ರುಹೋ ಹಿ ಕ್ಷಿತಯೋ ಜನಾನಾಂ ಪ್ರತಿ ಪ್ರತೀಚೀರ್ದಹತಾದರಾತೀಃ ॥೧॥**

**ಪದಾರ್ಥ:-** [**ಅಗ್ನೇ**] ಕೃಪಾರೂಪಿ ವಿದ್ಯಾವಂತ ಪುರುಷನೇ! [**ಉಪೇತೌ**] ಪ್ರಾಪ್ತಿಯಲ್ಲಿ [**ಪಿತರೇವ**] ಜನಕನಿಗೆ ಸಮಾನನಾಗಿ [**ಸಖ್ಯೇ**] ಮಿತ್ರಕರ್ಮಕ್ಕೋಸ್ಕರ [**ಸಖೇವ**] ಮಿತ್ರನಂತೆ [**ನಃ**] ನಮ್ಮೆಲ್ಲರಿಗೆ [**ಸುಮನಾಃ**] ಉತ್ತಮ ಮನಸ್ಸುಳ್ಳವನು [**ಭವ**] ಆಗು ಮತ್ತು [**ಸಾಧುಃ**] ಉತ್ತಮೋಪದೇಶಗಳಿಂದ ಕಲ್ಯಾಣಕಾರಿಯಾಗು. [**ಜನಾನಾಂ**] ಮನುಷ್ಯರ ಮಧ್ಯದಲ್ಲಿ [**ಕ್ಷಿತಯಃ**] ಯಾವ ಮನುಷ್ಯನು [**ಪುರುದ್ರುಹಃ**] ಬಹಳಷ್ಟು ಜನರಿಂದ ದ್ವೇಷಕ್ಕೊಳಗಾಗುವನೋ [**ಪ್ರತೀಚೀಃ**] ಪ್ರತಿಕೂಲವಾಗಿ ವರ್ತಿಸುವನೋ ಅಂತಹ [**ಅರಾತೀಃ**] ಶತ್ರುಗಳನ್ನು [**ಪ್ರತಿ**] [**ದಹಿತಾತ್**] ಸಮಗ್ರದಹನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಎಲೈ ಮನುಷ್ಯರೇ! ನೀವೆಲ್ಲರೂ ವಿದ್ಯಾವಂತ ಮನುಷ್ಯರೊಂದಿಗೆ ಹಾಗೂ ಪ್ರಾಣಿಗಳೊಂದಿಗೆ ತಂದೆ ಮತ್ತು ಸ್ನೇಹಿತನಂತೆ ವರ್ತಿಸುವವರಾಗಿರಿ. ಅವರನ್ನು ಗೌರವಿಸಿರಿ ಮತ್ತು ಯಾರು ದ್ವೇಷಕಾರೀ ಜನರೋ ಅವರನ್ನು ಅನಾದರ ಮಾಡಿರಿ, ಧರ್ಮದ ವೃದ್ಧಿಗೊಳಿಸಿರಿ.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ತಪೋ ಷ್ವಗ್ನೇ ಅಂತರಾँ ಅಮಿತ್ರಾನ್ ತಪಾ ಶಂಸಮರರುಷಃ ಪರಸ್ಯ ।**
**ತಪೋ ವಸೋ ಚಿಕಿತಾನೋ ಅಚಿತ್ತಾನ್ ವಿ ತೇ ತಿಷ್ಠಂತಾಮಜರಾ ಆಯಾಸಃ ॥೨॥**

**ಪದಾರ್ಥ:-** [**ತಪೋ**] ತಪಸ್ವಿಯೇ! [**ಅಗ್ನೇ**] ದುಷ್ಟ ಜನರನ್ನು ಅಗ್ನಿಯಂತೆ ದಹಿಸುವ ನೀವೆಲ್ಲರೂ [**ಅಂತರಾನ್**] ಭೇದಭಾವವನ್ನು ತಳೆದಿರುವ [**ಅಮಿತ್ರಾನ್**] ಶತ್ರುಗಳನ್ನು [**ಸುತಪ**] ಸಂತಪ್ತರನ್ನಾಗಿ ಮಾಡಿ ಹಾಗೂ [**ಅರರುಷಃ**] ಅಹಿಂಸಾಯುಕ್ತರಾದ [**ಪರಸ್ಯ**] ಶ್ರೇಷ್ಠ ಜನರನ್ನು [**ಶಂಸಂ**] ಪ್ರಶಂಸೆ ಮಾಡಿರಿ. [**ತಪೋ**] ದುಷ್ಟರನ್ನು ದಹಿಸುವವನಾದ [**ವಸೋ**] ಉತ್ತಮ ಗುಣಗಳಲ್ಲಿ ನೆಲೆಸಿರುವ [**ಚಿಕಿತಾನಃ**] ಜ್ಞಾನವಂತನು/ ಬೋಧಕಾರಕನೂ ಆದ ನೀನು [**ಅಚಿತ್ತಾನ್**] ದರಿದ್ರಾವಸ್ಥೆಯಲ್ಲಿರುವ ಪುರುಷರನ್ನು ಜಾಗೃತಗೊಳಿಸು. [**ಅಜರಾಃ**] ಯಾರು ವೃದ್ಧಾವಸ್ಥಾರಹಿತರಾಗಿರುವರೋ [**ಆಯಾಸಃ**] ಜ್ಞಾನವಂತ ಪುರುಷರೋ [**ತೇ**] ಅವರು ನಿನ್ನ ಸಮೀಪಕ್ಕೆ [**ವಿ**] [**ತಿಷ್ಠಂತಾಮ್**] ಬಂದು ನೆಲೆಸುವಂತಾಗಲಿ.

**ಭಾವಾರ್ಥ:-** ಯಾವ ಮನುಷ್ಯರು ಶತ್ರುಗಳನ್ನು ಪ್ರತ್ಯೇಕಗೊಳಿಸಿ, ಧಾರ್ಮಿಕನೂ, ಸತ್ಯವಾದಿಯೂ, ಯಥಾರ್ಥ ನುಡಿಯವವನೂ ಆಗಿರುವನೋ ಅಂತಹ ಮನುಷ್ಯನನ್ನು ಗೌರವಿಸಿ ಎಲ್ಲ ಮನುಷ್ಯರ ಸುಖವೃದ್ಧಿಗಾಗಿ ಪ್ರಯತ್ನಿಸಿದರೆ ಅವರು ತಾವೂ ಸುಖಿಗಳಾಗುತ್ತಾರೆ.

ಪುನಃ ಅದೇ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಇಧ್ಮೇನಾಗ್ನ ಇಚ್ಛಮಾನೋ ಘೃತೇನ ಜುಹೋಮಿ ಹವ್ಯಂ ತರಸೇ ಬಲಾಯ ।**
**ಯಾವದೀಶೇ ಬ್ರಹ್ಮಣಾ ವಂದಮಾನ ಇಮಾಂ ಧಿಯಂ ಶತಸೇಯಾಯ ದೇವೀಮ್ ॥೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ವಿದ್ಯೆಯಿಂದ ಪ್ರಕಾಶಮಾನನಾದವನೇ! **[ಇಧ್ಮೇನ]** ಸಮಿಧೆಯಿಂದ **[ಘೃತೇನ]** ಹಾಗೂ ಉತ್ತಮ ಮಂತ್ರಗಳಿಂದ ಸಂಸ್ಕರಿಸಲಾದ ಆಜ್ಯದಿಂದ **[ಇಚ್ಛಮಾನಃ]** ಇಚ್ಛಾಕಾರಿಯಾದ ನಾನು **[ತರಸೇ]** ವೇಗಕ್ಕಾಗಿ **[ಬಲಾಯ]** ಬಲಕ್ಕಾಗಿ **[ಹವ್ಯಂ]** ಹವನೀಯ ದ್ರವ್ಯಗಳನ್ನು **[ಜುಹೋಮಿ]** ಹೋಮ ಮಾಡುತ್ತೇನೆ. **[ಬ್ರಹ್ಮಣಾ]** ವಿಪುಲ ಧನರಾಶಿಯೊಂದಿಗೆ **[ವಂದಮಾನಃ]** ಸ್ತುತಿಯೊಂದಿಗೆ ಉಪಾಸನೆ ಮಾಡುವ ನಾನು **[ಶತಸೇಯಾಯ]** ಶತಾದಿ ಸಂಖ್ಯೆಗಳಿಂದ ಕೂಡಿರುವ ಧನ ಪ್ರಾಪ್ತಿಗಾಗಿ **[ಇಮಾಂ]** ಈ ವರ್ತಮಾನವಾದ **[ದೇವೀಂ]** ಪ್ರಕಾಶಮಾನವಾದ **[ಧಿಯಂ]** ಧಾರಣಯೋಗ್ಯ ಬುದ್ಧಿಯನ್ನು **[ಯಾವತ್]** ಯಾವ ಪರಿಣಾಮದಿಂದ **[ಈಶೇ]** ಬಯಸುವೆನೋ ಆ ಪ್ರಮಾಣದಲ್ಲಿ ನೀನೂ ಹೋಮ ಮಾಡು ಮತ್ತು ಬಯಸುವವನಾಗು.

**ಭಾವಾರ್ಥ:-** ಹೇಗೆ ಇಂಧನದಿಂದ ಮತ್ತು ಆಜ್ಯದಿಂದ ಅಗ್ನಿಯ ವೃದ್ಧಿ ಹೊಂದುತ್ತದೆಯೋ, ಅದೇ ರೀತಿ ಬ್ರಹ್ಮಚರ್ಯ ಮತ್ತು ವೇದಾಭ್ಯಾಸದಿಂದ ಬಲ ಮತ್ತು ವಿದ್ಯೆಗಳು ಬೆಳೆಯುತ್ತವೆ. ಎಷ್ಟು ಕಾಲದವರೆಗೆ ವೇದಾಧ್ಯಯನ ದಿಂದ ಬ್ರಹ್ಮಚರ್ಯದ ರಕ್ಷಣೆಯನ್ನು ಮಾಡಲು ಸಾಧ್ಯವೋ ಅಷ್ಟು ಕಾಲದವರೆಗೆ ಅಭ್ಯಾಸ ಮಾಡಬೇಕು.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಉಚ್ಛೋಚಿಷಾ ಸಹಸಸ್ಪುತ್ರ ಸ್ತುತೋ ಬೃಹದ್ವಯಃ ಶಶಮಾನೇಷು ಧೇಹಿ । ರೇವದಗ್ನೇ**
**ವಿಶ್ವಾಮಿತ್ರೇಷು ಶಂ ಯೋ-ರ್ಮರ್ಮೃಜ್ಮಾ ತೇ ತನ್ವ (ಅಂ) ೧ ಭೂರಿ ಕೃತ್ವಃ ॥೪॥**

**ಪದಾರ್ಥ:-** **[ಭೂರಿ]** **[ಕೃತ್ವಃ]** ಬಹಳಷ್ಟು ಜನರಿಂದ ರಚಿಸಿರುವ **[ಸಹಸಸ್ಪುತ್ರ]** **[ಅಗ್ನೇ]** ಬಲವನ್ನು ಉತ್ಪಾದಿಸುವ ಅಗ್ನಿಗೆ ಸದೃಶನಾದ ವೈದ್ಯವಿದ್ಯಾ ನಿಪುಣನೇ! **[ಸ್ತುತಃ]** ಪ್ರಶಂಸಿಸಲ್ಪಟ್ಟ ನೀನು **[ಶೋಚಿಷಾ]** ತೇಜಸ್ಸಿನಿಂದ **[ಶಶಮಾನೇಷು]** ಭೋಗಾಭ್ಯಾಸವನ್ನು ಉಲ್ಲಂಘಿಸಿದವರಾದ (ಆಹಾರ ನಿಯಂತ್ರಣವಿಲ್ಲದವರು) **[ವಿಶ್ವಾಮಿತ್ರೇಷು]** ಎಲ್ಲಾ ಜನರ ಸ್ನೇಹಿತರೂ ಅವರಲ್ಲಿ **[ರೇವತ್]** ಪ್ರಶಂಸಾರ್ಹ ಧನ ಸಂಪತ್ತಿರುವವರು **[ಬೃಹತ್]** ಅಧಿಕವಾಗಿ **[ವಯಃ]** ಭೋಗಿಸುವ ವಯಸ್ಸಿನಲ್ಲಿರುವವರು **[ಶಂ]** ಅವರಿಗೆ ಸುಖವನ್ನು ಕೊಡು. **[ಯೋಃ]** ದುಃಖನಾಶಕನು ಸುಖವನ್ನು ಕೊಡುವವನು **[ಮರ್ಮೃಜ್ಮಾ]** ಪವಿತ್ರನು / ಪವಿತ್ರಕಾರಕನೂ ಆದ ನೀನು **[ತೇ]** ನಿನ್ನ **[ತನ್ವಂ]** ಶರೀರವನ್ನು **[ಉತ್]** **[ದೇಹಿ]** ಸ್ಥಿರಗೊಳಿಸು / ಗೊಳಿಸಿಕೊ.

**ಭಾವಾರ್ಥ:-** ಎಲೈ ಮನುಷ್ಯರೇ! ನೀವು ಬ್ರಹ್ಮಚರ್ಯಪಾಲನೆ, ವಿದ್ಯಾಭ್ಯಾಸ ಆಹಾರ ನಿಯಂತ್ರಣ ಇವುಗಳ ಮೂಲಕ ನಿಮ್ಮ ಸಾಮರ್ಥ್ಯವನ್ನು ಬೆಳೆಸಿಕೊಳ್ಳಿರಿ. ಎಲ್ಲಾ ಜನರೊಂದಿಗೂ ಸ್ನೇಹಭಾವವನ್ನು ಬೆಳೆಸಿಕೊಳ್ಳಿರಿ. ಎಲ್ಲರನ್ನೂ ಅಧಿಕ ಸಾಮರ್ಥ್ಯವಂತರೂ ಬಹು ವಿದ್ಯಾವಂತರೂ ಆಗುವಂತೆ ಮಾಡಿರಿ.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಕೃಧಿ ರತ್ನಂ ಸುಸನಿತರ್ಧನಾನಾಂ ಸ ಘೇದಗ್ನೇ ಭವಸಿ ಯತ್ಸಮಿದ್ಧಃ ।**
**ಸ್ತೋತುರ್ದುರೋಣೇ ಸುಭಗಸ್ಯ ರೇವತ್ ಸೃಪ್ರಾ ಕರಸ್ನಾ ದಧಿಷೇ ವಪೂಂಷಿ ॥೫॥**

**ಪದಾರ್ಥ:-** **[ಸುಸನಿತಃ]** ಉತ್ತಮ ರೀತಿಯಲ್ಲಿ ದಾನ ವಿಭಾಗ ಮಾಡುವ **[ಅಗ್ನೇ]** ಮಿಂಚಿನಂತೆ ಬಹುಬೇಗನೆ ಸಂಪತ್ತು ವೃದ್ಧಿಗೊಳಿಸುವವನೇ! **[ಯತ್]** ಯಾವ ನೀನು **[ಸಮಿದ್ಧಃ]** ಪ್ರಕಾಶಮಾನವಾದ ಅಗ್ನಿಯಂತೆ ಬೆಳಗುವವನಾಗಿ **[ಸ ಘ]** ಅಂತಹ ನೀನು **[ಧನಾನಾಂ]** ಸುವರ್ಣಾದಿ ರೂಪ ಸಂಪತ್ತಿನಲ್ಲಿ **[ರತ್ನಂ]** ಉತ್ತಮ ಧನವನ್ನು **[ಕೃಧಿ]** ಸಂಯೋಜಿಸುವವನಾಗು. **[ಸುಭಗಸ್ಯ]** ಉತ್ತಮ ಸಂಪತ್ತಿನ **[ಸ್ತೋತುಃ]** ಹವನ ಮಾಡುವವನು ಅಥವಾ ಸ್ತುತಿಸುವವನು **[ಇತ್]** ಅವನಿಗೆ ಸಮನಾಗಿ **[ದುರೋಣೇ]** ಮನೆಯಲ್ಲಿ **[ಸೃಪ್ರಾ]** ಅಭೀಷ್ಟಸ್ಥಾನದ ಪ್ರಾಪ್ತಿಕಾರಕನಾಗಿ **[ಕರಸ್ನಾ]** ಕರ್ಮವನ್ನು ಶುದ್ಧಿಗೊಳಿಸುವ ನಿನ್ನ ಕೈಗಳು **[ರೇವತ್]** ಹಾಗೂ ಸಂಪದ್ಭರಿತವಾದ **[ವಪೂಂಷಿ]** ಸುಂದರ ಶರೀರವನ್ನು **[ದಧಿಷೇ]** ಧಾರಣ ಮಾಡುತ್ತೀಯೆ. ಆದ್ದರಿಂದ ಎಲ್ಲ ಜನರ ಗೌರವಕ್ಕೆ ಯೋಗ್ಯನಾಗಿರುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಎಲೈ ವಿದ್ವಾಂಸರೇ! ಎಲ್ಲ ಜನರನ್ನು ಉತ್ತಮ ವಿದ್ಯಾವಂತರು ಪ್ರಶಿಕ್ಷಣ ಪಡೆದವರು ಆಗುವಂತೆ ಮಾಡಿರಿ. ಪುರುಷಾರ್ಥದೊಂದಿಗೆ ವಿದ್ಯಾಧನ ಸಂಪನ್ನರನ್ನಾಗಿ ಮಾಡಿ ಸಭ್ಯರೂ, ಚಿರಂಜೀವಿಗಳೂ ಆಗುವಂತೆ ಮಾಡಿರಿ.

ಈ ಸೂಕ್ತದಲ್ಲಿ ವಿದ್ಯಾವಂತರ ಮತ್ತು ಅಗ್ನಿಯ ಗುಣಗಳ ವರ್ಣನೆ ಇರುವುದರಿಂದ ಹಿಂದಿನ ಸೂಕ್ತಾರ್ಥದೊಂದಿಗೆ ಈ ಸೂಕ್ತದ ಅರ್ಥವು ಪ್ರಾಸಂಗಿಕ ಸಂಗತಿಯಾಗಿದೆ.

**ಹದಿನೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೧೯

ಮಂತ್ರಸಂಖ್ಯೆ ೫ । ಕುಶಿಕ ಪುತ್ರೋ ಗಾಥೀ ಋಷಿಃ । ಅಗ್ನಿರ್ದೇವತಾ । ೧ ತ್ರಿಷ್ಟುಪ್, ೨, ೪, ೫ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಮನುಷ್ಯರ ಧನಾದಿ ಸಂಪತ್ತುಗಳು ಹೇಗೆ ವೃದ್ಧಿ ಹೊಂದುತ್ತವೆ ಎಂಬುದನ್ನು ತಿಳಿಸಲಾಗಿದೆ.

**ಅಗ್ನಿಂ ಹೋತಾರಂ ಪ್ರ ವೃಣೇ ಮಿಯೇಧೇ ಗೃತ್ಸಂ ಕವಿಂ ವಿಶ್ವವಿದಮಮೂರಮ್ ।**
**ಸ ನೋ ಯಕ್ಷದ್ದೇವತಾತಾ ಯಜೀಯಾನ್ ರಾಯೇ ವಾಜಾಯ ವನತೇ ಮಘಾನಿ ॥೧॥**

**ಪದಾರ್ಥ:-** **[ಮಿಯೇಧೇ]** ಘೃತಾದಿಗಳು ಪ್ರಕ್ಷೇಪಣವಾಗುವಂತಹ ಯಜ್ಞದಲ್ಲಿ **[ಹೋತಾರಂ]** ಹವನ ಮಾಡುವವನು / ಆಹುತಿಕೊಡುವವನು **[ವಿಶ್ವವಿದಾಂ]** ಎಲ್ಲ ಶಾಸ್ತ್ರವನ್ನೂ ಅರಿತವನು **[ಅಮೂರಂ]** ಮೂಢತಾದಿ ದೋಷ ರಹಿತನಾದವನು **[ಕವಿಂ]** ತೀಕ್ಷ್ಣ ಬುದ್ಧಿಯವನು / ಬಹು ಶಾಸ್ತ್ರವನ್ನು ಅಧ್ಯಾಪನ ಮಾಡುವವನು **[ಗೃತ್ಸಂ]** ಶಿಕ್ಷಣ ನೀಡುವುದರಲ್ಲಿ ಚತುರನಾದವನು **[ಅಗ್ನಿಂ]** ಅಗ್ನಿಯಂತೆ ತೇಜಸ್ವಿಯೂ ಆಗಿರುವ ಪುರುಷನನ್ನು **[ಪ್ರ, ವೃಣೇ]** ನಾನು ಸ್ವೀಕರಿಸುವೆನು. **[ಸಃ]** ಅಂತಹ **[ಯಜೀಯಾನ್]** ಅತ್ಯಂತ ಯಜನಶೀಲನಾದ ನೀನು **[ವಾಜಾಯ]** ಜ್ಞಾನದಾತನೂ **[ವನತೇ]** ಸಂತೋಷದಿಂದ ಕೊಟ್ಟ ಪದಾರ್ಥಗಳನ್ನು ಸ್ವೀಕರಿಸುವವನೂ ಆದ

ನಿನಗೋಸ್ಕರ [ರಾಯೇ] ಧನ ಪ್ರಾಪ್ತಿಗಾಗಿಯೂ [ಮಘಾನಿ] ಗೌರವಿಸಲು ಯೋಗ್ಯವಾದ ಧನ ಹಾಗೂ [ದೇವತಾತಾ] ವಿದ್ವಾಂಸರಿಗೆ [ನಃ] ನಮಗಾಗಿ [ಯಕ್ಷತ್] ಸಂಗತಿಕರಣ ಮಾಡು.

**ಭಾವಾರ್ಥ:-** ಮನುಷ್ಯರು ಯಾರು, ಯಾವ ಅಧಿಕಾರಕ್ಕೆ ಯೋಗ್ಯರೋ ಅಂತಹ ಮನುಷ್ಯರನ್ನು ಆ ಅಧಿಕಾರದಲ್ಲಿ ನಿಯಮಿಸಬೇಕು. ಏಕೆಂದರೆ ಅದರಿಂದ ಧನಧಾನ್ಯರೂಪವಾಗಿ ಎಲ್ಲ ವಿಧದ ಐಶ್ವರ್ಯವು ಸಮೃದ್ಧಿಗೊಳ್ಳುತ್ತದೆ.

ಈ ಮಂತ್ರದಲ್ಲಿ ಮನುಷ್ಯರು ಮಾಡಬೇಕಾದ ಕೆಲಸವನ್ನು ತಿಳಿಸಲಾಗಿದೆ.

**ಪ್ರ ತೇ ಅಗ್ನೇ ಹವಿಷ್ಮತೀಮಿಯ-ರ್ಮ್ಯಚ್ಛಾ ಸುದ್ಯುಮ್ನಾಂ ರಾತಿನೀಂ ಘೃತಾಚೀಮ್ ।**

**ಪ್ರದಕ್ಷಿಣಿದ್ದೇವತಾತಿಮುರಾಣಃ ಸಂ ರಾತಿಭಿರ್ವಸುಭಿರ್ಯಜ್ಞಮಶ್ರೇತ್ ॥೨॥**

**ಪದಾರ್ಥ:-** [ಅಗ್ನೇ] ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತ ಪುರುಷನೇ! [ತೇ] ನಿನ್ನ ಪ್ರಶಿಕ್ಷಣದಿಂದ [ಉರಾಣಃ] ವಿದ್ವಾಂಸರ ಗೌರವದಿಂದ ಶ್ರೇಷ್ಠ ಕಾರ್ಯಕರ್ತನು [ಪ್ರದಕ್ಷಿಣಿತ್] ಯಾರಾದರೂ ಸನ್ಮಾರ್ಗದಲ್ಲಿ ಪ್ರವರ್ತಿಸುವ ಮನುಷ್ಯನು [ವಸುಭಿಃ] ನಿವಾಸದ ನಿಮಿತ್ತದಿಂದ [ರಾತಿಭಿಃ] ಸುಖ ಪ್ರದಾನಾದಿಗಳೊಂದಿಗೆ [ಹವಿಷ್ಮತೀಂ] ಹವನ ಯೋಗ್ಯ ಸಾಮಗ್ರಿಗಳೊಂದಿಗೆ [ಸುದ್ಯುಮ್ನಾಂ] ಉತ್ತಮ ಬೆಳಕಿನೊಂದಿಗೆ ಕೂಡಿರುವ [ರಾತಿನೀಂ] ಆಹುತಿ ಕೊಟ್ಟಿರುವ ಪದಾರ್ಥಗಳೊಂದಿಗೆ [ದೇವತಾತಿಂ] ಉತ್ತಮ ಸ್ವರೂಪ ವಿಶಿಷ್ಟವಾದ [ಘೃತಾಚೀಂ] ಉತ್ತಮ ಜಲವನ್ನು ಪಡೆದಿರುವ ರಾತ್ರಿಯನ್ನು [ಯಜ್ಞಂ] ಸುಷುಪ್ತ್ಯಾದಿ ಸಂಗತ ವ್ಯವಹಾರವನ್ನು [ಸಮಶ್ರೇತ್] ಪಡೆದುಕೊಳ್ಳಬೇಕು. [ಅಚ್ಛ] ಉತ್ತಮ ರೀತಿಯಿಂದ [ಪ್ರ, ಇಯರ್ಮಿ] ನಾನು ಅವನನ್ನು ಸಮೀಪಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಹಗಲಿನಲ್ಲಿ ನಿದ್ದೆ ಮಾಡುವುದನ್ನು ಬಿಟ್ಟು ಸಾಂಸಾರಿಕ ವ್ಯವಹಾರಗಳನ್ನು ಸಿದ್ಧಿಪಡಿಸಿಕೊಳ್ಳುವುದಕ್ಕಾಗಿ ಪ್ರಯತ್ನಿಸಬೇಕು. ರಾತ್ರಿಯ ಸಮಯದಲ್ಲಿ ನಿಶ್ಚಿಂತೆಯಿಂದ ೧೫ ಘಳಿಗೆಯ ಕಾಲವನ್ನು ನಿದ್ರೆಯಲ್ಲಿ ಕಳೆಯಬೇಕು. ಹಗಲಿನಲ್ಲಿ ಪುರುಷಾರ್ಥ ಮಾರ್ಗದಿಂದ ಧನಾದಿಗಳನ್ನು ಸಂಗ್ರಹಿಸಿ ಸತ್ಪಾತ್ರರಿಗೆ ಕೊಡುವಿಕೆ ಮತ್ತು ಸನ್ಮಾರ್ಗದಲ್ಲಿ ಅದನ್ನು ವ್ಯಯಿಸಬೇಕು.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಸ ತೇಜೀಯಸಾ ಮನಸಾ ತ್ವೋತ ಉತ ಶಿಕ್ಷ ಸ್ವಪತ್ಯಸ್ಯ ಶಿಕ್ಷೋಃ ।**

**ಅಗ್ನೇ ರಾಯೋ ನೃತಮಸ್ಯ ಪ್ರಭೂತೌ ಭೂಯಾಮ ತೇ ಸುಷ್ಟುತಯಶ್ಚ ವಸ್ವಃ ॥೩॥**

**ಪದಾರ್ಥ:-** [ಅಗ್ನೇ] ಪರಿಪೂರ್ಣ ವಿದ್ಯೆಯಿಂದ ಬೆಳಗುತ್ತಿರುವವನೇ! [ಸ್ವಪತ್ಯಸ್ಯ] ನಾವು ನಮ್ಮ ಸಂತಾನದೊಂದಿಗೆ ವಿದ್ಯಾರ್ಥಿಗಳೊಂದಿಗೆ [ನೃತಮಸ್ಯ] ಅತ್ಯಂತ ಶೂರ ವೀರರೊಂದಿಗೆ ಕೂಡಿರುವ [ಶಿಕ್ಷೋಃ] ಶಿಕ್ಷಕರಾದ [ತೇ] ನಿಮ್ಮ ಶಿಕ್ಷಣ ವಿಧಾನದಲ್ಲಿ [ಸುಷ್ಟುತಯಃ] ಯೋಗ್ಯ ಸ್ತುತಿಗಳನ್ನು ಮಾಡುವ ಶ್ರೇಷ್ಠ ಪುರುಷನು [ತೇಜೀಯಸಾ] ತೇಜಸ್ವಿಯೂ ಪವಿತ್ರ ಸ್ವಭಾವದವನೂ ಆದ ಮನುಷ್ಯನು [ಮನಸಾ] ಅಂತಃಕರಣದಿಂದ [ವಸ್ವಃ] ಸುಖನಿವಾಸಕ್ಕೆ ಕಾರಣವಾದ ಧನ ಮತ್ತು [ರಾಯಃ] ಸಂಪತ್ತಿನ [ಪ್ರಭೂತೌ] ಹೆಚ್ಚಿಸಿಕೊಳ್ಳುವುದರಲ್ಲಿ [ಭೂಯಾಮ] ವಿದ್ಯಮಾನನಾಗಲಿ. [ಸಃ] ಅವನು [ತ್ವೋತಃ] ನಿಮ್ಮನ್ನು ಪಡೆಯಲು ಬಯಸುವವನಾಗಿರುವನೋ ಅವನಿಗಾಗಿ [ಚ] ಮತ್ತು ನಮ್ಮೆಲ್ಲರಿಗಾಗಿಯೂ ಸಹ [ಉತ] [ಶಿಕ್ಷ] ನೀನು ಉತ್ತಮ ವಿದ್ಯೆಯ ಉಪದೇಶವನ್ನು ಮಾಡು.

**ಭಾವಾರ್ಥ:-** ಯಾವನು ಬ್ರಹ್ಮಚರ್ಯದಿಂದ ಮತ್ತು ವಿದ್ಯೆಯಿಂದ ಧರ್ಮ ಸಂಬಂಧೀ ವ್ಯವಹಾರಗಳನ್ನು ಮಾಡುತ್ತ ನಿಷ್ಕಪಟ ಅಂತಃಕರಣದಿಂದ ಆತ್ಮಬಲದಿಂದ ತನ್ನ ಅಧಿಕಾರವನ್ನು ನಿರ್ವಹಿಸಲು ಪ್ರಯತ್ನಿಸುವನೋ ಅಂತಹ ವ್ಯಕ್ತಿಗೆ ಧನಪತಿ / ಕೋಶಾಧ್ಯಕ್ಷನ ಅಧಿಕಾರ ಕೊಡುವುದು ಯೋಗ್ಯವಾಗುತ್ತದೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಭೂರೀಣಿ ಹಿ ತ್ವೇ ದಧಿರೇ ಅನೀಕಾ-ಗ್ನೇ ದೇವಸ್ಯ ಯಜ್ಯವೋ ಜನಾಸಃ ।**
**ಸ ಆ ವಹ ದೇವತಾತಿಂ ಯವಿಷ್ಠ ಶರ್ಧೋ ಯದದ್ಯ ದಿವ್ಯಂ ಯಜಾಸಿ ॥೪॥**

**ಪದಾರ್ಥ:-** [ಯವಿಷ್ಠ] ಯುವಾವಸ್ಥೆಯನ್ನು ಪಡೆದಿರುವ [ಅಗ್ನೇ] ಮಿಂಚಿನಂತೆ ಸಕಲ ವಿದ್ಯಾವ್ಯಾಪಿಯಾದ ಪುರುಷನೇ! [ದೇವಸ್ಯ] ಉತ್ತಮ ಗುಣಕರ್ಮ ಸ್ವಭಾವಗಳ ಮನುಷ್ಯರ ಸಂಗದಿಂದ [ಯಜ್ಯವಃ] ಗೌರವಿಸಲು ಯೋಗ್ಯರಾದ [ಜನಾಸಃ] ವಿದ್ಯಾದಿ ಗುಣಗಳಿಂದ ಯುಕ್ತರಾದ ಜನರು [ಹಿ] ಯಾವ ಕಾರಣದಿಂದ [ತ್ವೇ] ನಿನ್ನಲ್ಲಿ [ಭೂರಿಣಿ] ವಿಪುಲವಾದ [ಅನೀಕಾ] ಸೇನೆಗಳನ್ನು [ದಧಿರೇ] ಧಾರಣ ಮಾಡಿರುವರೋ [ಯತ್] [ಅದ್ಯ] ಯಾವುದು ಈ ದಿನ [ದಿವ್ಯಂ] [ಶರ್ಧಃ] ಉತ್ಕೃಷ್ಟ ಬಲದ [ಯಜಾಸಿ] ಧಾರಣ ಮಾಡಿರುವಿಯೋ [ಸಃ] ಅಂತಹ ನೀನು [ದೇವತಾತಿಂ] ಉತ್ತಮ ಸ್ವಭಾವವನ್ನು [ಆ] [ವಹ] ಪಡೆದುಕೊಳ್ಳುವವನಾಗು.

**ಭಾವಾರ್ಥ:-** ಯಾವ ಮನುಷ್ಯನು ವಿದ್ಯಾವಂತರ ಸಂಗದಿಂದ ಬಹಳಷ್ಟು ಉತ್ತಮ ರೀತಿಯಲ್ಲಿ ಪ್ರಶಿಕ್ಷಣ ಪಡೆದಿರುವ ಸೇನೆಯನ್ನು ಸಂಗ್ರಹಿಸಿರುವನೋ ಅವನು ಅತಿಶಯ ಬಲವಂತನೂ ಉತ್ತಮ ಗುಣವಂತನೂ ಆಗಿ ಆಕರ್ಷಕನಾಗುತ್ತಾನೆ.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಯತ್ತ್ವಾ ಹೋತಾರಮನಜನ್ ಮಿಯೇಧೇ ನಿಷಾದಯಂತೋ ಯಜಥಾಯ ದೇವಾಃ ।**
**ಸ ತ್ವಂ ನೋ ಅಗ್ನೇಽವಿತೇಹ ಬೋಧ್ಯ-ಧಿ ಶ್ರವಾಂಸಿ ಧೇಹಿ ನಸ್ತನೂಷು ॥೫॥**

**ಪದಾರ್ಥ:-** [ಅಗ್ನೇ] ವಿದ್ಯಾವಂತನೇ! [ನಿಸಾದಯಂತಃ] ಉನ್ನತ ಅಧಿಕಾರದಲ್ಲಿರುವ / ಅಧಿಕಾರವನ್ನು ಚಲಾಯಿಸಲು ತಿಳಿದವರಾದ [ದೇವಾಃ] ಚತುರ ಪುರುಷರು [ಮಿಯೇಧೇ] ಸಂಗತಿಕರಣ ಯೋಗ್ಯ ಯಜ್ಞದಲ್ಲಿ [ಯಜಥಾಯ] ವಿದ್ಯೆಯನ್ನು ಬೋಧಿಸುವುದಕ್ಕಾಗಿ [ಯತ್] [ಹೋತಾರಂ] ಯಾವ ವಿದ್ಯಾದಾನಿಯಾದ [ತ್ವಾ] ನಿನ್ನನ್ನು [ಅನಜನ್] ಪಡೆಯಲು ಬಯಸುವರೋ [ಸಃ] [ತ್ವಂ] ಅಂತಹ ನೀನು [ಇಹ] ಈ ಪ್ರಪಂಚದಲ್ಲಿ [ನಃ] ನಮ್ಮೆಲ್ಲರ [ಅವಿತಾ] ರಕ್ಷಣಾದಿಗಳನ್ನು ಮಾಡುವವನಾಗಿ [ಬೋಧಿ] ಜ್ಞಾನವನ್ನು ಬೋಧಿಸು ಮತ್ತು [ನಃ] ನಮ್ಮ [ತನೂಷು] ಶರೀರಗಳಲ್ಲಿ [ಶ್ರವಾಂಸಿ] ಅನ್ನಕ್ಕೆ ಸಮನಾದ ಸಮೃದ್ಧಿಯನ್ನು [ಅಧಿ] [ಧೇಹಿ] ಉತ್ತಮ ರೀತಿಯಲ್ಲಿ ನೆಲೆಗೊಳಿಸು.

**ಭಾವಾರ್ಥ:-** ಎಲೈ ಮನುಷ್ಯರೇ! ನಿಮ್ಮನ್ನು ಯಾವ ಅಧಿಕಾರ ಸ್ಥಾನದಲ್ಲಿ ನಿಯೋಜಿಸಲಾಗಿರುತ್ತದೆಯೋ ಆ ಅಧಿಕಾರವನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಿರಿ. ಎಲ್ಲರನ್ನೂ ಶ್ರೇಷ್ಠರಾಗಿಸಿರಿ. ಯಾವ ಪ್ರಶಿಕ್ಷಣದಿಂದ, ವಿದ್ಯೆಯಿಂದ ಸಭ್ಯತೆಯಿಂದ ಆರೋಗ್ಯ ಹಾಗೂ ಆಯುಸ್ಸಿನ ಪ್ರಮಾಣವು ಹೆಚ್ಚುತ್ತದೆಯೋ ಅಂತಹ ಕಾರ್ಯವನ್ನು ನಿರಂತರ ಮಾಡಿರಿ.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣಗಾನವನ್ನು ಮಾಡಿರುವುದರಿಂದ ಹಿಂದಿನ ಸೂಕ್ತಾರ್ಥದೊಂದಿಗೆ ಈ ಸೂಕ್ತಾರ್ಥವು ಜ್ಞಾನ ಸಂಗತಿಯಾಗಿರುತ್ತದೆ.

**ಹತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೨೦

ಮಂತ್ರಸಂಖ್ಯೆ ೫ । ಗಾಥೀ ಋಷಿಃ । ವಿಶ್ವೇದೇವಾ ದೇವತಾ । ೧ ವಿರಾಟ್ ತ್ರಿಷ್ಟುಪ್, ೨ ನಿಚೃತ್ ತ್ರಿಷ್ಟುಪ್,

೩ ಭುರಿಕ್ ತ್ರಿಷ್ಟುಪ್, ೪, ೫ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ವಿದ್ವಾಂಸರು ಹೇಗಿರಬೇಕೆಂಬುದನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಅಗ್ನಿಮುಷಸಮಶ್ವಿನಾ ದಧಿಕ್ರಾಂ ವ್ಯುಷ್ಟಿಷು ಹವತೇ ವಹ್ನಿರುಕ್ಥೈಃ ।**
**ಸುಜ್ಯೋತಿಷೋ ನಃ ಶೃಣ್ವಂತು ದೇವಾಃ ಸಜೋಷಸೋ ಅಧ್ವರಂ ವಾವಶಾನಾಃ ॥೧॥**

**ಪದಾರ್ಥ:-** **[ವಹ್ನಿಃ]** ಪದಾರ್ಥಗಳನ್ನು ಧರಿಸುವವನು **[ವ್ಯುಷ್ಟಿಷು]** ಪ್ರಕಾಶಕಾರಕ ಕ್ರಿಯೆಗಳಲ್ಲಿ **[ಅಗ್ನಿಂ]** ಅಗ್ನಿಯನ್ನು **[ಉಷಸಂ]** ಪ್ರಾತಃಕಾಲವನ್ನು **[ಅಶ್ವಿನಾ]** ಸೂರ್ಯ ಚಂದ್ರರನ್ನು **[ದಧಿಕ್ರಾಂ]** ಪ್ರಪಂಚ ಧಾರಣೆ ಮಾಡುವವರನ್ನು ಉಲ್ಲಂಘಿಸುವವನನ್ನು **[ಹವತೇ]** ಹೇಗೆ ಧಾರಣ ಮಾಡುವನೋ ಹಾಗೆ **[ಅಧ್ವರಂ]** ಹಿಂಸಾರಹಿತ ವ್ಯವಹಾರಗಳ **[ವಾವಶಾನಃ]** ಅತಿಯಾಗಿ ಬಯಸುವವನಾಗಿ **[ಸಜೋಷಸಃ]** ಸಮಾನ ಪ್ರೀತಿಯನ್ನು ನಿರ್ವಹಿಸುವವನು **[ಸುಜ್ಯೋತಿಷಃ]** ಸುಂದರ ಜ್ಯೋತಿಯಿಂದ ಬೆಳಗುತ್ತಿರುವವನು ಆಗಿರುವ **[ದೇವಾಃ]** ವಿದ್ಯಾವಂತರು **[ಉಕ್ಥೈಃ]** ಪ್ರಶಂಸಾರ್ಹ ಕರ್ಮಗಳಿಂದ **[ನಃ]** ನಮ್ಮೆಲ್ಲರ ಪ್ರಾರ್ಥನೆಯನ್ನು **[ಶೃಣ್ವಂತು]** ಶ್ರವಣ ಮಾಡುವಂತಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ವಾಯುವು ಸಂಪೂರ್ಣಪ್ರಕಾಶಕಾರಕವಾದ ಸೂರ್ಯಾದಿ ಪದಾರ್ಥಗಳನ್ನು ಧಾರಣ ಮಾಡುವುದರ ಮೂಲಕ ಸಂಪೂರ್ಣ ಜೀವರಾಶಿಗಳಿಗೆ ಉಪಕಾರ ಮಾಡುತ್ತಾನೋ, ಹಾಗೆ ವಿದ್ಯಾವಂತ ಪುರುಷರು ಎಲ್ಲಾ ಜನರೊಂದಿಗೆ ವೈರಭಾವವನ್ನು ತ್ಯಜಿಸಿ ಅಹಿಂಸಾ ಧರ್ಮದ ಪ್ರಚಾರಕ್ಕಾಗಿ ಒಗ್ಗಟ್ಟಿನಿಂದ ಸಂಪೂರ್ಣ ಪ್ರಪಂಚಕ್ಕೆ ಉಪಕಾರ ಮಾಡುತ್ತಾರೆ.

ಈ ಮಂತ್ರದಲ್ಲಿ ಅದೇ ವಿಷಯವನ್ನು ಮತ್ತೆ ತಿಳಿಸಲಾಗಿದೆ.

**ಅಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥಾ ತಿಸ್ರಸ್ತೇ ಜಿಹ್ವಾ ಋತಜಾತ ಪೂರ್ವೀಃ ।**
**ತಿಸ್ರ ಉ ತೇ ತನ್ವೋ ದೇವವಾತಾ-ಸ್ತಾಭಿರ್ನಃ ಪಾಹಿ ಗಿರೋ ಅಪ್ರಯುಚ್ಛನ್ ॥೨॥**

**ಪದಾರ್ಥ:-** **[ಋತಜಾತ]** ಸತ್ಯಾಚರಣೆಯಲ್ಲಿ ಪ್ರಸಿದ್ಧನಾದ **[ಅಗ್ನೇ]** ಅಗ್ನಿಯಂತೆ ಬೆಳಗುತ್ತಲಿರುವ ವಿದ್ಯಾವಂತನೇ! **[ತೇ]** ನಿನ್ನ **[ತ್ರೀ]** ಮೂರು ಬಗೆಯ **[ವಾಜಿನಾ]** ಜ್ಞಾನ, ಗಮನ ಮತ್ತು ಪ್ರಾಪ್ತಿ ರೂಪವಾದ **[ತ್ರೀ]** ಮೂರು ಬಗೆಯ **[ಷಧಸ್ಥಾ]** ಜನ್ಮಾದಿ ಸಮಾನ ಸ್ಥಾನಗಳು **[ತೇ]** ನಿನ್ನ **[ತಿಸ್ರಃ]** ಮೂರು ರೀತಿಯ **[ಜಿಹ್ವಾ]** ನುಡಿಗಳ **[ಪೂರ್ವೀಃ]** ಪ್ರಾಚೀನವಾದ **[ಉ]** ಮತ್ತು **[ತೇ]** ನಿನ್ನ **[ತಿಸ್ರಃ]** ಮೂರು ಬಗೆಯ **[ತನ್ವಃ]** ಶರೀರಗಳು **[ದೇವವಾತಾಃ]** ವಿದ್ವಾಂಸರೊಂದಿಗೆ ಸಂಭಾಷಿಸಲು ಉಪಕಾರ ಮಾಡುವ **[ಗಿರಃ]** ವಚನಗಳು ಅವುಗಳಿಂದ **[ಅಪ್ರಯುಚ್ಛನ್]** ಅಹಂಕಾರ ತ್ಯಜಿಸಿರುವ ನೀನು **[ನಃ]** ನಮ್ಮೆಲ್ಲರನ್ನು **[ಪಾಹಿ]** ರಕ್ಷಣೆ ಮಾಡು.

**ಭಾವಾರ್ಥ:-** ಎಲೈ ಮನುಜರೇ! ನೀವೆಲ್ಲರೂ ಬ್ರಹ್ಮಚರ್ಯ, ಅಧ್ಯಯನ ಮತ್ತು ವಿವೇಕ, ಇವುಗಳಿಂದ ಮೂರು ಬಗೆಯ ಕೆಲಸಗಳನ್ನು ಮಾಡಿ. ಜನ್ಮ, ಸ್ಥಾನ, ನಾಮಗಳೆಂಬ ಮೂರು ರೀತಿಯಿಂದ ಕೃತಕೃತ್ಯರಾಗಿರಿ. ಅಂದರೆ ಜನ್ಮ ಸಫಲಗೊಳಿಸಿಕೊಳ್ಳಿರಿ. ಬೋಧಿಸುವುದು, ಉಪದೇಶಿಸುವುದು ಇವುಗಳಿಂದ ಎಲ್ಲರ ರಕ್ಷಣೆ ಮಾಡಿರಿ. ನೀವು ಸ್ವತಃ ಪ್ರಮಾದವೆಸಗದವರಾಗಿ ಅನ್ಯರನ್ನೂ ಅದರಂತೆ ಮಾಡಿರಿ.

ಪುನಃ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಅಗ್ನೇ ಭೂರೀಣಿ ತವ ಜಾತವೇದೋ ದೇವಸ್ವಧಾವೋಽಮೃತಸ್ಯ ನಾಮ । ಯಾಶ್ಚ**
**ಮಾಯಾ ಮಾಯಿನಾಂ ವಿಶ್ವಮಿನ್ವ ತ್ವೇ ಪೂರ್ವೀಃ ಸಂದಧುಃ ಪೃಷ್ಟಬಂಧೋ ॥೩॥**

**ಪದಾರ್ಥ:-** **[ಸ್ವಧಾವಃ]** ಅಮೃತರೂಪ ಅನ್ನಗಳಿಂದ ಕೂಡಿರುವ **[ಜಾತವೇದಃ]** ಶ್ರೇಷ್ಠ ವಿಜ್ಞಾನ ಯುಕ್ತರಾದ **[ದೇವ]** ವಿದ್ಯಾವಂತ ಪುರುಷರೇ! **[ಅಗ್ನೇ]** ವಿದ್ಯಾಪ್ರಕಾಶಕನೇ! **[ತವ]** ನಿನ್ನ **[ಭೂರೀಣಿ]** ಬಹುವಿಧವಾದ **[ಅಮೃತಸ್ಯ]** ನಾಶರಹಿತವಾದ **[ನಾಮ]** ಹೆಸರೇನಿದೆಯೋ **[ಪೃಷ್ಟಬಂಧೋ]** ಮನುಷ್ಯರಿಗೆ ಕರ್ಮಾನುಸಾರ ಫಲದಾಯಕನೇ! **[ವಿಶ್ವಮಿನ್ವ]** ಸಂಪೂರ್ಣ ಜಗದ್ವ್ಯಾಪಕನೇ! ನಿನಗೆ ಸಂಬಂಧಿಸಿದ **[ಯಾಃ]** **[ಪೂರ್ವೀಃ]** ಯಾವ ಪ್ರಾಚೀನ ಪ್ರಜೆಗಳೋ **[ತ್ವೇ]** ನಿನ್ನಲ್ಲಿ **[ಸಂದಧುಃ]** ಸ್ಥಿರಗೊಳಿಸಲಾಗಿವೆಯೋ ಅವರು **[ಮಾಯಿನಾಂ]** ನಿಕೃಷ್ಟಬುದ್ಧಿಯ ಜನರ (ಕಪಟಿ ಮಾಯಾವಿಗಳ) **[ಮಾಯಾ]** ಅವರ ದುರ್ಬುದ್ಧಿ ನಾಶವಾಗಲಿ **[ಚ]** ಮತ್ತು ಅನ್ಯ ಪುರುಷರು ವಿಜ್ಞಾನಿಗಳಾಗಲಿ.

**ಭಾವಾರ್ಥ:-** ಎಲೈ ಮನುಷ್ಯರೇ! ಈ ಸಂಪೂರ್ಣ ಪ್ರಪಂಚವು ಈಶ್ವರನಿಂದ ವ್ಯಾಪ್ತವಾಗಿದೆ ಎಂಬುದನ್ನು ತಿಳಿದುಕೊಳ್ಳಿರಿ. ಕಪಟಿ ಪುರುಷರ ಕಪಟತನದ ನಾಶ ಮತ್ತು ಪರಮೇಶ್ವರನ ಅರ್ಥಪೂರ್ಣ ನಾಮ ಇವುಗಳನ್ನು ತಿಳಿದುಕೊಂಡು ಅರ್ಥಕ್ಕನುಗುಣವಾಗಿ ಅನುಕೂಲಭಾವದಿಂದ ನಿಮ್ಮ ಆಚರಣೆಯನ್ನು ಪರಿಶುದ್ಧಗೊಳಿಸಿಕೊಳ್ಳಿರಿ.

ಈ ಮಂತ್ರದಲ್ಲಿ ಅಗ್ನಿಯ ದೃಷ್ಟಾಂತದಿಂದ ವಿದ್ಯಾವಂತರ ಕರ್ತವ್ಯವನ್ನು ತಿಳಿಸಿದೆ.

**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।**
**ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಮ್ ॥೪॥**

**ಪದಾರ್ಥ:-** **[ಭಗ ಇವ]** ಸೂರ್ಯನಿಗೆ ಸದೃಶನಾದ **[ದೈವೀನಾಂ]** ಶ್ರೇಷ್ಠ ಗುಣಗಳಲ್ಲಿ ಉತ್ಪನ್ನವಾದ **[ಕ್ಷಿತೀನಾಂ]** ಭೂಮಿಗಳ **[ನೇತಾ]** ಅಗ್ರೇಸರನು **[ಋತುಪಾಃ]** ಋತುಮಾನಗಳ ರಕ್ಷಕನು **[ಋತಾವಾ]** ಸತ್ಯಕರ್ಮಗಳ ನಿರ್ವಾಹಕನು **[ದೇವಃ]** ಸುಖದಾಯಕನು **[ವೃತ್ರಹಾ]** ಮೇಘಗಳ ನಾಶಕನಾದ ಸೂರ್ಯನಿಗೆ ಸದೃಶನಾದವನು **[ಸನಯಃ]** ಅನಾದಿಯು **[ವಿಶ್ವವೇದಾಃ]** ಪ್ರಪಂಚವನ್ನರಿತವನು **[ಅಗ್ನಿಃ]** ಅಗ್ನಿಯಂತೆ ತೇಜಸ್ವಿಯೂ ಆದ **[ಗೃಣಂತಂ]** ಸ್ತವನ ಮಾಡುವವನನ್ನು **[ವಿಶ್ವಾ]** ಸಮಗ್ರ ಜನಕೋಟಿಯ **[ದುರಿತ]** ದುಷ್ಟಾಚರಣೆಗಳನ್ನು **[ಅತಿ]** ಉಲ್ಲಂಘನೆ ಮಾಡಿ **[ಪರ್ಷತ್]** ಸುಖದ ದಡವನ್ನು ತಲುಪಿಸಲಿ **[ಸಃ]** ಅಂತಹ ಪರಮಾತ್ಮನು ನಮ್ಮಿಂದ ಸೇವಿಸಲು ಯೋಗ್ಯನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಅಗ್ನಿಯು ಹೇಗೆ ಸೂರ್ಯಾದಿ ರೂಪಗಳನ್ನು ಧಾರಣೆ ಮಾಡಿ ಪೃಥಿವ್ಯಾದಿ ಪದಾರ್ಥಗಳು ನಿಯಮಪೂರ್ವಕವಾಗಿ ತಮ್ಮ ತಮ್ಮ ಗತಿಯಲ್ಲಿ ಇರುವಂತೆ

ಮಾಡುತ್ತಾನೆಯೋ, ಜಗದೀಶ್ವರನು ಹೇಗೆ ಸಂಪೂರ್ಣ ಜಗತ್ತಿನ ವ್ಯವಸ್ಥೆಯನ್ನು ಮಾಡುತ್ತಾನೆಯೋ ಅದೇ ರೀತಿ ಆರಾಧಿಸಲ್ಪಟ್ಟ ಈಶ್ವರನು ಹಾಗೂ ಭಕ್ತಿಯಿಂದ ಸೇವಿಸಲ್ಪಟ್ಟ ವಿದ್ಯಾವಂತನು ತನ್ನನ್ನು ಉಪಾಸನೆ ಮಾಡುವ ಜನಕೋಟಿಯನ್ನು ಪಾಪಾಚರಣೆಯಿಂದ ದೂರಗೊಳಿಸಿ ದುಃಖರೂಪ ಸಮುದ್ರವನ್ನು ದಾಟಿಸುತ್ತಾನೆ.

ಈ ಮಂತ್ರದಲ್ಲಿ ವಿದ್ಯಾವಂತರ ಕರ್ತವ್ಯವನ್ನು ತಿಳಿಸಲಾಗಿದೆ.

**ದಧಿಕ್ರಾಮಗ್ನಿಮುಷಸಂ ಚ ದೇವೀಂ ಬೃಹಸ್ಪತಿಂ ಸವಿತಾರಂ ಚ ದೇವಮ್ ।**
**ಅಶ್ವಿನಾ ಮಿತ್ರಾವರುಣಾ ಭಗಂ ಚ ವಸೂನ್ರುದ್ರಾ ಆದಿತ್ಯಾ ಇಹ ಹುವೇ ॥೫॥**

**ಪದಾರ್ಥ:-** [**ಇಹ**] ಈ ಸಂಸಾರದಲ್ಲಿ [**ದಧಿಕ್ರಾಂ**] ಭೂಮ್ಯಾದಿಗಳನ್ನು ಧಾರಣ ಮಾಡುವ ಪದಾರ್ಥಗಳನ್ನೂ ದಾಟಿ ಆಚೆ ಇರುವ [**ಅಗ್ನಿಂ**] ವಿದ್ಯುತ್ತಿನ ರೂಪದಲ್ಲಿರುವ ಅಗ್ನಿಯನ್ನು [**ದೇವೀಂ**] ಪ್ರಕಾಶಮಾನವಾದ / ಇಚ್ಛಿಸಲು ಯೋಗ್ಯವಾದ [**ಉಷಸಂ**] ಪ್ರಾತಃಕಾಲವನ್ನು [**ಚ**] ಮತ್ತು [**ಬೃಹಸ್ಪತಿಂ**] ಬೃಹತ್ ಪದಾರ್ಥಗಳ ರಕ್ಷಕನಾದ ವಾಯುವನ್ನು [**ಸವಿತಾರಂ**] ಸಮಗ್ರ ಸಂಸಾರದ / ಪ್ರಪಂಚದ ಉತ್ಪತ್ತಿಗೆ ಕಾರಣನಾದ ಸೂರ್ಯನನ್ನು [**ದೇವಂ**] ಬಯಸಲು ಯೋಗ್ಯನಾದ ದಾನಶೀಲ ಈಶ್ವರನನ್ನು [**ಚ**] ಮತ್ತು [**ಅಶ್ವಿನಾ**] ಅಧ್ಯಾಪಕ ಉಪದೇಶಕರನ್ನು [**ಮಿತ್ರಾವರುಣಾ**] ಪ್ರಾಣೋದಾನ ವಾಯುವನ್ನು [**ಭಗಂ**] ಐಶ್ವರ್ಯಕಾರಕ ವ್ಯವಹಾರವನ್ನು [**ವಸೂನ್**] ಭೂಮ್ಯಾದಿ ಪದಾರ್ಥಗಳನ್ನು [**ರುದ್ರಾನ್**] ಪ್ರಾಣಗಳನ್ನು [**ಚ**] ಮತ್ತು [**ಆದಿತ್ಯಾನ್**] ಸಂವತ್ಸರದ ಹನ್ನೆರಡು ಮಾಸಗಳನ್ನು [**ಹುವೇ**] ಸ್ತವನ ಮಾಡುತ್ತೇನೆ; ಗ್ರಹಣ ಮಾಡುತ್ತೇನೆ. ನೀವೂ ಅದೇ ರೀತಿ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲ್ಲ ಮನುಷ್ಯರೂ, ಹೇಗೆ ವಿದ್ಯಾವಂತರು ಸೃಷ್ಟಿಗೆ ಉಪಕಾರಕವಾದ ಪದಾರ್ಥಗಳನ್ನು ತಮ್ಮ ಸಮಗ್ರ ಕಾರ್ಯಗಳಲ್ಲಿ ಉಪಯೋಗಿಸಿಕೊಂಡು ಕಾರ್ಯಸಿದ್ಧಿ ಮಾಡುತ್ತಾರೋ, ಅದೇ ರೀತಿ ಆ ಪದಾರ್ಥ ಗುಣಗಳನ್ನು ಅರಿತು ತಮ್ಮ ತಮ್ಮ ಅಭೀಷ್ಟ ಸಿದ್ಧಿಯನ್ನು ಮಾಡಿಕೊಳ್ಳಬೇಕು. ಎಲ್ಲರೂ ಇದಕ್ಕೆಲ್ಲ ಕಾರಣೀಭೂತನಾದ ಪರಮೇಶ್ವರನನ್ನು ಸತತವಾಗಿ ಉಪಾಸನೆ ಮಾಡಬೇಕು.

ಈ ಸೂಕ್ತದಲ್ಲಿ ಅಗ್ನ್ಯಾದಿ ವಿದ್ಯಾವಂತರ ಗುಣವರ್ಣನೆ ಇರುವುದರಿಂದ ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಯಾಗಿದೆ ಎಂಬುದನ್ನು ಅರಿಯಬೇಕು.

ಇಪ್ಪತ್ತನೆಯ ಸೂಕ್ತ ಸಮಾಪ್ತ

## ಸೂಕ್ತ ೨೧

ಮಂತ್ರಸಂಖ್ಯೆ ೫ । ಕೌಶಿಕೋ ಗಾಥೀ ಋಷಿಃ । ಅಗ್ನಿರ್ದೇವತಾ । ೧, ೪ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ ।

೨, ೩ ಅನುಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೫ ವಿರಾಟ್ ಬೃಹತೀ ಛಂದಃ । ಮಧ್ಯಮಃ ಸ್ವರಃ.

ಈ ಮಂತ್ರದಲ್ಲಿ ಮನುಷ್ಯರ ಕರ್ತವ್ಯವನ್ನು ತಿಳಿಸಲಾಗಿದೆ.

**ಇಮಂ ನೋ ಯಜ್ಞಮಮೃತೇಷು ಧೇಹೀ-ಮಾ ಹವ್ಯಾ ಜಾತವೇದೋ ಜುಷಸ್ವ ।**
**ಸ್ತೋಕಾನಾಮಗ್ನೇ ಮೇದಸೋ ಘೃತಸ್ಯ ಹೋತಃ ಪ್ರಾಶಾನ ಪ್ರಥಮೋ ನಿಷದ್ಯ ॥೧॥**

**ಪದಾರ್ಥ:-** **[ಜಾತವೇದಃ]** ಸಮಗ್ರವಾದ ಸೃಷ್ಟಿ ಪದಾರ್ಥಗಳನ್ನು ತಿಳಿದುಕೊಂಡಿರುವವನೇ! **[ಮೇದಸಃ]** ಸ್ನಿಗ್ಧ ಪದಾರ್ಥವಾದ **[ಘೃತಸ್ಯ]** ಆಜ್ಯದ **[ಸ್ತೋಕಾನಾಂ]** ಅಲ್ಪ ಪದಾರ್ಥಗಳ **[ಹೋತಃ]** ದಾತೃವಾದ **[ಅಗ್ನೇ]** ವಿದ್ಯಾವಂತ ಪುರುಷನೇ! **[ಪ್ರಥಮಃ]** ಪೂರ್ವಕಾಲದಲ್ಲಿ ಇರುವ ನೀನು **[ನಿಷದ್ಯ]** ವರ್ತಮಾನನಾಗಿ **[ಪ್ರ]** **[ಅಶಾನ]** ಸುಖವನ್ನು ಭೋಗಿಸು. **[ನಃ]** ನಮ್ಮೆಲ್ಲರಿಗೆ **[ಇಮಂ]** ಈ **[ಯಜ್ಞಂ]** ಸತ್ಕಾರ, ಸತ್ಸಂಗ, ಶುಭ ಗುಣ ಮತ್ತು ದಾನರೂಪ ಕರ್ಮಗಳನ್ನು **[ಜುಷಸ್ವ]** ಸೇವನ ಮಾಡು. **[ಇಮಾ]** ಈ **[ಹವ್ಯಾ]** ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಿದ್ಧಿಗಾಗಿ ಯೋಗ್ಯ ಸಾಧನಗಳನ್ನು **[ಅಮೃತೇಷು]** ನಾಶರಹಿತ ಪದಾರ್ಥಗಳಲ್ಲಿ **[ಧೇಹಿ]** ನೆಲೆಗೊಳಿಸು.

**ಭಾವಾರ್ಥ:-** ಅನ್ನ ಜಲಾದಿಗಳನ್ನು ದಾನ ಮಾಡುವ ಪುರುಷನು ಹೇಗೆ ಅನ್ಯ ಪುರುಷರಿಗೂ ಪ್ರಿಯವಾಗುತ್ತಾನೋ, ಹಾಗೆ ವಿದ್ಯೆ ಶಿಕ್ಷಣ ಮತ್ತು ಧರ್ಮ ಜ್ಞಾನವನ್ನು ದಾನ ಮಾಡುವ ವ್ಯಕ್ತಿಯು ಈ ವಿಚಾರಗಳನ್ನು ತಿಳಿಯಬಯಸುವ ವ್ಯಕ್ತಿಗಳಿಗೆ ಪ್ರಿಯನಾಗುತ್ತಾನೆ.

**ಈ ಮಂತ್ರದಲ್ಲಿ ಧರ್ಮೋಪದೇಶಕರು ಯಾವುದರಂತೆ ರಕ್ಷಣೆ ಮಾಡುತ್ತಾರೆ ಎಂಬ ವಿಚಾರವನ್ನು ತಿಳಿಸಲಾಗಿದೆ.**

**ಘೃತವಂತಃ ಪಾವಕ ತೇ ಸ್ತೋಕಾಃ ಶ್ಚೋತಂತಿ ಮೇದಸಃ ।**
**ಸ್ವಧರ್ಮನ್ ದೇವವೀತಯೇ ಶ್ರೇಷ್ಠಂ ನೋ ಧೇಹಿ ವಾರ್ಯಮ್ ॥೨॥**

**ಪದಾರ್ಥ:-** **[ಪಾವಕ]** ಅಗ್ನಿಯಂತೆ ಪವಿತ್ರಗೊಳಿಸುವವನೇ! **[ತೇ]** ನಿನ್ನ **[ಘೃತವಂತಃ]** ಅಧಿಕ ಆಜ್ಯವಿರುವ / ಜಲಮಯವಾದ **[ಮೇದಸಃ]** ಸ್ನಿಗ್ಧ ಪದಾರ್ಥಗಳ **[ಸ್ತೋಕಾಃ]** ಅಲ್ಪ ಪದಾರ್ಥಗಳನ್ನು **[ಶ್ಚೋತಂತಿ]** ಸೇಚನ ಮಾಡುವ ನೀನು **[ದೇವವೀತಯೇ]** ವಿದ್ವಾಂಸರ ಪ್ರಾಪ್ತಿಗಾಗಿ **[ಶ್ರೇಷ್ಠಂ]** ಅತ್ಯುತ್ತಮವಾದ **[ವಾರ್ಯಂ]** ಸ್ವೀಕಾರಾರ್ಹ ಧನವನ್ನು **[ಸ್ವಧರ್ಮನ್]** ತನ್ನ ವೈದಿಕ ಧರ್ಮದಲ್ಲಿ **[ನಃ]** ನಮ್ಮೆಲ್ಲರಿಗೆ **[ಧೇಹಿ]** ಕೊಡುವವನಾಗು.

**ಭಾವಾರ್ಥ:-** ಅಗ್ನಿಯು ಹೇಗೆ ಜಲಾದಿ ಪದಾರ್ಥಗಳನ್ನು ತನ್ನ ಕಾರ್ಯದಿಂದ ಶುಚಿಗೊಳಿಸಿ ಮಳೆಗರೆಯುವ ಮೂಲಕ ಎಲ್ಲ ಪದಾರ್ಥಗಳ ಮೇಲೂ ಸಿಂಪಡಿಸುವುದರ ಮೂಲಕ ಜೀವಿಗಳ ರಕ್ಷಣೆ ಮಾಡುತ್ತಾನೋ, ಹಾಗೆಯೇ ಉಪದೇಶಕ ಜನರು ವಿದ್ಯೆ ಮತ್ತು ಧರ್ಮದ ಉಪದೇಶ ಮಾಡುವುದರ ಮೂಲಕ ಸಂಪೂರ್ಣ ಮನುಷ್ಯಕೋಟಿಯನ್ನು ರಕ್ಷಿಸುತ್ತಾರೆ.

**ಈ ಮಂತ್ರದಲ್ಲಿ ವಿದ್ವಾಂಸರು ಮಾಡಬೇಕಾದುದೇನು ಎಂಬುದನ್ನು ತಿಳಿಸಲಾಗಿದೆ.**

**ತುಭ್ಯಂ ಸ್ತೋಕಾ ಘೃತಶ್ಚುತೋಽಗ್ನೇ ವಿಪ್ರಾಯ ಸಂತ್ಯ ।**
**ಋಷಿಃ ಶ್ರೇಷ್ಠಃ ಸಮಿಧ್ಯಸೇ ಯಜ್ಞಸ್ಯ ಪ್ರಾವಿತಾ ಭವ ॥೩॥**

**ಪದಾರ್ಥ:-** **[ಸಂತ್ಯ]** ಸತ್ಯಾಸತ್ಯಗಳ ವಿಭಾಗ ಮಾಡುವುದರಲ್ಲಿ ಕುಶಲನಾದ **[ಅಗ್ನೇ]** ವಿದ್ಯಾವಂತ ಪುರುಷನೇ! **[ಘೃತಶ್ಚುತಃ]** ತುಪ್ಪದಿಂದ ಆಸೇಚನ ಮಾಡಲಾದ **[ಸ್ತೋಕಾಃ]** ಸ್ತುತಿ ಮಾಡುವವರಾದ ಜನರು **[ವಿಪ್ರಾಯ]** ಬುದ್ಧಿವಂತನಾದ **[ತುಭ್ಯಂ]** ನಿನಗೋಸ್ಕರ ಪ್ರಾಪ್ತರಾಗುತ್ತಾರೆ. **[ಶ್ರೇಷ್ಠಃ]** ಉತ್ತಮನೂ **[ಋಷಿಃ]** ವೇದ ಮಂತ್ರಗಳನ್ನೂ ಮಂತ್ರಾರ್ಥಗಳನ್ನೂ ತಿಳಿದ ನೀನು **[ಸಮಿಧ್ಯಸೇ]** ಪ್ರಕಾಶಗೊಳ್ಳುವ ರೀತಿಯಲ್ಲಿ **[ಯಜ್ಞಸ್ಯ]** ಸಂಗತಿಕರಣ ರೂಪ ವ್ಯವಹಾರದ **[ಪ್ರಾವಿತಾ]** ರಕ್ಷಾಕಾರಕನು **[ಭವ]** ಆಗು.

**ಭಾವಾರ್ಥ:-** ವಿದ್ಯಾವಂತರೇ! ಯಾರು ನಿಮ್ಮ ಸ್ತುತಿ ಮಾಡುತ್ತಾರೋ ಅವರಿಗೆ ನೀವು ವೇದ ವೇದಾರ್ಥಗಳನ್ನು ಉಪದೇಶ ಮಾಡಿರಿ. ಅದರಿಂದ ಪಡೆದ ಜ್ಞಾನ ಸಂಪತ್ತಿನಿಂದ ಒಬ್ಬರು ಇನ್ನೊಬ್ಬರ ರಕ್ಷಕರಾಗಲಿ.

**ಈ ಮಂತ್ರದಲ್ಲಿ ಮನುಷ್ಯರು ಏನು ಮಾಡಬೇಕೆಂದು ಹೇಳಲಾಗಿದೆ.**

**ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವಃ ಸ್ತೋಕಾಸೋ ಅಗ್ನೇ ಮೇದಸೋ ಘೃತಸ್ಯ ।**
**ಕವಿಶಸ್ತೋ ಬೃಹತಾ ಭಾನುನಾಗಾ ಹವ್ಯಾ ಜುಷಸ್ವ ಮೇಧಿರ ॥೪॥**

**ಪದಾರ್ಥ:-** **[ಅಧ್ರಿಗೋ]** ವೇದ ಮಂತ್ರವನ್ನು ತಿಳಿದಿರುವ **[ಶಚೀವಃ]** ಪ್ರಶಂಸಾರ್ಹ ಬುದ್ಧಿವಂತನಾದ **[ಮೇಧಿರ]** ಚತುರ ಪುರುಷನಾದ **[ಅಗ್ನೇ]** ಅಗ್ನಿಯಂತೆ ಬೆಳಕನ್ನು ನೀಡುವ ಮನುಷ್ಯನೇ! **[ಸ್ತೋಕಾಸಃ]** ಉತ್ತಮ ಗುಣಗಳ ಸ್ತುತಿ ಮಾಡುವ **[ತುಭ್ಯಂ]** ನಿನಗೆ **[ಮೇಧಸಃ]** ಕೊಬ್ಬಿನ ಅಂಶ ಪಡೆದಿರುವ **[ಘೃತಸ್ಯ]** ಆಜ್ಯದ **[ಶ್ಚೋತಂತಿ]** ಆಸೇಚನ ಮಾಡುವರು. **[ಕವಿಷಸ್ತಃ]** ವಿದ್ವಾಂಸರಿಂದ ಪ್ರಶಂಸೆಗೊಳಗಾದ **[ಬೃಹತಾ]** ಮಹತ್ತರನಾದ **[ಭಾನುನಾ]** ಸೂರ್ಯನ ತೇಜಸ್ಸಿಗೆ ಸದೃಶವಾಗಿ **[ಆ]** **[ಅಗಾಹ]** ಪ್ರಾಪ್ತನಾಗು. **[ಹವ್ಯಾ]** ಹವಿಸ್ಸು ಪದಾರ್ಥಗಳನ್ನು **[ಜುಷಸ್ವ]** ಸೇವಿಸುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಮರಗಳಿಗೆ ನೀರೆರೆದು ಬೆಳೆಸಿ ಫಲವನ್ನು ಪಡೆಯಬಹುದೋ ಹಾಗೆ ಸತ್ಸಂಗದಲ್ಲಿ ಸತ್ಪುರುಷರ ಸೇವೆಯನ್ನು ಮಾಡಿ ಜ್ಞಾನರೂಪ ಫಲವನ್ನು ಪಡೆದುಕೊಳ್ಳಬೇಕು.

**ಮತ್ತೆ ಅದೇ ವಿಷಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.**

**ಓಜಿಷ್ಠಂ ತೇ ಮಧ್ಯತೋ ಮೇದ ಉದ್ಭೃತಂ ಪ್ರ ತೇ ವಯಂ ದದಾಮಹೇ ।**
**ಶ್ಚೋತಂತಿ ತೇ ವಸೋ ಸ್ತೋಕಾ ಅಧಿ ತ್ವಚಿ ಪ್ರತಿ ತಾನ್ ದೇವಶೋ ವಿಹಿ ॥೫॥**

**ಪದಾರ್ಥ:-** **[ವಸೋ]** ವಸತಿಗೆ ಕಾರಣನಾದವನೇ! **[ತೇ]** ನಿನ್ನ **[ಮಧ್ಯತಃ]** ಮಧ್ಯದಿಂದ **[ಓಜಿಷ್ಠಂ]** ಅತಿಬಲದಿಂದ ಕೂಡಿದ **[ಮೇದಃ]** ಸ್ನೇಹವು **[ಉದ್ಭೃತಂ]** ಉತ್ಕೃಷ್ಟವಾದ ರೀತಿಯಲ್ಲಿ ಧಾರಣ ಮಾಡಿರುವುದನ್ನು **[ತೇ]** ನಿನಗೆ **[ವಯಂ]** ನಾವು **[ಪ್ರ, ದದಾಮಹೇ]** ಸಮರ್ಪಿಸುವೆವು. **[ಸ್ತೋಕಾಃ]** ಸ್ತುತಿಕಾರಕರು **[ತೇ]** ನಿನ್ನ **[ಅಧಿ]** ಮೇಲ್ಭಾಗದ **[ತ್ವಚಿ]** ಚರ್ಮದಲ್ಲಿ **[ಶ್ಚೋತಂತಿ]** ಆಸೇಚನ ಮಾಡುವರು. **[ತಾನ್]** ಅಂತಹ **[ದೇವಶಃ]** ವಿದ್ಯಾವಂತರ **[ಪ್ರತೀ]** ಸಮೀಪಕ್ಕೆ **[ವಿಹಿ]** ನೀನು ಪ್ರಾಪ್ತನಾಗು.

**ಭಾವಾರ್ಥ:-** ಯಾರು ಯಾರಿಗೆ ಉತ್ತಮ ವಸ್ತುಗಳನ್ನು ಕೊಡುವರೋ ಅದೇ ರೀತಿ ಪಡೆದುಕೊಂಡವನು ಕೊಟ್ಟವನಿಗೂ ಅದೇ ರೀತಿಯ ಉಪಕಾರವನ್ನು ಮಾಡಬೇಕು. ಯಾರು ವಿದ್ಯಾವಂತರ ಸತ್ಸಂಗದಿಂದ ಶ್ರೇಷ್ಠ ಗುಣಗಳನ್ನು ಪಡೆದುಕೊಳ್ಳುವರೋ ಅಂತಹ ಜನರು ಎಲ್ಲರನ್ನೂ ಕೋಮಲ ಸ್ವಭಾವದವರನ್ನಾಗಿ ಮಾಡಬಲ್ಲರು.

ಈ ಸೂಕ್ತದಲ್ಲಿ ಅಗ್ನಿ ಮತ್ತು ಮನುಷ್ಯರ ಗುಣಗಳ ವರ್ಣನೆ ಮಾಡಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಯಾಗಿರುತ್ತದೆ.

**ಇಪ್ಪತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೨೨

ಮಂತ್ರಸಂಖ್ಯೆ ೫ । ಗಾಥೀ ಋಷಿಃ । ಪುರೀಷ್ಯಾ ಅಗ್ನಯೇ ದೇವತಾಃ । ೧ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ ।

೨, ೩ ಭುರಿಕ್ ಪಂಕ್ತಿಃ, ೫ ನಿಚೃತ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೪ ವಿರಾಡನುಷ್ಟುಪ್ ಛಂದಃ । ಋಷಭಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ಗುಣವನ್ನು ತಿಳಿಸಲಾಗಿದೆ.

**ಅಯಂ ಸೋ ಅಗ್ನಿರ್ಯಸ್ಮಿನ್ ತ್ಸೋಮಮಿಂದ್ರಃ ಸುತಂ ದಧೇ ಜಠರೇ ವಾವಶಾನಃ ।**
**ಸಹಸ್ರಿಣಂ ವಾಜಮತ್ಯಂ ನ ಸಪ್ತಿಂ ಸಸವಾನ್ ತ್ಸನ್ ತ್ಸ್ತೂಯಸೇ ಜಾತವೇದಃ ॥೧॥**

**ಪದಾರ್ಥ:-** **[ಜಾತವೇದಃ]** ಶ್ರೇಷ್ಠ ವಿದ್ಯಾಧಾರಕನೇ! **[ಯಸ್ಮಿನ್]** ಯಾವುದರಲ್ಲಿ **[ಅಯಂ]** **[ಅಗ್ನಿಃ]** ಈ ಮಿಂಚಿನ ರೂಪದ ಅಗ್ನಿಯು **[ಸಹಸ್ರಿಣಂ]** ಅಸಂಖ್ಯ ಪರಾಕ್ರಮಯುಕ್ತನಾಗಿ **[ವಾಜಂ]** ವೇಗವಾಗಿ ಮತ್ತು **[ಸತ್ಯಂ]** ಶೀಘ್ರಗತಿಯಲ್ಲಿ ಚಲಿಸುವ ವಾಯುವಿಗೆ **[ನ]** ಸಮನಾಗಿ **[ಸಪ್ತಿಂ]** ಅಗ್ನಿನಾಮಕ ಅಶ್ವಗಳನ್ನು **[ದಧೇ]** ಧರಿಸಿರುವನು. ಅವುಗಳಲ್ಲಿ **[ವಾವಶಾನಃ]** ಅತಿಯಾದ ಇಚ್ಛೆಯನ್ನು ಮಾಡುವವನಾದ **[ಇಂದ್ರಃ]** ಜೀವಾತ್ಮನಾದ ನೀನು **[ಜಠರೇ]** ಜಠರಾಗ್ನಿಯಲ್ಲಿ **[ಸುತಂ]** ಉತ್ಪನ್ನವಾದ **[ಸೋಮಂ]** ಪದಾರ್ಥಗಳ ಸಮೂಹವನ್ನು ಧರಿಸುವವನಾಗಿದ್ದು **[ಸಸವಾನ್]** ವಿಭಾಗಕಾರಕನೂ **[ಸನ್]** ಆಗಿದ್ದು **[ಸ್ತೂಯಸೇ]** ಸ್ತವನ ಮಾಡಲು ಯೋಗ್ಯನಾಗಿದ್ದೀಯೆ.

**ಭಾವಾರ್ಥ:-** ಯಾವ ಮನುಷ್ಯನು ವಿದ್ಯೆಯಿಂದ ಅಗ್ನಿಯನ್ನು ಚಾಲನೆಗೊಳಿಸಿದರೆ ಆ ಅಗ್ನಿಯು ಸಾವಿರಾರು, ಅಶ್ವಬಲವನ್ನು ಧಾರಣ ಮಾಡುವನು.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಅಗ್ನೇ ಯತ್ತೇ ದಿವಿ ವರ್ಚಃ ಪೃಥಿವ್ಯಾಂ ಯದೋಷಧೀಷ್ವಪ್ಸ್ವಾ ಯಜತ್ರ ।**
**ಯೇನಾಂತರಿಕ್ಷಮುರ್ವಾತತಂಥ ತ್ವೇಷಃ ಸ ಭಾನುರರ್ಣವೋ ನೃಚಕ್ಷಾಃ ॥೨॥**

**ಪದಾರ್ಥ:-** **[ಯಜತ್ರ]** ಪ್ರೀತಿಗೆ ಪಾತ್ರನಾದ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದವನೇ! **[ತೇ]** **[ದಿವಿ]** ನಿನ್ನ ಬೆಳಕಿನಲ್ಲಿ **[ಯತ್]** **[ವರ್ಚಃ]** ಯಾವ ತೇಜಸ್ಸಿದೆಯೋ **[ಯತ್]** **[ಪೃಥಿವ್ಯಾಂ]** ಯಾವುದು ಭೂಮಿಯಲ್ಲಿ **[ಓಷಧೀಷು]** ಓಷಧಿ ಸಸ್ಯಗಳಲ್ಲಿದೆಯೋ **[ಅಪ್ಸು]** ಯಾವ ತೇಜಸ್ಸು ಜಲರಾಶಿಯಲ್ಲಿ **[ಆ]** ಉತ್ತಮರೀತಿಯಲ್ಲಿ ವರ್ತಮಾನವಾಗಿದೆಯೋ ಹಾಗೂ **[ಯೇನ]** ಯಾವ ಕಾರಣದಿಂದ **[ಅಂತರಿಕ್ಷಂ]** ಅಂತರಿಕ್ಷದಂತೆ ಇರುವ **[ಉರು]** ವಕ್ಷಸ್ಥಲದಲ್ಲಿ **[ಆತತಂಥ]** ಎಲ್ಲ ಕಡೆಗಳಿಂದಲೂ ವಿಸ್ತಾರಗೊಳಿಸುತ್ತಿಯೋ **[ಸಃ]** ಅಂತಹ ನೀನು **[ತ್ವೇಷಃ]** ಪ್ರಕಾಶಮಾನನಾಗಿ **[ಭಾನುಃ]** ಮಿಂಚುತ್ತಲಿರುವ **[ಅರ್ಣವಃ]** ಸಾಗರದಂತೆ **[ನೃಚಕ್ಷಾಃ]** ಮನುಷ್ಯರಿಗೆ ಗೋಚರವಾಗುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲೈ ಮನುಷ್ಯರೇ! ಮಿಂಚು ಎಂಬ ತೇಜಸ್ಸು ಸೂರ್ಯ, ವಾಯು, ಭೂಮಿ, ಜಲಗಳಲ್ಲಿ ಹಾಗೂ ಅನ್ಯ ಪದಾರ್ಥಗಳಲ್ಲಿ ಸಸ್ಯ, ಗಿಡ ಮೂಲಿಕೆಗಳಲ್ಲಿ ವರ್ತಮಾನವಾಗಿದೆಯೋ ಅವೆಲ್ಲವನ್ನೂ ಸರಿಯಾಗಿ ತಿಳಿದು ಬಳಸಿಕೊಂಡು ಸುಖವನ್ನು ವಿಸ್ತರಿಸಿಕೊಳ್ಳಿರಿ.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಅಗ್ನೇ ದಿವೋ ಅರ್ಣಮಚ್ಛಾ ಜಿಗಾಸ್ಯ-ಚ್ಛಾ ದೇವಾँ ಊಚಿಷೇ ಧಿಷ್ಣ್ಯಾ ಯೇ ।**
**ಯಾ ರೋಚನೇ ಪರಸ್ತಾತ್ ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪಃ ॥೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತನೇ! ನೀನು **[ದಿವಃ]** ಸೂರ್ಯನ ಪ್ರಕಾಶದಿಂದ **[ಅರ್ಣಂ]** ನೀರನ್ನು **[ಅಚ್ಛ]** ಉತ್ತಮ ರೀತಿಯಲ್ಲಿ ಪಡೆದುಕೊಳ್ಳುತ್ತಿಯೋ ಅದೇ ರೀತಿ **[ಅಚ್ಛ]** ಉತ್ತಮ ರೀತಿಯಿಂದ **[ಜಿಗಾಸಿ]** ಸ್ತುತಿಯನ್ನು ಮಾಡುತ್ತೀಯೆ **[ದೇವಾನ್]** ಉತ್ತಮ ಧರ್ಮವಂತ ಮನುಷ್ಯರ **[ಊಚಿಷೇ]** ಸ್ತುತಿಯನ್ನು ಮಾಡುತ್ತೀಯೆ; **[ಯಾಃ]** ಯಾವ **[ಸೂರ್ಯಸ್ಯ]** ಸೂರ್ಯಮಂಡಲದ **[ರೋಚನೇ]** ಬೆಳಕಿನಲ್ಲಿ **[ಪರಸ್ತಾತ್]** ಮೇಲ್ಭಾಗದಲ್ಲಿ **[ಚ]** ಮತ್ತು **[ಯಾಃ]** ಯಾವ **[ಧಿಷ್ಣ್ಯಾಃ]** ಘರ್ಷಣೆಗೆ ಯೋಗ್ಯವಾದ/ಧಾರಣೆಗೆ ಯೋಗ್ಯವಾದ **[ಆಪಃ]** ನೀರು **[ಅವಸ್ಥಾತ್]** ಕೆಳಭಾಗದಿಂದ **[ಉಪತಿಷ್ಠಂತೇ]** ಪ್ರಾಪ್ತವಾಗುತ್ತವೆ. **[ಯೇ]** ಯಾರು ಇದರ ಗುಣವನ್ನು ತಿಳಿದಿರುವವರೋ ಅವರದರಿಂದ ಲಾಭ ಪಡೆಯುತ್ತಾರೆ.

**ಭಾವಾರ್ಥ:-** ಹೇಗೆ ಸೂರ್ಯನು ಬೆಳಕನ್ನು ಚೆಲ್ಲಿ ಕತ್ತಲನ್ನು ನಿವಾರಿಸುತ್ತಾನೋ ಮತ್ತು ಭೂಮಿಯಿಂದ ನೀರನ್ನು ಸೆಳೆದು ಮಳೆಯ ರೂಪದಲ್ಲಿ ಮತ್ತೆ ಸುರಿಸಿ ಸಂಪೂರ್ಣ ಜಗತ್ತಿಗೆ ಸುಖದಾಯಕನಾಗುವನೋ, ಹಾಗೆ ವಿದ್ಯಾವಂತರು ಅವಿದ್ಯೆಯನ್ನು ನಾಶಮಾಡಿ ವಿದ್ಯೆಯ ಬೆಳಕನ್ನು ಚೆಲ್ಲುತ್ತಾರೆ. ಸುಖದ ಮಳೆಗರೆದು ಎಲ್ಲರನ್ನೂ ಆನಂದತುಂದಿಲರನ್ನಾಗಿ ಮಾಡುತ್ತಾರೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಪುರೀಷ್ಯಾಸೋ ಅಗ್ನಯಃ ಪ್ರಾವಣೇಭಿಃ ಸಜೋಷಸಃ ।**
**ಜುಷಂತಾಂ ಯಜ್ಞಮದ್ರುಹೋಽನಮೀವಾ ಇಷೋ ಮಹೀಃ ॥೪॥**

**ಪದಾರ್ಥ:-** **[ಪುರೀಷ್ಯಾಸಃ]** ಪೃಥಿವ್ಯಾದಿ ಪದಾರ್ಥಗಳಲ್ಲಿ ವ್ಯಾಪಕವಾಗಿ ಇರುವ **[ಅಗ್ನಯಃ]** ಅಗ್ನಿಯಂತೆ ತೇಜಸ್ವಿಗಳಾದ **[ಸಜೋಷಸಃ]** ಸಮಾನ ಪ್ರೀತಿಯನ್ನು ನಿರ್ವಹಿಸುವ **[ಅದ್ರುಹಃ]** ದ್ವೇಷರಹಿತರಾದ **[ಅನಮೀವಾಃ]** ರೋಗರಹಿತರಾದ **[ಪ್ರಣವೇಭಿಃ]** ಗಮನಾದಿಗಳಿಂದ **[ಯಜ್ಞಂ]** ಸಂಗತಿರೂಪ ಯಜ್ಞವನ್ನು **[ಇಷಃ]** ಅನ್ನವನ್ನು ಮತ್ತು **[ಮಹೀಃ]** ಶ್ರೇಷ್ಠವಾದ ಮಾತುಗಳನ್ನು **[ಜುಷಂತಾಂ]** ಸೇವನೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನ್ಯಾದಿ ಪದಾರ್ಥಗಳು ಪರಸ್ಪರ ಒಂದಾಗಿ ಹೇಗೆ ಕಾರ್ಯವನ್ನು ಸಾಧಿಸುತ್ತವೆಯೋ, ಹಾಗೆಯೇ ವಿದ್ಯಾವಂತರೂ ಸ್ನೇಹಭಾವದಿಂದಿರುವವರೂ ಆರೋಗ್ಯವಂತರೂ ಆದ ಜನರು ಪರಸ್ಪರ ಸಹಕಾರದಿಂದ ಕಾರ್ಯ ಕೈಗೊಂಡರೆ ಧನ, ಧಾನ್ಯ, ಸಂಪತ್ತು, ವಿದ್ಯೆ ಎಲ್ಲವನ್ನೂ ಪಡೆದುಕೊಳ್ಳಬಹುದು.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।**
**ಸ್ಯಾನ್ನಃ ಸೂನುಸ್ತನಯೋ ವಿಜಾವಾ-ಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥೫॥**

**ಪದಾರ್ಥ:-** [ಅಗ್ನೇ] ಅಗ್ನಿಯಂತೆ ವಿದ್ಯೆಯನ್ನು ಬೆಳಗಿಸುವ ವಿದ್ವಾಂಸನೇ! ನೀನು **[ಹವಮಾನಾಯ]** ಸ್ತುತಿ ಮಾಡುವವನಿಗೋಸ್ಕರ **[ಇಳಾಂ]** ಭೂಮಿಯನ್ನು **[ಪುರುದಂಸಂ]** ಬಹುಕಾರ್ಯಗಳ **[ಸನಿಂ]** ಯಾಚಿಸುವಂತಹ **[ಗೋಃ]** ವಾಣಿಯನ್ನು **[ಶಶ್ವತ್ತಮಂ]** ಅನಾದಿಕಾಲದಿಂದ ಲಭಿಸಿರುವ ಗುರಿಯನ್ನು **[ಸಾಧ]** ನಮಗೆ ಸಾಧಿಸಿಕೊಡು. **[ಅಗ್ನೇ]** ತೇಜಸ್ವೀ ಪುರುಷನೇ! **[ನಃ]** ನಮ್ಮೆಲ್ಲರಿಗೆ **[ತನಯಃ]** ವಿದ್ಯಾವಿಸ್ತಾರಕನು **[ವಿಜಾವಾ]** ಸತ್ಯಾಸತ್ಯಗಳನ್ನು ವಿಭಾಗಿಸುವ **[ಸೂನುಃ]** **[ಸ್ಯಾತ್]** ಪುತ್ರನು ಲಭಿಸಲಿ ಹಾಗೂ **[ಸಾ]** ಆ ಸಂತಾನವು **[ತೇ]** ನಿನ್ನ **[ಸುಮತಿಃ]** ಉತ್ತಮ ಬುದ್ಧಿಯುಳ್ಳವನು **[ಅಸ್ಮೇ]** ನಮಗೆ **[ಭೂತು]** ಆಗಲಿ.

**ಭಾವಾರ್ಥ:-** ವಿದ್ಯಾವಂತರು ವಿದ್ಯೆಯನ್ನು ಬಯಸುವವರಿಗೆ ಶ್ರೇಷ್ಠ ವಿದ್ಯೆಯನ್ನು ಗ್ರಹಣ ಮಾಡಿಸಬೇಕು ಹಾಗೂ ಎಲ್ಲರಿಂದಲೂ ಉತ್ತಮ ಗುಣವನ್ನು ಸ್ವೀಕರಿಸುವಂತೆ ಮಾಡಬೇಕು.

ಈ ಸೂಕ್ತದಲ್ಲಿ ಅಗ್ನಿಯ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಜ್ಞಾನರೂಪ ಸಂಗತಿಯಾಗಿರುತ್ತದೆ.

ಇಪ್ಪತ್ತೆರಡನೆಯ ಸೂಕ್ತ ಸಮಾಪ್ತ

## ಸೂಕ್ತ ೨೩

ಮಂತ್ರಸಂಖ್ಯೆ ೫ । ದೇವಶ್ರವಾ ದೇವತಾಶ್ಚ ಭಾರತಾವೃಷೀ । ಅಗ್ನಿರ್ದೇವತಾ । ೧ ವಿರಾಟ್ ತ್ರಿಷ್ಟುಪ್, ೨-೫ ನಿಚೃತ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ಉದಾಹರಣೆಯ ಮೂಲಕ ಶಿಲ್ಪವಿದ್ಯೆಯನ್ನು ತಿಳಿಸಲಾಗಿದೆ.

**ನಿರ್ಮಥಿತಃ ಸುಧಿತ ಆ ಸಧಸ್ಥೇ ಯುವಾ ಕವಿರಧ್ವರಸ್ಯ ಪ್ರಣೇತಾ ।**
**ಜೂರ್ಯತ್ಸ್ವಗ್ನಿರಜರೋ ವನೇಷ್ವತ್ರಾ ದಧೇ ಅಮೃತಂ ಜಾತವೇದಾಃ ॥೧॥**

**ಪದಾರ್ಥ:-** **[ಸಧಸ್ಥೇ]** ಸಮಾನ ಸ್ಥಾನದಲ್ಲಿ **[ನಿರ್ಮಥಿತಃ]** ಅತಿಯಾಗಿ ಪ್ರದೀಪ್ತನಾದ **[ಸುಧಿತಃ]** ಯೋಗ್ಯರೀತಿಯಲ್ಲಿ ಧಾರಣ ಮಾಡಿದ **[ಯುವಾ]** ವಿಭಾಗಗೊಳಿಸುವ **[ಕವಿಃ]** ದರ್ಶನೀಯನಾದ **[ಪ್ರಣೇತಾ]** ಪ್ರೇರಣೆ ನೀಡುವ **[ಅಜರಃ]** ನಿತ್ಯನಾದ **[ಜಾತವೇದಾಃ]** ಸಂಪತ್ತಿನ ಉತ್ಪಾದಕನಾದ **[ಅಗ್ನಿಃ]** ಅಗ್ನಿಯು **[ಜೂರ್ಯತ್ಸು]** ವೇಗಗತಿಯ **[ವನೇಷು]** ಕಿರಣಗಳಲ್ಲಿ **[ಅಧ್ವರಸ್ಯ]** ಶಿಲ್ಪ ವ್ಯವಹಾರವನ್ನು **[ಆದಧೇ]** ಧಾರಣ ಮಾಡಿರುತ್ತಾನೆ. **[ಅತ್ರ]** ಈ ಶಿಲ್ಪವಿದ್ಯೆಯಲ್ಲಿ **[ಅಮೃತಂ]** ಜಲವನ್ನೂ ಧಾರಣ ಮಾಡಿರುತ್ತಾನೆ. ಅಂತಹ ಅಗ್ನಿಯನ್ನು ಉಪಾಯದಿಂದ ತಿಳಿದುಕೊಳ್ಳಬೇಕು.

**ಭಾವಾರ್ಥ:-** ಮನುಷ್ಯರೇ! ಯಂತ್ರಚಾಲಿತ ವಾಹನಗಳಲ್ಲಿ ಘರ್ಷಣೆಯ ಮೂಲಕ ಪ್ರಜ್ವಲನಗೊಂಡ ಅಗ್ನಿಯು ಎಲ್ಲಾ ಜನರಿಗಾಗಿ ವಾಹನಗಳನ್ನು ವೇಗಗತಿಯಲ್ಲಿ ಚಾಲನೆ ಮಾಡುತ್ತಾನೆ. ಅಂತಹ ಅಗ್ನಿವಿದ್ಯೆಯನ್ನು ಎಲ್ಲರೂ ತಿಳಿದುಕೊಳ್ಳಬೇಕು.

ಮತ್ತೆ ಅದೇ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ಅಮಂಥಿಷ್ಟಾಂ ಭಾರತಾ ರೇವದಗ್ನಿಂ ದೇವಶ್ರವಾ ದೇವವಾತಃ ಸುದಕ್ಷಮ್ ।**
**ಅಗ್ನೇ ವಿ ಪಶ್ಯ ಬೃಹತಾಭಿ ರಾಯೇ-ಷಾಂ ನೋ ನೇತಾ ಭವತಾದನು ದ್ಯೂನ್ ॥೨॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಪ್ರಕಾಶಮಾನನಾದವನೇ! **[ಭಾರತಾ]** ಧಾರಣಕರ್ತನೂ ಪಾಲನಕರ್ತನೂ ಆದ ಪುರುಷನು **[ಸುದಕ್ಷಂ]** ಉತ್ತಮ ಬಲವುಳ್ಳ **[ಅಗ್ನಿಂ]** ಅಗ್ನಿಯನ್ನು **[ಅಮಂಥಿಷ್ಟಾಂ]** ಮಥನ ಮಾಡುವ ರೀತಿಯಲ್ಲಿ **[ದೇವಶ್ರವಾಃ]** ವಿದ್ಯಾವಂತರ ಮಾತುಗಳನ್ನು ಶ್ರವಣ ಮಾಡುವವನು **[ದೇವವಾತಃ]** ಉತ್ತಮ ಪ್ರೇರಣೆ ನೀಡುವವನಿಂದ ಪ್ರೇರಣೆ ಪಡೆದು **[ಅನುದ್ಯೂನ್]** ಅನುಕೂಲಕರ ದಿನದಲ್ಲಿ **[ರೇವತ್]** ಧನರೂಪದಲ್ಲಿರುವ ಅಗ್ನಿಯ ಮಥನ ಮಾಡಲಿ. **[ನಃ]** ನಮಗೆ **[ನೇತಾ]** ಸುಮಾರ್ಗ ತೋರಿಸುವುದರಲ್ಲಿ ಮುಂಚೂಣಿಯಲ್ಲಿರುವವನು **[ಭವತಾತ್]** ಆಗಲಿ. ಅಂತಹ ನೀನು **[ಬೃಹತಾ]** ಶ್ರೇಷ್ಠವಾದ **[ರಾಯಾ]** ಸಂಪತ್ತಿನಿಂದ **[ಇಷಾಂ]** ಅನ್ನಾದಿಗಳ ಮಧ್ಯದಲ್ಲಿ **[ಅಭಿ]** **[ವಿಪಶ್ಯ]** ಎಲ್ಲ ರೀತಿಯ ಕೃಪಾದೃಷ್ಟಿಯಿಂದ ನೋಡುವವನಾಗು.

**ಭಾವಾರ್ಥ:-** ಮನುಷ್ಯರೇ! ಶಿಲ್ಪವಿದ್ಯಾ ಕುಶಲಿಗಳು ಹೇಗೆ ಶಿಲ್ಪವಿದ್ಯೆಯ ಪಠಣ - ಪಾಠನಗಳಿಂದ ಜನರು ಪದಾರ್ಥಗಳ ಕೊಟ್ಟುಕೊಳ್ಳುವುದರ ಮೂಲಕ ಸಿರಿವಂತರಾಗುತ್ತಾರೋ ಹಾಗೆ ನೀವೆಲ್ಲರೂ ಆಗಿರಿ.

ಮತ್ತೆ ಅದೇ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ದಶ ಕ್ಷಿಪಃ ಪೂರ್ವ್ಯಂ ಸೀಮಜೀಜನನ್ ತ್ಸುಜಾತಂ ಮಾತೃಷು ಪ್ರಿಯಮ್ ।**
**ಅಗ್ನಿಂ ಸ್ತುಹಿ ದೈವವಾತಂ ದೇವಶ್ರವೋ ಯೋ ಜನಾನಾಮಸದ್ವಶೀ ॥೩॥**

**ಪದಾರ್ಥ:-** **[ದೇವಶ್ರವಃ]** ವಿದ್ಯಾವಂತರಿಗೆ ಉಪಕಾರವಾಗುವಂತಹದ್ದನ್ನು ಶ್ರವಣ ಮಾಡುವವನೇ! ನೀನು **[ದಶ]** ಹತ್ತು ಸಂಖ್ಯೆಯ **[ಕ್ಷಿಪಃ]** ವಿಕಸಿತ ಅಂಗುಲಿಗಳಂತೆ **[ಮಾತೃಷು]** ನದಿಗಳಲ್ಲಿ **[ಪ್ರಿಯಂ]** ಬಯಸಲು ಯೋಗ್ಯವಾದ **[ಸುಜಾತಂ]** ಪ್ರಖ್ಯಾತನಾದ **[ದೇವವಾತಂ]** ದೇವತೆಗಳಿಂದ ತಿಳಿದಿರುವವರ ಸಂಬಂಧಿಯನ್ನು **[ಪೂರ್ವ್ಯಂ]** ಪೂರ್ವಜರಿಂದ ತಯಾರಿಸಿದ **[ಸೀಂ]** ಎಲ್ಲ ರೀತಿಯಿಂದಲೂ **[ಅಜೀಜನನ್]** ಉತ್ಪಾದಿಸುತ್ತಾರೆ. ಅದೇ ರೀತಿ ನೀನು **[ಸ್ತುಹಿ]** ಸ್ತವನ ಮಾಡು. **[ಯಃ]** ಯಾವನು **[ಜನಾನಾಂ]** ಮನುಷ್ಯರ ಮಧ್ಯದಲ್ಲಿ **[ವಶೀ]** ಜಿತೇಂದ್ರಿಯನು **[ಅಸತ್]** ಆಗಿರುವನೋ ಅವನನ್ನು ಸ್ತವನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಕೈ ಬೆರಳುಗಳಿಂದ ಹೇಗೆ ಬಹಳಷ್ಟು ಕಾರ್ಯಗಳು ಸಿದ್ಧವಾಗುತ್ತವೆಯೋ, ಅದೇ ರೀತಿ ಅಗ್ನ್ಯಾದಿ ಶಕ್ತಿಗಳಿಂದಲೂ ನೀವು ಅವುಗಳನ್ನು ಬಳಸಿ ಬಹುಕಾರ್ಯಗಳನ್ನು ಸಾಧಿಸಿರಿ.

ಮನುಷ್ಯರು ಏನು ಮಾಡಬೇಕೆಂಬ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ನಿ ತ್ವಾ ದಧೇ ವರ ಆ ಪೃಥಿವ್ಯಾ ಇಳಾಯಾಸ್ಪದೇ ಸುದಿನತ್ವೇ ಅಹ್ನಾಮ್ ।**
**ದೃಷದ್ವತ್ಯಾಂ ಮಾನುಷ ಆಪಯಾಯಾಂ ಸರಸ್ವತ್ಯಾಂ ರೇವದಗ್ನೇ ದಿದೀಹಿ ॥೪॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿ ಪುರುಷನೇ! **[ತ್ವಾ]** ನಿನ್ನನ್ನು **[ಪೃಥಿವ್ಯಾಃ]** ಭೂಮಿಯ / ಅಂತರಿಕ್ಷದ **[ವರೇ]** ಶ್ರೇಷ್ಠ ವ್ಯವಹಾರಗಳಲ್ಲಿ **[ಇಳಾಯಾಃ]** ವಾಣಿಯನ್ನು **[ಪದೇ]** ಪ್ರಾಪ್ತಿಗೊಳಿಸಿಕೊಳ್ಳುವಂತಹ ಸ್ಥಾನದಲ್ಲಿ **[ಅಹ್ನಾಂ]** ದಿನಗಳಲ್ಲಿ **[ಸುದಿನತ್ವೇ]** ಉತ್ತಮ ದಿನಗಳ **[ದೃಷದ್ವತ್ಯಾಂ]** ಬಹುಶಿಲೆಗಳಿರುವ **[ಆಪಯಾಯಾಂ]** ಪ್ರಾಣಗಳಲ್ಲಿ ವ್ಯಾಪಕವಾದ **[ಸರಸ್ವತ್ಯಾಂ]** ಚಿಂತನಶೀಲ ವಾಣಿಯಲ್ಲಿ **[ಮಾನುಷೇ]** ಮನುಷ್ಯನಿಗೆ ಸಂಬಂಧಿಸಿದ ನುಡಿಯಲ್ಲಿ **[ರೇವತ್]** ಶ್ರೇಷ್ಠ ಸಂಪತ್ತಿಗೆ ಸಮನಾಗಿ **[ನಿ, ದಧೇ]** ಧರಿಸಲಾಗಿದೆಯೋ ಎಂಬ ರೀತಿಯಲ್ಲಿ **[ಆದಿದಿಃ]** ನೀನು ನನಗೆ ಪ್ರಕಾಶಿತನಾಗಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಪರಸ್ಪರರಲ್ಲಿ ಮಿತ್ರಭಾವದಿಂದ ಇರುವವರಾಗಿ ವಿದ್ಯೆ, ಧರ್ಮ, ಸಜ್ಜನಿಕೆ ಮತ್ತು ಸುಖಗಳನ್ನು ಹೆಚ್ಚಿಸಿಕೊಳ್ಳಬೇಕು.

ಮತ್ತೆ ಅದೇ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ಇಳಾಮಗ್ನೇ ಪುರುದಂಸಂ ಸನಿಂ ಗೋಃ ಶಶ್ವತ್ತಮಂ ಹವಮಾನಾಯ ಸಾಧ ।**
**ಸ್ಯಾನ್ನಃ ಸೂನುಸ್ತನಯೋ ವಿಜಾವಾ-ಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥೫॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ವಿದ್ಯೆಯನ್ನು ಬೆಳಗಿಸುವವನೇ! ನೀನು [**ಹವಮಾನಾಯ**] ಸ್ವೀಕರಿಸುವುದಕ್ಕಾಗಿ [**ಇಳಾಂ**] ಪ್ರಶಂಸನೀಯ ವಾಣಿಯನ್ನು [**ಗೋಃ**] ಶ್ರೇಷ್ಠ ವಾಣಿಯ [**ಶಶ್ವತ್ತಮಂ**] ಅನಾದಿ ವಿಜ್ಞಾನ [**ಪುರುದಂಸಂ**] ಶುಭಕರ್ಮಗಳ [**ಸನಿಂ**] ವಿದ್ಯಾದಿ ಉತ್ತಮ ಗುಣಗಳ ದಾನವನ್ನು [**ಸಾಧ**] ಸಾಧಿಸು. [**ನಃ**] ನಮ್ಮೆಲ್ಲರಿಗೆ [**ವಿಜಾವ**] ಸುಖವನ್ನು ತಂದುಕೊಡುವ [**ಸೂನುಃ**] ಮಗನಿಗೆ ಸದೃಶನಾದ ಶಿಷ್ಯನು [**ತನಯಃ**] ಸುಖದ ವಿಸ್ತಾರಕನು [**ಸ್ಯಾತ್**] ಆಗಲಿ. [**ಅಗ್ನೇ**] ಪರೀಕ್ಷಕರಲ್ಲಿ ನಿಪುಣನಾದ ವಿದ್ಯಾವಂತನೇ! [**ತೇ**] ನಿನ್ನ [**ಸುಮತಿಃ**] ಬುದ್ಧಿಯು ಉತ್ತಮ [**ಭೂತು**] ಗೊಳ್ಳಲಿ. [**ಸಾ**] ಅದು [**ಅಸ್ಮೇ**] ನಮ್ಮೆಲ್ಲರಲ್ಲಿಯೂ ಉಂಟಾಗಲಿ.

**ಭಾವಾರ್ಥ:-** ಮನುಷ್ಯರು ಪರಸ್ಪರರಲ್ಲಿ ಶುಭಗುಣಗಳನ್ನು ವಿನಿಮಯಿಸಿಕೊಳ್ಳಬೇಕು. ವಿದ್ಯಾದಾನ ಮಾಡುವಂತೆ ಉಪದೇಶ ಮಾಡಬೇಕು. ತಮ್ಮ ತಮ್ಮ ಮಕ್ಕಳಿಗೆ ವಿದ್ಯೆ, ಉತ್ತಮ ಶಿಕ್ಷಣ ನೀಡುವುದರ ಮೂಲಕ ವಿಜ್ಞಾನವು ನಿರಂತರವಾಗಿ ಬೆಳೆಯುವಂತೆ ಮಾಡಬೇಕು.

ಈ ಸೂಕ್ತದಲ್ಲಿ ಅಗ್ನಿವಿದ್ಯೆ ಮನುಷ್ಯರ ಗುಣ ಸ್ವಭಾವಗಳ ವರ್ಣನೆ ಇರುವುದರಿಂದ ಹಿಂದಿನ ಸೂಕ್ತಾರ್ಥದೊಂದಿಗೆ ಈ ಸೂಕ್ತಾರ್ಥವು ಸಂಗತವಾಗಿರುತ್ತದೆ.

**ಇಪ್ಪತ್ಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೨೪

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧ ನಿಚೃತ್ ಅನುಷ್ಟುಪ್ ಛಂದಃ । ಗಾಂಧಾರಃ ಸ್ವರಃ ।
೨ ನಿಚೃತ್ ಗಾಯತ್ರಿ, ೩-೫ ಗಾಯತ್ರಿ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ರಾಜಧರ್ಮ ವಿಷಯವನ್ನು ತಿಳಿಸಲಾಗಿದೆ.

**ಅಗ್ನೇ ಸಹಸ್ವ ಪೃತನಾ ಅಭಿಮಾತೀರಪಾಸ್ಯ । ದುಷ್ಟರಸ್ತರನ್ನರಾತೀ-ರ್ವರ್ಚೋ ಧಾ ಯಜ್ಞವಾಹಸೇ॥೧॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ದುಷ್ಟ ಜನರನ್ನು ದಹಿಸುವ ವೀರ ಪುರುಷನೇ! ನೀನು [**ಪೃತನಾಃ**] ಶತ್ರುಸೇನೆಗಳ [**ಸಹಸ್ವ**] ತಿರಸ್ಕಾರ ಮಾಡು [**ಅಭಿಮಾತೀಃ**] ಅಭಿಮಾನಿಗಳಾದ ದುಷ್ಟ ಜನರನ್ನು [**ಅಪಾಸ್ಯ**] ದೂರ ಮಾಡು. [**ದುಷ್ಟರಃ**] ಕಷ್ಟದಿಂದ ಜಯಿಸಲು ಸಾಧ್ಯವಾಗುವಂತಹ ನೀನು [**ಅರಾತೀಃ**] ಶತ್ರುಗಳನ್ನು [**ತರನ್**] ದಾಟುವವನಾಗಿ [**ಯಜ್ಞವಾಹಸೇ**] ಯಜ್ಞವನ್ನೊದಗಿಸಿಕೊಡುವವನಿಗೆ [**ಅರ್ಚಃ**] ಅನ್ನವನ್ನು [**ಧಾಃ**] ಧಾರಣ ಮಾಡಿಸುವವನಾಗು.

**ಭಾವಾರ್ಥ:-** ರಾಜನು ತನ್ನ ಪ್ರಜೆಗಳನ್ನು ಸೇನೆಯನ್ನು ಬಲಿಷ್ಠಗೊಳಿಸಿ ದುಷ್ಟರನ್ನು ಶತ್ರುಗಳನ್ನು ರಾಜ್ಯದಿಂದ ಹೊರಕ್ಕೋಡಿಸಿ ರಾಜ್ಯವನ್ನು ವೃದ್ಧಿಪಡಿಸಬೇಕು. ರಾಜ್ಯದಲ್ಲಿ ಸಂಪತ್ತಿನ ವಿದ್ಯಾವಂತರ ಏಳಿಗೆಯನ್ನು ನಿರಂತರ ಮಾಡಬೇಕು.

ಈ ಮಂತ್ರದಲ್ಲಿ ವಿದ್ಯಾವಂತರು ಹೇಗೆ ಅನ್ಯರ ಏಳಿಗೆಯನ್ನು ಸಾಧಿಸಬೇಕೆಂಬ ವಿಚಾರವನ್ನು ತಿಳಿಸಲಾಗಿದೆ.

**ಅಗ್ನ ಇಳಾ ಸಮಿಧ್ಯಸೇ ವೀತಿಹೋತ್ರೋ ಅಮರ್ತ್ಯಃ । ಜುಷಸ್ವ ಸೂ ನೋ ಅಧ್ವರಮ್ ॥೨॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ವಿದ್ಯೆಯಿಂದ ಬೆಳಗುವ ಪುರುಷನೇ! **[ಅಮರ್ತ್ಯಃ]** ಆತ್ಮರೂಪದಿಂದ ಮರಣಧರ್ಮ ರಹಿತರಾದ **[ವೀತಿಹೋತ್ರಃ]** ಉತ್ತಮ ಗುಣಸಂಪನ್ನ ವಿದ್ಯಾಗ್ರಹಣಕರನಾದ ನೀನು **[ಇಳಾ]** ಸ್ತುತ್ಯರ್ಹ ಮಾತನಾಡುವ ನೀನು **[ಸಂ]** **[ಇಧ್ಯಸೇ]** ಉತ್ತಮ ರೀತಿಯಲ್ಲಿ ಪ್ರಸಿದ್ಧನಾಗು. **[ನಃ]** ನಮ್ಮೆಲ್ಲರ **[ಅಧ್ವರಂ]** ಅಹಿಂಸಾತ್ಮಕ ವ್ಯವಹಾರಗಳಿರುವ ಯಜ್ಞವನ್ನು **[ಸು, ಜುಷಸ್ವ]** ಚೆನ್ನಾಗಿ ಸೇವನೆ ಮಾಡು.

**ಭಾವಾರ್ಥ:-** ವಿದ್ಯಾವಂತರು ತಾವು ಯಾವುದರಿಂದ ವೃದ್ಧಿ ಹೊಂದುವರೋ / ಹೊಂದಿರುವರೋ ಅದರಿಂದಲೇ ಅನ್ಯರ ಏಳಿಗೆಯನ್ನು ಸಾಧಿಸಬೇಕು.

ಈ ಮಂತ್ರದಲ್ಲಿ ರಾಜಧರ್ಮ ವಿಚಾಯರವನ್ನು ತಿಳಿಸಲಾಗಿದೆ.

**ಅಗ್ನೇ ದ್ಯುಮ್ನೇನ ಜಾಗೃವೇ ಸಹಸಃ ಸೂನವಾಹುತ । ಏದಂ ಬರ್ಹಿಃ ಸದೋ ಮಮ ॥೩॥**

**ಪದಾರ್ಥ:-** **[ಜಾಗೃವೇ]** ರಾಜಧರ್ಮವನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುವವನೇ! **[ಸಹಸಃ]** ಬಲಿಷ್ಠನಾದವನ **[ಸೂನೋ]** ಸುತನೇ! **[ಆಹುತ]** ನಾಲ್ಕು ದಿಕ್ಕುಗಳಿಂದಲೂ ಆಹ್ವಾನಿಸಲ್ಪಡುವವನೇ! **[ಅಗ್ನೇ]** ಅಗ್ನಿಯಂತೆ ಪ್ರತಾಪಶಾಲಿ ರಾಜನೇ! **[ದ್ಯುಮ್ನೇನ]** ಕೀರ್ತಿಕಾರಕ ಧನದೊಂದಿಗೆ ರಾರಾಜಿಸುತ್ತಿರುವ ನೀನು **[ಮಮ]** ನನ್ನ **[ಇದಂ]** ವರ್ತಮಾನವಾಗಿರುವ **[ಬರ್ಹಿಃ]** ಶ್ರೇಷ್ಠವಾದ **[ಸದಃ]** ಕುಳಿತುಕೊಳ್ಳಲು ಯೋಗ್ಯವಾದ ಆಸನವನ್ನು **[ಆ, ಜುಷಸ್ವ]** ಉತ್ತಮ ರೀತಿಯಲ್ಲಿ ಅಲಂಕರಿಸುವವನಾಗು.

**ಭಾವಾರ್ಥ:-** ರಾಜನು ಯಶ ಬಲಗಳಿಂದ ಕೂಡಿರುವ ರಾಜಧರ್ಮದಲ್ಲಿ ಕುಶಲನಾದ ನ್ಯಾಯಾಧೀಶನಾಗಬೇಕು. ಅಖಂಡಿತ ರಾಜ್ಯವನ್ನು ಪಾಲನೆ ಮಾಡಬೇಕು.

ಈ ಮಂತ್ರದಲ್ಲಿ ಮತ್ತೆ ಅದೇ ವಿಚಾರವನ್ನು ತಿಳಿಸಲಾಗಿದೆ.

**ಅಗ್ನೇ ವಿಶ್ವೇಭಿರಗ್ನಿಭಿ-ರ್ದೇವೇಭಿರ್ಮಹಯಾ ಗಿರಃ । ಯಜ್ಞೇಷು ಯ ಉ ಚಾಯವಃ ॥೪॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತ ಪುರುಷನೇ! **[ಯೇ]** ಯಾರು **[ಯಜ್ಞೇಷು]** ಸಂಗತಿಕರಣಕ್ಕೆ ಯೋಗ್ಯವಾದ ವ್ಯವಹಾರಗಳಲ್ಲಿ **[ಚಾಯವಃ]** ಸತ್ಕಾರಯೋಗ್ಯರು **[ಅಗ್ನಿಭಿಃ]** ಅಗ್ನಿಯಂತೆ ತೇಜೋಮಯರಾಗಿ **[ವಿಶ್ವೇಭಿಃ]** ಸಮಗ್ರವಾದ **[ದೇವೇಭಿಃ]** ಶ್ರೇಷ್ಠ ಗುಣ ಕರ್ಮ ಸ್ವಭಾವಯುಕ್ತರಾದ ವಿದ್ಯಾವಂತರೊಂದಿಗೆ **[ಮಹಯ]** ಗೌರವಿಸು **[ಉ]** ಮತ್ತು ಅಂತಹ ಜನರ **[ಗಿರಃ]** ಸುಶಿಕ್ಷಿತ ವಾಣಿಯನ್ನು ಪ್ರಮಾಣವಾಗಿ ಅಂಗೀಕರಿಸು.

**ಭಾವಾರ್ಥ:-** ರಾಜನು ಈ ಜಗತ್ತಿನಲ್ಲಿ ಉತ್ತಮ ಕಾರ್ಯಗಳನ್ನು ಮಾಡುವವನಾಗಬೇಕು. ಅಂತಹ ರಾಜನ ಸತ್ಕಾರವನ್ನು ಎಲ್ಲರೂ ಮಾಡಬೇಕು ಮತ್ತು ದುಷ್ಟಕರ್ಮ ಮಾಡುವವರನ್ನು ಅಗೌರವಿಸಬೇಕು.

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯವನ್ನು ತಿಳಿಸಲಾಗಿದೆ.

**ಅಗ್ನೇ ದಾ ದಾಶುಷೇ ರಯಿಂ ವೀರವಂತಂ ಪರೀಣಸಮ್ । ಶಿಶೀಹಿ ನಃ ಸೂನುಮತಃ ॥೫॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತನೇ! ನೀನು [**ದಾಶುಷೇ**] ಎಲ್ಲರಿಗೂ ಸುಖದಾಯಕನಾದವನಿಗೆ [**ಪರೀಣಸಂ**] ವಿವಿಧ ರೀತಿಯ [**ವೀರವಂತಂ**] ಬಹಳಷ್ಟು ವೀರ ಪುರುಷರಿಂದ ಕೂಡಿ ವಿಶಿಷ್ಟ ರೀತಿಯನ್ನು ಪಡೆದಿರುವ [**ರಯಿಂ**] ಸಂಪತ್ತನ್ನು [**ದಾಃ**] ಕೊಡುವವನಾಗು. ಹಾಗೆಯೇ [**ಸೂನುಮತಃ**] ಪುತ್ರವಂತರಾದ [**ನಃ**] ನಮ್ಮನ್ನು [**ಶಿಶೀಹಿ**] ಪ್ರಬಲರನ್ನಾಗಿ ಮಾಡು.

**ಭಾವಾರ್ಥ:-** ವಿದ್ಯಾವಂತರು ಸಂಪತ್ಪ್ರದಾಯಕರೂ ಆದ ಶ್ರೇಷ್ಠ ಜನರನ್ನು ಕುರಿತು "ನೀವು ನಮ್ಮೆಲ್ಲರನ್ನು ಉತ್ತಮ ರೀತಿಯಲ್ಲಿ ಏಳಿಗೆ ಹೊಂದುವಂತೆ ಮಾಡಿರಿ" ಎಂಬುದಾಗಿ ಕೇಳಿಕೊಳ್ಳಬೇಕು.

ಈ ಸೂಕ್ತದಲ್ಲಿ ಅಗ್ನಿ, ರಾಜ, ಗುಣವಂತರು ಇವರುಗಳ ವಿಷಯವನ್ನು ತಿಳಿಸಿರುವುದರಿಂದ ಹಿಂದಿನ ಸೂಕ್ತಾರ್ಥದೊಂದಿಗೆ ಈ ಸೂಕ್ತಾರ್ಥವು ಸಂಗತವಾಗಿರುತ್ತದೆ.

**ಇಪ್ಪತ್ನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೨೫

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ೧-೪ ಅಗ್ನಿರ್ದೇವತಾ, ೫ ಇಂದ್ರಾಗ್ನೀ ದೇವತೇ । ೧ ನಿಚೃತ್ ಅನುಷ್ಟುಪ್, ೨ ಅನುಷ್ಟುಪ್ ಛಂದಃ । ಋಷಭಃ ಸ್ವರಃ । ೩-೫ ಭುರಿಕ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ಸೂರ್ಯ ಅಗ್ನಿಗಳ ದೃಷ್ಟಾಂತದಿಂದ ವಿದ್ವಾಂಸರ ಕೃತ್ಯವನ್ನು ತಿಳಿಸಲಾಗಿದೆ.

**ಅಗ್ನೇ ದಿವಃ ಸೂನುರಸಿ ಪ್ರಚೇತಾ-ಸ್ತನಾ ಪೃಥಿವ್ಯಾ ಉತ ವಿಶ್ವವೇದಾಃ ।**
**ಋಧಗ್ದೇವಾಁ ಇಹ ಯಜಾ ಚಿಕಿತ್ವಃ ॥೧॥**

**ಪದಾರ್ಥ:-** [**ಚಿಕಿತ್ವಃ**] ವಿದ್ಯಾವಂತನಾದ [**ಅಗ್ನೇ**] ವಿಜ್ಞಾನಿಯೇ! [**ದಿವಃ**] ಮಿಂಚಿನಿಂದ [**ಸೂನುಃ**] ಸೂರ್ಯನಿಗೆ ಸಮಾನನಾಗಿರುವವನೇ! [**ಪ್ರಚೇತಾಃ**] ಉತ್ತಮ ವಿಜ್ಞಾನಿ / ವಿಜ್ಞಾನ ದಾತಾ [**ಪೃಥಿವ್ಯಾಃ**] ಅಂತರಿಕ್ಷದ [**ತನಾ**] ವಿಸ್ತಾರಕನು [**ಉತ**] ಮತ್ತು [**ವಿಶ್ವವೇದಾಃ**] ಧನದಾನಿ [**ಅಸಿ**] ನೀನಾಗಿರುವೆ. [**ಇಹ**] ಈ ಪ್ರಪಂಚದಲ್ಲಿ [**ದೇವಾನ್**] ವಿದ್ಯಾವಂತರನ್ನು / ಉತ್ತಮ ಗುಣಗಳನ್ನು [**ಋಧಕ್**] ಸ್ವೀಕರಿಸುವುದರಲ್ಲಿ [**ಯಜ**] ಸಂಗತಿಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಎಲ್ಲಾ ರೂಪವಂತ ದ್ರವ್ಯಗಳ ಪ್ರಕಾಶಕನೋ ಹಾಗೆಯೇ ವಿದ್ಯಾವಂತರು ಮತ್ತು ವಿದ್ಯಾವಂತರ ಪ್ರೀತಿಗೆ ಪಾತ್ರರಾದವರು ಈ ಜಗತ್ತಿನಲ್ಲಿ ಪ್ರತಿಯೊಬ್ಬನಲ್ಲಿರುವ ಆತ್ಮವನ್ನು ಅವರವರಿಗೆ ಪ್ರಕಟವಾಗುವಂತೆ ಮಾಡುತ್ತಾರೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ಹೇಳಲಾಗಿದೆ.

**ಅಗ್ನಿಃ ಸನೋತಿ ವೀರ್ಯಾಣಿ ವಿದ್ವಾನ್ ತ್ಸನೋತಿ ವಾಜಮಮೃತಾಯ ಭೂಷನ್ ।**
**ಸ ನೋ ದೇವಾಁ ಏಹ ವಹಾ ಪುರುಕ್ಷೋ ॥೨॥**

**ಪದಾರ್ಥ:-** [ಪುರುಕ್ಷೋ] ವಿಪುಲವಾಗಿ ಅನ್ನಾದಿ ಪದಾರ್ಥಗಳನ್ನು ಪಡೆದುಕೊಂಡಿರುವ [ವಿದ್ವಾನ್] ವಿದ್ಯಾವಂತ ಪುರುಷನೇ! ನೀನು [ಅಗ್ನಿಃ] ಅಗ್ನಿಯಂತೆ [ವೀರ್ಯಾಣಿ] ಪರಾಕ್ರಮಗಳ [ಸನೋತಿ] ಧಾರಣ ಮಾಡುವವನು [ಸಃ] ಆ ನೀನು [ಅಮೃತಾಯ] ನಾಶ ರಹಿತ ಮೋಕ್ಷಪ್ರಾಪ್ತಿಗಾಗಿ [ದೇವಾನ್][ನಃ] ವಿದ್ಯಾವಂತರಾದ ನಮ್ಮನ್ನು [ಇಹ] ಈ ಜಗತ್ತಿನಲ್ಲಿ [ಭೂಷನ್] ಶೋಭಿತರನ್ನಾಗಿಸುತ್ತ [ವಾಜಂ] ವಿಜ್ಞಾನವನ್ನು [ಸನೋತಿ] ಕೊಡುತ್ತಾನೆ. [ಆ, ವಹ] ಅಂತಹವನನ್ನು ನಮಗೆ ಪ್ರಾಪ್ತಿಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ರೂಪವಂತ ಪದಾರ್ಥಗಳನ್ನು ಪ್ರಕಾಶಗೊಳಿಸುವನೋ ಅದೇರೀತಿ ವಿದ್ಯಾವಂತ ಜನರು ವಿದ್ಯೆ, ಉತ್ತಮ ಶಿಕ್ಷಣ ಮತ್ತು ಸಭ್ಯತೆ ಇವುಗಳಿಂದ ಸಂಪೂರ್ಣ ಜನಕೋಟಿಯನ್ನೇ ಸುಶೋಭಿತರನ್ನಾಗಿಸುತ್ತಾರೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಅಗ್ನಿರ್ದ್ಯಾವಾಪೃಥಿವೀ ವಿಶ್ವಜನ್ಯೇ ಆ ಭಾತಿ ದೇವೀ ಅಮೃತೇ ಅಮೂರಃ ।**
**ಕ್ಷಯನ್ ವಾಜೈಃ ಪುರುಶ್ಚಂದ್ರೋ ನಮೋಭಿಃ ॥೩॥**

**ಪದಾರ್ಥ:-** [ಪುರುಶ್ಚಂದ್ರಃ] ಬಹುರೀತಿಯ ಆನಂದಕಾರಕನು ವಿಜ್ಞಾನ ವೇಗಾದಿಗಳಿಂದ [ನಮೋಭಿಃ] ಅನ್ನದೊಂದಿಗೆ /ಗೌರವದೊಂದಿಗೆ [ಕ್ಷಯನ್] ವಾಸಮಾಡುವ [ಅಗ್ನಿಃ] ಸೂರ್ಯ ಅಥವಾ ವಿದ್ಯುತ್ ರೂಪದಲ್ಲಿರುವ ಅಗ್ನಿಯು [ವಿಶ್ವಜನ್ಯೇಃ] ಎಲ್ಲವನ್ನೂ ಉತ್ಪಾದಿಸುವ [ದೇವೀ] ಉತ್ತಮ ಗುಣಕರ್ಮ ಸ್ವಭಾವವಿರುವ [ಅಮೃತೇ] ಕಾರಣರೂಪದಿಂದ ನಾಶ ರಹಿತವಾದ [ದ್ಯಾವಾ ಪೃಥಿವೀ] ಭೂಮಿ ಮತ್ತು ಬೆಳಕನ್ನು [ಆ] [ಭಾತಿ] ಎಲ್ಲ ಕಡೆಗಳಿಂದಲೂ ಪ್ರಕಾಶಮಾನಗೊಳಿಸುತ್ತಾನೆ. ಅದೇ ರೀತಿ [ಅಮೂರಃ] ಮೌಢ್ಯಾದಿ ದೋಷ ರಹಿತನಾದ ಸಜ್ಜನನನ್ನು ವಿದ್ಯಾವಿನಯಗಳಿಂದ ಪ್ರಕಾಶಮಾನಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಭೂಮಿಯಂತೆ ಕ್ಷಮಾಶೀಲರೋ ಸತ್ಯಾಸತ್ಯತೆಯನ್ನು ಪ್ರಕಟಗೊಳಿಸುವವರೋ ಮೂರ್ಖರಿಗೆ ಉಪದೇಶ ಮಾಡಿ ಎಲ್ಲ ಜನರನ್ನೂ ಧಾರ್ಮಿಕ ಮಾರ್ಗದಲ್ಲಿ ಪ್ರಚೋದನೆ ನೀಡುತ್ತಾರೋ ಅವರನ್ನು ಎಲ್ಲರೂ ಗೌರವಿಸಬೇಕು.

ಮತ್ತೆ ಅದೇ ವಿಚಾರ ಇಲ್ಲಿದೆ.

**ಅಗ್ನ ಇಂದ್ರಶ್ಚ ದಾಶುಷೋ ದುರೋಣೇ ಸುತಾವತೋ ಯಜ್ಞಮಿಹೋಪಯಾತಮ್ ।**
**ಅಮರ್ಧಂತಾ ಸೋಮಪೇಯಾಯ ದೇವಾ ॥೪॥**

**ಪದಾರ್ಥ:-** [ಅಗ್ನೇ] ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತನೇ! [ಅಮರ್ಧಂತಾ] ಎಲ್ಲರನ್ನೂ ಸುಖಗೊಳಿಸುತ್ತ [ದೇವಾ] ಶ್ರೇಷ್ಠ ಗುಣವಂತ ಪುರುಷರು [ಇಂದ್ರಃ] ಸಂಪತ್ಕಾರಕನಾದ ಮಿಂಚಿನ ರೂಪದ ಅಗ್ನಿಯು ಮತ್ತು ಗಾಳಿಯು [ಸೋಮಪೇಯಾಯ] ಐಶ್ವರ್ಯದ ಪ್ರಾಪ್ತಿಗಾಗಿ [ಸುತಾವತಃ] ಐಶ್ವರ್ಯ ಸಂಪನ್ನ [ದಾಶುಷಃ] ವಿದ್ಯಾ ಸಂಬಂಧೀ ಸುಖದ ದಾತಾ [ದುರೋಣೇ] ಮನೆಯಲ್ಲಿ [ಯಜ್ಞಂ] ವಿದ್ಯಾವಂತರ ಸತ್ಕಾರಾದಿ ವ್ಯವಹಾರವನ್ನು [ಇಹ] ಈ ಸಂಸಾರದಲ್ಲಿ [ಉಪಯಾತಂ] ಮಾಡುವವರಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲ್ಲಿ ಗಾಳಿ ಮಿಂಚುಗಳಂತೆ ಇರುವ, ವಿದ್ಯಾವಂತರು ಅವಿದ್ಯೆಯನ್ನು ನಾಶಗೊಳಿಸಿ ವಿದ್ಯೆಯನ್ನು ಪ್ರಚುರಗೊಳಿಸಿ ಧರ್ಮೋಪದೇಶವನ್ನು ಮಾಡುತ್ತಾರೋ ಅಲ್ಲಿ ಸಂಪೂರ್ಣ ಸುಖವು ಬೆಳೆಯುತ್ತದೆ.

ಈ ಮಂತ್ರದಲ್ಲಿ ವಿದ್ಯಾವಂತರು ಪರಮಾತ್ಮನಂತೆ ಜಗದಾನಂದ ದಾಯಕರಾಗಬೇಕು ಎಂಬುದನ್ನು ತಿಳಿಸಲಾಗಿದೆ.

**ಅಗ್ನೇ ಅಪಾಂ ಸಮಿಧ್ಯಸೇ ದುರೋಣೇ ನಿತ್ಯಃ ಸೂನೋ ಸಹಸೋ ಜಾತವೇದಃ ।**

**ಸಧಸ್ಥಾನಿ ಮಹಯಮಾನ ಊತೀ ॥೫॥**

**ಪದಾರ್ಥ:-** **[ಸಹಸಃ]** ಬಲಿಷ್ಠನ **[ಸೂನೋ]** ಮಗನಂತೆ ಇರುವ / ಅವಿದ್ಯೆಯನ್ನು ನಾಶ ಮಾಡುವ **[ಜಾತವೇದಃ]** ಎಲ್ಲ ಪದಾರ್ಥಗಳ ಜ್ಞಾನವಿರುವ **[ಅಗ್ನೇ]** ಅಗ್ನಿಯಂತೇ ತೇಜಸ್ವಿಯಾದ **[ನಿತ್ಯಃ]** ತನ್ನ ಸ್ವರೂಪದಿಂದ ನಾಶರಹಿತನಾದ **[ಮಹಯಮಾನಃ]** ಗೌರವಿಸಲು ಯೋಗ್ಯನಾದ ನೀನು **[ಊತೀ]** ರಕ್ಷಣಾದಿ ಕ್ರಿಯೆಗಳಿಂದ **[ಅಪಾಂ]** ನೀರಿನ ಮಧ್ಯದಲ್ಲಿರುವ ಸೂರ್ಯನಂತೆ **[ದುರೋಣೇ]** ವಾಸಸ್ಥಾನವಾದ ಮನೆಯಲ್ಲಿ **[ಸಂ]** **[ಇಧ್ಯಸೇ]** ಪ್ರಕಟನಾಗುವೆ. **[ಸಧಸ್ಥಾನಿ]** ಎಲ್ಲಾ ಮನುಷ್ಯರ ಅವರವರ ಮನೆಯಲ್ಲಿ ವಿದ್ಯಾವಿನಯ ಧರ್ಮಗಳ ಪ್ರಕಾಶನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ನಿತ್ಯ, ಶುದ್ಧ, ಬುದ್ಧ, ಮುಕ್ತ, ಸಚ್ಚಿದಾನಂದ ಮುಂತಾದ ಲಕ್ಷಣಗಳಿಂದ ಕೂಡಿರುವ ಪರಮಾತ್ಮನು ಸಂಪೂರ್ಣ ಜಗತ್ತನ್ನೇ ಸೃಷ್ಟಿಸಿ, ರಕ್ಷಿಸಿ ಅಲ್ಲಿರುವ ಎಲ್ಲರನ್ನೂ ಹೇಗೆ ಆನಂದಿತರನ್ನಾಗಿ ಮಾಡುತ್ತಾನೋ ಅದೇ ರೀತಿ ಸತ್ಯವಾದೀ ವಿದ್ಯಾವಂತನು ಸಂಪೂರ್ಣ ಸಂಸಾರವನ್ನು ಆನಂದಯುಕ್ತವನ್ನಾಗಿ ಮಾಡಬೇಕು.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣದ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಇಪ್ಪತ್ತೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೨೬

ಮಂತ್ರಸಂಖ್ಯೆ ೯ । ೧,೬, ೮, ೯ ವಿಶ್ವಾಮಿತ್ರಃ, ೭ ಆತ್ಮಾ ಋಷಿಃ । ೧, ೩ ವೈಶ್ವಾನರಃ, ೪, ೬ ಮರುತಃ, ೭, ೮ ಅಗ್ನಿರಾತ್ಮಾವಾ, ೯ ವಿಶ್ವಾಮಿತ್ರೋಪಾಧ್ಯಾಯೋ ದೇವತಾ । ೧-೬ ಜಗತೀ ಛಂದಃ । ನಿಷಾದಃ ಸ್ವರಃ । ೭-೯ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ಅಗ್ನ್ಯಾದಿ ಪದಾರ್ಥಗಳಿಂದ ವಿದ್ಯಾವಂತರು ಏನನ್ನು ಸಾಧಿಸಿಕೊಳ್ಳಬೇಕು ಎಂಬ ವಿಚಾರವನ್ನು ತಿಳಿಸಲಾಗಿದೆ.

**ವೈಶ್ವಾನರಂ ಮನಸಾಗ್ನಿಂ ನಿಚಾಯ್ಯಾ ಹವಿಷ್ಮಂತೋ ಅನುಷತ್ಯಂ ಸ್ವರ್ವಿದಮ್ ।**

**ಸುದಾನುಂ ದೇವಂ ರಥಿರಂ ವಸೂಯವೋ ಗೀರ್ಭೀ ರಣ್ವಂ ಕುಶಿಕಾಸೋ ಹವಾಮಹೇ ॥೧॥**

**ಪದಾರ್ಥ:-** **[ಕುಶಿಕಾಸಃ]** ಉಪದೇಶಕರು **[ಹವಿಷ್ಮಂತಃ]** ದಾನ ಯೋಗ್ಯ ಪದಾರ್ಥಗಳೊಂದಿಗೆ **[ವಸುಯವಃ]** ಧನ ಸಂಗ್ರಹಿಸುವ ಕೆಲಸದಲ್ಲಿ ತತ್ಪರರಾಗಿ **[ಮನಸಾ]** ವಿಜ್ಞಾನದಿಂದ **[ನಿಚಾಯ್ಯ]** ನಿಶ್ಚಯಗೊಳಿಸಿಕೊಂಡು **[ಸ್ವರ್ವಿದಂ]** ಧನ ಪ್ರಾಪ್ತಿಗೊಳಿಸುವಂತಹ **[ರಣ್ವಂ]** ಶಬ್ದ ಮಾಡುತ್ತ **[ರಥಿರಂ]** ಸುಂದರ ವಾಹನಗಳೊಂದಿಗೆ ಕೂಡಿ **[ಅನುಷತ್ಯಂ]** ಸತ್ಯಕ್ಕೆ ಅನುಕೂಲವಾಗಿ **[ಸುದಾನುಂ]** ಉತ್ತಮ ಪದಾರ್ಥಗಳನ್ನು ಕೊಡುವವನು **[ದೇವಂ]** ಬೆಳಕು ನೀಡುವಂತಹ **[ವೈಶ್ವಾನರಂ]** ಸಮಸ್ತ ಮನುಷ್ಯರನ್ನು ಪ್ರಕಾಶಗೊಳಿಸುವವನಾದ **[ಅಗ್ನಿಂ]** ಅಗ್ನಿಯನ್ನು **[ಹವಾಮಹೇ]** ಗ್ರಹಣ ಮಾಡುವ ರೀತಿಯಲ್ಲಿ ನೀವೂ ಈ ಅಗ್ನಿಯನ್ನು **[ಗೀರ್ಭಿಃ]** ಮಾತುಗಳ ಮೂಲಕ ಸ್ವೀಕರಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಅಗ್ನಿಯ ಗುಣಕರ್ಮ ಸ್ವಭಾವಗಳನ್ನು ಅರಿತು, ನಿಶ್ಚಯಗೊಳಿಸಿಕೊಂಡು ಕಾರ್ಯಪ್ರವೃತ್ತರಾಗಿ ಸಫಲರಾಗುತ್ತಾರೆ. ಹಾಗೆಯೇ ಪೃಥಿವ್ಯಾದಿ ಪದಾರ್ಥಗಳ ಗುಣ ಕರ್ಮ ಸ್ವಭಾವಗಳನ್ನು ನಿಶ್ಚಯಿಸಿಕೊಂಡು ಉಪಕಾರ ಮಾಡುವವರಾಗಿ ಕಾರ್ಯದಲ್ಲಿ ಸಫಲರಾಗಿರಿ.

ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಮ್ ।**
**ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಮ್ ॥೨॥**

**ಪದಾರ್ಥ:-** **[ಮನುಷಃ]** ಮನನಶೀಲನು **[ದೇವತಾತಯೇ]** ಉತ್ತಮ ಗುಣಗಳ ಪ್ರಾಪ್ತಿಗಾಗಿ **[ರಘುಷ್ಯದಂ]** ಶೀಘ್ರಗಾಮಿ **[ವಿಪ್ರಂ]** ಬುದ್ಧಿವಂತನಾದ **[ಶ್ರೋತಾರಂ]** ವೇದ ಶಾಸ್ತ್ರಾದಿಗಳನ್ನು ಕೇಳಿಸಿಕೊಳ್ಳುವ ಮನುಷ್ಯನನ್ನು **[ಅತಿಥಿಂ]** ಅತಿಥಿಗೆ ಸಮಾನನಾಗಿ **[ಅವಸೇ]** ರಕ್ಷಣಾದಿ ಕಾರ್ಯಗಳಿಗಾಗಿ **[ಮಾತರಿಶ್ವಾನಂ]** ವಾಯುವಿನಲ್ಲಿ ಶ್ವಾಸಕಾರಕ **[ಉಕ್ಥ್ಯಂ]** ಪ್ರಶಂಸಾರ್ಹವಾದ **[ಬೃಹಸ್ಪತಿಂ]** ಪೃಥಿವ್ಯಾದಿ ಪದಾರ್ಥಗಳ ಧಾರಕನಾದ **[ವೈಶ್ವಾನರಂ]** ರಾಜಾ ಆದಿಯರಲ್ಲಿ ವಿರಾಜಮಾನನಾದ **[ಶುಭ್ರಂ]** ಪ್ರಕಾಶಮಾನವಾದ **[ಅಗ್ನಿಂ]** ವಿದ್ಯುತ್ ಮುಂತಾದ ರೂಪದಲ್ಲಿರುವ ಅಗ್ನಿಯನ್ನು **[ಹವಾಮಹೇ]** ಸ್ವೀಕರಿಸುತ್ತೇವೆ. **[ತಂ]** ಅದನ್ನು ನೀವೂ ತಿಳಿದುಕೊಳ್ಳಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪರಪೂರ್ಣ ವಿದ್ಯಾವಂತರಾದ ಅತಿಥಿ ಜನರು ಶ್ರೋತೃವರ್ಗದವರನ್ನು ಹೇಗೆ ಜ್ಞಾನಯುಕ್ತರನ್ನಾಗಿ ಮಾಡುತ್ತಾರೆಯೋ, ಅದೇರೀತಿ ಅಗ್ನಿಯು ಶಿಲ್ಪಿ ಜನರಿಗಾಗಿ ವಿಪುಲವಾದ ಧನರಾಶಿಯನ್ನು ಉತ್ಪಾದನೆ ಮಾಡುತ್ತಾನೆ.

ಈ ಮಂತ್ರದಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಲಾಗಿದೆ.

**ಅಶ್ವೋ ನ ಕ್ರಂದಞ್ಜನಿಭಿಃ ಸಮಿಧ್ಯತೇ ವೈಶ್ವಾನರಃ ಕುಶಿಕೇಭಿರ್ಯುಗೇಯುಗೇ ।**
**ಸ ನೋ ಅಗ್ನಿಃ ಸುವೀರ್ಯಂ ಸ್ವಶ್ವ್ಯಂ ದಧಾತು ರತ್ನಮಮೃತೇಷು ಜಾಗೃವಿಃ ॥೩॥**

**ಪದಾರ್ಥ:-** **[ವೈಶ್ವಾನರಃ]** ಸಮಗ್ರ ಮನುಷ್ಯಕೋಟಿಯನ್ನು ಪ್ರಕಾಶಗೊಳಿಸುವವನು **[ಜಾಗೃವಿಃ]** ಯಾವಾಗಲೂ ಜಾಗೃತನಾಗಿಯೇ ಇರುವವನು **[ಅಗ್ನಿಃ]** ಅಂತಹ ಜಠರಾಗ್ನಿಯು **[ಜನಿಭಿಃ]** ಉತ್ಪನ್ನಗೊಳಿಸುವ ಕುದುರೆಗಳೊಂದಿಗೆ **[ಕ್ರಂದನ್]** ಧ್ವನಿಗೈಯುತ್ತ **[ಅಶ್ವಃ]** **[ನ]** ಕುದುರೆಗೆ ಸಮನಾಗಿ **[ಕುಶಿಕೇಭಿಃ]** ಶಬ್ದ ಮಾಡುವವರಿಂದ **[ಯುಗೇಯುಗೇ]** ಪ್ರತಿ ವರ್ಷದಲ್ಲೂ **[ಸಂ]** **[ಇಧ್ಯತೇ]** ಪ್ರದೀಪ್ತನಾಗುತ್ತಾನೆ. **[ಸಃ]** ಅವನು **[ನಃ]** ನಮಗೆ **[ಸುವೀರ್ಯಂ]** ಅತಿಶಯ ಬಲದಾಯಕವಾದ **[ಸ್ವಶ್ವ್ಯಂ]** ಉತ್ತಮ ಕುದುರೆಗಳೊಂದಿಗೆ **[ಅಮೃತೇಷು]** ಸುವರ್ಣಾದಿ ಧನಗಳಲ್ಲಿ **[ರತ್ನಂ]** ಧನವನ್ನು **[ದಧಾತು]** ಧಾರಣ ಮಾಡಿಸುವವನಾಗಲಿ. ಅಂತಹ ಅಗ್ನಿಯ ಉಪಯೋಗವನ್ನು ನೀವೆಲ್ಲರೂ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತ ಮತ್ತು ಉಪಮಾಲಂಕಾರವಿದೆ. ಯಾವ ಮನುಷ್ಯರು ಅಗ್ನಿ ಶಕ್ತಿಯನ್ನು ವಾಹನ ಚಾಲನಾದಿ ಕಾರ್ಯಗಳಲ್ಲಿ ಉಪಯೋಗಿಸಿಕೊಳ್ಳುತ್ತಾರೋ ಆ ಅಗ್ನಿಯು ಅವರಿಗೆ ಸಕಲ ವಿಧವಾದ ಸಂಪತ್ತು ಪದಾರ್ಥಗಳು ಇವುಗಳ ಅಭಿವೃದ್ಧಿಯನ್ನು ನಿಶ್ಚಯವಾಗಿಯೂ ಮಾಡುತ್ತಾನೆ.

ಇಲ್ಲಿ ಮತ್ತೆ ಅದೇ ವಿಷಯವನ್ನು ತಿಳಿಸಿದೆ.

**ಪ್ರ ಯಂತು ವಾಜಾಸ್ತವಿಷೀಭಿರಗ್ನಯಃ ಶುಭೇ ಸಂಮಿಶ್ಲಾಃ ಪೃಷತೀರಯುಕ್ಷತ ।**
**ಬೃಹದುಕ್ಷೋ ಮರುತೋ ವಿಶ್ವವೇದಸಃ ಪ್ರ ವೇಪಯಂತಿ ಪರ್ವತಾ ಅದಾಭ್ಯಾಃ ॥೪॥**

**ಪದಾರ್ಥ:-** [ತವಿಷೀಭಿಃ] ಪರಾಕ್ರಮಾದಿ ಸಾಮರ್ಥ್ಯಗಳೊಂದಿಗೆ [ವಾಜಾಃ] ವೇಗಗತಿಯ [ಅಗ್ನಯಃ] ಅಗ್ನಿಗಳು [ವಿಶ್ವವೇದಸಃ] ಸಂಪೂರ್ಣ ಸಂಪತ್ತಿನಿಂದ ಕೂಡಿ [ಬೃಹದುಕ್ಷಃ] ಅತಿಶಯವಾಗಿ ಸೇಚನ ಮಾಡುವಂತಹ [ಮರುತಃ] ಗಾಳಿಯು [ಶುಭೇ] ಜಲದಲ್ಲಿ [ಸಂಮಿಶ್ಲಾಃ] ಉತ್ತಮ ರೀತಿಯಲ್ಲಿ ಮೇಲನಗೊಂಡು [ಪೃಷತೀಃ] ಸೇಚನಕ್ಕೆ ಕಾರಣೀಭೂತವಾಗಿದ್ದು [ಪ್ರ] [ಯಂತು] ಪ್ರಾಪ್ತವಾಗಲಿ. [ಅದಾಭ್ಯಾಃ] ಹಿಂಸೆಗೆ ಅನರ್ಹನಾಗಿ [ಪರ್ವತಾನ್] ಪರ್ವತಗಳಂತೆ ಉನ್ನತ ಸ್ಥಾನದಲ್ಲಿರುವ ಮೋಡಗಳನ್ನು [ಪ್ರ] [ವೇಪಯಂತಿ] ಕಂಪನಗೊಳಿಸುತ್ತವೆ. ಅದೇ ರೀತಿ ನೀವೂ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ನೀರಿನಲ್ಲಿ ಭೂಮಿ, ಬೆಂಕಿ, ಗಾಳಿಗಳು ಹೇಗೆ ಸೇರಿಕೊಂಡು ಕಾರ್ಯ ನಿರ್ವಹಿಸುತ್ತವೆಯೋ, ಹಾಗೆ ಜನರೂ ಸಹ ಸೇನೆಯಲ್ಲಿ ಸೇರಿದವರಾಗಿ ಮಿತ್ರಭಾವದಿಂದ ಕಾರ್ಯ ನಿರ್ವಹಿಸಿದರೆ ಅವರ ವಿಜಯವು ಸುನಿಶ್ಚಿತವಾಗಿರುತ್ತದೆ.

ಈ ಮಂತ್ರದಲ್ಲಿ ವಾಯ್ವಾದಿ ಪದಾರ್ಥಗಳಿಂದ ಏನನ್ನು ಸಾಧಿಸಿಕೊಳ್ಳಬೇಕು ಎಂಬುದನ್ನು ತಿಳಿಸಲಾಗಿದೆ.

**ಅಗ್ನಿಶ್ರಿಯೋ ಮರುತೋ ವಿಶ್ವಕೃಷ್ಟಯ ಆ ತ್ವೇಷಮುಗ್ರಮವ ಈಮಹೇ ವಯಮ್ ।**
**ತೇ ಸ್ವಾನಿನೋ ರುದ್ರಿಯಾ ವರ್ಷನಿರ್ಣಿಜಃ ಸಿಂಹಾ ನ ಹೇಷಕ್ರತವಃ ಸುದಾನವಃ ॥೫॥**

**ಪದಾರ್ಥ:-** [ವಯಂ] ನಾವು [ವಿಶ್ವಕೃಷ್ಟಯಃ] ಸಮಗ್ರ ಸೃಷ್ಟಿಯನ್ನು ಉತ್ಪಾದನೆ ಮಾಡುವವನು [ಅಗ್ನಿಶ್ರಿಯಃ] ಅಗ್ನಿಯಿಂದ ಧನ ಸಂಪನ್ನನು [ಸ್ವಾನಿನಃ] ಧ್ವನಿಯಲ್ಲಿ ವೈಶಿಷ್ಟ್ಯ ಹೊಂದಿದವನು [ರುದ್ರಿಯಾಃ] ಅಗ್ನಿಯಲ್ಲಿ ಉತ್ಪನ್ನವಾಗುವಂತಹ [ವರ್ಷ ನಿರ್ಣಿಜಃ] ಮಳೆಯನ್ನು ಪವಿತ್ರಗೊಳಿಸುವವನು / ಪುಷ್ಟಿಗೊಳಿಸುವವನು [ಮರುತಃ] ವಾಯುಮಂಡಲವು [ಸಿಂಹಾಃ] [ನ] ಸಿಂಹದಂತೆ ಧ್ವನಿಗೈಯುವ [ಹೇಷಕ್ರತವಃ] ಶಬ್ದಾತ್ಮಕ ಬುದ್ಧಿ ಅಥವಾ ಕ್ರಿಯೆಗಳಿರುವವನು [ಸುದಾನವಃ] ಉತ್ತಮ ದಾನಕಾರಕರಾದ ನಾವು [ಆ, ಈಮಹೇ] ಉತ್ತಮ ರೀತಿಯಲ್ಲಿ ಯಾಚಿಸುತ್ತೇವೆ. [ತೇ] ಅವುಗಳು ಎಲ್ಲ ರೀತಿಯಲ್ಲಿಯೂ ಯಾಚನಾಯೋಗ್ಯವಾಗಿವೆ. [ಉಗ್ರಂ] ಕಠಿಣವಾದ ಪ್ರಕಾಶವನ್ನು ಮತ್ತು ದೃಢತನವನ್ನು [ಅವಃ] ರಕ್ಷಣಾದಿಗಳನ್ನೂ ಯಾಚಿಸುತ್ತೇವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ವಿದ್ವಾವಂತರ ಸಂಗ ಮಾಡಿ ಬುದ್ಧಿವಂತರಾಗಿ ವಾಯ್ವಾದಿಗಳಿಗೆ ಸಂಬಂಧಿಸಿದ ಪದಾರ್ಥ ವಿದ್ಯೆಗಳನ್ನು ತಿಳಿಸಿಕೊಡುವಂತೆ ಕೇಳಿಕೊಳ್ಳಬೇಕು ಮತ್ತು ಸಿಂಹದಂತಹ ಧೈರ್ಯ ಪರಾಕ್ರಮಗಳನ್ನು ಧರಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವ್ರಾತಂವ್ರಾತಂ ಗಣಂಗಣಂ ಸುಶಸ್ತಿಭಿ-ರಗ್ನೇರ್ಭಾಮಂ ಮರುತಾಮೋಜ ಈಮಹೇ ।**
**ಪೃಷದಶ್ವಾಸೋ ಅನವಭ್ರರಾಧಸೋ ಗಂತಾರೋ ಯಜ್ಞಂ ವಿದಥೇಷು ಧೀರಾಃ ॥೬॥**

**ಪದಾರ್ಥ:-** [**ಪೃಷದಶ್ವಾಸಃ**] ಸೇಚನಕರ್ತನು ಮತ್ತು ವೇಗಾದಿ ಗುಣ ಸಂಪನ್ನರು [**ಅನವಭ್ರರಾಧಸಃ**] ಶಾಶ್ವತವಾದ ಧನಗಳನ್ನು ಕೊಡುವವರು [**ಗಂತಾರಃ**] ಪ್ರಾಪ್ತವಾಗುವ ಗಾಳಿಗೆ ಸಮನಾದವರು [**ಸುಶಸ್ತಿಭಿಃ**] ಶ್ರೇಷ್ಠ ಸ್ತುತಿಗಳೊಂದಿಗೆ ಇರುವವರು [**ಧೀರಾಃ**] ಧ್ಯಾನ ಮಾಡುವ ವಿದ್ಯಾವಂತ ಪುರುಷರು [**ವಿದಥೇಷು**] ವಿಜ್ಞಾನಾದಿಗಳಲ್ಲಿ [**ಯಜ್ಞಂ**] ಸಂಗತಿಕರಣಗೊಳಿಸಲಿ ಮತ್ತು [**ಅಗ್ನೇಃ**] ಅಗ್ನಿಯಿಂದ ಉತ್ಪನ್ನವಾದ [**ಭಾಮಂ**] ತೇಜಸ್ಸನ್ನು [**ಮರುತಾಂ**] ಪವನಗಳ ಸಾಮೀಪ್ಯದಿಂದ [**ಓಜಃ**] ಬಲ ಮತ್ತು ಅನ್ಯ ಪದಾರ್ಥಗಳ [**ವ್ರಾತಂವ್ರಾತಂ**] ಪ್ರತಿ ಹಂತದಲ್ಲೂ ವರ್ತಮಾನವಾಗಿರುವ [**ಗಣಂ ಗಣಂ**] ಪ್ರತಿಯೊಂದು ಸಮೂಹವನ್ನು ಹೇಗೆ ಯಾಚಿಸುವರೋ ಹಾಗೆ [**ಈಮಹೇ**] ನಾವೂ ಯಾಚಿಸೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಅಗ್ನಿ ವಾಯು ಮುಂತಾದ ಪದಾರ್ಥಗಳೊಂದಿಗೆ ತಮ್ಮ ಕಾರ್ಯ ಸಮೂಹಗಳನ್ನು ಹೇಗೆ ಸಾಧಿಸಿಕೊಳ್ಳಬೇಕು ಎಂಬುದನ್ನು ವಿದ್ಯಾವಂತರು ತಿಳಿಸಿಕೊಡುತ್ತಾರೆ.

ಈ ಮಂತ್ರದಲ್ಲಿ ಮನುಷ್ಯರು ಮಿಂಚಿನಂತೆ ವರ್ತಿಸಬೇಕೆಂಬ ವಿಚಾರ ಹೇಳಿದೆ.

**ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।**
**ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥೭॥**

**ಪದಾರ್ಥ:-** [**ಅಗ್ನಿಃ**] ಅಗ್ನಿಯಂತೆ [**ಜನ್ಮನಾ**] ಹುಟ್ಟಿನಿಂದಲೇ [**ಜಾತವೇದಾಃ**] ಜ್ಞಾನ ಸಂಪನ್ನನು ನಾನು [**ಅಸ್ಮಿ**] ಆಗಿರುವೆನು. [**ಮೇ**] ನನ್ನ [**ಚಕ್ಷುಃ**] ಚಕ್ಷುರಿಂದ್ರಿಯವು [**ಘೃತಂ**] ಪ್ರಕಾಶಮಾನವಾಗಿದೆ. [**ಮೇ**] ನನ್ನ [**ಆಸನ್**] ಬಾಯಿಯಲ್ಲಿ [**ಅಮೃತಂ**] ಅಮೃತದಂತಹ ರಸವಿದೆ. [**ರಜಸಃ**] ಲೋಕ ಸಮೂಹದ [**ವಿಮಾನಃ**] ಬಹುವಿಧ ಗೌರವಾನ್ವಿತ [**ತ್ರಿಧಾತುಃ**] ಮೂರು ಧಾತುಗಳಿಂದ ಕೂಡಿರುವ [**ಅರ್ಕಃ**] ವಜ್ರ ಅಥವಾ ಮಿಂಚು [**ಅಜಸ್ರಃ**] ನಿರಂತರ ಚಲಿಸುವ [**ಘರ್ಮಃ**] ಪ್ರಕಾಶಮಾನನಾದ ಸೂರ್ಯನು [**ಹವಿಃ**] ಹೇಗೆ ಹವನ ಸಾಮಗ್ರಿಗಳೋ ಹಾಗೆ [**ನಾಮ**] ಪ್ರಖ್ಯಾತನು [**ಅಸ್ಮಿ**] ನಾನಾಗಿರುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಮಿಂಚಿನಂತೆ ಕಾರ್ಯ ಸಾಧಿಸುವ ಸಾಮರ್ಥ್ಯವನ್ನು ಧಾರಣ ಮಾಡಬೇಕು. ರೋಗ ನಾಶಕಾರಕ ಆಹಾರವನ್ನು ಸೇವಿಸುವುದು ಮತ್ತು ಶತ್ರುಗಳನ್ನು ನಿವಾರಿಸಿಕೊಳ್ಳುವುದು ಇವುಗಳಿಂದ ಮಿಂಚಿನಂತೆ ಕಾರ್ಯ ಸಾಧಿಸಿಕೊಳ್ಳಲು ಸಾಧ್ಯವಾಗುತ್ತದೆ.

ಈ ಮಂತ್ರದಲ್ಲಿ ಯಾರು ಪರಿಶುದ್ಧರು ಎಂಬುದನ್ನು ತಿಳಿಸಲಾಗಿದೆ.

**ತ್ರಿಭಿಃ ಪವಿತ್ರೈರಪುಪೋದ್ಧ್ಯ (ಅ)ರ್ಕಂ ಹೃದಾ ಮತಿಂ ಜ್ಯೋತಿರನು ಪ್ರಜಾನನ್ ।**
**ವರ್ಷಿಷ್ಠಂ ರತ್ನಮಕೃತ ಸ್ವಧಾಭಿ-ರಾದಿದ್ದ್ಯಾವಾಪೃಥಿವೀ ಪರ್ಯಪಶ್ಯತ್ ॥೮॥**

**ಪದಾರ್ಥ:-** [**ತ್ರಿಭಿಃ**] ಕಾಯಾ ವಾಚಾ ಮನಸ್ಸುಗಳಿಂದ [**ಪವಿತ್ರೈಃ**] ಉತ್ತಮ ಕೆಲಸಗಳನ್ನು ಮಾಡಲು ಕಾರಣವಾದ ತೇಜಸ್ಸುಗಳು ಮತ್ತು [**ಹೃದಾ**] ಹೃದಯದಿಂದ [**ಅರ್ಕಂ**] ಉತ್ತಮ ಸಂಸ್ಕಾರಗೊಳಿಸಿದ ಅನ್ನವನ್ನು [**ಅಪುಪೋತ್**] ಪವಿತ್ರಗೊಳಿಸಬೇಕು [**ಹಿ**] ಯಾವುದರಿಂದ [**ಜ್ಯೋತಿಃ**] ಪ್ರಕಾಶ ಮತ್ತು [**ಮತಿಂ**] ಬುದ್ಧಿಯನ್ನು [**ಅನು**] [**ಪ್ರಜಾನನ್**] ಅನುಕೂಲಕರವಾಗಿ ತಿಳಿದುಕೊಳ್ಳುತ್ತ [**ಸ್ವಧಾಭಿಃ**] ಅನ್ನಾದಿ ಪದಾರ್ಥಗಳಿಂದ [**ವರ್ಷಿಷ್ಠಂ**]

ಅತಿಶಯ ವೃದ್ಧಿಕಾರಕ [ರತ್ನಂ] ಶ್ರೇಷ್ಠ ಧನವನ್ನು [ಅಕೃತ] ಸಾಧಿಸಿಕೊಳ್ಳಿರಿ. [ಆತ್] [ಇತ್] ಅನಂತರ [ದ್ಯಾವಾ ಪೃಥಿವೀ] ಬೆಳಕು ಅಂತರಿಕ್ಷವನ್ನು [ಪರಿ] [ಅಪಶ್ಯತ್] ಎಲ್ಲ ರೀತಿಯಿಂದಲೂ ನೋಡುವವರಾಗಿರಿ.

**ಭಾವಾರ್ಥ:-** ಯಾರು ಉತ್ತಮ ಬುದ್ಧಿಯನ್ನು ಪಡೆದುಕೊಂಡು ಅನ್ಯ ಮನುಷ್ಯರನ್ನು ವಿದ್ಯಾವಂತರೂ, ವಿನಯವಂತರೂ, ಲಕ್ಷ್ಮೀವಂತರೂ ಆಗಿ ಸಂತುಷ್ಟರಾಗುವಂತೆ ಮಾಡುತ್ತಾರೋ ಅವರೇ ಪರಿಶುದ್ಧರು ಎನಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶತಧಾರಮುತ್ಸಮಕ್ಷೀಯಮಾಣಂ ವಿಪಶ್ಚಿತಂ ಪಿತರಂ ವಕ್ತ್ವಾನಾಮ್ ।**
**ಮೇಳಿಂ ಮದಂತಂ ಪಿತ್ರೋರುಪಸ್ಥೇ ತಂ ರೋದಸೀ ಪಿಪೃತಂ ಸತ್ಯವಾಚಮ್ ॥೯॥**

**ಪದಾರ್ಥ:-** [ಉತ್ಸಂ] ಬಾವಿಗೆ ಸಮಾನವಾದ [ಅಕ್ಷೀಯಮಾಣಂ] ನಾಶರಹಿತವಾದ ಪರಿಪೂರ್ಣ ವಿದ್ಯೆ ವಿಜ್ಞಾನಗಳಿಂದ ಕೂಡಿರುವ [ಶತಧಾರಂ] ನೂರಾರು ರೀತಿಯ ಉತ್ತಮ ಶಿಕ್ಷಣಗಳಿಂದ ಯುಕ್ತವಾದ ಮಾತುಗಳಿರುವವನು [ಪಿತರಂ] ತಂದೆಗೆ ಸಮಾನನಾಗಿರುವ [ವಕ್ತ್ವಾನಾಂ] ನುಡಿಗಳನ್ನು ಸಂಗ್ರಹಿಸಿರುವ ವಾಕ್ಯಗಳನ್ನು ನುಡಿಯುವವನು [ಮೇಳಿಂ] ಸುಶಿಕ್ಷಿತ ನುಡಿ ಮತ್ತು [ಮದಂತಂ] ಸ್ತುತಿಕಾರಕವಾದ [ಸತ್ಯವಾಚಂ] ಸತ್ಯವಚನದಿಂದ ಯುಕ್ತನಾದ [ವಿಪಶ್ಚಿತಂ] ವಿದ್ಯಾವಂತ ಪುರುಷನನ್ನು [ಪಿತ್ರೋಃ] ತಂದೆ ತಾಯಿಯರ [ಉಪಸ್ಥೇ] ಸಮೀಪದಲ್ಲಿ [ರೋದಸೀ] ಭೂಮಿ ಮತ್ತು ಸೂರ್ಯರು [ಪಿಪೃತಮ್] ಹೇಗೆ ಪಾಲನೆ ಮಾಡುತ್ತಾರೋ ಹಾಗೆ ಎಲ್ಲರೂ ತನ್ನ ಆತ್ಮಕ್ಕೆ ಸದೃಶವಾಗಿ ಸೇವೆ ಮಾಡಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಪರಿಪೂರ್ಣ ವಿದ್ಯಾವಂತನೋ ಅತಿ ಸೂಕ್ಷ್ಮ ಬುದ್ಧಿಯುಳ್ಳವನೋ ಪೃಥಿವ್ಯಾದಿಗಳಂತೆ ಕ್ಷಮಾಶೀಲನೋ ಸೂರ್ಯನಂತೆ ಅಂತಃಕರಣದಿಂದ ಪರಿಶುದ್ಧನೋ, ಅಂತಹ ವಿದ್ಯಾವಂತನು ಎಲ್ಲ ಮನುಷ್ಯರೊಂದಿಗೂ ತಂದೆಗೆ ಸಮಾನವಾಗಿ ವ್ಯವಹರಿಸಬೇಕು. ಅಂತಹ ವಿದ್ಯಾವಂತನ ಸೇವೆಯನ್ನು ಎಲ್ಲರೂ ತನ್ನ ಆತ್ಮಕ್ಕೆ ಸಮನಾದ ರೀತಿಯಲ್ಲಿ ಮಾಡಬೇಕು.

ಈ ಸೂಕ್ತದಲ್ಲಿ ಅಗ್ನಿ, ವಾಯುಗಳ ಗುಣವನ್ನು ವಿದ್ಯಾವಂತರ ಕರ್ತವ್ಯವನ್ನೂ ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಇಪ್ಪತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೨೭

ಮಂತ್ರಸಂಖ್ಯೆ ೧೫ । ವಿಶ್ವಾಮಿತ್ರ ಋಷಿಃ । ೧ ಋತವೋ ಅಗ್ನಿರ್ದೇವತಾ, ೨-೧೫ ಅಗ್ನಿರ್ದೇವತಾ । ೧, ೬-೧೦, ೧೪, ೧೫ ನಿಚೃತ್ ಗಾಯತ್ರೀ, ೨, ೩, ೬, ೧೧, ೧೨ ಗಾಯತ್ರೀ, ೪, ೫, ೧೩ ವಿರಾಡ್ ಗಾಯತ್ರಿ ಛಂದಃ । ಷಡ್ಜಃ ಸ್ವರಃ.

ವಿದ್ಯಾವಂತರು ಏನು ಮಾಡಬೇಕೆಂಬುದನ್ನು ಇಲ್ಲಿ ತಿಳಿಸಲಾಗಿದೆ.

**ಪ್ರ ವೋ ವಾಜಾ ಅಭಿದ್ಯವೋ ಹವಿಷ್ಮಂತೋ ಘೃತಾಚ್ಯಾ । ದೇವಾಞ್ಜಿಗಾತಿ ಸುಮ್ನಯುಃ ॥೧॥**

**ಪದಾರ್ಥ:-** [ವಃ] ನಿಮ್ಮೆಲ್ಲರ [ಅಭಿದ್ಯವಃ] ಸುತ್ತಲೂ ಪ್ರಕಾಶಮಾನನಾದ [ಹವಿಷ್ಮಂತಃ] ದಾನಯೋಗ್ಯ ವಸ್ತುಗಳಿಂದ ಕೂಡಿರುವ [ವಾಜಾಃ] ವಿಜ್ಞಾನಾದಿ ಪದಾರ್ಥಗಳು [ಘೃತಾಚ್ಯಾ] ನೀರನ್ನು ಕೊಡುವಂತಹ ರಾತ್ರಿಯೊಂದಿಗೆ

ರುವ **[ಸುಮ್ನಯುಃ]** ತನ್ನ ಸುಖವನ್ನು ಬಯಸುವವರಾದ **[ದೇವಾನ್]** ವಿದ್ಯಾವಂತರನ್ನು **[ಪ್ರ, ಜಿಗಾತಿ]** ನಾರು ಉತ್ತಮ ರೀತಿಯಲ್ಲಿ ಸ್ತುತಿ ಮಾಡುತ್ತಾರೋ ಅಂತಹ ವಿದ್ಯಾವಂತರ ಸ್ತುತಿಯನ್ನು ನೀವೂ ಮಾಡಿ.

**ಭಾವಾರ್ಥ:-** ಹಗಲಿನಲ್ಲಿ ಪದಾರ್ಥಗಳು ಒಣಗುತ್ತವೆ. ರಾತ್ರಿಯಲ್ಲಿ ಪುನಃ ತೇವಾಂಶ ಪಡೆಯುತ್ತವೆ. ಇದು ಕೃತಿಯ ಸ್ವಭಾವ. ಅದೇ ರೀತಿ ತನ್ನ ಪದಾರ್ಥವನ್ನು ಬೇರೊಬ್ಬರಿಗೆ, ಬೇರೊಬ್ಬರ ಪದಾರ್ಥವನ್ನು ತನಗೆ ಈ ೀತಿ ಸುಖದ ಕಾಮನೆಯಿಂದ ವಿನಿಯೋಗ ಮಾಡಿಕೊಳ್ಳುತ್ತ ವಿದ್ಯಾವಂತರೊಂದಿಗೆ ಸಂಗತಿಯನ್ನು ಬೆಳೆಸಿಕೊಳ್ಳಬೇಕು.

ಅಗ್ನಿಯಿಂದ ಏನು ಸಿದ್ಧಿಸುತ್ತದೆ ಎಂಬುದನ್ನಿಲ್ಲಿ ತಿಳಿಸಲಾಗಿದೆ.

**ಈಳೇ ಅಗ್ನಿಂ ವಿಪಶ್ಚಿತಂ ಗಿರಾ ಯಜ್ಞಸ್ಯ ಸಾಧನಮ್ । ಶ್ರುಷ್ಟೀವಾನಂ ಧಿತಾವಾನಮ್ ॥೨॥**

**ಪದಾರ್ಥ:-** **[ಗಿರಃ]** ವಾಣಿಯಿಂದ **[ಯಜ್ಞಸ್ಯ]** ಅಹಿಂಸಾರೂಪ ಯಜ್ಞದ **[ಸಾಧನಂ]** ಸಿದ್ಧಿಗೊಳಿಸುವಂತಹ ರುಷ್ಟೀವಾನಂ] ಶೀಘ್ರ ಚಲಿಸುವ / ಚಾಲನೆಗೊಳಿಸುವ **[ಧಿತಾವಾನಂ]** ಪದಾರ್ಥಗಳನ್ನು ಧರಿಸುವ **[ಅಗ್ನಿಂ]** ಗ್ನಿಯಂತೆ ತೇಜಸ್ವಿಯಾದ **[ವಿಪಶ್ಚಿತಂ]** ವಿದ್ಯಾವಂತನ **[ಈಳೇ]** ಸ್ತವನ ಮಾಡುವೆನು. ನೀವೂ ಅದನ್ನೇ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವುದೇ ಭಿನ್ನ ಪದಾರ್ಥಗಳನ್ನು ೋಡಿಸುವಂತಹ ವ್ಯವಹಾರದಲ್ಲಿ ಅಗ್ನಿಯ ಪಾತ್ರವು ಹೇಗೆ ಮುಖ್ಯವಾಗಿರುತ್ತದೆಯೋ ಹಾಗೆಯೇ ಧರ್ಮ, ರ್ಥ, ಕಾಮ ಮತ್ತು ವಿದ್ಯೆ ಇವುಗಳನ್ನು ಪಡೆಯುವುದರಲ್ಲಿ ವಿದ್ಯಾವಂತರ ಪಾತ್ರವು ಬಹಳ ಮುಖ್ಯವಾಗಿರುತ್ತದೆ.

ಈ ಮಂತ್ರದಲ್ಲಿ ವಿದ್ಯಾವಂತರ ಸಂಗವನ್ನು ಮಾಡಬೇಕೆಂಬುದನ್ನು ಹೇಳಿದೆ.

**ಅಗ್ನೇ ಶಕೇಮ ತೇ ವಯಂ ಯಮಂ ದೇವಸ್ಯ ವಾಜಿನಃ । ಅತಿ ದ್ವೇಷಾಂಸಿ ತರೇಮ ॥೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಪವಿತ್ರನಾದ ಪುರುಷಾರ್ಥವನ್ನು ಬಯಸುವ ಮನುಷ್ಯನೇ! ನಿನ್ನಂತಹ ವಯಂ] ನಾವು **[ವಾಜಿನಃ]** ವಿಜ್ಞಾನ ಮಯವಾದ **[ದೇವಸ್ಯ]** ವಿದ್ಯಾವಂತನಾದ **[ತೇ]** ನಿನ್ನ **[ಯಮಂ]** ಉತ್ತಮ ಯಮಗಳನ್ನು ಪಡೆಯುವುದಕ್ಕಾಗಿ **[ಶಕೇಮ]** ಸಮರ್ಥನಾಗುವಂತಾಗಲಿ ಮತ್ತು **[ದ್ವೇಷಾಂಸಿ]** ದೋಷಯುಕ್ತ ರ್ಮಗಳನ್ನು **[ಅತಿತರೇಮ]** ದಾಟಲು ಪ್ರಯತ್ನಿಸೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮೋಕ್ಷಾದಿ ಪದಾರ್ಥಗಳ ಜಿಜ್ಞಾಸು ರುಷರು "ಯಾವ ರೀತಿಯಲ್ಲಿ ನಾವು ಉತ್ತಮ ನಿಯಮಗಳನ್ನು ಪಾಲಿಸುವವರಾಗಿ ದುಷ್ಟ ವ್ಯಸನಾದಿಗಳಿಂದ ೂರವಿದ್ದು ಗುರಿ ಸಾಧಿಸಲು ಸಾಧ್ಯವಾಗುತ್ತದೆಯೋ, ಅಂತಹ ಉಪಾಯವನ್ನು ನಮಗೆ ಉಪದೇಶ ಮಾಡಿ ಮ್ಮ ಮೇಲೆ ಅನುಗ್ರಹ ತೋರುವವರಾಗಿರಿ" ಎಂದು ವಿದ್ಯಾವಂತರನ್ನು ಕೇಳಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಮಿಧ್ಯಮಾನೋ ಅಧ್ವರೇ (ಅ) ೩ ಪಾವಕ ಈಡ್ಯಃ । ಶೋಚಿಷ್ಕೇಶಸ್ತಮೀಮಹೇ ॥೪॥**

**ಪದಾರ್ಥ:-** **[ಅಧ್ವರೇ]** ಅಹಿಂಸಾರೂಪ ಯಜ್ಞದಲ್ಲಿ **[ಸಮಿಧ್ಯಮಾನಃ]** ಉತ್ತಮ ರೀತಿಯಲ್ಲಿ ಪ್ರಕಾಶಮಾನನಾದ ಶೋಚಿಷ್ಕೇಶಃ] ಕೇಶರಾಶಿಗಳಂತೆ ಮಿಂಚುವವನಾದ **[ಪಾವಕಃ]** ಎಲ್ಲವನ್ನು ಪವಿತ್ರೀಕರಿಸುವ **[ಅಗ್ನಿಃ]** ವಿದ್ಯುತ್ತಿಗೆ

ಸದೃಶನಾದ **[ಈಡ್ಯಃ]** ಸ್ತುತಿ ಮಾಡಲು ಯೋಗ್ಯನಾದ **[ತಂ]** ಅವನನ್ನು **[ಈಮಹೇ]** ನಾವು ಯಾಚನೆ ಮಾಡುತ್ತೇವೆ. ನೀವೂ ಅದನ್ನೇ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಲೋಕದಲ್ಲಿ ಅಗ್ನಿರೂಪದಲ್ಲಿರುವ ಪದಾರ್ಥವೇ ಉಳಿದೆಲ್ಲ ಪದಾರ್ಥಗಳಿಗಿಂತ ಶ್ರೇಷ್ಠವಾಗಿರುತ್ತದೆ. ಆದ್ದರಿಂದ ಅಂತಹ ಅಗ್ನಿ ವಿಷಯಕ ವಿದ್ಯೆಯು ಲಭಿಸುವಂತೆ ಪ್ರಾರ್ಥಿಸಿಕೊಳ್ಳಬೇಕು. ಹಾಗೆಯೇ ವಿದ್ಯಾವಂತರೂ ಸಹ ಮನುಷ್ಯರಲ್ಲಿ ಶ್ರೇಷ್ಠರೆನಿಸಿಕೊಳ್ಳುವ ವಿದ್ಯಾವಂತರು ಎಲ್ಲರೂ ಆಗಲಿ ಎಂಬುದಾಗಿ ಪ್ರಾರ್ಥಿಸಿಕೊಳ್ಳಬೇಕು.

ವಿದ್ಯಾವಂತರು ಅಗ್ನಿಯಂತೆ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತಾರೆ ಎಂಬುದನ್ನಿಲ್ಲಿ ತಿಳಿಸಲಾಗಿದೆ.

**ಪೃಥುಪಾಜಾ ಅಮರ್ತ್ಯೋ ಘೃತನಿರ್ಣಿಕ್ ಸ್ವಾಹುತಃ । ಅಗ್ನಿರ್ಯಜ್ಞಸ್ಯ ಹವ್ಯವಾಟ್ ॥೫॥**

**ಪದಾರ್ಥ:-** **[ಪೃಥುಪಾಜಾಃ]** ಯಾರ ಬಲವು ವಿಸ್ತೀರ್ಣವಾಗಿದೆಯೋ ಅಂತಹವರು. **[ಅಮರ್ತ್ಯಃ]** ಸ್ವರೂಪದಿಂದ ನಾಶರಹಿತರು **[ಯಜ್ಞಸ್ಯ]** ರಾಜ್ಯ ಪರಿಪಾಲನೆಯಂತಹ ವ್ಯವಹಾರದಲ್ಲಿ **[ಹವ್ಯವಾಟ್]** ಪಡೆಯಲು ಯೋಗ್ಯವಾದ ವಸ್ತುಗಳನ್ನು ಪಡೆದುಕೊಂಡವರು, **[ಘೃತನಿರ್ಣಿಕ್]** ನೀರು ಮತ್ತು ಆಜ್ಯವನ್ನು ಶೋಧನೆ ಮಾಡುವವರು **[ಅಗ್ನಿಃ]** ಅಗ್ನಿಯಂತೆ **[ಸ್ವಾಹುತಃ]** ಗೌರವ ಪೂರ್ವಕ ಆಹ್ವಾನಿಸಲ್ಪಟ್ಟವರು ಯಾರೋ ಅಂತಹ ವಿದ್ಯಾವಂತರನ್ನು ನಿರಂತರ ಸೇವಿಸಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸಾಧನ ಉಪಸಾಧನಗಳ ಮೂಲಕ ತಮ್ಮ ಕಾರ್ಯದಲ್ಲಿ ಉಪಯೋಗಿಸಿಕೊಳ್ಳುವ ಇಂಧನರೂಪಿ ಅಗ್ನಿಯು ಹೇಗೆ ಎಲ್ಲಾ ಕಾರ್ಯವನ್ನು ಸಾಧಿಸಿ ಕೊಡುತ್ತಾನೆಯೋ ಅದೇ ರೀತಿ ಸೇವೆಯಿಂದ ಸಂತುಷ್ಟರಾದ ವಿದ್ಯಾವಂತರು ಕೃತ್ಸ್ನವಾದ ಜ್ಞಾನಾರ್ಜನ ಕಾರ್ಯವನ್ನು ಸಾಧಿಸಿಕೊಡುತ್ತಾರೆ.

ಮನುಷ್ಯರು ಮಾಡಬೇಕಾದ ಕರ್ತವ್ಯವನ್ನಿಲ್ಲಿ ಹೇಳಿದೆ.

**ತಂ ಸಬಾಧೋ ಯತಸ್ರುಚ ಇತ್ಥಾ ಧಿಯಾ ಯಜ್ಞವಂತಃ । ಆ ಚಕ್ರುರಗ್ನಿಮೂತಯೇ ॥೬॥**

**ಪದಾರ್ಥ:-** **[ಸಬಾಧಃ]** ದುಷ್ಟ ವ್ಯಸನಗಳನ್ನು ನಾಶಮಾಡುವವನು **[ಯತಸ್ರುಚಃ]** ಉದ್ಯೋಗ ಯುಕ್ತ ಕರ್ಮ ಸಾಧನಗಳೊಂದಿಗೆ **[ಯಜ್ಞವಂತಃ]** ಪ್ರಶಂಸಾರ್ಹ ಪ್ರಯತ್ನವನ್ನು ಮಾಡುವವನು **[ಧಿಯಾ]** ಬುದ್ಧಿಯಿಂದ/ ಕರ್ಮದಿಂದ **[ಊತಯೇ]** ರಕ್ಷಣಾದಿಗಳಿಗಾಗಿ **[ಅಗ್ನಿಂ]** ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತ ಪುರುಷರನ್ನು **[ಆ]**, **[ಚಕ್ರುಃ]** ಗೌರವಿಸುತ್ತಾನೆ. **[ತಂ]** ಅಂತಹ ವಿದ್ಯಾವಂತರನ್ನು **[ಇತ್ಥಾ]** ನೀವೂ ಇದೇ ರೀತಿ ಗೌರವಿಸಿ.

**ಭಾವಾರ್ಥ:-** ಮನುಷ್ಯರೇ! ಬುದ್ಧಿ ಮತ್ತು ಕರ್ಮಗಳಲ್ಲಿ ಯಾರು ಚತುರರೋ ಅವರು ಉತ್ತಮ ವ್ಯವಹಾರಗಳನ್ನು ಸಾಧಿಸುತ್ತಾರೆ. ಹಾಗೆಯೇ ಧರ್ಮಾದಿಗಳನ್ನು ತಿಳಿಯಬಯಸುವ ಪುರುಷರು ವಿದ್ಯಾವಂತರನ್ನು ಸಂತುಷ್ಟಿಗೊಳಿಸಿ ಉತ್ತಮ ಗುಣಗಳನ್ನು ಗ್ರಹಣ ಮಾಡಬೇಕು.

ವಿದ್ಯಾರ್ಥಿಗಳು ಮಾಡಬೇಕಾದುದನ್ನು ಇಲ್ಲಿ ತಿಳಿಸಲಾಗಿದೆ.

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ ।**
**ವಿದಥಾನಿ ಪ್ರಚೋದಯನ್ ॥೭॥**

**ಪದಾರ್ಥ:-** **[ಅಮರ್ತ್ಯಃ]** ಮರಣಧರ್ಮ ರಹಿತನಾದ ಪುರುಷನು **[ಹೋತಾ]** ದಾನ ಮಾಡುವವನು **[ದೇವಃ]** ಉತ್ತಮ ಗುಣ ಕರ್ಮ ಸ್ವಭಾವಗಳಿರುವವನು **[ಪುರಸ್ತಾತ್]** ಮೊದಲಿನಿಂದಲೇ **[ಮಾಯಯಾ]** ಉತ್ತಮ ಬುದ್ಧಿಯೊಂದಿಗೆ **[ವಿದಥಾನಿ]** ವಿದ್ಯಾ-ವಿಚಾರಗಳನ್ನು **[ಪ್ರಚೋದಯನ್]** ಪ್ರಚಾರ ಮಾಡುವವನಾಗಿ **[ಏತಿ]** ನಿಮ್ಮ ಸಮೀಪಕ್ಕೆ ಬರುತ್ತಾನೆ. ನೀವು ಅವನನ್ನು ಸ್ವಾಗತಿಸಿರಿ.

**ಭಾವಾರ್ಥ:-** ವಿದ್ಯಾರ್ಥಿಗಳೇ! ಅಧ್ಯಾಪನ ಮಾಡುವವರು ನಿಮಗೆ ಕಪಟತನವಿಲ್ಲದೇ ಉತ್ತಮ ವಿದ್ಯೆಗಳನ್ನು ನೀಡಿ ಉತ್ತಮ ಶಿಕ್ಷಣಕೊಡುವರು. ಅಂತಹ ವ್ಯಕ್ತಿಗಳನ್ನು ನೀವೂ ಸಹ ತನ್ನ ಆತ್ಮನಿಗೆ ಸಮನಾಗಿ ಗೌರವಿಸಿರಿ. ಅವರ ಸೇವೆ ಮಾಡಿರಿ.

ವಿದ್ಯಾವಂತರಲ್ಲದವರು ಏನು ಮಾಡಬೇಕು ಎಂಬುದನ್ನಿಲ್ಲಿ ತಿಳಿಸಲಾಗಿದೆ.

**ವಾಜೀ ವಾಜೇಷು ಧೀಯತೇಽಧ್ವರೇಷು ಪ್ರ ಣೀಯತೇ । ವಿಪ್ರೋ ಯಜ್ಞಸ್ಯ ಸಾಧನಃ ॥೮॥**

**ಪದಾರ್ಥ:-** **[ವಾಜೇಷು]** ವಿಜ್ಞಾನ ಮತ್ತು ಕ್ರಿಯಾತ್ಮಕವಾದ **[ಅಧ್ವರೇಷು]** ಸ್ನೇಹಾದಿ ಗುಣಗಳಿರುವ ವ್ಯವಹಾರಗಳಲ್ಲಿ / ಯಜ್ಞದಲ್ಲಿ **[ಯಜ್ಞಸ್ಯ]** ಉತ್ತಮ ವ್ಯವಹಾರಗಳ **[ಸಾಧನಃ]** ಸಾಧನೆ ಮಾಡುವವನು **[ವಾಜೀ]** ವೇದಯುಕ್ತ ಅಗ್ನಿಯನ್ನು **[ಧೀಯತೇ]** ಧಾರಣ ಮಾಡುತ್ತಾನೆ. **[ವಿಪ್ರಃ]** ಬುದ್ಧಿವಂತನು **[ಪ್ರ]** **[ನೀಯತೇ]** ವಿಶಿಷ್ಟರೀತಿಯಲ್ಲಿ ಪ್ರಾಪ್ತನಾಗುತ್ತಾನೆ.

**ಭಾವಾರ್ಥ:-** ಮನುಷ್ಯರೇ! ಅಗ್ನಿಹೋತ್ರಾದಿ ಕ್ರಿಯಾ ಸ್ವರೂಪ ಯಜ್ಞದಲ್ಲಿ ಪ್ರಧಾನವಾಗಿ ಅಗ್ನಿಯನ್ನೇ ಆಶ್ರಯಿಸಲಾಗುತ್ತದೆ. ಅದೇ ರೀತಿ ವಿದ್ಯಾವಿನಯ ಶಿಕ್ಷಣ ಮುಂತಾದ ಜ್ಞಾನಯಜ್ಞದಲ್ಲಿ ಪ್ರಧಾನವಾಗಿ ವಿದ್ಯಾವಂತರನ್ನೇ ಆಶ್ರಯ ಮಾಡಬೇಕು.

ವಿದ್ಯಾವಂತರು ಏನು ಮಾಡಬೇಕೆಂಬುದನ್ನು ಇಲ್ಲಿ ಹೇಳಲಾಗಿದೆ.

**ಧಿಯಾ ಚಕ್ರೇ ವರೇಣ್ಯೋ ಭೂತಾನಾಂ ಗರ್ಭಮಾ ದಧೇ । ದಕ್ಷಸ್ಯ ಪಿತರಂ ತನಾ ॥೯॥**

**ಪದಾರ್ಥ:-** **[ವರೇಣ್ಯಃ]** ಶ್ರೇಷ್ಠ ಪುರುಷನು **[ತನಾ]** ವಿಸ್ತಾರವಾದ **[ಧಿಯಾ]** ಬುದ್ಧಿಯಿಂದ ಅಥವಾ ಶಿಕ್ಷಣದಿಂದ **[ದಕ್ಷಸ್ಯ]** ಚತುರರಾದ ವಿದ್ಯಾರ್ಥಿಗಳ **[ಪಿತರಂ]** ತಂದೆಯಂತೆ ಪಾಲನೆ ಮಾಡುವವರು **[ಭೂತಾನಾಂ]** ಪ್ರಾಣಿಗಳ **[ಗರ್ಭಂ]** ವಿದ್ಯಾದಿ ಉತ್ತಮ ಗುಣಗಳನ್ನು ಸ್ಥಿರಗೊಳಿಸುವ ಗರ್ಭವನ್ನು **[ಆ, ದಧೇ]** ಉತ್ತಮ ರೀತಿಯಲ್ಲಿ ಧರಿಸುತ್ತಾರೆ. ವಿದ್ಯೆಗೆ ಸಂಬಂಧಿಸಿದ ಬೌದ್ಧಿಕ ಕ್ರಿಯೆಯನ್ನು **[ಚಕ್ರೇ]** ಮಾಡುವರು.

**ಭಾವಾರ್ಥ:-** ಪತಿಯು ತನ್ನ ಸ್ತ್ರೀಯಲ್ಲಿ ಗರ್ಭಧಾರಣ ಮಾಡಿಸಿ ಶ್ರೇಷ್ಠವಾದ ಸಂತಾನವನ್ನು ಉತ್ಪಾದನೆ ಮಾಡುವ ರೀತಿಯಲ್ಲಿ ವಿದ್ಯಾವಂತ ಪುರುಷರು ತಮ್ಮ ಮಿದುಳಿನಲ್ಲಿ ವಿದ್ಯೆಗೆ ಸಂಬಂಧಿಸಿದ ಗರ್ಭವನ್ನು ಧಾರಣೆ ಮಾಡಿಸಿ ಉತ್ತಮ ವ್ಯವಹಾರಗಳನ್ನು ಉತ್ಪನ್ನ ಮಾಡುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಿ ತ್ವಾ ದಧೇ ವರೇಣ್ಯಂ ದಕ್ಷಸ್ಯೇಳಾ ಸಹಸ್ಕೃತ । ಅಗ್ನೇ ಸುದೀತಿಮುಶಿಜಮ್ ॥೧೦॥**

**ಪದಾರ್ಥ:-** **[ಸಹಸ್ಕೃತಃ]** ಶಕ್ತಿದಾಯಕನಾದ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ಪುರುಷನೇ! **[ಇಳಾ]** ಉತ್ತಮ ಉಪದೇಶ ಅಥವಾ ಉತ್ತಮ ರೀತಿಯಲ್ಲಿ ಸಂಸ್ಕರಿಸಿದ ಅನ್ನಾದಿಗಳಿಂದ **[ದಕ್ಷಸ್ಯ]** ಬಲದ **[ವರೇಣ್ಯಂ]** ಸ್ವೀಕಾರಕ್ಕೆ ಯೋಗ್ಯವಾದ **[ಸುದೀತಿಂ]** ಜ್ಞಾನ ಜ್ಯೋತಿಯಿಂದ ಕೂಡಿರುವ **[ಉಶಿಜಂ]** ಉತ್ತಮ ಗುಣಗಳ ಪ್ರಚಾರಕನಾದ **[ತ್ವಾ]** ನೀನು **[ನಿ]** ನಿಶ್ಚಯವಾಗಿಯೂ **[ದಧೇ]** ಧರಿಸುವೆ. ಅದೇ ರೀತಿ ನನ್ನನ್ನೂ ವಿದ್ಯೆಗೆ ಪಾತ್ರನನ್ನಾಗಿ ಮಾಡು.

**ಭಾವಾರ್ಥ:-** ವಿದ್ಯಾರ್ಥಿಗಳು ಅಧ್ಯಾಪಕ ಜನರ ಇಚ್ಛೆಗನುಗುಣವಾಗಿ ಕಾರ್ಯವನ್ನು ಮಾಡಿ ಅವರನ್ನು ಪ್ರಸನ್ನಗೊಳಿಸುತ್ತಾರೆ. ಹಾಗೆಯೇ ಅಧ್ಯಾಪಕ ಜನರೂ ಸಹ ವಿದ್ಯಾರ್ಥಿಗಳ ಇಚ್ಛೆಗನುಗುಣವಾಗಿ ಉತ್ತಮ ಗುಣಗಳನ್ನು ನೀಡಿ ವಿದ್ಯಾರ್ಥಿಗಳನ್ನೂ ಪ್ರಸನ್ನಗೊಳಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿಂ ಯಂತುರಮಪ್ತುರ-ಮೃತಸ್ಯ ಯೋಗೇ ವನುಷಃ । ವಿಪ್ರಾ ವಾಜೈಃ ಸಮಿಂಧತೇ ॥೧೧॥**

**ಪದಾರ್ಥ:-** **[ವನುಷಃ]** ಯಾಚಕನು **[ವಿಪ್ರಾಃ]** ಬುದ್ಧಿವಂತ ಜನರು **[ಋತಸ್ಯ]** **[ಯೋಗೇ]** ಸತ್ಯದ ಯೋಗದಲ್ಲಿ **[ವಾಜೈಃ]** ವಿಜ್ಞಾನದಿಂದ **[ಯಂತುರಂ]** ಪ್ರಾಪ್ತಿಯಾಗುವಂತಹ **[ಅಪ್ತುರಂ]** ಪ್ರಾಣ ಅಥವಾ ನೀರಿಗೆ ಪ್ರೇರಣೆ ನೀಡುವ **[ಅಗ್ನಿಂ]** ಅಗ್ನಿಯಂತೆ ತೇಜಸ್ವಿಯಾದವನನ್ನು **[ಸಂ]** **[ಇಂಧತೇ]** ಉತ್ತಮ ರೀತಿಯಲ್ಲಿ ಪ್ರಜ್ವಲನೆಗೊಳಿಸಬೇಕು. ಅದರಿಂದ ಎಲ್ಲರೂ ವಿದ್ಯಾಪ್ರಕಾಶದಿಂದ ಬೆಳಗುವರು.

**ಭಾವಾರ್ಥ:-** ಯಾವಾಗ ನಮಗೆ ವಿದ್ಯಾವಂತರ ಸಂಗವು ಲಭಿಸುತ್ತದೆಯೋ ಆಗ ವಿದ್ಯೆಗೆ ಸಂಬಂಧಿಸಿದ ಪ್ರಶ್ನೋತ್ತರಗಳ ಮೂಲಕ ಅವರಿಂದ ಜ್ಞಾನವನ್ನು ಯಾಚಿಸಬೇಕು. ಇದರಿಂದ ಅಧಿಕ ಲಾಭವಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಊರ್ಜೋ ನಪಾತಮಧ್ವರೇ ದೀದಿವಾಂಸಮುಪ ದ್ಯವಿ । ಅಗ್ನಿಮೀಳೇ ಕವಿಕ್ರತುಮ್ ॥೧೨॥**

**ಪದಾರ್ಥ:-** **[ದ್ಯವಿ]** ಬೆಳಕಿನಲ್ಲಿ ಹಾಗೂ **[ಅಧ್ವರೇ]** ಸಂಗತವಾಗಿರುವ ಸಂಸಾರದಲ್ಲಿ **[ಅಗ್ನಿಂ]** ಅಗ್ನಿಯಂತೆ ತೇಜಸ್ವಿಯಾದ **[ಊರ್ಜಃ]** ಬಲದಿಂದ **[ನಪಾತಂ]** ವಿನಾಶರಹಿತವಾದ **[ಕವಿಕ್ರತುಂ]** ವಿದ್ವತ್ ಪೂರ್ಣ ಬುದ್ಧಿ ಅಥವಾ ವಿದ್ವತ್ ಪೂರ್ಣವಾದ ಕರ್ಮವನ್ನು ತಿಳಿದುಕೊಳ್ಳುವವನು **[ದೀದಿವಾಂಸಂ]** ಪ್ರಕಾಶಮಾನನಾದ ವಿದ್ಯಾವಂತನ **[ಉಪ]** **[ಈಳೇ]** ಸಮೀಪದಲ್ಲಿ ಸ್ತುತಿ ಮಾಡುವನು. ಹಾಗೆಯೇ ನೀವೂ ಮಾಡಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಜ್ಞಕರ್ಮದಲ್ಲಿ ಅಗ್ನಿಯು ಹೇಗೆ ಪ್ರಜ್ವಲಿಸುವವನಾಗಿ ಶೋಭಿಸುತ್ತಾನೋ, ಹಾಗೆಯೇ ಜ್ಞಾನ ಯಜ್ಞದಲ್ಲಿ ವಿದ್ಯಾವಂತನು ಬೆಳಗುವವನಾಗಿ ಶೋಭಿಸುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಈಳೇನ್ಯೋ ನಮಸ್ಯ-ಸ್ತಿರಸ್ತಮಾಂಸಿ ದರ್ಶತಃ । ಸಮಗ್ನಿರಿಧ್ಯತೇ ವೃಷಾ ॥೧೩॥**

**ಪದಾರ್ಥ:-** **[ತಮಾಂಸಿ]** ರಾತ್ರಿಗಳನ್ನು / ಕತ್ತಲನ್ನು **[ತಿರಃ]** ತಿರಸ್ಕರಿಸುವವನಾದ **[ಅಗ್ನಿಃ]** ಅಗ್ನಿಯಂತೆ ಪ್ರಕಾಶಮಾನನಾದ **[ವೃಷಾ]** ವೃಷ್ಟಿಕಾರಕನು **[ದರ್ಶತಃ]** ದರ್ಶನ ಯೋಗ್ಯನು **[ಈಡೇನ್ಯಃ]** ಸ್ತುತಿಗೆ ಅರ್ಹನು **[ನಮಸ್ಯಃ]** ಸತ್ಕಾರ ಯೋಗ್ಯನೂ ಆದ ಪುರುಷನು **[ಸಂ]** **[ಇಧ್ಯತೇ]** ಉತ್ತಮ ರೀತಿಯಲ್ಲಿ ಪ್ರಕಾಶಿತನಾಗುತ್ತಾನೆ. ಅವನನ್ನು ನೀವು ನಿರಂತರವಾಗಿ ಸತ್ಕರಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಅಂಧಕಾರವನ್ನು ನಾಶ ಮಾಡಿ ಬೆಳಕನ್ನು ಹರಡುತ್ತಾನೋ ಅದೇ ರೀತಿ ಯಥಾರ್ಥ ನುಡಿಯುವ ವಿದ್ಯಾವಂತನು ಅವಿದ್ಯೆಯೆಂಬ ಅಂಧಕಾರವನ್ನು ನಾಶ ಮಾಡಿ ವಿದ್ಯೆಯೆಂಬ ಬೆಳಕನ್ನು ಹರಡುತ್ತಾನೆ.

ಮನುಷ್ಯರು ಮಾಡಬೇಕಾದ ಕರ್ತವ್ಯವನ್ನಿಲ್ಲ ಹೇಳಲಾಗಿದೆ.

**ವೃಷೋ ಅಗ್ನಿಃ ಸಮಿಧ್ಯತೇಽಶ್ವೋ ನ ದೇವವಾಹನಃ । ತಂ ಹವಿಷ್ಮಂತ ಈಳತೇ ॥೧೪॥**

**ಪದಾರ್ಥ:-** **[ವೃಷಃ]** ವೃಷ್ಟಿಕಾರಕನು **[ದೇವವಾಹನಃ]** ವೇಗಾದಿ ಗುಣಗಳನ್ನು ಪ್ರಾಪ್ತಿಗೊಳಿಸುವವನು ಆದ ಅಗ್ನಿಃ] ಅಗ್ನಿಯು **[ಅಶ್ವಃ]** **[ನ]** ಶೀಘ್ರಗತಿಯಿರುವ ಕುದುರೆಗೆ ಸಮನಾಗಿ **[ಸಂ]** **[ಇಧ್ಯತೇ]** ಪ್ರಕಾಶಿತಗೊಳಿಸಲ್ಪಡುತ್ತಾನೆ. ತಂ] ಅವನನ್ನು **[ಹವಿಷ್ಮಂತಃ]** ಬಹುಬೇಗ ಗ್ರಹಿಸಲು ಯೋಗ್ಯವಾದ ವಸ್ತುಗಳಿಂದೊಡಗೂಡಿದ ಮನುಷ್ಯನು ಈಳತೇ] ಸ್ತುತಿ ಮಾಡುತ್ತಾನೆ.

**ಭಾವಾರ್ಥ:-** ಮನುಷ್ಯರೇ! ಬಲ ಮತ್ತು ವೇಗಗಳಿರುವ ಕುದುರೆಗಳು ವಾಹನಗಳನ್ನು ಶೀಘ್ರಗತಿಯಿಂದ ೇಗೆ ಸೆಳೆಯುತ್ತವೆಯೋ ಅದೇರೀತಿ ಅಗ್ನಿಯು ಆಗಿರುವನು. ಹೇಗೆ ಈ ಅಗ್ನಿಯ ಗುಣ ಸ್ವಭಾವವನ್ನು ವಿದ್ಯಾವಂತರು ಳಿದುಕೊಳ್ಳುವರೋ ಅದೇ ರೀತಿ ನೀವೂ ತಿಳಿದುಕೊಳ್ಳಿರಿ.

ಅಧ್ಯಯನ ಅಧ್ಯಾಪನದ ವಿಚಾರವನ್ನು ಈ ಮಂತ್ರದಲ್ಲಿ ತಿಳಿಸಿದೆ.

**ವೃಷಣಂ ತ್ವಾ ವಯಂ ವೃಷನ್ ವೃಷಣಃ ಸಮಿಧೀಮಹಿ । ಅಗ್ನೇ ದೀದ್ಯತಂ ಬೃಹತ್ ॥೧೫॥**

**ಪದಾರ್ಥ:-** **[ವೃಷನ್]** ಬಲಿಷ್ಠನಾದ **[ಅಗ್ನೇ]** ಅಗ್ನಿಯಂತೆ ಬೆಳಕು ಚೆಲ್ಲುವ ಪುರುಷನೇ! **[ಬೃಹತ್]** ಹತ್ತರವಾದ **[ದೀದ್ಯತಂ]** ಬೆಳಕನ್ನು ನೀಡುವ ವಿಜ್ಞಾನವನ್ನು ನೀನು ಪ್ರಕಟಗೊಳಿಸುವೆಯೋ ಹಾಗೆ **[ವಯಂ]** ವು **[ವೃಷಣಂ]** ಸುಖದ ಮಳೆಗರೆಯುವ **[ತ್ವಾ]** ನಿನ್ನನ್ನು ಮತ್ತು ಅನ್ಯ ಜನರನ್ನು **[ವೃಷಣಃ]** ಬಲಿಷ್ಠರಾದ ನಾವು ೦] **[ಇಧೀಮಹಿ]** ಉತ್ತಮ ರೀತಿಯಲ್ಲಿ ಪ್ರಕಟಗೊಳಿಸುತ್ತೇವೆ.

**ಭಾವಾರ್ಥ:-** ಪಠಣ-ಪಾಠಣ ಮಾಡುವವರೇ! ನೀವೆಲ್ಲರೂ ವಿರೋಧಭಾವವನ್ನು ತ್ಯಜಿಸಿ ಪ್ರೀತಿ ಪೂರ್ವಕವಾಗಿ ಸ್ಪರರ ಬುದ್ಧಿಶಕ್ತಿಯನ್ನು ಬೆಳೆಸಿಕೊಳ್ಳಿರಿ. ಅದರಿಂದ ವಿದ್ಯಾದಿ ಉತ್ತಮ ಗುಣಗಳು, ತೇಜಸ್ಸು, ಇವುಗಳನ್ನು ದು ಸಮಗ್ರ ಜನ ಕೋಟಿಯು ಬಲಿಷ್ಠರೂ ನ್ಯಾಯಕಾರಿಗಳೂ ಆಗುವರು.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಕ್ತಾರ್ಥದೊಂದಿಗೆ ಸಂಗತಿಯಾಗಿರುತ್ತದೆ.

**ಇಪ್ಪತ್ತೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೨೮

ಮಂತ್ರಸಂಖ್ಯೆ ೬ । ವಿಶ್ವಾಮಿತ್ರ ಋಷಿಃ । ಅಗ್ನಿರ್ದೇವತಾ । ೧ ಗಾಯತ್ರೀ, ೨, ೬ ನಿಚೃತ್ ಗಾಯತ್ರೀ ಛಂದಃ । ಷಡ್ಜಃ ಸ್ವರಃ । ೩ ಸ್ವರಾಡುಷ್ಣಿಕ್ ಛಂದಃ । ಋಷಭ ಸ್ವರಃ । ೪ ತ್ರಿಷ್ಟುಪ್ ಛಂದಃ । ಧೈವತ ಸ್ವರಃ । ೫ ನಿಚೃತ್ ಜಗತೀ ಛಂದಃ । ನಿಷಾದಃ ಸ್ವರಃ.

ಅಗ್ನಿ, ವಿದ್ವತ್ ವಿಷಯವನ್ನಿಲ್ಲಿ ತಿಳಿಸಲಾಗಿದೆ.

**ಅಗ್ನೇ ಜುಷಸ್ವ ನೋ ಹವಿಃ ಪುರೋಳಾಶಂ ಜಾತವೇದಃ । ಪ್ರಾತಃಸಾವೇ ಧಿಯಾವಸೋ ॥೧॥**

**ಪದಾರ್ಥ:-** [**ಧಿಯಾವಸೋ**] ಉತ್ತಮ ಬುದ್ಧಿ / ಉತ್ತಮ ಗುಣಗಳ ಪ್ರಚಾರಕನಾದ [**ಜಾತವೇದಃ**] ಸೃಷ್ಟಿಯಲ್ಲಿನ ಎಲ್ಲ ಪದಾರ್ಥಗಳ ಜ್ಞಾನವಿರುವ [**ಅಗ್ನೇ**] ಅಗ್ನಿಯಂತೆ ತೇಜಸ್ವಿಯಾದ ಪುರುಷನೇ! [**ಪ್ರಾತಃಸ್ಸಾವೇ**] ಬೆಳಗಿನ ಸಮಯದ ಅಗ್ನಿಹೋತ್ರಾದಿ ಕರ್ಮಗಳಲ್ಲಿ [**ನಃ**] ನಮ್ಮ [**ಹವಿಃ**] ಹವಿಸ್ಸನ್ನು [**ಪುರೋಡಾಶಂ**] ಸಂಸ್ಕಾರಗೊಳಿಸಿದ ಅನ್ನಾದಿ ಪದಾರ್ಥಗಳನ್ನು ಸೇವಿಸುತ್ತೀಯೋ ಹಾಗೆ [**ಜುಷಸ್ವ**] ಇದನ್ನು ಸೇವಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಪ್ರಾತಃಕಾಲದಲ್ಲಿ ಅಗ್ನಿಹೋತ್ರಾದಿ ಕರ್ಮಗಳಲ್ಲಿ ಯಜ್ಞ ವೇದಿಕೆಯಲ್ಲಿ ಸ್ಥಾಪಿಸಲಾದ ಘೃತಾದಿ ಪದಾರ್ಥಗಳನ್ನು ಅಗ್ನಿಯು ಹೇಗೆ ಸೇವಿಸುತ್ತಾನೋ ಹಾಗೆಯೇ ಅದನ್ನು ಅಂತರಿಕ್ಷದಲ್ಲಿ ಪ್ರಸರಣ ಮಾಡಿ ಜನರಿಗೆ ಸುಖವನ್ನು ಕೊಡುತ್ತಾನೆ. ಹಾಗೂ ಬ್ರಹ್ಮಚರ್ಯಾಶ್ರಮದಲ್ಲಿ ಇರುವ ವಿದ್ಯಾರ್ಥಿಗಳು ವಿದ್ಯಾವಿನಯಾದಿಗಳನ್ನು ಗ್ರಹಣ ಮಾಡಿ ಎಲ್ಲ ಕಡೆಗಳಲ್ಲೂ ಅದನ್ನು ಪ್ರಚಾರ ಮಾಡಿ ಎಲ್ಲರಿಗೂ ಸುಖವನ್ನು ಕೊಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುರೋಳಾ ಅಗ್ನೇ ಪಚತ-ಸ್ತುಭ್ಯಂ ವಾ ಘಾ ಪರಿಷ್ಕೃತಃ । ತಂ ಜುಷಸ್ವ ಯವಿಷ್ಠ್ಯ ॥೨॥**

**ಪದಾರ್ಥ:-** [**ಯವಿಷ್ಠ್ಯ**] ಅತಿಶಯ ಯುವಾವಸ್ಥೆಯನ್ನು ಪಡೆದಿರುವ ಪುರುಷರಲ್ಲಿ ಚತುರನಾದ [**ಅಗ್ನೇ**] ಅಗ್ನಿಯಂತೆ ತೇಜಸ್ವಿಯಾದವನೇ! [**ತುಭ್ಯಂ**] ನಿನಗೋಸ್ಕರ [**ಪುರೋಳಾಃ**] ವೇದಮಂತ್ರಗಳಿಂದ ಸಂಸ್ಕರಿಸಿ [**ಪಚತಃ**] ಪಾಕ ಮಾಡಲಾದ [**ವಾ**] ಅಥವಾ [**ಪರಿಷ್ಕೃತಃ**] ಎಲ್ಲ ರೀತಿಯಿಂದಲೂ ಪರಿಶುದ್ಧಗೊಳಿಸಲಾಗಿದೆ. [**ತಂ**] [**ಘ**] ಅಂತಹ ಪದಾರ್ಥಗಳನ್ನೇ [**ಜುಷಸ್ವ**] ಸೇವಿಸುವವನಾಗು.

**ಭಾವಾರ್ಥ:-** ಭೋಜನದಲ್ಲಿ ಇಚ್ಛೆ ಇರುವವನು ತನಗಾಗಿ ಭೋಜನಯೋಗ್ಯ ಪದಾರ್ಥಗಳನ್ನು ಉತ್ತಮವಾಗಿ ಸಂಸ್ಕರಿಸಿ ಸಿದ್ಧಗೊಳಿಸಿಕೊಂಡು ಅದನ್ನುಂಡು ಆನಂದತುಂದಿಲನಾಗುತ್ತಾನೋ, ಹಾಗೇ ಉತ್ತಮ ರೀತಿಯಲ್ಲಿ ಸಂಸ್ಕರಿಸಲಾದ ಹವನ ಸಾಮಗ್ರಿಗಳನ್ನು ಪಡೆದ ಅಗ್ನಿಯೂ ಸಮಗ್ರ ಜನಕೋಟಿಗೆ ಆನಂದದಾಯಕನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನೇ ವೀಹಿ ಪುರೋಳಾಶ-ಮಾಹುತಂ ತಿರೋಅಹ್ನ್ಯಮ್ । ಸಹಸಃ ಸೂನುರಸ್ಯಧ್ವರೇ ಹಿತಃ ॥೩॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೇ ತೇಜಸ್ವಿಯಾದ ಮನುಷ್ಯನೇ! ನೀನು [**ತಿರೋ ಅಹ್ನ್ಯಂ**] ದಿನದ ಮೊದಲ ಭಾಗದಲ್ಲಿ ಉತ್ಪನ್ನವಾದ [**ಆಹುತಂ**] ನಾಲ್ಕು ದಿಕ್ಕುಗಳಿಂದಲೂ ಕೊಡಲಾದ [**ಪುರೋಡಾಶಂ**] ಸಂಸ್ಕರಿಸಲಾದ

ಹವಿಸ್ಸನ್ನು [ವೀಹಿ] ಪಡೆದುಕೊ. ಅದರಿಂದ ನೀನು [ಸಹಸಃ] ಬಲಿಷ್ಠ ವಾಯುವಿನ [ಸೂನುಃ] ಮಗನಂತೆ [ಅಧ್ವರೇ] ಕರುಣಾಮಯ ವ್ಯವಹಾರದಲ್ಲಿ [ಹಿತಃ] [ಅಸಿ] ನೀನು ಎಲ್ಲರಿಗೂ ಹಿತಕಾರಿಯಾಗಿರುವೆ. ಆದ್ದರಿಂದಲೇ ಎಲ್ಲರ ಸತ್ಕಾರಕ್ಕೆ ಅರ್ಹನಾಗುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನಿಯು ಹೇಗೆ ವಾಯುವಿನಿಂದ ಉತ್ಪನ್ನನಾಗಿ ರೂಪವತ್ ದ್ರವ್ಯಗಳನ್ನು ಭಸ್ಮ ಮಾಡಿ ದ್ರವ್ಯಗಳ ಸಾರವನ್ನು ವಿಭಜಿಸುತ್ತಾನೋ, ಹಾಗೆ ವಿದ್ಯೆಯಿಂದ ಪವಿತ್ರಾತ್ಮರಾದ ಪುರುಷರು ಅವಿದ್ಯಾತ್ಮಕ ವ್ಯವಹಾರಗಳನ್ನು ದೂರ ಮಾಡಿ ಸತ್ಯಾಸತ್ಯಗಳ ವಿಭಾಗ ಮಾಡುತ್ತಾರೆ.

ಸುಖಿಗಳು ಯಾರು? ಎಂಬುದನ್ನಿಲ್ಲಿ ತಿಳಿಸಲಾಗಿದೆ.

**ಮಾಧ್ಯಂದಿನೇ ಸವನೇ ಜಾತವೇದಃ ಪುರೋಳಾಶಮಿಹ ಕವೇ ಜುಷಸ್ವ ।**
**ಅಗ್ನೇ ಯಹ್ವಸ್ಯ ತವ ಭಾಗಧೇಯಂ ನ ಪ್ರ ಮಿನಂತಿ ವಿದಥೇಷು ಧೀರಾಃ ॥೪॥**

**ಪದಾರ್ಥ:-** [ಜಾತವೇದಃ] ವಿಜ್ಞಾನವಂತನು [ಕವೇ] ಬುದ್ಧಿವಂತನೂ ಆದ [ಅಗ್ನೇ] ಅಗ್ನಿಯಂತೆ ತೇಜಸ್ವಿಯಾದ ನೀನು [ಇಹ] ಈ ಜಗತ್ತಿನಲ್ಲಿ [ಧೀರಾಃ] ಯೋಗೀ ಜನರು [ಯಹ್ವಸ್ಯ] ಶ್ರೇಷ್ಠನಾದ [ತವ] ನಿನ್ನ [ವಿದಥೇಷು] ವಿಜ್ಞಾನ ಸಂಬಂಧೀ ವ್ಯವಹಾರಗಳಲ್ಲಿ [ಭಾಗಧೇಯಂ] ಭಾಗ್ಯವನ್ನು [ನ] [ಪ್ರ] [ಮಿನಂತಿ] ನಾಶಗೊಳಿಸುವುದಿಲ್ಲ. [ಮಾಧ್ಯಂದಿನೇ] ದಿನದ ಮಧ್ಯ ಭಾಗದ [ಸವನೇ] ಹೋಮಾದಿ ಕರ್ಮದಲ್ಲಿ ಅಗ್ನಿಯು ಹೇಗೋ ಹಾಗೆ [ಪುರೋಡಾಶಂ] ಸಂಸ್ಕಾರಗೊಳಿಸಲಾದ ಅನ್ನಾದಿ ಪದಾರ್ಥಗಳ [ಜುಷಸ್ವ] ಸೇವನೆ ಮಾಡಿರಿ.

**ಭಾವಾರ್ಥ:-** ಮನುಷ್ಯರು ಬೆಳಗಿನ ಸಮಯದಲ್ಲಿ ಮತ್ತು ಮಧ್ಯಾಹ್ನದ ಸಮಯದಲ್ಲಿ ಹೋಮಾದಿ ಕರ್ಮಗಳನ್ನು ಮಾಡಿ ಉತ್ತಮ ರೀತಿಯಲ್ಲಿ ಸಂಸ್ಕಾರ ಮಾಡಿದ ನಿಯಮಿತ ಆಹಾರವನ್ನು ಅನುದಿನವೂ ಭೋಜನ ಮಾಡಿದರೆ ಅವರು ಭಾಗ್ಯಶಾಲಿಗಳಾಗಿ ಅತಿಶಯ ಸುಖವನ್ನು ಅನುಭವಿಸುತ್ತ ನಿಶ್ಚಯವಾಗಿಯೂ ಸರ್ವಕರ್ಮ ವಿಜಯಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನೇ ತೃತೀಯೇ ಸವನೇ ಹಿ ಕಾನಿಷಃ ಪುರೋಳಾಶಂ ಸಹಸಃ ಸೂನವಾಹುತಮ್ ।**
**ಅಥಾ ದೇವೇಷ್ವಧ್ವರಂ ವಿಪನ್ಯಯಾ ಧಾ ರತ್ನವಂತಮಮೃತೇಷು ಜಾಗೃವಿಮ್ ॥೫॥**

**ಪದಾರ್ಥ:-** [ಕಾನಿಷಃ] ಇಚ್ಛಿಸಲು ಯೋಗ್ಯವಾದ [ಸಹಸಃ] ಶಕ್ತಿವಂತ ಪುರುಷನ [ಸೂನೋ] ಮಗನಾದ [ಅಗ್ನೇ] ಅಗ್ನಿಯಂತೆ ಬಲಿಷ್ಠನಾದವನನೇ! ನೀನು [ಹಿ] ಹೇಗೆ [ವಿಪನ್ಯಯಾ] ವಿಶೇಷ ರೀತಿಯ ಪ್ರಶಂಸಾತ್ಮಕ ಬುದ್ಧಿ ಅಥವಾ ಕರ್ಮದಿಂದ [ತೃತೀಯೇ] ಮೂರನೇ ಕಾಲದ ಅಂದರೆ ಸಂಧ್ಯಾಕಾಲದ [ಸವನೇ] ಹೋಮಾದಿ ಕರ್ಮದಲ್ಲಿ [ಅಥ] ಮತ್ತು [ದೇವೇಷು] ಉತ್ತಮ ಗುಣಗಳಲ್ಲಿ [ಅಮೃತೇಷು] ನಾಶರಹಿತವಾದ ಜಗದೀಶ್ವರಾದಿ ಪದಾರ್ಥಗಳಲ್ಲಿ [ಜಾಗೃವಿಂ] ಪ್ರಜ್ಞಾವಂತನಾಗಿದ್ದು [ರತ್ನವಂತಂ] ರತ್ನಗಳಿಂದ ಕೂಡಿ ವಿಶಿಷ್ಟವಾದ [ಆಹುತಂ] ಸರ್ವಥಾ ಸ್ವೀಕಾರ ಯೋಗ್ಯವಾದ [ಅಧ್ವರಂ] ಹಿಂಸಾರಹಿತ ಧರ್ಮಯುಕ್ತ ವ್ಯವಹಾರಗಳನ್ನು ಮತ್ತು [ಪುರೋಡಾಶಂ] ರೋಗನಿವಾರಕವಾದ ಅನ್ನಾದಿ ಪದಾರ್ಥಗಳನ್ನು [ಧಾಃ] ಸ್ವೀಕರಿಸುವವನಾಗು.

**ಭಾವಾರ್ಥ:-** ಯಾವ ಮನುಷ್ಯರು ನಾಶರಹಿತನಾದ / ಶಾಶ್ವತನಾದ ಪರಮೇಶ್ವರನಂತಹ ಪದಾರ್ಥಗಳನ್ನು ಜ್ಞಾನಪೂರ್ವಕವಾಗಿ ಹಿಂಸಾರಹಿತ ವ್ಯವಹಾರಗಳಲ್ಲಿ ಬಳಸಿಕೊಂಡು ನಿಯತವಾದ ಆಹಾರ ವಿಹಾರಗಳನ್ನು ನಡೆಸುತ್ತ ಸಂಪತ್ತಿನ ವೃದ್ಧಿಯನ್ನು ಮಾಡಿಕೊಳ್ಳುತ್ತಾರೋ ಅವರು ಸಕಲ ಇಷ್ಟಾರ್ಥಗಳನ್ನು ನೆರವೇರಿಸಿಕೊಂಡು ಸುಖಿಗಳಾಗುತ್ತಾರೆ.

ವಿದ್ಯಾವಂತರು ಏನು ಮಾಡಬೇಕೆಂಬ ವಿಷಯವನ್ನು ಇಲ್ಲಿ ತಿಳಿಸಿದೆ.

**ಅಗ್ನೇ ವೃಧಾನ ಆಹುತಿಂ ಪುರೋಳಾಶಂ ಜಾತವೇದಃ । ಜುಷಸ್ವ ತಿರೋಅಹ್ನ್ಯಮ್ ॥೬॥**

**ಪದಾರ್ಥ:-** [ಜಾತವೇದಃ] ಸೃಷ್ಟಿಯ ಸಮಸ್ತ ಪದಾರ್ಥಗಳಲ್ಲಿ ವ್ಯಾಪಕವಾಗಿರುವ [ಅಗ್ನೇ] ಅಗ್ನಿಯಂತೆ ತೇಜಸ್ವಿಯಾದವನೇ! [ವೃಧಾನಃ] ವೃದ್ಧಿ ಹೊಂದಿದ ನೀನು [ಆಹುತಿಂ] ನಾಲ್ಕು ದಿಕ್ಕುಗಳಿಂದಲೂ ಅಗ್ನಿಯಲ್ಲಿ ಹೋಮ ಮಾಡಲಾದ [ತಿರೋಅಹ್ನ್ಯಂ] ಬೆಳಗಿನ ಸಮಯದಲ್ಲಿ ಸಮರ್ಪಿಸಲಾದ [ಪುರೋಡಾಶಂ] ಸಂಸ್ಕರಿಸಲಾದ ಆಹಾರವನ್ನು [ಜುಷಸ್ವ] ಸೇವಿಸುವವನಾಗು.

**ಭಾವಾರ್ಥ:-** ಮಿಂಚು ಎಲ್ಲ ಕಡೆಗಳಲ್ಲೂ ವ್ಯಾಪ್ತವಾಗಿ ಎಲ್ಲಾ ಮೂರ್ತಿಮತ್ ಪದಾರ್ಥಗಳನ್ನು ಸೇವನೆ ಮಾಡಿ ಪ್ರಸಿದ್ಧಿಯನ್ನು ಹೆಚ್ಚಿಸಿಕೊಳ್ಳುತ್ತಾನೋ ಅದೇ ರೀತಿ ವಿದ್ಯೆಯಲ್ಲಿ ವ್ಯಾಪಕರಾದ ವಿದ್ಯಾವಂತರು ಧರ್ಮವನ್ನು ಸೇವನೆ ಮಾಡಿ ತಮ್ಮ ಕೀರ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಾರೆ.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣಗಳನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಯಾಗಿರುತ್ತದೆ.

**ಇಪ್ಪತ್ತೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೨೯

ಮಂತ್ರಸಂಖ್ಯೆ ೧೬ । ವಿಶ್ವಾಮಿತ್ರ ಋಷಿಃ । ೧-೪, ೬-೧೬ ಅಗ್ನಿಃ, ೫ ಋತ್ವಿಜ ಅಗ್ನಿರ್ವಾದೇವತಾ । ೧ ನಿಚೃತ್ ಅನುಷ್ಟುಪ್, ೪ ವಿರಾಡನುಷ್ಟುಪ್, ೧೦, ೧೨ ಭುರಿಕ್ ಅನುಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೨ ಭುರಿಕ್ ಪಂಕ್ತಿಃ ೧೩ ಸ್ವರಾಡ್ಪಂಕ್ತಿ ಛಂದಃ । ಪಂಚಮ ಸ್ವರಃ । ೩, ೫, ೬ ತ್ರಿಷ್ಟುಪ್, ೭-೯, ೧೬ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೧೧, ೧೪, ೧೫ ಜಗತೀ ಛಂದಃ । ನಿಷಾದಃ ಸ್ವರಃ.

ವಿದ್ಯುದಗ್ನಿ ವಾಯುಗಳೊಂದಿಗೆ ವಿದ್ಯಾವಂತರು ಏನೇನು ಸಾಧಿಸಿಕೊಳ್ಳಬೇಕು ಎಂಬ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ.

**ಅಸ್ತೀದಮಧಿಮಂಥನ-ಮಸ್ತಿ ಪ್ರಜನನಂ ಕೃತಮ್ ।**
**ಏತಾಂ ವಿಶ್ಪತ್ನೀಮಾ ಭರಾ-ಗ್ನಿಂ ಮಂಥಾಮ ಪೂರ್ವಥಾ ॥೧॥**

**ಪದಾರ್ಥ:-** [ಇದಂ] ಈ [ಅಧಿಮಂಥನಂ] ಉಪಕಾರಾರ್ಹವಾದ ವಸ್ತುವಿನಲ್ಲಿ ಮಥನ ಮಾಡುವುದು [ಅಸ್ತಿ] ಇರುತ್ತದೆ. [ಪ್ರಜನನಂ] ಪ್ರಕಟವಾಗುವುದಕ್ಕೆ [ಕೃತಂ] [ಅಸ್ತಿ] ಮಾಡಿದ್ದಾಗಿದೆ. [ಏತಾಂ] ಈ [ವಿಶ್ಪತ್ನೀಂ] ಪ್ರಜಾ ಜನರ ಪಾಲನೆ ಮಾಡುವವಳನ್ನು, [ಪೂರ್ವಥಾ] ಹಿಂದಿನ ಜನರಂತೆ [ಅಗ್ನಿಂ] ವಿದ್ಯುತ್ತನ್ನು [ಮಂಥಾಮ] ನಾವು ಮಥನ ಮಾಡೋಣ. [ಆ] [ಭರ] ಎಲ್ಲ ಕಡೆಗಳಿಂದಲೂ ನೀನದನ್ನು ಗ್ರಹಣ ಮಾಡು.

**ಭಾವಾರ್ಥ:-** ಮನುಷ್ಯನು ಅಧರಾರಣಿ, ಉತ್ತರಾರಣಿಗಳ ಘರ್ಷಣೆ ಮಾಡುವುದರ ಮೂಲಕ ಮಿಂಚಿನ ರೂಪದ ಅಗ್ನಿಯ ಉತ್ಪತ್ತಿಯಾಗುತ್ತದೆ. ಯಾರು ಮಥನ ಮಾಡಿ ಅಗ್ನಿಯನ್ನು ತಯಾರಿಸುತ್ತಾರೋ ಅವರು

ಪ್ರಜಾಪಾಲನ ಮಾಡುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ. ಪೂರ್ವಿಕರು ಕರ್ಮಕುಶಲರು ಶಿಲ್ಪ ವಿದ್ಯೆಯಿಂದ ಅಗ್ನಿ ಸಂಬಂಧೀ ವಿದ್ಯೆಯನ್ನು ಸಿದ್ಧಿ ಮಾಡಿಕೊಳ್ಳುತ್ತಿದ್ದರೋ ಅದೇ ರೀತಿ ಸಮಗ್ರ ಜನತೆಯು ಈ ಅಗ್ನಿ ವಿದ್ಯೆಯನ್ನು ಕಲಿತುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭಇವ ಸುಧಿತೋ ಗರ್ಭಿಣೀಷು ।**
**ದಿವೇದಿವ ಈಡ್ಯೋ ಜಾಗೃವದ್ಭಿ-ರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥೨॥**

**ಪದಾರ್ಥ:-** **[ಹವಿಷ್ಮದ್ಭಿಃ]** ಬಹು ವಿಧ ಸಾಧನಗಳನ್ನು ಪಡೆದುಕೊಂಡಿರುವವರು **[ಜಾಗೃವದ್ಭಿಃ]** ಅವಿದ್ಯಾ, ಆಲಸ್ಯ ನಿದ್ರಾ ತಂದ್ರಾ ಮುಂತಾದವುಗಳನ್ನು ತ್ಯಜಿಸಿ ವಿದ್ಯೆ ಪುರುಷಾರ್ಥ ಸಿದ್ಧಿ ಇವುಗಳಲ್ಲಿ ಜಾಗೃತರಾದ **[ಮನುಷ್ಯೇಭಿಃ]** ಮನುಷ್ಯರಿಂದ/ಮಾನವರಿಂದ **[ಅರಣ್ಯೋಃ]** ಉತ್ತರಾರಣಿ ಅಧರಾರಣಿಗಳಲ್ಲಿ **[ನಿಹಿತಃ]** ನೆಲೆಸಿರುವ **[ಗರ್ಭಿಣೀಷು]** ಗರ್ಭವತೀ ಸ್ತ್ರೀಯರಲ್ಲಿ **[ಗರ್ಭಇವ]** ಗರ್ಭವು ಹೇಗೆ ನೆಲೆಸಿರುತ್ತದೆಯೋ ಹಾಗೆ ನೆಲೆಸಿರುವ **[ದಿವೇದಿವೇ]** ಪ್ರತಿದಿನವೂ **[ಈಡ್ಯಃ]** ಅನ್ವೇಷಣೆಗೆ ಯೋಗ್ಯನಾದ **[ಜಾತವೇದಾಃ]** ಎಲ್ಲ ಪದಾರ್ಥಗಳಲ್ಲಿಯೂ ಇರುವಂತಹ **[ಅಗ್ನಿಃ]** ಅಗ್ನಿಯನ್ನು ಉತ್ಪಾದಿಸಿ **[ಸುಧಿತಃ]** ಅದನ್ನು ಯಾರು ಧಾರಣ ಮಾಡುವರೋ ಅವರು ಭಾಗ್ಯಶಾಲಿಗಳಾಗುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಮನುಷ್ಯನು ಸೃಷ್ಟಿಯ ನಿಯಮದಂತೆ ಇರುವ ಅಗ್ನ್ಯಾದಿ ಪದಾರ್ಥಗಳನ್ನು ಪ್ರತಿದಿನವೂ ಪರೀಕ್ಷೆ ಮಾಡಿದರೇ ಮಾಡಿಸಿದರೆ ಅವನು ದರಿದ್ರನಾಗಿರಲು ಸಾಧ್ಯವೇ ಇಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ್ತಾನಾಯಾಮವ ಭರಾ ಚಿಕಿತ್ವಾನ್ ತ್ಸದ್ಯಃ ಪ್ರವೀತಾ ವೃಷಣಂ ಜಜಾನ ।**
**ಅರುಷಸ್ತೂಪೋ ರುಶದಸ್ಯ ಪಾಜ ಇಳಾಯಾಸ್ಪುತ್ರೋ ವಯುನೇಽಜನಿಷ್ಟ ॥೩॥**

**ಪದಾರ್ಥ:-** **[ಚಿಕಿತ್ವಾನ್]** ಬುದ್ಧಿವಂತನಾದ ನೀನು **[ಉತ್ತಾನಾಯಾಂ]** ಅಂಗಾತನಾಗಿರುವ ಭೂಮಿಯಲ್ಲಿ **[ಪ್ರವೀತಾ]** ಬಹುವಿಧವಾಗಿ ವ್ಯಾಪಕವಾಗಿರುವ ಅಗ್ನಿಯನ್ನು **[ವೃಷಣಂ]** ವೃಷ್ಟಿಕಾರಕ ಸೂರ್ಯನನ್ನು **[ಜಜಾನ]** ಉತ್ಪಾದನೆ ಮಾಡುವವನ/ಳ **[ಅವ]** **[ಭರ]** ಧಾರಣೆ ಮಾಡು. **[ಅರುಷಸ್ತೂಪಃ]** ಮಾರ್ಮಿಕ ಸ್ಥಳದಲ್ಲಿ ನೋವುಂಟು ಮಾಡುವವರಲ್ಲಿ ಪ್ರಶಂಸೆಯಿಂದ ಕೂಡಿದ **[ಅಸ್ಯ]** ಈ ಜಗತ್ತಿನ **[ಪಾಜಃ]** ಬಲದ **[ರುಶತ್]** ನಾಶಗೊಳಿಸುವ **[ಇಡಾಯಾಃ]** ವಾಣಿಯ **[ಪುತ್ರಃ]** ಪುತ್ರನಂತಿರುವ **[ವಯುನೇ]** ವಿಜ್ಞಾನದಲ್ಲಿ **[ಅಜನಿಷ್ಟ]** ಉತ್ಪನ್ನನಾಗುವನು. ಅವನನ್ನು **[ಸದ್ಯಃ]** ಬೇಗ ಧಾರಣೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಮಗುವನ್ನು ತಾಯಿಯು ಧರಿಸಿದಂತೆ ಅಗ್ನಿವಿದ್ಯೆಯನ್ನು ಧರಿಸುವನೋ ಅವನು ತನ್ನ ಬಲವನ್ನು ಹೆಚ್ಚಿಸಿಕೊಂಡು ವಿಜ್ಞಾನವನ್ನು ಉತ್ಪಾದಿಸುವನು ಮತ್ತು ಅಧೋಭಾಗದಲ್ಲಿ ಅಗ್ನಿ ಮೇಲ್ಭಾಗದಲ್ಲಿ ಜಲ ಇರುವಂತೆ ಮಾಡಿ ಮಧ್ಯದಲ್ಲಿ ವಾಯುವಿನಿಂದ ಪ್ರಜ್ವಲಿಸಿದರೆ ಅಗ್ನಿ ಜಲಗಳ ಮೂಲಕ ಬಹುಕಾರ್ಯವನ್ನು ಸಾಧಿಸಬಹುದಾಗಿದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧಿ ।**
**ಜಾತವೇದೋ ನಿ ಧೀಮ-ಹ್ಯಗ್ನೇ ಹವ್ಯಾಯ ವೋಳ್ಹವೇ ॥೪॥**

**ಪದಾರ್ಥ:-** [ವಯಂ] ನಾವು [ಇಡಾಯಾಃ] ಭೂಮಿಯ [ಅಧಿ] ಮೇಲ್ಭಾಗದಲ್ಲಿ [ಪದೇ] ನೆಲೆಸಿದರೆ [ಪೃಥಿವ್ಯಾಃ] ಅಂತರಿಕ್ಷದ [ನಾಭಾ] ಮಧ್ಯಭಾಗದಲ್ಲಿ [ಹವ್ಯಾಯ] ಪ್ರಶಂಸಾರ್ಹವಾದ [ಓಢವೇ] ವಾಹನಕ್ಕಾಗಿ [ತ್ವಾ] ಆ [ಜಾತವೇದಃ] ಧನೋತ್ಪಾದಕನಾದ [ಅಗ್ನೇ] ಅಗ್ನಿಯನ್ನು [ನಿ] [ಧೀಮಹಿ] ಉತ್ತಮ ರೀತಿಯಲ್ಲಿ ಹೇಗೆ ಧರಿಸುವೆವೋ ಹಾಗೆ ನೀವೂ ಧಾರಣ ಮಾಡಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಈ ಅಗ್ನಿಯನ್ನು ಭೂಮಿ ಅಂತರಿಕ್ಷಗಳ ಮಧ್ಯದಲ್ಲಿ ಉತ್ತಮ ರೀತಿಯಲ್ಲಿ ಪರೀಕ್ಷೆಗೊಳಪಡಿಸಿ ವಾಹನಾದಿ ಯಂತ್ರಗಳ ಚಾಲನೆಗೆ ಅಗ್ನಿಯ ಉಪಯೋಗವನ್ನು ಮಾಡಿಕೊಳ್ಳುತ್ತಾರೋ ಅವರು ಸಿರಿವಂತರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಂಥತಾ ನರಃ ಕವಿಮದ್ವಯಂತಂ ಪ್ರಚೇತಸಮಮೃತಂ ಸುಪ್ರತೀಕಮ್ ।**
**ಯಜ್ಞಸ್ಯ ಕೇತುಂ ಪ್ರಥಮಂ ಪುರಸ್ತಾ-ದಗ್ನಿಂ ನರೋ ಜನಯತಾ ಸುಶೇವಮ್ ॥೫॥**

**ಪದಾರ್ಥ:-** [ನರಃ] ನಾಯಕರಾದ ನೀವು [ಕವಿಂ] ತೇಜಸ್ವಿಗಳಾಗಿ [ಅದ್ವಯಂತಂ] ಏಕರೀತಿಯಲ್ಲಿ ಆಚರಿಸುತ್ತ [ಪ್ರಚೇತಸಂ] ಅತಿಶಯವಾಗಿ ಪ್ರಕಟಗೊಳಿಸುವ [ಅಮೃತಂ] ತನ್ನ ಸ್ವರೂಪಕ್ಕೆ ನಾಶವಿಲ್ಲದ [ಸುಪ್ರತೀಕಂ] ಉತ್ತಮ ರೀತಿಯಲ್ಲಿ ಪ್ರಸಿದ್ಧಿಗೊಳಿಸುವ [ಅಗ್ನಿಂ] ಅಗ್ನಿಯ [ಮಂಥತ] ಮಥನ ಮಾಡಿರಿ. [ನರಃ] ಪ್ರಮುಖ ವ್ಯಕ್ತಿಗಳೇ! [ಯಜ್ಞಸ್ಯ] ಅಹಿಂಸಾರೂಪ ಯಜ್ಞದ [ಕೇತುಂ] ಧ್ವಜದಂತಿರುವ [ಪ್ರಥಮಂ] ಪ್ರಸಿದ್ಧವಾದ [ಸುಶೇವಂ] ಸುಂದರ ದ್ರವ್ಯರೂಪನಾದ ಅಗ್ನಿಯನ್ನು [ಪುರಸ್ತಾತ್] ಮೊದಲು ಉತ್ಪಾದನೆ ಮಾಡಿರಿ.

**ಭಾವಾರ್ಥ:-** ಯಾವ ಮನುಷ್ಯರು ಮೊದಲು ಮಥನ ಪೂರ್ವಕ ಅಗ್ನಿಯನ್ನು ಉತ್ಪಾದಿಸಿಕೊಂಡು ಅದರ ಶಕ್ತಿಯಿಂದ ತಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳಲು ಬಯಸುತ್ತಾರೋ ಅವರು ಸಂಪೂರ್ಣವಾಗಿ ಐಶ್ವರ್ಯವಂತರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದೀ ಮಂಥಂತಿ ಬಾಹುಭಿರ್ವಿ ರೋಚತೇಽಶ್ವೋ ನ ವಾಜ್ಯರುಷೋ ವನೇಷ್ವಾ ।**
**ಚಿತ್ರೋ ನ ಯಾಮನ್ನಶ್ವಿನೋರನಿವೃತಃ ಪರಿ ವೃಣಕ್ತ್ಯಶ್ಮನಸ್ತೃಣಾ ದಹನ್ ॥೬॥**

**ಪದಾರ್ಥ:-** [ಬಾಹುಭಿಃ] ತೋಳುಗಳಿಂದ [ಯದಿ] ಒಂದುವೇಳೆ ಅಗ್ನಿಯನ್ನು [ಮಂಥಂತಿ] ಮಂಥನ ಮಾಡಿದರೆ ಅವನು [ವನೇಷು] ಕಿರಣಗಳಲ್ಲಿ [ಅರುಷಃ] ಮರ್ಮಸ್ಥಳದಲ್ಲಿರುವ [ವಾಜೀ] ವೇಗಗತಿಯ [ಅಶ್ವಃ] [ನ] ಕುದುರೆಗೆ ಸಮಾನವಾಗಿ [ವಿ] [ಆ, ರೋಚತೇ] ವಿಶೇಷ ರೀತಿಯಲ್ಲಿ ಪ್ರಕಾಶಿತನಾಗುತ್ತಾನೆ. [ಅಶ್ವಿನೋಃ]

ಸೂರ್ಯಚಂದ್ರರ ಮಧ್ಯದಲ್ಲಿ [ಅನಿವೃತ್ತಃ] ನಿರಂತರವಾಗಿ ಪ್ರಾಪ್ತವಾದ [ಯಾಮನ್] ರಾತ್ರಿಯಲ್ಲಿ [ಚಿತ್ರಃ] [ನ] ಅದ್ಭುತ ತುಲ್ಯವಾಗಿ [ತೃಣಾ] ತೃಣ ವಿಶೇಷವನ್ನು/ಹುಲ್ಲು [ದಹನ್] ಸುಡುವವನಾಗಿ [ಅಶ್ಮನಃ] ಕಲ್ಲುಗಳ/ ಮೇಘಗಳ [ಪರಿ] ಸುತ್ತಲೂ [ವೃಣಕ್ತಿ] ಕತ್ತರಿಸುತ್ತಾನೆ. ಅಂತಹ ಅಗ್ನಿಯನ್ನು ಎಲ್ಲರೂ ಸಿದ್ಧಪಡಿಸಿಕೊಳ್ಳಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಘರ್ಷಣೆ ಮಾಡುವುದರಿಂದ ಅಗ್ನಿಯು ಬಲಿಷ್ಠನಾಗಿ ಕಾಷ್ಠಾದಿಗಳನ್ನು ಸುಡುತ್ತಾನೆ ಮತ್ತು ಕುದುರೆಗಳಂತೆ ವೇಗಗತಿಯುಳ್ಳವನಾಗಿ ಅದ್ಭುತ ಕಾರ್ಯವನ್ನು ಸಾಧಿಸುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಜಾತೋ ಅಗ್ನೀ ರೋಚತೇ ಚೇಕಿತಾನೋ ವಾಜೀ ವಿಪ್ರಃ ಕವಿಶಸ್ತಃ ಸುದಾನುಃ ।**
**ಯಂ ದೇವಾಸ ಈಡ್ಯಂ ವಿಶ್ವವಿದಂ ಹವ್ಯವಾಹಮದಧುರಧ್ವರೇಷು ॥೭॥**

**ಪದಾರ್ಥ:-** [ದೇವಾಸಃ] ವಿದ್ಯಾವಂತರು [ಅಧ್ವರೇಷು] ಸಂಗತಿಕರಣ ವ್ಯವಹಾರದಲ್ಲಿ [ಯಂ] ಯಾರನ್ನು [ಈಡ್ಯಂ] ಸ್ತುತ್ಯರ್ಹನಾದ [ವಿಶ್ವವಿದಂ] ಸಮಗ್ರ ವಸ್ತುಗಳನ್ನು ತಿಳಿದುಕೊಂಡಿರುವ [ಹವ್ಯವಾಹಂ] ಹವಿಸ್ಸನ್ನು ತೆಗೆದುಕೊಂಡು ಹೋಗುವ ಅಗ್ನಿಯನ್ನು [ಅದಧುಃ] ಧಾರಣೆ ಮಾಡುವನೋ ಅವನು [ಚೇಕಿತಾನಃ] ಉತ್ತಮ ಕಾರ್ಯಗಳನ್ನು ಸ್ಮರಿಸಿಕೊಳ್ಳುವವನು [ಸುದಾನುಃ] ಉತ್ತಮ ವಸ್ತುಗಳನ್ನು ದಾನ ಮಾಡುವವನು ಮತ್ತು [ಕವಿಶಸ್ತಃ] ಶ್ರೇಷ್ಠ ಪುರುಷರಿಂದ ಪ್ರಶಂಸೆಗೊಳಗಾದವನು [ವಿಪ್ರಃ] ಬುದ್ಧಿವಂತನಿಗೆ ಸದೃಶನಾದವನು [ಜಾತಃ] ಪ್ರಕಟನಾಗಿ [ವಾಜೀ] ವೇಗಗತಿಯವನಾಗಿ [ಅಗ್ನಿಃ] ಅಗ್ನಿಯು [ರೋಚತೇ] ಪ್ರಕಾಶಿತನಾಗುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಮಿಂಚಿಗೆ ಸಂಬಂಧಿಸಿದ ವಿದ್ಯೆಯನ್ನು ಅರಗಿಸಿಕೊಳ್ಳುತ್ತಾನೋ ಅಂತಹ ಯಥಾರ್ಥವನ್ನು ನುಡಿಯುವ ವಿದ್ಯಾವಂತನು ಸಾರ್ಥಕವಾದ ಮತ್ತು ಯೋಗ್ಯವಾದ ಕಾರ್ಯಗಳನ್ನು ನೇರವೇರಿಸಿಕೊಳ್ಳುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್ ತ್ಸಾದಯಾ ಯಜ್ಞಂ ಸುಕೃತಸ್ಯ ಯೋನೌ ।**
**ದೇವಾವೀರ್ದೇವಾನ್ ಹವಿಷಾ ಯಜಾ-ಸ್ಯಗ್ನೇ ಬೃಹದ್ಯಜಮಾನೇ ವಯೋ ಧಾಃ ॥೮॥**

**ಪದಾರ್ಥ:-** [ಹೋತಃ] ಸುಖದಾಯಕನಾದ [ಅಗ್ನೇ] ಅಗ್ನಿಯಂತೆ ತೇಜಸ್ವಿಯಾದ ಪುರುಷನೇ [ಸ್ವೇ] ತನ್ನ [ಲೋಕೇ] ದರ್ಶನದಲ್ಲಿ [ಸೀದ] ಇರುವವನಾಗು. [ಚಿಕಿತ್ವಾನ್] ಜ್ಞಾನ ಸಂಪನ್ನನಾಗಿ [ಸುಕೃತಸ್ಯ] ಪುಣ್ಯಕರ್ಮಗಳ [ಯೋನೌ] ಕಾರಣೀಭೂತ ಸ್ಥಾನದಲ್ಲಿ [ಯಜ್ಞಂ] ಧಾರ್ಮಿಕ ವ್ಯವಹಾರಗಳನ್ನು [ಸಾದಯ] ಸ್ಥಿರಗೊಳಿಸು. [ದೇವಾವೀಃ] ವಿದ್ಯಾವಂತರ ರಕ್ಷಕನಾಗಿ [ಹವಿಷಾ] ಹವಿಸ್ಸು ಪದಾರ್ಥದಿಂದ [ದೇವಾನ್] ಉತ್ತಮ ಗುಣಗಳನ್ನು / ವಿದ್ಯಾವಂತರನ್ನು [ಯಜಾಸಿ] ಸಂಗತಿಕರಣಗೊಳಿಸಿ/ ಸ್ವೀಕರಿಸು. [ಉ] ವಿವೇಚನಾ ಪೂರ್ವಕ [ಯಜಮಾನೇ] ಧಾರ್ಮಿಕ ವ್ಯವಹಾರಗಳನ್ನು ಮಾಡುವ ಪುರುಷನಲ್ಲಿ [ಬೃಹತ್] ಮಹತ್ತರವಾದ [ವಯಃ] [ಧಾಃ] ಜೀವನ ಧರ್ಮಾದಿಗಳನ್ನು ಧಾರಣ ಮಾಡಿಸು.

**ಭಾವಾರ್ಥ:-** ಅಗ್ನಿಹೋತ್ರಾದಿ ಕರ್ಮಗಳು ಅಥವಾ ಶಿಲ್ಪವಿದ್ಯಾದಿಗಳು ಇವುಗಳ ಸಂಗತಿ ಮಾಡುವುದರಿಂದ ಉತ್ತಮ ವ್ಯವಹಾರದಲ್ಲಿ ಸಂಯೋಜಿಸಲಾದ ಅಗ್ನಿಯು ಹೇಗೆ ಶ್ರೇಷ್ಠ ಗುಣಗಳನ್ನು ಪ್ರಕಟಿಸುವನೋ ಹಾಗೆ

ವಿದ್ಯಾವಂತರು ಧರ್ಮ ಸಂಬಂಧೀ ಕರ್ಮಗಳಿಂದ ಉತ್ತಮ ಸುಖಗಳನ್ನು ಪ್ರಪಂಚದ ಎಲ್ಲಾ ಕಡೆಗಳಲ್ಲೂ ಪಸರಿಸುವಂತೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೃಣೋತ ಧೂಮಂ ವೃಷಣಂ ಸಖಾಯೋಽಸ್ರೇಧಂತ ಇತನ ವಾಜಮಚ್ಛ ।**
**ಅಯಮಗ್ನಿಃ ಪೃತನಾಷಾಟ್ ಸುವೀರೋ ಯೇನ ದೇವಾಸೋ ಅಸಹಂತ ದಸ್ಯೂನ್ ॥೯॥**

**ಪದಾರ್ಥ:-** **[ಅಸ್ರೇಧಂತಃ]** ಉತ್ಸಾಹಿಗಳಾದ **[ಸಖಾಯಃ]** ಸ್ನೇಹಿತರನ್ನು ಪಡೆದವನು **[ವೃಷಣಂ]** ನೀರಿನಿಂದ ಉತ್ತಮ ರೀತಿಯಲ್ಲಿ ಸಿಂಪಡಿಸಲಾದ **[ಧೂಮಂ]** ಆವಿಯನ್ನು **[ಕೃಣೋತ]** ತಯಾರಿಸಿರಿ **[ವಾಜಂ]** ಅನ್ನ, ವೇಗಗತಿ, ವಿಜ್ಞಾನಾದಿಗಳನ್ನು **[ಅಚ್ಛ]** ಉತ್ತಮ ರೀತಿಯಿಂದ **[ಇತನ]** ಪಡೆದುಕೊಳ್ಳುವವರಾಗಿರಿ. **[ಅಯಂ]** **[ಅಗ್ನಿಃ]** ಈ ಮಿಂಚಿಗೆ ಸದೃಶನಾದ ತೇಜಸ್ವೀ **[ಪೃತನಾಷಾಟ್]** ಸೇನೆಗಳೊಂದಿಗೆ ಇರುವ **[ಸುವೀರಃ]** ಶ್ರೇಷ್ಠ ವೀರ ಪುರುಷರಿಂದ ಕೂಡಿರುವ **[ಯೇನ]** ಯಾರೊಂದಿಗೆ **[ದೇವಾಸಃ]** ಪಂಡಿತರಾದ ಶೂರ ಪುರುಷರು **[ದಸ್ಯೂನ್]** ದುಷ್ಕರ್ಮಿ ಜನರನ್ನು **[ಅಸಹಂತ]** ಸಹಿಸಿಕೊಳ್ಳುತ್ತಾರೋ ಅವರನ್ನು ಪಡೆದುಕೊಳ್ಳುವವರಾಗಿರಿ.

**ಭಾವಾರ್ಥ:-** ವಿದ್ಯಾವಂತರೇ! ಇಂಧನ, ಅಗ್ನಿ, ಜಲಗಳನ್ನು ಸಂಯೋಗಿಸಿದಾಗ ಉಂಟಾಗುವ ಬಾಷ್ಪವನ್ನು ಅನೇಕ ಕಾರ್ಯಗಳಲ್ಲಿ ಮಿತ್ರಭಾವದೊಂದಿಗೆ ಸಂಯೋಜಿಸಿ ಕೆಲಸ ಕೈಗೂಡಿಸಿಕೊಂಡರೆ ಧರ್ಮ ಪೂರ್ವಕ ವ್ಯವಹಾರಗಳನ್ನು ಮಾಡುವವನು ವಿದ್ಯಾವಂತರು ಶೂರ ವೀರರೂ ಆದ ಪುರುಷರು ದುಷ್ಕರ್ಮಿಗಳನ್ನು ದಮನ ಮಾಡಿ ಹೇಗೆ ರಾಜರೆನಿಸಿಕೊಳ್ಳುವರೋ, ಹಾಗೆ ಅಗ್ನಿಯನ್ನು ಉತ್ತಮ ರೀತಿಯಿಂದ ಯಂತ್ರಾದಿಗಳಲ್ಲಿ ಸಂಯೋಜಿಸಿಕೊಂಡರೆ ಬಡತನವನ್ನು ನಿವಾರಿಸಿಕೊಂಡು ಅಸಂಖ್ಯಾತ ಧನರಾಶಿಯನ್ನು ಗಳಿಸಿಕೊಳ್ಳಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಯಂ ತೇ ಯೋನಿರ್ಋತ್ವಿಯೋ ಯತೋ ಜಾತೋ ಅರೋಚಥಾಃ ।**
**ತಂ ಜಾನನ್ನಗ್ನ ಆ ಸೀದಾ-ಥಾ ನೋ ವರ್ಧಯಾ ಗಿರಃ ॥೧೦॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತನೇ! **[ತೇ]** ನಿನ್ನ **[ಅಯಂ]** ಈ ಅಗ್ನ್ಯಾದಿ ಪದಾರ್ಥಗಳಿಗೆ ಜ್ಞಾನರೂಪ ಕ್ರಿಯೆಗೆ ಆಧಾರಭೂತನಾದ **[ಋತ್ವಿಯಃ]** ಕಾಲಕ್ಕೆ ಯೋಗ್ಯವಾದ **[ಯೋನಿಃ]** ಸುಖಕ್ಕೆ ಮನೆಯಾದ **[ಯತಃ]** ಎಲ್ಲಿಂದ **[ಜಾತಃ]** ಪ್ರಕಟನಾದ **[ಅರೋಚಥಾಃ]** ಅಗ್ನಿಯು ಪ್ರಜ್ವಲಿತನಾಗುತ್ತಾನೋ **[ತಂ]** ಅವನನ್ನು **[ಜಾನನ್]** ರಕ್ಷಣೆ ಮಾಡುತ್ತ **[ಆ]** **[ಸೀದ]** ಇಲ್ಲಿ ಸ್ಥಿರವಾಗಿ ನೆಲೆಸು. **[ಅಥ]** ಅನಂತರ **[ನಃ]** ನಮ್ಮೆಲ್ಲರ **[ಗಿರಃ]** ಸುಶಿಕ್ಷಿತ ವಾಣಿಯನ್ನು **[ವರ್ಧಯ]** ವೃದ್ಧಿಪಡಿಸು.

**ಭಾವಾರ್ಥ:-** ಯಾವ ಕೆಲಸದಿಂದ ಶರೀರ, ಆತ್ಮ, ಐಶ್ವರ್ಯ ಇವುಗಳ ವೃದ್ಧಿಯಾಗುತ್ತದೆಯೋ ಅಂತಹ ಕರ್ಮಗಳನ್ನೇ ಮನುಷ್ಯರು ಯಾವಾಗಲೂ ಮಾಡುವವರಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತನೂನಪಾದುಚ್ಯತೇ ಗರ್ಭ ಆಸುರೋ ನರಾಶಂಸೋ ಭವತಿ ಯದ್ವಿಜಾಯತೇ ।**
**ಮಾತರಿಶ್ವಾ ಯದಮಿಮೀತ ಮಾತರಿ ವಾತಸ್ಯ ಸರ್ಗೋ ಅಭವತ್ಸರೀಮಣಿ ॥೧೧॥**

**ಪದಾರ್ಥ:-** **[ಯತ್]** ಯಾವುದು **[ತನೂನಪಾತ್]** ಸರ್ವತ್ರ ವ್ಯಾಪಕವಾಗಿದೆಯೆಂದು **[ಉಚ್ಯತೇ]** ಹೇಳಲಾಗುತ್ತದೆಯೋ **[ಆಸುರಃ]** ಕಣ್ಣಿಗೆ ಗೋಚರವಾಗದ ಗಾಳಿಯಿಂದ ಉತ್ಪನ್ನವಾದ **[ಗರ್ಭಃ]** ಮಧ್ಯಭಾಗದಲ್ಲಿರುವವನು **[ನರಾಶಂಸಃ]** ಮನುಷ್ಯರಿಂದ ಪ್ರಶಂಸೆಗೊಳಗಾದವನು **[ಭವತಿ]** ಆಗುತ್ತಾನೆ. **[ಮಾತರಿಶ್ವಾ]** ಗಾಳಿಯಲ್ಲಿ ಉಸಿರಾಡುವವನು **[ವಿಜಾಯತೇ]** ವಿಶೇಷ ರೀತಿಯಲ್ಲಿ ಉತ್ಪನ್ನನಾಗುತ್ತಾನೆ. **[ಯತ್]** ಯಾವುದು **[ವಾತಸ್ಯ]** ವಾಯುವಿಗೆ ಸಂಬಂಧಿಸಿದ **[ಮಾತರಿ]** ಆಕಾಶದಲ್ಲಿ **[ಸರ್ಗಃ]** ಉತ್ಪಾದನೆಯನ್ನು **[ಅಮಿಮೀತ]** ಮಾಡಲಾಗುತ್ತದೆ. **[ಸರೀಮಣಿ]** ಗತಿ ಪೂರ್ವಕ ವ್ಯವಹಾರದಲ್ಲಿ **[ಅಭವತ]** ಇರುವ ಅಗ್ನಿಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

**ಭಾವಾರ್ಥ:-** ಯಾವ ಮನುಷ್ಯರು ಅಗ್ನಿ ವಾಯುಗಳಿಂದ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತಾರೋ ಅವರು ಸುಖ ಪಡೆದು ಸಂತುಷ್ಟರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸುನಿರ್ಮಥಾ ನಿರ್ಮಥಿತಃ ಸುನಿಧಾ ನಿಹಿತಃ ಕವಿಃ ।**
**ಅಗ್ನೇ ಸ್ವಧ್ವರಾ ಕೃಣು ದೇವಾನ್ದೇವಯತೇ ಯಜ ॥೧೨॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ಪುರುಷನೇ! **[ಸುನಿರ್ಮಥಾ]** ಘರ್ಷಣೆ ಮಾಡಲು ಸಾಧನವಾದ ವಸ್ತುಗಳಿಂದ **[ನಿರ್ಮಥಿತಃ]** ಉತ್ತಮ ರೀತಿಯಲ್ಲಿ ಮಥನ ಮಾಡಿ **[ಸುನಿಧಾಃ]** ಉತ್ತಮ ಆಧಾರ ಭೂತವಾದ ವಸ್ತುಗಳಲ್ಲಿ **[ನಿಹಿತಃ]** ಸ್ಥಾಪನೆಗೊಳಿಸಿದ **[ಕವಿಃ]** ಎಲ್ಲ ಕಡೆಗಳಲ್ಲೂ ಕಾಣ ಸಿಗುವಂತಹ ಅಗ್ನಿಯು **[ಸ್ವಧ್ವರಾ]** ಅಹಿಂಸಾತ್ಮಕ ಧಾರ್ಮಿಕ ಕರ್ಮಗಳಲ್ಲಿ ಸಂಯೋಜಿಸಿದವನಾಗಿ **[ದೇವಾನ್]** ಉತ್ತಮ ಗುಣಗಳನ್ನು **[ಕೃಣು]** ಧರಿಸುತ್ತಾನೆ. **[ದೇವಯತೇ]** ಉತ್ತಮ ಗುಣಗಳನ್ನು ಬಯಸುವ ಮನುಷ್ಯನಿಗೆ **[ಯಜ]** ಸಂಗತ ಮಾಡುತ್ತಾನೆ.

**ಭಾವಾರ್ಥ:-** ಬುದ್ಧಿವಂತಿಕೆಯಿಂದ ತಯಾರಿಸಿದ ಯಂತ್ರ ಸಾಧನಗಳಲ್ಲಿ ಅಳವಡಿಸಲಾದ ಅಗ್ನಿಯು ಘರ್ಷಣಾದಿಗಳಿಂದ ಉತ್ತಮ ಗುಣಗಳನ್ನು ಉತ್ಪಾದಿಸಿ ಬಹು ಕಾರ್ಯವನ್ನು ಸಾಧಿಸುತ್ತಾನೋ, ಅದೇ ರೀತಿ ಮನುಷ್ಯರು ಶ್ರೇಷ್ಠ ಕರ್ಮಗಳನ್ನು ಮಾಡಿ ಉತ್ತಮ ಗುಣಗಳನ್ನು ಪಡೆದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಜೀಜನನ್ನಮೃತಂ ಮರ್ತ್ಯಾಸೋಽಸ್ರೇಮಾಣಂ ತರಣಿಂ ವೀಳುಜಂಭಮ್ ।**
**ದಶ ಸ್ವಸಾರೋ ಅಗ್ರುವಃ ಸಮೀಚೀಃ ಪುಮಾಂಸಂ ಜಾತಮಭಿ ಸಂ ರಭಂತೇ ॥೧೩॥**

**ಪದಾರ್ಥ:-** **[ಅಗ್ರುವಃ]** ಅಗ್ರಗಾಮಿಯರಾದ **[ಸಮೀಚೀಃ]** ಉತ್ತಮ ರೀತಿಯಲ್ಲಿ ಸಂಗತರಾದ **[ದಶ]** ಹತ್ತು ಸಂಖ್ಯೆಯ **[ಸ್ವಸಾರಃ]** ಸಹೋದರಿಯರಂತಿರುವ ಅಂಗುಲಿಗಳು **[ಜಾತಂ]** ಪ್ರಸಿದ್ಧವಾದ **[ಪುಮಾಂಸಂ]** ಪುರುಷಾರ್ಥದಿಂದ ಕೂಡಿದ ಮನುಷ್ಯನನ್ನು **[ಅಭಿ]** **[ಸಂ]** **[ರಭಂತೇ]** ಹೇಗೆ ಅಭಿಮುಖವಾಗಿ ಪ್ರವೃತ್ತರಾಗುವಂತೆ ಮಾಡುತ್ತಾರೋ ಹಾಗೆ **[ಮರ್ತ್ಯಾಸಃ]** ಮನುಷ್ಯರು **[ವೀಳುಜಂಭಂ]** ಬಾಯಿಯಂತಿರುವ ಜ್ವಾಲೆಯಿಂದ ಶೋಭಿಸುತ್ತಿರುವ **[ತರಣಿಂ]** ಪ್ರಯತ್ನ ಪೂರ್ವಕ ಇಷ್ಟವಾದ ಸ್ಥಳಕ್ಕೆ ತಲುಪಿಸುವವನಾದ **[ಅಸ್ರೇಮಾಣಂ]** ನಾಶರಹಿತನಾದ **[ಅಮೃತಂ]** ನಿತ್ಯನಾದ ಅಗ್ನಿಯನ್ನು **[ಅಜೀಜನನ್]** ಉತ್ಪಾದನೆ ಮಾಡುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಕೈಯ ಬೆರಳುಗಳು ಹೇಗೆ ಪರಸ್ಪರ ಒಂದು ಗೂಡಿ ಶರೀರಧಾರೀ ಮನುಷ್ಯನಿಗೆ ಕಾರ್ಯ ಸಾಧನೆ ಮಾಡಲು ಪ್ರವೃತ್ತಿ ಉಂಟು ಮಾಡುತ್ತವೆಯೋ, ಅದೇರೀತಿ ವಿದ್ವಾಂತರು ಅಗ್ನಿಯನ್ನು ಕಾರ್ಯಗಳಲ್ಲಿ ಸಂಯೋಜಿಸಿ ಅಗ್ನಿಯ ಮೂಲಕ ತಮ್ಮ ತಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಸಪ್ತಹೋತಾ ಸನಕಾದರೋಚತ ಮಾತುರುಪಸ್ಥೇ ಯದಶೋಚದೂಧನಿ ।**
**ನ ನಿ ಮಿಷತಿ ಸುರಣೋ ದಿವೇದಿವೇ ಯದಸುರಸ್ಯ ಜಠರಾದಜಾಯತ ॥೧೪॥**

**ಪದಾರ್ಥ:-** **[ಸಪ್ತಹೋತಾ]** ಏಳು ಪ್ರಾಣಗಳಿಂದ ಗ್ರಹಣ ಯೋಗ್ಯನಾದ ಅಗ್ನಿಯು **[ಸನಕಾತ್]** ಅನಾದಿ ಪರಂಪರೆಯಿಂದ ಸಿದ್ಧಕಾರಣದಿಂದ ಉತ್ಪನ್ನನಾದ **[ಮಾತುಃ]** ವಾಯುವಿನ **[ಉಪಸ್ಥೇ]** ಸಮೀಪದಲ್ಲಿ **[ಪ್ರಾರೋಚತ್]** ಪ್ರಕಟನಾಗುತ್ತಾನೆ. **[ಯತ್]** ಯಾವ **[ಊಧನಿ]** ರಾತ್ರಿಯಲ್ಲಿ **[ಅಶೋಚತ್]** ಪ್ರಕಾಶಮಾನನಾಗುತ್ತಾನೆ. **[ಸುರಣಃ]** ಶ್ರೇಷ್ಠಯುದ್ಧ ಸಾಧನವು **[ದಿವೇ ದಿವೇ]** ಪ್ರತಿದಿನವೂ **[ನನಿ]** ಅತ್ಯಂತವಾಗಿ **[ಮಿಷತಿ]** ಸುರಿಸುವುದಿಲ್ಲ. **[ಯತ್]** ಯಾವುದು **[ಅಸುರಸ್ಯ]** ರೂಪರಹಿತ ವಾಯುವಿನ **[ಜಠರಾತ್]** ಮಧ್ಯದಿಂದ **[ಅಜಾಯತ]** ಉತ್ಪನ್ನನಾಗುತ್ತಾನೋ ಅವನ ವಿಚಾರವನ್ನು ತಿಳಿದುಕೊ.

**ಭಾವಾರ್ಥ:-** ಅಗ್ನಿ ಅನ್ನಾದಿಗಳನ್ನು ಶುಷ್ಕಗೊಳಿಸುವ ಯಾವ ವಾಯುವಿದೆಯೋ ಅದು ರೂಪರಹಿತನಾಗಿ ಪ್ರಕೃತಿಯ ಕಾರಣದಿಂದ ಉತ್ಪನ್ನವಾಗಿ ಬಹಳಷ್ಟು ವ್ಯವಹಾರಗಳನ್ನು ಸಫಲಗೊಳಿಸುತ್ತದೆ. ಅಂತಹ ವಾಯುವನ್ನು ತಿಳಿದುಕೊಳ್ಳಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಮಿತ್ರಾಯುಧೋ ಮರುತಾಮಿವ ಪ್ರಯಾಃ ಪ್ರಥಮಜಾ ಬ್ರಹ್ಮಣೋ ವಿಶ್ವಮಿದ್ವಿದುಃ ।**
**ದ್ಯುಮ್ನವದ್ಬ್ರಹ್ಮ ಕುಶಿಕಾಸ ಏರಿರ ಏಕಏಕೋ ದಮೇ ಅಗ್ನಿಂ ಸಮೀಧಿರೇ ॥೧೫॥**

**ಪದಾರ್ಥ:-** **[ಮರುತಾಮಿವ]** ಮನುಷ್ಯರಿಗೆ ಸದೃಶರಾಗಿ **[ಅಮಿತ್ರಾಯುಧಾ]** ಶತ್ರುಗಳ ಮೇಲೆ ಶಸ್ತ್ರ ಪ್ರಯೋಗ ಮಾಡುವವನು **[ಪ್ರಯಾಃ]** ಶೀಘ್ರಚಲಿಸುವವನು **[ಪ್ರಥಮಜಾಃ]** ಮೊದಲಿನ ಕಾರಣದಿಂದ ಉತ್ಪನ್ನನಾದವನು **[ಕುಶಿಕಾಸಃ]** ಉಚ್ಚ ಪದವಿಯನ್ನು ಗ್ರಹಣ ಮಾಡಿದವನು **[ಏಕಏಕಃ]** ಪ್ರತಿಯೊಬ್ಬನೂ **[ದಮೇ]** ಮನೆಯಲ್ಲಿ **[ಅಗ್ನಿಂ]** ಅಗ್ನಿಯನ್ನು **[ಸಂ]** **[ಈಧಿರೇ]** ಪ್ರಜ್ವಲಿತಗೊಳಿಸಬೇಕು. **[ಬ್ರಹ್ಮಣಃ]** ಪರಮಾತ್ಮನ **[ವಿಶ್ವಂ]** ಸಮಗ್ರವಾದ ಜಗತ್ತನ್ನು **[ವಿದುಃ]** ತಿಳಿದವರಾರೋ ಅವರು **[ಇತ್]** ಅವರೇ **[ದ್ಯುಮ್ನವತ್]** ಯಶೋವಂತರಾಗಿ **[ಬ್ರಹ್ಮ]** ಬಹುಧನವನ್ನು **[ಆ, ಈರಿರೇ]** ಪಡೆದುಕೊಳ್ಳುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಗಾಳಿಯು ಹೇಗೆ ಎಲ್ಲ ಸ್ಥಾನಗಳಲ್ಲೂ ಪ್ರಬಲವಾಗಿ ಆಕ್ರಮಣ ಮಾಡಿರುತ್ತದೆಯೋ, ಅಗ್ನ್ಯಾದಿ ಪದಾರ್ಥಗಳಿಗೆ ಪ್ರಜ್ವಲಿಸಲು ಕಾರಣವಾಗಿರುತ್ತದೆಯೋ ಪ್ರಪಂಚದಲ್ಲಿರುವ ಸಮಗ್ರ ಜೀವಜಾತಿಗಳ ರಕ್ಷಣೆ ಮಾಡಿ ಆನಂದ ಪಡುತ್ತದೆಯೋ, ಹಾಗೆಯೇ ಅಗ್ನ್ಯಾದಿ ಪದಾರ್ಥಗಳ ವಿದ್ಯೆಯನ್ನರಿತ ಪುರುಷನು ಸಮಗ್ರ ಜನಕೋಟಿಯ ಸಂತೋಷಕ್ಕೆ ಕಾರಣನಾಗುತ್ತಾನೆ.

ಈ ಮಂತ್ರದಲ್ಲಿ ಯಾರಿಗೆ ಸ್ಥಿರಸಂಪತ್ತು ಲಭಿಸುತ್ತದೆಂದು ತಿಳಿಸಿದೆ.

**ಯದದ್ಯ ತ್ವಾ ಪ್ರಯತಿ ಯಜ್ಞೇ ಅಸ್ಮಿನ್ ಹೋತಶ್ಚಿಕಿತ್ವೋಽವೃಣೀಮಹೀಹ ।**
**ಧ್ರುವಮಯಾ ಧ್ರುವಮುತಾಶಮಿಷ್ಠಾಃ ಪ್ರಜಾನನ್ ವಿದ್ವಾ ಉಪ ಯಾಹಿ ಸೋಮಮ್ ॥೧೬॥**

**ಪದಾರ್ಥ:-** **[ಚಿಕಿತ್ವಃ]** ಜ್ಞಾನಸಂಪನ್ನನೂ **[ಹೋತಃ]** ಸಾಧನ ಉಪಸಾಧನಗಳನ್ನು ಗ್ರಹಣ ಮಾಡುವವನೇ! **[ಯತ್]** ಯಾವ ನಾವು **[ಅದ್ಯ]** ಈಗ **[ಅಸ್ಮಿನ್]** **[ಪ್ರಯತಿ]** ಈ ಪ್ರಯತ್ನದಿಂದ **[ಯಜ್ಞೇ]** ಸಂಗತವಾಗಲು ಯೋಗ್ಯವಾದ ವ್ಯವಹಾರದಲ್ಲಿ **[ತ್ವಾ]** ನಿನ್ನನ್ನು **[ಅವೃಣೀಮಹೇ]** ಸ್ವೀಕರಿಸುತ್ತೇವೆ. **[ಇಹ]** ಈ ಜೀವನದಲ್ಲಿ **[ಧ್ರುವಂ]** ಸ್ಥಿರನಾದ ನೀನು **[ಅಶಮಿಷ್ಠಾಃ]** ಶಾಂತಿಯನ್ನುಂಟು ಮಾಡು. **[ಉತ]** ಹಾಗೂ **[ಪ್ರಜಾನನ್]** ಜ್ಞಾನ ಸಂಪನ್ನನಾಗಿ **[ಧ್ರುವಂ]** ದೃಢವಾದ ಧರ್ಮವನ್ನು **[ಅಯಾಃ]** ಸಂಗತಗೊಳಿಸು **[ವಿದ್ವಾನ್]** ವಿದ್ಯಾವಂತನಾದ ನೀನು **[ಸೋಮಂ]** ಸಂಪತ್ತನ್ನು **[ಉಪ]** **[ಯಾಹಿ]** ಪ್ರಾಪ್ತಿಗೊಳಿಸು.

**ಭಾವಾರ್ಥ:-** ಯಾರು ಈ ಜೀವನದಲ್ಲಿ ಪ್ರಯತ್ನ ಪೂರ್ವಕ ಸೃಷ್ಟಿಯ ಪದಾರ್ಥಗಳ ವಿದ್ಯೆಯ ಅನುಕ್ರಮವನ್ನು ತಿಳಿದುಕೊಂಡಿರುತ್ತಾರೋ, ಅವರೇ ನಿರಂತರವಾಗಿ ಆ ಪದಾರ್ಥಗಳನ್ನು ತಮ್ಮ ಕಾರ್ಯದಲ್ಲಿ ಉಪಯೋಗಿಸಿಕೊಂಡು ತನ್ಮೂಲಕ ಸ್ಥಿರವಾದ ಸಂಪತ್ತನ್ನು ಪಡೆಯುತ್ತಾರೆ.

ಈ ಸೂಕ್ತದಲ್ಲಿ ಅಗ್ನಿ, ವಾಯು ಮತ್ತು ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ಇಪ್ಪತ್ತೊಂಬತ್ತನೆಯ ಸೂಕ್ತ ಸಮಾಪ್ತ

# ಇತಿ ಪ್ರಥಮೋಽಧ್ಯಾಯಃ

# ದ್ವಿತಿಯೋಽಧ್ಯಾಯಃ

## ತೃತೀಯೋಽನುವಾಕಃ (ಸೂಕ್ತ ೩೦-೩೮)

### ಸೂಕ್ತ ೩೦

ಮಂತ್ರಸಂಖ್ಯೆ ೨೨ । ವಿಶ್ವಾಮಿತ್ರ ಋಷಿಃ । ಇಂದ್ರೋದೇವತಾ । ೧, ೨, ೯-೧೦, ೧೪, ೧೭, ೨೦ ನಿಚೃತ್ರಿಷ್ಟುಪ್, ೫, ೬, ೮, ೧೩, ೧೯, ೨೧, ೩೩ ತಿಷ್ಟುಪ್, ೧೨, ೧೫ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೪, ೭, ೧೬, ೧೮ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ವಿದ್ಯಾವಂತರ ಕಾರ್ಯ ಹೇಳಿದೆ.

**ಇಚ್ಛಂತಿ ತ್ವಾ ಸೋಮ್ಯಾಸಃ ಸಖಾಯಃ ಸುನ್ವಂತಿ ಸೋಮಂ ದಧತಿ ಪ್ರಯಾಂಸಿ ।**
**ತಿತಿಕ್ಷಂತೇ ಅಭಿಶಸ್ತಿಂ ಜನಾನಾ-ಮಿಂದ್ರ ತ್ವದಾ ಕಶ್ಚನ ಹಿ ಪ್ರಕೇತಃ ॥೧॥**

**ಪದಾರ್ಥ:-** [ಇಂದ್ರ] ಪರಮೈಶ್ವರ್ಯದಾಯಕನೇ! **[ಸೋಮ್ಯಾಸಃ]** ಪರಸ್ಪರರಲ್ಲಿ ಸ್ನೇಹರಸವನ್ನು ವೃದ್ಧಿ ಪಡಿಸುವವರೂ **[ಸಖಾಯಃ]** ಮಿತ್ರಭಾವದಿಂದಿರುವವರೂ **[ತ್ವಾ]** ನಿನ್ನನ್ನು **[ಇಚ್ಛಂತಿ]** ಬಯಸುತ್ತಾರೆ. ಅವರು

**[ಸೋಮಂ]** ಪರಮೈಶ್ವರ್ಯವನ್ನು **[ಸುನ್ವಂತಿ]** ಪಡೆದುಕೊಳ್ಳುತ್ತಾರೆ. **[ಪ್ರಯಾಂಸಿ]** ಬಯಸಲು ಯೋಗ್ಯವಾದ ವಸ್ತುಗಳನ್ನು **[ದಧತಿ]** ಧಾರಣ ಮಾಡುತ್ತಾರೆ. **[ಜನಾನಾಂ]** ಮನುಷ್ಯರ **[ಅಭಿಶಸ್ತಿಂ]** ನಾಲ್ಕು ದಿಕ್ಕಿನಿಂದ ಹಿಂಸೆಯನ್ನು **[ಆ, ತಿತಿಕ್ಷಂತೇ]** ಸಹಿಸಿಕೊಳ್ಳುತ್ತಾರೆ. **[ಹಿ]** ಯಾವುದರಿಂದ **[ತ್ವತ್]** ನಿನ್ನ ದೆಸೆಯಿಂದ **[ಕಃ]** **[ಚನ]** ಯಾವ ಪುರುಷನೂ **[ಪ್ರಕೇತಃ]** ಉತ್ತಮ ಬುದ್ಧಿವಂತನಿರುವುದಿಲ್ಲವೋ ಆದ್ದರಿಂದ ಈ ಮನುಷ್ಯರ ರಕ್ಷಣೆಯನ್ನು ಸದಾ ಮಾಡುವವನಾಗು.

**ಭಾವಾರ್ಥ:-** ಯಾರು ಪರಸ್ಪರರೊಂದಿಗೆ ಮಿತ್ರಭಾವದಿಂದ ವ್ಯವಹರಿಸುತ್ತ ಪ್ರಯತ್ನಪೂರ್ವಕ ಸಂಪತ್ತಿನ ಇಚ್ಛೆ ಮಾಡುವವರೋ ಅವರು ಸುಖ, ದುಃಖ, ನಿಂದಾದಿಗಳನ್ನು ಸಹಿಸಿಕೊಂಡು ವಿದ್ಯಾವಂತರ ಸಂಗಮಾಡಿ ಆನಂದವನ್ನು ಪಡೆಯುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ತೇ ದೂರೇ ಪರಮಾ ಚಿದ್ರಜಾಂ-ಸ್ಯಾ ತು ಪ್ರ ಯಾಹಿ ಹರಿವೋ ಹರಿಭ್ಯಾಮ್ ।**
**ಸ್ಥಿರಾಯ ವೃಷ್ಣೇ ಸವನಾ ಕೃತೇಮಾ ಯುಕ್ತಾ ಗ್ರಾವಾಣಃ ಸಮಿಧಾನೇ ಅಗ್ನೌ ॥೨॥**

**ಪದಾರ್ಥ:-** **[ಹರಿವಃ]** ಶ್ರೇಷ ಕುದುರೆಗಳ ವಾಹನವನ್ನು ಪಡೆದ ನೀನು **[ಹರಿಭ್ಯಾಂ]** ಕುದುರೆಗಳೆರಡರಿಂದ **[ಪ್ರ, ಆ, ಯಾಹಿ]** ಬರುವವನಾಗು. **[ಪರಮಾ]** ಉತ್ತಮವಾದ **[ರಜಾಂಸಿ]** ಉತ್ತಮ ಲೋಕಗಳ ಸ್ಥಾನಗಳು **[ತೇ]** ನಿನಗೆ **[ದೂರೇ]** **[ನ]** ದೂರವಾಗಲಾರದು. **[ಸಮಿಧಾನೇ]** ಹವನ ಯೋಗ್ಯರೀತಿಯಲ್ಲಿ ಪ್ರಜ್ವಲನಗೊಳಿಸಿದ **[ಅಗ್ನೌ]** ಅಗ್ನಿಯಲ್ಲಿ **[ಸ್ಥಿರಾಯ]** ದೃಢವಾಗಿ **[ವೃಷ್ಣೇ]** ಬಲಿಷ್ಠನಿಗಾಗಿ **[ಕೃತಾ]** ಮಾಡಲಾದ **[ಇಮಾ]** ಈ **[ಸವನಾ]** ಸಂಪದಭಿವೃದ್ಧಿಯ ಕರ್ಮವನ್ನು ಮಾಡು. **[ತು]** ಆದರಿಂದ **[ಯುಕ್ತಾಃ]** ಉದ್ಯುಕ್ತವಾದ **[ಗ್ರಾವಾಣಃ ಚಿತ್]** ಮೇಘಗಳು ಸಹ ವಿಪುಲಗೊಳ್ಳಲಿ.

**ಭಾವಾರ್ಥ:-** ಮನುಷ್ಯರು ಶೀಘ್ರಗಾಮೀ ಅಶ್ವಗಳಿಂದ ದೇಶಾಂತರಕ್ಕೆ ಹೋಗಲು ಬಯಸಿದರೆ ಯಾವುದು ದೂರವಾದೀತು? ಎಲ್ಲವೂ ಸಮೀಪವಾಗಿಯೇ ಇರುತ್ತವೆ. ನಿಯಮಪೂರ್ವಕ ಅಗ್ನಿಯನ್ನು ಪ್ರಜ್ವಲನ ಮಾಡಿ ಅದರಲ್ಲಿ ಹೋಮ ಮಾಡಿದರೆ ಮಳೆಯೂ ಸುಗಮವಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಃ ಸುಶಿಪ್ರೋ ಮಘವಾ ತರುತ್ರೋ ಮಹಾವ್ರಾತಸ್ತುವಿಕೂರ್ಮಿರ್ಋಘಾವಾನ್ ।**
**ಯದುಗ್ರೋ ಧಾ ಬಾಧಿತೋ ಮರ್ತ್ಯೇಷು ಕ್ವ (ಅ)೧ ತ್ಯಾ ತೇ ವೃಷಭ ವೀರ್ಯಾಣಿ ॥೩॥**

**ಪದಾರ್ಥ:-** **[ವೃಷಭ]** ಬಲವಂತನೇ! **[ಮರ್ತ್ಯೇಷು]** ಮನುಷ್ಯರಲ್ಲಿ **[ಬಾಧಿತಃ]** ಪೀಡಿತನು **[ಉಗ್ರಃ]** ತೇಜಸ್ವೀ ಸ್ವಭಾವದವನು **[ಯತ್]** ಯಾವನು ದುಃಖದಾಯಕನೋ ಅವನ **[ಧಾಃ]** ಧಾರಣ ಮಾಡು. **[ತೇ]** ನಿನ್ನ **[ತ್ಯಾ]** ಆ, **[ವೀರ್ಯಾಣಿ]** ವೀರಪುರುಷರಲ್ಲಿರುವ ಬಲವು **[ಕ್ವ]** ಎಲ್ಲಿದೆ? ಈ ರೀತಿ **[ಸುಶಿಪ್ರಃ]** ಸುಂದರವಾದ ಕಪೋಲ ನಾಸಿಕಗಳು ಇರುವ **[ಮಘವಾ]** ಉತ್ಕೃಷ್ಟ ಧನಸಂಪನ್ನನಾದ **[ತರುತ್ರಃ]** ದುಃಖದಿಂದ ಬಿಡುಗಡೆ ಮಾಡುವ **[ಮಹಾವ್ರತಃ]** ಸತ್ಯಾಚರಣರೂಪ ವ್ರತದಲ್ಲಿ ಶ್ರದ್ಧಾವಂತರಾದವರ ಗೆಳೆಯನು **[ತುವಿಕೂರ್ಮಿಃ]** ಬಹುವಿಧ ಕರ್ಮಾರಂಭದಲ್ಲಿ ಉತ್ಸಾಹಿಯಾದವನು **[ಋಘಾವಾನ್]** ಶತ್ರು ಸಂಹಾರಕನು ಬಹು ಜನ ಶೂರ-ವೀರರೊಂದಿಗಿರುವವನು **[ಇಂದ್ರಃ]** ಅತ್ಯೈಶ್ವರ್ಯವಂತನೂ ನೀನಾಗುವೆ.

**ಭಾವಾರ್ಥ:-** ಯಾವಾಗ ಮನುಷ್ಯನಿಗೆ ಬಹು ಪ್ರಕಾರದ ಕಷ್ಟಗಳು ಬರುತ್ತವೆಯೋ ಆಗ ಪರಿಹಾರೋಪಾಯಗಳಿಂದ ಅದನ್ನು ಪರಿಹರಿಸಿಕೊಳ್ಳಬೇಕು. ಹೀಗೆ ಪುರುಷಾರ್ಥ ಪ್ರಯತ್ನದಿಂದ ದುಃಖವನ್ನು ದೂರಗೊಳಿಕೊಂಡು ತನ್ನ ಬಲ-ಶೋಭೆಗಳನ್ನು ಹೆಚ್ಚಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಂ ಹಿ ಷ್ಮಾ ಚ್ಯಾವಯನ್ನಚ್ಯುತಾ-ನ್ಯೇಕೋ ವೃತ್ರಾ ಚರಸಿ ಜಿಘ್ನಮಾನಃ ।**
**ತವ ದ್ಯಾವಾಪೃಥಿವೀ ಪರ್ವತಾಸೋಽನು ವ್ರತಾಯ ನಿಮಿತೇವ ತಸ್ಥುಃ ॥೪॥**

**ಪದಾರ್ಥ:-** **[ತ್ವಂ]** ನೀನು **[ಏಕಃ]** ಬಲಿಷ್ಠನಾದ ಒಬ್ಬನೇ **[ಹಿ]** ಯಾವುದರಿಂದ **[ಅಚ್ಯುತಾನಿ]** ಪ್ರಬಲವಾದ ಶತ್ರುಸೇನೆಯನ್ನು **[ಚ್ಯಾವಯನ್]** ಪತನಗೊಳಿಸುತ್ತ **[ಸ್ಮ]** ಇರುವೆ. **[ದ್ಯಾವಾ ಪೃಥಿವೀ]** ಬೆಳಕು-ಭೂಮಿಗಳು **[ಪರ್ವತಾಸಃ]** ಪರ್ವತದಂತಿರುವ ದೊಡ್ಡ - ದೊಡ್ಡ ಮೇಘಗಳು ಮತ್ತು ಮೇಘಗಳನ್ನು ಹಾರಿಸುವ ಮೋಡಗಳು **[ನಿಮಿತೇವ]** ನಿರಂತರ ಪ್ರಮಾಣೀಕರಿಸಿದ ಪದಾರ್ಥಗಳಂತೆ **[ತಸ್ಥುಃ]** ಸ್ಥಿರವಾಗಿರುತ್ತವೆಯೋ ಅದೇ ರೀತಿ **[ಅನು]** **[ವ್ರತಾಯ]** ಸತ್ಯಭಾಷಣಾದಿ ಕರ್ಮ/ಉತ್ತಮ ಸ್ವಭಾವಕ್ಕಾಗಿ ಶತ್ರುಗಳ **[ಜಿಘ್ನಮಾನಃ]** ನಾಶಮಾಡುವವನಾಗು. **[ತೇ]** ನಿನ್ನ ವಿಜಯವು ನಿಶ್ಚಯವಾಗಿದೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇಗೆ ಸೂರ್ಯನು ಪ್ರತಿದಿನವೂ ವರ್ತಮಾನನಾಗಿದ್ದು ನಿವಾರಣ ಯೋಗ್ಯ ಪದಾರ್ಥಗಳನ್ನು ನಿವಾರಿಸುತ್ತ ರಕ್ಷಣೆಗೆ ಯೋಗ್ಯ ಪದಾರ್ಥಗಳ ರಕ್ಷಣೆ ಮಾಡುತ್ತಾನೋ ಹಾಗೆ ನೀನು ವರ್ಜನಾರ್ಹ ಶತ್ರುಗಳನ್ನು ವರ್ಜಿಸಿ ಪ್ರಜೆಗಳನ್ನು ನಿರಂತರ ರಕ್ಷಿಸುವವನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತಾಭಯೇ ಪುರುಹೂತ ಶ್ರವೋಭಿ-ರೇಕೋ ದೃಳ್ಹಮವದೋ ವೃತ್ರಹಾ ಸನ್ ।**
**ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥೫॥**

**ಪದಾರ್ಥ:-** **[ಪುರುಹೂತ್]** ಬಹುಜನರಿಂದ ಪ್ರಶಂಸಿತನಾದ **[ಮಘವನ್]** ಬಹುಧನ ಸಂಪನ್ನ **[ಇಂದ್ರ]** ಸೂರ್ಯನಂತೆ ಪ್ರಕಾಶಮಾನನಾದವನೇ! ನೀನು **[ಏಕಃ]** **[ಸನ್]** ಯಾರ ಸಹಕಾರವಿಲ್ಲದೇ ಒಬ್ಬನೇ ಬಲಿಷ್ಠನಾಗಿದ್ದು **[ಅಭಯೇ]** ಭಯರಹಿತ ವ್ಯವಹಾರದಲ್ಲಿ **[ಶ್ರವೋಭಿಃ]** ಅನೇಕ ರೀತಿಯ ಶ್ರವಣಯೋಗ್ಯ ವಚನಗಳೊಂದಿಗೆ **[ದೃಢಂ]** ನಿಶ್ಚಯವಾಗಿಯೂ **[ಅವದಃ]** ನುಡಿಯುವವನಾಗು **[ಉತ್]** ಮತ್ತು ಸಹ **[ವೃತ್ರಹಾ]** **[ಚಿತ್]** ಸೂರ್ಯನೂ ಸಹ **[ಇಮೇ]** ಈ **[ಅಪಾರ]** ಮಿತಿಯಿಲ್ಲದ **[ರೋದಸೀ]** ಭೂಮಿ-ಅಂತರಿಕ್ಷಗಳಲ್ಲಿ ಪ್ರಾಪ್ತನಾಗುತ್ತಾನೋ ಹಾಗೆ ಪ್ರಾಪ್ತನಾಗಿ **[ಯತ್]** ಯಾವುದು **[ತೇ]** ನಿನ್ನ **[ಕಾಶೀಃ]** ನ್ಯಾಯ-ವಿನಯಾದಿ ಉತ್ತಮಗುಣಗಳಿಂದ ಪ್ರಕಾಶ **[ಇತ್]** ವನ್ನು **[ಸಂಭೃಣಾಃ]** ಸ್ವೀಕರಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜಪುರುಷರು ಪ್ರಜೆಗಳಲ್ಲಿರುವ ಉಪದ್ರವದಿಂದುಟಾದ ಭಯವನ್ನು ನಾಶಗೊಳಿಸಬೇಕು ಮತ್ತು ಸೂರ್ಯನಿಗೆ ಸದೃಶವಾಗಿ ನ್ಯಾಯ - ವಿದ್ಯೆಯ ಬೆಳಕು ಚೆಲ್ಲಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಸೂ ತ ಇಂದ್ರ ಪ್ರವತಾ ಹರಿಭ್ಯಾಂ ಪ್ರ ತೇ ವಜ್ರಃ ಪ್ರಮೃಣನ್ನೇತು ಶತ್ರೂನ್ ।**
**ಜಹಿ ಪ್ರತೀಚೋ ಅನೂಚಃ ಪರಾಚೋ ವಿಶ್ವಂ ಸತ್ಯಂ ಕೃಣುಹಿ ವಿಷ್ಟಮಸ್ತು ॥೬॥**

**ಪದಾರ್ಥ:-** [ಇಂದ್ರ] ಸೂರ್ಯನಂತೆ ಪ್ರಕಾಶಮಾನನೇ! [ಹರಿಭ್ಯಾಂ] ತರಬೇತಿ ಪಡೆದ ಕುದುರೆಗಳಿರುವ ರಥದಲ್ಲಿ [ಪ್ರವತಾ] ಉತ್ತಮ ಮಾರ್ಗದಲ್ಲಿ ಚಲಿಸುತ್ತ [ವಜ್ರಃ] ಕಿರಣಕ್ಕೆ ಸದೃಶವಾದ ಶಸ್ತ್ರಗಳಿಂದ [ಶತ್ರೂನ್] ಶತ್ರುಗಳನ್ನು [ಪ್ರಮೃಣನ್] ನಾಶಗೊಳಿಸುತ್ತ [ಪ್ರ ಏತು] ಬರುವವನಾಗು [ತೇ] ನಿನಗೆ ಜಯಲಭಿಸುತ್ತದೆ. [ಪ್ರತೀಚಃ] ಹಿಂಭಾಗದಲ್ಲಿರುವ [ಅನೂಚಃ] ಹತ್ತಿರದಲ್ಲಿರುವ [ಪರಾಚಃ] ದೂರದಲ್ಲಿರುವ ಶತ್ರುಗಳನ್ನು [ಪ್ರ, ಜಹಿ] ಸಂಹಾರ ಮಾಡು [ವಿಶ್ವಂ] ಸಂಪೂರ್ಣ [ಸತ್ಯಂ] ಸತ್ಯವನ್ನು [ಸುಕೃಣುಹಿ] ಉತ್ತಮ ರೀತಿಯಲ್ಲಿ ವೃದ್ಧಿಪಡಿಸು. ಅದರಿಂದ ನಿನಗೆ [ವಿಷ್ಟಂ] ವ್ಯಾಪಕತೆಯು [ಅಸ್ತು] ಪ್ರಾಪ್ತವಾಗಲಿ.

**ಭಾವಾರ್ಥ:-** ಯಾರು ದುರಾಚಾರವೆಸಗುವ ಮನುಷ್ಯರಾದಿಯಾಗಿ ಎಲ್ಲಾ ಪ್ರಾಣಿಗಳನ್ನೂ ನಿವಾರಣೆ ಮಾಡಿ ಸತ್ಯದ ಪ್ರಚಾರ ಮಾಡುವವರೋ ಅವರು ಸುಖ ಮತ್ತು ಆನಂದಗಳನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ಮೈ ಧಾಯುರದಧಾ ಮರ್ತ್ಯಾಯಾ-ಭಕ್ತಂ ಚಿದ್ಭಜತೇ ಗೇಹ್ಯ (ಅಂ)೧ ಸಃ ।**
**ಭದ್ರಾ ತ ಇಂದ್ರ ಸುಮತಿರ್ಘೃತಾಚೀ ಸಹಸ್ರದಾನಾ ಪುರುಹೂತ ರಾತಿಃ ॥೭॥**

**ಪದಾರ್ಥ:-** [ಪುರುಹೂತ] [ಇಂದ್ರ] ಸುಖದಾಯಕನಾದ ನೀನು [ಯಸ್ಮೈ] ಯಾರಿಗೆ [ಮರ್ತ್ಯಾಯ] ಮನುಷ್ಯನಿಗೆ [ಅಭಕ್ತಂ] ವಿಭಾಗರಹಿತವಾದ [ಗೇಹ್ಯಂ] ಮನೆ-ಮನೆಯಲ್ಲೂ ಪ್ರಾಪ್ತಿ ಇರುವ ಧನವನ್ನು [ಭಜತೇ] ಸೇವಿಸುವವನಾಗಿ [ಧಾಯುಃ] ಉತ್ತಮ ಪದಾರ್ಥಗಳ ಧಾರಕನಾಗಿ [ಚಿತ್] ಮತ್ತು [ಅದಾನಾ] ಸುಖದ ಧಾರಕನಾಗು. [ತೇ] ನಿನ್ನ [ಘೃತಾಚೀ] ಸುಖದಾಯಕ ರಾತ್ರಿಯಂತೆ [ಭದ್ರಾ] ಕಲ್ಯಾಣಕಾರಕ [ಸುಮತಿಃ] ಉತ್ತಮ ಬುದ್ಧಿಯು [ಸಹಸ್ರದಾನಾ] ಲೆಕ್ಕವಿಲ್ಲದಷ್ಟು ದಾನವು. [ರಾತಿಃ] ದಾನ ಸಂಬಂಧೀ ಕೆರೆಗಳು [ಸಃ] ಅವನು ಸ್ವೀಕರಿಸಲಿ.

**ಭಾವಾರ್ಥ:-** ಮನುಷ್ಯರು ತಮ್ಮ ತಂದೆ-ತಾತರ ಸಂಪತ್ತನ್ನು ವಿಭಾಗ ಮಾಡಿಕೊಳ್ಳದಿದ್ದರೆ ಅವರ ರಕ್ಷಣೆ, ಸೇವೆಯನ್ನು ಮಾಡಬೇಕು. ಹಾಗೂ ಪರಸ್ಪರರಲ್ಲಿನ ದ್ವೇಷ ಭಾವನೆಯನ್ನು ತ್ಯಾಗ ಮಾಡಿ ಗುಣ ಗ್ರಹಣ ಮಾಡಿ ಕಲ್ಯಾಣಕ್ಕೆ ಪಾತ್ರರಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಹದಾನುಂ ಪುರುಹೂತ ಕ್ಷಿಯಂತ-ಮಹಸ್ತಮಿಂದ್ರ ಸಂಪಿಣಕ್ಕುಣಾರುಮ್ ।**
**ಅಭಿ ವೃತ್ರಂ ವರ್ಧಮಾನಂ ಪಿಯಾರು-ಮಪಾದಮಿಂದ್ರ ತವಸಾ ಜಘಂಥ ॥೮॥**

**ಪದಾರ್ಥ:-** [ಪುರುಹೂತ] ಬಹುಜನರಿಂದ ಪ್ರಶಂಸಾರ್ಹ ಯಜ್ಞ ಮಾಡುವ [ಇಂದ್ರ] ಸೂರ್ಯನಂತೆ ತೇಜಸ್ವಿಯಾದವನೇ! [ಸಹದಾನುಂ] ದಾನ ಸಹಿತವಾಗಿ [ಕ್ಷಿಯಂತಂ] ನೆಲೆಸಿದವನಾದ [ಅಹಸ್ತಂ] ವಿದ್ಯಮಾನವಲ್ಲದ

[ಕುಣಾರುಂ] ಶಬ್ಧ ಮಾಡುತ್ತಿರುವ [ವರ್ಧಮಾನಂ] ವೃದ್ಧಿಯಾಗುತ್ತಿರುವ [ಪಿಯಾರುಂ] ಪಾನ ಮಾಡಲಾದ [ಅಪಾದಂ] ಪಾದಹೀನವಾದ [ವೃತ್ರಂ] ಮೇಘವನ್ನು [ಅಭಿ] ಎದುರಾಗಿ ಭೇದಿಸುವಂತೆ ಶತ್ರುಗಳನ್ನು ನೀನು [ಸಂ, ಪಿಣಕ್] ನಾಶಗೊಳಿಸು. [ಇಂದ್ರ] ದುಷ್ಟರನ್ನು ಸೀಳುವ ನೀನು [ತವಸಾ] ಬಲದಿಂದ ದುಷ್ಟಪುರುಷರನ್ನು [ಜಘಂಥ] ನಾಶಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು **ಹೇಗೆ ಮೋಡಗಳನ್ನಾಕರ್ಷಿಸಿ** ಮಳೆಗರೆಯುವುದರಿಂದ ಸಮಗ್ರ ಜಗತ್ತಿನ ಪಾಲನೆ ಮಾಡುತ್ತಾನೋ ಹಾಗೆ **ದುಷ್ಟರನ್ನು ಸಂಹಾರ** ಮಾಡಿ ಶ್ರೇಷ್ಠರನ್ನು ರಕ್ಷಿಸಿ ಕಾಪಾಡುವುದರಿಂದ ರಾಜನು ತನ್ನ ಎಲ್ಲಾ ಪ್ರಜೆಗಳ **ಪಾಲನೆ ಮಾಡಬೇಕು.**

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಿ ಸಾಮನಾಮಿಷಿರಾಮಿಂದ್ರ ಭೂಮಿಂ ಮಹೀಮಪಾರಾಂ ಸದನೇ ಸಸತ್ಥ ।**
**ಅಸ್ತಭ್ನಾದ್ದ್ಯಾಂ ವೃಷಭೋ ಅಂತರಿಕ್ಷ-ಮರ್ಷನ್ತ್ವಾಪಸ್ತ್ವಯೇಹ ಪ್ರಸೂತಾಃ ॥೯॥**

**ಪದಾರ್ಥ:-** [ಇಂದ್ರ] ಸೂರ್ಯನಂತೆ **ಪ್ರಕಾಶಮಾನನಾದ** ರಾಜನೇ! ನೀನು [ವೃಷಭಃ] ವೃಷ್ಟಿಕಾರಕ ಸೂರ್ಯನು [ದ್ಯಾಂ] ಅಂತರಿಕ್ಷವನ್ನು [ಅಸ್ತಭ್ನಾತ್] ಹೇಗೆ ಪುಷ್ಟನಾಗಿ ಧಾರಣ ಮಾಡುತ್ತಾನೋ ಹಾಗೆ [ಸಾಮನಾಂ] ಉತ್ತಮ ಉಪಮೆಯೊಂದಿಗೆ [ಈಷಿರಾಂ] ಬಹು ಪದಾರ್ಥಗಳನ್ನು ಪ್ರಾಪ್ತಿಗೊಳಿಸುವ [ಮಹೀಂ] ಮಹತ್ಪರಿಣಾಮಯುಕ್ತವಾದ [ಅಪಾರಾಂ] ಮಿತಿಯಿಲ್ಲದ [ಭೂಮಿಂ] ಭೂಮಿಯನ್ನು ಪಡೆದವನಾಗಿ [ಇಹ] [ಸದನೇ] ಈ ಸ್ಥಾನದಲ್ಲಿ [ನಿ, ಸಸತ್ಥ] ಆಸೀನನಾಗು [ತ್ವಯಾ] ನಿನ್ನಿಂದ [ಪ್ರಸೂತಾಃ] ಪ್ರೇರಣೆ ಪಡೆದ [ಆಪಃ] ಜಲವು [ಅಂತರಿಕ್ಷಂ] ಆಕಾಶವನ್ನು [ವರ್ಷಂತು] ಮಳೆಗರೆಯುವಂತೆ ಮಾಡಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ನಿಯತವಾಗಿ ಬೆಳಕು ಮತ್ತು ಭೂಮಿಗಳನ್ನು ಧಾರಣ ಮಾಡಿರುವನೋ ಹಾಗೆ ರಾಜನು ನ್ಯಾಯವನ್ನು ರಾಜ್ಯವನ್ನು ಧಾರಣ ಮಾಡಬೇಕು. ಎಲ್ಲಾ ಕಾಲದಲ್ಲೂ ಪ್ರಜೆಗಳ ಬಲವೃದ್ಧಿ ಮಾಡಬೇಕು.

**ಪುನಃ ಅದೇ** ವಿಷಯವನ್ನು ಹೇಳಲಾಗುತ್ತದೆ.

**ಅಲಾತೃಣೋ ವಲ ಇಂದ್ರ ವ್ರಜೋ ಗೋಃ ಪುರಾ ಹಂತೋರ್ಭಯಮಾನೋ ವ್ಯಾರ ।**
**ಸುಗಾನ್ ಪಥೋ ಅಕೃಣೋನ್ನಿರಜೇ ಗಾಃ ಪ್ರಾವನ್ ವಾಣೀಃ ಪುರುಹೂತಂ ಧಮಂತೀಃ ॥೧೦॥**

**ಪದಾರ್ಥ:-** [ಇಂದ್ರ] ಐಶ್ವರ್ಯದಾಯಕನೇ! [ಅಲಾತೃಣಃ] ಸಮಗ್ರ ಜಗತ್ತನ್ನೇ ಪ್ರಳಯಗೊಳಿಸುವವನು. [ವಲಃ] ಬಲಿಷ್ಠನು [ವ್ರಜಃ] ಗತಿಶೀಲನು [ಭಯಮಾನಃ] ಭಯಭೀತನಾದ ನೀನು [ಸುಗಾನ್] ಸುಗಮವಾದ [ಪಥಃ] ಮಾರ್ಗವನ್ನು [ವಿ, ಆರ] ವಿಶೇಷ ರೀತಿಯಿಂದ ಪಡೆಯುವವನಾಗು. [ಪುರಾ] ಮೊದಲು [ಗೋಃ] ಭೂಮಿಯ [ಹಂತೋಃ] ನಾಶಮಾಡಲು [ಅಕೃಣೋತ್] ಯತ್ನ ಮಾಡು [ಪುರುಹೂತಂ] ಬಹುಜನರಿಂದ ಪ್ರಶಂಸೆಗೊಳಗಾದ [ಧಮಂತೀಃ] ಶಬ್ದಮಾಡುತ್ತಲಿರುವ [ವಾಣೀಃ] ಸುಶಿಕ್ಷಿತವಾದ [ಗಾಃ] ನುಡಿಯನ್ನು [ಪ್ರ, ಅವನ್] ಉತ್ತಮರೀತಿಯಲ್ಲಿ ರಕ್ಷಣೆ ಮಾಡುತ್ತದೆ. ಆ ನುಡಿಗಟ್ಟುಗಳನ್ನು [ನಿರಜೇ] ಅತಿಶಯಚಲನೆಗಾಗಿ ಪಡೆದುಕೊ.

**ಭಾವಾರ್ಥ:-** ಮನುಷ್ಯರು ಯಾವಾಗಲೂ ಅಧರ್ಮಾಚರಣೆಗೆ ಹೆದರಿ ಧರ್ಮಾಚರಣೆಯಲ್ಲಿ ಪ್ರವೃತ್ತರಾಗಬೇಕು. ದುರ್ವ್ಯಸನಗಳನ್ನು ತ್ಯಜಿಸಿ ಧರ್ಮಮಾರ್ಗದಲ್ಲಿ ನಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏಕೋ ದ್ವೇ ವಸುಮತೀ ಸಮೀಚೀ ಇಂದ್ರ ಆ ಪಪ್ರೌ ಪೃಥಿವೀಮುತ ದ್ಯಾಮ್ ।**
**ಉತಾಂತರಿಕ್ಷಾದಭಿ ನಃ ಸಮೀಕ ಇಷೋ ರಥೀಃ ಸಯುಜಃ ಶೂರ ವಾಜಾನ್ ॥೧೧॥**

**ಪದಾರ್ಥ:-** **[ಶೂರ]** ದುಷ್ಟಜನರ ಸಂಹಾರಕನೇ! **[ಏಕಃ]** ಅನ್ಯರ ಸಹಾಯರಹಿತ ಏಕಾಕೀ **[ರಥೀಃ]** ರಥವಾಹನದೊಂದಿಗೆ **[ಇಂದ್ರಃ]** **[ವಿದ್ಯುತ್]** **[ದ್ವೇ]** ಎರಡು **[ಸಮೀಚೀ]** ಸಮಾನರೀತಿಯಲ್ಲಿರುವ **[ವಸುಮತೀ]** ವಿಪುಲ ಧನವಿರುವ **[ಪೃಥಿವೀಂ]** ಅಂತರಿಕ್ಷ ಅಥವಾ ಭೂಮಿಯನ್ನು **[ಉತ]** ಮತ್ತು **[ದ್ಯಾಂ]** ಬೆಳಕನ್ನು **[ಆ, ಪಪ್ರೌ]** ಪೂರ್ಣಗೊಳಿಸುತ್ತ **[ಸಮೀಕೆ]** ಸಮೀಪದಲ್ಲಿ **[ಅಂತರಿಕ್ಷಾತ್]** ಮಧ್ಯದಲ್ಲಿರುವ ರಿಕ್ತಸ್ಥಳದಿಂದ **[ಸಯುಜಃ]** ಸಮಾನವಾಗಿ ಪರಸ್ಪರರು ಸೇರಿರುವ ಗೆಳೆಯರು **[ನಃ]** ನಮಗೆ **[ಇಷಃ]** ಇಚ್ಛೆಗಳನ್ನು **[ಉತ]** ಮತ್ತು **[ವಾಜಾನ್]** ಅನ್ನಾದಿ ವಸ್ತುಗಳನ್ನು **[ಅಭಿ]** ಎಲ್ಲಾ ಕಡೆಗಳಿಂದ ಪರಿಪೂರ್ಣಗೊಳಿಸುವರೋ ಅವರು ಸತ್ಕಾರ ಯೋಗ್ಯರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಭೂಮಿಗೆ ಸದೃಶವಾಗಿ ಪ್ರಜೆಗಳ ಧಾರಣೆ ಮಾಡಲು ಮತ್ತು ಮಿಂಚಿಗೆ ಸದೃಶವಾಗಿ ಐಶ್ವರ್ಯ ದಾನಮಾಡಲು ಸಮರ್ಥರಾದ ಪ್ರಜೆಗಳಿರುವರೋ ಅಂತಹ ರಾಜನು ಸಂಪೂರ್ಣ ರಾಜ್ಯದ ರಕ್ಷಣೆ ಮಾಡಲು ಸಮರ್ಥರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಿಶಃ ಸೂರ್ಯೋ ನ ಮಿನಾತಿ ಪ್ರದಿಷ್ಟಾ ದಿವೇದಿವೇ ಹರ್ಯಶ್ವಪ್ರಸೂತಾಃ ।**
**ಸಂ ಯದಾನಳಧ್ವನ ಆದಿದಶ್ವೈ-ರ್ವಿಮೋಚನಂ ಕೃಣುತೇ ತತ್ತ್ವಸ್ಯ ॥೧೨॥**

**ಪದಾರ್ಥ:-** **[ಸೂರ್ಯಃ]** **[ನ]** ಸೂರ್ಯನಿಗೆ ತುಲ್ಯನಾದ **[ದಿನೇ ದಿನೇ]** ಪ್ರತಿದಿನವೂ **[ಹರ್ಯಶ್ವಪ್ರಸೂತಾಃ]** ಹರಣಶೀಲಕಿರಣಗಳಿಂದ ಉತ್ಪನ್ನವಾದ **[ಪ್ರದಿಷ್ಟಾಃ]** ಸೂಚನೆಗಳಿಂದ ತೋರಿಸಲಾದ **[ದಿಶಃ]** ದಿಕ್ಕುಗಳನ್ನು **[ಮಿನಾತಿ]** ಬೇರೆ-ಬೇರೆ ಮಾಡುತ್ತಾನೆ. **[ಆತ್]** ಆನಂತರ **[ಯತ್]** ಯಾವನು **[ಅಶ್ವೈಃ]** ಕುದುರೆಗಳಿಂದ **[ಅಧ್ವನಃ]** ಮಾರ್ಗಗಳನ್ನು **[ಸಂ]** **[ಆನಟ್]** ವ್ಯಾಪ್ತಕನಾಗುತ್ತಾನೆ. ಹಾಗೂ **[ವಿಮೋಚನಂ]** ತ್ಯಾಗವನ್ನು **[ಕೃಣುತೇ]** ಮಾಡುತ್ತಾನೆ. **[ತತ್]** **[ಇತ್]** ಅವನೇ **[ತು]** ಆದರೂ **[ಅಸ್ಯ]** ಇದರ ಭೂಷಣನಾಗಿರುತ್ತಾನೆ ಎಂದು ತಿಳಿಯಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಪುರುಷನು ಅವಿದ್ಯಾ, ದುಷ್ಟಸಂಸ್ಕಾರ ಮತ್ತು ದುಃಖಗಳನ್ನು ತ್ಯಜಿಸಿ ಸೂರ್ಯನಂತೆ ಅಂಧಕಾರವನ್ನು ದೂರಮಾಡುತ್ತಾನೋ, ಅನ್ಯಾಯವನ್ನು ದೂರ ಮಾಡಿ ಎಲ್ಲಾ ದಿಕ್ಕುಗಳಲ್ಲೂ ಕೀರ್ತಿಯನ್ನು ಹರಡುತ್ತಾನೋ ಅದೇ ಇವನ ಕರ್ತವ್ಯ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಿದೃಕ್ಷಂತ ಉಷಸೋ ಯಾಮನ್ನಕ್ತೋ-ರ್ವಿವಸ್ವತ್ಯಾ ಮಹಿ ಚಿತ್ರಮನೀಕಮ್ ।**
**ವಿಶ್ವೇ ಜಾನಂತಿ ಮಹಿನಾ ಯದಾಗಾದಿಂದ್ರಸ್ಯ ಕರ್ಮ ಸುಕೃತಾ ಪುರೂಣಿ ॥೧೩॥**

**ಪದಾರ್ಥ:-** **[ಯತ್]** ಯಾವನು **[ವಿಶ್ವೇ]** ಸಂಪೂರ್ಣವಾಗಿ **[ವಿವಸ್ವತ್ಯಾಃ]** ಸೂರ್ಯ ಮಂಡಲದ ನಿಮಿತ್ತ ವ್ಯವಹರಿಸುವವಳಾದ **[ಉಷಸಃ]** ಉಷಃತ್ಕಾಲದಲ್ಲಿ **[ಅಕ್ತೋಃ]** ರಾತ್ರಿಯ **[ಯಾಮನ್]** ಮಾರ್ಗದಲ್ಲಿ **[ದಿದೃಕ್ಷಂತೇ]** ದರ್ಶನ ಮಾಡುವ ಇಚ್ಛೆ ಮಾಡುವವಳೋ **[ಮಹಿನಾ]** ಮಹಿಮೆಯಿಂದ **[ಮಹಿ]** ಮಹತ್ತರವಾದ **[ಚಿತ್ರಂ]** ಅದ್ಭುತವಾದ **[ಅನೀಕಂ]** ಸೇನೆಯನ್ನು **[ಜಾನಂತಿ]** ತಿಳಿದುಕೊಳ್ಳುತ್ತಾಳೆ. **[ಇಂದ್ರಸ್ಯ]** ಮಿಂಚಿನ **[ಪುರೂಣಿ]** ಬಹಳಷ್ಟು **[ಸುಕೃತಾ]** ಉತ್ತಮ ರೀತಿಯಿಂದ ಮಾಡಲಾದ **[ಕರ್ಮ]** ಕೆಲಸಗಳನ್ನು ನೋಡಲು ಬಯಸುತ್ತಾರೋ ಅವರನ್ನು **[ಆ, ಅಗಾತ್]** ಪಡೆಯುವರೋ ಅವರು ಸುಖಿಗಳಾಗುತ್ತಾರೆ.

**ಭಾವಾರ್ಥ:-** ಯಾರು ಪರೀಕ್ಷಕರು ಬೆಳಗಿನಲ್ಲೆದ್ದು ಪ್ರಯತ್ನ ಪೂರ್ವಕ ವ್ಯವಹಾರಗಳನ್ನು ಸಾಧಿಸಿಕೊಳ್ಳುತ್ತಾರೋ ಅವರು ಈ ಸಂಸಾರದಲ್ಲಿ ಜ್ಞಾನವಿಶೇಷದಿಂದ ಪ್ರತಿಷ್ಠೆಯನ್ನು ಪಡೆದು ಬಲವಂತರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹಿ ಜ್ಯೋತಿರ್ನಿಹಿತಂ ವಕ್ಷಣಾ-ಸ್ವಾಮಾ ಪಕ್ವಂ ಚರತಿ ಬಿಭ್ರತೀ ಗೌಃ ।**

**ವಿಶ್ವಂ ಸ್ವಾದ್ಮ ಸಂಭೃತಮುಸ್ರಿಯಾಯಾಂ ಯತ್ಸೀಮಿಂದ್ರೋ ಅದಧಾದ್ಭೋಜನಾಯ ॥೧೪॥**

**ಪದಾರ್ಥ:-** **[ಯತ್]** ಯಾವುದು **[ಗೌಃ]** ಚಲಿಸುವವಳು **[ವಕ್ಷಣಾಸು]** ಹರಿಯುವ ನದಿಗಳಲ್ಲಿ **[ಆಮಾ]** ಅಪಕ್ವ ಮತ್ತು **[ಪಕ್ವಂ]** ಪಕ್ವವಾದ ಪದಾರ್ಥಗಳನ್ನು **[ಬಿಭ್ರತೀ]** ಧರಿಸುವವಳಾಗಿ **[ಚರತಿ]** ಚಲಿಸುತ್ತಾಳೋ **[ಮಹಿ]** ಈ ಸಂಸಾರದಲ್ಲಿ ಹಿರಿದಾದ **[ನಿಹಿತಂ]** ಸ್ಥಿರವಾದ **[ಜ್ಯೋತಿಃ]** ತೇಜಸ್ಸು **[ಉಸ್ರಿಯಾಯಾಂ]** ಭೂಮಿಯಲ್ಲಿ **[ವಿಶ್ವಂ]** ಸಂಪೂರ್ಣವಾಗಿ **[ಸ್ವಾದ್ಮ]** ಅತಿ ಸ್ವಾದಿಷ್ಟವಾದ **[ಸಂಭೃತಂ]** ಉತ್ತಮ ರೀತಿಯಲ್ಲಿ ಧಾರಣ-ಪೋಷಣ ಮಾಡಲಾದ ಪದಾರ್ಥಗಳನ್ನು ಪಡೆದುಕೊಳ್ಳುತ್ತಾಳೋ ಅವಳು **[ಇಂದ್ರ]** ಮಿಂಚಿನಂತೆ **[ಭೋಜನಾಯ]** ಪಾಲನೆ ಮಾಡಲು ಅಥವಾ ಬೋಜನ ಮಾಡಲು ಎಲ್ಲರನ್ನೂ **[ಸೀಂ]** ಎಲ್ಲಾ ಕಡೆಗಳಿಂದ **[ಅದಧಾತ್]** ಧಾರಣಮಾಡುತ್ತಾಳೆಂಬುದನ್ನು ಎಲ್ಲರೂ ತಿಳಿಯಬೇಕು.

**ಭಾವಾರ್ಥ:-** ಯಾವ ಮಿಂಚು ಭೂಮಿ, ಜಲ, ವಾಯು ಮತ್ತು ಅಂತರಿಕ್ಷ ಹಾಗೂ ಅವುಗಳ ವಿಕಾರವಾದ ಪದಾರ್ಥಗಳಲ್ಲಿ ವ್ಯಾಪಕವಾಗಿರುತ್ತದೆಯೋ ಮತ್ತು ಎಲ್ಲರನ್ನೂ ಧಾರಣೆ ಮಾಡಿ ಪೋಷಣೆ ಮಾಡುತ್ತದೆಯೋ ಅದರ ವಿದ್ಯೆಯನ್ನು ಎಲ್ಲರೂ ಸ್ವೀಕರಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ದೃಹ್ಯ ಯಾಮಕೋಶಾ ಅಭೂವನ್ ಯಜ್ಞಾಯ ಶಿಕ್ಷ ಗೃಣತೇ ಸಖಿಭ್ಯಃ ।**

**ದುರ್ಮಾಯವೋ ದುರೇವಾ ಮರ್ತ್ಯಾಸೋ ನಿಷಂಗಿಣೋ ರಿಪವೋ ಹಂತ್ವಾಸಃ ॥೧೫॥**

**ಪದಾರ್ಥ:-** **[ಇಂದ್ರ]** ಐಶ್ವರ್ಯ ಮತ್ತು ವಿದ್ಯೆಗಳನ್ನು ಕೊಡುವವನೇ! **[ಯಾಮಕೋಶಾಃ]** ದಾರಿಗಳನ್ನು ತಡೆಯುವರು **[ಅಭೂವನ್]** ಯಾರಾಗುವರೋ ಅವರು **[ಸಖಿಭ್ಯಃ]** ಸ್ನೇಹಿತೆಯರಿಗಾಗಿ ಮತ್ತು **[ಯಜ್ಞಾಯ]** ಸಂಗತಿಕರಣದಿಂದುಂಟಾಗುವ ವಿಶೇಷ ಜ್ಞಾನಕ್ಕಾಗಿ ಮತ್ತು **[ಗೃಣತೇ]** ಸ್ತುತಿ ಮಾಡುವವನಿಗಾಗಿ ನೀನು **[ಶಿಕ್ಷ]** ವಿದ್ಯಾದಾನ ಮಾಡು. **[ದುರ್ಮಾಯವಃ]** ಕೆಟ್ಟ ರೀತಿಯಲ್ಲಿ ಎಸೆಯುವುದು **[ದುರೇವಾಃ]** ದುಷ್ಟಕರ್ಮಗಳಿಗೆ ಕಾರಣವಾದದ್ದು **[ಹಂತ್ವಾಸಃ]** ಸಾಯಿಸಲು ಯೋಗ್ಯವಾದ **[ನಿಷಂಗಿಣಃ]** ಬಹುವಿದ್ಧ ಶಸ್ತ್ರಗಳನ್ನು ಪಡೆದವರು **[ರಿಪವಃ]** ಶತ್ರುಗಳು **[ಮರ್ತ್ಯಾಸಃ]** ಮನುಷ್ಯರೋ ಅವರ ನಾಶಮಾಡಿ **[ದೃಹ್ಯ]** ವೃದ್ಧಿ ಹೊಂದು.

**ಭಾವಾರ್ಥ:-** ಮನುಷ್ಯರು ಯಾವಾಗಲೂ ಶ್ರೇಷ್ಠ ಪುರುಷರ ರಕ್ಷಣೆ, ವಿದ್ಯೆ ಮತ್ತು ಉತ್ತಮ ಶಿಕ್ಷಣದ ದಾನ ಹಾಗೂ ದುರಾಚಾರಿಗಳ ನಾಶಮಾಡಿ ಸದಾ ಕಾಲ ಏಳಿಗೆಯನ್ನು ಪಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಂ ಘೋಷಃ ಶೃಣ್ವೇಽವಮೈರಮಿತ್ರೈ-ರ್ಜಹೀ ನ್ಯೇಷ್ವಶನಿಂ ತಪಿಷ್ಠಾಮ್ ।**
**ವೃಶ್ಚೇಮಧಸ್ತಾದ್ವಿ ರುಜಾ ಸಹಸ್ವ ಜಹಿ ರಕ್ಷೋ ಮಘವನ್ ರಂಧಯಸ್ವ ॥೧೬॥**

**ಪದಾರ್ಥ:-** **[ಮಘವನ್]** ಬಹುಧನ ಸಂಪನ್ನನಾದ ನಾನು **[ಅವಮಃ]** ನೀಚರಾದ **[ಅಮಿತ್ರೈಃ]** ಶತ್ರುಗಳೊಂದಿಗೆ **[ಘೋಷಃ]** ಕಟುವಾದ ವಾಣಿಯನ್ನು **[ಸಂ]** **[ಶೃಣ್ವೇ]** ಬಹುವಾಗಿ ಕೇಳುವೆನು. ಆದ್ದರಿಂದ ಅವರನ್ನು ನೀನು **[ಜಹಿ]** ಸಾಯಿಸು ಮತ್ತು **[ಏಷು]** ಈ ಶತ್ರುಗಳಲ್ಲಿ **[ತಪಿಷ್ಠಾಂ]** ಅತಿಶಯ ತಾಪ ಉಂಟು ಮಾಡುತ್ತ **[ಅಶನಿಂ]** ವಜ್ರಾಯುಧವನ್ನೆಸೆ. ಇವರನ್ನು **[ನಿ, ವೃಶ್ಚ]** ಸಮಗ್ರ ನಾಶಮಾಡು ಮತ್ತು **[ಅಧಸ್ತಾತ್]** ಇವರನ್ನು ಅಧಃಪತನಗೊಳಿಸು. **[ಈಂ]** ನಿರಂತರವಾಗಿ **[ವಿ, ರುಜ]** ರೋಗಗ್ರಸ್ತರನ್ನಾಗಿ ಮಾಡು. **[ಸಹಸ್ವ]** ದುಃಖವನ್ನು ಸಹಿಸು. **[ರಕ್ಷಃ]** ರಾಕ್ಷಸ ಸ್ವಭಾವದವರನ್ನು **[ಜಹಿ]** ನಾಶ ಮಾಡು **[ರಂಧಯಸ್ವ]** ಪಾಪಿಗಳನ್ನು ಸದೆಬಡಿ.

**ಭಾವಾರ್ಥ:-** ವೀರ ಪುರುಷರೇ! ಶತ್ರುಗಳ ಮಾತುಗಳನ್ನು ಕೇಳಿಸಿಕೊಳ್ಳಿರಿ. ಅವರನ್ನು ಎದುರಿಸಿ ಅವರ ಮೇಲೆ ಶಸ್ತ್ರ ಪ್ರಹಾರ ಮಾಡಿರಿ. ಅವರನ್ನು ಛಿದ್ರ-ವಿಚ್ಛಿದ್ರಗೊಳಿಸಿರಿ. ಇದರಿಂದ ನೀವು ಸುಸಂಪನ್ನರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉದ್ವೃಹ ರಕ್ಷಃ ಸಹಮೂಲಮಿಂದ್ರ ವೃಶ್ಚಾ ಮಧ್ಯಂ ಪ್ರತ್ಯಗ್ರಂ ಶೃಣೀಹಿ ।**
**ಆ ಕೀವತಃ ಸಲಲೂಕಂ ಚಕರ್ಥ ಬ್ರಹ್ಮದ್ವಿಷೇ ತಪುಷಿಂ ಹೇತಿಮಸ್ಯ ॥೧೭॥**

**ಪದಾರ್ಥ:-** **[ಇಂದ್ರ]** ದುಷ್ಟಸಂಹಾರಕನೇ! ನೀನು **[ಉತ್]** ಉತ್ತಮತನದೊಂದಿಗೆ **[ವೃಹ]** ವೃದ್ಧಿ ಹೊಂದು **[ಸಹಮೂಲಂ]** ಬೇರು ಸಹಿತ **[ರಕ್ಷಃ]** ರಾಕ್ಷಸ ಸ್ವಭಾವದವರನ್ನು **[ವೃಶ್ಚ]** ಕತ್ತರಿಸಿ ಹಾಕು. **[ಅಸ್ಯ]** ಇವನ ಮೇಲೆ **[ತಪುಷಿಂ]** ತಾಪಯುಕ್ತ **[ಹೇತಿಂ]** ಆಯುಧವನ್ನೆಸೆ. **[ಮಧ್ಯಂ]** ಮಧ್ಯದಲ್ಲುಂಟಾಗುವ **[ಅಗ್ರಂ]** **[ಪ್ರತಿ]** ಅಗ್ರಭಾಗವನ್ನು **[ಶ್ರೀಣೀಹಿ]** ನಾಶಗೊಳಿಸು ಮತ್ತು **[ಬ್ರಹ್ಮದ್ವಿಷೇ]** ವೇದ, ಬ್ರಹ್ಮವನ್ನು ದ್ವೇಷಿಸುವವನಿಗೆ **[ಸಲಲೂಕಂ]** ಉತ್ತಮ ಲೋಭಿಯನ್ನು **[ಕೀವತಃ]** ಕುತ್ಸಿತರನ್ನೂ **[ಆ, ಚಕರ್ಥ]** ಎಲ್ಲ ರೀತಿಯಿಂದ ಉಚ್ಚಾಟಿಸುವವನಾಗು.

**ಭಾವಾರ್ಥ:-** ಮನುಷ್ಯರು ಯಾವಾಗಲೂ ಧರ್ಮಾತ್ಮ ಪುರುಷರ ಮೇಲೆ-ಶಸ್ತ್ರಾಸ್ತ್ರಗಳ ಪ್ರಯೋಗ ಮಾಡಬಾರದು. ದುಷ್ಟರ ಮೇಲೆ ಶತ್ರುಗಳ ಮೇಲೆ ಶಸ್ತ್ರ ಪ್ರಯೋಗ ಮಾಡದೆಯೂ ಇರಬಾರದು. ಹೀಗೆ ಮಾಡಿದರೆ ಎಲ್ಲಾ ರೀತಿಯಿಂದಲೂ ಅಭಿವೃದ್ಧಿಯಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ವಸ್ತಯೇ ವಾಜಿಭಿಶ್ಚ ಪ್ರಣೇತಃ ಸಂ ಯನ್ಮಹೀರಿಷ ಆಸತ್ಸಿ ಪೂರ್ವೀಃ ।**
**ರಾಯೋ ವಂತಾರೋ ಬೃಹತಃ ಸ್ಯಾಮಾ-ಸ್ಮೇ ಅಸ್ತು ಭಗ ಇಂದ್ರ ಪ್ರಜಾವಾನ್ ॥೧೮॥**

**ಪದಾರ್ಥ:-** **[ಪ್ರಣೇತಃ]** ಸತ್ಯಾಸತ್ಯತೆಗಳನ್ನು ನಿಶ್ಚಯಿಸುವ **[ಇಂದ್ರ]** ಐಶ್ವರ್ಯವಂತನೇ! **[ಯತ್]** ಯಾವ ನೀನು **[ವಾಜಿಭಿಃ]** ಕುದುರೆಗಳಿಗೆ ಸದೃಶವಾದ ವೇಗ ಯುಕ್ತ ಅಗ್ನ್ಯಾದಿ ಪದಾರ್ಥಗಳೊಂದಿಗೆ ಹಾಗೂ ಸಾಧನಗಳೊಂದಿಗೆ **[ಪೂರ್ವಿಃ]** ಪೂರ್ವಜರಿಂದ ಪ್ರಾಪ್ತವಾದ **[ಮಹೀಃ]** ಮಹತ್ತರವಾದ **[ಇಷಃ]** ಇಚ್ಛೆಗಳಿಂದ **[ಸಂ]** **[ಆ, ಸತ್ಸಿ]** ಎಲ್ಲ ರೀತಿಯಿಂದಲೂ ಉಪಸ್ಥಿತನಾಗುವೆ. **[ಬೃಹತಃ]** ಹಿಂದಾದ **[ವಂತಾರಃ]** ವಿಭಾಗಕಾರಕ **[ರಾಯಃ]** ಧನವಿದೆಯೋ ಅದನ್ನು **[ಅಸ್ಮೆ]** ನಮ್ಮ **[ಸ್ವಸ್ತಯೇ]** ಸುಖಕ್ಕಾಗಿ **[ಅಸ್ತು]** ಇರಲಿ. **[ಪ್ರಜಾವಾನ್]** ಬಹು ಪ್ರಜೆಗಳಿಂದೊಡಗೂಡಿದ **[ಭಗಃ]** ಐಶ್ವರ್ಯವನ್ನು ಪಡೆದು ನಾವು ಸುಖಿಗಳು **[ಸ್ಯಾಮ]** ಆಗೋಣ.

**ಭಾವಾರ್ಥ:-** ಯಾರು ಸುಖ ಪಡೆಯಲು ಬಹುವಿಧ ಸಾಧನಗಳನ್ನು ಸಂಗ್ರಹಿಸಿಕೊಂಡಿರುತ್ತಾರೋ ಅವರು ಐಶ್ವರ್ಯವಂತರಾಗಿ ಆನಂದವನ್ನನುಭವಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಮ್ ॥೧೯॥**

**ಪದಾರ್ಥ:-** **[ವಸೂನಾಂ]** ಸಂಪತ್ತುಗಳ **[ವಸುಪತೇ]** ಧನಪತಿಯಾದ **[ಇಂದ್ರ]** ಸುಖದಾಯಕನೇ! **[ದೇಷ್ಣಸ್ಯ]** ದಾನಿಯಾದ **[ತೇ]** ನಿನ್ನ **[ಪ್ರರೇಕೇ]** ಸಂಶಯಾತ್ಮಕ ವ್ಯವಹಾರದಲ್ಲಿ **[ನಿ]** **[ಧೀಮಹಿ]** ನಾವು ಧ್ಯಾನ ಮಾಡುತ್ತೇವೆಯೋ ಅಂತಹ ನೀನು **[ನಃ]** ನಮಗೆ **[ದ್ಯುಮಂತಂ]** ಉತ್ತಮವಾಗಿ ಬೆಳಗುವಂತಹ **[ಭಗಂ]** ಸೇವನಯೋಗ್ಯ ಐಶ್ವರ್ಯವನ್ನು **[ಆ, ಭರ]** ಎಲ್ಲಾ ರೀತಿಯಿಂದಲೂ ಪ್ರಾಪ್ತಿಗೊಳಿಸು. ಯಾವುದು **[ಅಸ್ಮೆ]** ನಮಗೆ **[ಕಾಮಃ]** ಇಚ್ಛೆಯನ್ನು **[ಊರ್ವ ಇವ]** ಇಂಧನ ಸಂಯುಕ್ತ ಅಗ್ನಿಯಂತೆ **[ಪಪ್ರಥೇ]** ವೃದ್ಧಿಗೊಳಿಸಬಹುದು. **[ತಂ]** ಅದನ್ನು **[ಆ, ಪೃಣ]** ಪೂರ್ಣಗೊಳಿಸು.

**ಭಾವಾರ್ಥ:-** ಪರರ ಉಪಕಾರಕ್ಕಾಗಿ ಯಾವನು ತನ್ನ ಸಕಲ ವಿಧ ಸಂಪತ್ತನ್ನು ವಿನಿಯೋಗಿಸುತ್ತಾನೋ ನುಡಿದಂತೆ ನಡೆಯುತ್ತಾನೋ, ಅವನೇ ಮನುಷ್ಯನೆನಿಸಿಕೊಳ್ಳುತ್ತಾನೆ. ಇದರಲ್ಲಿ ಯಾವುದೇ ಸಂಶಯವಿರುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಂ ಕಾಮಂ ಮಂದಯಾ ಗೋಭಿರಶ್ವೈ-ಶ್ಚಂದ್ರವತಾ ರಾಧಸಾ ಪಪ್ರಥಶ್ಚ ।**
**ಸ್ವರ್ಯವೋ ಮತಿಭಿಸ್ತುಭ್ಯಂ ವಿಪ್ರಾ ಇಂದ್ರಾಯ ವಾಹಃ ಕುಶಿಕಾಸೋ ಅಕ್ರನ್ ॥೨೦॥**

**ಪದಾರ್ಥ:-** **[ಗೋಭಿಃ]** ಗೋವುಗಳೊಂದಿಗೆ **[ಅಶ್ವೈಃ]** ಕುದುರೆಯು **[ಚ]** ಮತ್ತು **[ಚಂದ್ರವತಾ]** ವಿಪುಲವಾದ ಸುವರ್ಣಾದಿ ಧನವು ಇರುವಂತಹದ್ದು **[ರಾಧಸಾ]** ಧನದಿಂದ **[ಪಪ್ರಥಃ]** ಪ್ರಸಿದ್ಧಗೊಳಿಸು. **[ಇಮಂ]** ಪ್ರತ್ಯಕ್ಷವಾಗಿರುವ ಅದನ್ನು **[ಕಾಮಂ]** ಅಭಿಲಾಷೆ ಪೂರ್ಣಗೊಳಿಸಲು ಉಪಯೋಗಿಸು. **[ಸ್ವರ್ಯವಃ]** ತನ್ನ ಸುಖವನ್ನು ಬಯಸುವವನು **[ವಾಹಃ]** ಸ್ತುತಿ ಮಾಡುವವನು **[ಕುಶಿಕಾಸಃ]** ಶಬ್ದಮಾಡುತ್ತ **[ವಿಪ್ರಾಃ]** ಬುದ್ಧಿವಂತ ಜನರು **[ಮತಿಭಿಃ]** ವಿಚಾರಶೀಲ ಜನರೊಂದಿಗೆ **[ತುಭ್ಯಂ]** ನಿನಗೆ **[ಇಂದ್ರಾಯ]** ಐಶ್ವರ್ಯಕ್ಕಾಗಿ ಅಭಿಲಾಷೆಯನ್ನು **[ಅಕ್ರನ್]** ಮಾಡಿರಿ. **[ಮಂದಯ]** ಐಶ್ವರ್ಯದಿಂದ ಸಂತೋಷಪಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾರು ನಿಮಗೆ ಇಷ್ಟಾರ್ಥವನ್ನು ಸಾಧಿಸುವುದರಲ್ಲಿ ಆನಂದ ಪಡುತ್ತಾರೋ ಅವರಿಗೆ ನೀವೂ ಆನಂದವನ್ನುಂಟುಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನೋ ಗೋತ್ರಾ ದರ್ದೃಹಿ ಗೋಪತೇ ಗಾಃ ಸಮಸ್ಮಭ್ಯಂ ಸನಯೋ ಯಂತು ವಾಜಾಃ।**
**ದಿವಕ್ಷಾ ಅಸಿ ವೃಷಭ ಸತ್ಯಶುಷ್ಮೋऽಸ್ಮಭ್ಯಂ ಸು ಮಘವನ್ ಬೋಧಿ ಗೋದಾಃ ॥೨೦॥**

**ಪದಾರ್ಥ:-** **[ವೃಷಭ]** ಬಲಿಷ್ಠನಾದ **[ಮಘವನ್]** ಉತ್ತಮ ಧನಸಂಪನ್ನನೇ! ನೀನು **[ಗೋದಾಃ]** ವಾಣಿಯ ಪ್ರದಾಯಕನು. **[ಸತ್ಯಶುಷ್ಮಃ]** ಸತ್ಯಬಲಕೊಡುವವನೂ **[ಅಸಿ]** ಆಗಿರುವೆ. ಆದ್ದರಿಂದ **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ಸು]** **[ಬೋಧಿ]** ಆನಂದದಾಯಕನಾಗು. **[ಗೋಪತೇ]** ಭೂಸ್ವಾಮಿಯೇ! **[ಅಸ್ಮಭ್ಯಂ]** ನಮಗೆ **[ಸನಯಃ]** ವಿಭಾಗ ಮಾಡಲು ಯೋಗ್ಯವಾದ **[ದಿವಕ್ಷಾಃ]** ವಿಜ್ಞಾನಾದಿ ಬೆಳಕಿನಿಂದ ಕೂಡಿರುವ **[ವಾಜಾಃ]** ಜ್ಞಾನ ಹಾಗೂ ಅಗ್ನ್ಯಾದಿಗಳನ್ನು ಪ್ರಾಪ್ತಿಗೊಳಿಸುವಂತಹ ವ್ಯವಹಾರವನ್ನು **[ಸಂ]** **[ಯಂತು]** ದೊರಕಿಸಿಕೊಡು. **[ನಃ]** ನಮ್ಮೆಲ್ಲರ **[ಗೋತ್ರಾಃ]** ಕುಲಗಳನ್ನು ಮತ್ತು **[ಗಾಃ]** ಭೂಮಿಯನ್ನು **[ಆ, ದರ್ದೃಹಿ]** ವೃದ್ಧಿಪಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವಾಗ ಸತ್ಯಾಚರಣೆ ಮಾಡುವಂತಹ ವಿದ್ಯಾವಂತ ಮನುಷ್ಯರು ಜನರಿಗೆ ಹಿತವನ್ನು ಉಪದೇಶ ಮಾಡುವವರಾಗುತ್ತಾರೋ ಆಗ ಆ ಜನರು ಎಂದೂ ಸುಖರಹಿತರೂ ರಕ್ಷಣಾರಹಿತರೂ ಆಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೨೧॥**

**ಪದಾರ್ಥ:-** **[ಅಸ್ಮಿನ್]** ಈ ಜೀವನ ಸಂಗ್ರಾಮದಲ್ಲಿ **[ಭರೇ]** ಧನಭರಣ ಮಾಡುತ್ತ **[ವಾಜಸಾತೌ]** ಧನಾದಿಗಳ ವಿಭಾಗವನ್ನು ಮಾಡುವರು. **[ಶುನಂ]** ಜ್ಞಾನದಿಂದ ವೃದ್ಧಿಯಾದ **[ಮಘವಾನಂ]** ಧನ ಸಂಪನ್ನನಾದ **[ನೃತಮಂ]** ಶ್ರೇಷ್ಠ ಮನುಷ್ಯನನ್ನು **[ಶೃಣ್ವಂತಂ]** ಯಾಚಕನ ವೃದ್ಧಿಗಾಗಿ ಅವನ ಮಾತುಗಳನ್ನು ಕೇಳಿಸಿಕೊಳ್ಳುವವನನ್ನು **[ಉಗ್ರಃ]** ತೇಜಸ್ವೀ ಪುರುಷನನ್ನು **[ಸಮತ್ಸು]** ಜೀವನ ಸಂಗ್ರಾಮಗಳಲ್ಲಿ **[ವೃತ್ರಾಣಿ]** ಸುತ್ತುವರಿಯುವ ಮೇಘಗಳ ರೀತಿಯಲ್ಲಿ ಸೇನೆಗಳನ್ನು **[ಘ್ನಂತಂ]** ನಾಶಮಾಡು ಮತ್ತು **[ಧನಾನಾಂ]** ಸಂಪತ್ತಿನ **[ಸಂಜಿತಂ]** ವಿಜಯಕ್ಕೆ **[ಇಂದ್ರಂ]** ದಾನಿಗಳಾದವರಿಗೆ ನಾವು **[ಹುವೇಮ]** ಸ್ತುತಿ ಮಾಡುತ್ತೇವೆ. **[ಊತಯೇ]** ಏಳಿಗೆಗಾಗಿ ಕರೆಯುತ್ತೇವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಜರೇ! ನೀವು ಶರೀರಾತ್ಮ ಬಲದಿಂದ ವೃದ್ಧಿಹೊಂದಿರಿ. ವಿಪುಲ ಧನದಾತೃಗಳಾಗಿ ಮನುಷ್ಯೋತ್ತಮರೆನಿಸಿಕೊಳ್ಳಿ. ಶತ್ರುಗಳನ್ನು ಜಯಿಸುವ ಮನುಷ್ಯರಲ್ಲಿ ನಮ್ರಭಾವತೋರಿಸಿರಿ. ದುಷ್ಟ ಪುರುಷರಲ್ಲಿ ಉಗ್ರಭಾವ ತೋರಿಸಿರಿ. ಪಾಲನೆ ಮಾಡುವ ಸ್ವಾಮಿಯನ್ನು ತನ್ನನ್ನು ನಿಯಂತ್ರಕನನ್ನಾಗಿ ಮಾಡಿರಿ. ನಿರಂತರ ಸುಖ ಪಡೆಯಿರಿ.

ಈ ಸೂಕ್ತದಲ್ಲಿ ಇಂದ್ರ ಮತ್ತು ವಿದ್ಯಾವಂತನ ಕೆಲಸಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೩೧

ಮಂತ್ರಸಂಖ್ಯೆ ೨೨ । ವಿಶ್ವಾಮಿತ್ರ ಕುಶಿಕೋ ವಾ ಋಷಿಃ । ಇಂದ್ರೋ ದೇವತಾ । ೧, ೧೪, ೧೬ ವಿರಾಟ್ಪಂಕ್ತಿಃ । ೩, ೬ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೫, ೯, ೧೩-೨೦ ನಿಚೃತ್ತ್ರಿಷ್ಟುಪ್, ೪, ೭, ೮, ೧೦, ೧೨, ೨೧, ೨೨ ತ್ರಿಷ್ಟುಪ್, ೧೧, ೧೨ ಸ್ವರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ಗುಣಗಳನ್ನು ಹೇಳಲಾಗಿದೆ.

**ಶಾಸದ್ವಹ್ನಿರ್ದುಹಿತುರ್ನಪ್ತ್ಯಂ ಗಾ-ದ್ವಿದ್ವಾ ಋತಸ್ಯ ದೀಧಿತಿಂ ಸಪರ್ಯನ್ ।**
**ಪಿತಾ ಯತ್ರ ದುಹಿತುಃ ಸೇಕಮೃಂಜನ್ ತ್ಸಂ ಶಗ್ಮ್ಯೇನ ಮನಸಾ ದಧನ್ವೇ ॥೧॥**

**ಪದಾರ್ಥಃ:-** [ಯತ್ರ] ಯಾವ ವ್ಯವಹಾರದಲ್ಲಿ [ಪಿತಾ] ಜನಕನು [ವಹ್ನಿಃ] ವ್ಯವಹಾರ ಮಾಡುವುದರಲ್ಲಿ [ನಪ್ತ್ಯಂ] ಮುಂದೆ ಮೊಮ್ಮಕ್ಕಳನ್ನು ಪಡೆಯುವವಳಾದ [ದುಹಿತುಃ] ಕನ್ಯೆಯ [ಸೇಕಂ] ಪವಿತ್ರತೆಯನ್ನು [ಋಂಜನ್] ಸಾಧಿಸುವವನಾಗಿ [ಗಾತ್] ಪ್ರಾಪ್ತವಾಗುವ ವ್ಯವಹಾರದಲ್ಲಿ [ವಿದ್ವಾನ್] ಅರಿಯಲು ಯೋಗ್ಯವಾದ ವ್ಯವಹಾರಗಳನ್ನು ತಿಳಿದವನು [ಋತಸ್ಯ] ಸತ್ಯದ [ದೀಧಿತಿಂ] ಧಾರಕನ [ಸಪರ್ಯನ್] ಸೇವೆ ಮಾಡುತ್ತ [ಶಾಸತ್] ಶಾಸನ ಮಾಡಬೇಕು. ಇದರಿಂದ [ಶಗ್ಮ್ಯೇನ] ಸುಖದಲ್ಲಿರುವ [ಮನಸಾ] ಅಂತಃಕರಣದಿಂದ [ಸಂ] [ದಧನ್ವೇ] ಉತ್ತಮ ರೀತಿಯಲ್ಲಿ ಸಂತೋಷಗೊಳ್ಳುತ್ತಾನೆ.

**ಭಾವಾರ್ಥಃ:-** ಮನುಷ್ಯರೇ! ತಂದೆಯಿಂದ ಹೇಗೆ ಕನ್ಯೆಯು ಜನಿಸುತ್ತಾಳೋ ಹಾಗೆ ಸೂರ್ಯನಿಂದ ಉಷೆಯು ಜನಿಸುತ್ತಾಳೆ. ಹೇಗೆ ಪತಿಯು ತನ್ನ ಸ್ತ್ರೀಯಲ್ಲಿ ಗರ್ಭಧಾರಣ ಮಾಡುತ್ತಾನೋ, ಹಾಗೆ ಕನ್ಯೆಯಂತಿರುವ ಉಷಃಕಾಲದಲ್ಲಿ ಸೂರ್ಯನು ಕಿರಣರೂಪ ವೀರ್ಯದ ಧಾರಣ ಮಾಡುತ್ತಾನೆ. ಅದರಿಂದ ದಿನವೆಂಬ ಮಗನ ಜನ್ಮವಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ಜಾಮಯೇ ತಾನ್ವೋ ರಿಕ್ಥಮಾರೈಕ್ ಚಕಾರ ಗರ್ಭಂ ಸನಿತುರ್ನಿಧಾನಮ್ ।**
**ಯದೀ ಮಾತರೋ ಜನಯಂತ ವಹ್ನಿ-ಮನ್ಯಃ ಕರ್ತಾ ಸುಕೃತೋರನ್ಯ ಋಂಧನ್ ॥೨॥**

**ಪದಾರ್ಥಃ:-** [ಜಾಮಯೇ] ಅಳಿಯನಿಗಾಗಿ [ತಾನ್ವಃ] ಸೂಕ್ಷ್ಮವಾದ [ರಿಕ್ಥಂ] ಧನವನ್ನು [ನ, ಆರೈಕ್] ಕೊಡುವುದಿಲ್ಲ. [ಸನಿತುಃ] ವಿಭಾಗ ಮಾಡುವವನ [ನಿಧಾನಂ] ನಿರಂತರ ಧಾರಣ ಮಾಡಲಾಗುವ [ಗರ್ಭಂ] ಗರ್ಭವನ್ನು [ಚಕಾರ] ಮಾಡಲಾಗುವುದು. [ಅನಃ] ಬೇರೆಯವನು [ವಹ್ನಿಂ] ಪ್ರಾಪಕನು ಹೇಗೋ ಹಾಗೆ [ಯದಿ] ಯಾವನು [ಅನ್ಯಃ] ಬೇರೆಯವನು [ಋಂಧನ್] ಸಿದ್ಧಗೊಳಿಸುತ್ತ [ಸುಕೃತೋಃ] ಶ್ರೇಷ್ಠಕರ್ಮಕಾರಿಯಾದವರ [ಕರ್ತಾ] ನಿರ್ಮಾಣ ಮಾಡುವವನನ್ನು [ಮಾತರಃ] ಗೌರವಿಸುವ ಜನನಿಯರು [ಜನಯಂತ] ಜನ್ಮ ನೀಡುತ್ತಾರೆ.

**ಭಾವಾರ್ಥಃ:-** ತಾಯಿಯು ಮಗುವಿಗೆ ಜನ್ಮ ನೀಡಿ ಅದನ್ನು ಬೆಳೆಸುತ್ತಾಳೆ. ಅವಳಂತೆ ಪ್ರತಿಯೊಬ್ಬ ಸ್ತ್ರೀಯು ಸಂತಾನವನ್ನು ಪಡೆದು ಬೆಳೆಸಬೇಕು. ಪುರುಷನು ಅಗ್ನಿಯನ್ನು ಉತ್ಪಾದನೆ ಮಾಡಿ ವೃದ್ಧಿಗೊಳಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿರ್ಜಜ್ಞೇ ಜುಹ್ವಾ(ಅ)೩ ರೇಜಮಾನೋ ಮಹಸ್ಪುತ್ರಾ ಅರುಷಸ್ಯ ಪ್ರಯಕ್ಷೇ ।**
**ಮಹಾನ್ ಗರ್ಭೋ ಮಹ್ಯಾ ಜಾತಮೇಷಾಂ ಮಹೀ ಪ್ರವೃದ್ಧರ್ಯಶ್ವಸ್ಯ ಯಜ್ಞೈಃ ॥೩॥**

**ಪದಾರ್ಥ:-** [**ಜುಹ್ವಾ**] ಸಾಧನೋಪಸಾಧನಗಳಿಂದೊಡಗೂಡಿದ ಕ್ರಿಯೆಯಿಂದ [**ಅಗ್ನಿಃ**] ಅಗ್ನಿಯು [**ಜಜ್ಞೇ**] ಜನ್ಮ ಪಡೆದಿರುವನು. [**ರೇಜಮಾನಃ**] ನಡುಗುತ್ತ / ಕಂಪಿಸುತ್ತ [**ಮಹಾನ್**] ಮಹತ್ತಾದ [**ಗರ್ಭಃ**] ಸ್ತುತಿಯೋಗ್ಯ ಪದಾರ್ಥವು ಉತ್ಪನ್ನವಾಗುತ್ತದೆ. [**ಅರುಷಸ್ಯ**] ಹಿಂಸಕನಲ್ಲದವನ [**ಮಹಃ**] ಶ್ರೇಷ್ಠವಾದ [**ಪುತ್ರಾನ್**] ಸಂತಾನಗಳ [**ಪ್ರಯಕ್ಷೇ**] ಸಂಗಮಮಾಡುವುದಕ್ಕೆ ಜನಿಸುತ್ತಾನೆ. [**ಪ್ರವೃತ**] ಪ್ರವೃತ್ತನಾಗುವವನು [**ಹರ್ಯಶ್ವಃ**] ಹರಣಶೀಲ ಕುದುರೆ ಇರುವವನ [**ಯಜ್ಞ್ಯೈಃ**] ಯೋಗ್ಯ ಕೆಲಸದಿಂದ [**ಮಹೀ**] ಶ್ರೇಷ್ಠವಾದ ವಾಣಿಯು ಉತ್ಪನ್ನವಾಗುತ್ತದೆ. [**ಏಷಾಂ**] ಈ ಎಲ್ಲದರ [**ಮಹಿ**] ಹಿರಿದಾದ [**ಆ, ಜಾತಂ**] ಉತ್ಪನ್ನವಾದ ಕರ್ಮ ಸ್ವರೂಪವನ್ನು ನೀನು ತಿಳಿದುಕೊ.

**ಭಾವಾರ್ಥ:-** ಹೇಗೆ ಶಮೀಮರದ ಅರಣಿ ಮಧ್ಯದಿಂದ ಅಗ್ನಿಯು ಪ್ರಕಟನಾಗಿ ದೊಡ್ಡ - ದೊಡ್ಡ ಕಾರ್ಯಗಳನ್ನು ಸಾಧಿಸುತ್ತಾನೋ, ಹಾಗೇ ಸತ್ಪಾತ್ರನಾದ ಪುತ್ರನು ಉತ್ತಮ ಕರ್ಮಗಳನ್ನು ಮಾಡುತ್ತಾನೆ. ಆದ್ದರಿಂದ ಬ್ರಹ್ಮಚರ್ಯಾದಿ ಸಂಸ್ಕಾರಗಳ ಮೂಲಕವೇ ಸಂತಾನವನ್ನು ಶ್ರೇಷ್ಠನನ್ನಾಗಿ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭಿ ಜೈತ್ರೀರಸಚಂತ ಸ್ಪೃಧಾನಂ ಮಹಿ ಜ್ಯೋತಿಸ್ತಮಸೋ ನಿರಜಾನನ್ ।**
**ತಂ ಜಾನತೀಃ ಪ್ರತ್ಯುದಾಯನ್ನುಷಾಸಃ ಪತಿರ್ಗವಾಮಭವದೇಕ ಇಂದ್ರಃ ॥೪॥**

**ಪದಾರ್ಥ:-** [**ಜೈತ್ರೀಃ**] ಜಯಶೀಲರು [**ಅಭಿ**] ಎದುರಾಗಿ [**ಅಸಚಂತ**] ನಿಯಮವನುಸರಿಸಿ ಚಲಿಸುತ್ತಾರೆ. [**ತಮಸಃ**] ಅಂಧಕಾರದ [**ಮಹೀ**] ಹಿರಿದಾದ [**ಜ್ಯೋತಿಃ**] ಪ್ರಕಾಶರೂಪವಾದ [**ಸ್ಪೃಧಾನಂ**] ಪದಾರ್ಥಗಳೊಂದಿಗೆ ಸ್ಪರ್ಧಿಸುವ ಸೂರ್ಯಕಿರಣಗಳನ್ನು [**ನಿಃ**] ನಿರಂತರ [**ಅಜಾನನ್**] ತಿಳಿಯಿರಿ. [**ತಂ**] ಅವನನ್ನು [**ಜಾನತೀಃ**] ತಿಳಿದಿರುವ [**ಉಷಾಸಃ**] ಪ್ರಾತಃಕಾಲಕ್ಕೆ ಸಮನಾಗಿ [**ಪ್ರತಿ**] [**ಉತ್**] [**ಆಯನ್**] ಉದ್ಯೋಗ ಮಾಡುವವನು / ಪ್ರಾಪ್ತನಾಗುವವನು ಯಾರೋ ಅವನು [**ಏಕಃ**] ಏಕಾಕಿಯಾಗಿ [**ಇಂದ್ರಃ**] ಸೂರ್ಯನು [**ಗವಾಂ**] ಕಿರಣಗಳ [**ಪತಿಃ**] ಸ್ವಾಮಿಯು [**ಅಭವತ್**] ಆಗಿರುವನು.

**ಭಾವಾರ್ಥ:-** ಹೇಗೆ ಬೆಳಕು ಕತ್ತಲಿನಿಂದ ಬೇರೆಯಾಗಿದ್ದು ಅಂಧಕಾರವನ್ನು ನಿವಾರಿಸುತ್ತದೆಯೋ, ಹಾಗೆ ಅವಿದ್ಯೆಯಿಂದ ವಿದ್ಯೆಯು ಬೇರೆಯಾಗಿದ್ದು ಅವಿದ್ಯೆಯನ್ನು ನಿವಾರಣೆ ಮಾಡುತ್ತದೆ/ನಾಶಮಾಡುತ್ತದೆ. ಹೇಗೆ ಒಬ್ಬನೇ ಸೂರ್ಯನು ಎಲ್ಲಾಕಿರಣಗಳನ್ನು ಒಟ್ಟಿಗೆ ಪಾಲನೆ ಮಾಡುತ್ತಾನೋ, ಹಾಗೆ ರಾಜನು ಸಮಭಾವವನ್ನಾಶ್ರಯಿಸಿ ಪ್ರಜೆಗಳ ಪಾಲನೆ ಮಾಡಬೇಕು.

ಈ ಮಂತ್ರದಲ್ಲಿ ವಿದ್ಯಾವಂತರ ಸಂಗದಿಂದ ಏನು ಲಭಿಸುತ್ತದೆ ಎಂಬುದನ್ನು ತಿಳಿಸಲಾಗಿದೆ.

**ವೀಳೌ ಸತೀರಭಿ ಧೀರಾ ಅತೃಂದನ್ ಪ್ರಾಚಾಹಿನ್ವನ್ ಮನಸಾ ಸಪ್ತ ವಿಪ್ರಾಃ ।**
**ವಿಶ್ವಾಮವಿಂದನ್ ಪಥ್ಯಾಮೃತಸ್ಯ ಪ್ರಜಾನನ್ನಿತ್ತಾ ನಮಸಾ ವಿವೇಶ ॥೫॥**

**ಪದಾರ್ಥ:-** [**ಧೀರಾಃ**] ವಿಚಾರಶೀಲರಾದ [**ವಿಪ್ರಾಃ**] ಬುದ್ಧಿವಂತ ಜನರು [**ಪ್ರಾಚಾಃ**] ಪ್ರಾಚೀನವಾದ [**ಮನಸಾ**] ಅಂತಃಕರಣದಿಂದ [**ಸಪ್ತ**] ಪಂಚಪ್ರಾಣಗಳು, ಬುದ್ಧಿ, ಮನಸ್ಸು, ಹೀಗೆ ಏಳು ಪದಾರ್ಥಗಳು [**ಸತೀಃ**] ಇರುವ ಪ್ರಕೃತಿಯನ್ನು [**ಪ್ರಹಿನ್ವನ್**] ಬೆಳೆಸುತ್ತಾರೆ ಮತ್ತು ಮಿಥ್ಯಾ ಪದಾರ್ಥಗಳನ್ನು [**ಅತೃಂದನ್**] ನಾಶಮಾಡುತ್ತಾರೆ.

**[ಋತಸ್ಯ]** ಸತ್ಯದ **[ವೀಳೌ]** ಬಲದಲ್ಲಿ **[ವಿಶ್ವಾಂ]** ಸಂಪೂರ್ಣ **[ಪಥ್ಯಾಂ]** ಗೌರವಾರ್ಹ ಕ್ರಿಯೆಯನ್ನು **[ಅವಿಂದನ್]** ತಿಳಿದುಕೊಳ್ಳುತ್ತಾರೆ. ಹಾಗೇ ನೀವು **[ತಾಃ]** ಅಂತಹ ಕ್ರಿಯೆಯನ್ನು **[ನಮಸಾ]** ಸ್ತುತಿಯಿಂದ **[ಪ್ರಜಾನನ್]** ತಿಳಿಯುವವರಾಗಿ **[ಇತ್]** ಅದನ್ನೇ **[ಆ ವಿವೇಶ]** ಶುಭಕರ್ಮಗಳಲ್ಲಿ ಪ್ರವೇಶ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಉಪಾಯದಿಂದ ಸೇವನೆ ಮಾಡಿದ ಪ್ರಾಣ-ಅಂತಃಕರಣಗಳು ದುಃಖ ತ್ಯಜಿಸಿ ಸುಖ ಪಡೆಯಲು ಸಮರ್ಥವಾಗುತ್ತವೆಯೋ, ಹಾಗೆ ಸತ್ಸಂಗಾದಿ ಕ್ರಿಯೆಗಳು ದುಃಖ ನಿವೃತ್ತಿ ಪೂರ್ವಕ ಸುಖೋತ್ಪಾದಕಗಳಾಗಿರುತ್ತವೆ.

ಸ್ತ್ರೀಯು ಸುಖದಾಯಕಳು ಎಂಬ ವಿಚಾರವಿಲ್ಲಿ ಹೇಳಿದೆ.

**ವಿದದ್ಯದೀ ಸರಮಾ ರುಗ್ಣಮದ್ರೇ-ರ್ಮಹಿ ಪಾಥಃ ಪೂರ್ವ್ಯಂ ಸಧ್ರ್ಯಕ್ಕಃ ।**
**ಅಗ್ರಂ ನಯತ್ಸುಪದ್ಯಕ್ಷರಾಣಾ-ಮಚ್ಛಾ ರವಂ ಪ್ರಥಮಾ ಜಾನತೀಗಾತ್ ॥೬॥**

**ಪದಾರ್ಥ:-** **[ಯದಿ]** ಒಂದು ವೇಳೆ **[ಸುಪದೀ]** ಉತ್ತಮ ಸ್ಥಾನದಲ್ಲಿರುವವಳು **[ಸರಮಾ]** ಚಲಿಸುವ ಪದಾರ್ಥಗಳನ್ನರಿಯುವವಳು **[ಅದ್ರೇಃ]** ಮೇಘದ **[ಸಧ್ರ್ಯಕ್]** ಜೊತೆಯಲ್ಲಿ ಪ್ರಕಟವಾದ **[ಪೂರ್ವ್ಯಂ]** ಪ್ರಾಚೀನರಾದ ಜನರಿಂದ ತಯಾರಿಸಿದ **[ಮಹಿ]** ಮಹತ್ತಾದ **[ಪಾಥಃ]** ಅನ್ನ/ನೀರನ್ನು **[ವಿದತ್]** ಪಡೆದುಕೊಂಡರೆ **[ರುಗ್ಣಂ]** ರೋಗಿಯನ್ನು ಔಷಧದಿಂದ ರೋಗರಹಿತವಾಗಿ **[ಕಃ]** ಮಾಡುತ್ತ **[ಅಕ್ಷರಾಣಾಂ]** ಅಕ್ಷರಗಳ **[ಅಗ್ರಂ]** ಶ್ರೇಷ್ಠವಾದ **[ರವಂ]** ಧ್ವನಿಯನ್ನು **[ಅಚ್ಛ]** ಉತ್ತಮವಾಗಿ **[ನಯತ್]** ಪಡೆದುಕೊಳ್ಳುವಳು. **[ಪ್ರಥಮಾ]** ಮೊದಲಿನದನ್ನು **[ಜಾನತೀ]** ತಿಳಿದುಕೊಳ್ಳುವವಳಾಗಿ **[ಗಾತ್]** ಪ್ರಾಪ್ತಳಾದರೆ ಸಂಪೂರ್ಣ ಸುಖ ಲಭಿಸುತ್ತದೆ.

**ಭಾವಾರ್ಥ:-** ಯಾವ ಸ್ತ್ರೀಯು ಮಿಂಚಿನಂತೆ ವಿದ್ಯೆಯಲ್ಲಿ ವ್ಯಾಪ್ತಳಾಗಿ ಸಂಸ್ಕಾರ ಮತ್ತು ಉದ್ಯೋಗಾದಿ ಕರ್ಮಗಳಲ್ಲಿ ಚತುರಳಾಗಿ ಉತ್ತಮ ರೀತಿಯಿಂದ ಮಾತನಾಡುವವಳೂ ನಮ್ರ ಸ್ವಭಾವದವಳೂ ಆಗುವಳೋ ಅವಳು ಮಳೆಯಂತೆ ಸುಖದಾಯಕಳಾಗುವಳು.

ಯಾವ ಪುರುಷನು ಸುಖದಾಯಕನು ಎಂಬುದಿಲ್ಲಿ ಹೇಳಿದೆ.

**ಅಗಚ್ಛದು ವಿಪ್ರತಮಃ ಸಖೀಯ-ನ್ನಸೂದಯತ್ಸುಕೃತೇ ಗರ್ಭಮದ್ರಿಃ ।**
**ಸಸಾನ ಮರ್ಯೋ ಯುವಭಿರ್ಮಖಸ್ಯ-ನ್ನಥಾಭವದಂಗಿರಾಃ ಸದ್ಯೋ ಅರ್ಚನ್ ॥೭॥**

**ಪದಾರ್ಥ:-** **[ಮರ್ಯಃ]** ಮನುಷ್ಯನು **[ಯುವಭಿಃ]** ಯುವಕರೊಂದಿಗೆ **[ಸಖೀಯನ್]** ಗೆಳೆಯನನ್ನು ಬಯಸುವವನಾಗಿ **[ಮಖಸ್ಯ]** ಆತ್ಮ ಸಂಬಂಧೀ ಯಜ್ಞ ಮಾಡಲು ಬಯಸುವವನಾಗಿ **[ಅಥ]** ಆಮೇಲೆ **[ಅಂಗಿರಾಃ]** ಶರೀರದಲ್ಲಿ ರಸದಂತಿರುವ ಪದಾರ್ಥಗಳನ್ನು **[ಸದ್ಯಃ]** ಶೀಘ್ರ **[ಅರ್ಚನ್]** ಅರ್ಪಿಸುತ್ತ **[ವಿಪ್ರತಮಃ]** ಬುದ್ಧಿವಂತ ಪುರುಷನು ತನ್ನ ಸ್ತ್ರೀಯ ಸಮೀಪ ಹೋಗಿ **[ಅದ್ರಿಃ]** ಮೇಘದಂತೆ **[ಗರ್ಭಂ]** ಗರ್ಭಧರಿಸುವ ರೀತಿಯಲ್ಲಿ **[ಸುಕೃತೇ]** ಉತ್ತಮ ಕರ್ಮ ಮಾಡಲು ಉದ್ಯುಕ್ತನಾದವನು **[ಅಭವನ್]** ಆಗಬೇಕು ಹಾಗೂ **[ಸಸನ್]** ಸತ್ವದ ವಿಭಾಗ ಮಾಡುತ್ತ **[ಉ]** ಮತ್ತೂ ಸಹ ಸನ್ನಿಹಿತ ಕರ್ಮವನ್ನು **[ಅಸೂದಯತ್]** ಮಾಡಬೇಕು.

**ಭಾವಾರ್ಥ:-** ಯಾವನು ಬ್ರಹ್ಮಚರ್ಯಾಶ್ರಮದಲ್ಲಿದ್ದು ಉತ್ತಮ ವಿದ್ಯೆ ಮತ್ತು ಶಿಕ್ಷಣವನ್ನು ಪಡೆದು ಯುವಾವಸ್ಥೆಯಲ್ಲಿ ತನಗೆ ಯೋಗ್ಯಳಾದ ಕನ್ಯೆಯೊಂದಿಗೆ ಸ್ನೇಹ ಭಾವ ಪ್ರೀತಿಯೊಂದಿಗೆ ವಿವಾಹವಾಗಿ ಮೇಘವು ಮಳೆಗರೆಯುವಂತೆ ಸುಖವನ್ನು ಪಡೆಯುವನೋ ಅವನು ಸುಖದಾಯಕನಾಗುತ್ತಾನೆ.

ಯಾರು ಸುಖಿಗಳು ಎಂಬುದನ್ನಿಲ್ಲಿ ಹೇಳಿದೆ.

**ಸತಃಸತಃ ಪ್ರತಿಮಾನಂ ಪುರೋಭೂ-ರ್ವಿಶ್ವಾ ವೇದ ಜನಿಮಾ ಹಂತಿ ಶುಷ್ಣಮ್ ।**
**ಪ್ರ ಣೋ ದಿವಃ ಪದವೀರ್ಗವ್ಯುರರ್ಚನ್ ತ್ಸಖಾ ಸಖೀँರಮುಂಚನ್ನಿರವದ್ಯಾತ್ ॥೮॥**

**ಪದಾರ್ಥ:-** **[ಪುರೋಭೂಃ]** ಮೊದಲೇ ಚಿಂತಿಸುವವನು **[ಸತಃಸತಃ]** ಪ್ರತಿಸಲವೂ ವಿದ್ಯಮಾನವಾದ **[ಪ್ರತಿಮಾನಂ]** ಪರಿಮಾಣಗಳ ಸಾಧಕನನ್ನು **[ವಿಶ್ವಾ]** ಸಂಪೂರ್ಣವಾಗಿ **[ಜನಿಮಾ]** ಉತ್ಪನ್ನವಾದ ಪದಾರ್ಥಗಳ **[ವೇದಃ]** ತಿಳಿದವನು **[ಶುಷ್ಣಂ]** ಶೋಕಕಾರಕ ದುಃಖವನ್ನು **[ಹಂತಿ]** ನಾಶ ಮಾಡುತ್ತಾನೆ. **[ಗವ್ಯುಃ]** ತಾನು ವಿದ್ಯೆ ಪಡೆಯಲು ಬಯಸುವವನು **[ನಃ]** ನಮ್ಮೆಲ್ಲರ **[ದಿವಃ]** ಬೆಳಕಿನ **[ಪದವೀಃ]** ಪತಿಷ್ಠೆಯನ್ನು **[ಪ್ರ]** ಪ್ರಾಪ್ತಿಗೊಳಿಸುವನು. **[ಸಖೀನ್]** ಸ್ನೇಹಿತರ **[ಅರ್ಚನ್]** ಸತ್ಕಾರವನ್ನು ಮಾಡುವವನಾಗಿ **[ಸಖಾ]** ಗೆಳೆಯನಾಗಿ **[ಅವದ್ಯಾತ್]** ಧರ್ಮರಹಿತ ಆಚರಣೆಯಿಂದ **[ನಿಃ]** ನಿರಂತರ **[ಅಮುಂಚತ್]** ಪ್ರತ್ಯೇಕನಾಗುತ್ತಾನೋ ಅವನು ಸುಖ ಪಡುತ್ತಾನೆ.

**ಭಾವಾರ್ಥ:-** ಯಾರು ಕಾರ್ಯಕಾರಣ ರೂಪ ಸೃಷ್ಟಿಯನ್ನು ತಿಳಿದುಕೊಂಡಿರುತ್ತಾನೋ ಅವನೇ ಸುಖ ಪುರುಷನಾಗುತ್ತಾನೆ ಮತ್ತು ಎಲ್ಲಾ ಜನರ ಗೆಳೆಯನಾಗಿ ಎಲ್ಲರನ್ನೂ ಪಾಪಾಚರಣೆಯಿಂದ ಪ್ರತ್ಯೇಕಗೊಳಿಸುತ್ತಾನೆ. ಧರ್ಮಾಚರಣೆಯಲ್ಲಿ ಪ್ರವೃತ್ತಿಗೊಳಿಸುತ್ತಾನೆ. ಅಂತಹವನೇ ಸತ್ಯ-ಮಿತ್ರನಾಗುತ್ತಾನೆ.

ಮೋಕ್ಷಾರ್ಥಿಗಳು ಏನು ಮಾಡಬೇಕೆಂದಿಲ್ಲಿ ಹೇಳಿದೆ.

**ನಿ ಗವ್ಯತಾ ಮನಸಾ ಸೇದುರರ್ಕೈಃ ಕೃಣ್ವಾನಾಸೋ ಅಮೃತತ್ವಾಯ ಗಾತುಮ್ ।**
**ಇದಂ ಚಿನ್ನು ಸದನಂ ಭೂರ್ಯೇಷಾಂ ಯೇನ ಮಾಸಾँ ಅಸಿಷಾಸನ್ನೃತೇನ ॥೯॥**

**ಪದಾರ್ಥ:-** **[ಕೃಣ್ವಾನಾಸಃ]** ಕಾರ್ಯನಿರತ ಜನರು **[ಗವ್ಯತಾ]** ತನ್ನ ಮಾತಿಗನುಗುಣವಾಗಿ **[ಮನಸಾ]** ಅಂತಃಕರಣ ಪೂರ್ವಕ **[ಅರ್ಕೈಃ]** ಸತ್ಕಾರಾರ್ಹ ವಿದ್ವಾಂಸರೊಂದಿಗೆ **[ಅಮೃತತ್ವಾಯ]** ಮೋಕ್ಷವನ್ನು ಪಡೆಯಲು **[ಗಾತುಂ]** ಪ್ರಶಂಸಾರ್ಹ ಭೂಮಿಯನ್ನು **[ನಿ, ಸೇದುಃ]** ನಿಶ್ಚಿತವಾಗಿ ಸೇರುತ್ತಾರೆ. **[ಇದಂ]** **[ಚಿತ್]** ಮತ್ತಿದನ್ನೇ **[ಭೂರಿ]** ಬಹಳವಾಗಿ **[ಸದನಂ]** ಯೋಗ್ಯ ಸ್ಥಾನವನ್ನು ಪಡೆಯುವನು **[ಯೇನ]** ಯಾವ **[ಋತೇನ]** ಸತ್ಯಾಚರಣೆಯಿಂದ **[ಮಾಸಾನ್]** ಚೈತ್ರಾದಿಮಾಸಗಳ **[ಅಸಿಷಾಸನ್]** ವಿಭಾಗ ಮಾಡುವ ಇಚ್ಛೆ ಮಾಡುತ್ತಾನೆ. ಇದರಿಂದ **[ಏಷಾಂ]** ಇಂತಹ ಮನುಷ್ಯರ ಕಲ್ಯಾಣವು **[ನು]** ಬೇಗನೇ ಸಾಧ್ಯವಾಗುತ್ತದೆ.

**ಭಾವಾರ್ಥ:-** ಯಾರು ತ್ಯಾಗಮಾಡಲು ಇಚ್ಛಿಸುವರೋ, ಯಾರು ವಿದ್ಯಾವಂತರ ಸಂಗ ಮಾಡುವರೋ, ಯಾರು ಧರ್ಮಾನುಷ್ಠಾನ ಅಧರ್ಮ ತ್ಯಾಗ ಮಾಡುವರೋ, ಅವರು ಅಂತಃಕರಣ ಮತ್ತು ಆತ್ಮವನ್ನು ಪರಿಶುದ್ಧಗೊಳಿಸಿ ಬಹುಬೇಗನೇ ಮೋಕ್ಷ ಪಡೆಯುತ್ತಾರೆ.

ವಿದ್ಯಾವಂತರು ಏನು ಮಾಡುವರೆಂದಿಲ್ಲಿ ಹೇಳಿದೆ.

**ಸಂಪಶ್ಯಮಾನಾ ಅಮದನ್ನಭಿ ಸ್ವಂ ಪಯಃ ಪ್ರತ್ನಸ್ಯ ರೇತಸೋ ದುಘಾನಾಃ ।**
**ವಿ ರೋದಸೀ ಅತಪದ್ಘೋಷ ಏಷಾಂ ಜಾತೇ ನಿಃಷ್ಠಾಮದಧುರ್ಗೋಷು ವೀರಾನ್ ॥೧೦॥**

**ಪದಾರ್ಥ:-** [**ಸ್ವಂ**] ತನ್ನನ್ನು [**ಸಂಪಶ್ಯಮಾನಾಃ**] ಉತ್ತಮ ರೀತಿಯಿಂದ ನೋಡುವವರು [**ಪ್ರತ್ನಸ್ಯ**] ಪ್ರಾಚೀನ [**ರೇತಸ್ಯ**] ವೀರ್ಯದ [**ಪಯಃ**] ಹಾಲನ್ನು [**ದುಘಾನಾಃ**] ಪೂರ್ಣಗೊಳಿಸುತ್ತ [**ನಿಃಷ್ಠಾಂ**] ಶ್ರೇಷ್ಠ ವಿದ್ವಾಂಸರ [**ಘೋಷಃ**] ವಾಣಿಯು ಸೂರ್ಯನಂತೆ [**ರೋದಸೀ**] ಅಂತರಿಕ್ಷ-ಭೂಮಿಯನ್ನು ಹೇಗೋ ಹಾಗೆ ದುಷ್ಟ ಪುರುಷರನ್ನು [**ವಿ, ಅತಪತ್**] ತಾಪ ಉಂಟು ಮಾಡುತ್ತಾರೋ ಅಂತಹ ಪುರುಷರು [**ಜಾತೆ**] ಉತ್ಪನ್ನವಾದ ಈ ಸಂಸಾರದಲ್ಲಿ [**ಗೋಷು**] ಭೂಮ್ಯಾದಿಗಳನ್ನು [**ವೀರಾನ್**] ಉತ್ತಮ ಗುಣವಂತ ಜನರನ್ನೂ [**ಅದಧುಃ**] ಧಾರಣ ಮಾಡುವವರಾಗಿರಿ.

**ಭಾವಾರ್ಥ:-** ಉತ್ತಮ ವಿಚಾರಗಳನ್ನು ಮಾಡುವ ಧಾರ್ಮಿಕ ಪುರುಷನು ತನ್ನ ಅನಾದಿಕಾಲದಿಂದಲೂ ಸಿದ್ಧವಾದ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕು. ಎಲ್ಲಾ ಜನರಿಗೂ ಸತ್ಯಾಸತ್ಯತೆಗಳ ಅರಿವು ಮಾಡಿಸಿಕೊಡಬೇಕು. ದುಷ್ಟತನವನ್ನು ದೂರೀಕರಿಸಿ ಶ್ರೇಷ್ಠತನವನ್ನು ಧಾರಣ ಮಾಡಿಸಬೇಕು. ಅಂತಹವರೇ ನಿಜಾರ್ಥದಲ್ಲಿ ಶೂರರೂ - ವೀರರೂ ಆಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಜಾತೇಭಿರ್ವೃತ್ರಹಾ ಸೇದು ಹವ್ಯೈ-ರುದುಸ್ರಿಯಾ ಅಸೃಜದಿಂದ್ರೋ ಅರ್ಕೈಃ ।**
**ಉರೂಚ್ಯಸ್ಮೈ ಘೃತವದ್ಭರಂತೀ ಮಧು ಸ್ವಾದ್ಮ ದುದುಹೇ ಜೇನ್ಯಾ ಗೌಃ ॥೧೧॥**

**ಪದಾರ್ಥ:-** [**ವೃತ್ರಹಾ**] ಮೇಘನಾಶಕ ಸೂರ್ಯನಂತಿರುವ [**ಸಃ**] [**ಇತ್**] ಅವನೇ [**ಉ**] [**ಹವ್ಯೈಃ**] ಸ್ವೀಕರಿಸಲು ಯೋಗ್ಯವಾದ [**ಉತ್**] [**ಉಸ್ರಿಯಾಃ**] ಮಾತೆಂಬ ಕಿರಣಗಳಂತಿರುವ [**ಇಂದ್ರಃ**] ಶ್ರೇಷ್ಠ ಸಂಪತ್ತಿಗೆ ಕಾರಣನಾದವನು [**ಉತ್**] [**ಅಸೃಜತ್**] ಉತ್ಪಾದಿಸುತ್ತಾನೆ. [**ಅರ್ಕೈಃ**] ಆದರಾರ್ಹ ಮನುಷ್ಯರಿಂದ [**ಹವ್ಯೈಃ**] ಗ್ರಹಣ ಯೋಗ್ಯ ಪದಾರ್ಥಗಳಿಂದ ಮತ್ತು [**ಜಾತೇಭಿಃ**] ಉಪಸ್ಥಿತವಾದ ವ್ಯವಹಾರಗಳೊಂದಿಗೆ [**ಅಸೃಜತ್**] ಉತ್ಪಾದಿಸುತ್ತಾನೆ. [**ಉರೂಚೀ**] ಬಹುಜನರಿಗೆ ಸತ್ಕರಿಸುವವಳಾಗಿ [**ಘೃತವತ್**] ಘೃತ ಅಥವಾ ಜಲದೊಂದಿಗೆ [**ಸ್ವಾದ್ಮ**] ಸ್ವಾದಿಷ್ಟವಾದ [**ಮಧು**] ಮಧುರ ಗುಣದಿಂದ ಕೂಡಿರುವ ಪದಾರ್ಥವನ್ನು [**ಭರಂತೀ**] ಧಾರಣ ಮಾಡುವವಳಾಗಿ [**ಜೇನ್ಯಾ**] ಜಯಿಸಲು ಯೋಗ್ಯಳಾದ [**ಗೌಃ**] ಭೂಮಿಯನ್ನು [**ಅಸ್ಮೈ**] ಈ ಸಂಪತ್ತಿಗಾಗಿ [**ದುದುಹೇ**] ಕರೆಯುವವಳು. ಅವಳನ್ನು [**ಉ**] ಆ ಪುರುಷನೇ ತಿಳಿಯುವವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ತನ್ನ ಕಿರಣಗಳಿಂದ ಹೇಗೆ ಸಮಗ್ರ ಸೃಷ್ಟಿಯಲ್ಲಿನ ಪದಾರ್ಥಗಳನ್ನು ಬೆಳಗಿಸುತ್ತಾನೋ, ಹಾಗೆ ವಿದ್ಯಾವಂತರು ವಿಜ್ಞಾನದಿಂದ ಸಂಪೂರ್ಣ ಪದಾರ್ಥಗಳನ್ನು ತಿಳಿದುಕೊಂಡು ಅದರ ಪ್ರಚಾರ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪಿತ್ರೇ ಚಿಚ್ಚಕ್ರುಃ ಸದನಂ ಸಮಸ್ಮೈ ಮಹಿ ತ್ವಿಷೀಮತ್ಸುಕೃತೋ ವಿ ಹಿ ಖ್ಯನ್ ।**
**ವಿಷ್ಕಭ್ನಂತಃ ಸ್ಕಂಭನೇನಾ ಜನಿತ್ರೀ ಆಸೀನಾ ಊರ್ಧ್ವಂ ರಭಸಂ ವಿ ಮಿನ್ವನ್ ॥೧೨॥**

**ಪದಾರ್ಥ:-** [**ಸುಕೃತಃ**] ಉತ್ತಮ ಕೆಲಸ ಮಾಡುವವನು [**ವಿಷ್ಕಭ್ನಂತಃ**] ವಿಶೇಷ ರೀತಿಯಲ್ಲಿ ಧಾರಣ ಯೋಗ್ಯವಾದ ಬುದ್ಧಿಯ [**ಜನಿತ್ರೀ**] ಉತ್ಪಾದಿಸುವವಳು [**ಆಸೀನಾಃ**] ಪ್ರಕೃತಿಗೆ ಸದೃಶವಾಗಿ ಆಸೀನಳಾಗಿದ್ದಾಳೆ. [**ಸ್ಕಂಭನೇನ**] ಅವಳ ಧಾರಣೆ ಮಾಡುವುದರಿಂದ [**ಊರ್ಧ್ವಂ**] ಉನ್ನತ [**ರಭಸಂ**] ವೇಗವನ್ನು [**ವಿ, ಮಿನ್ವನ್**]

ವಿಶೇಷರೀತಿಯಲ್ಲಿ ಷೇಪಣ ಮಾಡುತ್ತ ವಿದ್ಯೆಯನ್ನು [ವಿ, ಖ್ಯನ್] ಬೆಳಗಿಸುತ್ತಾಳೆ. [ಹಿ] [ಚಿತ್] ಆ ಕಾರಣದಿಂದಲೇ [ಅಸ್ಮೈ] ಈ [ಪಿತ್ರೇ] ಪಾಲಕನಿಗಾಗಿ [ತ್ವಿಷೀಮತ್] ಅತಿಶಯ ಕಾಂತಿಯುಳ್ಳ [ಮಹಿ] ಹಿರಿದಾದ [ಸದನಂ] ಪದವಿಯನ್ನು [ಸಂ] [ಚಕ್ರುಃ] ಸಂಪನ್ನಗೊಳಿಸಬೇಕು.

**ಭಾವಾರ್ಥ:-** ವ್ಯಾಪಕವಾದ ಪ್ರಕೃತಿಯ ಮೂಲಕ ಮಹತ್ತತ್ವಾದಿಗಳಿಂದ ಈಶ್ವರನು ಹೇಗೆ ಸಮಗ್ರ ಜಗತ್ತನ್ನು ಸೃಷ್ಟಿ ಮಾಡುವನೋ, ಹಾಗೆ ವಿದ್ಯಾವಂತರು ಜನಕನಂತಿದ್ದು ಎಲ್ಲಾ ಜನತೆಯ ಸುಖ ಸಾಧಕರಾಗಿ ಪದಾರ್ಥ ವಿದ್ಯೆಯ ಅಭ್ಯಾಸ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹೀ ಯದಿ ಧಿಷಣಾ ಶಿಶ್ನಥೇ ಧಾ-ತ್ಸದ್ಯೋವೃಧಂ ವಿಭ್ವ(ಅಂ)೧ ರೋದಸ್ಯೋಃ ।**
**ಗಿರೋ ಯಸ್ಮಿನ್ನನವದ್ಯಾಃ ಸಮೀಚೀ-ರ್ವಿಶ್ವಾ ಇಂದ್ರಾಯ ತವಿಷೀರನುತ್ತಾಃ ॥೧೩॥**

**ಪದಾರ್ಥ:-** [ಯದಿ] ಒಂದುವೇಳೆ [ಮಹೀ] ಸತ್ಕಾರಯೋಗ್ಯವಾದ [ಧಿಷಣಾ] ಪ್ರಗಲ್ಭವಾದ ವಾಣಿಯು [ರೋದಸ್ಯೋಃ] ಭೂಮ್ಯಂತರಿಕ್ಷಗಳ ಮಧ್ಯದಲ್ಲಿ [ಸದ್ಯೋವೃಧಂ] ಶೀಘ್ರವೃದ್ಧಿಕಾರಕವಾಗಿ [ವಿಭ್ವಂ] ವ್ಯಾಪಕತ್ವವನ್ನು [ಧಾತ್] ಧಾರಣ ಮಾಡಿದರೆ, ಈ ಅವಿದ್ಯೆಯನ್ನು [ಶಿಶ್ನಥೇ] ನಾಶ ಮಾಡುತ್ತದೆ. [ಯಸ್ಮಿನ್] ಯಾವುದರಲ್ಲಿ [ಅನವದ್ಯಾ] ನಿಂದಾರಹಿತ [ಸಮೀಚೀಃ] ಸರಿಯಾದುದನ್ನು ಧಾರಣ ಮಾಡುವ [ತವಿಷೀಃ] ಬಲಯುಕ್ತ [ಅನುತ್ತಾಃ] ಸಂಪತ್ತಿಗೆ ಸಮರ್ಥವಾಗುತ್ತದೆ. ಅಂತಹ ವಾಣಿಯನ್ನು ಸದಾ ಸೇವಿಸಬೇಕು.

**ಭಾವಾರ್ಥ:-** ಯಾವ ವಿದ್ಯಾವಂತರು ಸುಶಿಕ್ಷಿತ ವಾಣಿಯನ್ನು ಧಾರಣೆ ಮಾಡಿ ವ್ಯಾಪಕನಾದ ಪರಮಾತ್ಮನನ್ನು ತಿಳಿಯಲು ಪ್ರಯತ್ನಿಸಿದರೆ ಅವರು ಅತೀವ ಸುಖಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹ್ಯಾ ತೇ ಸಖ್ಯಂ ವಶ್ಮಿ ಶಕ್ತೀ-ರಾ ವೃತ್ರಘ್ನೇ ನಿಯುತೋ ಯಂತಿ ಪೂರ್ವೀಃ ।**
**ಮಹಿ ಸ್ತೋತ್ರಮವ ಆಗನ್ಮ ಸೂರೇ-ರಸ್ಮಾಕಂ ಸು ಮಘವನ್ ಬೋಧಿ ಗೋಪಾಃ ॥೧೪॥**

**ಪದಾರ್ಥ:-** [ಮಘವನ್] ಶ್ರೇಷ್ಠ ಧನ ಸಂಪನ್ನನೇ! ನಾನು [ತೇ] ನಿನ್ನ [ಮಹಿ] ಆದರಾರ್ಹವಾದ [ಸಖ್ಯಂ] ಸ್ನೇಹ ಭಾವವನ್ನು [ಆ, ವಶ್ಮಿ] ಬಯಸುತ್ತೇನೆ. ವಿದ್ಯಾವಂತರು [ವೃತ್ರಘ್ನೇ] ಮೇಘನಾಶಕ ಸೂರ್ಯನಂತಿರುವ ನಿನಗೆ [ಪೂರ್ವೀಃ] ಆ ಅನಾದಿಕಾಲದಿಂದಲೂ ಇರುವ [ನಿಯುತಃ] ನಿಶ್ಚಿತವಾದ [ಶಕ್ತೀಃ] ಸಾಮರ್ಥ್ಯವನ್ನು [ಆ, ಯಂತಿ] ಪ್ರಾಪ್ತಿಗೊಳಿಸುತ್ತಾರೆ. [ಅಸ್ಮಾಕಂ] ನಮ್ಮಲ್ಲಿರುವ [ಸೂರೇಃ] ಉತ್ತಮ ವಿದ್ಯಾವಂತನಾದ ನಿನ್ನಿಂದ [ಮಹಿ] ಹಿರಿದಾದ [ಸ್ತೋತ್ರಂ] ಸ್ತುತ್ಯರ್ಹವಾದ [ಅವಃ] ರಕ್ಷಾದಿಗಳನ್ನು ನಾವು [ಆ, ಅಗನ್ಮ] ಪಡೆದುಕೊಳ್ಳುತ್ತೇವೆ. [ಗೋಪಾಃ] ನಿಮ್ಮ ರಕ್ಷಣೆ ಮಾಡುತ್ತ [ಸು, ಬೋಧಿ] ಉತ್ತಮ ರೀತಿಯಲ್ಲಿ ಬೋಧಿಸು.

**ಭಾವಾರ್ಥ:-** ಮನುಷ್ಯರು ವಿದ್ಯಾವಂತರ ಸ್ನೇಹ ಮಾಡಬೇಕು ಸಾಮಥ್ಯವನ್ನು ಹೆಚ್ಚಿಸಿಕೊಳ್ಳಬೇಕು. ನ್ಯಾಯಯುತವಾಗಿ ಎಲ್ಲರ ರಕ್ಷಣೆ ಮಾಡಬೇಕು. ಸೂರ್ಯಪ್ರಕಾಶದಂತೆ ಜಗತ್ತಿನಲ್ಲಿ ವಿದ್ಯೆಯನ್ನು ಬೋಧಿಸಿ ಪ್ರಕಾಶಗೊಳಿಸಬೇಕು.

ಪುನಃ ಆದೇ ವಿಷಯವನ್ನು ಹೇಳಲಾಗುತ್ತದೆ.

ಮಹಿ ಕ್ಷೇತ್ರಂ ಪುರು ಶ್ಚಂದ್ರಂ ವಿವಿದ್ವಾ-ನಾದಿತ್ಸಖಿಭ್ಯಶ್ಚರಥಂ ಸಮೈರತ್ ।
ಇಂದ್ರೋ ನೃಭಿರಜನದ್ದೀದ್ಯಾನಃ ಸಾಕಂ ಸೂರ್ಯಮುಷಸಂ ಗಾತುಮಗ್ನಿಮ್ ॥೧೫॥

**ಪದಾರ್ಥ:-** **[ವಿವಿದ್ವಾನ್]** ಜ್ಞಾನಿಯು **[ದೀದ್ಯಾನಃ]** ಪ್ರಕಾಶಮಾನನು **[ಇಂದ್ರಃ]** ಸುಖವರ್ಧಕನೂ ದುಃಖನಾಶಕನೂ ಆದವನು **[ಸಖಿಭ್ಯಃ]** ಸ್ನೇಹಿತರಿಗಾಗಿ **[ಇತ್]** ಅದನ್ನೇ **[ಮಹಿ]** ಬೆಲೆಬಾಳುವ **[ಪುರು]** ವಿಪುಲವಾದ **[ಚಂದ್ರಂ]** ಸುವರ್ಣವನ್ನು **[ಕ್ಷೇತ್ರಂ]** ಪದಾರ್ಥಗಳಿಗೆ ಆಧಾರವಾದ **[ಚರಥಂ]** ಗತಿ ಅಥವಾ ವಿಜ್ಞಾನದ **[ಸಂ]** **[ಐರತ್]** ಪ್ರೇರಣೆ ಮಾಡು. **[ಆತ]** ಅನಂತರ **[ನೃಭಿಃ]** **[ಸಾಕಂ]** ಪ್ರಮುಖ ಜನರೊಂದಿಗೆ **[ಸೂರ್ಯಂ]** ಸೂರ್ಯನನ್ನು **[ಉಷಸಂ]** ಪ್ರಾತಃಕಾಲವನ್ನೂ **[ಗಾತುಂ]** ವಾಣೀ ಅಥವಾ ಭೂಮಿಯನ್ನೂ **[ಅಗ್ನಿಂ]** ಅಗ್ನಿಯನ್ನೂ **[ಅಜನತ್]** ಉತ್ಪಾದನೆಗೊಳಿಸು.

**ಭಾವಾರ್ಥ:-** ಹೇಗೆ ಸೂರ್ಯನು, ಭೂಮಿಯೂ, ವಿದ್ಯುತ್ತೂ, ಅಗ್ನಿಯೂ, ಬೆಳಗಿನ ಸಮಯದಲ್ಲಿ ಸಮೃದ್ಧಿಯನ್ನು ಉಂಟುಮಾಡುತ್ತವೆಯೋ, ಗೆಳೆಯರಿಗೆ ಸುಖಕೊಡುತ್ತವೆಯೋ, ಹಾಗೆ ವಿದ್ಯಾವಂತರು ಮನುಷ್ಯರಾದಿಯಾಗಿ ಎಲ್ಲಾ ಪ್ರಾಣಿಗಳಿಗೂ ಸುಖಕೊಡುವರು.

ಪುನಃ ಆದೇ ವಿಷಯವನ್ನು ಹೇಳಲಾಗುತ್ತದೆ.

ಅಪಶ್ಚಿದೇಷ ವಿಭ್ವೋ (ಓ)ಙ ದಮೂನಾಃ ಪ್ರ ಸಧ್ರೀಚೀರಸೃಜದ್ವಿಶ್ವಶ್ಚಂದ್ರಾಃ ।
ಮಧ್ವಃ ಪುನಾನಾಃ ಕವಿಭಿಃ ಪವಿತ್ರೈ-ರ್ದ್ಯುಭಿರ್ಹಿನ್ವಂತ್ಯಕ್ತುಭಿರ್ಧನುತ್ರೀಃ ॥೧೬॥

**ಪದಾರ್ಥ:-** **[ಕವಿಭಿಃ]** ವಿದ್ಯಾವಂತರೊಂದಿಗೆ **[ಪವಿತ್ರೈಃ]** ಉತ್ತಮ ವ್ಯವಹಾರಗಳೂ **[ದ್ಯುಭಿಃ]** ಹಗಲುಗಳು **[ಅಕ್ತುಭಿಃ]** ರಾತ್ರಿಗಳು ಇವುಗಳಿಂದ **[ಮಧ್ವಃ]** ಮೃದು ಸ್ವಭಾವದ ಮನುಷ್ಯರನ್ನು **[ಪುನಾನಾಃ]** ಪುನೀತರನ್ನಾಗಿಸುತ್ತ **[ಧನುತ್ರೀಃ]** ಧನ-ಧಾನ್ಯಾದಿಗಳೊಂದಿಗೊಡಗೂಡಿ **[ಹಿನಂತಿ]** ಬೆಳೆಸುತ್ತಾರೆ/ಬೆಳೆಯುತ್ತಾರೆ. **[ಚಿತ]** ಹಾಗೂ **[ಏಷಃ]** ಈ **[ವಿಭ್ವಃ]** ವ್ಯಾಪಕವಾದ **[ದಮೂನಾಃ]** ಇಂದ್ರಿಯ ದಮನಿಸುವ ಮನಸ್ಸಿನಿಂದ **[ಸಧ್ರೀಚೀಃ]** ಜೊತೆಗೆ ಸೇರಿರುವವರಾಗಿ **[ವಿಶ್ವಶ್ಚಂದ್ರಾಃ]** ಸಂಪೂರ್ಣಸುವರ್ಣಾದಿಗಳೊಂದಿಗೆ **[ಅಪಃ]** ನೀರಿನಂತೆ ವ್ಯಾಪಕವಾದ ವಿದ್ಯೆಯನ್ನು **[ಪ್ರ]** **[ಅಸೃಜತ್]** ಉತ್ಪಾದಿಸುತ್ತಾನೆ. ನೀವವನ ಸಂಗಮಾಡಿರಿ.

**ಭಾವಾರ್ಥ:-** ವಿದ್ಯಾವಂತರು ಬಹುವಿಧ ಸಂಪತ್ತಿನ ಉತ್ಪಾದಕರೂ, ಸೃಷ್ಟಿಯ ಸಮಸ್ತ ಪದಾರ್ಥಗಳನ್ನು ಕಾರ್ಯ ಸಿದ್ಧಿಗಾಗಿ ಬಳಸಿಕೊಳ್ಳುವವರೂ ಆಗಿರುತ್ತಾರೆ. ಆದ್ದರಿಂದ ವಿದ್ಯಾವಂತರೊಂದಿಗೆ ಪರಿಶುದ್ಧ ಆಚರಣೆಯನ್ನು ಮಾಡಬೇಕು. ಸುಖ-ಸಂಪತ್ತನ್ನೂ ಹಗಲೂ ರಾತ್ರಿ ವೃದ್ಧಿ ಪಡಿಸಿಕೊಳ್ಳಬೇಕು. ಅಂದರೆ ಅವರೇ ಭಾಗ್ಯಶಾಲಿಗಳಾಗುವರು.

ಪುನಃ ಆದೇ ವಿಷಯವನ್ನು ಹೇಳಲಾಗುತ್ತದೆ.

ಅನು ಕೃಷ್ಣೇ ವಸುಧಿತೀ ಜಿಹಾತೇ ಉಭೇ ಸೂರ್ಯಸ್ಯ ಮಂಹನಾ ಯಜತ್ರೇ ।
ಪರಿ ಯತ್ತೇ ಮಹಿಮಾನಂ ವೃಜಧ್ಯೈ ಸಖಾಯ ಇಂದ್ರ ಕಾಮ್ಯಾ ಋಜಿಪ್ಯಾಃ ॥೧೭॥

**ಪದಾರ್ಥ:-** **[ಇಂದ್ರ]** ಸಂಪತ್ಭರಿತ ರಾಜನೇ! **[ಯತ್]** ಯಾವುದು **[ತೇ]** ನಿನ್ನ **[ಕಾಮ್ಯಾಃ]** ಕಾಮನೆ ಮಾಡಲು ಯೋಗ್ಯವಾದ **[ಋಜಿಪ್ಯಾಃ]** ಸರಳ ವ್ಯವಹಾರವನ್ನು ವೃದ್ಧಿಪಡಿಸುವ **[ಸಖಾಯಃ]** ಮಿತ್ರರ **[ಮಹಿಮಾನಂ]** ಮಹಿಮೆಯನ್ನು **[ಅನು]** **[ಕೃಷ್ಣೇ]** ಸೆಳೆಯಲಾದ **[ಉಭೇ]** ಎರಡೂ **[ಯಜತ್ರೇ]** ಪರಸ್ಪರ ಸೇರಿರುವ **[ವಸೂಧಿತೀ]** ಅಂತರಿಕ್ಷ ಮತ್ತು ಭೂಮಿಗಳು **[ಸೂರ್ಯಸ್ಯ]** ಸೂರ್ಯನ **[ಮಂಹನಾ]** ಮಹತ್ವದಿಂದ **[ವೃಜಧ್ಯೈಃ]** ತಡೆಯಲು **[ಪರಿ]** **[ಜಿಹಾತೇ]** ಪ್ರಾಪ್ತವಾಗುತ್ತವೆ ಅದನ್ನು ಹೆಚ್ಚಿಸುತ್ತವೆ.

**ಭಾವಾರ್ಥ:-** ಸೂರ್ಯನು ಹೇಗೆ ತನ್ನ ಪ್ರತಾಪದಿಂದ ಭೂಮ್ಯಾಕಾಶಗಳನ್ನು ಹಾಗೂ ಸಂಪೂರ್ಣ ಪದಾರ್ಥಗಳನ್ನು ಧಾರಣೆ ಮಾಡಿರುವನೋ, ಹಾಗೆ ಶ್ರೇಷ್ಠ ಪುರುಷರು ತಮ್ಮ ಮಹಿಮೆಯಿಂದ ದುರ್ವ್ಯಸನಿಗಳನ್ನು ತ್ಯಜಿಸಿ ಮಿತ್ರರನ್ನು ಧಾರಣ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪತಿರ್ಭವ ವೃತ್ರಹನ್ತ್ಸೂನೃತಾನಾಂ ಗಿರಾಂ ವಿಶ್ವಾಯುರ್ವೃಷಭೋ ವಯೋಧಾಃ ।**
**ಆ ನೋ ಗಹಿ ಸಖ್ಯೇಭಿಃ ಶಿವೇಭಿ-ರ್ಮಹಾನ್ಮಹೀಭಿರೂತಿಭಿಃ ಸರಣ್ಯನ್ ॥೧೮॥**

**ಪದಾರ್ಥ:-** **[ವೃತ್ರಹನ್]** ಮೇಘನಾಶಕ ಸೂರ್ಯಸದೃಶ ರಾಜನೇ! ನೀನು **[ಮಹಾನ್]** ಪ್ರತಿಷ್ಠಿತವಾದ **[ವಿಶ್ವಾಯುಃ]** ಪೂರ್ಣಾಯುಸ್ಸುಳ್ಳ **[ವೃಷಭಃ]** ಸುಖದ ಮಳೆ ಸುರಿಸುವ **[ವಯೋಧಾಃ]** ಜೀವನ ಧಾರಕನಾಗಿರುವೆ. **[ಶಿವೇಭಿಃ]** ಮಂಗಲಕಾರಕ **[ಸಖ್ಯೇಭಿಃ]** ಸ್ನೇಹಿತರ ಕೆಲಸಗಳಿಂದ **[ಮಹೀಭಿಃ]** ಮಹತ್ತಾದ **[ಊತಿಭಿಃ]** ರಕ್ಷಣಾದಿಗಳಿಂದೊಡಗೂಡಿ **[ಸರಣ್ಯನ್]** ತನ್ನ ಚಲನ, ವಿಜ್ಞಾನದ ಇಚ್ಛೆ ಮಾಡುವವನಾಗಿ **[ಸೂನೃತಾನಾಂ]** ಉತ್ತಮ ಸತ್ಯಯುಕ್ತ **[ಗಿರಾಂ]** ವಾಣಿಗಳ **[ಪತಿಃ]** ಪಾಲಕನು **[ಭವ]** ಆಗಿರುವೆ. **[ನಃ]** ನಮ್ಮೆಲ್ಲರನ್ನು **[ಆ, ಗಹಿ]** ಸಮೀಪಿಸುವವನಾಗು.

**ಭಾವಾರ್ಥ:-** ಯಾವನು ಸತ್ಯನುಡಿಯುವವನೂ ಶತ್ರುಭಾವ ತ್ಯಜಿಸುವವನೂ ತನ್ನ ಪ್ರಾಣದಂತೆ ಸಮಗ್ರ ಜನತೆಯ ರಕ್ಷಕನೂ, ಸೂರ್ಯನಂತೆ ವಿದ್ಯೆ-ಧರ್ಮ ಮತ್ತು ನಮ್ರತೆಗಳ ಪ್ರಕಾಶಕನೂ ಆಗಿರುವನೋ ಅವನೇ ಶ್ರೇಷ್ಠ ಸ್ವಾಮಿಯಾಗುವನು.

ಇಲ್ಲಿ ರಾಜ-ಪ್ರಜೆಗಳ ವಿಷಯವಿದೆ.

**ತಮಂಗಿರಸ್ವನ್ನಮಸಾ ಸಪರ್ಯ-ನ್ನವ್ಯಂ ಕೃಣೋಮಿ ಸನ್ಯಸೇ ಪುರಾಜಾಮ್ । ದ್ರುಹೋ**
**ವಿ ಯಾಹಿ ಬಹುಲಾ ಅದೇವೀಃ ಸ್ವಶ್ಚ ನೋ ಮಘವನ್ ತ್ಸಾತಯೇ ಧಾಃ ॥೧೯॥**

**ಪದಾರ್ಥ:-** **[ಅಂಗಿರಸ್ವತ್]** ವಿದ್ವಾಂಸರೊಂದಿಗೆ ವಿರಾಜಮಾನ **[ಮಘವನ್]** ಧನ ಸಂಪನ್ನ ರಾಜನೇ! **[ಪುರಾಜಾಂ]** ಮೊದಲೇ ಉತ್ಪನ್ನವಾದ **[ನವ್ಯಂ]** ಹೊಸದರಂತಿರುವ **[ತಂ]** ಅದನ್ನು ನಾನು **[ಸನ್ಯಸೇ]** ಬೇರೆ-ಬೇರೆಯಾಗಿ ಹಂಚಲಾದ ಪದಾರ್ಥಗಳಲ್ಲಿ ಪ್ರಯತ್ನಿಸುವವನಿಗಾಗಿ **[ನಮಸಾ]** ಸತ್ಕಾರ ಪೂರ್ವಕ **[ಸಪರ್ಯನ್]** ಸೇವೆ ಮಾಡುತ್ತ **[ಬಹುಲಾಃ]** ಬಹಳಷ್ಟು **[ದ್ರುಹಃ]** ಶತ್ರುತನವಿರುವ **[ಅದೇವೀಃ]** ವಿದ್ಯಾರಹಿತ ಸ್ತ್ರೀಯರನ್ನು **[ವಿ, ಯಾಹಿ]** ದೂರಮಾಡು. **[ನಃ]** ನಮ್ಮ **[ಸಾತಯೇ]** ಸಂವಿಭಾಗಕ್ಕಾಗಿ **[ಸ್ವಃ]** **[ಚ]** ಸುಖವನ್ನೂ **[ಧಾಃ]** ಧಾರಣ ಮಾಡು.

**ಭಾವಾರ್ಥ:-** ಪ್ರಜೆಗಳು - ನ್ಯಾಯ - ವಿನಯಾದಿ ಶುಭಗುಣಗಳನ್ನು ಪಡೆದಿರುವ ರಾಜನೇ ಮೊದಲಾದ ಜನರನ್ನು ಯಾವಾಗಲೂ ಗೌರವಿಸಬೇಕು ಮತ್ತು ರಾಜಪುರುಷರೂ ಪ್ರಜೆಗಳನ್ನು ಯಾವಾಗಲೂ ತಂದೆಗೆ ಸಮನಾಗಿ ಪಾಲನೆ ಮಾಡಬೇಕು ಮತ್ತು ಸ್ತ್ರೀಯರನ್ನು ವಿದ್ಯಾವತಿಯರನ್ನಾಗಿ ಮಾಡಬೇಕು. ಇದರಿಂದ ಬಹುವಿಧ ವೃದ್ಧಿ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಿಹಃ ಪಾವಕಾಃ ಪ್ರತತಾ ಅಭೂವನ್ ತ್ಸ್ವಸ್ತಿ ನಃ ಪಿಪೃಹಿ ಪಾರಮಾಸಾಮ್ । ಇಂದ್ರ**
**ತ್ವಂ ರಥಿರಃ ಪಾಹಿ ನೋ ರಿಷೋ ಮಕ್ಷೂಮಕ್ಷೂ ಕೃಣುಹಿ ಗೋಜಿತೋ ನಃ ॥೨೦॥**

**ಪದಾರ್ಥ:-** [ಇಂದ್ರ] ಸೂರ್ಯನಂತೆ ತೇಜಸ್ವಿಯಾದ ರಾಜನೇ! [ರಥಿರಃ] ರಥಾದಿ ವಸ್ತುಗಳ ಸಹಿತನಾಗಿ [ತ್ವಂ] ನೀನು [ನಃ] ನಮ್ಮನ್ನು [ರಿಷಃ] ಹಿಂಸಾಕಾರಕ ಜನರಿಂದ [ಪಾಹಿ] ಕಾಪಾಡು. [ನಃ] ನಮ್ಮನ್ನು [ಗೋಜಿತಃ] ಪೃಥ್ವೀಯನ್ನು ಜಯಿಸುವಂತೆ [ಮಕ್ಷೂಮಕ್ಷೂ] ಬೇಗ-ಬೇಗನೆ [ಕೃಣುಹಿ] ಮಾಡು. [ಆಸಾಂ] ಈ ಶತ್ರು ಸೇನೆಗಳ [ಪಾರಂ] ಆ ದಡ ತಲುಪಿಸು. [ಮಿಹಃ] ಸೇಚನ ಮಾಡುವ [ಪ್ರತತಾಃ] ವಿಸ್ತೃತವಾದ ಮತ್ತು ಗುಣ ಸಂಪನ್ನ [ಪಾವಕಾಃ] ಪವಿತ್ರವಾದ ಮತ್ತು ಬೆರೆಯವರನ್ನು ಪವಿತ್ರಗೊಳಿಸುವವನು [ಅಭೂವನ್] ಆದವನಾಗಿ ಆ ಜನರಿಂದ [ನಃ] ನಮ್ಮ [ಸ್ವಸ್ತಿ] ಸುಖವನ್ನು [ಪಿಪೃಹಿ] ಪೂರ್ಣಗೊಳಿಸು.

**ಭಾವಾರ್ಥ:-** ಪ್ರಜೆಗಳು ಮತ್ತು ಸೇನಾ ಪುರುಷರು ತಮ್ಮ ಪ್ರಧಾನ ಪುರುಷರನ್ನು ಈ ರೀತಿ ಪ್ರಾರ್ಥಿಸಬೇಕು. ನೀವು ನಮ್ಮ ಶತ್ರುಗಳನ್ನು ಜಯಿಸಿ ಸುಖಿಗಳನ್ನಾಗಿ ಮಾಡಿರಿ. ಹೇಗೆ ಮಿಂಚು ಪದಾರ್ಥ ವರ್ಷಣದ ಮೂಲಕ ಹಸಿವೆ ಮುಂತಾದ ದೋಷಗಳನ್ನು ದೂರ ಮಾಡಿ ಆನಂದ ಕೊಡುತ್ತದೆಯೋ, ಹಾಗೆ ಹಿಂಸ್ರ ಪ್ರಾಣಿಗಳಿಂದ ನಮ್ಮನ್ನು ಶೀಘ್ರ ದೂರ ಮಾಡಿ ರಕ್ಷಣೆ ಮಾಡಿ ನಿರಂತರ ಸಂತುಷ್ಟಿಗೊಳಿಸಿರಿ.

ಯಾರು ಗುರುಗಳಾಗಲು ಅರ್ಹರು ಎಂದಿಲ್ಲಿ ಹೇಳಿದೆ.

**ಅದೇದಿಷ್ಟ ವೃತ್ರಹಾ ಗೋಪತಿರ್ಗಾ ಅಂತಃ ಕೃಷ್ಣಾ ಅರುಷೈರ್ಧಾಮಭಿರ್ಗಾತ್ ।**
**ಪ್ರ ಸೂನೃತಾ ದಿಶಮಾನ ಋತೇನ ದುರಶ್ಚ ವಿಶ್ವಾ ಅವೃಣೋದಪ ಸ್ವಾಃ ॥೨೧॥**

**ಪದಾರ್ಥ:-** [ವೃತ್ರಹಾ] ಮೇಘನಾಶಕ ಸೂರ್ಯನು ಹೇಗೆ ತನ್ನ ಕಿರಣಗಳಿಂದ ಜಗತ್ತಿನ ರಕ್ಷಣೆ ಮಾಡುವನೋ ಹಾಗೆ [ಗೋಪತಿಃ] ಗೋಪಾಲಕನು [ಗಾಃ] ಗೋವುಗಳ ರಕ್ಷಣೆ ಮಾಡುತ್ತಾನೋ ಹಾಗೂ [ಅರುಷೈಃ] ರಕ್ತಾಶ್ವಗಳು [ಧಾಮಭಿಃ] ವಿಶೇಷ ಸ್ಥಾನಗಳೊಂದಿಗೆ [ಕೃಷ್ಣಾನ್] ಕೃಷ್ಣ ವರ್ಣವನ್ನು [ಅಂತಃ] ಮಧ್ಯದಲ್ಲಿ [ಗಾತ್] ಪಡೆದುಕೊಳ್ಳುತ್ತವೆಯೋ [ದುರಃ, ಚ] ದ್ವಾರಗಳನ್ನು [ಅಪ, ಆ ವೃಣೋತ್] ತೆರೆಯುತ್ತದೆಯೋ ಹಾಗೆ [ಋತೇನ] ಸತ್ಯದಂತೆ, ಜಲದಂತೆ [ವಿಶ್ವಾಃ] ಸಮಗ್ರವಾದ [ಸ್ವಾಃ] ತನ್ನ [ಸೂನೃತಾಃ] ಸತ್ಯವಾಣಿಯನ್ನು [ಪ್ರ, ದಿಶಮಾನಃ] ಉತ್ತಮ ರೀತಿಯಲ್ಲಿ ಉಪದೇಶ ಮಾಡುವವನಾಗಿ [ಅದೇ ದಿಷ್ಟ] ನೀನು ಉಪದೇಶಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸೂರ್ಯನಂತೆ, ಗೋಪಾಲಕರಂತೆ ತಂದೆಯಂತೆ ಎಲ್ಲರನ್ನೂ ರಕ್ಷಿಸುವರೋ ಅವರೇ ಗುರುಜನರಾಗಲು ಅರ್ಹರು.

ಯಾರು ವಿಜಯಿಗಳಾಗುವರು ಎಂದಿಲ್ಲಿ ಹೇಳಿದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**

**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೨೨॥**

**ಪದಾರ್ಥ:-** [ಊತಯೇ] ರಕ್ಷಣಾದಿಗಳಿಗಾಗಿ [ವೃತ್ರಾಣಿ] ಮೇಘಗಳ ಅವಯವಗಳನ್ನು ಸೂರ್ಯನು ಹೇಗೋ ಹಾಗೆ [ಅಸ್ಮಿನ್] ಈ ವರ್ತಮಾನ [ಭರೇ] ಭರಿಸಲು ಯೋಗ್ಯವಾದ [ವಾಜಸಾತೌ] ಅನ್ನಾದಿಗಳ ವಿಭಾಗ ಮಾಡುವ ವ್ಯವಹಾರಗಳಲ್ಲಿ [ಧನಾನಾಂ] ಸಂಪತ್ತುಗಳ [ಸಂಜಿತಂ] ಜಯ ಸಾಧಿಸುವವನು [ನೃತಮಂ] ಪ್ರಧಾನ ಪುರುಷನು [ಸಮತ್ಸು] ಸಂಗ್ರಾಮಗಳಲ್ಲಿ [ಘ್ನಂತಂ] ನಾಶ ಮಾಡುತ್ತ [ಶೃಣ್ವಂತಂ] ಕೇಳಿಸಿಕೊಳ್ಳುತ್ತ [ಉಗ್ರಂ] ತೇಜಸ್ವಿಯಾದ [ಶುನಂ] ವೃದ್ಧಿಕರ್ತನನ್ನು [ಮಘವಾನಃ] ಧನ ಸಂಪನ್ನ [ಇಂದ್ರಂ] ಶತ್ರು ವಿದಾರಕನನ್ನು [ಹುವೇಮ] ಸ್ವೀಕರಿಸಬೇಕು/ ಅದೇರೀತಿ ನಾವು ನಿಮ್ಮನ್ನು ಆಹ್ವಾನಿಸೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರಲ್ಲಿ ಶ್ರೇಷ್ಠವಾದ ಧನ-ಬಲ ಮತ್ತು ಎಲ್ಲರೂ ಕೇಳಿಸಿಕೊಳ್ಳುವಂತಹ ಉತ್ತಮ ನುಡಿಗಳು ಇರುತ್ತವೆಯೋ, ಅವರೇ ಸಂಗ್ರಾಮಗಳಲ್ಲಿ ಶತ್ರುಗಳನ್ನು ಸಾಯಿಸಲು, ಜಯಿಸಲು ಸಮರ್ಥರಾಗಿರುತ್ತಾರೆ.

ಈ ಸೂಕ್ತದಲ್ಲಿ ಅಗ್ನಿ, ರಾಜ, ಸೇನೆ, ಮಿತ್ರ, ವಾಣಿ, ಉಪದೇಶಕ ಮತ್ತು ಪ್ರಜೆಗಳ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮೂವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೩೨

ಮಂತ್ರಸಂಖ್ಯೆ ೧೭ । ವಿಶ್ವಾಮಿತ್ರ ಋಷಿಃ । ೧-೩, ೭-೯, ೧೭ ತ್ರಿಷ್ಟುಪ್, ಛಂದಃ । ೧೧-೧೪ ನಿಚೃತ್ರಿಷ್ಟುಪ್, ೧೬ ವಿರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪, ೧೦ ಭುರಿಕ್ಪಂಕ್ತಿಃ, ೫ ನಿಚೃತ್ಪಂಕ್ತಿಃ, ೬ ವಿರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಸೂಕ್ತದ ಪ್ರಥಮ ಮಂತ್ರದಲ್ಲಿ ನಿತ್ಯಕರ್ಮವಿಧಿ ಹೇಳಿದೆ.

**ಇಂದ್ರ ಸೋಮಂ ಸೋಮಪತೇ ಪಿಬೇಮಂ ಮಾಧ್ಯಂದಿನಂ ಸವನಂ ಚಾರು ಯತ್ತೇ ।**

**ಪ್ರಪ್ರುಥ್ಯಾ ಶಿಪ್ರೇ ಮಘವನ್ನೃಜೀಷಿನ್ ವಿಮುಚ್ಯಾ ಹರೀ ಇಹ ಮಾದಯಸ್ವ ॥೧॥**

**ಪದಾರ್ಥ:-** [ಮಘವನ್] ಶ್ರೇಷ್ಠ ಧನ ಸಂಪನ್ನನೇ! [ಸೋಮಪತೇ] ಐಶ್ವರ್ಯಪಾಲಕನೇ! [ಇಂದ್ರ] ಐಶ್ವರ್ಯ ಉತ್ಪಾದಕನೇ! ನೀನು [ಇಮಂ] ಈ [ಸೋಮಂ] ಐಶ್ವರ್ಯಕಾರಕ ಸೋಮಾದಿ ಓಷಧಿಗಳನ್ನು [ಪಿಬ] ಪಾನಮಾಡು. [ಚಾರು] ಭೋಜನ ಯೋಗ್ಯವಾದ [ಮಾಧ್ಯಂದಿನಂ] ದಿನದ ಮಧ್ಯದಲ್ಲಿ ಮಾಡುವ [ಸವನಂ] ಭೋಜನ ಗ್ರಹಣ ಕ್ರಿಯೆಯನ್ನು ಸಂಪನ್ನಗೊಳಿಸು. [ಋಜಿಷಿನ್] ಶುದ್ಧಿಕರ್ತನೇ! [ತೇ] ನಿನ್ನ [ಯತ್] ಯಾವ [ಶಿಪ್ರೇ] ಬಾಯಿಯ ಅವಯವದಂತಿರುವ ಐಹಿಕ ಆಮುಷ್ಮಿಕ ವ್ಯವಹಾರಗಳಿವೆಯೋ ಅವುಗಳನ್ನು [ಪ್ರಪ್ರುಥ್ಯಾ] ಪೂರ್ಣಗೊಳಿಸು ಮತ್ತು ದುರ್ವ್ಯಸನಗಳನ್ನು [ವಿಮುಚ್ಯ] ತ್ಯಜಿಸಿ [ಹರೀ] ಕುದುರೆಗಳಂತೆ ಆಕರ್ಷಿಸುವ ಪ್ರಯೋಗವನ್ನು ಮಾಡಿ [ಇಹ] ಈ ಪ್ರಪಂಚದಲ್ಲಿ [ಮಾದಯಸ್ವ] ಆನಂದ ಪಡುವವನಾಗು.

**ಭಾವಾರ್ಥ:-** ಮನುಷ್ಯರು ಮೊದಲು ಭೋಜನವನ್ನು ಮಧ್ಯಾಹ್ನದ ಸಮಯದಲ್ಲಿ ಸ್ವೀಕರಿಸಬೇಕು. ಅಗ್ನಿಹೋತ್ರಾದಿ ಕರ್ಮಗಳಲ್ಲಿ ಬಲಿ-ವೈಶ್ವದೇವ ಮುಂತಾದ ಕರ್ಮಗಳನ್ನು ಭೋಜನದ ಮೊದಲು ಮಾಡಬೇಕು. ಇಂತಹ ಕರ್ಮಗಳಿಂದ ದೂಷಿತ ವಾಯುವನ್ನು ನಿವಾರಿಸಿ ಸಂತುಷ್ಟಿ ಪಡೆಯಬೇಕು.

ಯಾರು ಶ್ರೀಮಂತರಾಗುವರು ಎಂಬುದನ್ನಿಲ್ಲಿ ತಿಳಿಸಲಾಗಿದೆ.

**ಗವಾಶಿರಂ ಮಂಥಿನಮಿಂದ್ರ ಶುಕ್ರಂ ಪಿಬಾ ಸೋಮಂ ರರಿಮಾ ತೇ ಮದಾಯ ।**
**ಬ್ರಹ್ಮಕೃತಾ ಮಾರುತೇನಾ ಗಣೇನ ಸಜೋಷಾ ರುದ್ರೈಸ್ತೃಪದಾ ವೃಷಸ್ವ ॥೨॥**

**ಪದಾರ್ಥ:-** **[ಇಂದ್ರ]** ದುಃಖನಾಶಕನೇ! ನಾವು **[ತೇ]** ನಿನ್ನ **[ಮದಾಯ]** ಆನಂದಕ್ಕಾಗಿ **[ಗವಾಶಿರಂ]** ಕಿರಣಗಳಿಂದ / ಇಂದ್ರಿಯಗಳಿಂದ ಕೂಡಿದವನಾಗಿ **[ಶುಕ್ರ]** ಬೇಗ ಶುಚಿಗೊಳಿಸುವ **[ಮಂಥಿನಂ]** ಮಥನ ಮಾಡುವ ಸ್ವಭಾವವಿರುವ **[ಸೋಮಂ]** ಐಶ್ವರ್ಯದಾಯಕ ಪಾನ ಯೋಗ್ಯ ವಸ್ತುವನ್ನು **[ರರಿಮ]** ಕೊಡುವೆವು. **[ಪಿಬ]** ಅದನ್ನು ಕುಡಿಯುವವನಾಗು. **[ಬ್ರಹ್ಮಕೃತಾ]** ಧನ/ಅನ್ನವನ್ನು ಉತ್ಪಾದಿಸುವವನಾದ **[ಮಾರುತೇನ]** ಸುವರ್ಣಾದಿಗಳಿಗೆ ಸಂಬಂಧಿಸಿದ **[ಗಣೇನ]** ಸಮೂಹದಿಂದ **[ರುದ್ರೈಃ]** ಪ್ರಾಣಗಳಿಗೆ ಸದೃಶವಾದ ಮಧ್ಯಮ ವಿದ್ಯಾವಂತರೊಂದಿಗೆ **[ಸಜೋಷಾಃ]** ತನಗೆ ಯೋಗ್ಯ ಪ್ರೀತಿಯ ಸೇವನೆ ಮಾಡುವವನು. **[ತ್ರಿಪತ್]** ತೃಪ್ತನಾಗಿ **[ಆ]** **[ವೃಷಸ್ವ]** ಬಲಿಷ್ಠನಾಗು.

**ಭಾವಾರ್ಥ:-** ಯಾರು ಬೇರೆಯವರೊಂದಿಗೆ ತನ್ನಂತೆಯೇ ವ್ಯವಹರಿಸಿಕೊಳ್ಳುತ್ತ ಅವರೊಂದಿಗೆ ಸುಖ ಪಡೆದು ಸುವರ್ಣಾದಿ ಸಂಪತ್ತುಗಳನ್ನು ವೃದ್ಧಿಪಡಿಸಿಕೊಂಡು ಸಂತುಷ್ಟರಾಗಿ ಬಲಿಷ್ಠರಾಗುವರೋ ಅವರೇ ಶ್ರೀಮಂತರು.

ರಾಜಧರ್ಮವನ್ನಿಲ್ಲಿ ಹೇಳಿದೆ.

**ಯೇ ತೇ ಶುಷ್ಮಂ ಯೇ ತವಿಷೀಮವರ್ಧ-ನ್ನರ್ಚಂತ ಇಂದ್ರ ಮರುತಸ್ತ ಓಜಃ ।**
**ಮಾಧ್ಯಂದಿನೇ ಸವನೇ ವಜ್ರಹಸ್ತ ಪಿಬಾ ರುದ್ರೇಭಿಃ ಸಗಣಃ ಸುಶಿಪ್ರ ॥೩॥**

**ಪದಾರ್ಥ:-** **[ಸುಶಿಪ್ರ]** ಸುಂದರವಾದ ದವಡೆ, ನಾಸಿಕಗಳಿರುವವನೂ **[ವಜ್ರಹಸ್ತ]** ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ ಆದ **[ಇಂದ್ರ]** ದುಷ್ಟ ಪುರುಷರ ನಾಶಕನೇ! **[ಯೇ]** ಯಾರು **[ಅರ್ಚಂತಃ]** ನಿನ್ನ ಸತ್ಕಾರ ಮಾಡುವವರು **[ಮರುತಃ]** ವಾಯುವಿನಂತೆ ವೀರರು **[ತೇ]** ನಿನ್ನ ಸಮೀಪದಿಂದ **[ಶುಷ್ಮಂ]** ಬಲವನ್ನು **[ಅವರ್ಧನ್]** ಹೆಚ್ಚಿಸಿಕೊಳ್ಳುವರೋ **[ಯೇ]** ಯಾರು **[ತೇ]** ನಿನ್ನ **[ತವಿಷೀಂ]** ಸೇನೆಯನ್ನು **[ಓಜಃ]** ಪರಾಕ್ರಮವನ್ನು ಹೆಚ್ಚಿಸುವರೋ **[ರುದ್ರೇಭಿಃ]** ದುಷ್ಟರನ್ನು ರೋದನಕ್ಕೊಳಪಡಿಸುವವನು ಅಂತಹ ವೀರರೊಂದಿಗೆ **[ಸಗಣಃ]** ಪರಿವಾರ ಸಹಿತನಾಗಿ ನೀನು **[ಮಾಧ್ಯಂದಿನೇ]** ದಿನದ ಮಧ್ಯಭಾಗದಲ್ಲಿ **[ಸವನೇ]** ಪ್ರೇರಣೆ ನೀಡುವಂತಹ ಸೋಮರಸವನ್ನು ಕುಡಿಯುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ನೀನು ನಿನ್ನ ಮಂತ್ರಿ, ಸೇನೆ, ವಿಜಯ, ಧನ, ರಾಜ್ಯ, ಶಿಕ್ಷಣ, ವಿದ್ಯೆ ಮತ್ತು ಧರ್ಮ ಇವುಗಳನ್ನೆಲ್ಲ ಪ್ರತಿದಿನವೂ ಹೆಚ್ಚಿಸಿಕೊಂಡು ಅವುಗಳ ಸೇವನೆ ಮಾಡಿ ರಾಜ್ಯದ ಸುಖವನ್ನು ಯಾವಾಗಲೂ ಅನುಭವಿಸುವವನಾಗು.

ಯಾರು ವಿದ್ಯಾವಂತರಾಗುವರು ಎಂಬುದನ್ನಿಲ್ಲಿ ತಿಳಿಸಲಾಗಿದೆ.

**ತ ಇನ್ವ್ವಸ್ಯ ಮಧುಮದ್ವಿವಿಪ್ರ ಇಂದ್ರಸ್ಯ ಶರ್ಧೋ ಮರುತೋ ಯ ಆಸನ್ ।**
**ಯೇಭಿರ್ವೃತ್ರಸ್ಯೇಷಿತೋ ವಿವೇದಾ-ಮರ್ಮಣೋ ಮನ್ಯಮಾನಸ್ಯ ಮರ್ಮ ॥೪॥**

**ಪದಾರ್ಥ:-** [**ಯೇ**] ಯಾರು [**ಮರುತಃ**] ಗಾಳಿಯಂತೆ ವೇಗವಂತರೂ, ಬಲಿಷ್ಠರೂ ಆಗಿರುವರೋ [**ಅಸ್ಯ**] ಈ [**ಇಂದ್ರಸ್ಯ**] ಐಶ್ವರ್ಯವಂತನ [**ಶರ್ಧಃ**] ಬಲವನ್ನು [**ವಿವಿಪ್ರೇ**] ಎಸೆಯುವವರು [**ಆಸನ್**] ಬಾಯಿಯಲ್ಲಿ [**ಮಧುಮತ್**] ಮಧುರ ಗುಣವಿರುವ ಪದಾರ್ಥಗಳನ್ನು [**ಇತ್**] ಇಟ್ಟುಕೊಳ್ಳುವರೋ [**ಯೇಭಿಃ**] ಯಾರಿಂದ [**ಇಷಿತಃ**] ಪ್ರೇರಣೆ ಪಡೆದವರಾಗಿ [**ವೃತ್ರಸ್ಯ**] ಮೇಘನಿಗೆ ಸದೃಶವಾದ ಶತ್ರುಗಳ [**ಅಮರ್ಮಣಃ**] ಮರ್ಮ ರಹಿತವಾದ/ ಹುರುಳಿಲ್ಲದ [**ಮರ್ಮ**] ಮರ್ಮ ಸ್ಥಳವನ್ನು [**ಮನ್ಯಮಾನಸ್ಯ**] ತಿಳಿದುಕೊಳ್ಳುವವನನ್ನು [**ವಿವೇದ**] ತಿಳಿದಕೊ. [**ತೇ**] ಅವರು [**ನು**] ನಿಶ್ಚಯವಾಗಿಯೂ ನಿನ್ನ ಇಚ್ಛೆಯನ್ನು ನೇರವೇರಿಸುವರು.

**ಭಾವಾರ್ಥ:-** ಯಾರು ಧನಾದಿ ಐಶ್ವರ್ಯಗಳಿಂದ ಎಲ್ಲರ ಸುಖವನ್ನು ವೃದ್ಧಿಗೊಳಿಸಿ ದುಃಖವನ್ನು ನಿವಾರಿಸಿ, ಎಲ್ಲರನ್ನೂ ಪ್ರಸನ್ನಗೊಳಿಸುತ್ತಾರೋ ಅವರೇ ಧಾರ್ಮಿಕ ವಿದ್ವಾಂಸರೆನಿಸಿಕೊಳ್ಳುತ್ತಾರೆ.

ವಿದ್ಯಾವಂತರು ಏನು ಮಾಡುವರೆಂಬುದನ್ನಿಲ್ಲಿ ಹೇಳಿದೆ.

**ಮನುಷ್ವದಿಂದ್ರ ಸವನಂ ಜುಷಾಣಃ ಪಿಬಾ ಸೋಮಂ ಶಶ್ವತೇ ವೀರ್ಯಾಯ ।**
**ಸ ಆ ವವೃತ್ಸ್ವ ಹರ್ಯಶ್ವ ಯಜ್ಞೈಃ ಸರಣ್ಯುಭಿರಪೋ ಅರ್ಣಾ ಸಿಸರ್ಷಿ ॥೫॥**

**ಪದಾರ್ಥ:-** [**ಹರ್ಯಶ್ವ**] ಹರಣಶೀಲ ವ್ಯಾಪಿಸುವ ಸ್ವಭಾವ ಇರುವ ಅಶ್ವವನ್ನು, ಅದರಂತಿರುವ ಅಗ್ನಿಯನ್ನು ತಿಳಿದಿರುವವನಾದ [**ಇಂದ್ರ**] ಐಶ್ವರ್ಯದಾಯಕನೇ! [**ಸರಣ್ಯುಭಿಃ**] ಆಶ್ರಯ ಪಡೆಯಲು ಇಚ್ಛಿಸುವ ಪುರುಷರೊಂದಿಗೆ [**ಯಜ್ಞೈಃ**] ಗೌರವ, ದಾನ ಮುಂತಾದ ವ್ಯವಹಾರದೊಂದಿಗೆ [**ಅರ್ಣಾ**] ನೀರನ್ನು [**ಅಪಃ**] ಅಂತರಿಕ್ಷಕ್ಕೆ [**ಸಿಸರ್ಷಿ**] ತಲುಪಿಸುತ್ತಾರೆ. ಇದರಿಂದ [**ಸಃ**] ಆ ನೀನು [**ಸವನಂ**] ಐಶ್ವರ್ಯವನ್ನು [**ಜುಷಾಣಃ**] ಸೇವನೆ ಮಾಡುವವನು [**ಶಶ್ವತೇ**] ಅನಾದಿ ಕಾಲದಿಂದಲೂ ಇರುವ [**ವೀರ್ಯಾಯ**] ಬಲಕ್ಕಾಗಿ [**ಸೋಮಂ**] ಶರೀರ ಆತ್ಮಬಲಗಳನ್ನು ಹೆಚ್ಚಿಸುವ ಸೋಮರಸವನ್ನು [**ಪಿಬ**] ಪಾನ ಮಾಡು. [**ಮನುಷ್ವತ್**] ವಿಚಾರಶೀಲ ಮನುಷ್ಯರಂತೆ [**ಆ**] [**ವವೃತ್ಸ್ವ**] ಉತ್ತಮ ರೀತಿಯಲ್ಲಿ ವರ್ತಿಸುವವನಾಗು.

**ಭಾವಾರ್ಥ:-** ಯಾವ ಮನುಷ್ಯರು ಬ್ರಹ್ಮಚರ್ಯ ಪಾಲನೆ, ವಿದ್ಯಾರ್ಜನೆ, ಉತ್ತಮ ಶಿಕ್ಷಣ, ಪುಷ್ಟಿಕಾರಕ ಭೋಜನ, ಆನಂದದಾಯಕ ವಿಹಾರ ಸತ್ಪುರುಷರ ಸಂಗ ಮತ್ತು ಧರ್ಮಾಚರಣೆ ಇವುಗಳಿಂದ ಆತ್ಮವನ್ನು ಶರೀರ ಬಲವನ್ನು ದೃಢವಾಗಿಸಿ ಹೆಚ್ಚಿಸಿಕೊಳ್ಳುತ್ತಾರೋ ಅವರು ಉನ್ನತಿ ಪಡೆಯುತ್ತಾರೆ. ಸೂರ್ಯನು ಹೇಗೆ ನೀರನ್ನು ವಾಯುವಿನ ಮೂಲಕ ಅಂತರಿಕ್ಷಕ್ಕೆ ಸೆಳೆಯುತ್ತಾನೋ ಅದೇ ರೀತಿ ವಿದ್ಯಾವಂತನು ವಿದ್ಯೆ ಪ್ರತಿಷ್ಠೆಗಳ ಮೂಲಕ ತನ್ನತ್ತ ಜನರನ್ನು ಸೆಳೆದು ಅವರನ್ನು ಉನ್ನತಿಗೊಳಿಸುತ್ತಾನೆ.

ರಾಜರು ಏನು ಮಾಡುವರು ಎಂಬುದನ್ನಿಲ್ಲಿ ಹೇಳಲಾಗಿದೆ.

**ತ್ವಮಪೋ ಯದ್ಧ ವೃತ್ರಂ ಜಘನ್ವಾ ಅತ್ಯಾ ಇವ ಪ್ರಾಸೃಜಃ ಸರ್ತವಾಜೌ ।**
**ಶಯಾನಮಿಂದ್ರ ಚರತಾ ವಧೇನ ವವ್ರಿವಾಂಸಂ ಪರಿ ದೇವೀರದೇವಮ್ ॥೬॥**

**ಪದಾರ್ಥ:-** [**ಇಂದ್ರ**] ಶತ್ರುನಾಶಕನೇ! [**ಯತ್**] ಯಾವ [**ತ್ವಂ**] ನೀನು [**ಅತ್ಯಾನಿವ**] ಕುದುರೆಗಳನ್ನು ಸೂರ್ಯನಿಗೆ ಸಮಾನವಾಗಿ [**ಅದೇವಂ**] ಅವಿದ್ಯಾವಂತನಾದ [**ವೃತ್ರಂ**] ದುಷ್ಟನನ್ನು [**ಜಘನ್ವಾನ್**] ನಾಶ ಮಾಡುವನು. [**ಚರತಾ**] ನಡೆಯುತ್ತಿರುವ [**ವಧೇನ**] ಸಾವಿನಿಂದ [**ಶಯಾನಂ**] ಮಲಗಿರುವ [**ವವ್ರಿವಾಂಸಂ**] ಸಂವರಣ ಮಾಡಲಾದವನನ್ನು [**ದೇವೀಃ**] ಉತ್ತಮ ಕಿರಣ ಮತ್ತು [**ಅಪಃ**] ಜಲವನ್ನು [**ಹ**] ನಿಶ್ಚಯವಾಗಿ ಉತ್ಪಾದಿಸುವನು. ಅದರಂತೆ [**ಸರ್ತವೈ**] ತಿಳಿಯಲು ಯೋಗ್ಯವಾದ [**ಆಜೌ**] ಯುದ್ಧದಲ್ಲಿ [**ಪರಿ**] ನಾಲ್ಕೂಕಡೆಗಳಿಂದ [**ಪ್ರ ಅಸೃಜ**] ಉತ್ಪಾದನ ಮಾಡು. ಅಂದರೆ ನಮ್ಮಿಂದ ಸತ್ಕಾರಯೋಗ್ಯನಾಗುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ರಾಜ ಮುಂತಾದ ವೀರ ಪುರುಷರು ಸೂರ್ಯನು ಮೇಘವನ್ನು ಹೇಗೋ ಹಾಗೆ ಸಂಗ್ರಾಮದಲ್ಲಿ ಶಸ್ತ್ರಾಸ್ತ್ರಗಳಿಂದ ಶತ್ರುಗಳನ್ನು ಜಯಿಸುವರೋ ಅವರು ಪ್ರತಾಪಶಾಲಿಗಳಾಗುವರು.

ಈ ಮಂತ್ರದಲ್ಲಿ ಎಂತಹ ಈಶ್ವರನ ಉಪಾಸನೆ ಮಾಡಬೇಕು ಎಂಬುದನ್ನು ತಿಳಿಸಲಾಗಿದೆ.

**ಯಜಾಮ ಇನ್ನಮಸಾ ವೃದ್ಧಮಿಂದ್ರಂ ಬೃಹಂತಮೃಷ್ವಮಜರಂ ಯುವಾನಮ್ ।**
**ಯಸ್ಯ ಪ್ರಿಯೇ ಮಮತುರ್ಯಜ್ಞಿಯಸ್ಯ ನ ರೋದಸೀ ಮಹಿಮಾನಂ ಮಮಾತೇ ॥೭॥**

**ಪದಾರ್ಥ:-** [**ಯಸ್ಯ**] ಯಾವ [**ಯಜ್ಞಿಯಸ್ಯ**] ಪೂಜಾರ್ಹ ಪರಮೇಶ್ವನನ್ನು [**ಮಹಿಮಾನಂ**] ಮಹತ್ವವನ್ನು [**ರೋದಸೀ**] ಭೂಮ್ಯಂತರಿಕ್ಷಗಳು [**ನ**] [**ಮಮಾತೆ**] ಅಳೆಯಲಾರವು. [**ಪ್ರಿಯೆ**] ಪ್ರೀತಿ ಮಾಡುವ ಈ ಲೋಕ ಮತ್ತು ಪರಲೋಕದ ಸುಖಗಳೂ [**ನ**] [**ಮಮಾತು**] ಅಳೆಯಲಾರವು. [**ಇತ್**] ಅದೇ [**ಯುವಾನಂ**] ಸಮಗ್ರ ಪ್ರಪಂಚದ ಸಂಯೋಗ-ವಿಭಾಗ ಮಾಡುವವನು [**ಅಜರಂ**] ಮುಪ್ಪಿಲ್ಲದ [**ಋಷ್ವಂ**] ಶ್ರೇಷ್ಠವಾದ [**ಬೃಹಂತಂ**] ಬೃಹತ್ತಾದ [**ವೃದ್ಧಂ**] ಆಯುಸ್ಸನ್ನನುಭವಿಸಿರುವವನು ವಿದ್ಯೆಯಿಂದ [**ಇಂದ್ರಂ**] ಪರಮೈಶ್ವರ್ಯಕಾರಕ ಪರಮೇಶ್ವರನನ್ನು [**ನಮಸಾ**] ಗೌರವ ಪೂರ್ವಕ [**ಯಜಾಮ**] ನಾವು ಪೂಜೆ ಮಾಡುತ್ತೇವೆ. ನೀವೂ ಮಾಡಿರಿ.

**ಭಾವಾರ್ಥ:-** ಪರಮೇಶ್ವರನ ಅಪೇಕ್ಷೆಯು ಯಾವ ಪಥಕ್ಕೆ ಸಮ ಅಥವಾ ಅಧಿಕವಲ್ಲ. ಯಾರು ಎಲ್ಲದಕ್ಕಿಂತಲೂ ಶ್ರೇಷ್ಠನೋ ವ್ಯಾಪಕನೋ ನಾಶರಹಿತನೋ ಪೂಜ್ಯನೋ ಅಂತಹ ಪರಮೇಶ್ವರನ ಉಪಾಸನೆಯನ್ನು ನಾವೆಲ್ಲರೂ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಸ್ಯ ಕರ್ಮ ಸುಕೃತಾ ಪುರೂಣಿ ವ್ರತಾನಿ ದೇವಾ ನ ಮಿನಂತಿ ವಿಶ್ವೇ । ದಾಧಾರ**
**ಯಃ ಪೃಥಿವೀಂ ದ್ಯಾಮುತೇಮಾಂ ಜಜಾನ ಸೂರ್ಯಮುಷಸಂ ಸುದಂಸಾಃ ॥೮॥**

**ಪದಾರ್ಥ:-** [**ಸುದಂಸಃ**] ಉತ್ತಮ ಧರ್ಮಕರ್ಮಗಳನ್ನು ಮಾಡುವ ಪರಮೇಶ್ವರನು [**ಇಮಾಂ**] ಈ [**ಪೃಥಿವೀಂ**] ಭೂಮಿಯನ್ನು [**ದ್ಯಾಂ**] ಪ್ರಕಾಶಮಯಲೋಕವನ್ನು [**ಸೂರ್ಯಂ**] ಸೂರ್ಯಲೋಕವನ್ನು [**ಉತ**] ಮತ್ತು [**ಉಷಸಂ**] ಪ್ರಭಾತಕಾಲವನ್ನು [**ಜಜಾನ**] ಉತ್ಪಾದಿಸಿರುವನು. [**ದಾಧಾರ**] ಅವುಗಳೆಲ್ಲವನ್ನು ಧಾರಣ ಮಾಡಿ ಪೋಷಿಸುವನು. [**ಇಂದ್ರಸ್ಯ**] ಅಂತಹ ಪರಮಾತ್ಮನ [**ವಿಶ್ವೇ**] [**ದೇವಾಃ**] ಸಮಗ್ರ ಪೃಥಿವ್ಯಾದಿ ಲೋಕವಾಸಿ ವಿದ್ಯಾವಂತರು [**ವ್ರತಾನಿ**] ಸತ್ಯಾಚರಣೆಯನ್ನು [**ಸುಕೃತಾ**] ಉತ್ತಮ ರೀತಿಯಿಂದ [**ಪುರೂಣಿ**] ಬಹುವಿಧವಾದ

**[ಕರ್ಮ]** ಕರ್ಮಗಳನ್ನು **[ನ]** **[ಮಿನಂತಿ]** ನಾಶಮಾಡಲಾರರು. ಅಂತಹ ಪರಮಾತ್ಮನ ಉಪಾಸನೆಯನ್ನು ನಾವೆಲ್ಲರೂ ಮಾಡೋಣ.

**ಭಾವಾರ್ಥ:-** ಪರಮೇಶ್ವರನ ಕಾರ್ಯವಾದ ಸೃಷ್ಟಿರೂಪವಾದ ಸಮಗ್ರ ಲೋಕಗಳು ಅಲ್ಲಿರುವ ಪದಾರ್ಥಗಳು ಅವನ ಸಾಮರ್ಥ್ಯ ಅಥವಾ ಅವನ ಪಾವಿತ್ರ್ಯವನ್ನು ಯಾರೂ ನಾಶಮಾಡಲಾರರು. ಯಾರು ಈ ಪರಮೇಶ್ವರನ ಅಸ್ತಿತ್ವವನ್ನರಿತು ಆಸ್ತಿಕ ಭಾವನೆಯಿಂದ ಅವನ ಉಪಾಸನೆ ಮಾಡುವರೋ ಅವರೇ ಪವಿತ್ರರೂ ಸಾಮರ್ಥ್ಯಸಂಪನ್ನರೂ ಆಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅದ್ರೋಘ ಸತ್ಯಂ ತವ ತನ್ಮಹಿತ್ವಂ ಸದ್ಯೋ ಯಜ್ಜಾತೋ ಅಪಿಬೋ ಹ ಸೋಮಮ್ ।**
**ನ ದ್ಯಾವ ಇಂದ್ರ ತವಸಸ್ತ ಓಜೋ ನಾಹಾ ನ ಮಾಸಾಃ ಶರದೋ ವರಂತ ॥೯॥**

**ಪದಾರ್ಥ:-** **[ಅದ್ರೋಘ]** ದ್ರೋಹರಹಿತ **[ಇಂದ್ರ]** ಐಶ್ವರ್ಯದಾಯಕ ಜಗದೀಶ್ವರನೇ! **[ಯತ್]** ಯಾವ **[ಸದ್ಯಃ]** ತತ್ಕಾಲದಲ್ಲಿ **[ಜಾತಃ]** ಜನಿಸಿದ **[ಸೋಮಂ]** ಸಮಗ್ರ ಜಗತ್ತಿನ ರಸವನ್ನು **[ಅಪಿಬಃ]** ಕುಡಿಯುತ್ತಾನೋ/ಆಕರ್ಷಿಸುತ್ತಾನೋ **[ತತ್]** ಅದು, ಅವನು **[ತವ]** ನಿನ್ನ **[ಸತ್ಯಂ]** ಯಥಾರ್ಥವಾದ **[ಮಹಿತ್ವಂ]** ಮಹಿಮೆಯನ್ನು **[ನ]** ಉಲ್ಲಂಘಿಸಲಾರನು. **[ತೇ]** ನಿನ್ನ **[ತವಸಃ]** ಬಲದ **[ಓಜಃ]** ಪ್ರಭಾವವನ್ನು **[ನ]** ಉಲ್ಲಂಘಿಸಲಾರನು. **[ದ್ಯಾವಃ]** ಪ್ರಕಾಶವೂ **[ಅಗ್ನಾ]** ದಿನಗಳೂ **[ನ]** ಉಲ್ಲಂಘಿಸಲಾರವು. **[ನ, ಮಾಸಾಃ]** **[ನ, ಶರದಃ]** ಮಾಸಗಳೂ ಋತುಗಳೂ ಉಲ್ಲಂಘಿಸಲಾರವು. **[ವರಂತ]** ವರಿಸುತ್ತವೆ/ ಸ್ವೀಕರಿಸುತ್ತವೆ. **[ಭವಂತಂ]** **[ಹ]** ಅಂತಹ ಪರಮೇಶ್ವರನ ಸೇವೆ/ಉಪಾಸನೆಗಳನ್ನು ನಾವೆಲ್ಲರೂ ನಿರಂತರ ಮಾಡಬೇಕು.

**ಭಾವಾರ್ಥ:-** ಪರಮೇಶ್ವರನು ಯಾರಿಗೂ ದ್ರೋಹವೆಸಗುವುದಿಲ್ಲ. ಅದೇರೀತಿ ನೀವೂ ಮಾಡಿರಿ. ಯಾವ ಪರಮೇಶ್ವರನ ಸೃಷ್ಟಿಯಲ್ಲಿ ಸೂರ್ಯನಂತಹ ದೊಡ್ಡ-ದೊಡ್ಡ ಪದಾರ್ಥಗಳಿವೆಯೋ ಯಾವ ಪರಮೇಶ್ವರನ ಸ್ವರೂಪ, ಪ್ರಭಾವಗಳ ಕೆನೆಯನ್ನು ಯಾರೂ ಕಾಣಲಾರನೋ ಅಂತಹ ಪರಮೇಶ್ವರನೇ ನಮಗೆಲ್ಲ ಇಷ್ಟದೇವನಾಗಿರುವನು.

ಜನ್ಮ ಸಾರ್ಥಕಗೊಳಿಸಿಕೊಳ್ಳುವ ವಿಚಾರವಿಲ್ಲಿದೆ.

**ತ್ವಂ ಸದ್ಯೋ ಅಪಿಬೋ ಜಾತ ಇಂದ್ರ ಮದಾಯ ಸೋಮಂ ಪರಮೇ ವ್ಯೋಮನ್ ।**
**ಯದ್ಧ ದ್ಯಾವಾಪೃಥಿವೀ ಆವಿವೇಶೀ-ರಥಾಭವಃ ಪೂರ್ವ್ಯಃ ಕಾರುಧಾಯಾಃ ॥೧೦॥**

**ಪದಾರ್ಥ:-** **[ಇಂದ್ರ]** ಇಂದ್ರಿಯಗಳ ಅಧಿಷ್ಠಾತೃವೇ! ಜೀವವೇ! **[ತ್ವಂ]** ನೀನು **[ಪರಮೇ]** ಶ್ರೇಷ್ಠವಾದ **[ವ್ಯೋಮನ್]** ಆಕಾಶದಂತೆ ವ್ಯಾಪಕವಾದ ಆತ್ಮಜ್ಞಾನದಲ್ಲಿ **[ಸದ್ಯಃ]** ಬೇಗನೇ **[ಜಾತಃ]** ಪ್ರಸಿದ್ಧನಾಗಿರುವೆ. **[ಮದಾಯ]** ಆನಂದಕ್ಕಾಗಿ **[ಸೋಮಂ]** ಬಲ-ಬುದ್ಧಿಗಳನ್ನು ಹೆಚ್ಚಿಸುವ ಸೋಮರಸವನ್ನು **[ಅಪಿಬಃ]** ಕುಡಿದಿರುವೆ. **[ಅಥ]** ಅನಂತರ **[ಯತ್]** ಯಾವ **[ಪೂರ್ವ್ಯಃ]** ಪೂರ್ವಿಕರಲ್ಲಿ ಶ್ರೇಷ್ಠರಾದ **[ಕಾರುಧಾಯಾಃ]** ಶಿಲ್ಪಿಗಳನ್ನು ಧಾರಣ ಮಾಡಿರುವವನು **[ಅಭವಃ]** ಆಗಿರುವೆ. **[ಹ]** ಸುನಿಶ್ಚಯವಾಗಿ **[ದ್ಯಾವಾಪೃಥಿವೀ]** ಬೆಳಕು-ಭೂಮಿಗಳಲ್ಲಿ **[ಆ]** ಸುತ್ತಮುತ್ತಲಿನಿಂದ **[ಆವಿವೇಶೀ]** ಮತ್ತೆ ಮತ್ತೆ ಬರುವವನಾಗು.

**ಭಾವಾರ್ಥ:-** ಮನುಷ್ಯರೇ! ಬ್ರಹ್ಮಚರ್ಯಾಶ್ರಮವನ್ನು ಪಡೆದು ಬೇಗನೇ ವಿದ್ಯಾವಂತರಾಗಿರಿ. ನಿಯತ ...ಾರ ವಿಹಾರಗಳಿಂದ ರೋಗ ರಹಿತರಾಗಿ ಪರಮಾತ್ಮನ ಆರಾಧನೆ ಮಾಡಿರಿ. ಸೃಷ್ಟಿ ಮತ್ತು ಪದಾರ್ಥ ...ಜ್ಞಾನಗಳಲ್ಲಿ ನೀವೆಲ್ಲರೂ ಪ್ರವೇಶ ಮಾಡಿರಿ. ಅದರಿಂದ ನಿಮ್ಮ ಜನ್ಮವು ಸಾರ್ಥಕವಾಗುತ್ತದೆ.

ರಾಜಪುರುಷರು ಏನು ಮಾಡಬೇಕೆಂಬ ವಿಚಾರ ಇಲ್ಲಿದೆ.

**ಅಹನ್ನಹಿಂ ಪರಿಶಯಾನಮರ್ಣ ಓಜಾಯಮಾನಂ ತುವಿಜಾತ ತವ್ಯಾನ್ ।**
**ನ ತೇ ಮಹಿತ್ವಮನು ಭೂದಧ ದ್ಯೌರ್ಯದನ್ಯಯಾ ಸ್ಫಿಗ್ಯಾ(ಆ)೩ ಕ್ಷಾಮವಸ್ಥಾಃ ॥೧೧॥**

**ಪದಾರ್ಥ:-** **[ತುವಿಜಾತ]** ಬಹುಜನರಲ್ಲಿ ಪ್ರಸಿದ್ಧ **[ತವ್ಯಾನ್]** ಅತ್ಯಂತ ಬಲಿಷ್ಠನಾದ ನೀನು **[ಯತ್]** ...ಗೆ **[ದ್ಯೌಃ]** ಸೂರ್ಯನ ಬೆಳಕು **[ಓಜಾಯಮಾನಂ]** ಬಲಪಡಿಸುವವನಾಗಿ **[ಪರಿಶಯಾನಂ]** ಆಕಾಶದಲ್ಲಿ ಶಯನ ...ಡುತ್ತಲಿರುವ **[ಅಹಿಂ]** ಮೇಘವನ್ನು **[ಅಹನ್]** ನಾಶಗೊಳಿಸುವವನಾಗಿ **[ಅರ್ಣಃ]** ನೀರನ್ನು ಸುರಿಸುವ ...ರ್ಯನ **[ಮಹಿತ್ವಂ]** ಮಹಿಮೆಯನ್ನು **[ಅನು]** **[ಭೂತ್]** ಅರಿಯುವವನಾಗು. **[ಅಥ]** ಆಮೇಲೆ **[ಅನ್ಯಯಾ]** ...ರೆಯದಾದ **[ಸ್ಫಿಗ್ಯಾಃ]** ಯೌವನದಲ್ಲಿರುವ ಅವಯವಗಳ ರೂಪದಿಂದ **[ಕ್ಷಾಂ]** ಭೂಮಿಯನ್ನು ಮರೆ ಮಾಡುವ ...ತಿಯಲ್ಲಿ **[ಅವಸ್ಥಾಃ]** ಶತ್ರುಗಳನ್ನು ಸುತ್ತುವರಿಯುವವನಾಗು. **[ತೇ]** ನಿನ್ನ ಮಹಿಮೆಯನ್ನು **[ನ]** ಯಾರೂ ...ದಿಸಲಾರರು.

**ಭಾವಾರ್ಥ:-** ರಾಜಪುರುಷರೇ! ಸೂರ್ಯನು ಹೇಗೆ ಅಂತರಿಕ್ಷದಲ್ಲಿ ಇರುವ ಬಲಿಷ್ಠವಾದ ಮೋಡಗಳನ್ನು ...ಶಗೊಳಿಸಿ ಮಳೆಯನ್ನು ಭೂಮಿಗೆ ಬೀಳಿಸುತ್ತಾನೋ ಆ ನೀರಿನಿಂದ ಜೀವರಾಶಿಗಳನ್ನು ಪೋಷಿಸುತ್ತಾನೋ ಅದೇ ...ತಿ ನೀವು ಅಧರ್ಮಿಗಳಾದ ಶತ್ರುಗಳನ್ನು ನಾಶಗೊಳಿಸಿ ಅದರಿಂದ ಸಂಪತ್ತನ್ನು ಗಳಿಸಿ ರಾಜ್ಯದ ಪಾಲನೆ ಮಾಡಿರಿ.

ಮನುಷ್ಯರು ಮಾಡಬೇಕಾದ ಕರ್ತವ್ಯವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಯಜ್ಞೋ ಹಿ ತ ಇಂದ್ರ ವರ್ಧನೋ ಭೂ-ದುತ ಪ್ರಿಯಃ ಸುತಸೋಮೋ ಮಿಯೇಧಃ ।**
**ಯಜ್ಞೇನ ಯಜ್ಞಮವ ಯಜ್ಞಿಯಃ ಸನ್ ಯಜ್ಞಸ್ತೇ ವಜ್ರಮಹಿಹತ್ಯ ಆವತ್ ॥೧೨॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕನೇ! **[ಹಿ]** ಯಾವುದರಿಂದ **[ತೇ]** ನಿನ್ನ **[ಅಹಿಹತ್ಯೇ]** ಮಳೆಯ ...ರಣದಿಂದ **[ಯಜ್ಞಃ]** ಪದಾರ್ಥಗಳನ್ನು ಸಂಯೋಜನಗೊಳಿಸುವಂತಹ ವ್ಯವಹಾರವು **[ವರ್ಧನಃ]** ಉನ್ನತಿಗೊಳಿಸುತ್ತ ...ುತಸೋಮಃ] ಸಂಪತ್ತಿನ ಉತ್ಪಾದಕನಾಗಿ **[ಮಿಯೇಧಃ]** ದುಃಖನಾಶಕನಾಗಿ **[ಉತ]** ಮತ್ತು **[ಪ್ರಿಯಃ]** ಪ್ರೀತಿಕಾರಕನೂ ...ೂತ್] ಆಗು. **[ತೇ]** ನಿನ್ನ **[ಯಜ್ಞಃ]** ಮೇಲೆ ತಿಳಿಸಿರುವ ವ್ಯವಹಾರವು **[ವಜ್ರಂ]** ಆಯುಧ ವಿಶೇಷದ **[ಆವತ್]** ...ಕ್ಷಣೆ ಮಾಡಲಿ. **[ಯಜ್ಞಃ]** **[ಸನ್]** ಇಂತಹ ಯಜ್ಞದಲ್ಲಿ ಕುಶಲನಾದ ನೀನು **[ಯಜ್ಞೇನ]** ಸಂಗತಿಕರಣರೂಪ ...ಯೆಯಿಂದ **[ಯಜ್ಞಂ]** ಸಂಗತವಾದ ವ್ಯವಹಾರಗಳ **[ಅವ]** ರಕ್ಷಣೆ ಮಾಡುವವನಾಗು.

**ಭಾವಾರ್ಥ:-** ಮನುಷ್ಯರೇ! ನೀವು ಉತ್ತಮ ಕೆಲಸಗಳಿಂದ ಶ್ರೇಷ್ಠ ಕರ್ಮಗಳನ್ನು ಬೆಳೆಸಿರಿ. ಅದರಿಂದ ...ೀವೂ ರಕ್ಷಣೆಗೊಳಗಾಗಿ ಅನ್ಯರ ರಕ್ಷಣೆಯನ್ನೂ ಮಾಡುವವರಾಗಿರಿ.

ಯಾರು ಸುಖ ಪಡೆಯಲು ಅರ್ಹರು ಎಂಬ ವಿಚಾರವಿಲ್ಲದೆ.

**ಯಜ್ಞೇನೇಂದ್ರಮವಸಾ ಚಕ್ರೇ ಅರ್ವಾ-ಗೈನಂ ಸುಮ್ನಾಯ ನವ್ಯಸೇ ವವೃತ್ಯಾಮ್ ।**
**ಯಃ ಸ್ತೋಮೇಭಿರ್ವಾವೃಧೇ ಪೂರ್ವ್ಯೇಭಿ-ರ್ಯೋ ಮಧ್ಯಮೇಭಿರುತ ನೂತನೇಭಿಃ ॥೧೩॥**

**ಪದಾರ್ಥ:-** **[ಯಃ]** ಯಾವನು **[ಪೂರ್ವ್ಯೇಭಿಃ]** ಪ್ರಾಚೀನ ಕರ್ಮಗಳಲ್ಲಿ ಕುಶಲನೋ **[ಮಧ್ಯಮೇಭಿಃ]** ಮಧ್ಯದಲ್ಲಿನ ಕರ್ಮಗಳಲ್ಲಿ ಕುಶಲನೋ **[ಉತ]** ಮತ್ತು **[ನೂತನೇಭಿಃ]** ನವೀನ ಕರ್ಮಗಳಲ್ಲಿ ಕುಶಲನೋ **[ಸ್ತೋಮೇಭಿಃ]** ಸ್ತವನ ರೂಪ ಕರ್ಮದಿಂದ **[ವಾವೃಧೇ]** ಬೆಳೆಯುತ್ತಾನೋ **[ಯಃ]** ಯಾವನು **[ನವ್ಯಸೇ]** ಹೊಸತಾದ **[ಸುಮ್ನಾಯ]** ಸುಖಕ್ಕಾಗಿ **[ಯಜ್ಞೇನ]** ಸಂಗತ ವ್ಯವಹಾರದಿಂದ **[ಅವಸಾ]** ರಕ್ಷಣಾದಿ ಕ್ರಿಯೆಗಳಿಂದ **[ಇಂದ್ರಂ]** ಐಶ್ವರ್ಯವಂತನನ್ನು **[ಆಚಕ್ರೇ]** ಉತ್ತಮಗೊಳಿಸುತ್ತಾನೋ ಅವನು **[ಅರ್ವಾಕ್]** ಮೊದಲು **[ಏನಂ]** ಇವನನ್ನು ರಕ್ಷಣೆ ಮಾಡಿ **[ಆ]** ಅವನನ್ನು **[ವವೃತ್ಯಾ]** ಪ್ರಾಪ್ತನಾಗುತ್ತಾನೋ ಅಂತಹ ಕರ್ಮಗಳನ್ನು ನೀವೂ ಮಾಡಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಹಿಂದೆ ನಡೆದಿರುವ ವ್ಯವಹಾರಗಳ ಮರ್ಮವನ್ನು ತಿಳಿದಿರುವನೋ, ಮಧ್ಯದಲ್ಲಿ ನಡೆದಿರುವ ವ್ಯವಹಾರಗಳ ಹೊಸ ವ್ಯವಹಾರಗಳ ವಿಚಾರವನ್ನು ಪ್ರಯತ್ನ ಪೂರ್ವಕ ವೃದ್ಧಿ ಪಡಿಸಿಕೊಳ್ಳುತ್ತಾನೋ ಹಾಗೂ ಹೊಸ ಹೊಸ ವ್ಯವಹಾರಗಳನ್ನು ಸಾಧಿಸಿಕೊಳ್ಳಲು ಯೋಗ್ಯನಾಗುತ್ತಾನೋ, ಅವನು ಆಲಸ್ಯರಹಿತ ಉತ್ಸಾಹಿ ಪುರುಷನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿವೇಷ ಯನ್ಮಾ ಧಿಷಣಾ ಜಜಾನ ಸ್ತವೈ ಪುರಾ ಪಾರ್ಯಾದಿಂದ್ರ ಮಹ್ನಃ ।**
**ಅಂಹಸೋ ಯತ್ರ ಪೀಪರದ್ಯಥಾ ನೋ ನಾವೇವ ಯಾಂತಮುಭಯೇ ಹವಂತೇ ॥೧೪॥**

**ಪದಾರ್ಥ:-** **[ಯತ್]** ಯಾವ **[ಧಿಷಣಾ]** ವಾಣಿಯು **[ಮಾ]** ನನ್ನನ್ನು **[ವಿವೇಷ]** ವ್ಯಾಪಿಸಿಕೊಂಡಿದೆಯೋ ಮತ್ತು **[ಜಜಾನ]** ಉತ್ಪಾದಿಸುತ್ತದೆಯೋ, ಅದನ್ನು ನಾನು **[ಸ್ತವೈ]** ಪ್ರಶಂಸೆ ಮಾಡುತ್ತೇನೆ. **[ಅಹ್ನಃ]** ದಿನದಿಂದ **[ಇಂದ್ರಂ]** ಐಶ್ವರ್ಯವನ್ನು **[ಪುರಾ]** ಮೊದಲು **[ಪಾರ್ಯ್ಯಾತ್]** ತುದಿ ಮುಟ್ಟಿಸುತ್ತದೆಯೋ **[ಯತ್ರ]** ಯಾವ ವ್ಯವಹಾರದಲ್ಲಿ **[ಅಂಹಸಃ]** ಅಪರಾಧದಿಂದ ನನ್ನನ್ನು ಪಾರು ಮಾಡುತ್ತದೆಯೋ **[ಯಥಾ]** ಹೇಗೆ ನಮ್ಮೆಲ್ಲರಿಗೆ **[ಯಾಂತಂ]** ಪ್ರಯಾಣ ಮಾಡುವವರನ್ನು **[ಉಭಯೇ]** ಸಮೀಪ ದೂರ ಎರಡೂ ರೀತಿಯಲ್ಲಿರುವ ಜನರು **[ನಾವೇವ]** ನೌಕೆಯು ಹೇಗೋ ಹಾಗೆ **[ಹವಂತೇ]** ಆಹ್ವಾನಿಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಅಂತಹ ಮಾತುಗಳನ್ನು ಸ್ವೀಕರಿಸಬೇಕು. ಯಾವುದು ಎಲ್ಲ ಸಮಯದಲ್ಲೂ ನಮ್ಮನ್ನು ದುಷ್ಟಾಚರಣೆ ಮತ್ತು ದುಃಖ ಇವುಗಳಿಂದ ದೋಣಿಯು ಆ ದಡವನ್ನು ತಲುಪಿಸುವಂತೆ ಸುಖಲೋಕಕ್ಕೆ ತಲುಪಿಸುತ್ತದೆಯೋ ಅದರಿಂದ ನಮ್ಮ ಏಳಿಗೆಯಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಪೂರ್ಣೋ ಅಸ್ಯ ಕಲಶಃ ಸ್ವಾಹಾ ಸೇಕ್ತೇವ ಕೋಶಂ ಸಿಸಿಚೇ ಪಿಬಧ್ಯೈ ।**
**ಸಮು ಪ್ರಿಯಾ ಆವವೃತ್ರನ್ಮದಾಯ ಪ್ರದಕ್ಷಿಣಿದಭಿ ಸೋಮಾಸ ಇಂದ್ರಮ್ ॥೧೫॥**

**ಪದಾರ್ಥ:-** **[ಸೋಮಾಸಃ]** ಐಶ್ವರ್ಯಸಂಪನ್ನನಾದ **[ಪ್ರಿಯಾಃ]** ಪ್ರಿಯಕರನಾದ **[ಮದಾಯ]** ಆನಂದಕಾರಕನಾದ **[ಇಂದ್ರಂ]** ಸೂರ್ಯನನ್ನು **[ಅಭಿ]** ಎದುರಾಗಿ **[ಆ]** **[ಅವವೃತ್ರನ್]** ನಾಲ್ಕು ದಿಕ್ಕುಗಳಿಂದಲೂ ಸುತ್ತುವರಿಯುತ್ತಾರೋ ಅವರು **[ಉ]** **[ಅಸ್ಯ]** ಈ ಸಂಸಾರದಲ್ಲಿ **[ಪಿಬಧ್ಯೈಃ]** ಸೇವನೆ ಮಾಡುವುದಕ್ಕಾಗಿ **[ಸೇಕ್ತೇವ]** ಮಳೆಗರೆಯಲು ಸಮರ್ಥವಾದ **[ಕೋಶಂ]** ಮೋಡವನ್ನು **[ಸಂ]** **[ಸಿಸಿಚೇ]** ಉತ್ತಮ ರೀತಿಯಲ್ಲಿ ಸೇಚನೆ ಮಾಡುವೆನು. **[ಸ್ವಾಹಾ]** ಸತ್ಯ ವ್ಯವಹಾರಗಳಿಂದ **[ಆಪೂರ್ಣಃ]** ತುಂಬಿಕೊಂಡಿರುವ **[ಕಲಶಃ]** ಘಟವನ್ನು /ಕಲಶವನ್ನು **[ಪ್ರದಕ್ಷಿಣಿತ]** ಪ್ರದಕ್ಷಿಣಾಕಾರದಲ್ಲಿ ಚಲಿಸುವವನು ಸುಖಕಾರಕನಾಗುತ್ತಾನೆ.

**ಭಾವಾರ್ಥ:-** ಯಾರು ಧನ ಸಂಪನ್ನರಾಗಿ ಸುಪಾತ್ರರೂ ಉತ್ತಮ ವ್ಯವಹಾರಗಳನ್ನು ಮಾಡುವವರೂ ಆದ, ಬೇರೆಯವರಿಗೆ ಅವರ ಸುಖಕ್ಕಾಗಿ ವಿನಿಯೋಗಿಸುತ್ತಾರೋ ಅವರು ನೀರೆರೆಯುವ ಕೊಡದಂತೆ ಎಲ್ಲ ಜನರಿಗೂ ಸುಖವೆರೆಯುವವರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ತ್ವಾ ಗಭೀರಃ ಪುರುಹೂತ ಸಿಂಧು-ರ್ನಾದ್ರಯಃ ಪರಿ ಷಂತೋ ವರಂತ ।**
**ಇತ್ಥಾ ಸಖಿಭ್ಯ ಇಷಿತೋ ಯದಿಂದ್ರಾ ಽಽದೃಳ್ಹಂ ಚಿದರುಜೋ ಗವ್ಯಮೂರ್ವಮ್ ॥೧೬॥**

**ಪದಾರ್ಥ:-** **[ಪುರುಹೂತ]** ಬಹುಜನರಿಂದ ಪ್ರಶಂಸೆಗೊಳಗಾದ **[ಇಂದ್ರ]** ಐಶ್ವರ್ಯದಾಯಕ ರಾಜನೇ! **[ತ್ವಾ]** ನಿನ್ನನ್ನು **[ಗಭೀರಃ]** ಗಾಂಭೀರ್ಯ ಗುಣದಿಂದ ಯುಕ್ತವಾದ **[ಸಿಂಧುಃ]** ಸಮುದ್ರವು **[ನ]** **[ಪರಿ]** **[ವರಂತ]** ನಾಲ್ಕು ದಿಕ್ಕುಗಳಿಂದಲೂ ಆವರಿಸುವುದಿಲ್ಲ. **[ಅದ್ರಯಃ]** ಮೇಘ ಅಥವಾ ಪರ್ವತಗಳು **[ಸಂತಃ]** ವರ್ತಮಾನವಾಗುತ್ತ **[ನ]** ಆವರಿಸುವುದಿಲ್ಲ. **[ಯತ್]** ಯಾವುದು **[ದೃಢಂ]** ಸ್ಥಿರವಾದ **[ಚಿತ್]** ಮತ್ತು **[ಗವ್ಯಂ]** ಗೋವುಗಳ **[ಊರ್ವಂ]** ನಿರೋಧ ಸ್ಥಾನದ **[ಆ]** **[ಅರುಜಃ]** ನಾಶಮಾಡುವನೋ ಅವನು **[ಸಖಿಭ್ಯಃ]** ಸ್ನೇಹಿತರಿಗಾಗಿ **[ಇಷಿತಃ]** ಪ್ರೇರಣೆ ಪಡೆದವನಾಗಿ **[ಇತ್ಥ]** ಈ ರೀತಿ ಮಾಡುವನೋ ಅವನು ಯೋಗ್ಯನೆನಿಸಿಕೊಳ್ಳುತ್ತಾನೆ.

**ಭಾವಾರ್ಥ:-** ಮನುಷ್ಯರೇ! ಹೇಗೆ ಸಮುದ್ರವಾಗಲೀ ಪರ್ವತವಾಗಲೀ ಸೂರ್ಯನನ್ನು ಆವರಿಸಿ ಮರೆ ಮಾಡಲು ಸಾಧ್ಯವಿಲ್ಲವೋ, ಹಾಗೆ ಬಹಳಷ್ಟು ಸ್ನೇಹಿತರನ್ನು ಪಡೆದುಕೊಂಡಿರುವ ಜನರನ್ನು ಶತ್ರುಗಳು ಆವರಿಸಿ ತಡೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ನೇಹಿತವಂತರೇ ಬಲವಂತರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ- ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೧೭॥**

**ಪದಾರ್ಥ:-** **[ಊತಯೇ]** ರಕ್ಷಣೆಗಾಗಿ **[ಸಮತ್ಸು]** ಸಂಗ್ರಾಮದಲ್ಲಿ **[ಘ್ನಂತಂ]** ನಾಶ ಮಾಡುವ **[ಉಗ್ರಂ]** ಕಠೋರ ಸ್ವಭಾವದ **[ಧನಾನಾಂ]** ದ್ರವ್ಯಗಳ **[ಸಂಜಿತಂ]** ಉತ್ತಮ ರೀತಿಯಲ್ಲಿ ಶತ್ರುಗಳನ್ನು ಜಯಿಸುವಂತಹ **[ವೃತ್ರಾಣಿ]** ಸುವರ್ಣಾದಿ ಧನಗಳನ್ನು **[ಶೃಣ್ವಂತಂ]** ಆಲೈಸುವವನನ್ನು **[ಅಸ್ಮಿನ್]** ಈ ವ್ಯವಹಾರದಲ್ಲಿ **[ವಾಜಸಾತೌ]** ಧನ ಅನ್ನಾದಿಗಳ ವಿಭಾಗ ಮಾಡುವವನು **[ಭರೇ]** ಸಂಗ್ರಾಮದಲ್ಲಿ **[ನೃತಮಂ]** ಶ್ರೇಷ್ಠನಾದ **[ಮಘವಾನಂ]** ಐಶ್ವರ್ಯ ಸಂಪನ್ನನಾದ **[ಇಂದ್ರಂ]** ಶತ್ರುಗಳನ್ನು ನಾಶ ಮಾಡುವಂತಹ ರಾಜನನ್ನು **[ಹುವೇಮ]** ಕರೆಯೋಣ. ಅವನ ಸಹಕಾರದಿಂದ **[ಶುನಂ]** ಸುಖವನ್ನು ಜಯವನ್ನೂ ಪಡೆಯೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಪ್ರಮುಖ ವ್ಯಕ್ತಿಗಳನ್ನು, ರಾಜವಿದ್ಯೆಯಲ್ಲಿ ಚತುರರನ್ನು, ಶೂರರಾದ ಸೈನಿಕರನ್ನು, ನ್ಯಾಯಾಧೀಶರನ್ನು, ವಾದಮಾಡುವ ವಕೀಲರನ್ನು, ಸೇವೆ ಮಾಡುವ ಸೇವಕರನ್ನು ಗೌರವ ಪೂರ್ವಕವಾಗಿ ರಾಜ್ಯಾಂಗದಲ್ಲಿ ನೇಮಿಸಿಕೊಳ್ಳುತ್ತಾನೋ, ಅವನು ಯಾವಾಗಲೂ ವಿಜಯಶೀಲನೂ, ಕೀರ್ತಿವಂತನೂ, ಐಶ್ವರ್ಯಸಂಪನ್ನನೂ ಆಗುತ್ತಾನೆ.

ಈ ಸೂಕ್ತದಲ್ಲಿ ಸೋಮ, ಮನುಷ್ಯ, ಈಶ್ವರ, ವಿದ್ಯುತ್ ಇವುಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಮುವತ್ತೆರಡನೆಯ ಸೂಕ್ತ ಸಮಾಪ್ತ

## ಸೂಕ್ತ ೩೩

ಮಂತ್ರಸಂಖ್ಯೆ ೧೩ । ವಿಶ್ವಾಮಿತ್ರ ಋಷಿಃ । ನದ್ಯೋ ದೇವತಾಃ । ೧ ಭುರಿಕ್ ಪಂಕ್ತಿಃ, ೫ ಸ್ವರಾಟ್ ಪಂಕ್ತಿಃ, ೭ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೧೦ ವಿರಾಟ್ ತ್ರಿಷ್ಟುಪ್, ೨, ೮, ೧೧, ೧೨ ತ್ರಿಷ್ಟುಪ್, ೪, ೬, ೯ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೧೩ ಉಷ್ಣಿಕ್ ಛಂದಃ । ಋಷಭಃ ಸ್ವರಃ.

ಈ ಮಂತ್ರದಲ್ಲಿ ನದೀ ದೃಷ್ಟಾಂತದಿಂದ ಸ್ತ್ರೀ ವರ್ಣನೆ ಮಾಡಲಾಗಿದೆ.

**ಪ್ರ ಪರ್ವತಾನಾಮುಶತೀ ಉಪಸ್ಥಾ-ದಶ್ವೇ ಇವ ವಿಷಿತೇ ಹಾಸಮಾನೇ ।**
**ಗಾವೇವ ಶುಭ್ರೇ ಮಾತರಾ ರಿಹಾಣೇ ವಿಪಾಟ್ ಛುತುದ್ರೀ ಪಯಸಾ ಜವೇತೇ ॥೧॥**

**ಪದಾರ್ಥ:-** **[ಮಾತರಾ]** ಗೌರವಿಸುವವಳಾದ **[ಉಶತೀ]** ಬಯಸುವವಳಾದ **[ಪರ್ವತಾನಾಂ]** ಮೋಡಗಳ **[ಉಪಸ್ಥಾತ್]** ಸಮೀಪದಿಂದ **[ಅಶ್ವೇವ]** ಕುದುರೆಯಂತೆ **[ವಿಷಿತೇ]** ವಿದ್ಯಾ ಶುಭ ಗುಣಗಳಿರುವ ಕರ್ಮದಿಂದ ವ್ಯಾಪ್ತವಾದ **[ಹಾಸಮಾನೇ]** ಪರಸ್ಪರರನ್ನು ಪ್ರೀತಿಸುತ್ತ **[ರಿಹಾಣೇ]** ಪ್ರೀತಿಯಿಂದ ಆಘ್ರಾಣಿಸುತ್ತ **[ಶುಭ್ರೇ]** ಉತ್ತಮ ಗುಣ ಸಂಪನ್ನ **[ಗಾವೇವ]** ವೃಷಭ, ಧೇನುಗಳಂತೆ **[ಪಯಸಾ]** ನೀರಿನಿಂದ **[ವಿಪಾಟ್]** ಮರೆ ಮಾಡಲಾದ **[ಶುತುದ್ರೀ]** ಶೀಘ್ರ ದುಃಖದಾಯಕ **[ಪ್ರ]** **[ಜವೇತೇ]** ಚಲಿಸುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪರ್ವತ ಪ್ರಾಂತದಿಂದ ಉಗಮವಾಗುವ ನದಿಯು ಕುದುರೆಯಂತೆ ವೇಗವಾಗಿ ಚಲಿಸುವಳು/ಹರಿಯುವಳು. ಗೋವಿನಂತೆ ಶಬ್ದ ಮಾಡುವಳು. ಅದೇ ರೀತಿ ಪ್ರಸನ್ನ ಚಿತ್ತಳೂ, ಉತ್ತಮ ಗುಣಕರ್ಮ ಸ್ವಭಾವವಂತಳೂ ಆದ ವಿದ್ಯಾವತೀ ಸ್ತ್ರೀಯು ಏಳಿಗೆಯನ್ನು ಬಯಸುವವರಾದ ಕನ್ಯೆಯರಿಗೂ, ಸ್ತ್ರೀಯರಿಗೂ ನಿರಂತರ ಶಿಕ್ಷಣ ನೀಡುವಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರೇಷಿತೇ ಪ್ರಸವಂ ಭಿಕ್ಷಮಾಣೇ ಅಚ್ಛಾ ಸಮುದ್ರಂ ರಥ್ಯೇವ ಯಾಥಃ ।**
**ಸಮಾರಾಣೇ ಊರ್ಮಿಭಿಃ ಪಿನ್ವಮಾನೇ ಅನ್ಯಾ ವಾಮನ್ಯಾಮಪ್ಯೇತಿ ಶುಭ್ರೇ ॥೨॥**

**ಪದಾರ್ಥ:-** **[ಇಂದ್ರೇಷಿತೇ]** ಸೂರ್ಯನಿಂದ ಮಳೆಯ ಮೂಲಕ ಪ್ರೇರಿತಳಾದ **[ಪಿನ್ವಮಾನೇ]** ನೀರೆರೆಯುವ **[ಊರ್ಮಿಭಿಃ]** ಅಲೆಗಳೊಂದಿಗೆ **[ಸಮುದ್ರಂ]** ಸಾಗರದತ್ತ ಹರಿಯುವವಳಾದ **[ರಥ್ಯೇವ]** ರಥಿಕನ ರೀತಿಯಲ್ಲಿ

**[ಪ್ರಸವಂ]** ಸಂಪತ್ತನ್ನು **[ಭಿಕ್ಷಮಾಣೇ]** ಯಾಚಿಸುತ್ತ **[ಸಮಾರಾಣೇ]** ಎಲ್ಲ ರೀತಿಯ ದಾನಗಳನ್ನು ಮಾಡುವವಳಾಗಿ **[ಶುಭ್ರೇ]** ಶೋಭಾಯಮಾನಳಾಗಿ **[ಅಚ್ಛ, ಯಾಥಃ]** ಉತ್ತಮ ರೀತಿಯಲ್ಲಿ ಚಲಿಸಲಿ. **[ಅನ್ಯಾ]** ಬೇರೆ ಸ್ತ್ರೀಯು **[ಅನ್ಯಾ]** ಮತ್ತೊಂದು ಸ್ತ್ರೀಯನ್ನು **[ಅಪಿ]** **[ಏತಿ]** ಪ್ರೀತಿಯಿಂದ ಸೇರುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಯುವತಿಯು ಯುವಕನಾದ ಪತಿಯೊಂದಿಗೆ ಸೇರಿ ಗರ್ಭಧಾರಣೆಯ ಇಚ್ಛೆ ಮಾಡುವಳೋ ಅದೇ ರೀತಿ ನದಿಗಳು ಸಮುದ್ರದತ್ತ ಗಮನ ಮಾಡುತ್ತ ಕುದುರೆಗಳು ರಥವನ್ನು ಎಳೆದೊಯ್ಯುವಂತೆ ತಾನು ಚಲಿಸುವ ಮಾರ್ಗದಲ್ಲಿ ಲಭಿಸುವ ಇತರ ನದಿಗಳನ್ನು ಅನ್ಯ ಕನ್ಯೆಯರನ್ನೂ ಸ್ತ್ರೀಯರನ್ನು ಸೆಳೆದುಕೊಂಡು ಹೋಗಿ ವಿದ್ಯೆಯೆಂಬ ಸಾಗರಕ್ಕೆ ತಲುಪಿಸುತ್ತಾಳೆ. ಇದರಿಂದಾಗಿ ಸ್ತ್ರೀಯರು ಉತ್ತಮ ಗುಣಕರ್ಮ ಸ್ವಭಾವ ಸಂಪನ್ನರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಚ್ಛಾ ಸಿಂಧುಂ ಮಾತೃತಮಾಮಯಾಸಂ ವಿಪಾಶಮುರ್ವೀಂ ಸುಭಗಾಮಗನ್ಮ ।**
**ವತ್ಸಮಿವ ಮಾತರಾ ಸಂರಿಹಾಣೇ ಸಮಾನಂ ಯೋನಿಮನು ಸಂಚರಂತೀ ॥೩॥**

**ಪದಾರ್ಥ:-** **[ಮಾತೃತಮಾಂ]** ತಾಯಿಯಂತೆ ಪಾಲನೆ ಪೋಷಣೆ ಮಾಡುವ ನದಿಗಳು **[ಸಿಂಧುಂ]** ಹೇಗೆ ಸಾಗರವನ್ನು ಸೇರುವಳೋ ಹಾಗೆ **[ವಿಪಾಶಂ]** ಬಂಧನರಹಿತ **[ಉರ್ವೀಂ]** ವಿಸ್ತೃತವಾದ **[ಸುಭಗಾಂ]** ಒಳ್ಳೆ ಗುಣಗಳಿರುವ ಬೋಧನೆ ಉಪದೇಶ ಮಾಡುವ ಸ್ತ್ರೀಯನ್ನು **[ಅಗನ್ಮ]** ಪಡೆದುಕೊಳ್ಳೋಣ. **[ಸಂ, ರಿಹಾಣೇ]** ಉತ್ತಮ ರೀತಿಯಲ್ಲಿ ಸವಿಯುವ ಸ್ತ್ರೀಯು **[ಸಮಾನಂ]** ಸಮಾನವಾದ **[ಯೋನಿಂ]** ಮನೆಯನ್ನು **[ಅನುಸಂಚರಂತಿ]** ಆಶ್ರಯಿಸಿ ಚಲಿಸುವವಳಾಗುತ್ತಾಳೆ. **[ಮಾತರಾ]** ತಾಯಿಯಂತೆ **[ವತ್ಸಮಿವ]** ಕರುವನ್ನು ಹೇಗೋ ಹಾಗೆ ಶಿಕ್ಷಣ ನೀಡಲು **[ಅಚ್ಛ, ಅಯಾಸಂ]** ಶಿಕ್ಷಣ ಪಡೆಯಲು ನಾನವಳನ್ನು ಸಮೀಪಿಸುತ್ತೇನೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಸಮುದ್ರ, ನದಿಗಳು, ಹಸು-ಕರುಗಳು, ಸ್ತ್ರೀ-ಪುರುಷರು ಹೇಗೆ ಒಂದೇ ಸ್ಥಾನವನ್ನು ಪಡೆದುಕೊಳ್ಳುವರೋ ಅದೇ ರೀತಿ ಬೋಧಿಸುವ ಉಪದೇಶ ನೀಡುವ ಸ್ತ್ರೀಯರು ಶಿಕ್ಷಣ ಪಡೆಯಲು ಬಯಸುವ ಕನ್ಯೆಯರು ಅಥವಾ ಸೌಭಾಗ್ಯವತೀ ಸ್ತ್ರೀಯರು ಇವರೊಂದಿಗೆ ಒಂದೇ ಸ್ಥಳದಲ್ಲಿ ನೆಲೆಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏನಾ ವಯಂ ಪಯಸಾ ಪಿನ್ವಮಾನಾ ಅನು ಯೋನಿಂ ದೇವಕೃತಂ ಚರಂತೀಃ ।**
**ನ ವರ್ತವೇ ಪ್ರಸವಃ ಸರ್ಗತಕ್ತಃ ಕಿಂಯುರ್ವಿಪ್ರೋ ನದ್ಯೋ ಜೋಹವೀತಿ ॥೪॥**

**ಪದಾರ್ಥ:-** **[ಏನಾ]** **[ಪಯಸಾ]** ಈ ನೀರಿನಿಂದ **[ಪಿನ್ವಮಾನಾಃ]** ನೀರೆರೆಯುವ ನದಿಗಳು **[ದೇವಕೃತಂ]** ವಿದ್ವಾಂಸರಿಂದ ರಚಿಸಲಾದ **[ಯೋನಿಂ]** ಜಲವನ್ನು **[ಅನುಚರಂತೀಃ]** ಅನುಕೂಲ ರೀತಿಯಲ್ಲಿ ಪ್ರಾಪ್ತವಾಗುವ **[ನದ್ಯಃ]** ನದಿಗಳು **[ವರ್ತವೇ]** ಸ್ವೀಕರಿಸಲು **[ನ]** ನಿರಾಕರಿಸುವುದಿಲ್ಲ. **[ವಯಂ]** ನಾವು ಅವುಗಳನ್ನು ಪಡೆಯೋಣ. **[ಸರ್ಗತಕ್ತಃ]** ಉತ್ಪಾದನೆಯೊಂದಿಗೆ **[ಪ್ರಸವಃ]** ಸಂತಾನವು **[ಕಿಂಯುಃ]** ತನ್ನನ್ನು ಬಯಸಲಾರದೋ **[ವಿಪ್ರಃ]** ಬುದ್ಧಿವಂತನು **[ಜೋಹವಿತಿ]** ಮತ್ತೆ ಮತ್ತೆ ಶಬ್ದ ಮಾಡುತ್ತಾನೆ.

**ಭಾವಾರ್ಥ:-** ಜಲಪೂರಿತ ನದಿಗಳು ಹೇಗೆ ಎಲ್ಲರ ಉಪಕಾರ ಮಾಡುತ್ತವೆಯೋ ಮತ್ತು ಎಂದೂ ಜಲರಹಿತವಾಗುವುದಿಲ್ಲವೋ ಅದೇ ರೀತಿ ಬ್ರಹ್ಮಚರ್ಯ ಸಹಿತರಾದ ಸ್ತ್ರೀ ಪುರುಷರ ಸಂತಾನವಾಗಿ ಧರ್ಮಮಾರ್ಗದಿಂದ ಸಮಗ್ರ ವಿದ್ಯೆಯನ್ನು ಪಡೆದು ಯಾರು ವಿದುಷೀ ವಿದ್ಯಾವಂತರಾಗುವರೋ ಅವರು ಎಲ್ಲರನ್ನೂ ಉಪಕರಿಸಲು ಸಮರ್ಥರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ ।**
**ಪ್ರ ಸಿಂಧುಮಚ್ಛಾ ಬೃಹತೀ ಮನೀಷಾ-ವಸ್ಯುರಹ್ವೇ ಕುಶಿಕಸ್ಯ ಸೂನುಃ ॥೫॥**

**ಪದಾರ್ಥ:-** **[ಋತಾವರೀಃ]** ಬಹುಜಲಗಳಿರುವ ನದಿಗಳು **[ಸಿಂಧುಂ]** ಸಮುದ್ರವನ್ನು **[ಉಪ]** ಪಡೆದು ಸ್ಥಿರಗೊಳ್ಳುತ್ತವೆ. **[ಏವೈಃ]** ಪಡೆಯಲು ಯೋಗ್ಯ ಗುಣಗಳಿಂದ **[ಮುಹೂರ್ತಂ]** ಎರಡು ಘಳಿಗೆಗಳ ಕಾಲ / ೪೮ ನಿಮಿಷಗಳ ಕಾಲ **[ಮೇ]** ನನ್ನ **[ಸೋಮ್ಯಾಯ]** ಶಾಂತಿ ಗುಣಯುಕ್ತವಾದ **[ವಚಸೇ]** ಮಾತಿಗಾಗಿ **[ರಮಧ್ವಂ]** ಆಟವಾಡು/ರಮಿಸು. **[ಕುಶಿಕಸ್ಯ]** ವಿದ್ಯೆಯನ್ನು ಮಥನ ಮಾಡಿ ಜ್ಞಾನ ಪಡೆದಿರುವ ಸಜ್ಜನನ **[ಸೂನುಃ]** ಮಗನಂತಿರುವ **[ಅವಸ್ಯುಃ]** ತನ್ನ ರಕ್ಷಣೆಯನ್ನು ಬಯಸುವ ನಾನು **[ಬೃಹತೀ]** ವಿಸ್ತೃತವಾದ **[ಮನೀಷಾಃ]** ಬುದ್ಧಿಯನ್ನು **[ಅಚ್ಛಾ]** ಉತ್ತಮ ರೀತಿಯಲ್ಲಿ **[ಪ್ರ]** **[ಅಹ್ವೇ]** ಪಡೆದುಕೊಳ್ಳುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ನದಿಗಳು ಸಮುದ್ರಕ್ಕೆ ಅಭಿಮುಖವಾಗಿ ಹರಿಯುತ್ತವೆಯೋ/ ಚಲಿಸುತ್ತವೆಯೋ ಹಾಗೆಯೇ ಮನುಷ್ಯರು ಧರ್ಮ ಸಂಬಂಧೀ ವ್ಯವಹಾರಗಳತ್ತ, ವಿದ್ಯೋಪದೇಶಕರು ಅಭಿಮುಖವಾಗಿ ಚಲಿಸಬೇಕು. ಅವರ ಸಂಗದಿಂದ ಸುಖಪೂರ್ವಕವಾಗಿ ಸಮಯವನ್ನು ಕಳೆಯಬೇಕು.

ಈ ಮಂತ್ರದಲ್ಲಿ ಸೂರ್ಯನ ದೃಷ್ಟಾಂತದಿಂದ ಮನುಷ್ಯರ ಕರ್ತವ್ಯವನ್ನು ತಿಳಿಸಲಾಗಿದೆ.

**ಇಂದ್ರೋ ಅಸ್ಮಾँ ಅರದದ್ವಜ್ರಬಾಹು-ರಪಾಹನ್ ವೃತ್ರಂ ಪರಿಧಿಂ ನದೀನಾಮ್ ।**
**ದೇವೋಽನಯತ್ಸವಿತಾ ಸುಪಾಣಿ-ಸ್ತಸ್ಯ ವಯಂ ಪ್ರಸವೇ ಯಾಮ ಉರ್ವೀಃ ॥೬॥**

**ಪದಾರ್ಥ:-** **[ಇಂದ್ರ]** ಐಶ್ವರ್ಯವಂತನೇ! ನೀನು **[ಸವಿತಾ]** ಸೂರ್ಯನು **[ದೇವಃ]** ಉತ್ತಮ ಗುಣಕರ್ಮ ಸ್ವಭಾವವಂತನು **[ನದೀನಾಂ]** ನದಿಗಳ **[ಪರಿಧಿಂ]** ಸುತ್ತಮುತ್ತಲೂ ಇರುವ **[ವೃತ್ರಂ]** ಮರೆಮಾಡುವ ಮೇಘವನ್ನು **[ಅಪ]** **[ಅಹನ್]** ನಾಶಗೊಳಿಸುವನು. ಅದರ ಅವಯವಗಳನ್ನು **[ಅರದತ್]** ಭೇದಿಸಿ ನೀರನ್ನು **[ಅನಯತ್]** ಭೂಮಿಗೆ ತರುತ್ತಾನೆ. ಅದೇ ರೀತಿ **[ವಜ್ರಬಾಹುಃ]** ಶಸ್ತ್ರಧಾರಿಗಳು **[ಅಸ್ಮಾನ್]** ನಮ್ಮನ್ನು ರಕ್ಷಿಸಲಿ. **[ಸುಪಾಣಿಃ]** ಉತ್ತಮ ಕರಗಳು/ ಉತ್ತಮ ಗುಣಕರ್ಮ ಸ್ವಭಾವಗಳಿಂದ ಯುಕ್ತರಾಗಿ **[ಉರ್ವೀಃ]** ಬಹುವಿಧ ಸುಖದಾಯಕ ಪ್ರಜೆಗಳ ರಕ್ಷಣೆ ಮಾಡು. **[ತಸ್ಯ]** ಅವನ **[ಪ್ರಸವೇ]** ಸಂಪತ್ತಿನಲ್ಲಿ **[ವಯಂ]** ನಾವೆಲ್ಲರೂ **[ಯಾಮಃ]** ಸಂತೋಷವನ್ನು ಪಡೆದುಕೊಳ್ಳೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಸೂರ್ಯನು ಭೂಮ್ಯಾದಿ ಪದಾರ್ಥಗಳನ್ನು ಆಕರ್ಷಿಸುವುದರ ಮೂಲಕ ಅವರವರ ಸ್ಥಾನಗಳಲ್ಲಿ ನೆಲೆಗೊಳಿಸಿರುವನೋ ಮಳೆಗರೆದು ಸಂಪತ್ತನ್ನು ಉತ್ಪಾದಿಸುವನೋ, ಅದೇರೀತಿ ರಾಜನು/ ಅವನಂತಿರುವ ಪುರುಷರು ಉತ್ತಮ ಗುಣಕರ್ಮಸ್ವಭಾವಗಳನ್ನು ಆಕರ್ಷಿಸಿ ಶತ್ರುಗಳನ್ನು ಜಯಿಸಿ ರಾಜ್ಯದ ಶೋಭೆಯನ್ನು ಹೆಚ್ಚಿಸಬೇಕು.

ಮನುಷ್ಯರ ಕರ್ತವ್ಯವನ್ನಿಲ್ಲಿ ಹೇಳಿದೆ.

**ಪ್ರವಾಚ್ಯಂ ಶಶ್ವಧಾ ವೀರ್ಯಂ (ಅಂ) ೧ ತ-ದಿಂದ್ರಸ್ಯ ಕರ್ಮ ಯದಹಿಂ ವಿವೃಶ್ಚತ್ ।**
**ವಿ ವಜ್ರೇಣ ಪರಿಷದೋ ಜಘಾನಾಽಽಯನ್ನಾಪೋಽಯನಮಿಚ್ಛಮಾನಾಃ ॥೭॥**

**ಪದಾರ್ಥ:-** [**ಅಹಿಂ**] ಮೇಘವನ್ನು ಸೂರ್ಯನು [**ವಿವೃಶ್ಚತ್**] ಭೇದಿಸುವನು. [**ಯತ್**] ಯಾವನು [**ಇಂದ್ರಸ್ಯ**] ಸೂರ್ಯನ [**ವೀರ್ಯಂ**] ಶಕ್ತಿರೂಪವಾದ [**ಕರ್ಮ**] ಕೆಲಸವಿದೆಯೋ [**ತತ್**] ಅದು [**ಶಶ್ವಧಾಃ**] ಶಾಶ್ವತವಾಗಲಿ. [**ಪ್ರವಾಚ್ಯಂ**] ಕಥನ ಯೋಗ್ಯವಾದ [**ವಜ್ರೇಣ**] ಕಿರಣಗಳಿಂದ ಭೇದಿಸಲಾದ ಮೇಘಗಳು [**ಆಪಃ**] ನೀರನ್ನು [**ಅಯನಂ**] ಭೂ ಪ್ರದೇಶಕ್ಕೆ [**ಆಯನ್**] ಸುರಿಸುವಂತಾಗಲಿ. [**ವಿಜಘಾನ**] ಮೇಘಗಳನ್ನು ನಾಶಗೊಳಿಸುವ ರೀತಿಯಲ್ಲಿ [**ಇಚ್ಛಮಾನಾಃ**] ಸುಖ ಬಯಸುವವರು [**ಪರಿಷದಃ**] ಸತ್ಸಂಗ ಸಭೆಯನ್ನು ನಡೆಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾರು ಧರ್ಮ ಸಂಬಂಧೀ ಕೆಲಸಕಾರ್ಯಗಳನ್ನು ಮಾಡಿ ದುಷ್ಟರ ನಿವಾರಣೆಗಾಗಿ ತನ್ನ ಶಕ್ತಿಯನ್ನು ತೋರಿಸುವರೋ ಅವರ ಆ ಕೆಲಸಗಳ ಪ್ರಶಂಸೆಯನ್ನು ನಿರಂತರವಾಗಿ ಮಾಡಬೇಕು. ಯಾರು ಸಭಾ ಸಮಾವೇಶಗೊಳಿಸುವುದರಲ್ಲಿ ಶ್ರೇಷ್ಠರಾಗಿರುವರೋ ಅವರು ನ್ಯಾಯಯುತವಾಗಿ ಎಲ್ಲರ ಏಳಿಗೆಯನ್ನು ಸಾಧಿಸಲು ಇಚ್ಛಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏತದ್ವಚೋ ಜರಿತರ್ಮಾಪಿ ಮೃಷ್ಠಾ ಆ ಯತ್ತೇ ಘೋಷಾನುತ್ತರಾ ಯುಗಾನಿ ।**
**ಉಕ್ಥೇಷು ಕಾರೋ ಪ್ರತಿ ನೋ ಜುಷಸ್ವ ಮಾ ನೋ ನಿ ಕಃ ಪುರುಷತ್ರಾ ನಮಸ್ತೇ ॥೮॥**

**ಪದಾರ್ಥ:-** [**ಜರಿತಃ**] ಪ್ರಶಂಸೆ ಮಾಡುವವನೇ! ನೀನು [**ಏತತ್**] ಈ [**ವಚಃ**] ವಚನವನ್ನು [**ಮಾ**] [**ಅಪಿ, ಮೃಷ್ಠಾಃ**] ಸಹಿಸಬೇಡ. [**ತೇ**] ನಿನ್ನ [**ಯತ್**] ಯಾವ [**ಉತ್ತರಾ**] ಮುಂದಿನ [**ಯುಗಾನಿ**] ವರ್ಷಗಳಲ್ಲಿ [**ಘೋಷಾನ್**] ವಾಣಿಯ ಪ್ರಯೋಗಗಳನ್ನು ಮಾಡುವಂತಾಗಲಿ. ಆ ನುಡಿಯು [**ಉಕ್ಥೇಷು**] ಪ್ರಶಂಸಾತ್ಮಕ ಕರ್ಮಗಳಲ್ಲಿ [**ನಃ**] ನಮಗೆ ಪ್ರಾಪ್ತವಾಗಲಿ. [**ಕಾರೋ**] ಕರ್ತಾರನೇ! [**ನಃ**] ನಮ್ಮ [**ಪ್ರತೀ**] [**ಆ, ಜುಷಸ್ವ**] ಸಮೀಪದಲ್ಲಿದ್ದು ಸೇವೆ ಮಾಡು ನಾವು [**ಪುರುಷತ್ರಾ**] ಮನುಷ್ಯರಿಗೆ [**ಮಾ, ನಿ, ಕಃ**] ಅಪಕಾರ ಮಾಡುವುದಿಲ್ಲ. ಅದರಿಂದ [**ತೇ**] ನಿನಗೆ [**ನಮಃ**] ನಮಸ್ಕಾರವಿರಲಿ.

**ಭಾವಾರ್ಥ:-** ಮನುಷ್ಯರೇ! ಎಷ್ಟು ಕಾಲ ಕಳೆದಿರುವಿರೋ ಆ ಕಾಲದಲ್ಲಿ ಯಾವ ಯಾವ ಕೆಲಸವನ್ನು ಮಾಡಿರುವಿರೋ ಅದರಲ್ಲಿ ಮಾಡದೇ ಉಳಿದಿರುವ ಅರ್ಹ ಕೆಲಸಗಳನ್ನು ತಿಳಿದು ವರ್ತಮಾನ ಮತ್ತು ಭವಿಷ್ಯತ್ ಕಾಲದಲ್ಲಿ ಆ ಕೆಲಸಗಳನ್ನು ಮಾಡುವವರಾಗಿರಿ. ಅದರಿಂದ ನಿಮ್ಮ ಕಾರ್ಯಗಳಲ್ಲಿ ಬರುವ ವಿಘ್ನಗಳು ನಿವಾರಣೆಯಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಓ ಷು ಸ್ವಸಾರಃ ಕಾರವೇ ಶೃಣೋತ ಯಯೌ ವೋ ದೂರಾದನಸಾ ರಥೇನ ।**
**ನಿ ಷೂ ನಮಧ್ವಂ ಭವತಾ ಸುಪಾರಾ ಅಧೋಅಕ್ಷಾಃ ಸಿಂಧವಃ ಸ್ರೋತ್ಯಾಭಿಃ ॥೯॥**

**ಪದಾರ್ಥ:-** [ಓ] ವಿದ್ಯಾವಂತನೇ! ನೀವು [**ಕಾರವೇ**] ಶಿಲ್ಪಿ ಜನರಿಗಾಗಿ [**ಸ್ವಸಾರಃ**] ಸೋದರಿಯಂತೆ ಇರುವ ಬೆರಳುಗಳನ್ನು [**ಸ್ರೋತ್ಯಾಭಿಃ**] ನದಿಯ ಗತಿಯಂತೆ [**ಸಿಂಧವಃ**] ಸಾಗರಕ್ಕೆ ಸಮನಾಗಿ [**ಅಧೋ**] [**ಅಕ್ಷಾಃ**] ಅಧೋಭಾಗದಲ್ಲಿ ಪ್ರಾಪ್ತವಾದ ಇಂದ್ರಿಯಗಳೊಂದಿಗೆ [**ಸುಪಾರಾಃ**] ಉತ್ತಮ ರೀತಿಯಲ್ಲಿ ಪಾಲನಾದಿ ಕರ್ಮಗಳನ್ನು ಮಾಡುವವರು [**ಸು**] [**ಭವತ**] ಆಗಿರಿ. [**ಅನಸಾ**] ಗಾಡಿ ಮತ್ತು [**ರಥೇನ**] ರಥದಿಂದ [**ದೂರಾತ್**] ದೂರದಲ್ಲಿರುವ [**ವಃ**] ನಿಮ್ಮ ಬಳಿಗೆ [**ಯಯೌ**] ಬರುತ್ತೇವೆ. [**ಸು, ಶೃಣೋತ**] ಅದನ್ನು ಚೆನ್ನಾಗಿ ಕೇಳಿಸಿಕೋ. [**ನಿ**] [**ನಮಧ್ವಂ**] ಅತಿಶಯ ನಮ್ರನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಜನರು ಪರಸ್ಪರರಲ್ಲಿ ಪ್ರೀತಿಯುಳ್ಳವರೋ ಅವರ ವ್ಯವಹಾರಗಳಿಂದ ಸಂತುಷ್ಟರೋ ಅವರ ಮಾತುಗಳನ್ನು ಆಲಿಸಿರಿ ಮತ್ತು ಅವರಿಂದ ರಚಿಸಲಾದ ವಾಹನಗಳನ್ನು ನೋಡಿರಿ. ಅವು ಹೇಗೆ ನದಿಯಲ್ಲಿ ಆಚೆ ಈಚೆ ತೇಲುತ್ತವೆಯೋ ಹೇಗೆ ನಿಮ್ನಗಾಮಿಗಳೋ ಅವುಗಳಿಗೆ ನದಿಯು ಹೇಗೋ ಹಾಗೆ ನೀವೂ ಐಶ್ವರ್ಯವಂತರೂ ಗುಣವಂತರೂ ಆಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾದನಸಾ ರಥೇನ ।**
**ನಿ ತೇ ನಂಸೈ ಪೀಪ್ಯಾನೇವ ಯೋಷಾ ಮರ್ಯಾಯೇವ ಕನ್ಯಾ ಶಶ್ವಚೈ ತೇ ॥೧೦॥**

**ಪದಾರ್ಥ:-** [**ಕಾರೋ**] ಶಿಲ್ಪಿಗಳೇ! [**ತೇ**] ನಿನ್ನ [**ವಚಾಂಸಿ**] ಮಾತುಗಳನ್ನು ಕೇಳಿ [**ಅನಸಾ**] ಗಾಡಿಯಿಂದ [**ರಥೇನ**] ರಥದಿಂದ [**ದೂರಾತ್**] ದೂರದಿಂದ ಬಂದಿರುವ ನಾವು [**ಆ, ಶೃಣವಾಮ**] ನಿನ್ನ ಎಲ್ಲ ಮಾತುಗಳನ್ನು ಕೇಳಿಸಿಕೊಳ್ಳುವೆವು. [**ಯಯಾಥ**] ನೀನು ನಮ್ಮ ಸಮೀಪಕ್ಕೆ ಬಾ. [**ಪೀಪ್ಯಾನೇವ**] ವಿದ್ಯೆಯಿಂದ ಹಿರಿಯರಾದ ಮನುಷ್ಯರಂತೆ [**ನಿ, ನಂಸೈ**] ನಮಸ್ಕಾರ ಮಾಡಲಿ. [**ತೇ**] ನಿನಗೆ ನಾವೂ ನಮ್ರರಾಗುವೆವು. [**ಯೋಷಾ**] ಸ್ತ್ರೀಯು [**ಮರ್ಯಾಯೇವ**] ಪುರುಷನಿಗಾಗಿ [**ಕನ್ಯಾ**] ಕನ್ಯೆಯು [**ಶಶ್ವಚೈ**] ಪ್ರೀತಿಯಿಂದ ಮಿಲನ ಹೊಂದುವುದಕ್ಕಾಗಿ [**ತೇ**] ನಿನಗೆ ಹರಸುತ್ತೇವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಯಾರು ದೂರದಿಂದ ಬಂದು ವಿದ್ಯಾವಂತರ ಸಮೀಪದಿಂದ ಅನೇಕ ರೀತಿಯ ವಿದ್ಯೆಗಳನ್ನು ಪಡೆದು ನಮ್ರರಾಗುತ್ತಾರೋ, ಅವರು ವಿದ್ಯಾ ವೃದ್ಧರಾಗಿ ಪತಿವ್ರತಾ ಸ್ತ್ರೀಯು ಪತಿಯನ್ನು ಮತ್ತು ಕನ್ಯೆಯು ಅಭೀಷ್ಟವರನನ್ನು ಪಡೆದಂತೆ ವಿದ್ಯೆಯನ್ನು ಪಡೆದು ಆನಂದಿತರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದಂಗ ತ್ವಾ ಭರತಾಃ ಸಂತರೇಯು-ರ್ಗವ್ಯನ್ ಗ್ರಾಮ ಇಷಿತ ಇಂದ್ರಜೂತಃ ।**
**ಅರ್ಷಾದಹ ಪ್ರಸವಃ ಸರ್ಗತಕ್ತ ಆ ವೋ ವೃಣೇ ಸುಮತಿಂ ಯಜ್ಞಿಯಾನಾಮ್ ॥೧೧॥**

**ಪದಾರ್ಥ:-** [**ಅಂಗ**] ಗೆಳೆಯನೇ! [**ಯತ್**] ಯಾವುದು [**ತ್ವಾ**] ನಿನ್ನನ್ನು [**ಭರತಾಃ**] ಎಲ್ಲರ ಧಾರಣ - ಪೋಷಣ ಮಾಡುವಂತಹದನ್ನು [**ಸಂತರೇಯುಃ**] ದಾಟುವರೋ ಅವರು [**ಗ್ರಾಮಃ**] ಮನುಷ್ಯರ ಸಮುದಾಯಕ್ಕೆ ಸಮನಾಗಿ [**ಇಷಿತಃ**] ಪ್ರೇರಣೆ ಪಡೆದು [**ಇಂದ್ರ ಜೂತಃ**] ಮಿಂಚಿನಂತೆ ಪ್ರತಾಪ ಮತ್ತು [**ಪ್ರಸವಃ**] ಅತ್ಯೈಶ್ವರ್ಯ

ಸಂಪನ್ನರಾಗಿ [ಸರ್ಗತಕ್ತಃ] ನೀರನ್ನು ಸಂಕೋಚಗೊಳಿಸುವ [ಗವ್ಯನ್] ಗೋವುಗಳಂತೆ ಆಚರಿಸುವವರಾದ ನೀವು [ಅಹ] ಸ್ವೀಕರಿಸುವುದಲ್ಲಿ [ಅರ್ಷಾತ್] ಪ್ರವೃತ್ತರಾಗಿರು. ನಾನು [ಯಜ್ಞಿಯಾನಾಂ] ಯಜ್ಞವನ್ನು ಸಾಧಿಸುವಂತಹ [ವಃ] ನಿಮ್ಮ [ಸುಮತಿಂ] ಶ್ರೇಷ್ಠ ಬುದ್ಧಿಯನ್ನು [ಆ] [ವೃಣೆ] ಎಲ್ಲಾ ರೀತಿಯಿಂದ ಸ್ವೀಕರಿಸುವೆನು.

**ಭಾವಾರ್ಥ:-** ವಿದ್ಯಾವಂತರು ಹೇಗೆ ವಿದ್ಯೆಯ ಕೊನೆಯನ್ನು ತಲುಪುವರೋ, ಬುದ್ಧಿವಂತರಾಗುವರೋ ಹಾಗೆ ಬೇರೆಯವರೂ ಆಗಬೇಕು. ಹೀಗೆ ಮಾಡಿದರೆ ಎಲ್ಲರೂ ದುಃಖವನ್ನು ದಾಟುವರು; ಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅತಾರಿಷುರ್ಭರತಾ ಗವ್ಯವಃ ಸ-ಮಭಕ್ತ ವಿಪ್ರಃ ಸುಮತಿಂ ನದೀನಾಮ್ ।**
**ಪ್ರ ಪಿನ್ವಧ್ವಮಿಷಯಂತೀಃ ಸುರಾಧಾ ಆ ವಕ್ಷಣಾಃ ಪೃಣಧ್ವಂ ಯಾತ ಶೀಭಮ್ ॥೧೨॥**

**ಪದಾರ್ಥ:-** [ಗವ್ಯವಃ] ತನ್ನ ಸುಶಿಕ್ಷಿತ ನುಡಿಯನ್ನು ಬಯಸುವವರು [ಭರತಾಃ] ಧಾರಣ-ಪೋಷಣ ಮಾಡುವ ನೌಕೆಯಿಂದ [ನದೀನಾಂ] ನದಿಗಳಂತೆ ಸುಶಿಕ್ಷಿತ ಸ್ತ್ರಿಯರ ಜ್ಞಾನ ಪ್ರವಾಹವನ್ನು [ಅತರಿಷುಃ] ದಾಟುವರು. [ಸಂ, ಅಭಕ್ತ] ಅದನ್ನು ಉತ್ತಮ ರೀತಿಯಲ್ಲಿ ಪಡೆಯಿರಿ ಮತ್ತು [ವಕ್ಷಣಾಃ] ಹರಿಯುವ ನದಿಗಳು [ಇಷಯಾಂತೀಃ] ಅನ್ನವನ್ನು ಸಿದ್ಧಪಡಿಸುವ ಸ್ತ್ರೀಯನ್ನು [ಪ್ರ] [ಪಿನ್ವಧ್ವಂ] ಸೇವಿಸುವವರಾಗಿರಿ. ಎಲ್ಲರ [ಆ, ಪೃಣಧ್ವಂ] ಪಾಲನೆ ಮಾಡಿರಿ ಮತ್ತು ಉತ್ತಮ ಗುಣಗಳನ್ನು [ಶೀಭಂ] ಬೇಗನೆ [ಯಾತ] ಪಡೆಯಿರಿ.

**ಭಾವಾರ್ಥ:-** ಮನುಷ್ಯರು ವಿದ್ಯಾವಂತರಂತೆ ನದೀ-ಸಮುದ್ರಾದಿಗಳನ್ನು ವಿದ್ಯಾವಂತರಿಗೆ ಸದೃಶವಾಗಿ ಪಾರು ಮಾಡಿ ಸುಖಸೇವನೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉದ್ವ ಊರ್ಮಿಃ ಶಮ್ಯಾ ಹಂ-ತ್ವಾಪೋ ಯೋಕ್ತ್ರಾಣಿ ಮುಂಚತ ।**
**ಮಾದುಷ್ಕೃತೌ ವ್ಯೇನಸಾ-ಘ್ನ್ಯೌ ಶೂನಮಾರತಾಮ್ ॥೧೩॥**

**ಪದಾರ್ಥ:-** [ಶಮ್ಯಾಃ] ಕಾರ್ಯದಿಂದ ಉತ್ಪನ್ನವಾದ [ಆಪಃ] ಜಲದಂತೆ ದುಃಖವನ್ನು [ಹಂತು] ದೂರಗೊಳಿಸಿರಿ. [ವಃ] ನಿಮಗೆ [ಊರ್ಮಿಃ] ತರಂಗಗಳಂತೆ ಉತ್ಸಾಹ ಆದ್ದರಿಂದ [ಯೋಕ್ತ್ರಾಣಿ] ಜೋಡಣೆಗಳನ್ನು [ಮುಂಚತ] ಬಿಡುವವರಾಗಿರಿ. ಸ್ತ್ರೀ-ಪುರುಷರೇ! ನೀವಿಬ್ಬರೂ [ದುಃಷ್ಕೃತೌ] ದುರಾಚಾರ ಮತ್ತು ದುಷ್ಕರ್ಮಗಳನ್ನು [ಮಾ] ಮಾಡದಿರಿ. [ವ್ಯೇನಸಾ] ಪಾಪಚರ್ಯೆಯು ನಷ್ಟವಾಗುವುದರಿಂದ [ಅಘ್ನ್ಯೌ] ಹನನ ಯೋಗ್ಯರಾಗದೇ ಪತಿ-ಪತ್ನಿಯರು [ಶುನಂ] ಸುಖವನ್ನು ಮತ್ತು [ಉತ್] ಉತ್ತಮರೀತಿಯಲ್ಲಿ [ಆ, ಅರತಾಂ] ಪಡೆದುಕೊಳ್ಳಿರಿ.

**ಭಾವಾರ್ಥ:-** ಯಾವ ದಂಪತಿಗಳು ದುಃಖದ ಬಂಧನವನ್ನು ಕತ್ತರಿಸಿ ದುಷ್ಟಾಚರಣೆಯನ್ನು ಕೈಬಟ್ಟು ವಿದ್ಯೆಯನ್ನು ಅಭಿವೃದ್ಧಿಪಡಿಸುವರೋ ಅವರು ನಿರಂತರ ಸುಖ ಪಡೆಯುವರು.

ಈ ಸೂಕ್ತದಲ್ಲಿ ಮೇಘ, ನದೀ, ವಿದ್ಯಾವಂತ, ಗೆಳೆಯ, ಶಿಲ್ಪಿ, ನೌಕೆ ಮತ್ತು ಸ್ತ್ರೀ-ಪುರುಷರ ವರ್ಣನೆ ಇರುವುದರಿಂದ ಈ ಸೂಕ್ತದ ಅರ್ಥ ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮುವತ್ತಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೩೪

ಮಂತ್ರಸಂಖ್ಯೆ ೧೧ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೨, ೧೧ ತ್ರಿಷ್ಟುಪ್, ೪, ೫, ೭, ೧೦ ನಿಚೃತ್ ತ್ರಿಷ್ಟುಪ್, ೬ ವಿರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩, ೬, ೮ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಸೂರ್ಯನ ಗುಣಗಳನ್ನು ಹೇಳಿದೆ.

**ಇಂದ್ರಃ ಪೂರ್ಭಿದಾತಿರದ್ದಾಸಮರ್ಕೈ-ರ್ವಿದದ್ವಸುರ್ದಯಮಾನೋ ವಿ ಶತ್ರೂನ್ ।**
**ಬ್ರಹ್ಮಜೂತಸ್ತನ್ವಾ ವಾವೃಧಾನೋ ಭೂರಿದಾತ್ರ ಆಪೃಣದ್ರೋದಸೀ ಉಭೇ ॥೧॥**

**ಪದಾರ್ಥ:-** **[ಉಭೇ]** ಎರಡೂ **[ರೋದಸೀ]** ಭೂಮ್ಯಂತರಿಕ್ಷಗಳು ಅವುಗಳಂತೆ ವಿದ್ಯಾವಿನಯಗಳು **[ಆ, ಅಪೃಣತ್]** ಪೂರ್ಣಗೊಳ್ಳಲಿ. **[ವಿದದ್ವಸುಃ]** ಸಂಪದ್ಭರಿತ **[ಬ್ರಹ್ಮಜೂತಃ]** ಧನವಂತ **[ದಾಸಂ]** ದಾನಯೋಗ್ಯ **[ದಯಮಾನ]** ಕರುಣಾಳು **[ತನ್ವಾ]** ಸೂರ್ಯನ ಶರೀರದಿಂದ **[ವಾವೃಧಾನಃ]** ಬೆಳವಣಿಗೆ ಹೊಂದುತ್ತ **[ಭೂರಿದಾತ್ರಃ]** ಬಹುವಿಧ ವಸ್ತುಗಳನ್ನು ದಾನ ಮಾಡುವ **[ಪೂರ್ಭಿತ್]** ಶತ್ರುಪುರವನ್ನು ಭೇದಿಸುವ **[ಇಂದ್ರ]** ಐಶ್ವರ್ಯವಂತ ನೀನು **[ಅರ್ಕೈಃ]** ಆದರಯೋಗ್ಯ ವಿಚಾರಗಳಿಂದ **[ಶತ್ರೂನ್]** ಶತ್ರುಗಳನ್ನು **[ವಿ, ಆ, ಅತಿತರತ್]** ಉಲ್ಲಂಘಿಸುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ತನ್ನ ಕಿರಣಗಳಿಂದ ಭೂಮಿ ಅಂತರಿಕ್ಷವನ್ನು ಒಂದು ಗೂಡಿಸಿ ಹೇಗೆ ಅಂಧಕಾರದ ಮೇಲೆ ವಿಜಯಸಾಧಿಸುತ್ತಾನೋ, ಹಾಗೆ ಶ್ರೇಷ್ಠ ಮತ್ತು ಒಮ್ಮತದ ವಿಚಾರಗಳಿಂದ ಶತ್ರುಗಳನ್ನು ಜಯಿಸಿರಿ ಮತ್ತು ಸದಾಕಾಲ ಶರೀರಾತ್ಮ ಬಲಗಳನ್ನು ಬಲಪಡಿಸಿಕೊಳ್ಳಿರಿ. ಸತ್ಪುರುಷರ ಸತ್ಕಾರ, ಅಸತ್ಪುರುಷರ ಅವಹೇಳನ ಮಾಡಿರಿ.

ರಾಜ-ಪ್ರಜೆಗಳ ವಿಚಾರವಿಲ್ಲಿ ಹೇಳಿದೆ.

**ಮಖಸ್ಯ ತೇ ತವಿಷಸ್ಯ ಪ್ರ ಜೂತಿ-ಮಿಯರ್ಮಿ ವಾಚಮಮೃತಾಯ ಭೂಷನ್ ।**
**ಇಂದ್ರ ಕ್ಷಿತೀನಾಮಸಿ ಮಾನುಷೀಣಾಂ ವಿಶಾಂ ದೈವೀನಾಮುತ ಪೂರ್ವಯಾವಾ ॥೨॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕನೇ! **[ತೇ]** ನಿನ್ನ **[ಮಖಸ್ಯ]** ಸಂಗತಿಕರಣ ವ್ಯವಹಾರದ **[ತವಿಷಸ್ಯ]** ಬಲದ **[ಜೂತಿಂ]** ವೇಗವನ್ನು **[ಅಮೃತಾಯ]** ಶಾಶ್ವತ ಸುಖಕ್ಕಾಗಿ **[ವಾಚಂ]** ನುಡಿಯಲಾದ ಮಾತನ್ನು **[ಭೂಷನ್]** ಸುಶೋಭಿತಗೊಳಿಸುತ್ತ ನಾನು **[ಪ್ರ, ಇಯರ್ಮಿ]** ಪ್ರಾಪ್ತನಾಗುವೆನು. **[ದೇವೀನಾಂ]** ಉತ್ತಮ ಗುಣ ಸಂಪನ್ನ **[ಕ್ಷಿತೀನಾಂ]** ತನ್ನ ರಾಜ್ಯದಲ್ಲಿ ವಾಸಿಸುವ **[ಮಾನೂಷೀಣಾಂ]** ಮನುಷ್ಯರೂಪದ **[ವಿಶಾಂ]** ಪ್ರಜೆಗಳ **[ಪೂರ್ವಯಾವಾ]** ಪ್ರಾಚೀನ ರಾಜನೀತಿಯನ್ನು ಪಡೆದಿರುವ **[ಉತ]** ಅಥವಾ ತನ್ನದೇ ಆದ ವಿದ್ಯಾವಿನಯಗಳಿಂದ ಕೂಡಿ ಸತ್ಕಾರ ಯೋಗ್ಯನು **[ಅಸಿ]** ಆಗಿರುವೆ.

**ಭಾವಾರ್ಥ:-** ರಾಜಪುರುಷರಾಗಲೀ ಪ್ರಜೆಗಳಾಗಲೀ ತನ್ನ ಸ್ವಾಮಿಯ ಆಜ್ಞೆಯನ್ನು ಉಲ್ಲಂಘಿಸಬಾರದು ಹಾಗೂ ಸ್ವಾಮಿಯಾದವನೂ ಸಹ ಧರ್ಮಮಾರ್ಗದಿಂದ ಉತ್ತಮ ಕರ್ಮಗಳಿಂದ ಸತತವಾಗಿ ತನ್ನ ಪ್ರಜೆಗಳನ್ನು ಪಾಲನೆ ಮಾಡಬೇಕು.

ಸೂರ್ಯನ ದೃಷ್ಟಾಂತದಿಂದಿಲ್ಲಿ ರಾಜಧರ್ಮ ಹೇಳಿದೆ.

**ಇಂದ್ರೋ ವೃತ್ರಮವೃಣೋಚ್ಛರ್ಧನೀತಿಃ ಪ್ರ ಮಾಯಿನಾಮಮಿನಾದ್ವರ್ಪಣೀತಿಃ ।**
**ಅಹನ್ ವ್ಯಂಸಮುಶಧಗ್ವನೇ-ಷ್ವಾವಿರ್ಧೇನಾ ಅಕೃಣೋದ್ರಾಮ್ಯಾಣಾಮ್ ॥೩॥**

**ಪದಾರ್ಥ:-** **[ವೃತ್ರಂ]** ಮೇಘವನ್ನು **[ವ್ಯಂಸಂ]** ಕತ್ತರಿಸುವವನಂತೆ **[ಅಹನ್]** ನಾಶ ಮಾಡುವವನು **[ಶರ್ಧನೀತಿಃ]** ಸೇನಾನಾಯಕನು **[ವರ್ಷಣೀತಿಃ]** ರೂಪವನ್ನು ಪ್ರಾಪ್ತಿಗೊಳಿಸುವವನು **[ಇಂದ್ರಃ]** ಸೂರ್ಯನಂತೆ ಪ್ರತಾಪಿಯಾದ ರಾಜನೇ! ನೀನು **[ಮಾಯಿನಾಂ]** ದುಷ್ಟಬುದ್ಧಿಯವರ ಮಾಯೆಯನ್ನು **[ಪ್ರ, ಅಮಿನಾತ್]** ನಾಶಮಾಡು. **[ಉಷಧಕ್]** ಯುದ್ಧ ಮಾಡುವವರ ನಾಶಕರ್ತನು **[ವನೇಷು]** ಕಾಡುಗಳಲ್ಲಿ **[ಧೇನಾಃ]** ವಾಣಿಯನ್ನು **[ಅವೃಣೋತ್]** ಅವರಿಸು. **[ರಮ್ಯಾಣಾಂ]** ಮನೋಹರ ಮಾತುಗಳನ್ನು **[ಆವಿಃ]** **[ಅಕೃಣೋತ್]** ಕಷ್ಟಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ನೀನು ಸೂರ್ಯನು ಮೇಘಗಳನ್ನು ನಾಶಮಾಡುವಂತೆ ದುರಾಚಾರಿಗಳನ್ನು ನಾಶಮಾಡಿ ವಿದ್ಯಾಸಂಬಂಧಿ ವಾಣಿಗಳನ್ನು ಪ್ರಚಾರಮಾಡು. ಎಲ್ಲಾ ಜನರನ್ನೂ ಸೇನೆಯನ್ನು ಶಿಕ್ಷಣವನ್ನೂ ವೃದ್ಧಿಪಡಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಃ ಸ್ವರ್ಷಾ ಜನಯನ್ನಹಾನಿ ಜಿಗಾಯೋಶಿಗ್ಭಿಃ ಪೃತನಾ ಅಭಿಷ್ಟಿಃ ।**
**ಪ್ರಾರೋಚಯನ್ಮನವೇ ಕೇತುಮಹ್ನಾ-ಮವಿಂದಜ್ಜ್ಯೋತಿರ್ಬೃಹತೇ ರಣಾಯ ॥೪॥**

**ಪದಾರ್ಥ:-** **[ಸ್ವರ್ಷಾ]** ಸುಖದ ವಿಭಾಗ ಮಾಡುವವನು **[ಅಭಿಷ್ಟಿಃ]** ಅಭಿಮುಖಗೊಳಿಸುವವನು **[ಇಂದ್ರಃ]** ಸೂರ್ಯನಂತೆ ತೇಜಸ್ವೀ **[ಪೃತನಾಃ]** ವೀರ ಪುರುಷರಿರುವ ಸೇನೆಯನ್ನು **[ಅಹಾನಿ]** ಸೂರ್ಯನು ದಿನಗಳಂತೆ **[ಜನಯನ್]** ಪ್ರಕಟಗೊಳಿಸುವವನು. **[ಉಶಿಗ್ಭಿಃ]** ಯುದ್ಧವನ್ನು ಬಯಸುವ ವೀರರೊಂದಿಗೆ **[ಜಿಗಾಯ]** ಶತ್ರುಗಳನ್ನು ಜಯಿಸು. **[ಬೃಹತೇ]** ಮಹತ್ತಾದ **[ರಣಾಯ]** ಸಂಗ್ರಾಮಕ್ಕಾಗಿ **[ಅಹ್ನಾಂ]** ದಿನಗಳ **[ಜ್ಯೋತಿಃ]** ಯುದ್ಧವಿದ್ಯಾ ಪ್ರಕಾಶವನ್ನು **[ಮನವೇ]** ಮನನ ಮಾಡುವ ಮನುಷ್ಯರಿಗಾಗಿ **[ಕೇತುಂ]** ವೃದ್ಧಿಯನ್ನು **[ಅವಿಂದತ್]** ಪಡೆದುಕೊ ಮತ್ತು **[ಪ್ರ]** **[ಅರೋಚಯತ್]** ಸಂಗ್ರಾಮವನ್ನು ಪ್ರಚುರಗೊಳಿಸಿ ವಿಜಯರೂಪ ಭೂಷಣವನ್ನು ಧಾರಣ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಬೇರೆಲ್ಲ ಜನರಿಗಿಂತ ಅಧಿಕವಾಗಿ ಯುದ್ಧ ವಿದ್ಯೆಯಲ್ಲಿ ಪ್ರಯತ್ನ ಮಾಡುವವರೋ ಅವರು ಉತ್ತಮ ರೀತಿಯಲ್ಲಿ ಯುದ್ಧ ಮಾಡುವವರಿಗೆ ಪಾರಿತೋಷಕಾದಿಗಳಿಂದ ಪ್ರೋತ್ಸಾಹಿಸಿ ವೀರರೊಂದಿಗೆ ಶತ್ರುಗಳನ್ನು ಜಯಿಸಿ ಸೂರ್ಯನಂತೆ ವಿಜಯದ ಬೆಳಕು ಚೆಲ್ಲಬೇಕು.

ಎಂತಹ ರಾಜನು ರಾಜ್ಯಾಧಿಕಾರಿಯಾಗುವನೆಂದಿಲ್ಲಿ ಹೇಳಿದೆ.

**ಇಂದ್ರಸ್ತುಜೋ ಬರ್ಹಣಾ ಆ ವಿವೇಶ ನೃವದ್ದಧಾನೋ ನರ್ಯಾ ಪುರೂಣಿ ।**
**ಅಚೇತಯದ್ಧಿಯ ಇಮಾ ಜರಿತ್ರೇ ಪ್ರೇಮಂ ವರ್ಣಮತಿರಚ್ಛುಕ್ರಮಾಸಾಮ್ ॥೫॥**

**ಪದಾರ್ಥ:-** [**ಇಂದ್ರ**] ರಾಜನೇ! [**ಆಸಾಂ**] ಈ ಪ್ರಜೆಗಳ [**ಪುರೂಣಿ**] ಬಹುವಾಗಿ [**ನರ್ಯಾ**] ಮನುಷ್ಯರ ಹಿತ ಮಾಡುವ ಸೇನೆಯನ್ನು [**ನೃವತ್**] ಪ್ರಧಾನ ಪುರುಷನಿಗೆ ಸಮನಾಗಿ [**ದಧಾನಃ**] ಧಾರಣ ಮಾಡುವವನ [**ಬರ್ಹಣಾಃ**] ಬುದ್ಧಿ ಪಡೆದು [**ತುಜಃ**] ಶತ್ರುನಾಶಕ ಸೇನೆಯ ಬಲವನ್ನು [**ಆ, ವಿವೇಶ**] ಪಡೆಯುವವನಾಗು. [**ಜರಿತ್ರೇ**] ಸ್ತುತಿ ಮಾಡುವವನಿಗೆ [**ಇಮಾಃ**] ಈ ಪಡೆದಿರುವ [**ಧಿಯಃ**] ಬುದ್ಧಿಗಳನ್ನು [**ಪ್ರ**] [**ಅಚೇತಯತ್**] ಬೋಧಿಸು. [**ಇಮಂ**] ಈ [**ಶುಕ್ರಂ**] ಶೀಘ್ರ ಕಾರ್ಯ ಮಾಡುವ [**ವರ್ಣಂ**] ಸ್ವೀಕಾರದ [**ಅತಿರತ್**] ಆ ದಡ ತಲುಪಿಸು.

**ಭಾವಾರ್ಥ:-** ಯಾರು ಬುದ್ಧಿವಂತರೂ ಧಾರ್ಮಿಕರೂ ಆದವರನ್ನೇ ಎಲ್ಲಾ ರೀತಿಯ ಅಧಿಕಾರ ಸ್ಥಾನದಲ್ಲಿ ನಿಯಮಿಸಿಕೊಂಡು, ಸೇನೆಯನ್ನು ಅಭಿವೃದ್ಧಿ ಮಾಡಿ ಎಲ್ಲಾ ಪ್ರಜೆಗಳನ್ನು ತಂದೆಗೆ ಸಮನಾಗಿ ಪಾಲನೆ ಮಾಡುವರೋ ಅವರೇ ರಾಜ್ಯಶಾಸನ ಮಾಡಲು ಸಮರ್ಥರಾಗುವರು.

ರಾಜ-ಪ್ರಜೆಗಳ ವಿಚಾರವಿಲ್ಲಿದೆ.

**ಮಹೋ ಮಹಾನಿ ಪನಯಂತ್ಯಸ್ಯೇ-ಂದ್ರಸ್ಯ ಕರ್ಮ ಸುಕೃತಾ ಪುರೂಣಿ ।**
**ವೃಜನೇನ ವೃಜಿನಾನ್ ತ್ಸಂ ಪಿಪೇಷ ಮಾಯಾಭಿರ್ದಸ್ಯೂಁರಭಿಭೂತ್ಯೋಜಾಃ ॥೬॥**

**ಪದಾರ್ಥ:-** [**ಅಭಿಭೂತ್ಯೋಜಾಃ**] ಶತ್ರುಗಳನ್ನು ಸಂಹರಿಸುವಂತಹ ಬಲವಿರುವ ರಾಜಪುರುಷರು [**ವೃಜನೇನ**] ಬಲದಿಂದ [**ಮಾಯಾಭಿಃ**] ಬುದ್ಧಿವಂತಿಕೆಯಿಂದ [**ವೃಜಿನಾನ್**] ಪಾಪಿಗಳಾದ [**ದಸ್ಯೂನ್**] ಸಾಹಸೀ ಚೋರರನ್ನು [**ಸಂ, ಪಿಪೇಷ**] ಸಂಹರಿಸಬೇಕು. [**ಅಸ್ಯ**] ಈ [**ಮಹಃ**] ಶ್ರೇಷ್ಠನಾದ [**ಇಂದ್ರಸ್ಯ**] ಐಶ್ವರ್ಯವಂತನ [**ಪುರೂಣಿ**] ವಿಪುಲವಾದ [**ಮಹಾನಿ**] ಮಹತ್ತಾದ [**ಸುಕೃತಾ**] ಧರ್ಮದಿಂದ ಮಾಡಲಾದ [**ಕರ್ಮ**] ಕಾರ್ಯವನ್ನು [**ಪನಯಂತಿ**] ಪ್ರಶಂಸೆ ಮಾಡುವರೋ, ಅವರೇ ರಾಜ ಅಥವಾ ಮಂತ್ರಿಯಾಗಲು ಸಮರ್ಥರು.

**ಭಾವಾರ್ಥ:-** ರಾಜನಾದವನು ಎಲ್ಲಾ ಪ್ರಜೆಗಳ ಧರ್ಮಾಚರಣೆಯಂತಹ ಧಾರ್ಮಿಕ ಕರ್ಮಗಳನ್ನು ಒಪ್ಪಿಕೊಳ್ಳಬೇಕು. ಹಾಗೆಯೇ ಎಲ್ಲಾ ಪ್ರಜೆಗಳೂ ರಾಜನ ಎಲ್ಲಾ ವಿಧ ಧಾರ್ಮಿಕ ಶಾಸನಾತ್ಮಕ ಕೆಲಸಗಳನ್ನು ಒಪ್ಪಿಕೊಳ್ಳಬೇಕು ಹಾಗೂ ಅನಿಷ್ಟಾಚಾರಣೆಯನ್ನು ಯಾರೂ ಒಪ್ಪಿಕೊಳ್ಳಬಾರದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯುಧೇಂದ್ರೋ ಮಹ್ನಾ ವರಿವಶ್ಚಕಾರ ದೇವೇಭ್ಯಃ ಸತ್ಪತಿಶ್ಚರ್ಷಣಿಪ್ರಾಃ ।**
**ವಿವಸ್ವತಃ ಸದನೇ ಅಸ್ಯ ತಾನಿ ವಿಪ್ರಾ ಉಕ್ಥೇಭಿಃ ಕವಯೋ ಗೃಣಂತಿ ॥೭॥**

**ಪದಾರ್ಥ:-** [**ದೇವೇಭ್ಯಃ**] ವಿದ್ಯಾವಂತರಿಂದ ಶಿಕ್ಷಣವನ್ನು ಪಡೆದು [**ಸತ್ಪತಿಃ**] ಸಜ್ಜನರ ಪಾಲಕನು [**ಚರ್ಷಣಿಪ್ರಾಃ**] ಮನುಷ್ಯರಿಗೆ ವಿದ್ಯೆ ಶಿಕ್ಷಣ ಉತ್ತಮ ಸ್ವಭಾವ ಇವುಗಳಿಂದ ಪರಿಪೂರ್ಣನಾಗಿಸುವವನು [**ಇಂದ್ರಃ**] ಐಶ್ವರ್ಯವಂತನೂ ಆದ ಪುರುಷನು [**ಮಹ್ನಾ**] ದೊಡ್ಡದಾದ [**ಚಕಾರ**] ಮಾಡುವನು. [**ಅಸ್ಯ**] ಇಂತಹ ಪುರುಷನ [**ತಾನಿ**] ಆ ಕರ್ಮಗಳನ್ನು [**ವಿವಸ್ವತಃ**] ಸೂರ್ಯನ [**ಸದನೇ**] ಮಂಡಲದಲ್ಲಿ [**ಕವಯಃ**] ವಿದ್ಯಾವಂತರಾದ [**ವಿಪ್ರಾಃ**] ಶ್ರೇಷ್ಠ ಪುರುಷರು [**ಉಕ್ಥೇಭಿಃ**] ಪ್ರಶಂಸಾ ವಚನಗಳಿಂದ [**ಗೃಣಂತಿ**] ಸ್ತುತಿ ಮಾಡುತ್ತಾರೆ.

**ಭಾವಾರ್ಥ:-** ಯಾವ ಮನುಷ್ಯರು ರಾಜ ಮುಂತಾದ ಅಧಿಕಾರಿ ವರ್ಗದವರನ್ನು ಸುಳ್ಳು ಸ್ತುತಿ ಮಾಡುವರೋ, ಅವರನ್ನು ತ್ಯಜಿಸಿ ಯಾರು ಯಥಾರ್ಥ ಕರ್ಮಗಳ ಸ್ತುತಿಯನ್ನು ಮಾಡುತ್ತಾರೋ ಅವರನ್ನು ಸ್ವೀಕರಿಸಬೇಕು. ಅಂತಹ ರಾಜ, ಅಧಿಕಾರಿಗಳೇ ಯೋಗ್ಯವಾದ ಅಧಿಕಾರ ನಿರ್ವಹಿಸಬಲ್ಲರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸತ್ರಾಸಾಹಂ ವರೇಣ್ಯಂ ಸಹೋದಾಂ ಸಸವಾಂಸಂ ಸ್ವರಪಶ್ಚ ದೇವೀಃ ।**

**ಸಸಾನ ಯಃ ಪೃಥಿವೀಂ ದ್ಯಾಮುತೇಮಾ-ಮಿಂದ್ರಂ ಮದಂತ್ಯನು ಧೀರಣಾಸಃ ॥೮॥**

**ಪದಾರ್ಥ:-** **[ಯಃ]** ಯಾವನು **[ಸತ್ರಾಸಾಹಂ]** ಸತ್ಯವನ್ನು ಸಹಿಸಿಕೊಳ್ಳುವನೋ **[ವರೇಣ್ಯಂ]** ಸ್ವೀಕರಿಸಲು ಯೋಗ್ಯವಾದ **[ಸಹೋದಾಂ]** ಬಲದಾಯಕನೋ ಮತ್ತು **[ಸಸವಾಂಸಂ]** ಪಾಪ ಪುಣ್ಯ ಕರ್ಮಗಳನ್ನು ವಿಭಾಗಿಸಬಲ್ಲನೋ **[ಸ್ವಃ]** ಸುಖ ಮತ್ತು **[ದೇವೀಃ]** ಉತ್ತಮವಾದ **[ಅಪಃ]** ಪ್ರಾಣಗಳನ್ನು **[ಇಮಾಂ]** ಈ **[ಪೃಥಿವೀಂ]** ಭೂಮಿಯನ್ನೂ **[ಉತ]** ಮತ್ತು **[ದ್ಯಾಂ]** ವಿದ್ಯುತ್ತನ್ನೂ **[ಸಸಾನ]** ಪ್ರತ್ಯೇಕಗೊಳಿಸಿ/ವಿಭಾಗಿಸುವನೋ ಅಂತಹ **[ಇಂದ್ರಂ]** ತೇಜಸ್ವೀ ಪುರುಷನನ್ನು **[ಧೀರಣಾಸಃ]** ಬುದ್ಧಿ ಮತ್ತು ಸಂಗ್ರಾಮಗಳಿಂದೊಡಗೂಡಿದ ಜನರು **[ಮದಂತಿ]** ಆನಂದಿಸುತ್ತಾರೆ. ಅವನ **[ಅನು]** ಅನುಕರಣೆಯನ್ನು ನಾವೂ ಮಾಡೋಣ.

**ಭಾವಾರ್ಥ:-** ಯಾವನು ಅಸತ್ಯವನ್ನು ತ್ಯಜಿಸಿ ಸತ್ಯವನ್ನು ಗ್ರಹಣ ಮಾಡುತ್ತಾನೋ, ತನ್ನ ಬಲವನ್ನು ಹೆಚ್ಚಿಸಿಕೊಳ್ಳುತ್ತಾನೋ, ಪ್ರಜೆಗಳಿಗೆ ಸುಖವನ್ನು ಬಯಸುತ್ತಾನೋ, ವಿದ್ಯುತ್ (ಮಿಂಚು) ಭೂಮಿ ಮುಂತಾದವುಗಳ ವಿದ್ಯೆ, ಗುಣ ಇವುಗಳನ್ನು ವಿಭಾಗಿಸಿ, ಪರೀಕ್ಷಿಸಿ ಉತ್ತಮವನ್ನು ಜನರಿಗೆ ಕೊಟ್ಟು ಅವರನ್ನು ಬುದ್ಧಿವಂತರೂ ಶಕ್ತಿಶಾಲಿಗಳೂ ಆಗುವಂತೆ ಮಾಡಿ ಅವರನ್ನು ಸಂತುಷ್ಟರನ್ನಾಗಿಸಿ ತಾನೂ ಸಂತೋಷಗೊಳ್ಳುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಸಾನಾತ್ಯಾ ಉತ ಸೂರ್ಯಂ ಸಸಾನೇ-ಂದ್ರಃ ಸಸಾನ ಪುರುಭೋಜಸಂ ಗಾಮ್ ।**

**ಹಿರಣ್ಯಯಮುತ ಭೋಗಂ ಸಸಾನ ಹತ್ವೀ ದಸ್ಯೂನ್ ಪ್ರಾರ್ಯಂ ವರ್ಣಮಾವತ್ ॥೯॥**

**ಪದಾರ್ಥ:-** **[ಇಂದ್ರಃ]** ರಾಜ, ಮಂತ್ರಿ, ಸೇನಾಪತಿ ಮುಂತಾದ ಶಾಸಕಾಂಗದವರು **[ಅತ್ಯಾನ್]** ಉತ್ತಮ ಶಿಕ್ಷಣದಿಂದ ಕುದುರೆಗಳ **[ಸಸಾನ]** ವಿಭಾಗ ಕ್ರಿಯೆಯನ್ನು/ ವಿಭಜನೆಯನ್ನು ಮತ್ತು **[ಸೂರ್ಯಂ]** ಸೂರ್ಯನಂತೆ ಪ್ರತಾಪಿಯಾದ ವೀರನನ್ನು **[ಸಸಾನ]** ವಿಭಜಿಸುವರು. **[ಪುರುಭೋಜಸಂ]** ಬಹು ಜನರಿಗೆ ಊಟ ನೀಡಿ ಪಾಲಿಸುವವನೂ ಆದವನ **[ಗಾಂ]** ನುಡಿಯನ್ನು / ಭೂಮಿಯನ್ನು **[ಉತ]** ಮತ್ತು **[ಹಿರಣ್ಯಂ]** ಸುವರ್ಣಾದಿ ಪದಾರ್ಥಗಳನ್ನು **[ಸಸಾನ]** ವಿಭಾಗ ಮಾಡಬೇಕು. **[ದಸ್ಯೂನ್]** ದರೋಡೆಕೋರರನ್ನು **[ಹತ್ವೀ]** ನಾಶ ಮಾಡಿ **[ಆರ್ಯಂ]** ಉತ್ತಮ ಗುಣ ಕರ್ಮ ಸ್ವಭಾವವಿರುವ ಧಾರ್ಮಿಕರನ್ನು **[ವರ್ಣಂ]** ಸ್ವೀಕರಿಸುವರೋ ಅವರೇ ಯೋಗ್ಯರು. **[ಪ್ರ]** **[ಆವತ್]** ಅವರನ್ನು ರಕ್ಷಣೆ ಮಾಡಿರಿ / ಅಂತಹವರನ್ನು ಕಾಪಾಡಿ.

**ಭಾವಾರ್ಥ:-** ಯಾರು ವಸ್ತುಗಳನ್ನು, ಕರ್ಮಗಳನ್ನು ಪರೀಕ್ಷಿಸಿ ಉತ್ತಮ ಅಧಮಗಳೆಂದು ವಿಭಾಗಿಸಿ ಉತ್ತಮ ವಾಹನ, ವೀರಪುರುಷ, ನ್ಯಾಯಾಧೀಶ, ಲಕ್ಷ್ಮೀ ಮುಂತಾದ ಉತ್ತಮ ವಸ್ತುಗಳನ್ನು ಅನುಭವಿಸುತ್ತ ದುಷ್ಟ ವಸ್ತುಗಳನ್ನು ನಾಶಪಡಿಸುತ್ತ ಬದುಕುವರೋ, ಅವರು ಶ್ರೇಷ್ಠ ಪುರುಷರು. ಅವರ ರಕ್ಷಣೆ ಮಾಡಿರಿ.

ರಾಜಾದಿಗಳ ಕರ್ತವ್ಯವನ್ನು ಇಲ್ಲಿ ತಿಳಿಸಿದೆ.

**ಇಂದ್ರ ಓಷಧೀರಸನೋದಹಾನಿ ವನಸ್ಪತೀರಸನೋದಂತರಿಕ್ಷಮ್ ।**
**ಬಿಭೇದ ವಲಂ ನುನುದೇ ವಿವಾಚೋಽಥಾಭವದ್ದಮಿತಾಭಿಕ್ರತೂನಾಮ್ ॥೧೦॥**

**ಪದಾರ್ಥ:-** [**ಇಂದ್ರ**] ಐಶ್ವರ್ಯದಾಯಕ ರಾಜನೇ! [**ಅಹಾನಿ**] ದಿನ ದಿನವೂ [**ಓಷಧೀಃ**] ಸೋಮಾದಿ ಓಷಧಿಗಳನ್ನು [**ಅಸನೋತ್**] ಕೊಡು. [**ವನಸ್ಪತೀನ್**] ಪಿಪ್ಪಲಾದಿ ವನಸ್ಪತಿಗಳನ್ನೂ [**ಅಸನೋತ್**] ಕೊಡು. [**ಅಂತರಿಕ್ಷಂ**] ನೀರನ್ನು ಮತ್ತು [**ಬಲಂ**] ಶಕ್ತಿಯನ್ನೂ [**ಬಿಭೇದ**] ಭೇದನ ಮಾಡು. [**ವಿವಾಚಃ**] ವಿವಿಧ ಮಾತುಗಳನ್ನು [**ನುನುದೇ**] ನುಡಿಯಲು ಪ್ರೇರಣೆ ನೀಡು [**ಅಥ**] ಮತ್ತು [**ಅಭಿಕ್ರತೂನಾಂ**] ಆಕಸ್ಮಿಕ ಶೀಘ್ರ ಕಾರ್ಯಾಚರಣೆ ಮಾಡುವ ಶತ್ರುಗಳನ್ನು [**ದಮಿತಾ**] ದಮನ ಮಾಡುವವನು [**ಅಭವತ**] ಆಗು.

**ಭಾವಾರ್ಥ:-** ರಾಜ ಮುಂತಾದ ಶ್ರೇಷ್ಠ ಜನರು ಪ್ರತಿದಿನವೂ ಓಷಧಿ ರಸಾದಿಗಳನ್ನು ತಯಾರಿಸಿ ಸೇವಿಸಬೇಕು. ವಿದ್ಯಾ-ವಾಣಿಗಳ ಪ್ರಚಾರ ಮಾಡಬೇಕು. ಎಲ್ಲಾ ಜನರನ್ನು ವಿಷಯ ಸುಖ/ವ್ಯಸನದಿಂದ ನಿವೃತ್ತಿ ಮಾಡಬೇಕು. ಅವರ ಆರೋಗ್ಯ - ವಿದ್ಯಾದಿಗಳನ್ನು ಪ್ರತಿದಿನವೂ ವೃದ್ಧಿಪಡಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೧೧॥**

**ಪದಾರ್ಥ:-** [**ಊತಯೇ**] ರಕ್ಷಣೆಗಾಗಿ [**ಸಮತ್ಸು**] ಸಂಗ್ರಾಮದಲ್ಲಿ [**ಘ್ನಂತಂ**] ನಾಶ ಮಾಡುವ [**ಉಗ್ರಂ**] ಕಠೋರ ಸ್ವಭಾವದ [**ಧನಾನಾಂ**] ದ್ರವ್ಯಗಳ [**ಸಂಜಿತಂ**] ಉತ್ತಮ ರೀತಿಯಲ್ಲಿ ಶತ್ರುಗಳನ್ನು ಜಯಿಸುವಂತಹ [**ವೃತ್ರಾಣಿ**] ಸುವರ್ಣಾದಿ ಧನಗಳನ್ನು [**ಶೃಣ್ವಂತಂ**] ಆಲ್ವೆಸುವವನನ್ನು [**ಅಸ್ಮಿನ್**] ಈ ವ್ಯವಹಾರದಲ್ಲಿ [**ವಾಜಸಾತೌ**] ಧನ ಅನ್ನಾದಿಗಳ ವಿಭಾಗ ಮಾಡುವವನು [**ಭರೇ**] ಸಂಗ್ರಾಮದಲ್ಲಿ [**ನೃತಮಂ**] ಶ್ರೇಷ್ಠನಾದ [**ಮಘವಾನಂ**] ಐಶ್ವರ್ಯ ಸಂಪನ್ನನಾದ [**ಇಂದ್ರಂ**] ಶತ್ರುಗಳನ್ನು ನಾಶ ಮಾಡುವಂತಹ ರಾಜನನ್ನು [**ಹುವೇಮ**] ಕರೆಯೋಣ. ಅವನ ಸಹಕಾರದಿಂದ [**ಶುನಂ**] ಸುಖವನ್ನು ಜಯವನ್ನೂ ಪಡೆಯೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಪ್ರಮುಖ ವ್ಯಕ್ತಿಗಳನ್ನು, ರಾಜವಿದ್ಯೆಯಲ್ಲಿ ಚತುರರನ್ನು, ಶೂರರಾದ ಸೈನಿಕರನ್ನು, ನ್ಯಾಯಾಧೀಶರನ್ನು, ವಾದಮಾಡುವ ವಕೀಲರನ್ನು, ಸೇವೆ ಮಾಡುವ ಸೇವಕರನ್ನು ಗೌರವ ಪೂರ್ವಕವಾಗಿ ರಾಜ್ಯಂಗದಲ್ಲಿ ನೇಮಿಸಿಕೊಳ್ಳುತ್ತಾನೋ, ಅವನು ಯಾವಾಗಲೂ ವಿಜಯಶೀಲನೂ, ಕೀರ್ತಿವಂತನೂ, ಐಶ್ವರ್ಯಸಂಪನ್ನನೂ ಆಗುತ್ತಾನೆ.

ಈ ಸೂಕ್ತದಲ್ಲಿ ಸೂರ್ಯ, ವಿದ್ಯುತ್, ವೀರ, ರಾಜ್ಯ, ರಾಜ, ಸೇನೆ, ಪ್ರಜೆ ಮುಂತಾದವರ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮುವತ್ತನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೩೫

ಮಂತ್ರಸಂಖ್ಯೆ ೧೧ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೭, ೧೦, ೧೧ ತ್ರಿಷ್ಟುಪ್, ೨, ೩, ೬, ೮ ನಿಚೃತ್ರಿಷ್ಟುಪ್, ೯ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪ ಭುರಿಕ್ಪಂಕ್ತಿಃ, ೫ ಸ್ವರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಮನುಷ್ಯರ ಕರ್ತವ್ಯವನ್ನಿಲ್ಲಿ ಹೇಳಿದೆ.

**ತಿಷ್ಠಾ ಹರೀ ರಥ ಆ ಯುಜ್ಯಮಾನಾ ಯಾಹಿ ವಾಯುರ್ನ ನಿಯುತೋ ನೋ ಅಚ್ಛ ।**
**ಪಿಬಾಸ್ಯಂಧೋ ಅಭಿಸೃಷ್ಟೋ ಅಸ್ಮೇ ಇಂದ್ರ ಸ್ವಾಹಾ ರರಿಮಾ ತೇ ಮದಾಯ ॥೧॥**

**ಪದಾರ್ಥ:-** [ಇಂದ್ರ] ಐಶ್ವರ್ಯಸಂಪನ್ನ ರಾಜನೇ! ನೀನು [ರಥೇ] ಯಾವ ರಥದಲ್ಲಿ [ಯುಜ್ಯಮಾನಾ] ಜೋಡಿಸಲಾದ [ಹರೀ] ಅಶ್ವಯುಗಗಳಂತೆ ಇರುವ ಜಲ ಮತ್ತು ಅಗ್ನಿಗಳನ್ನು ಪ್ರಯೋಗಿಸಿಕೊಂಡು [ಆ, ತಿಷ್ಠ] ಬರುವವನಾಗು [ವಾಯುಃ] [ನ] ಗಾಳಿಗೆ ಸಮನಾದ [ನಿಯುತಃ] ಶ್ರೇಷ್ಠರೊಂದಿಗೆ ಸೇರಿರುವ [ನಃ] ನಮ್ಮನ್ನು [ಅಚ್ಛ] ಉತ್ತಮ ರೀತಿಯಿಂದ [ಯಾಹಿ] ಸಮೀಪಿಸು. [ಅಭಿಸೃಷ್ಟಃ] ಅಭಿಮುಖವಾಗಿ ಪ್ರೇರಣೆ ಪಡೆದವನು [ತೇ] ನಿನಗೆ [ಅಸ್ಮೇ] ನಮ್ಮಿಂದ [ಅಂಧಃ] ಸಂಸ್ಕರಿಸಲಾದ ಆಹಾರವನ್ನು [ಮದಾಯ] ಆನಂದ ಪಡೆಯಲು [ರರಿಮ] ಕೊಡುವೆವು. [ಸ್ವಾಹಾ] ಸತ್ಯನುಡಿಯೊಂದಿಗೆ/ ಸ್ತುತಿಯೊಂದಿಗೆ [ಪಿಬಸಿ] ಪಾನಮಾಡುವೆ.

**ಭಾವಾರ್ಥ:-** ಯಾರು ಅಗ್ನ್ಯಾದಿ ಇಂಧನಗಳನ್ನು ಉಪಯೋಗಿಸಲಾದ ರಥದಿಂದ ಬೇರೆ-ಬೇರೆ ಸ್ಥಳಗಳಿಗೆ ಪ್ರಯಾಣಿಸುವರೋ ಅವರು ವಾಯುವೇಗದಲ್ಲಿ ಗುರಿ ತಲುಪಿ ಭೋಜನ - ಪಾನ ಭೂಷಣ ಯೋಗ್ಯವಾದ ಪದಾರ್ಥಗಳನ್ನು ಪಡೆದುಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಪಾಜಿರಾ ಪುರುಹೂತಾಯ ಸಪ್ತೀ ಹರೀ ರಥಸ್ಯ ಧೂರ್ಷ್ವಾ ಯುನಜ್ಮಿ ।**
**ದ್ರವದ್ಯಥಾ ಸಂಭೃತಂ ವಿಶ್ವತಶ್ಚಿ-ದುಪೇಮಂ ಯಜ್ಞಮಾ ವಹಾತ ಇಂದ್ರಮ್ ॥೨॥**

**ಪದಾರ್ಥ:-** [ಯಥಾ] ಹೇಗೆ [ಇಮಂ] ಈ [ಯಜ್ಞಂ] ಶಿಲ್ಪವಿದ್ಯೆಯಿಂದ ಸಾಧಿಸಲರ್ಹವಾದ [ಇಂದ್ರಂ] ಸಂಪದ್ಯುಕ್ತ ಕಾಮನೆಗಳನ್ನು [ವಿಶ್ವತಃ] ಎಲ್ಲಾ ಕಡೆಗಳಿಂದಲೂ [ದ್ರವತ್] ಸಿದ್ಧಿಸಿಕೊಳ್ಳಬಹುದು. [ಸಂಭೃತಂ] ಧಾರಣೆ ಮಾಡಿರುವ/ ಸಂಗ್ರಹಿಸಲಾದ [ಚಿತ್] ಪದಾರ್ಥಗಳನ್ನು [ಉಪ] ಸಮೀಪದಲ್ಲೇ [ಆ, ವಹಾತಃ] ಹರಿಯುವ [ಪುರುಹೂತಾಯ] ಬಹುಜನರಿಂದ ಕರೆಯಲಾದ [ಅಜಾ] ಸ್ಥಳಗಳಿಗೆ ತಮ್ಮ ವಾಹನಗಳನ್ನು ಕೊಂಡೊಯ್ಯಲು [ಸಪ್ತೀ] ಶೀಘ್ರ ಚಲಿಸುವಂತಹ [ಹರೀ] ಅಶ್ವ ಜೊತೆಗಳನ್ನು ಸಂಯೋಜಿಸಿದ [ರಥಸ್ಯ] ವಾಹನಗಳ [ಧೂರ್ಷು] ಅಚ್ಚುಮರಗಳಲ್ಲಿ [ಉಪ, ಆ, ಯುನಜ್ಮಿ] ಸಯೋಜಿಸುವನು.

**ಭಾವಾರ್ಥ:-** ಯಾರು ತಮ್ಮ ವಾಹನದಲ್ಲಿ ವಿದ್ಯುತ್ ಶಕ್ತಿಯನ್ನು ಬಳಸಿಕೊಂಡು ಕಾರ್ಯ ಪ್ರವೃತ್ತರಾಗುವರೋ ಅವರು ಬಹುಬೇಗನೇ ತಮ್ಮ ಅಭೀಷ್ಟಗಳೆಲ್ಲವನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಪೋ ನಯಸ್ವ ವೃಷಣಾ ತಪುಷ್ಪೋ-ತೇಮವ ತ್ವಂ ವೃಷಭ ಸ್ವಧಾವಃ ।**
**ಗ್ರಸೇತಾಮಶ್ವಾ ವಿ ಮುಚೇಹ ಶೋಣಾ ದಿವೇದಿವೇ ಸದೃಶೀರದ್ಧಿ ಧಾನಾಃ ॥೩॥**

**ಪದಾರ್ಥ:-** [**ವೃಷಭ**] ಬಲಿಷ್ಠನಾದ [**ಸ್ವಧಾವಾನ್**] ಆಹಾರ ಸಾಮಗ್ರಿಗಳನ್ನು ಪಡೆದಿರುವ [**ತ್ವಂ**] ನೀನು [**ಇಹ**] ಈ ವಾಹನದಲ್ಲಿ [**ತಪುಷ್ಯಾ**] ತಾಪಗಳಿಸುವಂತಹ ಪದಾರ್ಥಗಳೊಂದಿಗೆ [**ವೃಷಣಾ**] ಬಲಿಷ್ಠ ಮತ್ತು [**ಶೋಣಾ**] ಕೆಂಪು ಬಣ್ಣದ [**ಅಶ್ವಾ**] ಶೀಘ್ರಗಾಮಿ ಅಗ್ನಿಯಂತಹ ಇಂಧನವನ್ನು [**ಗೃಸೇತಾಂ**] ಸಂಯೋಜಿಸು. [**ವಿ ಮುಚ**] ವಾಹನವನ್ನು ಚಾಲನೆ ಮಾಡು. [**ಇಮಂ**] ಈ ನೀರನ್ನು [**ಉಪೋ**] ಅದರ ಸಮೀಪದಲ್ಲಿ [**ನಯುಸ್ವ**] ತಲುಪಿಸು. [**ಉತ**] ಮತ್ತು [**ದಿವೇ-ದಿವೇ**] ಪ್ರತಿದಿನವೂ [**ಸದೃಶೀಃ**] ಸಮಾನರೀತಿಯ [**ಧಾನಾಃ**] ಸಂಸ್ಕರಿಸಲಾದ ಆಹಾರವನ್ನು [**ಅದ್ಧಿ**] ಭಕ್ಷಿಸು. [**ಅವ**] ಪ್ರವೇಶಿಸು.

**ಭಾವಾರ್ಥ:-** ಯಾವ ತಂತ್ರಜ್ಞರು ಅಗ್ನಿ-ಜಲ ಮುಂತಾದ ಪದಾರ್ಥಗಳನ್ನು ಯಂತ್ರಗಳಲ್ಲಿ ಬಳಸಿಕೊಂಡು ಚಾಲನೆ ಮಾಡಿದರೆ ಬಡತನ ತೊಲಗಿಸಿಕೊಂಡು ಧನ-ಧಾನ್ಯಾದಿಗಳನ್ನು ಪಡೆಯಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬ್ರಹ್ಮಣಾ ತೇ ಬ್ರಹ್ಮಯುಜಾ ಯುನಜ್ಮಿ ಹರೀ ಸಖಾಯಾ ಸಧಮಾದ ಆಶೂ ।**
**ಸ್ಥಿರಂ ರಥಂ ಸುಖಮಿಂದ್ರಾಧಿತಿಷ್ಠನ್ ಪ್ರಜಾನನ್ ವಿದ್ವಾ ಉಪ ಯಾಹಿ ಸೋಮಮ್ ॥೪॥**

**ಪದಾರ್ಥ:-** [**ಇಂದ್ರ**] ತಂತ್ರಜ್ಞನೇ! [**ತೇ**] ನಿನ್ನ ವಾಹನದಲ್ಲಿ [**ಬ್ರಹ್ಮಣಾ**] ಅನ್ನಾದಿಗಳಿರುವ [**ಬ್ರಹ್ಮಯುಜಾ**] ಧನ ಸಂಗ್ರಹಯೋಗ್ಯ ಮತ್ತು [**ಆಶೂ**] ಶೀಘ್ರಗತಿಯ [**ಹರೀ**] ಜಲ-ಅಗ್ನಿರೂಪ ಇಂಧನವನ್ನು [**ಸಖಾಯಾ**] ಸ್ನೇಹಿತರಿಗೆ ಸಮಾನವಾಗಿ [**ಸಧಮಾದೇ**] ಸಮಾನಸ್ಥಾನದಲ್ಲಿ [**ಯುನಜ್ಮಿ**] ನಾನು ಸಂಯೋಜಿಸುವೆನು. [**ಸುಖಂ**] ಆಕಾಶಮಾರ್ಗಕ್ಕೆ ಸುಖ ಸಾಧಿಸುವ [**ಸ್ಥಿರಂ**] ದೃಢವಾದ [**ರಥಂ**] ವಾಹನವನ್ನು [**ಅಧಿ, ತಿಷ್ಠನ್**] ಏರಿದವನಾಗಿ [**ವಿದ್ವಾನ್**] ಈ ವಿದ್ಯೆಯ ತಂತ್ರಜ್ಞಾನ ಪಡೆದ ಹಾಗೂ [**ಪ್ರಜಾನನ್**] ಜ್ಞಾನ ಪಡೆಯುತ್ತ ನೀನು [**ಸೋಮಂ**] ಸಂಪತ್ತನ್ನು [**ಉಪ, ಯಾಹಿ**] ಪಡೆಯುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಅಗ್ನಿ-ಜಲ ರೂಪ ಇಂಧನದಿಂದ / ಪದಾರ್ಥದಿಂದ ಚಲಿಸುವ ವಾಹನದಲ್ಲಿ ಕುಳಿತು ವಿಶಿಷ್ಟ ತಂತ್ರಜ್ಞಾನದಿಂದ ವಾಹನ ಚಾಲನೆಗೊಳಿಸಿ ದೇಶ-ದೇಶಾಂತರಗಳಿಗೆ ಪ್ರಯಾಣ ಮಾಡಿದರೆ ಸಂಪತ್ತನ್ನೂ ಗಳಿಸಬಹುದು. ಸ್ನೇಹಿತರನ್ನೂ ಗೌರವಿಸಬಹುದು. ತನ್ಮೂಲಕ ವಿದ್ಯೆ-ಧನ-ಧರ್ಮ ಇವುಗಳನ್ನು ಹೆಚ್ಚಿಸಿಕೊಳ್ಳಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾ ತೇ ಹರೀ ವೃಷಣಾ ವೀತಪೃಷ್ಠಾ ನಿ ರೀರಮನ್ ಯಜಮಾನಾಸೋ ಅನ್ಯೇ ।**
**ಅತ್ಯಾಯಾಹಿ ಶಶ್ವತೋ ವಯಂ ತೇಽರಂ ಸುತೇಭಿಃ ಕೃಣವಾಮ ಸೋಮೈಃ ॥೫॥**

**ಪದಾರ್ಥ:-** [**ಅನ್ಯೇ**] ಇದರಿಂದ ಬೇರೆ [**ಯಜಮಾನ**] ವಿದ್ಯಾ ಸಂಗತಿ ತಿಳಿದಿರುವವನು/ ಯಜಮಾನನು. [**ತೇ**] ನಿನ್ನ [**ವೀತಪೃಷ್ಠಾಃ**] ವಿಸ್ತೃತ ಹಿನ್ನೆಲೆಯಿರುವ [**ವೃಷಣಾ**] ಬಲಿಷ್ಠವಾದ [**ಹರೀ**] ವಾಹನವನ್ನು ಕೊಂಡೊಯ್ಯುವ ಸಾಧನವನ್ನು [**ಮಾ**] [**ನಿ, ರೀರಮನ್**] ತಡೆಯಲಾರರೋ ಅವರನ್ನು [**ಅತ್ಯಾಯಾಹಿ**] ವೇಗದಿಂದ ಅತಿಕ್ರಮಿಸು. [**ಶಶ್ವತಃ**] ಅನಾದಿಯಾದ ವಿದ್ಯೆಯನ್ನರಿತವರನ್ನು ಸಂಧಿಸು. [**ತೇ**] ನಿನ್ನ [**ಸುತೇಭಿಃ**] ಉತ್ಪನ್ನವಾದ [**ಸೋಮಃ**] ಸಂಪತ್ತಿನಿಂದ [**ಅರಂ**] ಎಲ್ಲಾ ಆಸೆಗಳನ್ನೂ [**ವಯಂ**] ನಾವು [**ಕೃಣವಾಮ**] ಪೂರ್ಣಗೊಳಿಸುವೆವು.

**ಭಾವಾರ್ಥ:-** ಯಾರೂ ಅಗ್ನ್ಯಾದಿ ಪದಾರ್ಥ ಜ್ಞಾನವಿಲ್ಲದೇ ಈ ವಿದ್ಯೆಯ ಜ್ಞಾನವಿರುವವರ ಉತ್ಸಾಹವನ್ನು ಹೆಚ್ಚಿಸಲಾರರು. ಅವರನ್ನು ಮೀರಿಸುವ ಅನಾದಿಕಾಲದಿಂದಲೂ ಸಿದ್ಧವಾದ ವಿದ್ಯೆಯನ್ನು ಯಾರು ತಿಳಿದಿರುವರೋ ಅವರ ಮೊರೆ ಹೋಗಿ ಶಿಲ್ಪವಿದ್ಯೆಯ ತಂತ್ರವನ್ನು ತಿಳಿದು ತನ್ನ ಮನೋರಥವನ್ನು ಪೂರ್ಣಗೊಳಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತವಾಯಂ ಸೋಮಸ್ತ್ವಮೇಹ್ಯರ್ವಾಙ್ ಶಶ್ವತ್ತಮಂ ಸುಮನಾ ಅಸ್ಯ ಪಾಹಿ ।**
**ಅಸ್ಮಿನ್ ಯಜ್ಞೇ ಬರ್ಹಿಷ್ಯಾ ನಿಷದ್ಯಾ ದಧಿಷ್ವೇಮಂ ಜಠರ ಇಂದುಮಿಂದ್ರ ॥೬॥**

**ಪದಾರ್ಥ:-** [ಇಂದ್ರ] ಐಶ್ವರ್ಯಾಕಾಂಕ್ಷಿಯೇ! [ತವ] ನಿನ್ನ [ಅಯಂ] ಈ [ಅರ್ವಾಙ್] ಅಧೋಭಾಗದಲ್ಲಿರುವ [ಸೋಮಃ] ಸಂಪತ್ತಿನಯೋಗವು [ಶಶ್ವತಂ] ಅನಾದಿಕಾಲದಿಂದಲೂ ಇರುವುದನ್ನು [ತ್ವಂ] ನೀನು [ಆ, ಇಹಿ] ಪಡೆದುಕೋ. [ಅಸ್ಮಿನ್] ಈ [ಬರ್ಹಿಷಿ] ಉತ್ತಮವಾದ [ಯಜ್ಞೇ] ಶಿಲ್ಪವಿದ್ಯಾವ್ಯವಹಾರದಲ್ಲಿ [ನಿಷದ್ಯ] ನಿರಂತರ ಸ್ಥಿರನಾಗಿ [ಸುಮನಾಃ] ಪ್ರಸನ್ನಚಿತ್ತನಾಗಿ [ಇಮಂ] ಇದನ್ನು [ಪಾಹಿ] ರಕ್ಷಣೆ ಮಾಡು. [ಅಸ್ಯ] ಈ ಜ್ಞಾನದಿಂದ [ಇಂದುಂ] ತೇವಾಂಶವಿರುವ ಪದಾರ್ಥವನ್ನು [ಜಠರೇ] ಉದರದಲ್ಲಿ [ಆ, ದಧಿಷ್ವ] ಉತ್ತಮ ರೀತಿಯಲ್ಲಿ ಧಾರಣ ಮಾಡು.

**ಭಾವಾರ್ಥ:-** ಮನುಷ್ಯರೇ! ನೀವು ಶಿಲ್ಪವಿದ್ಯೆಯಲ್ಲಿ ಎಲ್ಲರಿಗಿಂತ ಚತುರರಾಗಿರಿ. ಅದರಿಂದ ಸಾಧ್ಯವಾಗುವಂತಹ ವ್ಯವಹಾರಗಳಲ್ಲಿ ಅನಾದಿಕಾಲದಿಂದಲೂ ಇರುವ ಪ್ರಾಚೀನ ವಿದ್ವಾಂಸರ ಜ್ಞಾನ ಸಂಪತ್ತನ್ನು ಪಡೆದು ಈ ಜಗತ್ತಿನ ರಕ್ಷಣೆಗೆ ಸಿದ್ಧರಾಗಿ ಯುಕ್ತಾಹಾರ ವಿಹಾರಗಳಿಂದ ಆನಂದವನ್ನನುಭವಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ತೀರ್ಣಂ ತೇ ಬರ್ಹಿಃ ಸುತ ಇಂದ್ರ ಸೋಮಃ ಕೃತಾ ಧಾನಾ ಅತ್ತವೇ ತೇ ಹರಿಭ್ಯಾಮ್।**
**ತದೋಕಸೇ ಪುರುಶಾಕಾಯ ವೃಷ್ಣೇ ಮರುತ್ವತೇ ತುಭ್ಯಂ ರಾತಾ ಹವೀಂಷಿ ॥೭॥**

**ಪದಾರ್ಥ:-** [ಇಂದ್ರ] ಬಡತನವನ್ನು ನೀಗಿಸುವವನೇ! [ತೇ] ನಿನ್ನ [ಸ್ತೀರ್ಣಂ] ಆಚ್ಛಾದನ ಮಾಡಿರುವ [ಬರ್ಹಿಃ] ವಿಸ್ತೃತ ಜಲರಾಶಿಯು [ಸುತಃ] ತಯಾರಿಸಿದ [ಸೋಮಃ] ಸಂಪತ್ಸಂಗ್ರಹವು [ಕೃತಾಃ] ಕಾರ್ಯಗತವಾಗುವುದಕ್ಕೆ [ಧಾನಾಃ] ಬೇಯಿಸಲಾದ / ಹುರಿದ ಆಹಾರ ವಿಶೇಷವನ್ನು [ಹರಿಭ್ಯಾಂ] ಕುದುರೆಗಳನ್ನು ಯೋಜಿಸಲಾದ ವಾಹನದಿಂದ [ತೇ] ನಿನ್ನವರು [ತದೋಕಸೇ] ವಾಹನಸ್ಥಾನದಲ್ಲಿರುವವರು [ಪುರುಶಾಕಾಯ] ಬಹುವಿಧ ಶಕ್ತಿಯಿಂದ [ವೃಷ್ಣೇ] ವೃಷ್ಟಿಕಾರಕ [ಮರುತ್ವತೇ] ಕಾರ್ಯತತ್ಪರರಾದ ಬಹುಜನರೊಂದಿಗಿರುವ [ತುಭ್ಯಂ] ನಿನಗೆ [ಅತ್ತವೇ] ಭೋಜನ ಮಾಡಲು [ಹವೀಂಷಿ] ಭೋಜ್ಯ ಪದಾರ್ಥಗಳನ್ನು [ರಾತಾ] ತಂದಿರುವೆವು. ಅದನ್ನು ಭಕ್ಷಿಸು.

**ಭಾವಾರ್ಥ:-** ಎಲ್ಲರೂ ಉತ್ತಮ ಪದಾರ್ಥವನ್ನು ಉಣ್ಣಬೇಕು. ಅನ್ಯಾಯದಿಂದ ಸಂಗ್ರಹಿಸಿದ ಯಾವುದನ್ನೂ ಅನುಭವಿಸಬಾರದು. ಈ ರೀತಿ ಮಾಡುವುದರಿಂದ ಧನ, ಸಾಮರ್ಥ್ಯ, ವಿದ್ಯೆ, ಆಯುಸ್ಸು ಎಲ್ಲವೂ ಹೆಚ್ಚಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಂ ನರಃ ಪರ್ವತಾಸ್ತುಭ್ಯಮಾಪಃ ಸಮಿಂದ್ರ ಗೋಭಿರ್ಮಧುಮಂತಮಕ್ರನ್ ।**
**ತಸ್ಯಾಗತ್ಯಾ ಸುಮನಾ ಋಷ್ವ ಪಾಹಿ ಪ್ರಜಾನನ್ ವಿದ್ವಾನ್ ಪಥ್ಯಾ (ಅ) ೩ ಅನು ಸ್ವಾಃ ॥೮॥**

**ಪದಾರ್ಥ:-** **[ಋಷ್ವ]** ವಿದ್ಯೆಯಿಂದ ಪರಿಪೂರ್ಣನಾದ **[ಇಂದ್ರ]** ಸಂಪತ್ತನ್ನು ಬಯಸುವ **[ನರಃ]** ಪುರುಷನು **[ತುಭ್ಯಂ]** ನಿನಗೆ **[ಪರ್ವತಾಃ]** ಮೇಘಗಳು ಮತ್ತು **[ಆಪಃ]** ನೀರು ಇವುಗಳಿಗೆ ಸಮಾನವಾದ **[ಗೋಭಿಃ]** ಭೂಮ್ಯಾದಿ ಪದಾರ್ಥಗಳೊಂದಿಗೆ **[ಇಮಂ]** ಈ **[ಮಧುಮಂತಂ]** ಮಧುರ ರಸವಿರುವ ಪದಾರ್ಥವನ್ನು **[ಸಂ, ಅಕ್ರನ್]** ತಯಾರಿಸಲಾಗಿದೆ. ಅದನ್ನು **[ಪಾಹಿ]** ಪಾಲನೆ ಮಾಡು. **[ಸುಮನಾಃ]** ಉತ್ತಮ ಮನಸ್ಸಿನವರನ್ನು ಗೌರವಿಸುವ ನೀನು **[ಪ್ರಜಾನನ್, ವಿದ್ವಾನ್]** ತಿಳಿದವನೂ, ವಿದ್ಯಾವಂತನೂ, ಆಗಿರುವೆ. **[ತಸ್ಯ]** ಆ ಇಚ್ಛೆಯ **[ಸ್ವಾಃ, ಪಥ್ಯಾಃ]** ನಿನ್ನ ಕುಶಲತೆಯ ನಡೆಯನ್ನು **[ಅಗತ್ಯ]** ಪಡೆದವನಾಗಿ **[ಅನು]** ರಕ್ಷಣೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಮಳೆಯಿಂದ ಎಲ್ಲರ ರಕ್ಷಣೆಯಾಗುತ್ತದೆಯೋ ಹಾಗೆಯೇ ವಿಮಾನಾದಿ ವಾಹನಗಳನ್ನು ತಯಾರಿಸುವವರು ಎಲ್ಲರ ರಕ್ಷಕರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಾಁ ಆಭಜೋ ಮರುತ ಇಂದ್ರ ಸೋಮೇ ಯೇ ತ್ವಾಮವರ್ಧನ್ನಭವನ್ ಗಣಸ್ತೇ ।**
**ತೇಭಿರೇತಂ ಸಜೋಷಾ ವಾವಶಾನೋ (ಽ) ಽಗ್ನೇಃ ಪಿಬ ಜಿಹ್ವಯಾ ಸೋಮಮಿಂದ್ರ ॥೯॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕನೇ! ನೀನು **[ಯಾನ್]** ಯಾರಿಗೆ **[ಮರುತಃ]** ಪ್ರಾಣದಂತೆ ಶ್ರೇಷ್ಠನಾದ ಜನಕ್ಕೆ **[ಆಭಜಃ]** ಸೇವನ ಮಾಡು. **[ಯೇ]** ಯಾರು **[ಸೋಮೇ]** ಸಂಪತ್ತಿನಲ್ಲಿ **[ತ್ವಾಂ]** ನಿನ್ನನ್ನು **[ಅವರ್ಧನ್]** ವೃದ್ಧಿಗೊಳಿಸುವರೋ **[ತೇ]** ನಿನ್ನ **[ಗಣಃ]** ಗಣವನ್ನು ಸೇರಿ **[ಅಭವನ್]** ಆನಂದಿತರಾಗುವರೋ **[ತೇಭಿಃ]** ಅವರೊಂದಿಗೆ .**[ಇಂದ್ರ]** ದುಃಖನಾಶಕನೇ! **[ಸಜೋಷಾಃ]** ಸಮಾನ ಪ್ರೀತಿಯನ್ನು ಸೇವಿಸುವ **[ವಾವಶಾನಃ]** ಅತ್ಯಂತ ಕಾಮನೆ ಮಾಡುವ ನೀನು **[ಅಗ್ನೇಃ]** ಅಗ್ನಿಯ **[ಜಿಹ್ವಯಾ]** ನಾಲಿಗೆಯಿಂದ **[ಏತಂ]** ಈ **[ಸೋಮಂ]** ಸೋಮರಸವನ್ನು **[ಪಿಬ]** ಕುಡಿಯುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಪ್ರಾಣಕ್ಕಿಂತ ಪ್ರಿಯನೂ, ವಿದ್ಯಾವಂತರ ಸೇವೆ ಮಾಡುವವನೂ ಆಗಿರುವರೋ ಅಂತಹವರನ್ನು ವಿದ್ಯಾವಂತರು ಎಲ್ಲಾ ರೀತಿಯಿಂದ ಅಭಿವೃದ್ಧಿ ಪಡಿಸಬೇಕು. ಹೇಗೆ ಅಗ್ನಿಯು ಜ್ವಾಲೆಯ ಮೂಲಕ ಎಲ್ಲಾ ರಸವನ್ನೂ ಕುಡಿಯುವನೋ, ಅದೇ ರೀತಿ ಹಸಿದವರು ಅನ್ನ-ಪಾನಗಳನ್ನು ಸೇವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಪಿಬ ಸ್ವಧಯಾ ಚಿತ್ಸುತಸ್ಯಾ-ಗ್ನೇರ್ವಾ ಪಾಹಿ ಜಿಹ್ವಯಾ ಯಜತ್ರ ।**
**ಅಧ್ವರ್ಯೋರ್ವಾ ಪ್ರಯತಂ ಶಕ್ರ ಹಸ್ತಾ-ದ್ಧೋತುರ್ವಾ ಯಜ್ಞಂ ಹವಿಷೋ ಜುಷಸ್ವ ॥೧೦॥**

**ಪದಾರ್ಥ:-** **[ಯಜತ್ರ]** ಯಜನಶೀಲ **[ಶಕ್ರ]** ಶಕ್ತಿಮಾನ್ **[ಇಂದ್ರ]** ಐಶ್ವರ್ಯವಂತನೇ! **[ಅಗ್ನೇಃ]** ಅಗ್ನಿಯ **[ಜಿಹ್ವಯಾ]** ಜ್ವಾಲೆಯಂತೆ ಇರುವ **[ಸ್ವಧಯಾ]** ಆಹಾರದಿಂದ **[ಚಿತ್]** ಮತ್ತು **[ಸುತಸ್ಯ]** ಸಂಸ್ಕರಿಸಿದ ಸೋಮರಸವನ್ನು **[ಪಿಬ]** ಪಾನಮಾಡು. **[ಅಧ್ವರ್ಯೋಃ]** ಯಜ್ಞ ಮಾಡಬಯಸುವವನ **[ವಾ]** ಅಥವಾ **[ಪ್ರಯತಂ]** ಪ್ರಯತ್ನ ಸಿದ್ಧ **[ಯಜ್ಞಂ]** ಯಜ್ಞವನ್ನು **[ಪಾಹಿ]** ರಕ್ಷಿಸು. **[ಹೋತುಃ]** ಕೊಡುವವನ **[ಹಸ್ತಾತ್]** ಕೈಯಿಂದ ಹವನ ಸಮಗ್ರಿಗಳನ್ನು **[ವಾ]** ಅಥವಾ ಯಜ್ಞವನ್ನು **[ಜುಷಸ್ವ]** ಸೇವನ ಮಾಡು.

**ಭಾವಾರ್ಥ:-** ರಾಜನಾದಿಯಾಗಿ ಶ್ರೇಷ್ಠ ವಿದ್ವಾಂಸರು ಪ್ರತಿ ದಿನವೂ ಓಷಧಿ ರಸಗಳನ್ನು ತಯಾರಿಸಿಕೊಂಡು ಸೇವಿಸಬೇಕು. ವಿದ್ಯಾ ಸಂಬಂಧಿ ನುಡಿಗಳ ಪ್ರಚಾರ ಮಾಡಬೇಕು. ಎಲ್ಲಾ ಜನರ ಬುದ್ಧಿಯನ್ನು ವಿಷಯ ಸುಖದಿಂದ ದೂರಗೊಳಿಸಿ ಉತ್ತಮ ಕಾರ್ಯಾಚರಣೆಯಲ್ಲಿ ಪ್ರವೃತ್ತಿಗೊಳ್ಳುವಂತೆ ಮಾಡಿ ಆರೋಗ್ಯ, ವಿದ್ಯೆಯ ಪ್ರಭಾವ ಪ್ರತಿದಿನವೂ ಹೆಚ್ಚಾಗುವಂತೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೧೧॥**

**ಪದಾರ್ಥ:-** [**ಊತಯೇ**] ರಕ್ಷಣೆಗಾಗಿ [**ಸಮತ್ಸು**] ಸಂಗ್ರಾಮದಲ್ಲಿ [**ಘ್ನಂತಂ**] ನಾಶ ಮಾಡುವ [**ಉಗ್ರಂ**] ಕಠೋರ ಸ್ವಭಾವದ [**ಧನಾನಾಂ**] ದ್ರವ್ಯಗಳ [**ಸಂಜಿತಂ**] ಉತ್ತಮ ರೀತಿಯಲ್ಲಿ ಶತ್ರುಗಳನ್ನು ಜಯಿಸುವಂತಹ [**ವೃತ್ರಾಣಿ**] ಸುವರ್ಣಾದಿ ಧನಗಳನ್ನು [**ಶೃಣ್ವಂತಂ**] ಆಲ್ಲೆಸುವವನನ್ನು [**ಅಸ್ಮಿನ್**] ಈ ವ್ಯವಹಾರದಲ್ಲಿ [**ವಾಜಸಾತೌ**] ಧನ ಅನ್ನಾದಿಗಳ ವಿಭಾಗ ಮಾಡುವವನು [**ಭರೇ**] ಸಂಗ್ರಾಮದಲ್ಲಿ [**ನೃತಮಂ**] ಶ್ರೇಷ್ಠನಾದ [**ಮಘವಾನಂ**] ಐಶ್ವರ್ಯ ಸಂಪನ್ನನಾದ [**ಇಂದ್ರಂ**] ಶತ್ರುಗಳನ್ನು ನಾಶ ಮಾಡುವಂತಹ ರಾಜನನ್ನು [**ಹುವೇಮ**] ಕರೆಯೋಣ. ಅವನ ಸಹಕಾರದಿಂದ [**ಶುನಂ**] ಸುಖವನ್ನು ಜಯವನ್ನೂ ಪಡೆಯೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಪ್ರಮುಖ ವ್ಯಕ್ತಿಗಳನ್ನು, ರಾಜವಿದ್ಯೆಯಲ್ಲಿ ಚತುರರನ್ನು, ಶೂರರಾದ ಸೈನಿಕರನ್ನು, ನ್ಯಾಯಾಧೀಶರನ್ನು, ವಾದಮಾಡುವ ವಕೀಲರನ್ನು, ಸೇವೆ ಮಾಡುವ ಸೇವಕರನ್ನು ಗೌರವಪೂರ್ವಕವಾಗಿ ರಾಜ್ಯಾಂಗದಲ್ಲಿ ನೇಮಿಸಿಕೊಳ್ಳುತ್ತಾನೋ ಅವನು ಯಾವಾಗಲೂ ವಿಜಯಶೀಲನೂ, ಕೀರ್ತಿವಂತನೂ, ಐಶ್ವರ್ಯಸಂಪನ್ನನೂ ಆಗುತ್ತಾನೆ.

ಈ ಸೂಕ್ತದಲ್ಲಿ ಸೂರ್ಯ, ಮಿಂಚು, ವೀರ ಪುರುಷರು, ರಾಜ್ಯ, ರಾಜ, ಸೇನೆ ಇವರ ವಿಚಾರವನ್ನು ತಿಳಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮೂವತ್ತೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೩೬

ಮಂತ್ರಸಂಖ್ಯೆ ೧೧ । ೧-೯, ೧೧ ವಿಶ್ವಾಮಿತ್ರ ಋಷಿಃ, ೧೦ ಘೋರ ಆಂಗಿರಸ ಋಷಿಃ । ಇಂದ್ರೋ ದೇವತಾ । ೧, ೭, ೧೦, ೧೧ ತ್ರಿಷ್ಟುಪ್, ೨, ೩, ೬, ೮ ನಿಚೃತ್ ತ್ರಿಷ್ಟುಪ್, ೯ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪ ಭುರಿಕ್ ಪಂಕ್ತಿಃ, ೫ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಮನುಷ್ಯರು ಯಾವ ಆಚರಣೆಯಿಂದ ಸುಖಿಗಳಾಗುವರು ಎಂಬ ವಿಷಯವನ್ನಿಲ್ಲಿ ತಿಳಿಸಲಾಗಿದೆ.

**ಇಮಾಮೂ ಷು ಪ್ರಭೃತಿಂ ಸಾತಯೇ ಧಾಃ ಶಶ್ವಚ್ಛಶ್ವದೂತಿಭಿರ್ಯಾದಮಾನಃ ।**
**ಸುತೇಸುತೇ ವಾವೃಧೇ ವರ್ಧನೇಭಿ-ರ್ಯಃ ಕರ್ಮಭಿರ್ಮಹದ್ಭಿಃ ಸುಶ್ರುತೋ ಭೂತ್ ॥೧॥**

**ಪದಾರ್ಥ:-** [ಯಃ] ಯಾವನು [ಯಾದಮಾನಃ] ವಿದ್ಯೆಯನ್ನು ಯಾಚಿಸುವವನೋ ಅಂತಹ ನೀನು [ಊತಿಭಿಃ] ರಕ್ಷಣಾದಿ ಸಾಧನಗಳಿಂದ [ಸಾತಯೇ] ವಿಭಾಗಕ್ಕಾಗಿ [ಇಮಾಂ] ಈ [ಪ್ರಭೃತಿಂ] ಉತ್ತಮ ಧಾರಣೆ [ಶಶ್ವತದ್] [ಚ್ಛಶ್ವತ್] ವ್ಯಾಪಕವಾದ ವಸ್ತುಗಳನ್ನು [ಸು] [ಧಾಹಾಃ] ಉತ್ತಮ ರೀತಿಯಲ್ಲಿ ಧಾರಣ ಮಾಡು. [ವರ್ಧನೇಭಿಃ] ವೃದ್ಧಿಪಡಿಸುವ ಸಾಧನಗಳಿಂದ ಮತ್ತು [ಮಹದ್ಭಿಃ] ದೊಡ್ಡ ದೊಡ್ಡ [ಕರ್ಮಭಿಃ] ಕರ್ಮಗಳಿಂದ [ಸುತೇ ಸುತೇ] ಪ್ರತಿ ಕರ್ಮದಲ್ಲಿಯೂ ಉತ್ಪನ್ನವಾದ ಪದಾರ್ಥಗಳಿಂದ [ವಾವೃಧೇ] ದೊಡ್ಡ [ಉ] [ಸುಶ್ರುತಃ] ಶ್ರೋತ್ರಿಯನು [ಭೂತ್] ಆಗು.

**ಭಾವಾರ್ಥ:-** ಮನುಷ್ಯನು ವಿಜ್ಞಾನ ಕಾರ್ಯವನ್ನು ಆರಂಭಿಸಿ ಮಹತ್ತತ್ವದಿಂದ ತನ್ಮಾತ್ರದವರೆಗೆ ಅಂದರೆ ಅತಿ ದೊಡ್ಡ ಪದಾರ್ಥದಿಂದ ಅತಿ ಸೂಕ್ಷ್ಮ ಪದಾರ್ಥದವರೆಗೂ ವ್ಯಾಪಕವಾಗಿರುವ ಪರಮಾಣುರೂಪ ಪದಾರ್ಥದ ಜ್ಞಾನ ಪಡೆದು ಅದನ್ನು ಉಪಯೋಗಿಸಿಕೊಳ್ಳಬೇಕು. ಈ ರೀತಿಯ ಕಾರ್ಯವನ್ನು ಮಾಡುವುದರಿಂದ ಜಗತ್ತಿನಲ್ಲಿ ಅತಿಶಯ ಬುದ್ಧಿವಂತನಾಗಿ ಬೇರೆಯವರಿಂದ ತಾನು ವಿದ್ಯೆಗಾಗಿ ಯಾಚಿಸಲ್ಪಡುವವನಾಗುತ್ತಾನೆ. ಅಂತಹ ವಿದ್ಯಾವಂತನಿಗೆ "ಸುಶ್ರುವಾನ್" ಅಥವಾ "ಬಹುಶ್ರುತ" ಎಂದು ಕರೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಾಯ ಸೋಮಾಃ ಪ್ರದಿವೋ ವಿದಾನಾ ಋಭುರ್ಯೇಭಿರ್ವೃಷಪರ್ವಾ ವಿಹಾಯಾಃ।**
**ಪ್ರಯಮ್ಯಮಾನಾನ್ ಪ್ರತಿ ಷೂ ಗೃಭಾಯೇ-ಂದ್ರ ಪಿಬ ವೃಷಧೂತಸ್ಯ ವೃಷ್ಣಃ ॥೨॥**

**ಪದಾರ್ಥ:-** [ವೃಷಪರ್ವಾ] ಸಮರ್ಥವಾಗಿ ಪಾಲನೆ ಮಾಡುವವ [ವಿಹಾಯಾಃ] ಅನರ್ಥಗಳ ನಾಶಕನು [ಋಭುಃ] ಬುದ್ಧಿವಂತನೂ ಆದ ಮನುಷ್ಯನು [ಯೇಭಿಃ] ಯಾರಿಂದ [ಪ್ರಯಮ್ಯಮಾನಾನ್] ನಿಯಮಗಳನ್ನು ತಿಳಿದವನೂ ಆಗಿ [ಇಂದ್ರಾಯ] ಸಂಪತ್ತಿಗಾಗಿ [ಸೋಮಾಃ] ತಯಾರಿಸಲಾದ ಪದಾರ್ಥಗಳ [ಪ್ರದಿವಃ] ಪ್ರಕಾಶಿಸುವಂತಹ ಬೆಳಕನ್ನು [ವಿದಾನಃ] ಪಡೆದವನನ್ನು [ಇಂದ್ರ] ಐಶ್ವರ್ಯವಂತ ಪುರುಷನೇ! [ವೃಷಧೂತಸ್ಯ] ವೃಷ್ಟಿಯಿಂದ ಮಥಿಸಲಾದ [ವೃಷ್ಣಃ] ವೃದ್ಧಿಪಡಿಸಿದ ರಸವನ್ನು [ಪಿಬ] ಪಾನಮಾಡು.

**ಭಾವಾರ್ಥ:-** ಮನುಷ್ಯರೇ! ಈ ಜಗತ್ತಿನಲ್ಲಿ ಶ್ರೇಷ್ಠ ಪುರುಷರು ಹೇಗೆ ದುಷ್ಟ ವ್ಯವಹಾರಗಳನ್ನು ತ್ಯಜಿಸಿ ಶ್ರೇಷ್ಠ ವ್ಯವಹಾರಗಳನ್ನು ಮಾಡುತ್ತ ನಿಯತ ಆಹಾರ-ವ್ಯವಹಾರಗಳಿಂದ ರೋಗರಹಿತರಾಗಿ ತಮ್ಮ ಜೀವಿತಾವಧಿಯನ್ನು ಹೆಚ್ಚಿಸಿಕೊಳ್ಳುತ್ತಾರೋ ಹಾಗೇ ನೀವು ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪಿಬಾ ವರ್ಧಸ್ವ ತವ ಘಾ ಸುತಾಸ ಇಂದ್ರ ಸೋಮಾಸಃ ಪ್ರಥಮಾ ಉತೇಮೇ ।**
**ಯಥಾಪಿಬಃ ಪೂರ್ವ್ಯಾ ಇಂದ್ರ ಸೋಮಾ ಏವಾ ಪಾಹಿ ಪನ್ಯೋ ಅದ್ಯಾ ನವೀಯಾನ್ ॥೩॥**

**ಪದಾರ್ಥ:-** [ಇಂದ್ರ] ಐಶ್ವರ್ಯವನ್ನು ಬಯಸುವವನೇ! [ಯಥಾ] ಹೇಗೆ [ಪನ್ಯಃ] ಸ್ತವನ ಯೋಗ್ಯ [ನವೀಯಾನ್] ಹೊಸಬರಾದ ನೀವು [ಅದ್ಯ] ಈ ಸಮಯದಲ್ಲಿ [ಪೂರ್ವ್ಯಾನ್] ಹಿಂದಿನವರು ತಯಾರಿಸಿದ [ಸೋಮಾನ್] ಶ್ರೇಷ್ಠ ಸೋಮರಸಾದಿ ಐಶ್ವರ್ಯಯುಕ್ತ ಪದಾರ್ಥಗಳನ್ನು [ಅಪಿಬಃ] ಸೇವನೆ ಮಾಡುತ್ತೀರೋ, ಹಾಗೆಯೇ ಅವುಗಳ [ಪಾಹಿ] ರಕ್ಷಣೆ ಮಾಡಿರಿ. [ಇಂದ್ರ] ತೇಜಸ್ವೀ ಜನರೇ! [ತವ] ನಿನ್ನ [ಇಮೇ] ಈ

[ಪ್ರಥಮಾಃ] ಮೊದಲೇ [ಸುತಾಸಃ] ಉತ್ಪನ್ನವಾದ [ಸೋಮಾಸಃ] ಐಶ್ವರ್ಯದಾಯಕ ಪದಾರ್ಥ [ಘ] ವಿದೆಯೋ ಅದರ ಪಾಲನೆ ಮಾಡು. [ಉತ] ಮತ್ತು ಉತ್ತಮ ರಸದ [ಪಿಬ] ಪಾನ ಮಾಡು. [ಏವ] ಹೀಗೇ [ವರ್ಧಸ್ವ] ವೃದ್ಧಿಪಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಉತ್ತಮ ರೀತಿಯಲ್ಲಿ ತಯಾರಿಸಿದ ಸೋಮರಸವನ್ನು ಕುಡಿಯುವರೋ ಅವರು ವೃದ್ಧಿ ಹೊಂದುವರು. ಯಾರು ವೃದ್ಧಿ ಹೊಂದಿ ಧರ್ಮಾಚರಣೆ ಮಾಡುವರೋ ಅವರು ಐಶ್ವರ್ಯವಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹಾँ ಅಮತ್ರೋ ವೃಜನೇ ವಿರಪ್ಶ್ಯು (ಉ) ಗ್ರಂ ಶವಃ ಪತ್ಯತೇ ಧೃಷ್ಣ್ವೋಜಃ।**
**ನಾಹ ವಿವ್ಯಾಚ ಪೃಥಿವೀ ಚನೈನಂ ಯತ್ಸೋಮಾಸೋ ಹರ್ಯಶ್ವಮಮಂದನ್ ॥೪॥**

**ಪದಾರ್ಥ:-** [ಅಮತ್ರಃ] ಜ್ಞಾನೀ [ವಿರಪ್ಶೀ] ಅನೇಕ ವಿಧವಾದ ಉಪದೇಶ ಪಡೆದವ [ಮಹಾನ್] ಶ್ರೇಷ್ಠನು [ವೃಜನೇ] ಬಲದಲ್ಲಿ [ಉಗ್ರಂ] ದೃಢವಾದ [ಶವಃ] ಶಕ್ತಿ ಮತ್ತು [ಧೃಷ್ಣು] ಅಸಾಧಾರಣ [ಓಜಃ] ಪರಾಕ್ರಮ [ಪತ್ಯತೇ] ಪಡೆದುಕೊಂಡು [ಏನಂ] ಇದನ್ನು [ಚನ] ಯಾವನೋ ಪುರುಷನು [ನ] [ವಿವ್ಯಾಚ] ಛಲಕ್ಕಾಗಿ ವಿನಿಯೋಗಿಸುವುದಿಲ್ಲ [ಅಹ] ಏನಾಶ್ಚರ್ಯ? [ಪೃಥಿವೀ] ಭೂಮಿಯಲ್ಲಿ ಪ್ರಾಪ್ತನಾಗಿ [ಯತ್] ಯಾವ [ಹರ್ಯಶ್ವಂ] ಶೀಘ್ರಚಲಿಸುವ ಕುದುರೆಯೊಂದಿಗೆ [ಸೋಮಾಸಃ] ಐಶ್ವರ್ಯ ಸಂಪನ್ನನು [ಅಮಂದನ್] ಸಂತೋಷಿಸುವನೋ ಅವನು ಎಲ್ಲರ ಉಪಕಾರ ಮಾಡುತ್ತಾನೆ.

**ಭಾವಾರ್ಥ:-** ಯಾವನು ಶರೀರ, ಆತ್ಮಾ, ಸೇನೆ, ಸ್ನೇಹಿತರು, ಬಲ, ಆರೋಗ್ಯ, ಧರ್ಮ, ವಿದ್ಯೆ ಇವುಗಳ ಬೆಳೆಸಿಕೊಂಡು ಛಲ, ಕಪಟಾದಿ ದೋಷಗಳನ್ನು ತ್ಯಜಿಸಿ ಎಲ್ಲರಿಗೂ ಉಪಕಾರಿಗಳಾಗುವರೋ ಅವರೇ ಪುರುಷ ಶ್ರೇಷ್ಠರೆನಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹಾँ ಉಗ್ರೋ ವಾವೃಧೇ ವೀರ್ಯಾಯ ಸಮಾಚಕ್ರೇ ವೃಷಭಃ ಕಾವ್ಯೇನ ।**
**ಇಂದ್ರೋ ಭಗೋ ವಾಜದಾ ಅಸ್ಯ ಗಾವಃ ಪ್ರ ಜಾಯಂತೇ ದಕ್ಷಿಣಾ ಅಸ್ಯ ಪೂರ್ವೀಃ ॥೫॥**

**ಪದಾರ್ಥ:-** [ವಾಜದಾಃ] ಆಹಾರ ವಸ್ತುಗಳನ್ನು ಕೊಡುವವನು [ಭಗಃ] ಸೇವೆ ಮಾಡಲು ಯೋಗ್ಯ [ವೃಷಭಃ] ಬಲಿಷ್ಠ [ಉಗ್ರಃ] ಉತ್ತಮ ಅದೃಷ್ಟವಂತ ಹಾಗೂ [ಮಹಾನ್] ಆದರಯೋಗ್ಯನಾದ [ಇಂದ್ರಃ] ಶ್ರೀಮಂತನು [ಕಾವ್ಯೇನ] ಬುದ್ಧಿವಂತ ಮನುಷ್ಯನಿಂದ ತಯಾರಿಸಿದ ಶಸ್ತ್ರಗಳಿಂದ [ವೀರ್ಯಾಯ] ಬಲಕ್ಕಾಗಿ [ವಾವೃಧೇ] ಬೆಳೆಯುವನೋ [ಸಮಾಚಕ್ರೆ] ಸಂಯೋಜಿಸುತ್ತಾನೋ [ಅಸ್ಯ] ಇವನ [ಗಾವಃ] ಗೋವುಗಳು [ಅಸ್ಯ] ಇವನ [ದಕ್ಷಿಣಾಃ] ದಾನ ಕರ್ಮಗಳು [ಪೂರ್ವೀಃ] ಪೂರ್ಣರೂಪದಿಂದ [ಪ್ರ, ಜಾಯಂತೇ] ಪ್ರಕಟವಾಗುತ್ತವೆ.

**ಭಾವಾರ್ಥ:-** ಯಾವನು ಅನ್ನವೇ ಮೊದಲಾದ ಸೇವನಾ ಯೋಗ್ಯ ಪದಾರ್ಥಗಳನ್ನು, ಉತ ಷ್ಟವಾದ ಶಸ್ತ್ರಗಳನ್ನು ತಯಾರಿಸುವನೋ ಅವನ ಗೋವು ಮೊದಲಾದ ಸಂಪತ್ತು ವೃದ್ಧಿಯಾಗಿ ಎಲ್ಲರಿಗೂ ಸುಖವನ್ನು ನೀಡುತ್ತದೆ.

ಇಲ್ಲಿ ವಿದ್ವದ್ಗುಣ ಹೇಳಿದೆ.

**ಪ್ರ ಯತ್ಸಿಂಧವಃ ಪ್ರಸವಂ ಯಥಾಯ-ನ್ನಾಪಃ ಸಮುದ್ರಂ ರಥ್ಯೇವ ಜಗ್ಮುಃ । ಅತಶ್ಚಿದಿಂದ್ರಃ**
**ಸದಸೋ ವರೀಯಾನ್ ಯದೀಂ ಸೋಮಃ ಪೃಣತಿ ದುಗ್ಧೋ ಅಂಶುಃ ॥೬॥**

**ಪದಾರ್ಥ:-** **[ಯಥಾ]** ಹೇಗೆ **[ಸಿಂಧವಃ]** ನದಿಗಳು **[ಪ್ರಸವಂ]** ಮೇಘವನ್ನು **[ಆಪಃ]** ಜಲವನ್ನು **[ಸಮುದ್ರಂ]** ಅಂತರಿಕ್ಷವನ್ನು **[ಆಯನ್]** ಪಡೆಯುತ್ತವೆಯೋ ಹೇಗೆ **[ಯತ್]** ಉತ್ತಮ ಗುಣ ಪಡೆದವನು **[ರಥ್ಯೇವ]** ಉತ್ತಮ ರಥಿಕನಂತೆ **[ಪ್ರ, ಜಗ್ಮುಃ]** ಉತ್ತಮ ಸ್ಥಾನವನ್ನು ತಲುಪುವರೋ **[ಚಿತ್]** ಅವರೇ **[ಯತ್]** ಯಾವ **[ಇಂದ್ರಃ]** ರಾಜನು **[ವರೀಯಾನ್]** ಶ್ರೇಷ್ಠ ಪುರುಷನು **[ಸದಸಃ]** ಸಭೆಯನ್ನು ಸೇರುತ್ತಾನೆ. **[ಅತಃ]** ಆದ್ದರಿಂದ **[ದುಗ್ಧಃ]** ಗುಣಪೂರ್ಣವಾದ **[ಅಂಶುಃ]** ಓಷಧಿಗಳ ಲತೆಯು **[ಸೋಮಃ]** ಸೋಮ ಲತೆಯಿಂದ ತೆಗೆದ ರಸವು **[ಈಂ]** ನೀರನ್ನು ಪಡೆಯುವಂತೆ **[ಪೃಣಾತಿ]** ಪ್ರಾಣಿಗಳಿಗೆ ಸುಖ ನೀಡುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಹಾಗೂ ಲುಪ್ತೋಪಮಾಲಂಕಾರಗಳಿವೆ. ಯಾರು ವೈರಭಾವ ತ್ಯಜಿಸಿ ಸಮಗ್ರ ಪ್ರಾಣಿ ಜಾತಿಗೆ ಉಪಕಾರ ಮಾಡುವರೋ ಅವರಿಗೆ ಎಲ್ಲಾ ನದಿಗಳು ಸಮುದ್ರವನ್ನು ಅಭಿಮುಖವಾಗಿ ಹೋಗುವಂತೆ, ಸಮುದ್ರವು ಅಂತರಿಕ್ಷಕ್ಕೆ ಎದುರಾಗುವಂತೆ, ವಿದ್ಯೆಯು ಅಭಿಮುಖವಾಗುತ್ತದೆ. ನದಿಗಳು ಸಮುದ್ರ ಆಕಾಶ, ಮೇಘ ಸೇರಿ ಓಷಧಿಗಳಿಗೆ ಮಳೆಗರೆದು ಸುಖಕೊಡುವಂತೆ ಎಲ್ಲಾ ಪ್ರಾಣಿಗಳಿಗೂ ಸುಖ ಕೊಡುವವರಾಗುವರು.

ರಾಜ ಪ್ರಜಾಗುಣಗಳನ್ನಿಲ್ಲಿ ಹೇಳಿದೆ.

**ಸಮುದ್ರೇಣ ಸಿಂಧವೋ ಯಾದಮಾನಾ ಇಂದ್ರಾಯ ಸೋಮಂ ಸುಷುತಂ ಭರಂತಃ ।**
**ಅಂಶುಂ ದುಹಂತಿ ಹಸ್ತಿನೋ ಭರಿತ್ರೈ-ರ್ಮಧ್ವಃ ಪುನಂತಿ ಧಾರಯಾ ಪವಿತ್ರೈಃ ॥೭॥**

**ಪದಾರ್ಥ:-** **[ಸಮುದ್ರೇಣ]** ಸಾಗರದೊಂದಿಗೆ **[ಸಿಂಧವಃ]** ನದಿಗಳು ಹೇಗೋ ಹಾಗೆ **[ಇಂದ್ರಾಯ]** ಐಶ್ವರ್ಯಕ್ಕಾಗಿ ವಿದ್ಯೆಯ **[ಯಾದಮಾನಾಃ]** ಯಾಚನೆ ಮಾಡುವವರಾಗಿ **[ಸುಷುತಂ]** ಉತ್ತಮ ರೀತಿಯಲ್ಲಿ ತಯಾರಿಸಿದ **[ಅಂಶುಂ]** ಲತೆಯ **[ಸೋಮಂ]** ಸೋಮರಸವನ್ನು **[ಭರಂತಃ]** ಸೇವಿಸಿ ಪುಷ್ಟಿಗೊಳ್ಳುತ್ತ **[ಹಸ್ತಿನಃ]** ಉತ್ತಮ ಕೈಗಳಿಂದ **[ಮಧ್ವಃ]** ಮಧುರ ಗುಣಕ್ಕೆ ಸಂಬಂಧಿಸಿದ **[ಪವಿತ್ರೈಃ]** ಪರಿಶುದ್ಧವಾದ **[ಭರಿತ್ರೈಃ]** ಧಾರಣ ಪೋಷಣ ಮಾಡಿದ ಧನದೊಂದಿಗೆ **[ಧಾರಯಾ]** ಧಾರಾ ರೂಪದಿಂದ **[ಪುನಂತಿ]** ಪರಿಶುದ್ಧಗೊಳಿಸಿದ ಆ ರಸವು ಕಾಮನೆಗಳನ್ನು **[ದುಹಂತಿ]** ಪೂರ್ಣಗೊಳಿಸುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ನದಿಗಳು ಸುತ್ತಮುತ್ತಲಿನ ಜಲಗಳನ್ನು ಗ್ರಹಣ ಮಾಡಿ ವೇಗವಾಗಿ ಹರಿದು ಸಮುದ್ರವನ್ನು ಸೇರುತ್ತದೆ. ಆ ಸಮುದ್ರವು ಇನ್ನೂ ಶುಚಿಗೊಳ್ಳುತ್ತದೆ. ಅದೇ ರೀತಿ ಬ್ರಹ್ಮಚರ್ಯಾಶ್ರಮದಲ್ಲಿ ವಿದ್ಯೆಯನ್ನು ಗ್ರಹಣ ಮಾಡಿ ತೀಕ್ಷ್ಣಬುದ್ಧಿಯಿಂದ ಪರಿಪೂರ್ಣ ಜ್ಞಾನವನ್ನು ಪಡೆದ ವಿದ್ಯಾವಂತರು ಪುನೀತರಾಗಿ ಪರಮೇಶ್ವರನ ಜ್ಞಾನವನ್ನು ಪಡೆದು ಜ್ಞಾನಾನಂದ ಪೂರ್ಣ ಮನುಷ್ಯರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹ್ರದಾ ಇವ ಕುಕ್ಷಯಃ ಸೋಮಧಾನಾಃ ಸಮೀ ವಿವ್ಯಾಚ ಸವನಾ ಪುರೂಣಿ ।**
**ಅನ್ನಾ ಯದಿಂದ್ರಃ ಪ್ರಥಮಾ ವ್ಯಾಶ ವೃತ್ರಂ ಜಘನ್ವಾ ಅವೃಣೀತ ಸೋಮಮ್ ॥೮॥**

**ಪದಾರ್ಥ:-** **[ಕುಕ್ಷಯಃ]** ಶರೀರದ ಎರಡೂ ಭಾಗದ ಅವಯವಗಳು **[ಸೋಮಧಾನಾಃ]** ಸೋಮರೂಪ ಓಷಧಿಗಳಿಂದ ಕೂಡಿದ **[ಹೃದಾಇವ]** ಗಂಭೀರ ಜಲಾಶಯಗಳಂತಿವೆ. **[ಯತ್]** ಯಾವ **[ಪುರೂಣಿ]** ಬಹಳಷ್ಟು **[ಸವನಾ]** ಓಷಧಿ ರಸಗಳಿಂದ ಕೂಡಿರುವ **[ಪ್ರಥಮಾ]** ಪ್ರಸಿದ್ಧವಾದ **[ಅನ್ನಾ]** **[ಈಂ]** ಅನ್ನ-ಜಲಗಳನ್ನು **[ಸಂ, ವಿವ್ಯಾಚ]** ಶೋಧಿಸುತ್ತದೆ. **[ಇಂದ್ರಃ]** ಸೂರ್ಯನಂತೆ ಪ್ರಕಾಶಮಾನನಾದ **[ವೃತ್ರಂ]** ಮೇಘವನ್ನು **[ಜಘನ್ವಾನ್]** ನಾಶಗೊಳಿಸುವ ಸೂರ್ಯನಂತಿರುವ **[ಸೋಮಂ]** ಓಷಧಿ ಸಮೂಹವನ್ನು **[ಅವೃಣೀತ]** ಸ್ವೀಕರಿಸಿ **[ವಿ, ಆಶ]** ಭೋಜನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಮನುಷ್ಯನು ಸಮುದ್ರದಂತೆ ಗಂಭೀರ ವಿಷಯವನ್ನು ತನ್ನಲ್ಲಿರಿಸಿಕೊಂಡು ಸೂರ್ಯನಂತೆ ಪ್ರತಾಪಿಯಾಗಿ ಜ್ಞಾನಸಂಪತ್ತನ್ನು ಧಾರಣೆಮಾಡಿ ತನ್ನಲ್ಲಿರುವ ಅನ್ಯರಲ್ಲಿರುವ ದೋಷಗಳನ್ನು ನಾಶಮಾಡಿ ಧನವಂತನಾದರೆ ಅವನು ಪ್ರಸನ್ನಚಿತ್ತನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ತೂ ಭರ ಮಾಕಿರೇತತ್ಪರಿ ಷ್ಠಾದ್ವಿದ್ಮಾ ಹಿ ತ್ವಾ ವಸುಪತಿಂ ವಸೂನಾಮ್ ।**
**ಇಂದ್ರ ಯತ್ತೇ ಮಾಹಿನಂ ದತ್ರಮಸ್ತ್ಯ-ಸ್ಮಭ್ಯಂ ತದ್ಧರ್ಯಶ್ವ ಪ್ರ ಯಂಧಿ ॥೯॥**

**ಪದಾರ್ಥ:-** **[ಇಂದ್ರ]** ಐಶ್ವರ್ಯ ದಾನ ಮಾಡುವವನೇ! **[ಯತ್]** ಯಾವ **[ತೇ]** ನಿನ್ನ **[ಮಾಹಿನಂ]** ಮಹಿಮಾನ್ವಿತ **[ದತ್ರಂ]** ದಾನಗುಣವು **[ಅಸ್ತಿ]** ಇದೆಯೋ **[ತತ್]** ಅದರಿಂದ **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ಪ್ರ-ಯಂಧಿ]** ಪ್ರಕರ್ಷವಾಗಿ ಕೊಡುವವನಾಗು. **[ಹರ್ಯಶ್ವ]** ವೇಗಗತಿಯ ಕುದುರೆಯ ವಾಹನವಿರುವವನೇ! ನೀನು **[ಏತತ್]** ಇದನ್ನು **[ಮಾಕಿಃ]** **[ಪರಿ, ಷ್ಠಾತ್]** ತಡೆಯದಿರು. **[ಹಿ]** ಅದರಿಂದ **[ವಸೂನಾಂ]** ಧನ ಸಂಪತ್ತಿಗೆ **[ವಸುಪತಿಂ]** ಒಡೆಯನಾದ **[ತ್ವಾ]** ನಿನ್ನನ್ನು **[ವಿದ್ಮ]** ನಾವು ತಿಳಿದಿರುವೆವು. ಆದ್ದರಿಂದ **[ತು]** ಶೀಘ್ರವಾಗಿ **[ಆ]** **[ಭರ]** ಈ ಎಲ್ಲವನ್ನೂ ಧಾರಣಮಾಡಿಸು.

**ಭಾವಾರ್ಥ:-** ವಿದ್ಯಾವಂತರು ಜನಕೋಟಿಯನ್ನು ಕುರಿತು "ನೀವೆಲ್ಲರೂ ದುರಾಚಾರಗಳನ್ನು ತ್ಯಜಿಸಿರಿ. ಉತ್ತಮ ಗುಣಗಳನ್ನು ಗ್ರಹಣ ಮಾಡಿರಿ. ಧನ ಸಂಪತ್ತುಗಳನ್ನು ಪಡೆದುಕೊಂಡು ಬೇರೆ ಸತ್ಪಾತ್ರರಿಗೂ ಅದನ್ನು ಕೊಡುವವರಾಗಿ" ಎಂಬುದಾಗಿ ಉಪದೇಶಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿ-ನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
**ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥೧೦॥**

**ಪದಾರ್ಥ:-** **[ಶಿಪ್ರಿನ್]** ಸುಂದರ ಮೂಗು ಕೆನ್ನೆಗಳಿರುವವನೇ! **[ಇಂದ್ರ]** ಸುಖದಾಯಕನೇ! ನೀನು **[ಅಸ್ಮೇ]** ನಮಗೆ **[ಶಶ್ವತಃ]** ಯಾವಾಗಲೂ ಇರುವ **[ವೀರಾನ್]** ಪರಾಕ್ರಮಿಗಳನ್ನು ಕಳುಹಿಸಿಕೊಂಡು. **[ಮಘವನ್]** ಶ್ರೇಷ್ಠ ಧನಗಳಿಂದ ಪರಿಪೂರ್ಣನಾದವನೇ! **[ಋಜೀಷಿನ್]** ಸರಳ ಸ್ವಭಾವದವನೇ! **[ಇಂದ್ರ]** ಸೂರ್ಯನಂತೆ ತೇಜಸ್ವಿಯೇ? ನೀನು **[ಅಸ್ಮೇ]** ನಮಗೆ **[ವಿಶ್ವವಾರಸ್ಯ]** ಸಮಗ್ರ ಸುಖವನ್ನು ಕೊಡುವಂತಹ **[ಭೂರೇಃ]** ವಿವಿಧ ರೀತಿಯ **[ರಾಯಃ]** ಸಂಪತ್ತನ್ನು **[ಪ್ರ, ಯಂಧಿ]** ಕೊಡುವವನಾಗು. **[ಅಸ್ಮೇ]** ನಮಗೆ **[ಜೀವಸೇ]** ಆಯುಸ್ಸನ್ನು **[ಶತಂ]** **[ಶರದಃ]** ನೂರು ವರ್ಷಗಳವರೆಗೆ **[ಧಾಃ]** ಧಾರಣಮಾಡಿಸು.

**ಭಾವಾರ್ಥ:-** ಯಾರು ಯಾಥಾರ್ಥ ನುಡಿಯುವ ವಿದ್ಯಾವಂತರೋ ಸಂಪತ್ತನ್ನು ಅನ್ಯರೊಂದಿಗೆ ಹಂಚಿಕೊಂಡು ತಾವೂ ಸ್ವೀಕರಿಸುವರೋ, ಮನುಷ್ಯರಿಗೆ ಉತ್ತಮ ಗುಣಗಳ ಉಪದೇಶ ಮಾಡಿ ನೂರು ವರ್ಷ ಬದುಕುವಂತೆ ಮಾಡುವರೋ ಕರ್ಮಾಚರಣೆಗಳಲ್ಲಿ ಉತ್ಸಾಹಿಗಳಾಗಿ ನಿರ್ಭೀತರಾಗಿ-ಪುರುಷಾರ್ಥವನ್ನು ಸಾಧಿಸುವರೋ ಅವರೇ ಶ್ರೇಷ್ಠ ಸ್ವಭಾವದವರೆನಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೧೧॥**

**ಪದಾರ್ಥ:-** [**ಊತಯೇ**] ರಕ್ಷಣೆಗಾಗಿ [**ಸಮತ್ಸು**] ಸಂಗ್ರಾಮದಲ್ಲಿ [**ಘ್ನಂತಂ**] ನಾಶ ಮಾಡುವ [**ಉಗ್ರಂ**] ಕಠೋರ ಸ್ವಭಾವದ [**ಧನಾನಾಂ**] ದ್ರವ್ಯಗಳ [**ಸಂಜಿತಂ**] ಉತ್ತಮ ರೀತಿಯಲ್ಲಿ ಶತ್ರುಗಳನ್ನು ಜಯಿಸುವಂತಹ [**ವೃತ್ರಾಣಿ**] ಸುವರ್ಣಾದಿ ಧನಗಳನ್ನು [**ಶೃಣ್ವಂತಂ**] ಆಲೈಸುವವನನ್ನು [**ಅಸ್ಮಿನ್**] ಈ ವ್ಯವಹಾರದಲ್ಲಿ [**ವಾಜಸಾತೌ**] ಧನ ಅನ್ನಾದಿಗಳ ವಿಭಾಗ ಮಾಡುವವನು [**ಭರೇ**] ಸಂಗ್ರಾಮದಲ್ಲಿ [**ನೃತಮಂ**] ಶ್ರೇಷ್ಠನಾದ [**ಮಘವಾನಂ**] ಐಶ್ವರ್ಯಸಂಪನ್ನನಾದ [**ಇಂದ್ರಂ**] ಶತ್ರುಗಳನ್ನು ನಾಶಮಾಡುವಂತಹ ರಾಜನನ್ನು [**ಹುವೇಮ**] ಕರೆಯೋಣ. ಅವನ ಸಹಕಾರದಿಂದ [**ಶುನಂ**] ಸುಖವನ್ನೂ ಜಯವನ್ನೂ ಪಡೆಯೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಪ್ರಮುಖ ವ್ಯಕ್ತಿಗಳನ್ನು, ರಾಜವಿದ್ಯೆಯಲ್ಲಿ ಚತುರರನ್ನು, ಶೂರರಾದ ಸೈನಿಕರನ್ನು, ನ್ಯಾಯಾಧೀಶರನ್ನು, ವಾದಮಾಡುವ ವಕೀಲರನ್ನು, ಸೇವೆ ಮಾಡುವ ಸೇವಕರನ್ನು ಗೌರವಪೂರ್ವಕವಾಗಿ ರಾಜ್ಯಾಂಗದಲ್ಲಿ ನೇಮಿಸಿಕೊಳ್ಳುತ್ತಾನೋ, ಅವನು ಯಾವಾಗಲೂ ವಿಜಯಶೀಲನೂ, ಕೀರ್ತಿವಂತನೂ, ಐಶ್ವರ್ಯಸಂಪನ್ನನೂ ಆಗುತ್ತಾನೆ.

ಈ ಸೂಕ್ತದಲ್ಲಿ ಇಂದ್ರ, ವಿದ್ಯಾವಂತರು, ರಾಜ, ಪ್ರಜೆ ಇವರೆಲ್ಲರ ವರ್ಣನೆ ಇರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮುವತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೩೭

ಮಂತ್ರಸಂಖ್ಯೆ ೧೧ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೩, ೭ ನಿಚೃತ್ ಗಾಯತ್ರೀ, ೨, ४, ೫, ೬, ೮, ೯, ೧೦ ಗಾಯತ್ರೀ ಛಂದಃ । ಷಡ್ಜಃ ಸ್ವರಃ । ೧೧ ನಿಚೃತ್ ಅನುಷ್ಟುಪ್ ಛಂದಃ । ಋಷಭಃ ಸ್ವರಃ.

ಈ ಮಂತ್ರದಲ್ಲಿ ರಾಜನ ಗುಣಗಳನ್ನು ತಿಳಿಸಲಾಗಿದೆ.

**ವಾರ್ತ್ರಹತ್ಯಾಯ ಶವಸೇ ಪೃತನಾಷಾಹ್ಯಾಯ ಚ । ಇಂದ್ರ ತ್ವಾ ವರ್ತಯಾಮಸಿ ॥೧॥**

**ಪದಾರ್ಥ:-** [**ಇಂದ್ರ**] ಸೇನಾನಾಯಕನೇ! ನಾವು [**ವಾರ್ತ್ರಹತ್ಯಾಯ**] ಮೇಘ ನಾಶಕನಿಗೆ ಸೂರ್ಯನಿದ್ದಂತೆ [**ಪೃತನಾಷಾಹ್ಯಾಯ**] ಸಂಗ್ರಾಮವನ್ನು ಸಹಿಸಿಕೊಳ್ಳುವವನಿಗೆ [**ಶವಸೇ**] ಬಲ ಪಡೆಯುವುದಕ್ಕಾಗಿ [**ತ್ವಾ**] ನಿನ್ನನ್ನು [**ವರ್ತಯಾಮಸಿ**] ಆಶ್ರಯ ಪಡೆಯುವ ರೀತಿಯಲ್ಲಿ [**ಚ**] ನೀನೂ ಸಹ ನಮಗೆ ಈ ಬಲ ಪ್ರಾಪ್ತಿಗಾಗಿ ಪ್ರಯತ್ನಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯುದ್ಧವಿದ್ಯೆಯನ್ನು ಬೋಧಿಸುವ ಶಿಕ್ಷಕರು ಸೇನಾಪತಿಗೂ ಮತ್ತು ಸೈನಿಕರಿಗೂ ಉತ್ತಮ ಶಿಕ್ಷಣ ನೀಡಬೇಕು. ಅದರಿಂದ ವಿಜಯವು ನಿಶ್ಚಯವಾಗಿ ಲಭಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ವಾಚೀನಂ ಸುತೇ ಮನ ಉತ ಚಕ್ಷುಃ ಶತಕ್ರತೋ । ಇಂದ್ರ ಕೃಣ್ವಂತು ವಾಘತಃ ॥೨॥**

**ಪದಾರ್ಥ:-** **[ಶತಕ್ರತೋ]** ಅತಿಶಯ ಬುದ್ಧಿ ಇರುವ **[ಇಂದ್ರ]** ದುಷ್ಟರನ್ನು ನಾಶಗೊಳಿಸುವವನೇ! **[ವಾಘತಃ]** ಮಾತಿನಿಂದಲೇ ದೋಷನಾಶ ಮಾಡುವಂತಹ ಬುದ್ಧಿವಂತರು **[ತೇ]** ನಿನ್ನ **[ಅರ್ವಾಚೀನಂ]** ಇಂದಿನ ಶಿಕ್ಷಣ ಪಡೆದ **[ಮನಃ]** ಅಂತಃಕರಣ **[ಉತ]** ಮತ್ತು **[ಚಕ್ಷುಃ]** ಚಕ್ಷುರಾದಿ ಇಂದ್ರಿಯಗಳನ್ನು **[ಸು, ಕೃಣ್ವಂತು]** ಉತ್ತಮ ಗುಣಗಳಿಂದ ಸಂಯೋಜಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ ಮೊದಲಾದವರು ಯಥಾರ್ಥ ಬೋಧಿಸುವ ಶಿಕ್ಷಕನಿಂದ ಶಿಕ್ಷಣ ಪಡೆದು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥವನ್ನು ಸಾಧಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಾಮಾನಿ ತೇ ಶತಕ್ರತೋ ವಿಶ್ವಾಭಿರ್ಗೀರ್ಭಿರೀಮಹೇ । ಇಂದ್ರಾಭಿಮಾತಿಷಾಹ್ಯೇ ॥೩॥**

**ಪದಾರ್ಥ:-** **[ಶತಕ್ರತೋ]** ಅತಿಶಯ ಬುದ್ಧಿವಂತನಾದ **[ಇಂದ್ರ]** ಸಂಪತ್ತಿಗೆ ಕಾರಣನಾದ ರಾಜನೇ! **[ವಿಶ್ವಾಭಿಃ]** ಸಂಪೂರ್ಣ **[ಗೀರ್ಭಿಃ]** ಪ್ರಶಿಕ್ಷಿತ ನುಡಿಗಳಿಂದ ನಾವು **[ತೇ]** ನಿನ್ನ **[ನಾಮಾನಿ]** ಹೆಸರುಗಳು ಸಾರ್ಥಕಗೊಳಿಸುವಂತಹ **[ಈ ಮಹೇ]** ಪ್ರಾರ್ಥನೆ ಮಾಡುತ್ತೇವೆ. **[ಅಭಿಮಾತಿಷಾಹ್ಯೇ]** ನೀನು ನಮಗೆ ಎದುರಾಗಿ ಬರುವ ಶತ್ರುಗಳನ್ನು ಜಯಿಸಲು ಸಹಾಯಮಾಡು.

**ಭಾವಾರ್ಥ:-** ರಾಜನು ವಿದ್ಯಾವಿನಯಗಳಿಂದ ರಾರಾಜಿಸುತ್ತಿದ್ದರೇನೇ ರಾಜ ಶಬ್ದ ವಾಚಕನು. ಪಾಲನೆ ಮಾಡುವ ಕೆಲಸದಲ್ಲಿ ನಿರತನಾದವನೇ ನೃಪ. ಭೂಮಿಯಪಾಲನೆ ಮಾಡುವವನೇ ಭೂಪತಿ ಮುಂತಾಗಿ ನಿನ್ನ ಹೆಸರು ಸಾರ್ಥಕವಾಗಲಿ. ಶತ್ರುಗಳೊಂದಿಗೆ ಸಂಗ್ರಾಮ ಮಾಡುವಾಗ ವಿಜಯಗಳಿಸುವವನೇ ಸ್ವರಾಟನಾಗುವನು, ಇಲ್ಲದ್ದಿದ್ದರೆ ಅಲ್ಲ.

ಪ್ರಜಾಗುಣವನ್ನಿಲ್ಲಿ ಹೇಳಿದೆ.

**ಪುರುಷ್ಟುತಸ್ಯ ಧಾಮಭಿಃ ಶತೇನ ಮಹಯಾಮಸಿ । ಇಂದ್ರಸ್ಯ ಚರ್ಷಣೀಧೃತಃ ॥೪॥**

**ಪದಾರ್ಥ:-** **[ಪುರುಷ್ಟುತಸ್ಯ]** ಬಹು ಜನರ ಪ್ರಶಂಸೆಗೊಳಗಾದ **[ಚರ್ಷಣೀಧೃತಃ]** ಮನುಷ್ಯರ ಧಾರಣೆ ಮಾಡುವವನಾದ **[ಇಂದ್ರಸ್ಯ]** ರಾಜನ **[ಶತೇನ]** ಅಸಂಖ್ಯ **[ಧಾಮಭಿಃ]** ಜನ್ಮ, ಸ್ಥಾನ, ನಾಮಗಳಿಂದ **[ಮಹಯಾಮಸಿ]** ಪೂಜೆಗಯ್ಯುವಂತೆ ಸತ್ಕಾರ ಮಾಡಿರಿ.

**ಭಾವಾರ್ಥ:-** ಮನುಷ್ಯರು - ರಾಜ - ನ್ಯಾಯಾಧೀಶ ಮುಂತಾದ ಎಲ್ಲಾ ರೀತಿಯ ಅಧಿಕಾರದಲ್ಲಿರುವವರನ್ನು ಗೌರವಿಸಬೇಕು. ಅದೇರೀತಿ ಅಧಿಕಾರಿಗಳೂ ಪ್ರಜೆಗಳನ್ನು ಗೌರವಿಸಬೇಕು. ಹೀಗೆ ಪರಸ್ಪರ ಏಳಿಗೆಯಿಂದ ಇಬ್ಬರಿಗೂ ಮಂಗಳವಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಂ ವೃತ್ರಾಯ ಹಂತವೇ ಪುರುಹೂತಮುಪ ಬ್ರುವೇ । ಭರೇಷು ವಾಜಸಾತಯೇ ॥೫॥**

**ಪದಾರ್ಥ:-** **[ವೃತ್ರಾಯ]** ನ್ಯಾಯವನ್ನು ಅವಲೋಧ ಮಾಡುವ ಶತ್ರುಗಳ **[ಹಂತವೇ]** ನಾಶಕ್ಕಾಗಿ **[ಭರೇಷು]** ಸಂಗ್ರಾಮಗಳಲ್ಲಿ **[ವಾಜಸಾತಯೇ]** ಧನಾದಿಗಳನ್ನು ವಿಭಾಗಿಸುವುದಕ್ಕಾಗಿ **[ಪುರುಹೂತಂ]** ಬಹುಜನರಿಂದ ಕರೆಯಲಾದ/ ಪ್ರಶಂಸೆಗೊಳಗಾದ **[ಇಂದ್ರಂ]** ಧನದಾನ ಮಾಡುವ ರಾಜನನ್ನು **[ಉಪ]** ಸಮೀಪಕ್ಕೆ **[ಬ್ರುವೇ]** ಬರುವಂತೆ ಆಹ್ವಾನಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಮಾಲಂಕಾರವಿದೆ. ಯಾವಾಗ ಯುದ್ಧವು ಪ್ರಾರಂಭವಾಗುತ್ತದೆಯೋ ಆಗ ಸೇನಾಪತಿಗಳು ಹೇಗೆ ವಿಜಯ ಸಾಧಿಸಬಹುದೋ, ಆ ರೀತಿ ಸೈನಿಕರಿಗೆ ಉಪದೇಶ ನೀಡಬೇಕು. ಸೈನಿಕರು ಶಾಸಕನ ಆಜ್ಞೆಯಂತೆ ಎಲ್ಲ ರೀತಿಯಿಂದಲೂ ವರ್ತಿಸಬೇಕು. ಹೀಗೆ ಮಾಡುವುದರಿಂದ ವಿಜಯವು ನಿಶ್ಚಿತವಾಗಿ ಲಭಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಾಜೇಷು ಸಾಸಹಿರ್ಭವ ತ್ವಾಮೀಮಹೇ ಶತಕ್ರತೋ । ಇಂದ್ರ ವೃತ್ರಾಯ ಹಂತವೇ ॥೬॥**

**ಪದಾರ್ಥ:-** **[ಶತಕ್ರತೋ]** ಅತಿಸೂಕ್ಷ್ಮ ಬುದ್ಧಿ ಇರುವ **[ಇಂದ್ರ]** ದುಷ್ಟರನ್ನು ದಮನಿಸುವ ರಾಜನೇ! ನಾವು **[ತ್ವಾಂ]** ನಿನ್ನನ್ನು **[ವೃತ್ರಾಯ]** ಮೇಘದಂತಿರುವ ಶತ್ರುಗಳನ್ನು **[ಹಂತವೇ]** ನಾಶಮಾಡುವುದಕ್ಕಾಗಿ **[ಈ ಮಹೇ]** ಯುದ್ಧೋಪಕರಣಗಳೊಂದಿಗೆ ಕರೆಯುತ್ತೇವೆ. **[ವಾಜೇಷು]** ಬಹಳಷ್ಟು ಜ್ಞಾನ ಹಾಗೂ ಆಹಾರ ಸಾಮಗ್ರಿಗಳ ಅಗತ್ಯವಿರುವಂತಹ ಯುದ್ಧದಲ್ಲಿ **[ಸಾಸಹಿಃ]** ಅದೆಲ್ಲವನ್ನೂ ಭರಿಸುವ ಸಾಮರ್ಥ್ಯವಿರುವವನು **[ಭವ]** ನೀನಾಗು.

**ಭಾವಾರ್ಥ:-** ಯಾರನ್ನು ಸಭಾಪತಿ ಸ್ಥಾನದಲ್ಲಿ ನೇಮಕ ಮಾಡಲಾಗುವುದೋ ಅವನು ತನ್ನ ಆ ಅಧಿಕಾರವನ್ನು ಯೋಗ್ಯ ರೀತಿಯಲ್ಲಿ ನಿರ್ವಹಿಸಬೇಕು. ಅಧಿಕಾರದಲ್ಲಿರುವವನ ಆಜ್ಞೆಯನ್ನು ಆ ಸಭೆಯಲ್ಲಿರುವವರು ಎಂದೂ ಉಲ್ಲಂಘಿಸಬಾರದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದ್ಯುಮ್ನೇಷು ಪೃತನಾಜ್ಯೇ ಪೃತ್ಸುತೂರ್ಷು ಶ್ರವಃಸು ಚ । ಇಂದ್ರ ಸಾಕ್ಷ್ವಾಭಿಮಾತಿಷು ॥೭॥**

**ಪದಾರ್ಥ:-** **[ಇಂದ್ರ]** ತೇಜಸ್ವೀ ಪುರುಷನೇ! ನೀನು **[ಪ್ರತ್ಸುತೂರ್ಷು]** ಸೇನೆಯಲ್ಲಿ ಶತ್ರುಗಳನ್ನು ಶೀಘ್ರನಾಶ ಮಾಡುವಂತಹ ಜನರು **[ಶ್ರವಃತ್ಸು]** ಶ್ರವಣ ಯೋಗ್ಯ ಮಾತು / ಅನ್ನಾದಿ ಪದಾರ್ಥಗಳು **[ದ್ಯುಮ್ನೇಷು]** ಯಶಸ್ವಿಗೊಳಿಸುವ ಧನಪ್ರಾಪ್ತಿಗೊಳಿಸುವ ವಿಷಯಗಳಲ್ಲಿ **[ಪೃತನಾಜ್ಯೇ]** ಸೇನಾ ಸಂಬಂಧೀ ವ್ಯವಹಾರಗಳಲ್ಲಿ **[ಸಾಕ್ಷ್ವ]** ಸಹನಶೀಲನಾಗು.

**ಭಾವಾರ್ಥ:-** ಯಾರು ಧನ ಪದಾರ್ಥ, ವೀರಸೇನೆ, ಉಪದೇಶ ಸಾಮರ್ಥ್ಯ ಇವುಗಳನ್ನು ಪಡೆದಿರುವರೋ ಅವರು ಯುದ್ಧ ಪ್ರಾರಂಭವಾದಾಗ ಅಭಿಮಾನಿಗಳೂ, ಸಂತೋಷಿತರೂ, ಪುಷ್ಟಿ ಪಡೆದವರೂ ಆದ ಸೇನೆಯಿಂದ ಶತ್ರುಗಳನ್ನು ಸೋಲಿಸಿ ವಿಜಯಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುಷ್ಮಿಂತಮಂ ನ ಊತಯೇ ದ್ಯುಮ್ನಿನಂ ಪಾಹಿ ಜಾಗೃವಿಮ್ । ಇಂದ್ರ ಸೋಮಂ ಶತಕ್ರತೋ ॥೮॥**

**ಪದಾರ್ಥ:-** **[ಶತಕ್ರತೋ]** ಬುದ್ಧಿ ಮತ್ತು ಕರ್ಮ ಸಂಯುಕ್ತನಾದ **[ಇಂದ್ರ]** ಎಲ್ಲರ ರಕ್ಷಕನಾದ ರಾಜನೇ! ನೀನು **[ನಃ]** ನಮ್ಮನ್ನು **[ಊತಯೇ]** ರಕ್ಷಣಾದಿ ಕಾರ್ಯಗಳಲ್ಲಿ **[ಶುಷ್ಮಿನ್‌ತಮಮ್]** ಅತಿ ಬಲವು ಯಾರಿಗಿದೆಯೋ ಅವನನ್ನು **[ದ್ಯುಮ್ನಿನಮ್]** ಯಶಸ್ವಿಯಾಗುವವನನ್ನು, ಹಣವಿರುವವನನ್ನು ಮತ್ತು **[ಜಾಗೃವಿಮ್]** ಜಾಗೃತೆ ವಹಿಸುವವನನ್ನು ನಿಯಮಿಸಿ **[ಸೋಮಂ]** ಸಂಪತ್ತನ್ನು **[ಪಾಹಿ]** ಕಾಪಾಡು.

**ಭಾವಾರ್ಥ:-** ಪ್ರಜೆಗಳು ರಾಜನನ್ನು ಮತ್ತು ಇತರ ಶಾಸನಾಧಿಕಾರಿಗಳನ್ನು ಈ ರೀತಿ ಪ್ರಾರ್ಥಿಸಬೇಕು. ನೀವು ನಮ್ಮೆಲ್ಲರ ರಕ್ಷಕರಾಗಿರಿ. ನಮ್ಮ ಸಂಪತ್ತಿನ ರಕ್ಷಣೆಯಲ್ಲಿ ಉದಾಸೀನರಾಗದಿರಿ. ಯಾವಾಗಲೂ ರಕ್ಷಣಾ ಕಾರ್ಯದಲ್ಲಿ ನಿರತರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಿಯಾಣಿ ಶತಕ್ರತೋ ಯಾ ತೇ ಜನೇಷು ಪಂಚಸು । ಇಂದ್ರ ತಾನಿ ತ ಆ ವೃಣೇ ॥೯॥**

**ಪದಾರ್ಥ:-** **[ಶತಕ್ರತೋ]** ಅತಿಶಯ ಬುದ್ಧಿ ಇರುವ **[ಇಂದ್ರ]** ಐಶ್ವರ್ಯದಾಯಕನೇ! **[ಪಂಚಸು]** ರಾಜ್ಯ, ಸೇನೆ, ಕೋಶ, ದೂತ, ಮುಂದಾಲೋಚನೆಗಳೆಂಬ ಐದು ರಾಜ್ಯಾಂಗಗಳಲ್ಲಿ ನಿಯಮಿಸಲಾದ ಅಧಿಕಾರಿಗಳು **[ಜನೇಷು]** ಪ್ರಸಿದ್ಧರಾದ ಅಧಿಕಾರಿಗಳಲ್ಲಿ **[ಯಾ]** ಯಾವುದು **[ತೇ]** ನಿನ್ನ **[ಇಂದ್ರಿಯಾಣಿ]** ಬದುಕುವ ಲಕ್ಷಣಗಳಿವೆಯೋ **[ತಾನಿ]** ಅಂತಹ **[ತೇ]** ನಿನ್ನ ಚಿಹ್ನೆಗಳನ್ನು **[ಆ]** **[ವೃಣೇ]** ಉತ್ತಮ ರೀತಿಯಲ್ಲಿ ಮರೆ ಮಾಡುವೆನು.

**ಭಾವಾರ್ಥ:-** ಯಾವ ರಾಜನು ತನ್ನ ಮಂತ್ರಿ ಮುಂತಾದ ರಾಜ್ಯಾಂಗದ ಅಧಿಕಾರಿಗಳ ಕಾರ್ಯ ನಿರ್ವಹಣೆಯನ್ನು ಪ್ರತ್ಯಕ್ಷವಾಗಿ ವೀಕ್ಷಿಸುತ್ತಾನೋ, ಹೇಗೆ ಶರೀರದಲ್ಲಿರುವ ಚಕ್ಷು ಇಂದ್ರಿಯಗೋಲಕವು ಶರೀರ ಸಂಬಂಧಿ ಎಲ್ಲ ಕಾರ್ಯವನ್ನು ನಿರ್ವಹಿಸುತ್ತದೆಯೋ, ಅದೇ ರೀತಿ ರಾಜ್ಯಾಂಗದ ಅಧಿಕಾರಿಗಳು ರಾಜ್ಯ ಕಾರ್ಯವನ್ನು ನಿರ್ವಹಿಸುತ್ತಾರೆ. ಅವರೇ ರಾಜನ ನಯನೇಂದ್ರಿಯಗಳಾಗಿರುವರು. ಅವನೇ ಉತ್ತಮ ರಾಜನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗನ್ನಿಂದ್ರ ಶ್ರವೋ ಬೃಹ-ದ್ದ್ಯುಮ್ನಂ ದಧಿಷ್ವ ದುಷ್ಟರಮ್ । ಉತ್ತೇ ಶುಷ್ಮಂ ತಿರಾಮಸಿ ॥೧೦॥**

**ಪದಾರ್ಥ:-** **[ಇಂದ್ರ]** ಐಶ್ವರ್ಯವಂತನೇ! **[ಬೃಹತ್]** ಅತಿಶಯವಾದ **[ದುಷ್ಟರಮ್]** ದುಷ್ಟರನ್ನು / ದುಃಖವನ್ನು ಉಲ್ಲಂಘಿಸಲು ಯೋಗ್ಯವಾದ **[ಶ್ರವಃ]** ಆಹಾರ / ಶ್ರವಣೇಂದ್ರಿಯ **[ದ್ಯುಮ್ನಮ್]** ಯಶಸ್ಸು/ಸಂಪತ್ತು **[ಶುಷ್ಮಮ್]** ಬಲ ಇವುಗಳನ್ನೆಲ್ಲ **[ಅಗನ್]** ನಮಗೆ ಪ್ರಾಪ್ತವಾಗಲಿ. **[ತೇ]** ಅಂತಹ ನಿನ್ನ ಅನ್ನಾದಿ ಸಾಧನಗಳನ್ನು **[ಉತ್]** ಉತ್ತಮ ರೀತಿಯಲ್ಲಿ **[ತಿರಾಮಸಿ]** ಅಪೇಕ್ಷೆಗಿಂತಲೂ ಅಧಿಕವಾಗಿ ಸಂಪಾದಿಸುವವನಾಗು. **[ದಧಿಷ್ವ]** ಅವೆಲ್ಲವನ್ನೂ ಧಾರಣ ಮಾಡು.

**ಭಾವಾರ್ಥ:-** ರಾಜನು ತನ್ನ ಸೇನೆ ಅಧಿಕಾರಿಗಳು ಹಾಗೂ ಪ್ರಜೆಗಳು ಇವರೆಲ್ಲರ ಪಾಲನೆ ಪೋಷಣೆಗಳಿಗೆ ಎಷ್ಟು ಅಗತ್ಯವೋ, ಅದಕ್ಕಿಂತಲೂ ಹೆಚ್ಚು ಸಂಪತ್ತನ್ನು ಸಂಗ್ರಹಿಸಿಕೊಳ್ಳಬೇಕು. ಅದರಿಂದ ಅವನ ಯಶಸ್ಸು ಹೆಚ್ಚುತ್ತದೆ.

ಈ ಮಂತ್ರದಲ್ಲಿ ರಾಜ ಮತ್ತು ಪ್ರಜೆಗಳ ಪರಸ್ಪರ ಸಹಕಾರ ಹೇಗಿರಬೇಕು ಎಂಬುದನ್ನು ತಿಳಿಸಲಾಗಿದೆ.

**ಅರ್ವಾವತೋ ನ ಆ ಗ-ಹ್ಯಥೋ ಶಕ್ರ ಪರಾವತಃ ।**

**ಉ ಲೋಕೋ ಯಸ್ತೇ ಅದ್ರಿವ ಇಂದ್ರೇಹ ತತ ಆ ಗಹಿ ॥೧೧॥**

**ಪದಾರ್ಥ:-** [**ಅದ್ರಿವಃ**] ಮೋಡಗಳೊಂದಿಗಿರುವ ಸೂರ್ಯನಿಗೆ ಸಮಾನನಾಗಿ ಇರುವ [**ಶಕ್ರಃ**] ಬಹು ವಿಧ ಸಾಮರ್ಥ್ಯವನ್ನು ಪಡೆದಿರುವ ಇಂದ್ರ ಸುಖದಾಯಕನೇ! [**ಇಹ**] ಈ ಜಗತ್ತಿನಲ್ಲಿ [**ಯಃ**] ಯಾವನು [**ತೇ**] ನಿನ್ನ [**ಲೋಕಃ**] ನಿವಾಸ ಸ್ಥಾನವೋ ಅದರಿಂದ [**ನಃ**] ನಮ್ಮೆಲ್ಲರನ್ನೂ [**ಆ ಗಹಿಃ**] ಸಮೀಪಿಸುವನಾಗು. [**ಅಥೋಃ**] ಅನಂತರ [**ಪರಾವತಃ**] ದೂರದಿಂದಲಾದರೂ ನಮ್ಮನ್ನು ನೋಡುವವನಾಗಲಿ. [**ತತಃ**] ಆ ಮೇಲೆ [**ಆ ಗಹಿ**] ಬೇರೆ ಬೇರೆ ಸ್ಥಳಗಳಿಗೂ ಬರುವವನಾಗು.

**ಭಾವಾರ್ಥ:-** ಪ್ರಜೆಗಳು ಹೇಗೆ ಪ್ರೀತಿಯಿಂದ ರಾಜನನ್ನು ಕರೆಯುವರೋ, ಅದೇ ರೀತಿ ರಾಜನು ಪ್ರಜೆಗಳಲ್ಲೂ ಪ್ರೀತಿಯಿಂದ ವ್ಯವಹರಿಸಬೇಕು. ಅವರಲ್ಲಿ ಹೋಗಿಯೋ ಅಥವಾ ತನ್ನ ಸ್ಥಾನದಲ್ಲಿ ಇದ್ದೋ ಪ್ರಜೆಗಳನ್ನು ಪ್ರೀತಿಸಬೇಕು. ಪ್ರಜೆಗಳು ಕರೆದಾಗ ಬೇರೆ ಬೇರೆ ಸ್ಥಳಗಳಿಗೆ ಹೋಗಲೂ ಬೇಕು. ಹೀಗೆ ಪರಸ್ಪರರು ಸ್ನೇಹವನ್ನು ಬೆಳೆಯಿಸಿಕೊಂಡು ರಾಜ್ಯಕಾರ್ಯವನ್ನು ವೃದ್ಧಿಪಡಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ರಾಜ ಪ್ರಜೆಗಳು ಮತ್ತು ಅವರ ಕೆಲಸ ಕಾರ್ಯಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೩೮

ಮಂತ್ರಸಂಖ್ಯೆ ೧೦ । ಪ್ರಜಾಪತಿಃ ಋಷಿಃ । ಇಂದ್ರೋ ದೇವತಾ । ೧, ೬, ೧೦ ತ್ರಿಷ್ಟುಪ್, ೨-೫, ೮, ೯ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ, ೭ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯವನ್ನು ಹೇಳಲಾಗಿದೆ.

**ಅಭಿ ತಷ್ಟೇವ ದೀಧಯಾ ಮನೀಷಾ-ಮತ್ಯೋ ನ ವಾಜೀ ಸುಧುರೋ ಜಿಹಾನಃ ।**

**ಅಭಿ ಪ್ರಿಯಾಣಿ ಮರ್ಮೃಶತ್ಪರಾಣಿ ಕವೀಁರಿಚ್ಛಾಮಿ ಸಂದೃಶೇ ಸುಮೇಧಾಃ ॥೧॥**

**ಪದಾರ್ಥ:-** [**ಸಂದೃಶೇ**] ಉತ್ತಮ ದರ್ಶನಕ್ಕಾಗಿ [**ಕವೀನ್**] ವಿದ್ಯಾವಂತರನ್ನು [**ಇಚ್ಛಾಮಿ**] ಇಚ್ಛಿಸುತ್ತೇನೆ. [**ಸುಮೇಧಾಃ**] ಉತ್ತಮ ಬುದ್ಧಿವಂತರು [**ಜಿಹಾನಃ**] ಪ್ರಾಪ್ತರಾಗಿ [**ಪರಾಣಿ**] ಶ್ರೇಷ್ಠವಾದ [**ಪ್ರಿಯಾಣಿ**] ಪ್ರಿಯವಾಗುವಂತಹ ಸುಖವನ್ನು [**ಅಭಿ, ಮರ್ಮಶತ್**] ಉತ್ತಮ ರೀತಿಯಲ್ಲಿ ವಿಮರ್ಶಿಸುತ್ತಾ [**ಸುಧುರಃ**] ಶ್ರೇಷ್ಠವಾದ ಅಚ್ಚನ್ನು ಧಾರಣ ಮಾಡುತ್ತಾ [**ಅತ್ಯಃ**] ನಿರಂತರ ಚಲಿಸುವ [**ವಾಜಿ**] [**ನ**] ಅಶ್ವಗಳಿಗೆ ಸಮನಾಗಿ [**ಮನೀಷಾಂ**] ಬುದ್ಧಿಯನ್ನು [**ತಷ್ಟೇವ**] ತಕ್ಷಣ ಮಾಡುವವನಂತೆ ನೀನು [**ಅಭಿ**] [**ದೀಧಯ**] ಎದುರಿನಲ್ಲಿ ಪ್ರಕಟನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಗಾಡಿಯ ಎಳೆಯುವ ಸಾಧನವಾದ ಅಚ್ಚನ್ನು ಶಿಕ್ಷಣ ಪಡೆದ ಕುದುರೆಗಳು ಧಾರಣ ಮಾಡುವ ರೀತಿಯಲ್ಲಿ ವಿದ್ಯಾವಂತರು ತಮ್ಮ ಬಯಸಿದ

ಕರ್ಮಗಳಿಗೆ ಬೇಕಾಗಿರುವ ವಿದ್ಯೆಯನ್ನು ಅದನ್ನರಿತಿರುವ ಉತ್ತಮ ವಿದ್ವಾಂತರಿಂದ ಧಾರಣ ಮಾಡಿ ಬಯಸಿದ ಕಾರ್ಯವನ್ನು ಸಾಧಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇನೋತ ಪೃಚ್ಛ ಜನಿಮಾ ಕವೀನಾಂ ಮನೋಧೃತಃ ಸುಕೃತಸ್ತಕ್ಷತ ದ್ಯಾಮ್ । ಇಮಾ ಉ**
**ತೇ ಪ್ರಣ್ಯೋ (ಓ) ೩ ವರ್ಧಮಾನಾ ಮನೋವಾತಾ ಅಧ ನು ಧರ್ಮಣಿ ಗ್ಮನ್ ॥೨॥**

**ಪದಾರ್ಥ:-** **[ಕವೀನಾಂ]** ಬುದ್ಧಿವಂತ ಜನರ **[ಮನೋವೃತಃ]** ಜ್ಞಾನವನ್ನು ಗ್ರಹಣ ಮಾಡಲು **[ಸುಕೃತಃ]** ಉತ್ತಮ ಕೆಲಸ ಮಾಡುವವರು **[ಉ]** ಮತ್ತು **[ಇಮಾಃ]** ಈ **[ಪ್ರಣ್ಯಃ]** ಉತ್ತಮ ನೀತಿಯುಕ್ತವಾದ **[ವರ್ಧಮಾನಾಃ]** ಬೆಳೆಯುತ್ತಲಿರುವ **[ಮನೋವಾತಾಃ]** ಮನಸ್ಸಿಗೆ ಸದೃಷಳಾಗಿರುವ ಸ್ತ್ರೀಯಲ್ಲಿ **[ಧರ್ಮಣಿ]** ಧರ್ಮ ಸಂಬಂಧಿ ವ್ಯವಹಾರವನ್ನು **[ನು]** ಬೇಗನೇ **[ಗ್ಮಮನ್]** ಪ್ರಾಪ್ತಗೊಳಿಸು **[ಅಧಃ]** ಆಮೇಲೆ **[ದ್ಯಾಮ್]** ಬೆಳಕನ್ನು ಪಡೆದಿರುವ **[ತೇ]** ನಿನ್ನ **[ಜನಿಮ]** ಜನ್ಮವು ಪ್ರಾಪ್ತವಾಗಲಿ. **[ಉತ]** ಅಥವಾ **[ಇನಾ]** ಸಮರ್ಥ ಪುರುಷನನ್ನು **[ಪೃಚ್ಛ]** ಕೇಳುವವನಾಗು. **[ತಕ್ಷತ]** ನಮ್ಮ ಅವಿದ್ಯೆಯನ್ನು ನಿವಾರಣೆ ಮಾಡು ಎಂಬುದಾಗಿ.

**ಭಾವಾರ್ಥ:-** ಯಾವ ಸ್ತ್ರೀ ಪುರುಷರು ಧರ್ಮಾನುಷ್ಠಾನಪೂರ್ವಕ ಬುದ್ಧಿವಂತರಲ್ಲಿರಬೇಕಾದ ಲಕ್ಷಣವನ್ನು ಪಡೆದು ಪ್ರಶ್ನೋತ್ತರಗಳ ಮೂಲಕ ಅಂತಃಕರಣವನ್ನು ಶುದ್ಧಿಗೊಳಿಸಿಕೊಂಡು ಉತ್ತಮ ಜ್ಞಾನಿಗಳಾಗುವರೋ ಅಂತಹ ಸ್ತ್ರೀ ಪುರುಷರು ಎಲ್ಲ ರೀತಿಯಿಂದಲೂ ಏಳಿಗೆ ಹೊಂದುತ್ತಾರೆ.

ಭೂಮಿಗೆ ಸಂಬಂಧಿಸಿದ ವಿಷಯವನ್ನು ಇಲ್ಲಿ ತಿಳಿಸಲಾಗಿದೆ.

**ನಿ ಷೀಮಿದತ್ರ ಗುಹ್ಯಾ ದಧಾನಾ ಉತ ಕ್ಷತ್ರಾಯ ರೋದಸೀ ಸಮಂಜನ್ । ಸಂ**
**ಮಾತ್ರಾಭಿರ್ಮಮಿರೇ ಯೇಮುರುರ್ವೀ ಅಂತರ್ಮಹೀ ಸಮೃತೇ ಧಾಯಸೇ ಧುಃ ॥೩॥**

**ಪದಾರ್ಥ:-** **[ಅತ್ರ]** ಈ ಜಗತ್ತಿನಲ್ಲಿ **[ಗುಹ್ಯಾ]** ಗೂಢವಾದ ಜ್ಞಾನವನ್ನು **[ದಧಾನಾಃ]** ಧಾರಣ ಮಾಡಿದವರು **[ಕ್ಷತ್ರಾಯ]** ರಾಜ್ಯಕ್ಕಾಗಿ **[ರೋದಸೀ]** ಭೂಮಿ ಅಂತರಿಕ್ಷಗಳಲ್ಲಿ **[ಸೀಂ]** ಎಲ್ಲ ರೀತಿಯಿಂದ **[ಸಂ, ಅಂಜನ್]** ಬೆಳಕನ್ನು ಪ್ರಕಟಿಸುತ್ತಾರೆ. **[ಉತ]** ಮತ್ತು **[ಮಾತ್ರಾಭಿಃ]** ಸೂಕ್ಷ್ಮ ಅವಯವಗಳಿಂದ **[ನಿ]** **[ಮಮಿರೇ]** ನಿರಂತರವಾಗಿ ಅಳೆಯುತ್ತಾರೋ **[ಉರ್ವೀ]** ವಿಸ್ತಾರವಾದ **[ಮಹೀ]** ಭೂಮಿಯನ್ನು **[ಸಂಮೃತೇ]** ಉತ್ತಮ ವ್ಯವಹಾರದಲ್ಲಿ ತೊಡಗಿಸುವಂತೆ **[ಅಂತಃ]** ತನ್ನ ಅಂತಃಕರಣಕ್ಕೆ **[ಸಂ, ಯೇಮುಃ]** ಸಂಯೋಗಗೊಳಿಸುತ್ತಾರೋ **[ಇತ್]** ಅವರೇ ಸುಖವನ್ನು **[ಧುಃ]** ಪಡೆಯುವವರು.

**ಭಾವಾರ್ಥ:-** ಯಾವ ಸ್ತ್ರೀಯರು ಬ್ರಹ್ಮಚರ್ಯಾಶ್ರಮದಲ್ಲಿ, ವಿದ್ಯೆ ಮತ್ತು ಜ್ಞಾನಗಳನ್ನು ಪಡೆದು ಪೃಥ್ವಿಯಾದಿ ಪದಾರ್ಥಗಳಿಂದ ಪ್ರಯೋಜನ ಪಡೆಯಲು ಸಮರ್ಥರಾಗುತ್ತಾರೋ ಅವರೇ ರಾಣಿಯಾಗಲು ಯೋಗ್ಯರಾಗುತ್ತಾರೆ.

ಈ ಮಂತ್ರದಲ್ಲಿ ಸೂರ್ಯನ ವಿಷಯ ಹೇಳಲಾಗಿದೆ.

**ಆತಿಷ್ಠಂತಂ ಪರಿ ವಿಶ್ವೇ ಅಭೂಷ-ಞ್ಛ್ರಿಯೋ ವಸಾನಶ್ಚರತಿ ಸ್ವರೋಚಿಃ ।**
**ಮಹತ್ತದ್ವೃಷ್ಣೋ ಅಸುರಸ್ಯ ನಾಮಾ-ಽಽ ವಿಶ್ವರೂಪೋ ಅಮೃತಾನಿ ತಸ್ಥೌ ॥೪॥**

**ಪದಾರ್ಥ:-** **[ವಿಶ್ವರೂಪಃ]** ಯಾವನಿಂದ ಸಮಗ್ರ ಪ್ರಪಂಚವೂ ರೂಪಗೊಳ್ಳುತ್ತದೆಯೋ ಅವನು **[ಶ್ರಿಯಃ]** ಸಂಪತ್ತಿನ ಮತ್ತು ಪದಾರ್ಥಗಳ ಶೋಭೆಗಳನ್ನು **[ವಸಾನಃ]** ಮರೆ ಮಾಡುವವನೂ ಸ್ವೀಕರಿಸುವವನೂ ಆಗುವನು. **[ಸ್ವರೋಚಿಃ]** ಮತ್ತು ಯಾವನು ಸ್ವಯಂ ಪ್ರಕಾಶನೋ ಅಂತಹ ಸೂರ್ಯನು **[ವೃಷ್ಣಃ]** ವೃಷ್ಟಿಕಾರಕನಾದ **[ಅಸುರಸ್ಯ]** ದೋಷಗಳನ್ನು ದೂರಗೊಳಿಸಿ, ಪ್ರಾಣದೊಂದಿಗೆ ರಮಿಸುವವನಾದ ವಾಯುವಿಗೆ ಸಂಬಂಧಿಸಿದ **[ಅಮೃತಾನಿ]** ಅಮೃತದಂತಹ **[ನಾಮಾ]** ನೀರುಗಳನ್ನು ವ್ಯಾಪಕಗೊಳಿಸುವವನು **[ಆತಸ್ಥೌ]** ಆಗಿರುವವನೋ ಅವನಂತೆ **[ಮಹತ್]** **[ತತ್]** ಯಾವುದು ಶ್ರೇಷ್ಠವೋ ಅದು **[ಚರತಿ]** ಪ್ರಾಪ್ತವಾಗುತ್ತದೆ. **[ಆತಿಷ್ಠಂತಮ್]** ಎಲ್ಲ ದಿಕ್ಕುಗಳಿಂದಲೂ ಸ್ಥಿರನಾಗಿರುವವನನ್ನು **[ವಿಶ್ವೇ]** ಸಮಸ್ತ ವಿದ್ಯಾವಂತರು **[ಪರಿ]** **[ಅಭೂಷನ್]** ಎಲ್ಲ ರೀತಿಯಿಂದಲೂ ಸುಶೋಭಿತನನ್ನಾಗಿಸಬೇಕು.

**ಭಾವಾರ್ಥ:-** ಮನುಷ್ಯರೇ! ವಾಯುವಿನ ಸಹಕಾರದೊಂದಿಗೆ ಸೂರ್ಯನು ಸಮಗ್ರ ಪ್ರಪಂಚಕ್ಕೆ ಮಳೆ ಬೆಳಕನ್ನು ನೀಡಿ ತನ್ಮೂಲಕ ಎಲ್ಲರನ್ನೂ ಸಂತೋಷಗೊಳಿಸುತ್ತಾನೆ. ಹಾಗೆಯೇ ಧನ ಸಂಪಾದಿಸುವ ಪುರುಷರು ಎಲ್ಲರನ್ನೂ ಸಂತೋಷಗೊಳಿಸಬೇಕು.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ಅಸೂತ ಪೂರ್ವೋ ವೃಷಭೋ ಜ್ಯಾಯಾನಿಮಾ ಅಸ್ಯ ಶುರುಧಃ ಸಂತಿ ಪೂರ್ವೀಃ ।**
**ದಿವೋ ನಪಾತಾ ವಿದಥಸ್ಯ ಧೀಭಿಃ, ಕ್ಷತ್ರಂ ರಾಜಾನಾ ಪ್ರದಿವೋ ದಧಾಥೇ ॥೫॥**

**ಪದಾರ್ಥ:-** **[ನಪಾತಾ]** ನಾಶರಹಿತನಾದ **[ರಾಜಾನಾಂ]** ಸೂರ್ಯ ವಿದ್ಯುತ್‌ಗಳಿಗೆ ಸದೃಶನಾಗಿ ಪ್ರಕಾಶಮಾನನಾದ ರಾಜ ಮತ್ತು ನ್ಯಾಯಾಧೀಶರು ನೀವಿಬ್ಬರು **[ಪೂರ್ವಃ]** ಹಿಂದಿನ ರಾಜರಿಗೆ **[ವೃಷಭಃ]** ಮೊದಲಿಗನಾಗಿ ಮಳೆಗರೆಯುವ **[ಜ್ಯಾಯಾನ್]** ಹಿರಿಯರೆನಿಸಿಕೊಂಡ **[ಇಮಾಃ]** **[ಪೂರ್ವೀಃ]** ಈ ಪ್ರಾಚೀನವಾದ **[ಶುರುಧಃ]** ರೋಚಕವಾದ ವಸ್ತುಗಳನ್ನು **[ಅಸೂತ]** ಉತ್ಪಾದನೆ ಮಾಡಿರಿ. **[ಅಸ್ಯ]** ಅವುಗಳ ಸಮೀಪದಲ್ಲಿ ಮಳೆಸುರಿಯುವಂತೆ ಮಾಡಿ **[ದಿವಃ]** ಅಂತರಿಕ್ಷದಿಂದ **[ವಿಧತಸ್ಯ]** ವಿಜ್ಞಾನಕಾರಕವಾದ **[ಪ್ರದಿವಃ]** ವಿದ್ಯೆ ವಿನಯಗಳಿಂದ ಶೋಭಿಸುವ **[ಧೀಭಿಃ]** ಬೌದ್ಧಿಕ ಕರ್ಮಗಳಿಂದ **[ಕ್ಷತ್ರಂ]** ಎಲ್ಲರ ರಕ್ಷಣೆಗೆ ಯೋಗ್ಯವಾದ ರಾಜ್ಯವನ್ನು **[ದಧಾಥೇ]** ಧಾರಣ ಮಾಡುವವರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಕ್ರಮವಾಗಿ ಜಲವನ್ನು ಸ್ವೀಕರಿಸಿ, ನೀರನ್ನು ಸುರಿಸಿ ಈ ಜಗತ್ತಿಗೆ ಹಿತವನ್ನುಂಟುಮಾಡುತ್ತಾನೋ ಅದೇ ರೀತಿ ಉತ್ತಮ ಗುಣ ನ್ಯಾಯವಂತರೂ ಆದ ರಾಜಪುರುಷರು ಉತ್ತಮ ರೀತಿಯಲ್ಲಿ ರಾಜ್ಯದ ಪಾಲನೆ ಮಾಡಬೇಕು.

ಸಭಾ ಕಾರ್ಯವನ್ನಿಲ್ಲಿ ತಿಳಿಸಲಾಗಿದೆ.

**ತ್ರೀಣಿ ರಾಜಾನಾ ವಿದಥೇ ಪುರೂಣಿ ಪರಿ ವಿಶ್ವಾನಿ ಭೂಷಥಃ ಸದಾಂಸಿ ।**
**ಅಪಶ್ಯಮತ್ರ ಮನಸಾ ಜಗನ್ವಾನ್ ವ್ರತೇ ಗಂಧರ್ವಾ ಅಪಿ ವಾಯುಕೇಶಾನ್ ॥೬॥**

**ಪದಾರ್ಥ:-** **[ರಾಜಾನಾ]** ರಾಜ ಮತ್ತು ಪ್ರಜೆಗಳೇ! **[ವ್ರತೇ]** ಸತ್ಯಭಾಷಣಾದಿ ವ್ಯವಹಾರಗಳಲ್ಲಿ **[ಗಂಧರ್ವಾನ್]** ಸುಶಿಕ್ಷಿತ ವಾಣಿಯನ್ನು / ಭೂಮಿಯನ್ನು ಧಾರಣ ಮಾಡುವುದರಲ್ಲಿ **[ವಾಯುಕೇಶಾನ್]** ವಾಯುವಿನಂತೆ ವೇಗಗತಿ ಹೊಂದಿರುವ ಉತ್ತಮ ಪುರುಷರನ್ನು **[ಮನಸಾ]** ವಿಜ್ಞಾನದೊಂದಿಗೆ **[ಜಗನ್ವಾನ್]** ಪಡೆದುಕೊಂಡಿರುವ **[ಅಪಶ್ಯಮ್]** ನಿನ್ನನ್ನು ನಾನು ನೋಡುವೆನು. **[ತ್ರೀಣಿ]** **[ಸದಾಂಸಿ]** ಮೂರು ರೀತಿಯ ಸಭೆಗಳನ್ನು ನಿಶ್ಚಿತಗೊಳಿಸಿ **[ವಿಧಥೇ]**

ಜ್ಞಾನ ಕಾರಕ ವ್ಯವಹಾರಗಳಲ್ಲಿ [ಪುರೂಣಿ] ಬಹಳಷ್ಟು [ವಿಶ್ವಾನಿ] ಸಮಗ್ರ ವ್ಯವಹಾರಗಳನ್ನು [ಪರಿಭೂಷಥಃ] ಪೂರ್ಣಗೊಳ್ಳುವಂತೆ ಮಾಡಿರಿ.

**ಭಾವಾರ್ಥ:-** ಪ್ರಜೆಗಳೇ! ನೀವು ಉತ್ತಮ ಗುಣ ಕರ್ಮ ಸ್ವಭಾವದವರಾಗಿ ಯಾಥಾರ್ಥವನ್ನು ನುಡಿಯುವ ಮನುಷ್ಯರಿರುವಂತಹ ರಾಜಸಭೆ, ವಿದ್ಯಾಸಭೆ ಮತ್ತು ಧರ್ಮಸಭೆ ಎಂಬ ಮೂರು ರೀತಿಯ ಸಂಸತ್ತನ್ನು ರಚಿಸಿಕೊಂಡು ರಾಜ್ಯಕ್ಕೆ ಸಂಬಂಧಿಸಿದ ಸಮಗ್ರ ಕರ್ಮಗಳನ್ನು ಯೋಗ್ಯ ರೀತಿಯಲ್ಲಿ ಮಾಡುವವರಾಗಿರಿ. ಅದರಿಂದ ನಿಮಗೂ ನಿಮ್ಮ ರಾಜ್ಯಕ್ಕೂ ಅತಿಶಯ ಸುಖವು ಲಭಿಸುತ್ತದೆ.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ತದಿನ್ನ್ವಸ್ಯ ವೃಷಭಸ್ಯ ಧೇನೋ-ರಾ ನಾಮಭಿರ್ಮಮಿರೇ ಸಕ್ಮ್ಯಂ ಗೋಃ ।**
**ಅನ್ಯದನ್ಯದಸುರ್ಯ(ಅಂ)ಗ್ಂ ವಸಾನಾ ನಿ ಮಾಯಿನೋ ಮಮಿರೇ ರೂಪಮಸ್ಮಿನ್ ॥೭॥**

**ಪದಾರ್ಥ:-** [ಅಸ್ಯ] [ವೃಷಭಸ್ಯ] ಈ ಬಲಿಷ್ಠ ಮನುಷ್ಯನ [ಧೇನೋಃ] ನುಡಿಯ [ನಾಮಭಿಃ] ಹೆಸರುಗಳಿಂದ [ನು] [ಆ, ಮಿಮಿರೇ] ಬೇಗ ಬೇಗನೇ ಅಳೆಯುವವರಾಗಿರಿ. [ತತ್] ಅದನ್ನು [ಸಮ್ಯಕ್] ಸಂಯೋಜನೆಗೊಳಿಸುವುದರ ಮೂಲಕ ಉತ್ಪನ್ನವಾದ [ಗೋಃ] ಮಾತಿನಿಂದ [ಅನ್ಯದನ್ಯತ್] ಪ್ರತ್ಯೇಕ ಪ್ರತ್ಯೇಕವಾಗಿರುವ [ಅಸುರ್ಯಂ] ಮೇಘದ ಸ್ವತ್ತನ್ನು [ವಸಾನಾಃ] ಮರೆ ಮಾಡುತ್ತಾ [ಮಾಯಿನಃ] ಬುದ್ಧಿವಂತರಿರುವ [ಅಸ್ಮಿನ್] ಈ ರಾಜ್ಯದಲ್ಲಿ [ರೂಪಂ] ಸೌಂದರ್ಯವನ್ನು [ನೀ, ಮಮಿರೇ] ಉತ್ಪಾದಿಸುತ್ತಾರೆ. [ಇತ್] ಅವರೇ ಶಾಸನ ಮಾಡಲು ಅರ್ಹರು.

**ಭಾವಾರ್ಥ:-** ಯಾವ ರಾಜನು ತನ್ನ ರಾಜ್ಯವನ್ನು ಮೃದುವಚನಗಳಿಂದ ಪಾಲನೆ ಮಾಡುತ್ತಾನೋ, ಅವನು ಮೋಡದಿಂದ ಮಳೆಗರೆಯುವ ರೀತಿಯಲ್ಲಿ ಬಹುವಿಧವಾದ ಸಂಪತ್ತನ್ನು ಪಡೆಯುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತದಿನ್ನ್ವಸ್ಯ ಸವಿತುರ್ನಕಿರ್ಮೇ ಹಿರಣ್ಯಯೀಮಮತಿಂ ಯಾಮಶಿಶ್ರೇತ್ ।**
**ಆ ಸುಷ್ಟುತೀ ರೋದಸೀ ವಿಶ್ವಮಿನ್ವೇ ಅಪೀವ ಯೋಷಾ ಜನಿಮಾನಿ ವವ್ರೇ ॥೮॥**

**ಪದಾರ್ಥ:-** [ಅಸ್ಯ] [ಸವಿತುಃ] ಈ ಸೂರ್ಯನಿಗೆ ಸದೃಶವಾದ [ಯಾಂ] [ಹಿರಣ್ಯಯೀಂ] ಯಾವ ಸುವರ್ಣಾದಿ ರತ್ನಮಯವಾದ [ಅಮತೀಂ] ಶೋಭಾಯಮಾನವಾದ ರಾಜ್ಯ ಲಕ್ಷ್ಮೀಯನ್ನು [ಯೋಷಾ] [ಅಪೀವ] ಸ್ತ್ರೀಯು ಸಂಗ್ರಹಿಸುವ ರೀತಿಯಲ್ಲಿ [ಜನಿಮಾನಿ] ಜನ್ಮಗಳನ್ನು [ವಾರೇ] ಸ್ವೀಕರಿಸುವಳು. [ಸುಷ್ಟುತೀ] ಉತ್ತಮ ಪ್ರಶಂಸೆಯಿಂದ [ವಿಶ್ವಮಿನ್ವೇ] ಸರ್ವತ್ರ ವ್ಯಾಪಕವಾದ [ರೋದಸೀ] ಬೆಳಕು ಭೂಮಿಗೆ ಸಮಾನವಾದ ರಾಜ ಪ್ರಜೆಗಳ ವ್ಯವಹಾರಗಳನ್ನು [ನು] ನಿಶ್ಚಯವಾಗಿ [ಆ, ಅಶಿಶ್ರೇತ್] ಆಶ್ರಯಿಸಬೇಕು. [ತತ್] [ಇತ್] ಅದೇನೆಯೇ [ಮೇ] ನನಗೆ ಹಿತವೂ [ನಕಿಃ] ಬೇರೆಯದಲ್ಲ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಚಂದ್ರಾದಿ ಲೋಕಗಳು ಸೂರ್ಯನನ್ನು ಆಶ್ರಯಿಸಿ ಹೇಗೆ ಪ್ರಕಾಶಮಾನವಾಗುತ್ತವೆಯೋ, ಹಾಗೆಯೇ ಸ್ತ್ರೀಯು ತನಗೆ ಪ್ರಿಯನೂ, ಉತ್ತಮ ಲಕ್ಷಣವಂತನೂ ಆದ ಪತಿಯನ್ನು ಪಡೆದು ತನ್ನ ಸಂತಾನಗಳೊಂದಿಗೆ ಸುಶೋಭಿತಳಾಗುತ್ತಾಳೆ. ಅದೇ ರೀತಿ ಭೂಮಿಯನ್ನು ಉತ್ತಮ ರೀತಿಯಲ್ಲಿ ಶಾಸನ ಮಾಡುವುದರ ಮೂಲಕ ರಾಜರು ಅದರ ದುಃಖನಾಶಗೊಳಿಸಿ ಯಾವಾಗಲೂ ಸಂತೋಷದಲ್ಲಿರಿಸಬೇಕು.

ಈ ಮಂತ್ರದಲ್ಲಿ ರಾಜ ಪ್ರಜೆಗಳು ಪರಸ್ಪರ ಸಹಕಾರ ಭಾವದಿಂದಿರಬೇಕು ಎಂಬುದನ್ನು ತಿಳಿಸಿದೆ.

**ಯುವಂ ಪ್ರತ್ನಸ್ಯ ಸಾಧಥೋ ಮಹೋ ಯ-ದ್ದೈವೀ ಸ್ವಸ್ತಿಃ ಪರಿ ಣಃ ಸ್ಯಾತಮ್ ।**
**ಗೋಪಾಜಿಹ್ವಸ್ಯ ತಸ್ಥುಷೋ ವಿರೂಪಾ ವಿಶ್ವೇ ಪಶ್ಯಂತಿ ಮಾಯಿನಃ ಕೃತಾನಿ ॥೯॥**

**ಪದಾರ್ಥ:-** **[ಯುವಂ]** ರಾಜ ಪ್ರಜೆಗಳೇ! ನೀವಿಬ್ಬರೂ **[ವಿಶ್ವೇ]** ಸಮಗ್ರ **[ಮಾಯಿನಃ]** ಉತ್ತಮ ಬುದ್ಧಿವಂತರೂ **[ತಸ್ಥುಷಃ]** ಸ್ಥಿರ ಪುರುಷರಿಂದ **[ಕೃತಾನಿ]** ತಯಾರಿಸಲಾದ **[ವಿರೂಪ]** ಬಹುವಿಧ ರೂಪ ಪದಾರ್ಥಗಳನ್ನು **[ಪಶ್ಯಂತಿ]** ನೋಡುತ್ತೀರಿ. **[ಪ್ರತ್ನಸ್ಯ]** ಪ್ರಾಚೀನವಾದ **[ಗೋಪಾಜಿಹ್ವಸ್ಯ]** ಗೌಪ್ಯವನ್ನು ರಕ್ಷಿಸುವಂತಹ ನಾಲಿಗೆ ಇರುವವನ **[ಯತ]** ಯಾವುದು **[ಮಹಾಃ]** ಮಹಿಮಾನ್ವಿತ **[ದೈವೀ]** ದೇವತೆಗಳಿಗೆ ಸಂಬಂಧಿಸಿದ **[ಸ್ವಸ್ತಿಃ]** ಶಾಂತಿ ಇದೆಯೋ ಅದನ್ನು **[ನಃ]** ನಮ್ಮೆಲ್ಲರಿಗೆ **[ಪರಿ, ಸಾಧಥಃ]** ಲಭಿಸುವಂತೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಬುದ್ಧಿವಂತರಾದ ಶಿಲ್ಪಿಗಳು ಹೇಗೆ ಬಹುವಿಧ ರೂಪಗಳನ್ನು ಹೊಂದಿರುವ ವಸ್ತುಗಳನ್ನು ತಯಾರಿಸಿ ಎಲ್ಲರನ್ನೂ ರಂಜಿಸುತ್ತಾರೋ, ಹಾಗೆಯೇ ರಾಜ ಮತ್ತು ಅವನ ಅಧಿಕಾರ ವರ್ಗದವರು ತನ್ನ ಪ್ರಜೆಗಳಿಗೆ ಆರೋಗ್ಯ ಸ್ಥಿರ ಚಿತ್ತ ಲಭಿಸುವ ರೀತಿಯಲ್ಲಿ ಕಾರ್ಯವನ್ನು ಕೈಗೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೧೦॥**

**ಪದಾರ್ಥ:-** **[ಊತಯೇ]** ರಕ್ಷಣೆಗಾಗಿ **[ಸಮತ್ಸು]** ಸಂಗ್ರಾಮದಲ್ಲಿ **[ಘ್ನಂತಂ]** ನಾಶ ಮಾಡುವ **[ಉಗ್ರಂ]** ಕಠೋರ ಸ್ವಭಾವದ **[ಧನಾನಾಂ]** ದ್ರವ್ಯಗಳ **[ಸಂಜಿತಂ]** ಉತ್ತಮ ರೀತಿಯಲ್ಲಿ ಶತ್ರುಗಳನ್ನು ಜಯಿಸುವಂತಹ **[ವೃತ್ರಾಣಿ]** ಸುವರ್ಣಾದಿ ಧನಗಳನ್ನು **[ಶೃಣ್ವಂತಂ]** ಆಲೈಸುವವನನ್ನು **[ಅಸ್ಮಿನ್]** ಈ ವ್ಯವಹಾರದಲ್ಲಿ **[ವಾಜಸಾತೌ]** ಧನ ಅನ್ನಾದಿಗಳ ವಿಭಾಗ ಮಾಡುವವನು **[ಭರೇ]** ಸಂಗ್ರಾಮದಲ್ಲಿ **[ನೃತಮಂ]** ಶ್ರೇಷ್ಠನಾದ **[ಮಘವಾನಂ]** ಐಶ್ವರ್ಯ ಸಂಪನ್ನನಾದ **[ಇಂದ್ರಂ]** ಶತ್ರುಗಳನ್ನು ನಾಶ ಮಾಡುವಂತಹ ರಾಜನನ್ನು **[ಹುವೇಮ]** ಕರೆಯೋಣ. ಅವನ ಸಹಕಾರದಿಂದ **[ಶುನಂ]** ಸುಖವನ್ನು ಜಯವನ್ನೂ ಪಡೆಯೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಪ್ರಮುಖ ವ್ಯಕ್ತಿಗಳನ್ನು, ರಾಜವಿದ್ಯೆಯಲ್ಲಿ ಚತುರರನ್ನು, ಶೂರರಾದ ಸೈನಿಕರನ್ನು, ನ್ಯಾಯಾಧೀಶರನ್ನು, ವಾದಮಾಡುವ ವಕೀಲರನ್ನು, ಸೇವೆ ಮಾಡುವ ಸೇವಕರನ್ನು ಗೌರವಪೂರ್ವಕವಾಗಿ ರಾಜ್ಯಾಂಗದಲ್ಲಿ ನೇಮಿಸಿಕೊಳ್ಳುತ್ತಾನೋ, ಅವನು ಯಾವಾಗಲೂ ವಿಜಯಶೀಲನೂ, ಕೀರ್ತಿವಂತನೂ, ಐಶ್ವರ್ಯಸಂಪನ್ನನೂ ಆಗುತ್ತಾನೆ.

ಈ ಸೂಕ್ತದಲ್ಲಿ ವಿದ್ಯಾವಂತರು ಶಿಲ್ಪಿ, ರಾಜಸಭೆ, ಪ್ರಜೆ, ಭೂಮಿ ಮುಂತಾದ ಗುಣಗಳು ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮುವತ್ತೆಂಟನೆಯ ಸೂಕ್ತ ಸಮಾಪ್ತ**

## ಚತುರ್ಥೋऽನುವಾಕಃ (೩೯-೫೩)

### ಸೂಕ್ತ ೩೯

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೯ ವಿರಾಟ್ತ್ರಿಷ್ಟುಪ್, ೨, ೩ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೭, ೮ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯ ಹೇಳಿದೆ.

**ಇಂದ್ರಂ ಮತಿರ್ಹೃದ ಆ ವಚ್ಯಮಾನಾ-ಚ್ಛಾ ಪತಿಂ ಸ್ತೋಮತಷ್ಟಾ ಜಿಗಾತಿ ।**
**ಯಾ ಜಾಗೃವಿರ್ವಿದಥೇ ಶಸ್ಯಮಾನೇ-ಂದ್ರ ಯತ್ತೇ ಜಾಯತೇ ವಿದ್ಧಿ ತಸ್ಯ ॥೧॥**

**ಪದಾರ್ಥ:-** [ಇಂದ್ರ] ಐಶ್ವರ್ಯವಂತನೇ! [ಯಾ] ಯಾವುದು [ವಚ್ಯಮಾನಾ] ಹೇಳಲಾಗಿರುವ [ವಿದಥೇ] ವಿಜ್ಞಾನದಲ್ಲಿ [ಜಾಗೃವಿಃ] ಎಚ್ಚರವಾಗಿರುವ / ವಿಜ್ಞಾನದಲ್ಲಿ [ಶಸ್ಯಮಾನಾ] ಸ್ತವನಗಳಿಂದ ಕೂಡಿದ [ಸ್ತೋಮತಷ್ಟಾ] ಸ್ತುತಿ ವಿಸ್ತಾರಗೊಂಡ [ಮತಿಃ] ಬುದ್ಧಿಯು [ಹೃದಃ] ಹೃದಯದಿಂದ [ಇಂದ್ರಂ] ಸುಖದ [ಪತಿಂ] ಪಾಲನೆ ಮಾಡುವವನ [ಅಚ್ಛ] ಉತ್ತಮ ರೀತಿಯಿಂದ [ಆ, ಜಿಗಾತಿ] ಉತ್ತಮವಾಗಿ ಪ್ರಶಂಸೆ ಮಾಡುತ್ತಾಳೆ. [ಯತ್] ಯಾವ ಬುದ್ಧಿಯು [ತೇ] ನಿನಗೆ [ಜಾಯತೇ] ಉಂಟಾಗುತ್ತದೆಯೋ ಆ ಬುದ್ಧಿಯಿಂದ [ತಸ್ಯ] ಆ ಪಾಲಕನಾದ ಉತ್ತಮ ಗುಣಕರ್ಮ ಸ್ವಭಾವದವನನ್ನು [ವಿದ್ಧಿ] ತಿಳಿದುಕೋ.

**ಭಾವಾರ್ಥ:-** ಯಾರ ಹೃದಯದಲ್ಲಿ ಯಥಾರ್ಥ ಜ್ಞಾನ ಉಂಟಾಗುತ್ತದೆಯೋ, ಅವನು ಎಲ್ಲರ ಗುಣ-ದೋಷಗಳನ್ನು ತಿಳಿದುಕೊಂಡು ಗುಣ ಗ್ರಹಣ ಮಾಡಿ, ದೋಷ ತ್ಯಾಗ ಮಾಡಿ ಗುಣಗಳ ಪ್ರಶಂಸೆ ದೋಷಗಳ ನಿಂದೆ ಮಾಡಿ ಉತ್ತಮ ಕರ್ಮಗಳನ್ನು ಮಾಡಬೇಕು. ಹೀಗೆ ಮಾಡಿದರೆ ಈ ಜಗತ್ತಿನಲ್ಲಿ ಪ್ರಶಂಸೆಗೊಳಗಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಿವಶ್ಚಿದಾ ಪೂರ್ವ್ಯಾ ಜಾಯಮಾನಾ ವಿ ಜಾಗೃವಿರ್ವಿದಥೇ ಶಸ್ಯಮಾನಾ ।**
**ಭದ್ರಾ ವಸ್ತ್ರಾಣ್ಯರ್ಜುನಾ ವಸಾನಾ ಸೇಯಮಸ್ಮೇ ಸನಜಾ ಪಿತ್ರ್ಯಾ ಧೀಃ ॥೨॥**

**ಪದಾರ್ಥ:-** [ಅಸ್ಮೇ] ನಮ್ಮವರಲ್ಲಿ [ದಿವಃ] ವಿಜ್ಞಾನದ ಬೆಳಕಿನಿಂದ [ಜಾಯಮಾನಾ] ಉತ್ಪನ್ನವಾದ [ಪೂರ್ವ್ಯಾ] ಪ್ರಾಚೀನ ವಿದ್ವಾಂಸರಿಂದ ಸಿದ್ಧವಾದ [ವಿದಥೇ] ವಿಜ್ಞಾನ ಬೆಳೆಸುವಂತಹ ವ್ಯವಹಾರದಲ್ಲಿ [ಜಾಗೃವಿ] ಎಚ್ಚರವಾಗಿರುವವಳು [ಶಸ್ಯಮಾನಾ] ಸ್ತುತಿಮಾಡುವವಳಾಗಿ [ಭದ್ರಾ] ಕಲ್ಯಾಣಕಾರಕ [ಅರ್ಜುನಾ] ಸುಂದರ ರೂಪಯುಕ್ತ [ವಸ್ತ್ರಾಣಿ] ವಸ್ತ್ರಗಳನ್ನು [ವಸಾನಾ] ಧರಿಸಿರುವ ಸ್ತ್ರೀಯಂತೆ [ಸನಜಾ] ವಿಭಜನೆಯಿಂದ ಪ್ರಸಿದ್ಧನಾದ [ಪಿತ್ರ್ಯಾ] ಹಿಂದಿನವರಲ್ಲಿ ಪ್ರಸಿದ್ಧವಾದ [ಧೀಃ] ಬುದ್ಧಿಯು [ವಿ] ವಿಶೇಷರೀತಿಯಿಂದ ಉತ್ಪನ್ನವಾಗಿ [ಸಾ] [ಇಯಂ] ಅಂತಹ ಈ ಬುದ್ಧಿಯು [ಚಿತ್] [ಆ] ಇನ್ನೂ ಉತ್ಕೃಷ್ಟಗೊಳ್ಳುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ತನ್ನಂತೆಯೇ ಬೇರೆಯವರನ್ನು ಬುದ್ಧಿವಂತರಾಗಿಸುವ ಪ್ರಯತ್ನದಲ್ಲಿ ತೊಡಗುವವರೋ ಅವರು ಶ್ರೇಷ್ಠ ಪುರುಷರೆನಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।**

**ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ ತಪುಷೋ ಬುಧ್ನ ಏತಾ ॥೩॥**

**ಪದಾರ್ಥ:-** [**ಯಮಸೂಃ**] ಸೂರ್ಯನನ್ನು ಉತ್ಪಾದನೆ ಮಾಡುವವಳು [**ಚಿತ್**] ಅಥವಾ [**ಅತ್ರ**] ಈ ಜಗತ್ತಿನಲ್ಲಿ [**ಯಮಾ**] ಸಹಚಾರಿಯಾಗಿ [**ಮಿಥುನಾ**] ಪರಸ್ಪರ ಸೇರಿದವರಾಗಿ [**ತಮಾಹನಾ**] ಅಂಧಕಾರವನ್ನು ನಾಶಗೊಳಿಸುವವನು [**ತಪುಷಃ**] ಸೂರ್ಯನು ತಪಿಸುವಂತಹ [**ಬುಧ್ನೇ**] ಜಲಸಂಗ್ರಹವಾಗುವಂತಹ ಅಂತರಿಕ್ಷದಲ್ಲಿ [**ಏತಾ**] ವರ್ತಮಾನರಾದ ಸೂರ್ಯ-ಚಂದ್ರರನ್ನು [**ಅಸೂತ**] ಉತ್ಪಾದನೆ ಮಾಡುವಳು. [**ಜಿಹ್ವಾಯಾಃ**] ನಾಲಿಗೆಯ [**ಅಗ್ರಂ**] ಅಗ್ರಭಾಗವನ್ನು [**ಹಿ**] ಯಾವ ಕಾರಣದಿಂದ [**ಪತತ್**] ಪಡೆಯುವಳೋ [**ಜಾತಾ**] ಉತ್ಪನ್ನಳಾಗಿ [**ವಪೂಂಷಿ**] ರೂಪ ಪಡೆದು [**ಆ, ಅಸ್ಥಾತ್**] ನೆಲೆಗೊಳ್ಳುವಳು. [**ಸೇಚತೇ**] ಅಂತರಿಕ್ಷದಲ್ಲಿ ಜಲವನ್ನು ಸುರಿಸುವಳೋ [ಏದ್ಧಿ] ಅವಳನ್ನು ತಿಳಿದುಕೊಳ್ಳಿರಿ.

**ಭಾವಾರ್ಥ:-** ಮನುಷ್ಯರೇ! ಹೇಗೆ ಸೂರ್ಯನ ಬೆಳಕನ್ನು ಮಿಂಚು ಚಂದ್ರನ ಬೆಳಕನ್ನು ಸೂರ್ಯನೂ ಅಂಧಕಾರವನ್ನು ಪ್ರಕಾಶವೂ ನಾಶ ಮಾಡುತ್ತವೆಯೋ ಹಾಗೆ ನೀವೂ ಪರಸ್ಪರರಿಗೆ ಅನೂಕೂಲಕರರಾಗಿ ಉತ್ತಮ ಕಾರ್ಯಗಳಲ್ಲಿ ತತ್ಪರರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಕಿರೇಷಾಂ ನಿಂದಿತಾ ಮರ್ತ್ಯೇಷು ಯೇ ಅಸ್ಮಾಕಂ ಪಿತರೋ ಗೋಷು ಯೋಧಾಃ ।**

**ಇಂದ್ರ ಏಷಾಂ ದೃಂಹಿತಾ ಮಾಹಿನಾವಾ-ನುದ್ಗೋತ್ರಾಣಿ ಸಸೃಜೇ ದಂಸನಾವಾನ್ ॥೪॥**

**ಪದಾರ್ಥ:-** [**ಇಂದ್ರ**] ಸೂರ್ಯನಂತಿರುವ [**ಯೇ**] ಯಾರು [**ಅಸ್ಮಾಕಂ**] ನಮ್ಮ [**ಗೋಷು**] ಭೂಮಿಯಲ್ಲಿ ಮತ್ತು [**ಮರ್ತ್ಯಷು**] ಮನುಷ್ಯರಲ್ಲಿ [**ಯೇಧಾಃ**] ಯೋಧರಿರುವರೋ ಅವರು [**ಪಿತರಃ**] ಪಾಲಕರೋ [**ಏಷಾಂ**] ಈ ಜನರ [**ದೃಂಹಿತಾ**] ವೃದ್ಧಿಪಡಿಸುವವನು [**ಮಹಿಮಾವಾನ್**] ಮಹಿಮೆಯನ್ನು ಪಡೆದವನು ಮತ್ತು [**ದಂಶನಾವಾನ್**] ಉತ್ತಮ ಕರ್ಮಗಳಿಂದ ಯುಕ್ತನಾದವನು [**ಗೋತ್ರಾಣಿ**] ವಂಶಗಳನ್ನು [**ಉತ್, ಸಸೃಜೇ**] ಉತ್ಪನ್ನಗೊಳಿಸುತ್ತಾನೋ ಅವನನ್ನು ಸೇವಿಸಿರಿ. [**ಏಷಾಂ**] ಈ ಜನರನ್ನು [**ನಿಂದಿತಾ**] ನಿಂದಿಸುವವರು [**ನಕಿಃ**] ಆಗಬೇಡಿರಿ.

**ಭಾವಾರ್ಥ:-** ಮನುಷ್ಯರು ಎಂತಹ ಕಾರ್ಯದಲ್ಲಿ ಪ್ರವೃತ್ತರಾಗಬೇಕೆಂದರೆ, ಯಾವುದರಿಂದ ತಮ್ಮನ್ನು ಯಾರೂ ನಿಂದಿಸಲಾರರೋ ಮತ್ತು ಯಾವುದರಿಂದ ತಾವು ಮತ್ತೊಬ್ಬರ ಪ್ರಶಂಸೆ ಮಾಡುವವರು ಆಗುವರೋ, ಹೇಗೆ ಸೂರ್ಯನು ಸಂಪೂರ್ಣ ಜಗತ್ತಿನ ಪಾಲನೆ ಮಾಡುವನೋ, ಹಾಗೆ ತಮ್ಮನ್ನು ರಕ್ಷಣೆ ಮಾಡುವಂತಹ ಪಿತೃವರ್ಗದವರ ಸೇವೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಖಾ ಹ ಯತ್ರ ಸಖಿಭಿರ್ನವಗ್ವೈ-ರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।**

**ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಮ್ ॥೫॥**

**ಪದಾರ್ಥ:-** **[ಯತ್ರ]** ಯಾವ ಸ್ಥಳದಲ್ಲಿ **[ನವಗ್ವೈಃ]** ಹೊಸಗತಿಗಳಲ್ಲಿ **[ಸಖಿಭಿಃ]** ಸ್ನೇಹಿತರೊಂದಿಗೆ **[ಅಭಿಜ್ಞು]** ಅಭಿಮುಖವಾದ ಜಂಘಾಬಲದಿಂದ ಯುಕ್ತನಾದ **[ಸಖಾ]** ಮಿತ್ರನು **[ಸತ್ವಭಿಃ]** ಪದಾರ್ಥಗಳೊಂದಿಗೆ **[ಹ]** ನಿಶ್ಚಯವಾಗಿ **[ಗಾಃ]** ಸುಶಿಕ್ಷಿತ ವಾಣಿ/ ಭೂಮಿಯ **[ಆ ಅನುಗ್ಮನ್]** ಅನುಕೂಲಕರವಾಗಿ ಪಡೆದವನು **[ಸತ್ಯಂ]** ಶ್ರೇಷ್ಠವ್ಯವಹಾರಗಳಲ್ಲಿ **[ದಶಗ್ವೈಃ]** ಹತ್ತು ವಿಧಗತಿಗಳೊಂದಿಗೆ **[ದಶಭಿಃ]** ಹತ್ತು ವಿಧ ಗಾಳಿಗಳೊಂದಿಗೆ **[ಇಂದ್ರಃ]** ವಿದ್ಯುತ್ತು/ಮಿಂಚು **[ತಮಸೀ]** ರಾತ್ರಿಯಲ್ಲಿ **[ಕ್ಷಿಯಂತಮ್]** ತನ್ನ ಕೆಲಸವನ್ನು ಮಾಡುವುದಿಲ್ಲ. **[ಸೂರ್ಯಂ]** ಸೂರ್ಯನನ್ನು **[ವಿವೇದ]** ಸೇರಿಕೊಂಡಿರುತ್ತದೆ. **[ತತ್]** ಅದನ್ನು ತಿಳಿದು ಜನರು ಅದರ ಅನುಕರಣೆ ಮಾಡಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮಿತ್ರನಂತಿರುವ ಗಾಳಿಯು ಮಿಂಚು ಎಂಬ ಅಗ್ನಿಯನ್ನು ಅಂಧಕಾರದಲ್ಲಿ ಸೂರ್ಯನ ಕಾರ್ಯವೆಸಗುವಂತೆ ಮಾಡಿ ಎಲ್ಲರಿಗೂ ಬೆಳಕು ನೀಡಿ ಆನಂದ ಗೊಳಿಸುವುದೋ ಹಾಗೆ ಧಾರ್ಮಿಕರಾದ ಮಿತ್ರರೊಂದೊಡಗೂಡಿ ಶುದ್ಧಾಂತಃಕರಣಗಳಾದ ವಿದ್ಯಾವಂತರು ವಿದ್ಯೆ ಎಂಬ ಬೆಳಕಿನಿಂದ ಅವಿದ್ಯೆ ಎಂಬ ಅಂಧಕಾರವನ್ನು ನಿವಾರಿಸಿ ಆತ್ಮಜ್ಞಾನವೆಂಬ ಆನಂದವನ್ನು ಕೊಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರೋ ಮಧು ಸಂಭೃತಮುಸ್ರಿಯಾಯಾಂ ಪದ್ವದ್ವಿವೇದ ಶಫವನ್ನಮೇ ಗೋಃ ।**
**ಗುಹಾ ಹಿತಂ ಗುಹ್ಯಂ ಗೂಳ್ಹಮಪ್ಸು ಹಸ್ತೇ ದಧೇ ದಕ್ಷಿಣೇ ದಕ್ಷಿಣಾವಾನ್ ॥೬॥**

**ಪದಾರ್ಥ:-** **[ಇಂದ್ರಃ]** ಮಿಂಚಿಗೆ ಸಮಾನನಾದ ಮನುಷ್ಯನು **[ಉಸ್ರಿಯಾಯಾಮ್]** ಭೂಮಿಯಲ್ಲಿ **[ಪದ್ವತ್]** ಕಾಲುಗಳ **[ಶಫವತ್]** ಗೊರಸುಗಳಿಗೆ ಸಮಾನವಾದ **[ಮಧು]** ಮಧುರಾದಿ ರಸಗಳನ್ನು **[ಸಂಭೃತಮ್]** ಸಂಗ್ರಹಿಸಿರುವವನನ್ನು **[ನಮೇ]** ಸ್ವೀಕರಿಸಬೇಕು. **[ವಿವೇದ]** ಅವನನ್ನು ತಿಳಿದುಕೊಳ್ಳಬೇಕು. **[ಗೋಃ]** ವಾಣಿಯ **[ಗುಹಾ]** ಬುದ್ಧಿಯಲ್ಲಿ **[ಹಿತಂ]** ಇರುವ **[ಅಪ್ಸು]** ಪ್ರಾಣಗಳಲ್ಲಿ/ನೀರುಗಳಲ್ಲಿ **[ಗುಹ್ಯಂ]** ಗುಪ್ತವಾಗಿರುವ **[ಗೂಢಂ]** ಮರೆಯಾದ ವ್ಯವಹಾರಗಳನ್ನು **[ದಕ್ಷಿಣಾವಾನ್]** ದಕ್ಷಿಣೆಯನ್ನು ಸ್ವೀಕರಿಸುವವನಂತೆ **[ದಕ್ಷಿಣೇ]** **[ಹಸ್ತೇ]** ಬಲಗೈಯಲ್ಲಿ **[ದಧೇ]** ಧಾರಣ ಮಾಡಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಮನುಷ್ಯರು ಕಾಲುಗಳಿಂದ, ಪಶುಗಳು ಗೊರಸುಗಳಿಂದ ಚಲಿಸುವವರಾಗಿ ಹೇಗೆ ಮತ್ತೊಂದು ಸ್ಥಳಗಳನ್ನು ಸೇರುತ್ತಾರೆಯೋ ಅದೇರೀತಿ ಶರೀರದ ಒಳಭಾಗದಲ್ಲೂ ಹೊರ ಭಾಗದಲ್ಲಿ ಇರುವ ಮಿಂಚನ್ನು ವಿದ್ಯಾವಂತರು ಕೈಗೆಟಕುವ ದಕ್ಷಿಣೆ ರೀತಿಯಲ್ಲಿ ತಿಳಿದುಕೊಂಡು ತನ್ನ ಹೃದಯದಲ್ಲಿರುವ ಪರಮಾತ್ಮನನ್ನು ಹೊರಗಿರುವ ಸೂರ್ಯನನ್ನು ತಿಳಿದುಕೊಂಡು ಅವರಿಬ್ಬರ ಸಹಕಾರದೊಂದಿಗೆ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥವನ್ನು ಪಡೆದುಕೊಳ್ಳುತ್ತಾರೆ.

ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಿದೆ.

**ಜ್ಯೋತಿರ್ವೃಣೀತ ತಮಸೋ ವಿಜಾನ-ನ್ನಾರೇ ಸ್ಯಾಮ ದುರಿತಾದಭೀಕೇ ।**
**ಇಮಾ ಗಿರಃ ಸೋಮಪಾಃ ಸೋಮವೃದ್ಧ ಜುಷಸ್ವೇಂದ್ರ ಪುರುತಮಸ್ಯ ಕಾರೋಃ ॥೭॥**

**ಪದಾರ್ಥ:-** **[ಸೋಮ ವೃದ್ಧ]** ವಿದ್ಯೆ ಎಂಬ ಸಂಪತ್ತಿನಿಂದ ಹಿರಿಯನೆನಿಸಿಕೊಂಡವನು **[ಇಂದ್ರ]** ಅತ್ಯೈಶ್ವರ್ಯ ಸಂಪನ್ನನೂ **[ಸೋಮಪಾಃ]** ಐಶ್ವರ್ಯದ ರಕ್ಷಕನೂ ಆದ ನೀನು **[ಪುರುತಮಸ್ಯ]** ಬಹಳಷ್ಟು ವಿದ್ಯೆಯನ್ನು

ಅರಿತಿರುವ **[ಕಾರೋಃ]** ಶಿಲ್ಪಿ ಜನರ **[ಇಮಾಃ]** **[ಗಿರಃ]** ಈ ಮಾತುಗಳನ್ನು **[ಜುಷಸ್ವ]** ಸೇವಿಸುವವನಾಗು. **[ದ್ವಿಜಾನನ್]** ವಿಶೇಷ ರೀತಿಯಲ್ಲಿ ಅದನ್ನು ತಿಳಿದುಕೊಂಡು **[ಆರೇ]** ನಮ್ಮಿಂದ ದೂರವಿರುವ **[ಅಭೀಕೇ]** ಮತ್ತು ಸಮೀಪದಲ್ಲಿರುವ ಸ್ಥಳದಲ್ಲಿ **[ದುರಿತಾತ್]** ದುಷ್ಟ ಆಚರಣೆಯಿಂದ ಪ್ರತ್ಯೇಕವಾದ ಶ್ರೇಷ್ಠಾಚರಣೆಯನ್ನು **[ತಮಸಃ]** ಅಂಧಕಾರದಿಂದ ಪ್ರತ್ಯೇಕವಾದ **[ಜ್ಯೋತಿಃ]** ವಿದ್ಯೆಯಿಂದ ಬೆಳಕಿನಂತೆ **[ವೃಣೀತ]** ನಮ್ಮನ್ನು ಸ್ವೀಕರಿಸು. ನಿನ್ನ ಉಪದೇಶವನ್ನು ಕೇಳಿ ನಾವೂ ವಿದ್ಯಾವಂತರಾಗುತ್ತೇವೆ.

**ಭಾವಾರ್ಥ:-** ಮನುಷ್ಯರೇ! ನೀವೆಲ್ಲರೂ ದುರಾಚಾರದಿಂದ ದೂರವಿದ್ದು ಧರ್ಮಾಚರಣೆ ಮಾಡಿ ಅವಿದ್ಯೆಯಿಂದ ದೂರವಾಗಿ ವಿದ್ಯಾಗ್ರಹಣ ಮಾಡಿರಿ. ಆತ್ಮಕ್ಕೆ ಸಂಬಂಧಿಸಿದ ಜ್ಞಾನ ಪಡೆದು ಶಿಲ್ಪ ಕ್ರಿಯಾ ಕೌಶಲ/ತಂತ್ರಜ್ಞಾನವನ್ನು ಸೇವಿಸುವವರಾಗಿರಿ. ನಾವೂ ಸಹ ನಿಮ್ಮಿಂದ ಅಂತಹ ವಿದ್ಯೆಯನ್ನು ಕಲಿತು ಯಾವಾಗಲೂ ನಿಮ್ಮ ಸ್ನೇಹವನ್ನು ಬಿಡಲಾರೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಜ್ಯೋತಿರ್ಯಜ್ಞಾಯ ರೋದಸೀ ಅನು ಷ್ಯಾ-ದಾರೇ ಸ್ಯಾಮ ದುರಿತಸ್ಯ ಭೂರೇಃ ।**
**ಭೂರಿ ಚಿದ್ಧಿ ತುಜತೋ ಮರ್ತ್ಯಸ್ಯ ಸುಪಾರಾಸೋ ವಸವೋ ಬರ್ಹಣಾವತ್ ॥೮॥**

**ಪದಾರ್ಥ:-** **[ಸುಪಾರಾಸಃ]** ವಿದ್ಯಾಸಾಗರವನ್ನು ಪಾರು ಮಾಡಿದವರು **[ವಸವಃ]** ವಿದ್ಯೆಯಲ್ಲೇ ನೆಲೆಸಿದವರು **[ಯಜ್ಞಾಯ]** ವಿದ್ಯಾವಂತರ ಸತ್ಕಾರ ರೂಪ ಅನುಷ್ಠಾನಕ್ಕೆ **[ರೋದಸೀ]** ಭೂಮಿ ಬೆಳಕುಗಳಿಗೆ ಸಮನಾಗಿ ವಿದ್ಯೆ ಮತ್ತು ನೀತಿಗಳನ್ನು **[ಆರೇ]** ದೂರದಲ್ಲಾಗಲೀ ಸಮೀಪದಲ್ಲಾಗಲೀ **[ದುರಿತಸ್ಯ]** ದುಃಖದಿಂದ ಪ್ರಾಪ್ತವಾದ **[ಭೂರೇಃ]** ಅತಿಶಯದ **[ಭೂರಿ]** **[ಚಿತ್]** ಅತಿಶಯವನ್ನೂ **[ತುಜತಃ]** ಬಲಿಷ್ಠನಾದ **[ಮರ್ತ್ಯಸ್ಯ]** ಮನುಷ್ಯನ **[ಬರ್ಹಣಾವತ್]** ಬುದ್ಧಿಕಾರಕ ಜ್ಞಾನಧನದಲ್ಲಿ ವಿದ್ಯಮಾನವಾದ **[ಜ್ಯೋತಿಃ]** ವಿಜ್ಞಾನವೆಂಬ ಬೆಳಕು **[ಸ್ಯಾತ್]** ನಮ್ಮೆಲ್ಲರಿಗೂ ಲಭಿಸಲಿ ಎಂದು ಬಯಸುತ್ತೇವೆ. **[ಅನು]** **[ಸ್ಯಾಮ]** ನಾವು ಅದನ್ನು ಹಿಂಬಾಲಿಸುವೆವು. **[ಹಿ]** ನೀವೂ ಹಾಗೆ ಮಾಡಿರಿ.

**ಭಾವಾರ್ಥ:-** ಯಾರು ದೂರದಲ್ಲಿ ಅಥವಾ ಸಮೀಪದಲ್ಲಿ ಇರುವ ಮನುಷ್ಯರಿಗೆ ಕರುಣೆಯ ಅನುಸಂಧಾನ ಮಾಡಿಸಿ ವಿದ್ಯೆಯ ಉಪದೇಶವನ್ನು ಮಾಡಿ ಕಠಿಣ ಜ್ಞಾನವೂ ಸುಲಭವಾಗಿಸಿ ಎಲ್ಲ ಜನರನ್ನು ವಿದ್ಯಾವಂತರನ್ನಾಗಿಸುತ್ತಾರೋ ಅವರೇ ಶ್ರೇಷ್ಠ ಪುರುಷರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೯॥**

**ಪದಾರ್ಥ:-** **[ಊತಯೇ]** ರಕ್ಷಣೆಗಾಗಿ **[ಸಮತ್ಸು]** ಸಂಗ್ರಾಮದಲ್ಲಿ **[ಘ್ನಂತಂ]** ನಾಶ ಮಾಡುವ **[ಉಗ್ರಂ]** ಕಠೋರ ಸ್ವಭಾವದ **[ಧನಾನಾಂ]** ದ್ರವ್ಯಗಳ **[ಸಂಜಿತಂ]** ಉತ್ತಮ ರೀತಿಯಲ್ಲಿ ಶತ್ರುಗಳನ್ನು ಜಯಿಸುವಂತಹ **[ವೃತ್ರಾಣಿ]** ಸುವರ್ಣಾದಿ ಧನಗಳನ್ನು **[ಶೃಣ್ವಂತಂ]** ಆಲೈಸುವವನನ್ನು **[ಅಸ್ಮಿನ್]** ಈ ವ್ಯವಹಾರದಲ್ಲಿ **[ವಾಜಸಾತೌ]** ಧನ ಅನ್ನಾದಿಗಳ ವಿಭಾಗ ಮಾಡುವವನು **[ಭರೇ]** ಸಂಗ್ರಾಮದಲ್ಲಿ **[ನೃತಮಂ]** ಶ್ರೇಷ್ಠನಾದ **[ಮಘವಾನಂ]** ಐಶ್ವರ್ಯ ಸಂಪನ್ನನಾದ **[ಇಂದ್ರಂ]** ಶತ್ರುಗಳನ್ನು ನಾಶ ಮಾಡುವಂತಹ ರಾಜನನ್ನು **[ಹುವೇಮ]** ಕರೆಯೋಣ. ಅವನ ಸಹಕಾರದಿಂದ **[ಶುನಂ]** ಸುಖವನ್ನು ಜಯವನ್ನೂ ಪಡೆಯೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಪ್ರಮುಖ ವ್ಯಕ್ತಿಗಳನ್ನು, ರಾಜವಿದ್ಯೆಯಲ್ಲಿ ಚತುರರನ್ನು, ಶೂರರಾದ ಸೈನಿಕರನ್ನು, ನ್ಯಾಯಾಧೀಶರನ್ನು, ವಾದಮಾಡುವ ವಕೀಲರನ್ನು, ಸೇವೆ ಮಾಡುವ ಸೇವಕರನ್ನು ಗೌರವಪೂರ್ವಕವಾಗಿ ರಾಜ್ಯಾಂಗದಲ್ಲಿ ನೇಮಿಸಿಕೊಳ್ಳುತ್ತಾನೋ ಅವನು ಯಾವಾಗಲೂ ವಿಜಯಶೀಲನೂ, ಕೀರ್ತಿವಂತನೂ, ಐಶ್ವರ್ಯಸಂಪನ್ನನೂ ಆಗುತ್ತಾನೆ.

ಈ ಸೂಕ್ತದಲ್ಲಿ ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮುವತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ॥ ಇತಿ ದ್ವಿತೀಯೋऽಧ್ಯಾಯಃ ॥

# ತೃತೀಯೋऽಧ್ಯಾಯಃ

## ಸೂಕ್ತ ೪೦

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧-೪, ೬-೯ ಗಾಯತ್ರೀ,

೫ ನಿಚೃತ್ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ರಾಜ ಮತ್ತು ಪ್ರಜೆಗಳ ವಿಷಯವನ್ನು ಹೇಳಲಾಗಿದೆ.

**ಇಂದ್ರ ತ್ವಾ ವೃಷಭಂ ವಯಂ ಸುತೇ ಸೋಮೇ ಹವಾಮಹೇ । ಸ ಪಾಹಿ ಮಧ್ವೋ ಅಂಧಸಃ ॥೧॥**

**ಪದಾರ್ಥ:-** [**ಇಂದ್ರ**] ಅತ್ಯಂತ ಐಶ್ವರ್ಯದಾಯಕನೇ! [**ವಯಂ**] ನಾವು [**ಮಧ್ವಃ**] ಮಧುರಾಧಿ ಗುಣಗಳಿಂದ ಕೂಡಿರುವ [**ಅಂಧಸಃ**] ಅನ್ನಾದಿಗಳ [**ಸುತೇ**] ಉತ್ಪನ್ನವಾದ [**ಸೋಮೇ**] ಐಶ್ವರ್ಯ / ಔಷಧಿಗಳ ಸಮೂಹದಲ್ಲಿ [**ವೃಷಭಂ**] ಬಲಿಷ್ಠನಾದ [**ತ್ವಾ**] ನಿನ್ನನ್ನು [**ಹವಾಮಹೇ**] ಆಹ್ವಾನಿಸುತ್ತೇವೆ. [**ಸಃ**] ಆ ನೀನು ನಮ್ಮನ್ನು [**ಪಾಹಿ**] ಕಾಪಾಡು.

**ಭಾವಾರ್ಥ:-** ಪ್ರಜೆಗಳು ಹೃತ್ಪೂರ್ವಕವಾಗಿ ರಾಜನನ್ನು ಗೌರವಿಸಿ ರಾಜನಿಗೆ ಸಂಪತ್ತನ್ನು ಕೊಡಬೇಕು. ರಾಜನು ಪ್ರಜೆಗಳನ್ನು ನನ್ನ ಆತ್ಮದಂತೆ ವೈದ್ಯರು ಔಷಧಿಯಿಂದ ರೋಗಿಗಳನ್ನು ರಕ್ಷಣೆ ಮಾಡುವಂತೆ ರಕ್ಷಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಕ್ರತುವಿದಂ ಸುತಂ ಸೋಮಂ ಹರ್ಯ ಪುರುಷ್ಟುತ । ಪಿಬಾ ವೃಷಸ್ವ ತಾತೃಪಿಮ್ ॥೨॥**

**ಪದಾರ್ಥ:-** [**ಪುರುಷ್ಟುತ**] ಬಹುಜನರಿಂದ ಪ್ರಶಂಸೆಗೊಳಗಾದ [**ಇಂದ್ರ**] ವಿದ್ಯೆ ಮತ್ತು ಸಂಪತ್ತು ಇವುಗಳನ್ನು ಕೊಡುವವನೇ! ನೀನು [**ತಾತೃಪಿಂ**] ಅತಿಶಯ ತೃಪ್ತಿಗೊಳಿಸಲು [**ಋತುವಿದಂ**] ಯಜ್ಞವನ್ನು ಸಿದ್ಧಿಗೊಳಿಸುವವನು. [**ಸುತಂ**] ಉತ್ತಮ ಸಂಸ್ಕಾರದಿಂದ ಜನಿಸಿರುವ [**ಸೋಮಂ**] ಔಷಧಿ ಸಮೂಹಗಳ [**ಹರ್ಯ**] ಬಯಸುವವನು. [**ಪಿಬ**] ಅದನ್ನು ಸೇವಿಸು [**ಆ, ಋಷಸ್ವ**] ಅತ್ಯಂತ ಬಲಿಷ್ಠನಾಗು.

**ಭಾವಾರ್ಥ:-** ರಾಜನೇ! ನೀನು ಬುದ್ಧಿಯನ್ನು ಹೆಚ್ಚಿಸುವಂತಹ ಆಹಾರ ಪಾನಿಯಗಳನ್ನು ಸ್ವೀಕರಿಸು, ಅದರಿಂದ ಬಲಿಷ್ಟನೂ, ಬುದ್ಧಿವಂತನೂ ಆಗಿ ನಮ್ರತೆಯನ್ನು ಬೆಳಸಿಕೊ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಪ್ರ ಣೋ ಧಿತಾವಾನಂ ಯಜ್ಞಂ ವಿಶ್ವೇಭಿರ್ದೇವೇಭಿಃ । ತಿರ ಸ್ತವಾನ ವಿಶ್ಪತೇ ॥೩॥**

**ಪದಾರ್ಥ:-** [**ವಿಶ್ಪತೇ**] ಪ್ರಜಾಪಾಲಕನಾದ [**ಸ್ತವಾನ**] ಸತ್ಯದ ಸ್ತುತಿ ಮಾಡುವವನು [**ಇಂದ್ರ**] ದುಷ್ಟರನ್ನು ಸಂಹಾರ ಮಾಡುವವನೂ ಆದ ನೀನು [**ವಿಶ್ವೇಭಿಃ**] ಸಮಗ್ರವಾದ [**ದೇವೇಭಿಃ**] ಧಾರ್ಮಿಕರೂ ಶ್ರೇಷ್ಠರೂ ಆದ ವಿದ್ಯಾವಂತರೊಂದಿಗೆ [**ನಃ**] ನಮ್ಮೆಲ್ಲರನ್ನೂ [**ಧಿತಾವಾನಂ**] ಧಾರಣೆ ಮಾಡಿದವನಾಗಿ [**ಯಜ್ಞಂ**] ವಿದ್ಯ ವಿನಯಗಳಿಂದ ಸಂಗತವಾಗುವ ಪಾಲನೆ ಮಾಡುವಂತಹ ಕೆಲಸವನ್ನು [**ಪ್ರ, ತಿರಃ**] ಸಂಪೂರ್ಣಗೊಳಿಸು. ಅಂದರೆ ಅಂತಹ ಕರ್ಮದಿಂದ ನಮ್ಮನ್ನು ದುಃಖದಿಂದ ಪಾರುಮಾಡು.

**ಭಾವಾರ್ಥ:-** ಪ್ರಜೆಗಳು ರಾಜನನ್ನು ಕುರಿತು "ನೀನು ನಮ್ಮೆಲ್ಲರ ರಕ್ಷಕನಾಗು ಎಂದು ಕೇಳಿಕೊಳ್ಳಬೇಕು." ನೀನು ನಮ್ಮೆಲ್ಲರಿಗಿಂತಲೂ ಶ್ರೇಷ್ಠನು, ಉತ್ತಮ, ಮಧ್ಯಮ, ಕನಿಷ್ಠ ಎಲ್ಲಾ ವರ್ಗದ ಕರ್ಮಚಾರಿಗಳು ನಮ್ಮೆಲ್ಲರ ರಕ್ಷಣೆಯನ್ನು ಧರ್ಮಪೂರ್ವಕವಾಗಿ ನಿರಂತರವಾಗಿ ಮಾಡಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಸೋಮಾಃ ಸುತಾ ಇಮೇ ತವ ಪ್ರ ಯಂತಿ ಸತ್ಪತೇ । ಕ್ಷಯಂ ಚಂದ್ರಾಸ ಇಂದವಃ ॥೪॥**

**ಪದಾರ್ಥ:-** [**ಸತ್ಪತೇ**] ಸಜ್ಜನರನ್ನು ರಕ್ಷಣೆ ಮಾಡುವ ಇಂದ್ರ! ಸಮಗ್ರವಾದ ಔಷಧಿ ವಿದ್ಯೆಯನ್ನು ತಿಳಿದಿರುವ ರಾಜನೇ! [**ಇಮೇ**] ಈ [**ಚಂದ್ರಾಸಃ**] ಆನಂದಕಾರಕರಾದ [**ಇಂದವಃ**] ತೇವಾಂಶಗಳಿಂದ ಕೂಡಿರುವ [**ಸುತಾಃ**] ಉತ್ತಮ ರೀತಿಯಲ್ಲಿ ಸಂಸ್ಕಾರ ಮಾಡಲಾದ [**ಸೋಮಾಃ**] ಔಷಧಿ ಆದಿ ಪದಾರ್ಥಗಳನ್ನು [**ತವ**] ನಿನ್ನ [**ಕ್ಷಯಂ**] ವಾಸಸ್ಥಳಕ್ಕೆ [**ಪ್ರ, ಯಂತಿ**] ತಲುಪಿಸಿದ್ದೇವೆ. ಅದನ್ನು ಸೇವಿಸು.

**ಭಾವಾರ್ಥ:-** ರಾಜನೇ! ನೀನು ರಾಜ್ಯದಲ್ಲಿನ ಪಡೆಯಬೇಕಾಗುವ ಭಾಗವನ್ನು ಮಾತ್ರ ಪಡೆದುಕೊಳ್ಳಬೇಕು. ಅದನ್ನು ಭೋಗಿಸಬೇಕು. ಹೆಚ್ಚು ಪಡೆಯಬಾರದು, ಕಡಿಮೆ ಮಾಡಿಕೊಳ್ಳಲೂಬಾರದು. ಹೀಗೆ ಮಾಡುವುದರಿಂದ ನಿನಗೆ ಎಂದೂ ಹಾನಿಯಾಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಧಿಷ್ವಾ ಜಠರೇ ಸುತಂ ಸೋಮಮಿಂದ್ರ ವರೇಣ್ಯಮ್ । ತವ ದ್ಯುಕ್ಷಾಸ ಇಂದವಃ ॥೫॥**

**ಪದಾರ್ಥ:-** [**ಇಂದ್ರ**] ಸಂಪೂರ್ಣ ಜೀವನಾವಧಿಯನ್ನು ಬಯಸುವವನೇ! [**ತವ**] ನಿನ್ನ [**ದ್ಯುಕ್ಷಾಸಃ**] ಆಶ್ರಯದಲ್ಲಿ ಇರಲು [**ಇಂದವಃ**] ಸ್ನೇಹ ಭಾವವಿರುವವರು ಆಗುವೆವು. ಅದರಿಂದ [**ವರೇಣ್ಯಂ**] ಭೋಗಿಸಲು ಯೋಗ್ಯವಾದ [**ಸುತಂ**] ಉತ್ತಮ ಸಂಸ್ಕಾರದಿಂದ ತಯಾರಿಸಿದ [**ಸೋಮಂ**] ಶ್ರೇಷ್ಠ ಔಷಧಿಗಳಿಂದ ತಯಾರಿಸಿದ ಅನ್ನವನ್ನು [**ಜಠರೇ**] ಉದರದಲ್ಲಿ [**ದಧಿಷ್ವ**] ಧಾರಣೆ ಮಾಡು.

**ಭಾವಾರ್ಥ:-** ರಾಜನಾದಿಯಾಗಿ ಎಲ್ಲಾ ಮನುಷ್ಯರು ಸಮಗ್ರ ಪದಾರ್ಥಗಳಲ್ಲಿನ ಭಕ್ಷಣಯೋಗ್ಯವಾದ, ಪಾನಯೋಗ್ಯವಾದ ಪದಾರ್ಥಗಳನ್ನೇ ಸೇವಿಸಬೇಕು. ಅದರಿಂದ ಬುದ್ಧಿ, ವಯಸ್ಸು ಮತ್ತು ಬಲ ಇವುಗಳು ನಿರಂತರವಾಗಿ ಹೆಚ್ಚುತ್ತವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗಿರ್ವಣಃ ಪಾಹಿ ನಃ ಸುತಂ ಮಧೋರ್ಧಾರಾಭಿರಜ್ಯಸೇ । ಇಂದ್ರ ತ್ವಾದಾತಮಿದ್ಯಶಃ ।।೬।।**

**ಪದಾರ್ಥ:-** [ಗಿರ್ವಣಃ] ಉತ್ತಮ ಮಾತುಗಳಿಂದ ಯಾಚನೆಗೊಳಗಾದ [ಇಂದ್ರ] ತೇಜಸ್ವಿಯೇ! [ತ್ವಾಧಾತಂ, ಇತ್] ನಿನ್ನಿಂದ ಗ್ರಹಣ ಮಾಡಲಾಗಿರುವ [ಯಶಃ] ರೋಗನಾಶಕ ನೀರು, ಅನ್ನ, ಧನ ಇವುಗಳಿಂದ [ಮಧೋಃ] ಮಧುರ ಗುಣಗಳಿಂದ ಕೂಡಿರುವ ವಸ್ತುವಿನ [ಧಾರಾಭಿಃ] ಪ್ರವಾಹದೊಂದಿಗೆ [ಸುತಂ] ಉತ್ಪನ್ನವಾದ [ಸೋಮಂ] ಔಷಧಿ ಗುಣವಿರುವ ಪದಾರ್ಥಗಳನ್ನು ಸೇವಿಸಿರುವ ನೀನು [ನಃ] ನಮ್ಮೆಲ್ಲರ [ಪಾಹಿ] ರಕ್ಷಣೆ ಮಾಡು.

**ಭಾವಾರ್ಥ:-** ರಾಜನೇ! ನಮ್ಮಿಂದ ನೀನು ಎಷ್ಟು ಪದಾರ್ಥಗಳನ್ನು ಲಕ್ಷಣಯೋಗ್ಯ, ಪಾನಯೋಗ್ಯವಾದುವುಗಳನ್ನು ನೀನು ಸ್ವೀಕರಿಸಿದ್ದೀಯೋ, ಆದ್ದರಿಂದ ನಮ್ಮ ರಕ್ಷಣೆ ಮಾಡುವುದು ನಿನ್ನ ಕರ್ತವ್ಯ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭಿ ದ್ಯುಮ್ನಾನಿ ವನಿನ ಇಂದ್ರಂ ಸಚಂತೇ ಅಕ್ಷಿತಾ । ಪೀತ್ವೀ ಸೋಮಸ್ಯ ವಾವೃಧೇ ।।೭।।**

**ಪದಾರ್ಥ:-** [ವನಿನಃ] ಯಾಚನೆ ಮಾಡುವ ಜನರು [ಅಕ್ಷಿತಾ] ನಾಶರಹಿತವಾದ [ದ್ಯುಮ್ನಾನಿ] ಯಶಸ್ಸಿನ [ಅಭಿ] ಸಂಮುಖವಾಗಿರುವ [ಇಂದ್ರ] ಐಶ್ವರ್ಯಕಾರಕನಾದವನ [ಸಚಂತೇ] ಸಂಬಂಧವನ್ನು ಬೆಳೆಸುತ್ತೇವೆ. [ಸೋಮಸ್ಯ] ಔಷಧಿ ರೂಪ ಸಂಪತ್ತಿನಯೋಗದಿಂದ [ಪೀತ್ವಿ] ಸೇವನೆ ಮಾಡಿ [ವಾವೃಧೇ] ವೃದ್ಧಿಪಡಿಸುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲ್ಲ ಮನುಷ್ಯರು ಧರ್ಮಯುಕ್ತ ವ್ಯವಹಾರದಿಂದ ಪುರುಷಾರ್ಥ ಸಾಧನೆಯಿಂದ, ನಾಶರಹಿತವಾದ ಸಂಪತ್ತನ್ನು ಪಡೆದುಕೊಂಡು, ನಿಯತವಾದ ಆಹಾರ ವಿಹಾರಗಳನ್ನು ಮಾಡುತ್ತ ಆರೋಗ್ಯವನ್ನೂ ಸಂಪಾದಿಸಿಕೊಂಡು ಪ್ರಪಂಚದಲ್ಲಿ ಉತ್ತಮ ಕೀರ್ತಿವಂತರಾಗೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ವಾವತೋ ನ ಆ ಗಹಿ ಪರಾವತಶ್ಚ ವೃತ್ರಹನ್ । ಇಮಾ ಜುಷಸ್ವ ನೋ ಗಿರಃ ।।೮।।**

**ಪದಾರ್ಥ:-** [ವೃತ್ರಹನ್] ಧನವಂತನೇ! ನೀನು [ಅರ್ವಾವತಃ] ಪ್ರಶಂಸಾರ್ಹ ಕುದುರೆಗಳೊಂದಿಗೆ [ನಃ] ನಮಗೆ [ಪರಾವತಃ] ದೂರ ದೇಶದಿಂದ [ಚ] ಮತ್ತು ಸಮೀಪದಿಂದ [ಆ] ಎಲ್ಲಾ ದಿಕ್ಕಿನಿಂದ [ಗಹಿ] ಪ್ರಾಪ್ತನಾಗು. [ನಃ] ನಮ್ಮೆಲ್ಲರ [ಇಮಾಃ] ಈ [ಗಿರಃ] ಮಾತುಗಳನ್ನು [ಜುಷಸ್ವ] ಸೇವನೆ ಮಾಡು.

**ಭಾವಾರ್ಥ:-** ರಾಜನೇ! ದೂರದಲ್ಲಾಗಲೀ, ಸಮೀಪದಲ್ಲಾಗಲೀ ಇರುವ ನಿನ್ನ ಸೇನಾಂಗವಾದ ಆಯುಧಾದಿಗಳಿಂದ ಕೂಡಿರುವ ವೀರ ಪುರುಷರಾದ ನಾವು ಯಾವಾಗ ನಿನ್ನನ್ನು ಕರೆಯುತ್ತೇವೆಯೋ, ಆಗಲೇ ನೀನು ನಮ್ಮ ಸಮೀಪಕ್ಕೆ ಬರಬೇಕು ಮತ್ತು ನಮ್ಮ ಮಾತುಗಳನ್ನು ಕೇಳಿಸಿಕೊಂಡು ಯೋಗ್ಯ ರೀತಿಯಲ್ಲಿ ನ್ಯಾಯ ದೊರಕಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದಂತರಾ ಪರಾವತ-ಮರ್ವಾವತಂ ಚ ಹೂಯಸೇ । ಇಂದ್ರೇಹ ತತ ಆ ಗಹಿ ।।೯।।**

**ಪದಾರ್ಥ:-** [**ಇಂದ್ರ**] ಸಂಪತ್ ಪ್ರದಾಯಕನೇ! ನೀನು [**ಇಹ**] ಈ ರಾಜ್ಯದಲ್ಲಿ [**ಏತ್**] ಯಾವುದು [**ಅಂತರ**] ಮಧ್ಯದಲ್ಲಿ [**ಪರಾವತಂ**] ದೂರದೇಶದಲ್ಲಿ ಮತ್ತು [**ಅರ್ವಾವತಮ್**] ಸಮೀಪದಲ್ಲಿ ಇರುವವನನ್ನು [**ಚ**] ಕರೆಯುತ್ತೇವೆಯೋ ಅವನಿಂದ [**ಹೂಯಸೇ**] ಆಹ್ವಾನಿಸಲಾಗುತ್ತದೆ. [**ತತಃ**] ಇದರಿಂದ [**ಆ, ಗಹಿ**] ನಮ್ಮ ಸಮೀಪಕ್ಕೆ ಬರುವವನಾಗು.

**ಭಾವಾರ್ಥ:-** ರಾಜನು ದೂರದಲ್ಲಿರಬಹುದು ಮತ್ತು ಪ್ರಜೆಗಳು ಸೇನೆ ಹಾಗೂ ಮಂತ್ರಿಗಳು ಬೇರೆ ಕಡೆಗಳಲ್ಲೂ ಇರಬಹುದು. ಹಾಗಿದ್ದರೂ ದೂತರ ಮೂಲಕ ಸಂಪರ್ಕಿಸುವುದರಿಂದ ರಾಜನು ಎಲ್ಲಾ ಜನರ ಸಮೀಪವರ್ತಿಯೇ ಆಗಿರುವನು.

ಈ ಸೂಕ್ತದಲ್ಲಿ ರಾಜ ಮತ್ತು ಪ್ರಜೆಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತದ ಅರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೪೧

**ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧ ಯವ ಮಧ್ಯಾ ಗಾಯತ್ರಿ, ೨, ೩, ೫, ೯ ಗಾಯತ್ರೀ, ೪, ೭, ೮ ನಿಚೃತ್ ಗಾಯತ್ರೀ, ೬ ವಿರಾಟ್ ಗಾಯತ್ರೀ ಛಂದಃ । ಷಡ್ಜಃ ಸ್ವರಃ.**

**ಈ ಮಂತ್ರದಲ್ಲಿ ಅಗ್ನಿ ವಿಷಯವನ್ನು ಹೇಳಲಾಗಿದೆ.**

**ಆ ತೂ ನ ಇಂದ್ರ ಮದ್ರ್ಯ-ಗ್ಘುವಾನಃ ಸೋಮಪೀತಯೇ । ಹರಿಭ್ಯಾಂ ಯಾಹ್ಯದ್ರಿವಃ ॥೧॥**

**ಪದಾರ್ಥ:-** [**ಅಧ್ರಿವಃ**] ಮೇಘಗಳಿಂದೊಳಗೂಡಿ ಸೂರ್ಯನಂತೆ ಇರುವವನಾದ [**ಇಂದ್ರ**] ಐಶ್ವರ್ಯದಾಯಕನೇ! ನೀನು [**ಸೋಮಪೀತಯೇ**] ಸೋಮಲತೆಯ ಪಾನ ಮಾಡುವಂತಹ ಯಜ್ಞದಲ್ಲಿ ಅದಕ್ಕಾಗಿ [**ಮದ್ರ್ಯಕ್**] ನನ್ನ ಪೂಜೆ, ಉಪಾಸನೆಗಾಗಿ [**ಹುವಾನಃ**] ಕರೆಯಲ್ಪಟ್ಟವನಾಗಿ [**ಹರಿಭ್ಯಾಂ**] ಕುದುರೆಗಳಿಂದ [**ನಃ**] ನಮ್ಮ ಸಮೀಪಕ್ಕೆ [**ಆ, ಯಾಹಿ**] ಬರುವವನಾಗು [**ತು**] ಆದರಿಂದ ಬೇಗನೇ ನಮ್ಮನ್ನು ಸಮೀಪಿಸಬಹುದು.

**ಭಾವಾರ್ಥ:-** ಮನುಷ್ಯರು ಶುಭ ಕರ್ಮದಂತಹ ಸಮಾರಂಭಗಳಲ್ಲಿ ಒಬ್ಬರು ಮತ್ತೊಬ್ಬರನ್ನು ಆಹ್ವಾನಿಸಿ ಪರಸ್ಪರರನ್ನು ಅನ್ನ ಪಾನಾದಿಗಳಿಂದ ಸತ್ಕಾರ ಮಾಡಬೇಕು.

**ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.**

**ಸತ್ತೋ ಹೋತಾ ನ ಋತ್ವಿಯ-ಸ್ತಿಸ್ತಿರೇ ಬರ್ಹಿರಾನುಷಕ್ । ಅಯುಜ್ರನ್ ಪ್ರಾತರದ್ರಯಃ ॥೨॥**

**ಪದಾರ್ಥ:-** [**ಸತ್ತಃ**] ಕುಳಿತುಕೊಂಡಿರುವ [**ಹೋತ**] ಗ್ರಹಣ ಮಾಡುವವನು ಮತ್ತು [**ಋತ್ವಿಜಃ**] ಯಾಗವನ್ನು ಮಾಡಿಸುವವನು [**ಆನುಷಕ್**] ಅನುಕೂಲತೆಯೊಂದಿಗೆ ಭೇಟಿಯಾಗುತ್ತಾನೆ. [**ನಃ**] ನಮಗೋಸ್ಕರ [**ಬರ್ಹಿಃ**] ಉತ್ತಮ ಆಸನ, ಉತ್ತಮ ವಸ್ತುಗಳನ್ನು [**ಅಧ್ರಯಃ**] ಮೋಡಗಳಿಗೆ ಸಮನಾಗಿ [**ಪ್ರಾತಃ**] ಬೆಳಗಿನ ಸಮಯದಲ್ಲಿ [**ಅಯುಜ್ರನ್**] ಸಂಗತಿ ಮಾಡುತ್ತಾನೆ. [**ತಿಸ್ತಿರೇ**] ವಸ್ತ್ರಾದಿಗಳಿಂದ ಮರೆ ಮಾಡುತ್ತಾ ಕ್ರಿಯಾರೂಪ ಯಜ್ಞದಲ್ಲಿ ಸುಖವನ್ನು ಸಾಧಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಬೆಳಗಿನ ಸಮಯದಲ್ಲಿ ಮೋಡವು ಸೂರ್ಯನನ್ನು ಮರೆಮಾಡಿ ನೆರಳನ್ನು ಹೇಗೆ ಉಂಟುಮಾಡುತ್ತವೆಯೋ ಹಾಗೆ ಕರ್ಮಗಳನ್ನು ತಿಳಿದವರು ವಸ್ತ್ರಾದಿಗಳಿಂದ ಶರೀರವನ್ನು ಮರೆ ಮಾಡಿಕೊಂಡು ಅನುಕೂಲಕ್ಕೆ ತಕ್ಕಂತೆ ಸುಖವನ್ನು ಪಡೆದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಾ ಬ್ರಹ್ಮ ಬ್ರಹ್ಮವಾಹಃ ಕ್ರಿಯಂತ ಆ ಬರ್ಹಿಃ ಸೀದ । ವೀಹಿ ಶೂರ ಪುರೋಳಾಶಮ್ ॥೩॥**

**ಪದಾರ್ಥ:-** [ಶೂರ] ಪರಾಕ್ರಮಿಯೇ! [ಇಮಾಃ] ಈ [ಬ್ರಹ್ಮವಾಹಃ] ಧನಗಳಿಸುವಂತಹ ಕೆಲಸಗಳು [ಕ್ರಿಯಂತೇ] ಯಾವಾಗ ಮಾಡಲಾಗುತ್ತದೆಯೋ ಅಂತಹ ಕೆಲಸಗಳಲ್ಲಿ [ಬ್ರಹ್ಮ] ಧನವನ್ನು [ವೀಹಿಃ] ಪ್ರಾಪ್ತಿಗೊಳಿಸುವವನಾಗು. [ಬರ್ಹಿಃ] ಅಂತರಿಕ್ಷದಲ್ಲಿ [ಆ, ಸೀದ] ವರ್ತಮಾನನಾಗು. [ಪುರೋಡಾಶಮ್] ಉತ್ತಮ ಪ್ರಕಾರವಾಗಿ ಸಂಸ್ಕರಿಸಿದ ಅನ್ನವನ್ನು ಸ್ವೀಕರಿಸು.

**ಭಾವಾರ್ಥ:-** ಮನುಷ್ಯರು ಪ್ರಯೋಜನವಿಲ್ಲದ ಕೆಲಸವನ್ನು ಎಂದೂ ಮಾಡಬಾರದು. ಯಾವುದರಂದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥವು ಲಭಿಸುತ್ತದೆಯೋ, ಅಂತಹ ಕೆಲಸಗಳನ್ನೇ ಪ್ರಯತ್ನಪೂರ್ವಕ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಾರಂಧಿ ಸವನೇಷು ಣ ಏಷು ಸ್ತೋಮೇಷು ವೃತ್ರಹನ್ । ಉಕ್ಥೇಷ್ವಿಂದ್ರ ಗಿರ್ವಣಃ ॥೪॥**

**ಪದಾರ್ಥ:-** [ಗಿರ್ವಣಃ] ಉತ್ತಮ ನುಡಿಗಳಿಂದ ಪ್ರಾರ್ಥಿಸಿಕೊಳ್ಳುವವನು [ವೃತ್ರಹನ್] ಧನ ಸಂಪನ್ನನಾದ [ಇಂದ್ರ] ಐಶ್ವರ್ಯದಾಯಕನೇ! ನೀನು [ಸ್ತೋಮೇಷು] ಪ್ರಶಂಸೆಗೆ ಯೋಗ್ಯವಾದ [ಉಕ್ಥೇಷು] ನುಡಿಯಲು ಯೋಗ್ಯವಾದ [ಸವನೇಷು] ಐಶ್ವರ್ಯದಾಯಕ ಕೆಲಸಗಳಲ್ಲಿ [ನಃ] ನಮ್ಮೆಲ್ಲರನ್ನೂ [ರಾರಂಧಿ] ರಮಿಸು.

**ಭಾವಾರ್ಥ:-** ಬಡವರು ಶ್ರೀಮಂತರನ್ನು ಯಾವಾಗಲೂ ಯಾಚಿಸಬೇಕು. ಶ್ರೀಮಂತರು ಬಡಜನರಿಗೆ ಧನಕನಕಾದಿ ಎಲ್ಲ ಬಗೆಯ ಸುಖವನ್ನು ಕೊಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮತಯಃ ಸೋಮಪಾಮುರುಂ ರಿಹಂತಿ ಶವಸಸ್ಪತಿಮ್ । ಇಂದ್ರಂ ವತ್ಸಂ ನ ಮಾತರಃ ॥೫॥**

**ಪದಾರ್ಥ:-** [ಮತಯಃ] ಬುದ್ಧಿವಂತ ಮನುಷ್ಯರು [ಶವಸಃ] ಶಕ್ತಿಯ [ಪತಿಂ] ಪಾಲಕನನ್ನು [ಉರಂ] ವಿಪುಲ ಐಶ್ವರ್ಯದಿಂದ, ಪರಿಪೂರ್ಣನಾಗಿ [ಸೋಪಾಂ] ಐಶ್ವರ್ಯದ ರಕ್ಷಕನಾದ [ಇಂದ್ರಂ] ಶ್ರೀಮಂತನೊಂದಿಗೆ [ಮಾತರಃ] ಹಸುಗಳು [ವತ್ಸಂ] ಕರುವನ್ನು [ನ] ಹೇಗೋ ಹಾಗೆ [ರಿಹಂತಿ] ನಮ್ಮನ್ನು ಸುಖದೊಂದಿಗೆ ಸೇರಿಸುವವನಾಗು.

**ಭಾವಾರ್ಥ:-** ಗೋವುಗಳು ಪ್ರೇಮಭಾವದಿಂದ ತಮ್ಮ ಕರುಗಳನ್ನು ಹೇಗೆ ಸಮೀಪ ಮಾಡಿಕೊಳ್ಳುತ್ತವೆಯೋ, ಅದೇರೀತಿ ರಾಜನು ಪ್ರೇಮ ಭಾವದಿಂದ ಪ್ರಜೆಗಳನ್ನು ಸೇನೆಯನ್ನೂ ಸಮೀಪವರ್ತಿಗಳನ್ನಾಗಿ ಮಾಡಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಮಂದಸ್ವಾ ಹ್ಯಂಧಸೋ ರಾಧಸೇ ತನ್ವಾ ಮಹೇ । ನ ಸ್ತೋತಾರಂ ನಿದೇ ಕರಃ ॥೬॥**

**ಪದಾರ್ಥ:-** [ಹಿ] ಯಾವ ಕಾರಣದಿಂದ ನೀನು [ಸ್ತೋತಾರಂ] ಸ್ತುತಿಯೋಗ್ಯನಾದ ಪುರುಷನ [ನಿದೇ] ನಿಂದೆಯನ್ನು [ನ, ಕರಃ] ಮಾಡಬಾರದು. [ಸಃ] ಅದರಿಂದ ನೀನು [ತನ್ವಾ] ಶರೀರದಿಂದ [ಅಂಧಸಃ] ಅನ್ನಾದಿಗಳ [ಮಹೇ] ವಿಪುಲಭಾವದಿಂದ [ರಾಧಸೇ] ಸಾಧಿಸಿಕೊಂಡು [ಮಂದಸ್ವ] ಸಂತುಷ್ಟನಾಗು.

**ಭಾವಾರ್ಥ:-** ಮನುಷ್ಯರು ಸ್ತುತಿಗೆ ಯೋಗ್ಯರಾದವರನ್ನು ಯಾವಾಗಲೂ ನಿಂದಿಸಬಾರದು. ಅದರಿಂದ ಅವರು ಮಹದೈಶ್ವರ್ಯವನ್ನು ಪಡೆದು ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಅತ್ಯಂತ ಸುಖಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಯಮಿಂದ್ರ ತ್ವಾಯವೋ ಹವಿಷ್ಮಂತೋ ಜರಾಮಹೇ । ಉತ ತ್ವಮಸ್ಮಯುರ್ವಸೋ ॥೭॥**

**ಪದಾರ್ಥ:-** [ವಸೋ] ನಿವಾಸಕ್ಕೆ ಕಾರಣನಾದ [ಇಂದ್ರ] ಐಶ್ವರ್ಯವಂತನೇ! [ಹವಿಷ್ಮಂತಃ] ಬಹಳಷ್ಟು ದಾನಯೋಗ್ಯ ವಸ್ತುಗಳನ್ನು ಪಡೆದಿರುವವನೇ! [ತ್ವಾಯವಃ] ನಿನ್ನನ್ನು ಬಯಸುವವರಾದ [ವಯಂ] ನಾವು [ಜರಾಮಹೇ] ನಿನ್ನ ಪ್ರಶಂಸೆ ಮಾಡುತ್ತೇವೆ. [ಉತ] ಮತ್ತು [ತ್ವಂ] ನೀನು [ಅಸ್ಮಯುಃ] ನಮ್ಮೆಲ್ಲರನ್ನೂ ಬಯಸುವವನಾಗಿ ಪ್ರಶಂಸೆ ಮಾಡು.

**ಭಾವಾರ್ಥ:-** ಯಾವ ಮನುಷ್ಯರು ಎಲ್ಲರ ಗುಣಗಾನವನ್ನು ಮಾಡುತ್ತಾರೋ ಮತ್ತು ಅವರ ದೋಷಗಳನ್ನು ನಿಂದಿಸುತ್ತಾರೋ, ಅಂತಹ ವಿವೇಕಿಗಳು ವಿಚಾರಶೀಲರಾಗಿ ಗುಣಗ್ರಹಣ ಮಾಡಲು ದೋಷವನ್ನು ವರ್ಜಿಸಲು ಸಮರ್ಥರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾರೇ ಅಸ್ಮದ್ವಿ ಮುಮುಚೋ ಹರಿಪ್ರಿಯಾರ್ವಾಙ್ ಯಾಹಿ । ಇಂದ್ರ ಸ್ವಧಾವೋ ಮತ್ಸ್ವೇಹ ॥೮॥**

**ಪದಾರ್ಥ:-** [ಹರಿಪ್ರಿಯ] ಹರಣಶೀಲರಾದವರನ್ನು ಪ್ರಸನ್ನಗೊಳಿಸುವವನಾದ [ಇಂದ್ರ] ಐಶ್ವರ್ಯ ಸಂಪನ್ನನಾದ [ಸ್ವಧಾವಃ] ಅನ್ನಾದಿ ಪದಾರ್ಥಗಳನ್ನು ಪಡೆದುಕೊಂಡಿರುವ ನೀನು [ಅಸ್ಮತ್] ನಮ್ಮೆಲ್ಲರಿಂದ [ಆರೇ] ಸಮೀಪದಲ್ಲಾಗಲೀ ದೂರದಿಂದಾಗಲೀ [ಮಾ] [ವಿ, ಮುಮುಚಃ] ತ್ಯಜಿಸಬೇಡ. [ಅರ್ವಾಙ್] ಅಧೋಭಾಗಕ್ಕೆ [ಯಾಹಿ] ಬರುವವನಾಗು. [ಇಹ] ಈ ಜಗತ್ತಿನಲ್ಲಿ [ಮತ್ಸ್ವ] ಆನಂದವನ್ನು ಪಡೆದುಕೊ.

**ಭಾವಾರ್ಥ:-** ಗೆಳೆಯರೇ, ನೀವು ನಮ್ಮಿಂದ ದೂರವಿರಿ ಅಥವಾ ಸಮೀಪದಲ್ಲೇ ಇರಿ. ನಮ್ಮೆಲ್ಲರಿಗೂ ಒಳ್ಳೆಯದನ್ನು ಮಾಡಿ. ನಮ್ಮನ್ನು ತ್ಯಜಿಸಬೇಡಿ. ನಾವು ನಿಮ್ಮೊಂದಿಗೆ ಅದೇ ರೀತಿ ವರ್ತಿಸುವೆವು. ಹೀಗೆ ಪರಸ್ಪರರು ಸಹಕಾರ ಭಾವದಿಂದ ವ್ಯವಹರಿಸುತ್ತಾ ಈ ಸಂಸಾರದಲ್ಲಿ ಸುಖವನ್ನು ಪಡೆಯೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ವಾಞ್ಚಂ ತ್ವಾ ಸುಖೇ ರಥೇ ವಹತಾಮಿಂದ್ರ ಕೇಶಿನಾ । ಘೃತಸ್ನೂ ಬರ್ಹಿರಾಸದೇ ॥೯॥**

**ಪದಾರ್ಥ:-** [**ಇಂದ್ರ**] ಐಶ್ವರ್ಯವಂತನೇ! [**ಘೃತಸ್ನೂ**] ನೀರನ್ನು ಪವಿತ್ರಗೊಳಿಸುವವನು [**ಕೇಶಿನಾ**] ವಿಪುಲವಾದ ಕೇಶರಾಶಿಗಳಿರುವವನು [**ಅರ್ವಾಂಚಂ**] ಕೆಳಕ್ಕೆ ಬರುವವನೂ ಆದ [**ತ್ವಾ**] ನಿನ್ನನ್ನು [**ಸುಖೇ**] ಸುಖಕರವಾದ [**ರಥೇ**] ವಾಹನದಲ್ಲಿ [**ಬರ್ಹಿಃ**] ಅಂತರಿಕ್ಷದಲ್ಲಿ [**ಆಸದೇ**] ನೆಲೆಸುವುದಕ್ಕಾಗಿ [**ವಹತಾಂ**] ಅಲ್ಲಿಗೆ ತಲುಪಿಸುತ್ತೇವೆ. ಇದನ್ನು ನೀನು ತಿಳಿದುಕೋ.

**ಭಾವಾರ್ಥ:-** ಮನುಷ್ಯರೇ! ಅಗ್ನಿ ಶಕ್ತಿಯಿಂದ ಚಲಿಸುವಂತಹ ವಾಹನದಲ್ಲಿ ಕುಳಿತು ಅಧೋಭಾಗದಲ್ಲೂ, ಮೇಲ್ಭಾಗದಲ್ಲೂ ಸುತ್ತಮುತ್ತಲಿನ ದೇಶಗಳಿಗೂ ಪ್ರಯಾಣ ಮಾಡುವಂತಹ ವಾಹನವನ್ನು ಸಿದ್ಧಗೊಳಿಸಿಕೊಂಡು ಪ್ರಯಾಣ ಬೆಳೆಸಿರಿ.

ಈ ಸೂಕ್ತದಲ್ಲಿ ವಿದ್ಯಾವಂತ ಮನುಷ್ಯರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೪೨

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೪-೭ ಗಾಯತ್ರಿ, ೨, ೩, ೮, ೯ ನಿಚೃತ್

ಗಾಯತ್ರಿ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ವಿದ್ಯಾವಂತರ ವಿಚಾರವನ್ನು ತಿಳಿಸಲಾಗಿದೆ.

**ಉಪ ನಃ ಸುತಮಾ ಗಹಿ ಸೋಮಮಿಂದ್ರ ಗವಾಶಿರಮ್ । ಹರಿಭ್ಯಾಂ ಯಸ್ತೇ ಅಸ್ಮಯುಃ ॥೧॥**

**ಪದಾರ್ಥ:-** [**ಇಂದ್ರ**] ಐಶ್ವರ್ಯವಂತನೇ! [**ಹರಿಭ್ಯಾಂ**] ಕುದುರೆಗಳಿರುವ ರಥದಿಂದ [**ಯಃ**] [**ತೇ**] ಯಾವ ನಿನ್ನ ವಾಹನವು [**ಅಸ್ಮಯುಃ**] ನಮ್ಮ ಸಮೀಪಕ್ಕೆ ನಿನ್ನನ್ನು ಕರೆತರುವವ್ರೂ ಅಂತಹ ಕುದುರೆಗಳಿರುವ ರಥದಿಂದ [**ನಃ**] ನಾವು [**ಸುತಂ**] ತಯಾರಿಸಿರುವ [**ಸೋಮಂ**] ಔಷಧಿರಸವನ್ನು / ಐಶ್ವರ್ಯವನ್ನೂ [**ಗವಾಶಿರಂ**] ಕಿರಣಗಳ ಮೂಲಕ ಸೇವಿಸುವುದಕ್ಕಾಗಿ [**ಉಪ, ಆ, ಗಹಿ**] ನಮ್ಮ ಸಮೀಪಕ್ಕೆ ಬರುವವನಾಗು.

**ಭಾವಾರ್ಥ:-** ಮನುಷ್ಯರು ತಮ್ಮಲ್ಲಿರುವ ಆಹಾರ ಐಶ್ವರ್ಯಗಳಿಂದ ಎಲ್ಲರನ್ನೂ ಕರೆದು ಕರೆದು ಸತ್ಕಾರ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಮಿಂದ್ರ ಮದಮಾ ಗಹಿ ಬರ್ಹಿಃಷ್ಠಾಂ ಗ್ರಾವಭಿಃ ಸುತಮ್ । ಕುವಿನ್ನ್ವಸ್ಯ ತೃಪ್ಣವಃ ॥೨॥**

**ಪದಾರ್ಥ:-** [**ಇಂದ್ರ**] ಸಂಪತ್ತನ್ನು ಬಯಸುವವನೇ! [**ಅಸ್ಯ**] ಈ ಸೋಮಲತೆಯ [**ತೃಪ್ಣವಃ**] ತೃಪ್ತಿಪಡಿಸುವಂತಹ [**ಕುವಿತ್**] ಶ್ರೇಷ್ಠವಾದ [**ತಂ**] ಆ ರಸವನ್ನು [**ಗ್ರಾವಭಿಃ**] ಮೇಘಗಳಿಂದ [**ಸುತಂ**] ಉತ್ಪನ್ನವಾದ [**ಮದಂ**] ಆನಂದ ದಾಯಕವಾದ [**ಬರ್ಹಿಷ್ಠಾಂ**] ಅಂತರಿಕ್ಷದಲ್ಲಿರುವ ಔಷಧಿ ಗುಣಗಳಿಂದ ಕೂಡಿದ ಸಂಪತ್ತನ್ನು ಪಡೆಯಲು [**ನು**] ಬೇಗನೆ [**ಆಗಹಿಃ**] ಬರುವವನಾಗು.

**ಭಾವಾರ್ಥ:-** ಸೋಮಲತೆ ಮುಂತಾದ ಔಷಧಿಗಳು ಮಳೆಯಿಂದ ಉತ್ಪನ್ನವಾಗುತ್ತವೆ. ಅವು ರೋಗ ನಾಶಕವಾದ್ದರಿಂದ ತೃಪ್ತಿಕಾರಕಗಳಾಗಿವೆ. ಸೂಕ್ಷ್ಮ ಅವಯವಗಳ ಮೂಲಕ ಅಂತರಿಕ್ಷಕ್ಕೆ ಹೋಗಿ ವಾಯು ಮಂಡಲದಲ್ಲಿ ಹರಡಿಕೊಳ್ಳುತ್ತವೆ. ಉಪಾಯದಿಂದ ಅದನ್ನು ಸೇವಿಸಿ ಸದಾ ಸಂತುಷ್ಟರು ಆಗಬೇಕು.

ಈ ಮಂತ್ರದಲ್ಲಿ ವಿದ್ಯಾವಂತರನ್ನು ಗೌರವಿಸುವ ವಿಚಾರವನ್ನು ತಿಳಿಸಲಾಗಿದೆ.

**ಇಂದ್ರಮಿತ್ಥಾ ಗಿರೋ ಮಮಾ-ಚ್ಛಾಗುರಿಷಿತಾ ಇತಃ । ಆವೃತೇ ಸೋಮಪೀತಯೇ ॥೩॥**

**ಪದಾರ್ಥ:-** [ಆವೃತೇ] ಎಲ್ಲ ಕಡೆಗಳಿಂದಲೂ ಆವರಿಸಿಕೊಂಡಿರುವಂತಹ ವಿಶೇಷ ಸ್ಥಾನದಲ್ಲಿ [ಸೋಮಪೀತಯೇ] ಸೋಮರಸವನ್ನು ಕುಡಿಯುವುದಕ್ಕಾಗಿ [ಮಮ] ನನ್ನ [ಇಷಿತಾಃ] ಪ್ರೇರಣೆಗೆ ಅನುಗುಣವಾಗಿ [ಗಿರಃ] ಉತ್ತಮ ನುಡಿಗಳಿರುವಂತಹ [ಇತಃ] ಮಂತ್ರಗಳಿಂದ [ಇಂದ್ರಂ] ಐಶ್ವರ್ಯಕಾರಕನನ್ನು [ಅಚ್ಛಾಗುಃ] ಉತ್ತಮ ರೀತಿಯಲ್ಲಿ ಬರ ಮಾಡುವವನಾಗು. [ಇತ್ಥಾ] ಈ ರೀತಿ ನಿಮ್ಮ ಕರೆಯು ಅವನಿಗೆ ತಲುಪಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರು ಯಾರನ್ನು ಕರೆದು ಗೌರವಿಸುವರೋ ಅಂತಹ ಜನರನ್ನು ನೀವು ಕರೆದು ಗೌರವಿಸಿರಿ ಎಂಬುದಾಗಿ ಎಲ್ಲ ಜನರಿಗೂ ಬಲ್ಲವರು ಉಪದೇಶ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಂ ಸೋಮಸ್ಯ ಪೀತಯೇ ಸ್ತೋಮೈರಿಹ ಹವಾಮಹೇ। ಉಕ್ಥೇಭಿಃ ಕುವಿದಾಗಮತ್ ॥೪॥**

**ಪದಾರ್ಥ:-** [ಸ್ತೋಮೈಃ] ಸ್ತುತಿ ವಚನಗಳಿರುವ [ಉಕ್ಥೇಭಿಃ] ನುಡಿಯಲು ಯೋಗ್ಯವಾದ ನುಡಿಗಳಿಂದ [ಸೋಮಸ್ಯ] ತಯಾರಿಸಿದ ಔಷಧಿ ರಸಗಳನ್ನು [ಪೀತಯೇ] ಪಾನ ಮಾಡುವುದಕ್ಕಾಗಿ [ಇಂದ್ರಂ] ವಿದ್ಯಾವಂತನೂ, ಐಶ್ವರ್ಯವಂತನೂ ಆದವನನ್ನು [ಇಹ] ಇಲ್ಲಿಗೆ [ಹವಾಮಹೇ] ಕರೆಯುತ್ತೇವೆ. [ಕುವಿತ್] ಅನೇಕ ಬಾರಿ ಅವನು [ಆಗಮತ್] ಬರುವವನಾಗಬೇಕು.

**ಭಾವಾರ್ಥ:-** ವಿದ್ಯಾವಂತರು ಪ್ರೀತಿಯಿಂದ ವಿದ್ಯಾವಂತರನ್ನು ಕರೆಯುತ್ತಾರೋ ಆಗ ಅವರು ಅನೇಕ ಬಾರಿ ಅವನ ಸಮೀಪಕ್ಕೆ ಹೋಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಸೋಮಾಃ ಸುತಾ ಇಮೇ ತಾನ್ದಧಿಷ್ವ ಶತಕ್ರತೋ । ಜಠರೇ ವಾಜಿನೀವಸೋ ॥೫॥**

**ಪದಾರ್ಥ:-** [ವಾಜಿನೀವಸೋ] ರಾತ್ರಿಯನ್ನು ನೆಲೆಗೊಳಿಸುವವನೇ! [ಶತಕ್ರತೋ] ಬಹುವಿಧ ಕೆಲಸಗಳಲ್ಲಿ ಕುಶಲಿಯಾದವನೇ! [ಇಂದ್ರ] ಅತಿಯಾದ ಸಂಪತ್ತನ್ನು ಪಡೆದಿರುವವನೇ! ನೀನು [ಇಮೇ] [ಜಠರೇ] ಈ ಪ್ರಸಿದ್ಧ ಜಗತ್ತಿನಲ್ಲಿ [ಸೋಮಾಃ] ಉತ್ತಮ ಪದಾರ್ಥಗಳನ್ನು [ಸುತಾಃ] ಉತ್ಪಾದನೆ ಮಾಡಿ [ಧದಿಷ್ವ] ಅವುಗಳನ್ನು ಧಾರಣ ಮಾಡು.

**ಭಾವಾರ್ಥ:-** ಸೃಷ್ಠಿಯಲ್ಲಿರುವ ಬಹುವಿಧ ಪದಾರ್ಥಗಳನ್ನು ತಿಳಿದುಕೊಂಡು ಅವುಗಳಿಂದಾಗುವ ಪ್ರಯೋಜನಗಳನ್ನು ತಮ್ಮ ಜೀವನದಲ್ಲಿ ಯಾರು ಬಳಸಿಕೊಳ್ಳುತ್ತಾರೋ ಅವರೇ ಪರಿಪೂರ್ಣ ವಿದ್ಯಾವಂತರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿದ್ಮಾ ಹಿ ತ್ವಾ ಧನಂಜಯಂ ವಾಜೇಷು ದಧೃಷಂ ಕವೇ । ಅಧಾ ತೇ ಸುಮ್ನಮೀಮಹೇ ॥೬॥**

**ಪದಾರ್ಥ:-** **[ಕವೇ]** ವಿದ್ಯಾವಂತನೇ! **[ವಾಜೇಷು]** ಜೀವನ ಸಂಗ್ರಾಮದಲ್ಲಿ **[ದಧೃಷಂ]** ಪ್ರಚಂಡವಾದ **[ಧನಂಜಯಂ]** ಸಂಪತ್ತನ್ನು ಗೆಲ್ಲುವವನಾದ **[ತ್ವಾ]** ನಿನ್ನನ್ನು **[ವಿದ್ಮಾ]** ತಿಳಿದುಕೊಳ್ಳುತ್ತೇವೆ. **[ಅಧ]** ಆ ನಂತರ **[ಹಿ]** ಯಾವ ಕಾರಣದಿಂದ **[ತೇ]** ನಿನ್ನ ಸಮೀಪದಿಂದ **[ಸುಮ್ನಮ್]** ಸುಖವನ್ನು **[ಈಮಹೇ]** ಪಡೆದುಕೊಳ್ಳುತ್ತೇವೆ.

**ಭಾವಾರ್ಥ:-** ಮನುಷ್ಯರು ಮೊದಲು ಸುಖದಾಯಕನೂ, ಯೋಗ್ಯನೂ, ಶೂರನೂ, ನ್ಯಾಯವಂತನೂ, ಯಾರು ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಅನಂತರ ಅವನಿಂದ ಸುಖವನ್ನು ಪಡೆದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಮಿಂದ್ರ ಗವಾಶಿರಂ ಯವಾಶಿರಂ ಚ ನಃ ಪಿಬ । ಆಗತ್ಯಾ ವೃಷಭಿಃ ಸುತಮ್ ॥೭॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕನೇ! ನೀನು **[ಆಗತ್ಯ]** ಬಂದು **[ನಃ]** ನಮ್ಮೆಲ್ಲರಿಗೆ **[ವೃಷಭಿಃ]** ವೃಷ್ಟಿ ಕರೆಯುವ ಮೋಡಗಳಿಂದ **[ಸುತಂ]** ಉತ್ಪಾದಿಸಲಾದ **[ಗವಾಶಿರಂ]** ಕಿರಣಗಳನ್ನು **[ಯವಾಶಿರಂ]** ಅನ್ನಾಹಾರಗಳನ್ನು **[ಚ]** ಮತ್ತು **[ಇಮಂ]** ಈ ಪದಾರ್ಥಗಳನ್ನು **[ಪಿಬ]** ಪಾನ ಮಾಡುವವನಾಗು.

**ಭಾವಾರ್ಥ:-** ಮನುಷ್ಯರೇ! ಯಾವ ರಸವನ್ನು ಸೂರ್ಯನ ಕಿರಣಗಳು ಮತ್ತು ಗಾಳಿಯು ಸೇವಿಸುತ್ತವೆಯೋ ಅಂತಹ ರಸವನ್ನು ನೀನೂ ಕುಡಿದು ಬಲಿಷ್ಠನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತುಭ್ಯೇದಿಂದ್ರ ಸ್ವ ಓಕ್ಯೇ (ಎ)೩ ಸೋಮಂ ಚೋದಾಮಿ ಪೀತಯೇ । ಏಷ ರಾರಂತು ತೇ ಹೃದಿ ॥೮॥**

**ಪದಾರ್ಥ:-** **[ಇಂದ್ರ]** ಐಶ್ವರ್ಯವಂತನೇ! ನೀನು **[ಏಶಃ]** ಈ **[ತೇ]** ನಿನ್ನ **[ಹೃದಿ]** ಹೃದಯದಲ್ಲಿ **[ರಾರಂತು]** ಅತಿಶಯ ರಮಣಗೊಳಿಸುವ **[ಸೋಮಂ]** ಸೋಮರಸವನ್ನು **[ಸ್ವೇ]** ತನ್ನ **[ಓಕ್ಯೇ]** ಮನೆಯಲ್ಲಿ **[ಪೀತಯೇ]** ಪಾನ ಮಾಡುವುದಕ್ಕಾಗಿ **[ತುಭ್ಯಂ]** **[ಇತ್]** ನಿನಗಾಗಿಯೇ **[ಚೋದಯಾಮಿ]** ಸಿದ್ಧಗೊಳಿಸಿರುವೆನು.

**ಭಾವಾರ್ಥ:-** ಪ್ರಾಣಿಗಳು ಯಾವ ರಸವನ್ನು ಸೇವನೆ ಮಾಡುತ್ತವೆಯೋ, ಯಾವ ಆಹಾರವನ್ನು ಸೇವಿಸುತ್ತವೆಯೋ, ಅವೆಲ್ಲವೂ ರಕ್ತ ಮಾಂಸಗಳಾಗಿ ಹೃದಯದಲ್ಲಿ ವ್ಯಾಪಿಸಿಕೊಂಡು ಮಸ್ತಕದ ಮೂಲಕ ಎಲ್ಲಾ ಕಡೆಗಳಲ್ಲೂ ಪ್ರಸರಿಸುತ್ತವೆ.

ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಿದೆ.

**ತ್ವಾಂ ಸುತಸ್ಯ ಪೀತಯೇ ಪ್ರತ್ನಮಿಂದ್ರ ಹವಾಮಹೇ । ಕುಶಿಕಾಸೋ ಅವಸ್ಯವಃ ॥೯॥**

**ಪದಾರ್ಥ:-** **[ಇಂದ್ರ]** ಸುಖದಾಯಕನೇ! ನೀನು **[ಕುಶಿಕಾಸಃ]** ವಿದ್ಯಾ ವಿನಯಗಳಿಂದ ಶ್ರೇಷ್ಠನಾಗಿ **[ಅವಸ್ಯವಃ]** ನಿಮ್ಮೆಲ್ಲರ ಆತ್ಮ ರಕ್ಷಣೆಯನ್ನು ಮಾಡಲು **[ಸುತಸ್ಯ]** ಸಂಸ್ಕಾರಗೊಳಿಸಲಾದ ರಸವನ್ನು **[ಪೀತಯೇ]** ಪಾನ ಮಾಡುವುದಕ್ಕಾಗಿ **[ಪ್ರತ್ನಂ]** ಮೊದಲಿನಿಂದಲೂ ಸಿದ್ಧನಾದ **[ತ್ವಾಮ್]** ನಿನ್ನನ್ನು **[ಹವಾಮಹೇ]** ಆಹ್ವಾನಿಸುತ್ತೇವೆ.

**ಭಾವಾರ್ಥ:-** ಹೊಸ ವಿದ್ಯಾವಂತರಿಗಿಂತಲೂ, ಹಳೆಯ ವಿದ್ಯಾವಂತರೇ ಶ್ರೇಷ್ಠರು ಎಂಬುದಾಗಿ ನಿಶ್ಚಯಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ಇಂದ್ರ, ವಿದ್ಯಾವಂತ ಮತ್ತು ಸೋಮ ಇವರ ಗುಣವನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೆರಡನೆಯ ಸೂಕ್ತ ಸಮಾಪ್ತ**

## ಸೂಕ್ತ ೪೩

**ಮಂತ್ರಸಂಖ್ಯೆ ೮ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧-೩ ವಿರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ ।**

**೨, ೪, ೬ ನಿಚೃತ್ ತ್ರಿಷ್ಟುಪ್, ೫ ಭುರಿಕ್ ತ್ರಿಷ್ಟುಪ್, ೭, ೮ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.**

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಿದೆ.

**ಆ ಯಾಹ್ಯರ್ವಾಙುಪ ವಂಧುರೇಷ್ಠಾ-ಸ್ತವೇದನು ಪ್ರದಿವಃ ಸೋಮಪೇಯಮ್ ।**
**ಪ್ರಿಯಾ ಸಖಾಯಾ ವಿ ಮುಚೋಪ ಬರ್ಹಿ-ಸ್ತ್ವಾಮಿಮೇ ಹವ್ಯವಾಹೋ ಹವಂತೇ ॥೧॥**

**ಪದಾರ್ಥ:-** **[ಅರ್ವಾಙ್]** ಕೆಳ ಪ್ರದೇಶದಲ್ಲಿ ಇರುವವನಾಗಿ ಯಾವನು **[ತವ]** ನಿನ್ನ **[ವಂಧುರೇಷ್ಠಾಃ]** ಅಧೀನದಲ್ಲಿರುವ ರಥದಿಂದ **[ಪ್ರದಿವಃ]** ಉತ್ತಮ ಪ್ರಕಾಶಮಾನವಾದ **[ಸೋಮಪೇಯಂ]** ಪಾನ ಯೋಗ್ಯವಾದ ಸೋಮರಸದ **[ಉಪ, ಆ, ಯಾಹಿ]** ಸಮೀಪಕ್ಕೆ ಬರುವವನಾಗು ಮತ್ತು **[ಪ್ರಿಯಾ]** ಪ್ರಸನ್ನಗೊಳಿಸುವ **[ಸಖಾಯಾ]** ಮಿತ್ರರು ಅಧ್ಯಾಪಕರೂ, ಉಪದೇಶಕರೂ, ಅವರ ಸಮೀಪಕ್ಕೆ ಬಾ. **[ಬರ್ಹಿಃ]** ಅಂತರಿಕ್ಷದಲ್ಲಿ **[ತ್ವಾಂ]** ನಿನ್ನ **[ಅನು]** ಹಿಂದಿನಿಂದ **[ಇಮೇ]** ಯಾರಿರುವರೋ ಅವರನ್ನು **[ವಿಮುಚ]** ತ್ಯಜಿಸು. **[ಹವ್ಯವಾಹಃ]** ಸ್ವೀಕರಿಸುವವರು ಯಾರೋ ಅವರೊಂದಿಗೆ **[ಇತ್]** ದುಃಖವನ್ನು ತ್ಯಜಿಸಿ.

**ಭಾವಾರ್ಥ:-** ಯಾರು ವಿದ್ಯೆಯನ್ನು ಕಲಿತು ವಿಮಾನದಂತಹ ವಾಹನಗಳನ್ನು ತಯಾರಿಸಿಕೊಂಡು ಅದರಲ್ಲಿ ಅಗ್ನಿಯಂತಹ ಇಂಧನವನ್ನು ಬಳಸಿಕೊಂಡು ಅಂತರಿಕ್ಷದಲ್ಲಿ ಸಂಚರಿಸುವವರಾಗುತ್ತಾರೋ ಅವರು ಪ್ರಿಯಕಾರ್ಯಗಳನ್ನು ಮಾಡುವ ಮಿತ್ರರನ್ನು ಪಡೆದು ತನ್ನ ಬಡತನವನ್ನು ನಿವಾರಿಸಿಕೊಳ್ಳುತ್ತಾರೆ.

ಸ್ನೇಹಿತರ ಗುಣ ವಿಷಯಗಳನ್ನಿಲ್ಲಿ ಹೇಳಿದೆ.

**ಆ ಯಾಹಿ ಪೂರ್ವೀರತಿ ಚರ್ಷಣೀರಾ ಅರ್ಯ ಆಶಿಷ ಉಪ ನೋ ಹರಿಭ್ಯಾಮ್ ।**
**ಇಮಾ ಹಿ ತ್ವಾ ಮತಯಃ ಸ್ತೋಮತಷ್ಟಾ ಇಂದ್ರ ಹವಂತೇ ಸಖ್ಯಂ ಜುಷಾಣಾಃ ॥೨॥**

**ಪದಾರ್ಥ:-** **[ಇಂದ್ರ]** ವಿದ್ಯಾವಂತನೇ! ನೀನು **[ಇಮಾಃ]** ಈ **[ಸ್ತೋಮತಷ್ಟಾಃ]** ವಿಸ್ತಾರವಾದ ಸ್ತುತಿಯಿಂದ **[ಸಖ್ಯಂ]** ಸ್ನೇಹತನವನ್ನು **[ಜುಷಾಣಾಃ]** ಪಡೆದುಕೊಂಡಿರುವ **[ಮತಯಃ]** ಬುದ್ಧಿಗಳು **[ತ್ವಾ]** ನಿನ್ನನ್ನು **[ಆ, ಹವಂತೇ]** ಆವರಿಸಿಕೊಂಡಿವೆ. ಅವುಗಳೊಂದಿಗೆ **[ನಃ]** ನಮ್ಮೆಲ್ಲರ ಸಮೀಪಕ್ಕೆ **[ಆ, ಯಾಹಿ]** ಬರುವವನಾಗು. ಹೇಗೆ **[ಅರ್ಯಃ]** ಒಡೆಯನು **[ಚರ್ಷಣೀಃ]** ಪ್ರಜೆಗಳನ್ನು ಸಮೀಪಿಸಿ **[ಆಶಿಷಃ]** ಹರಸುವವರೋ ಹಾಗೆ **[ಪೂರ್ವೀಃ]**

ಪ್ರಾಚೀನಕಾಲದಲ್ಲಿ ಮಾಡುವಂತಹ [ಹಿ] ಆಶೀರ್ವಾದವನ್ನು [ಹರಿಭ್ಯಾಂ] ವಾಯು ಅಗ್ನಿಗಳೊಂದಿಗೆ [ಅತಿ, ಆ] ಅತಿಶಯವಾಗಿ ಮಾಡುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾರು ಬುದ್ಧಿವಂತಿಕೆಯಿಂದ ಎಲ್ಲರೊಂದಿಗೆ ಸ್ನೇಹವನ್ನು ಬೆಳೆಸಿಕೊಂಡು, ಎಲ್ಲರ ಆಶೀರ್ವಾದವನ್ನು ಪಡೆದು ಸದಾ ಸುಖಿಗಳಾಗಿರಿ.

**ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.**

**ಆ ನೋ ಯಜ್ಞಂ ನಮೋವೃಧಂ ಸಜೋಷಾ ಇಂದ್ರ ದೇವ ಹರಿಭಿರ್ಯಾಹಿ ತೂಯಮ್ ।**
**ಅಹಂ ಹಿ ತ್ವಾ ಮತಿಭಿರ್ಜೋಹವೀಮಿ ಘೃತಪ್ರಯಾಃ ಸಧಮಾದೇ ಮಧೂನಾಮ್ ॥೩॥**

**ಪದಾರ್ಥ:-** [ದೇವ] ವಿದ್ಯಾವಂತನಾದ [ಇಂದ್ರ] ಐಶ್ವರ್ಯವಂತನೇ! ನೀನು [ಘೃತಪ್ರಯಾಃ] ಘೃತದಿಂದ ಪ್ರಸನ್ನನಾಗುವ [ಅಹಂ] ನಾನು [ಮತಿಭಿಃ] ಬುದ್ಧಿವಂತಿಕೆಯಿಂದ ಮತ್ತು ಮಧುರಾದಿ ಗುಣಗಳಿಂದ [ಸಧಮಾದೇ] ಸಮಾನ ಸ್ಥಾನದಲ್ಲಿ [ಹಿ] ಯಾವ ಕಾರಣದಿಂದ [ತ್ವಾ] ನಿನ್ನನ್ನು [ಜೋಹವೀಮಿ] ಪ್ರಸನ್ನಗೊಳಿಸಿ ಆಹ್ವಾನಿಸುತ್ತೇನೆ. [ಸಜೋಷಾಃ] ಸುಮಾನ ಪ್ರೀತಿ ಇರುವ ನೀನು [ಹರಿಭಿಃ] ಕುದುರೆಗಳಿಂತಿರುವ (ಅಗ್ನ್ಯಾದಿಭಿಃ) ಅಗ್ನ್ಯಾದಿಗಳೊಂದಿಗೆ [ನಃ] ನಮ್ಮ ಸಮೀಪಕ್ಕೆ [ನಮೋವೃಧಂ] ಅನ್ನಾದಿ ಐಶ್ವರ್ಯವನ್ನು ಹೆಚ್ಚಿಸಲು [ಯಜ್ಞಂ] ಸಂಗತೀಕರಣ ವ್ಯವಹಾರ ನಡೆಯುವಲ್ಲಿಗೆ [ತೂಯಂ] ಬೇಗನೆ [ಆ, ಯಾಹಿ] ಬರುವವನಾಗು.

**ಭಾವಾರ್ಥ:-** ಮನುಷ್ಯರು ಯಾರು ಎಲ್ಲರ ಸುಖವನ್ನು ಏಳಿಗೆಯನ್ನು ಬಯಸುವರೋ ಅಂತಹ ಜನರ ಸ್ತುತಿಯನ್ನು ಮಾಡಬೇಕು.

**ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.**

**ಆ ಚ ತ್ವಾಮೇತಾ ವೃಷಣಾ ವಹಾತೋ ಹರೀ ಸಖಾಯಾ ಸುಧುರಾ ಸ್ವಂಗಾ ।**
**ಧಾನಾವದಿಂದ್ರಃ ಸವನಂ ಜುಷಾಣಃ ಸಖಾ ಸಖ್ಯುಃ ಶೃಣವದ್ವಂದನಾನಿ ॥೪॥**

**ಪದಾರ್ಥ:-** [ಧಾನಾವತ] ಬೇಯಿಸಿದ ಧಾನ್ಯಗಳೊಂದಿಗೆ [ಸವನಂ] ಸಂಪತ್ತನ್ನು [ಜುಷಾಣಃ] ಸೇವಿಸುವವನಾದ [ಇಂದ್ರಃ] ಐಶ್ವರ್ಯದಾಯಕನಾದ [ಸಖಾ] ಸ್ನೇಹಿತನೇ! ನೀನು [ಸಖ್ಯುಃ] ಮಿತ್ರ ಜನರ ಸ್ತುತಿಯನ್ನು [ಶೃಣವತ್] ಕೇಳಿಸಿಕೋ [ಸ್ವಂಗ] ಉತ್ತಮ ಅವಯವಗಳಿಂದ ಕೂಡಿ [ಸಖಾಯಾ] ಮಿತ್ರರಂತಿರುವ [ಸುಧೂರಾ] ಉತ್ತಮ ರಥದಿಂದೊಡಗೂಡಿ [ವೃಷಣಾ] ಮಳೆಗರೆಯುವ ಗಾಳಿ ಮಿಂಚುಗಳೊಂದಿಗೆ [ತ್ವಾಂ] ನಿನ್ನನ್ನು [ಏತಾ] ಕರೆಯುವೆನು. [ಹರೀ] ಕರೆದುಕೊಂಡು ಹೋಗುವ ಕುದುರೆಗೆ ಸದೃಶನಾಗಿ [ಆ, ವಹತಃ] ಬರುವವನಾಗಿ ನಮ್ಮ ಮಾತುಗಳನ್ನು ಕೇಳಿಸಿಕೊಂಡು ನಮ್ಮ ಕಾರ್ಯಗಳನ್ನು ಸಾಧಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ತಾವು ದುಃಖದಲ್ಲಿದ್ದಾಗಲೂ ತಮ್ಮ ಸ್ನೇಹಿತರನ್ನು ಕೈ ಬಿಡುವುದಿಲ್ಲವೋ ಅವರೇ ನಿಜವಾದ ಮಿತ್ರರು. ಯಾರು ಬಹಳಷ್ಟು ಕುದುರೆಗಳನ್ನು ಇಟ್ಟುಕೊಂಡು ಎಲ್ಲರಿಗೂ ಅವರವರ ಇಷ್ಟಸ್ಥಾನಗಳಿಗೆ ತಲುಪಿಸುತ್ತಾರೋ ಹಾಗೆ ತನ್ನ ಆತ್ಮನಿಗೆ ಸದೃಶರಾದ ಪ್ರಿಯ ಜನರ ಇಷ್ಟ ಸಿದ್ಧಿಯನ್ನು ಸಾಧಿಸುತ್ತಾರೋ ಅವರೇ ನಿಜವಾದ ಸ್ನೇಹಿತರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕುವಿನ್ಮಾ ಗೋಪಾಂ ಕರಸೇ ಜನಸ್ಯ ಕುವಿದ್ರಾಜಾನಂ ಮಘವನ್ನೃಜೀಷಿನ್ ।**
**ಕುವಿನ್ಮ ಋಷಿಂ ಪಪಿವಾಂಸಂ ಸುತಸ್ಯ ಕುವಿನ್ಮೇ ವಸ್ವೋ ಅಮೃತಸ್ಯ ಶಿಕ್ಷಾಃ ॥೫॥**

**ಪದಾರ್ಥ:-** [**ಜನಸ್ಯ**] ಎಲ್ಲಾ ಜನರ [**ಕುವಿತ್**] ಶ್ರೇಷ್ಠವಾದ [**ಗೋಪಾಂ**] ಧಾರ್ಮಿಕ ಜನರ ರಕ್ಷಕನನ್ನಾಗಿ [**ಮಾ**] ನನ್ನನ್ನು [**ಕರಸೇ**] ಮಾಡುವವನಾಗು. [**ಮಘವನ್**] ಅತಿಶಯ ಐಶ್ವರ್ಯವಂತನೇ! [**ಋಜೀಷಿನ್**] ಕೋಮಲ ಸ್ವಭಾವದವನೇ! [**ರಾಜಮಾನಂ**] ನೀನು ಜನಸಮೂಹದ ರಾಜನಾಗಿರುವೆ. [**ಸುತಸ್ಯ**] ತಯಾರಿಸಿದ ಸೋಮರಸವನ್ನು [**ಪಪಿವಾಂಸಂ**] ಕುಡಿಯುವವನಾಗಿ [**ಕುವಿತ್**] ಶ್ರೇಷ್ಠನಾದ [**ಋಷಿಂ**] ವೇದಾರ್ಥವನ್ನೂ, ಬಲ್ಲವನನ್ನೂ [**ಮಾ**] ನನಗೆ [**ಶಿಕ್ಷಾಃ**] ಶಿಕ್ಷಣ ನೀಡಲು ಕಳುಹಿಸು. [**ಕುವಿತ್**] ಶ್ರೇಷ್ಠವಾದ [**ಅಮೃತಸ್ಯ**] ನಾಶರಹಿತವಾದ [**ವಸ್ವಃ**] ಸಂಪತ್ತನ್ನು [**ಮೇ**] ನನಗೆ ಕೊಡು.

**ಭಾವಾರ್ಥ:-** ಮನುಷ್ಯರೇ! ಯಾರು ನಿಮಗೆ ವಿದ್ಯಾ, ವಿನಯ, ಉತ್ತಮ ಶಿಕ್ಷಣ, ಇವುಗಳನ್ನು ಕಲಿಸಿ, ಬೆಳೆಸಿ ರಾಜನನ್ನಾಗಿ ಮಾಡುತ್ತಾರೋ, ವೇದಾರ್ಥಗಳನ್ನು ತಿಳಿಸಿ ಮೋಕ್ಷಕ್ಕೆ ದಾರಿತೋರಿಸುತ್ತಾರೋ ಅವರನ್ನು ತನ್ನ ಆತ್ಮಕ್ಕೆ ಸದೃಶನಾಗಿ ಸಂತೋಷಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ತ್ವಾ ಬೃಹಂತೋ ಹರಯೋ ಯುಜಾನಾ ಅರ್ವಾಗಿಂದ್ರ ಸಧಮಾದೋ ವಹಂತು ।**
**ಪ್ರ ಯೇ ದ್ವಿತಾ ದಿವ ಋಂಜಂತ್ಯಾತಾಃ ಸುಸಂಮೃಷ್ಟಾಸೋ ವೃಷಭಸ್ಯ ಮೂರಾಃ ॥೬॥**

**ಪದಾರ್ಥ:-** [**ಇಂದ್ರ**] ಗೌರವಿಸಲು ಯೋಗ್ಯನಾದ ಮನುಷ್ಯನೇ! [**ಏ**] ಯಾರು [**ಬೃಹಂತಃ**] ಅತ್ಯಂತ [**ಯುಜಾನಾಃ**] ಸಮಾಧಾನ ಮಾಡುವವರೋ [**ಸಧಮಾಧಃ**] ಸಮಾನ ಸ್ಥಾನದಲ್ಲಿ [**ಹರಯಃ**] ಸುಶಿಕ್ಷಿತ ಕುದುರೆಗಳಂತೆ ಅಗ್ನ್ಯಾದಿ ಪದಾರ್ಥಗಳನ್ನು [**ತ್ವಾ**] ನಿನಗೆ [**ಆ, ವಹಂತು**] ಸಮಾನ ಸ್ಥಾನಗಳಿಗೆ ತಲುಪಿಸಲಿ. [**ದ್ವಿತ**] ಎರಡು ಎರಡು ಪದಾರ್ಥಗಳಿರುವ [**ದಿವಃ**] ವಿದ್ಯೆಯಿಂದ ಪ್ರಕಾಶಿಸುವವನನ್ನು [**ಋಜಂತಿ**] ಸಿದ್ಧಗೊಳಿಸುತ್ತಾರೆ. [**ಸುಸಂಮೃಷ್ಟಾಸಃ**] ಉತ್ತಮ ರೀತಿಯಿಂದ ಶುದ್ಧಗೊಳಿಸಲಾದ [**ಆತಾಃ**] ವ್ಯಾಪಕ ದಿಕ್ಕುಗಳಿಗೆ ಸದೃಶವಾದ [**ವೃಷಭಸ್ಯ**] ಬಲಿಷ್ಠ ಪದಾರ್ಥಗಳ ವೇಗವನ್ನು [**ಪ್ರ, ವಹಂತು**] ಪಡೆಯುವವನಾಗು. ಆದರಿಂದ [**ಮೂರಾಃ**] ಮೂರ್ಖ ಜನರನ್ನು [**ಅರ್ವಾಕ್**] ಅಧೋಭಾಗಕ್ಕೆ ತಲುಪಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರು ಕುದುರೆಗಳಂತೆ ಮೂರ್ಖರನ್ನು ಅಭೀಷ್ಟ ಸ್ಥಾನಗಳಿಗೆ ತಲುಪಿಸುವವರಾಗಿ ಸಂಪೂರ್ಣ ಸಮೃದ್ಧಿಯನ್ನು ಪಡೆದುಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಪಿಬ ವೃಷಧೂತಸ್ಯ ವೃಷ್ಣ ಆ ಯಂ ತೇ ಶ್ಯೇನ ಉಶತೇ ಜಭಾರ ।**
**ಯಸ್ಯ ಮದೇ ಚ್ಯಾವಯಸಿ ಪ್ರ ಕೃಷ್ಟೀ-ರ್ಯಸ್ಯ ಮದೇ ಅಪ ಗೋತ್ರಾ ವವರ್ಥ ॥೭॥**

**ಪದಾರ್ಥ:-** [**ಇಂದ್ರ**] ಐಶ್ವರ್ಯ ದಾಯಕನೇ! ನೀನು [**ವೃಷಧೂತಸ್ಯ**] ಬಲಿಷ್ಠ ಪದಾರ್ಥವನ್ನು ಕಂಪಿಸುವವನಾದ [**ವೃಷ್ಣಃ**] ಬಲಿಷ್ಠ ಪದಾರ್ಥಗಳ ರಸವನ್ನು [**ಪಿಬ**] ಪಾನಮಾಡು. [**ಶ್ಯೇನಃ**] ಶ್ಯೇನ ಪಕ್ಷಿಯಂತೆ [**ಯಂ**] ಯಾವುದರ

ಉಶತೇ] ಇಚ್ಛೆ ಮಾಡುವವನು [ತೇ] ನಿನಗೆ ಯಾವುದನ್ನು [ಆ, ಜಭಾರ] ಧರಿಸಿಕೊಂಡಿರುತ್ತಾನೆ. [ಯಸ್ಯ] ಯಾವುದರ [ಮದೇ] ಮತ್ತಿನಲ್ಲಿ ನೀನು [ಕೃಷ್ಟೀಃ] ಮನುಷ್ಯರನ್ನು [ಪ್ರ, ಚ್ಯಾವಯಸಿ] ಸಮೀಪಿಸುತ್ತೀಯೋ [ಯಸ್ಯ] ಯಾವನ [ಮದೇ] ಸಂತೋಷಕ್ಕಾಗಿ [ಗೋತ್ರ] ಭೂಮಿಯಲ್ಲಿ [ಅಪವವರ್ಥ] ಇರುತ್ತೀಯೋ ಅದರಿಂದ ನಾವು ನ್ನ ಸೇವೆ ಮಾಡುತ್ತೇವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಶ್ಯೇನ ಪಕ್ಷಿಯು ಹೇಗೆ ೀಗವಾಗಿ ಚಲಿಸಿ ಎಲ್ಲರಿಗೂ ಅವರವರ ಅಭೀಷ್ಟವನ್ನು ನೆರವೇರಿಸಿ ಅವರಿಗೆ ಸುಖವನ್ನು ಕೊಡುತ್ತದೆಯೋ ಅದೇ ೀತಿ ನೀವು ಜನರ ಸಮೀಪದಲ್ಲಿ ಇರುವವರಾಗಿ ಅವರಿಗೆ ವಿದ್ಯಾ ಸಂಬಂಧೀ ವ್ಯವಹಾರಗಳ ಸಂತೋಷವನ್ನು ಪಡೆಯುವಂತೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೮॥**

**ಪದಾರ್ಥ:-** [ಅಸ್ಮಿನ್] ಈ [ವಾಜಸಾತೌ] ಜ್ಞಾನ ಅಜ್ಞಾನಗಳ ವಿಭಾಗ ಮಾಡುವಂತಹ [ಭರೇ] ಸಂಗ್ರಾಮದಲ್ಲಿ [ಊತಯೇ] ಉತ್ತಮ ಗುಣಗಳಲ್ಲಿ ಪ್ರವೇಶ ಪಡೆಯುವುದಕ್ಕಾಗಿ [ಸಮತ್ಸು] ಧಾರ್ಮಿಕ ಅಧಾರ್ಮಿಕ ವ್ಯವಹಾರಗಳ ಪರಸ್ಪರ ವಿರೋಧವೆಂಬ ಯುದ್ಧದಲ್ಲಿ [ಘ್ನಂತಂ] ವಿರೋಧವನ್ನು ನಾಶಮಾಡುತ್ತಾ [ಧನಾನಾಂ] ಐಶ್ವರ್ಯಗಳ ಮೇಲೆ [ಸಂಜಿತಂ] ಜಯ ಸಾಧಿಸುತ್ತಾ [ವೃತ್ರಾಣಿ] ಸಂಪತ್ತಿನ [ಶೃಣ್ವಂತಂ] ಉತ್ತಮ ರೀತಿಯಲ್ಲಿ ಪರೀಕ್ಷಿಸುತ್ತಾ [ಉಗ್ರಂ] ಉತ್ತಮ ಸ್ವಭಾವವಿರುವ [ಮಘವಾನಂ] ವಿದ್ಯಾಸಂಪತ್ತನ್ನು ಉತ್ಪಾದಿಸುವ [ನೃತಮಂ] ಶ್ರೇಷ್ಠ ವಿದ್ಯಾವಂತನನ್ನು [ಇಂದ್ರಂ] ಅವಿದ್ಯಾದಿ ದುಃಖಗಳನ್ನು ನಾಶ ಮಾಡುವವನನ್ನೂ [ಶುನಂ] ಉತ್ತಮ ರಸಗಳ ಸೇವನೆಯಿಂದ [ಸುಖಂ] ಸುಖವನ್ನು [ಹುವೇಮ] ನಿನಗೆ ಕೊಡುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ವಿದ್ಯಾವಂತರಿಗೆ ಶರಣಾಗಿ ಅವಿದ್ಯೆ ಮತ್ತು ದಾರಿದ್ರ್ಯನನ್ನು ನಾಶಮಾಡಿ, ವಿದ್ಯೆ ಮತ್ತು ಸಂಪತ್ತನ್ನು ಉಳಿಸಿಕೊಂಡು, ಸಂತೋಷವನ್ನು ಹೆಚ್ಚಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ವಿದ್ಯಾವಂತರು, ಸ್ನೇಹಿತರು ಮತ್ತು ಸೋಮಪಾನದ ಗುಣವನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತಮೂಲರನೆಯ ಸೂಕ್ತ ಸಮಾಪ್ತ**

**ಸೂಕ್ತ ೪೪**

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧-೨ ನಿಚೃತ್ ಬೃಹತಿ, ೩, ೫ ಬೃಹತೀ ಛಂದಃ । ಮಧ್ಯಮಃ ಸ್ವರಃ । ೪ ಸ್ವರಾಡನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ಈ ಮಂತ್ರದಲ್ಲಿ ಸೂರ್ಯನ ವಿಷಯ ತಿಳಿಸಲಾಗಿದೆ.

**ಅಯಂ ತೇ ಅಸ್ತು ಹರ್ಯತಃ ಸೋಮ ಆ ಹರಿಭಿಃ ಸುತಃ ।**
**ಜುಷಾಣ ಇಂದ್ರ ಹರಿಭಿರ್ನ ಆ ಗ-ಹ್ಯಾ ತಿಷ್ಠ ಹರಿತಂ ರಥಮ್ ॥೧॥**

**ಪದಾರ್ಥ:-** **[ಇಂದ್ರ]** ಸಂಪತ್ತನ್ನು ಬಯಸುವವನೇ! **[ಹರ್ಯತಃ]** ಅದರ ಕಾಮನೆಯನ್ನು ಮಾಡುತ್ತಾ **[ತೇ]** ನಿನ್ನ **[ಹರಿಭಿಃ]** ಅಶ್ವಗಳಿಗೆ ಸಮನಾದ ಸಾಧನಗಳಿಂದ **[ಅಯಂ]** ಈ **[ಸೋಮಃ]** ಐಶ್ವರ್ಯ ಸಮೂಹವನ್ನು **[ಸುತಃ]** ಸಮೀಪಿಸಿದವನು **[ಅಸ್ತು]** ಆಗು. **[ಜುಷಾಣಃ]** ಸೋಮರಸವನ್ನು ಸೇವನೆ ಮಾಡುತ್ತಾ **[ಹರಿಭಿಃ]** ಅಶ್ವದಂತೆ ಚಲಿಸುವ ವಾಹನದಿಂದ **[ಹರಿತಂ]** ಅಗ್ನ್ಯಾದಿ ಇಂಧನದಿಂದ ಚಾಲನೆಗೊಳಿಸಿದ **[ರಥಂ]** ವಾಹನದಲ್ಲಿ **[ಆತಿಷ್ಠ]** ಸ್ಥಿರನಾಗು. **[ನಃ]** ನಮ್ಮ ಸಮೀಪಕ್ಕೆ **[ಆ, ಗಹಿ]** ಬರುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಅನ್ಯರ ಸಂಪತ್ತನ್ನು ವೃದ್ಧಿಪಡಿಸುತ್ತಾರೋ, ಯಾರು ಐಶ್ವರ್ಯವಂತರು ಬರುವುದನ್ನು ನೋಡಿ ಸಂತೋಷಗೊಳ್ಳುತ್ತಾರೋ ಅವರೇ ಕರುಣಾಳುಗಳೆನಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹರ್ಯನ್ನುಷಸಮರ್ಚಯಃ ಸೂರ್ಯಂ ಹರ್ಯನ್ನರೋಚಯಃ ।**
**ವಿದ್ವಾಂಶ್ಚಿಕಿತ್ವಾನ್ ಹರ್ಯಶ್ವ ವರ್ಧಸ ಇಂದ್ರ ವಿಶ್ವಾ ಅಭಿ ಶ್ರಿಯಃ ॥೨॥**

**ಪದಾರ್ಥ:-** **[ಹರ್ಯನ್]** ಇಚ್ಛೆ ಪಡುವವನೇ! **[ಉಷಸಂ]** ಬೆಳಗಿನ ಸೂರ್ಯನಂತಿರುವ ನೀನು **[ಅರ್ಚಯಃ]** ಪೂಜಿಸುವವನಾಗು. **[ಹರ್ಯನ್]** ಬಹಳಷ್ಟು ಪದಾರ್ಥಗಳನ್ನು ಪಡೆಯುವವನೂ, ಬೇರೆಯವರು ಪಡೆಯುವಂತೆ ಮಾಡುವವನೂ ಆದ **[ಸೂರ್ಯಂ]** ಸೂರ್ಯನಿಗೆ ಮಿಂಚು ಹೇಗೋ ಹಾಗೆ **[ಅರೋಚಯಃ]** ಬೆಳಕು ನೀಡು. **[ಹರ್ಯಶ್ವ]** ಬಯಸುವವನೇ! ವೇಗಗತಿಯ ಅಶ್ವ ಅಗ್ನಿ ಮುಂತಾದ ಪದಾರ್ಥಗಳೊಂದಿಗೆ ಇರುವ **[ಇಂದ್ರ]** ಸಂಪತ್ತನ್ನು ಇಚ್ಛಿಸುವ ನೀನು **[ಚಿಕಿತ್ವಾನ್]** ಜ್ಞಾನವಂತನೂ **[ವಿದ್ವಾನ್]** ವಿದ್ಯಾವಂತನೂ ಆಗಿರುವೆ. **[ವಿಶ್ವಾಃ]** ಸಮಗ್ರವಾದ **[ಅಭಿ]** ಎದುರಾಗಿರುವ **[ಶ್ರಿಯಃ]** ಸಂಪತ್ತನ್ನು ಬಯಸುವೆ. **[ವರ್ಧಸೇ]** ಆದ್ದರಿಂದ ಏಳಿಗೆ ಹೊಂದುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಬೆಳಗಿನ ಸಮಯದಂತೆ ವಿದ್ಯೆಯಿಂದ ಪ್ರಕಾಶಮಾನನಾಗಿರುತ್ತಾನೋ, ಸೂರ್ಯನಂತೆ ಧರ್ಮಾಚರಣೆ ಮಾಡಲು ಇಚ್ಛಿಸುತ್ತಾನೋ, ಪ್ರಯತ್ನಪೂರ್ವಕ ಸಂಪತ್ತನ್ನು ಪಡೆಯಲು ಬಯಸುತ್ತಾನೋ, ಅವನು ಲಕ್ಷ್ಮೀವಂತನಾಗಿ ನಿರಂತರ ಏಳಿಗೆ ಹೊಂದುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದ್ಯಾಮಿಂದ್ರೋ ಹರಿಧಾಯಸಂ ಪೃಥಿವೀಂ ಹರಿವರ್ಪಸಮ್ ।**
**ಅಧಾರಯದ್ಧರಿತೋರ್ಭೂರಿ ಭೋಜನಂ ಯಯೋರಂತರ್ಹರಿಶ್ಚರತ್ ॥೩॥**

**ಪದಾರ್ಥ:-** **[ಇಂದ್ರಃ]** ಮಿಂಚು ಅಥವಾ ಸೂರ್ಯನು **[ಹರಿಧಾಯಸಂ]** ಕಿರಣಗಳ ಧಾರಣ ಮಾಡಲು **[ದ್ಯಾಂ]** ಪ್ರಕಾಶ ಲೋಕವನ್ನು **[ಹರಿವರ್ಪಸಮ್]** ಯಾವುದರಿಂದ ರೂಪವು ಪ್ರಕಟವಾಗುತ್ತದೆಯೋ ಅಂತಹ ಕಿರಣಗಳಿರುವ **[ಪೃಥಿವೀಂ]** ಭೂಲೋಕವನ್ನು **[ಅಧಾರಯತ್]** ಧಾರಣ ಮಾಡಿರುವನು. **[ಹರಿಃ]** ಹರಣಶೀಲ ವಾಯುವು **[ಯಯೋಃ]** ಯಾವ **[ಹರಿತೋಃ]** ಹರಣಶೀಲಗುಣಗಳ **[ಅಂತಃ]** ಮಧ್ಯದಲ್ಲಿದ್ದು **[ಭೂರಿ]** ಬಹಳಷ್ಟು **[ಭೋಜನಂ]** ಭಕ್ಷಣೆಯನ್ನು **[ಚರತ್]** ಮಾಡುವನೋ ಹಾಗೆ ನೀವೂ ಆಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸೂರ್ಯನಂತೆ ನಿಯಮಪೂರ್ವಕವಾಗಿ ಧರ್ಮಕಾರ್ಯಗಳನ್ನು ಮಾಡುವರೋ, ವಾಯುವಿನಂತೆ ನಿರಂತರ ಪ್ರಯತ್ನಶೀಲರಾಗಿರುವರೋ, ಅವರು ಸಿರಿವಂತರಾಗಿ ಆನಂದವನ್ನು ಅನುಭವಿಸುತ್ತಾರೆ.

ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಲಾಗಿದೆ.

**ಜಜ್ಞಾನೋ ಹರಿತೋ ವೃಷಾ ವಿಶ್ವಮಾ ಭಾತಿ ರೋಚನಮ್ ।**
**ಹರ್ಯಶ್ವೋ ಹರಿತಂ ಧತ್ತ ಆಯುಧ-ಮಾ ವಜ್ರಂ ಬಾಹ್ವೋರ್ಹರಿಮ್ ॥೪॥**

**ಪದಾರ್ಥ:-** **[ಜಜ್ಞಾನಃ]** ಜನ್ಮಪಡೆದವನಾಗಿ **[ಹರಿತಃ]** ಹಸಿರು ಬಣ್ಣವಿರುವ **[ಹರ್ಯಶ್ವಃ]** ಬಯಸಲು ಯೋಗ್ಯವಾದ ಬೇಗ ಚಲಿಸುವ ಮಿಂಚಿನ ರೂಪ ಪಡೆದಿರುವ **[ವೃಷಾ]** ವೃಷ್ಟಿಕಾರಕ **[ಹರಿತಂ]** ಇಚ್ಛೆಗೆ ಯೋಗ್ಯವಾದ **[ರೋಚನಂ]** ಪ್ರೀತಿಗೆ ಕಾರಣವಾದ **[ವಿಶ್ವಂ]** ಸಮಗ್ರ ಲೋಕವನ್ನು **[ಬಾಹ್ವೋಃ]** ಭುಜಗಳಿಂದ **[ಹರಿತಂ]** ಹರಣ ಮಾಡಲು ಸಮರ್ಥವಾದ **[ವಜ್ರಂ]** ಆಯುಧಗಳಂತೆ ಇರುವ ಕಿರಣಗಳ ಸಮೂಹವನ್ನು **[ಪ್ರ, ಆ, ಧತ್ತೇ]** ಧರಿಸಿರುವವನೋ **[ಆ, ಭಾತಿ]** ಪ್ರಕಾಶಮಾನನಾಗಿರುವನೋ, ಅವನನ್ನು ತಿಳಿದುಕೊಂಡು ನೀವು ಉಪಯೋಗಿಸಿಕೊಳ್ಳಿರಿ.

**ಭಾವಾರ್ಥ:-** ಸೂರ್ಯನು ಹೇಗೆ ಸಂಪೂರ್ಣ ಪ್ರಪಂಚವನ್ನೇ ಬೆಳಗಿಸುವನೋ, ಹಾಗೆ ವಿದ್ಯಾವಂತರು ವಿದ್ಯೆ ಎಂಬ ಬೆಳಕಿನಿಂದ ಧರ್ಮವನ್ನು ಬೆಳಗಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರೋ ಹರ್ಯಂತಮರ್ಜುನಂ ವಜ್ರಂ ಶುಕ್ರೈರಭೀವೃತಮ್ ।**
**ಅಪಾವೃಣೋದ್ಧರಿಭಿರದ್ರಿಭಿಃ ಸುತ-ಮುದ್ಗಾ ಹರಿಭಿರಾಜತ ॥೫॥**

**ಪದಾರ್ಥ:-** **[ಇಂದ್ರಃ]** ಸೂರ್ಯನು **[ಶುಕ್ರೈಃ]** ಬೇಗ ಸಾಧಿಸುವಂತಹ ಗುಣಗಳಿಂದ **[ಅಭೀವೃತಂ]** ಎಲ್ಲ ರೀತಿಯಿಂದಲೂ ಕೂಡಿರುವ **[ಅರ್ಜುನಂ]** ರೂಪವನ್ನು **[ವಜ್ರಂ]** ಕಿರಣಗಳ ಸಮೂಹದಿಂದ **[ಹರ್ಯ್ಯಂತಂ]** ಬಯಸುವವನಾಗಿ **[ಹರಿಭಿಃ]** ಕಿರಣಗಳಿಂದ ಮತ್ತು **[ಅದ್ರಿಭಿಃ]** ಮೇಘಗಳಿಂದ **[ಸುತಂ]** ಸಿದ್ಧಗೊಳಿಸಿದ ಪದಾರ್ಥಗಳನ್ನು **[ಅಪ, ವೃಣೋತ್]** ದೂರಗೊಳಿಸುವವನೋ ಹಾಗೆ **[ಹರಿಭಿಃ]** ಮನುಷ್ಯರೊಂದಿಗೆ ರಾಜನು **[ಗಾಃ]** ಭೂಮಿಯಂತಹ ಪದಾರ್ಥಗಳನ್ನು **[ಉತ್, ಆಜತ್]** ಪ್ರಕ್ಷೇಪಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಸೂರ್ಯನಂತೆ ವಿದ್ಯೆ, ನಮ್ರತೆ, ಸೇನೆ ಮತ್ತು ಧನ ಇವುಗಳನ್ನು ಪ್ರಕಾಶಗೊಳಿಸುವನೋ ಮತ್ತು ಅವಿದ್ಯೆಯನ್ನು ನಿವಾರಿಸಿಕೊಂಡು ಉತ್ತಮ ರಾಜನ ಸಲಹೆ ಪಡೆದು ರಾಜ್ಯವಾಳುವನೋ ಅವನ ಮನೋರಥ ಪೂರ್ಣವಾಗುತ್ತದೆ.

ಈ ಸೂಕ್ತದಲ್ಲಿ ಸೂರ್ಯ, ವಿದ್ಯುತ್, ಗಾಳಿ ಮತ್ತು ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೪೫

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೨ ನಿಚೃತ್ ಬೃಹತೀ, ೩, ೫ ಬೃಹತೀ ಛಂದಃ । ಮಧ್ಯಮಃ ಸ್ವರಃ । ೪ ಸ್ವರಾಡನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯ ಹೇಳಿದೆ.

**ಆ ಮಂದ್ರೈರಿಂದ್ರ ಹರಿಭಿ-ರ್ಯಾಹಿ ಮಯೂರರೋಮಭಿಃ ।**
**ಮಾ ತ್ವಾ ಕೇ ಚಿನ್ನಿ ಯಮನ್ ವಿಂ ನ ಪಾಶಿನೋಽತಿ ಧನ್ವೇವ ತಾँ ಇಹಿ ॥೧॥**

**ಪದಾರ್ಥ:-** **[ಇಂದ್ರ]** ಧನಸಂಪನ್ನನೇ! ನೀನು **[ಮಯೂರರೋಮಭಿಃ]** ನವಿಲುಗಳ ರೋಮದಂತೆ ರೋಮವಿರುವವರಿಂದ **[ಮಂದ್ರೈಃ]** ಆನಂದ ದಾಯಕ **[ಹರಿಭಿಃ]** ಪ್ರಯತ್ನಶೀಲ ಮನುಷ್ಯರಂತೆ ಕಿರಣಗಳೊಂದಿಗೆ **[ಆ, ಯಾಹಿ]** ಬರುವವನಾಗು. **[ಕೇಚಿತ್]** ಕೆಲವರು **[ತ್ವಾ]** ನಿನ್ನನ್ನು **[ಪಾಶಿನಃ]** ಬಂಧಿಸಲು ಪ್ರಯತ್ನಿಸುವರು. **[ವಿಂ][ನ]** ಪಕ್ಷಿಗಳಂತೆ **[ಮಾ]** **[ನೀ]** **[ಯಮನ್]** ಬಂದಿಸುವ ಕಷ್ಟವನ್ನು ಕೊಡಲಾರರು. **[ಧನ್ವೇವ]** ಧನುಸ್ಸಿನಂತೆ **[ತಾನ್]** ಅವರನ್ನು **[ಅತಿಃ]** ಅತಿಕ್ರಮಿಸಿ ಬರುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜಪುರುಷರು ಯುದ್ಧ ಸಾಮಗ್ರಿಗಳಿಂದ ಪರಿಪೂರ್ಣವಾದ ಸೇನೆ ರಥಗಳ ಮೂಲಕ ಅತಿ ಬುದ್ಧಿವಂತಿಕೆಯಿಂದ ಯುದ್ಧಮಾಡಿ ವಿಜಯ ಪಡೆಯಬೇಕು. ಬೇರೆ ಜನರು ಅವರ ಯುದ್ಧಕೌಶಲವನ್ನು ತಿಳಿದುಕೊಳ್ಳದಂತೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವೃತ್ರಖಾದೋ ವಲಂರುಜಃ ಪುರಾಂ ದರ್ಮೋ ಅಪಾಮಜಃ ।**
**ಸ್ಥಾತಾ ರಥಸ್ಯ ಹರ್ಯೋರಭಿಸ್ವರ ಇಂದ್ರೋ ದೃಳ್ಹಾ ಚಿದಾರುಜಃ ॥೨॥**

**ಪದಾರ್ಥ:-** **[ವೃತ್ರಖಾದಃ]** ಮೇಘವನ್ನು ಭಕ್ಷಿಸುವ ಕಿರಣಗಳು ಅಥವಾ ಗಾಳಿಯು **[ವಲಂರುಜಃ]** ಮೋಡಗಳನ್ನು ನಾಶ ಮಾಡುವ ಮತ್ತು **[ಅಪಾಂ]** ನೀರು ಸುರಿಸಲು **[ಅಜಃ]** ಪ್ರೇರಣೆ ನೀಡುವ ಹಾಗೂ **[ಆ, ರುಜಃ]** ನಾಲ್ಕು ದಿಕ್ಕುಗಳಿಂದಲೂ ಭೇಧಿಸುವ **[ಇಂದ್ರಃ]** ಸೂರ್ಯನು ಹೇಗೆ **[ದೃಢ]** ಬಲವಾಗಿ ಭಂಗಗೊಳಿಸುವನೋ ಹಾಗೆ **[ಚಿತ್]** ನಾವೂ ಸಹ **[ಪುರಾಂ]** ಶತ್ರುಪಟ್ಟಣಗಳಲ್ಲಿರುವ ವೀರರನ್ನು **[ಧರ್ಮಃ]** ನಾಶಗೊಳಿಸಬೇಕು. **[ಹರ್ಯೋಃ]** ಅಶ್ವಗಳ **[ಅಭಿಸ್ವರೇ]** ನಾಲ್ಕೂ ದಿಕ್ಕುಗಳಿಂದ ಶಬ್ದ ಮಾಡುತ್ತಲಿರುವ **[ರಥಸ್ಯ]** ರಥದಲ್ಲಿ **[ಸ್ಥಾತ]** ಇರುವವನಾಗಿ ವೀರರನ್ನು ಜಯಿಸಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಮಿಂಚು, ಸೂರ್ಯ, ಗಾಳಿಗಳು ಮೋಡಗಳ ಅವಯವಗಳನ್ನು ಭಂಗಗೊಳಿಸುತ್ತವೆಯೋ, ಹಾಗೆ ಧಾರ್ಮಿಕ ರಾಜನು ಶತ್ರುಗಳ ಆಕ್ರಮಣೋಪಯಗಳನ್ನು ಭಂಗ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗಂಭೀರಾँ ಉದಧೀರಿವ ಕ್ರತುಂ ಪುಷ್ಯಸಿ ಗಾ ಇವ ।**
**ಪ್ರ ಸುಗೋಪಾ ಯವಸಂ ಧೇನವೋ ಯಥಾ ಹ್ರದಂ ಕುಲ್ಯಾ ಇವಾಶತ ॥೩॥**

**ಪದಾರ್ಥ:-** **[ಗಂಭೀರಾನ್]** ಅಗಾಧವಾದ **[ಉದಧೀನಿವ]** ಸಮುದ್ರದಂತೆ ಮತ್ತು **[ಗಾ, ಇವ]** ಭೂಮಿಯಂತೆ **[ಕ್ರತುಂ]** ಬುದ್ಧಿಯನ್ನು **[ಪುಷ್ಯಸಿ]** ಪರಿಪೂರ್ಣಗೊಳಿಸುವೆ. **[ಸುಗೋಪಾಃ]** ಉತ್ತಮರೀತಿಯ ರಕ್ಷಕನಾಗಿ **[ಯಥಾ]** ಹೇಗೆ **[ಧೇನವಃ]** ಗೋವುಗಳು **[ಯವಸಂ]** ಹುಲ್ಲುಗಳಿರುವ **[ಹ್ರದಂ]** ನೀರುಗಳಿಂದ **[ಕುಲ್ಯಾ ಇವ]** ಕಾಲುವೆಗಳಂತೆ **[ಪ್ರ, ಆಶತ]** ಬರುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವನು ಸಮುದ್ರದಂತೆ ಅಚಲನೂ, ಗಂಭೀರನೂ, ಆಗಿರುವನೋ, ಭೂಮಿಯಂತೆ ಕ್ಷಮಾಶೀಲನೂ, ಪಾಲನೆ ಪೋಷಣೆ ಮಾಡುವವನೋ ಅವನು ಮತ್ತು ಗೋವಿನಂತೆ ದಾನ ಮಾಡುವವನೂ, ನದಿಯಂತೆ ವೃದ್ಧಿ ಹೊಂದುವವನೋ ಅವನು ಸುಖ ಸಂವೃದ್ಧನಾಗತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನಸ್ತುಜಂ ರಯಿಂ ಭರಾಂಶಂ ನ ಪ್ರತಿಜಾನತೇ ।**
**ವೃಕ್ಷಂ ಪಕ್ವಂ ಫಲಮಂಕೀವ ಧೂನುಹೀಂದ್ರ ಸಂಪಾರಣಂ ವಸು ॥೪॥**

**ಪದಾರ್ಥ:-** **[ಇಂದ್ರ]** ಧನದಾನ ಮಾಡುವವನೇ! ನೀನು **[ಅಂಶಂ]** **[ನ]** ಭಾಗಕ್ಕೆ ಸಮನಾದ **[ನಃ]** ನಮ್ಮೆಲ್ಲರಿಗೆ **[ತುಜಂ]** ಸಂಗ್ರಹ ಯೋಗ್ಯವಾದ **[ರಯಿಂ]** ಧನರಾಶಿಯನ್ನು **[ಆ]** **[ಭರ]** ಕೊಡುವವನಾಗು. **[ವೃಕ್ಷಂ]** ಮರವನ್ನು **[ಪಕ್ವಂ ಫಲಂ]** ಮಾಗಿದ ಫಲವನ್ನು **[ಅಂಕೀವ]** ಅಂಕುಶ ಧಾರಣ ಮಾಡಿದವನಂತೆ **[ಸಂಪಾರಣಂ]** ದುಃಖದಿಂದ ದಾಟಿಸುವವನಾಗಿ **[ವಸು]** ಹಣವನ್ನು **[ಧೂನುಃ]** ಕಳುಹಿಸಿಕೊಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಇನ್ನೊಬ್ಬರ ಸುಖಕ್ಕಾಗಿಯೇ ಹಣಗಳಿಸುತ್ತಾರೋ ದುಃಖನಾಶಕ್ಕಾಗಿಯೇ ಬಲಿಷ್ಠರಾಗಿರುತ್ತಾರೋ ಅವರೇ ಸುಸಂಪನ್ನರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ವಯುರಿಂದ್ರ ಸ್ವರಾಳಸಿ ಸ್ಮದ್ದಿಷ್ಟಿಃ ಸ್ವಯಶಸ್ತರಃ ।**
**ಸ ವಾವೃಧಾನ ಓಜಸಾ ಪುರುಷ್ಟುತ ಭವಾ ನಃ ಸುಶ್ರವಸ್ತಮಃ ॥೫॥**

**ಪದಾರ್ಥ:-** **[ಪುರುಷ್ಟುತ]** ಬಹುಜನರಿಂದ ಪ್ರಶಂಸಿತನಾದ **[ಇಂದ್ರ]** ಐಶ್ವರ್ಯವಂತನೇ! ನೀನು **[ಸ್ವಯುಃ]** ಧನವನ್ನು ಪಡೆದು **[ಸ್ವರಾಟ್]** ಸ್ವತಂತ್ರ ರಾಜ್ಯ ಶಾಸಕನೂ **[ಸ್ಮದ್ದಿಷ್ಟಃ]** ಕಲ್ಯಾಣಕಾರಕ ಉಪದೇಶ ಮಾಡುವವನು ಮತ್ತು **[ಸ್ವಯಶಸ್ತರಃ]** ಕೀರ್ತಿ, ಧನ, ಪ್ರಶಂಸೆಗಳಿಂದ **[ಅಸಿ]** ಕೂಡಿದವನಾಗಿರುವೆ. **[ಸಃ]** ಅವನು **[ಓಜಸಾ]** ಪರಾಕ್ರಮದಿಂದ **[ವಾವೃಧಾನಃ]** ವೃದ್ಧಿ ಹೊಂದುತ್ತಾ **[ಸುಶ್ರವಸ್ತಮಃ]** ಶ್ರೇಷ್ಠ ಧನದಿಂದೊಡಗೂಡಿ **[ನಃ]** ನಮ್ಮ ಸಮೀಪಕ್ಕೆ **[ಭವ]** ಬರುವವನಾಗು.

**ಭಾವಾರ್ಥ:-** ಯಾವನು ಅತ್ಯಂತ ಪ್ರಶಂಸೆ ಪಡೆದಿರುವನೋ, ಶ್ರೇಷ್ಠ ಕರ್ಮ ಮಾಡುವವನೋ, ಉತ್ತಮ ಸ್ವಭಾವದವನೋ ಅವನೇ ಪ್ರಜೆಗಳನ್ನು ರಾಜ್ಯವನ್ನೂ ಬೆಳೆಸಲು ಯೋಗ್ಯನಾಗಿ ಚಕ್ರವರ್ತಿ ರಾಜನೆನಿಸಿಕೊಳ್ಳುತ್ತಾನೆ.

ಈ ಸೂಕ್ತದಲ್ಲಿ ಸೂರ್ಯ, ವಿದ್ಯಾವಂತ ಮತ್ತು ರಾಜ ಇವರ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೪೬

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧ ವಿರಾಟ್ ತ್ರಿಷ್ಟುಪ್, ೨, ೫ ನಿಚೃತ್ ತ್ರಿಷ್ಟುಪ್, ೩, ೪ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಷಯ ತಿಳಿಸಲಾಗಿದೆ.

**ಯುಧ್ಮಸ್ಯ ತೇ ವೃಷಭಸ್ಯ ಸ್ವರಾಜ ಉಗ್ರಸ್ಯ ಯೂನಃ ಸ್ಥವಿರಸ್ಯ ಘೃಷ್ವೇಃ । ಅಜೂರ್ಯತೋ**
**ವಜ್ರಿಣೋ ವೀರ್ಯಾ (ಅ) ೩ ಣೀ-ಂದ್ರ ಶ್ರುತಸ್ಯ ಮಹತೋ ಮಹಾನಿ ॥೧॥**

**ಪದಾರ್ಥ:-** [**ಇಂದ್ರ**] ಅತಿಶಯ ಐಶ್ವರ್ಯದಾಯಕನೇ! [**ಯುಧ್ಮಸ್ಯ**] ಯುದ್ಧ ಮಾಡುವುದರಲ್ಲಿ [**ಸ್ವರಾಜಃ**] ತನ್ನಿಂದ ಪ್ರಕಟಗೊಳಿಸಲಾದ [**ವೃಷಭಸ್ಯ**] ಬಲಿಷ್ಠವಾದ [**ಉಗ್ರಸ್ಯ**] ತೇಜಸ್ವಿಯಾದ [**ಯೂನಃ**] ಯೌವನಾವಸ್ಥೆಯಲ್ಲಿರುವ ಸೈನ್ಯದ [**ಸ್ಥವಿರಸ್ಯ**] ವೃದ್ಧಾವಸ್ಥೆಯಲ್ಲಿರುವ ಸೈನಿಕರ [**ಘೃಷ್ವೇಃ**] ಶತ್ರುಗಳನ್ನು ಹತ್ತಿಕ್ಕಲು ಸಮರ್ಥವಾದ [**ಅಜೂರ್ಯತಃ**] ಶರೀರ ಶೈಥಿಲ್ಯ ರಹಿತವಾದ [**ವಜ್ರಿಣಃ**] ಬಹುವಿಧ ಆಯುಧಗಳಿರುವ [**ಮಹತಃ**] ಸೇವೆ ಮಾಡಲು ಯೋಗ್ಯವಾದ [**ಶ್ರುತಸ್ಯ**] ಪ್ರಸಿದ್ಧವಾದ [**ತೇ**] ನಿನ್ನ [**ಮಹಾನಿ**] ಶ್ರೇಷ್ಠರಾದ [**ವೀರ್ಯಾಣಿ**] ವೀರ ಪುರುಷರ ಕೆಲಸ ಕಾರ್ಯಗಳೇನಿವೆಯೋ ಅವು ಸತ್ಕಾರಯೋಗ್ಯವಾಗಿವೆ.

**ಭಾವಾರ್ಥ:-** ಯಾವ ರಾಜನು ರಾಜಲಕ್ಷಣ ಸಂಪನ್ನನಾಗಿರುವನೋ, ಅವನು ಯುವಕನಾಗಿರಲಿ ವೃದ್ಧನಾಗಿರಲಿ ತನ್ನ ಸಾಮರ್ಥ್ಯಕ್ಕನುಗುಣವಾಗಿ ಪ್ರಯತ್ನಪೂರ್ವಕ ಬಲವನ್ನು ಹೆಚ್ಚಿಸಿಕೊಳ್ಳುವವನಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹಾಁ ಅಸಿ ಮಹಿಷ ವೃಷ್ಣ್ಯೇಭಿ-ರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।**
**ಏಕೋ ವಿಶ್ವಸ್ಯ ಭುವನಸ್ಯ ರಾಜಾ ಸ ಯೋಧಯಾ ಚ ಕ್ಷಯಯಾ ಚ ಜನಾನ್ ॥೨॥**

**ಪದಾರ್ಥ:-** [**ಮಹಿಷ**] ಗೌರವ ಯೋಗ್ಯನಾದ [**ಉಗ್ರ**] ಬಲಾದಿಗಳಿಂದ ಕೂಡಿರುವ [**ರಾಜನ್**] ಪ್ರಸಿದ್ಧ ರಾಜನೇ! ನೀನು [**ವೃಷ್ಣ್ಯೇಭಿಃ**] ಬಲಿಷ್ಠ ಯೋಧರಿಂದ ಉತ್ಪನ್ನವಾದ ಗುಣಗಳೊಂದಿಗೆ [**ಮಹಾನ್**] ಶ್ರೇಷ್ಠ ಗುಣಗಳಿರುವ [**ಧನಸ್ಪೃತ್**] ಸಂಪತ್ತಿನ ಸೇವಕನಾದ [**ಏಕಃ**] ಏಕಾಕಿಯಾಗಿ [**ಅನ್ಯಾನ್**] ಶತ್ರುಗಳನ್ನು [**ಸಹಮಾನಃ**] ಎದುರಿಸುವವನಾಗಿ [**ವಿಶ್ವಸ್ಯ**] ಸಮಗ್ರವಾದ [**ಭುವನಸ್ಯ**] ಎಲ್ಲಾ ಜೀವರಾಶಿಗಳ ನಿವಾಸ ಸ್ಥಾನಗಳಿಂದೊಡಗೂಡಿದ [**ರಾಜಾ**] [**ಅಸಿ**] ರಾಜನು ನೀನಾಗಿರುವೆ. [**ಸಃ**] ಅಂತಹ ನೀನು [**ಜನಾನ್**] ಪ್ರಸಿದ್ಧ ವೀರಪುರುಷರನ್ನು [**ಯೋಧಯ**] ಯುದ್ಧಕ್ಕೆ ಕಳುಹಿಸು. [**ಕ್ಷಯಾಯ**] ಶತ್ರುಗಳ ಕ್ಷಯಕ್ಕೆ ಅವರು ಪ್ರಯತ್ನಿಸಲಿ. [**ಚ**] ಹಾಗೂ ಸಜ್ಜನರನ್ನು ತನ್ನ ರಾಜ್ಯದಲ್ಲಿ ನೆಲೆಗೊಳಿಸು.

**ಭಾವಾರ್ಥ:-** ಯಾವ ರಾಜನು ಶರೀರ ಬಲ ಆತ್ಮಬಲದಿಂದ ಪರಿಪೂರ್ಣನಾಗಿದ್ದು ಶತ್ರುಬಲವನ್ನು ದಮನಿಸುತ್ತ ಶ್ರೇಷ್ಠ ಜನರನ್ನು ಗೌರವಿಸಿ ಅವರಿಗೆ ಸಂತೋಷ ಉಂಟು ಮಾಡುತ್ತಾರೋ ಅವನೇ ಶ್ರೇಷ್ಠ ರಾಜನೆನಿಸಿಕೊಳ್ಳುತ್ತಾನೆ.

ಈ ಮಂತ್ರದಲ್ಲಿ ವಿದ್ಯುತ್ ವಿಷಯವನ್ನು ಹೇಳಲಾಗಿದೆ.

**ಪ್ರ ಮಾತ್ರಾಭಿ ರಿರಿಚೇ ರೋಚಮಾನಃ ಪ್ರ ದೇವೇಭಿರ್ವಿಶ್ವತೋ ಅಪ್ರತೀತಃ ।**

**ಪ್ರ ಮಜ್ಮನಾ ದಿವ ಇಂದ್ರ ಪೃಥಿವ್ಯಾಃ ಪ್ರೋರೋರ್ಮಹೋ ಅಂತರಿಕ್ಷಾದೃಜೀಷೀ ॥೩॥**

**ಪದಾರ್ಥ:-** **[ರೋಚಮಾನಃ]** ಪ್ರೀತಿಸುವವನಾಗಿ **[ವಿಶ್ವತಃ]** ಎಲ್ಲ ಕಡೆಗಳಿಂದಲೂ **[ಅಪ್ರತೀತಃ]** ಪ್ರಸಿದ್ಧಿ ಪಡೆಯದಿರುವ **[ಋಜೀಷೀ]** ಸರಳ ಸ್ವಭಾವದವನಾದ **[ಇಂದ್ರಃ]** ಸೂರ್ಯನಂತೆ ತೇಜಸ್ವಿಯಾದ ವಿದ್ಯುದ್ರೂಪಾಗ್ನಿಯು **[ಮಾತ್ರಾಭಿಃ]** ಸೂಕ್ಷ್ಮ ಅವಯವಗಳಿಂದ **[ಪ್ರ, ರಿರಿಚೇ]** ಪ್ರಕೃಷ್ಟವಾಗಿ ಬೆಳೆಯುತ್ತಾನೆ ಮತ್ತು **[ದೇವೇಭಿಃ]** ವಿದ್ಯಾವಂತರೊಂದಿಗೆ **[ಪ್ರ]** ವೃದ್ಧಿ ಹೊಂದುತ್ತಾನೆ. **[ಮಜ್ಮನಾ]** ಬಲದಿಂದ **[ದಿವಃ]** ಪ್ರಕಾಶದಿಂದ **[ಪೃಥಿವ್ಯಾಃ]** ಭೂಮಿಯ **[ಉರೋಃ]** ಬಹುವಿಧ ಗುಣಗಳ ಸಮುದಾಯದಿಂದ ಕೂಡಿ **[ಮಹಃ]** ಮಹತ್ತಾದ **[ಅಂತರಿಕ್ಷಾತ್]** ಆಕಾಶದಿಂದ **[ಪ್ರ]** ಹೇಗೆ ಬೆಳೆಯಬಹುದೋ ಹಾಗೆ ಆಚರಿಸುವನು. **[ಪ್ರ]** ನೀವೂ ಸಹ ಅದೇ ರೀತಿ ಅವನ ಪ್ರತಿಷ್ಠೆಯನ್ನು ಹೆಚ್ಚಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾವುದೇ ರೀತಿಯ ವಿಕಾರವನ್ನು ಪಡೆಯದ ವಿದ್ಯುದ್ರೂಪಾಗ್ನಿಯು ಗಂಧಕಾದಿ ವಿನಾಶಕ ದ್ರವ್ಯಗಳಲ್ಲಿದ್ದರೂ ಸಹ ಹೇಗೆ ಯಾವುದೇ ರೀತಿಯ ಹಾನಿ ಮಾಡುವುದಿಲ್ಲವೋ ಅದೇ ರೀತಿ ನೀವೂ ಸಹ ಯಾರಿಗೂ ಹಾನಿ ಮಾಡದೇ ಸ್ನೇಹ ಭಾವದಿಂದ ವರ್ತಿಸುವವರಾಗಿರಿ.

ಈ ಮಂತ್ರದಲ್ಲಿ ವಿದ್ಯಾವಂತರ ಗುಣವನ್ನು ಹೇಳಲಾಗಿದೆ.

**ಉರುಂ ಗಭೀರಂ ಜನುಷಾಭ್ಯು (ಉ) ಗ್ರಂ ವಿಶ್ವವ್ಯಚಸಮವತಂ ಮತೀನಾಮ್ ।**

**ಇಂದ್ರಂ ಸೋಮಾಸಃ ಪ್ರದಿವಿ ಸುತಾಸಃ ಸಮುದ್ರಂ ನ ಸ್ರವತ ಆ ವಿಶಂತಿ ॥೪॥**

**ಪದಾರ್ಥ:-** **[ಪ್ರದಿವಿ]** ಉತ್ತಮ ಬೆಳಕಿನಲ್ಲಿ **[ಸುತಾಸಃ]** ವಿದ್ಯಾ ವಿನಯಗಳಿಂದ **[ಸೋಮಾಸಃ]** ಐಶ್ವರ್ಯವಂತ ವಿದ್ವಾಂಸರು **[ಜನುಷಾ]** ಜನ್ಮದಿಂದ **[ಉರುಂ]** ಅನೇಕ ರೀತಿಯ ಗುಣವಂತರಾಗಿ **[ಗಭೀರಂ]** ಗೂಢ ಅಭಿಪ್ರಾಯಗಳಿರುವ **[ಉಗ್ರಂ]** ಎಲ್ಲ ಗುಣಗಳೊಂದಿಗೆ **[ವಿಶ್ವವ್ಯಚಸಂ]** ಸರ್ವತ್ರ ವ್ಯಾಪಕವಾಗಿ **[ಮತೀನಾಂ]** ಮನುಷ್ಯರನ್ನು **[ಅವತಂ]** ರಕ್ಷಿಸುವವರಾಗಿರಿ. **[ಇಂದ್ರಂ]** ವಿದ್ಯುತ್ ರೂಪ ಅಗ್ನಿಯನ್ನು **[ಸ್ರವತಃ]** ಹರಿಯುವ ನದಿಗಳು **[ಸಮುದ್ರಂ]** **[ನ]** ಸಮುದ್ರಕ್ಕೆ ಹೇಗೋ ಹಾಗೆ **[ಅಭಿ, ಆ, ವಿಶಂತಿ]** ಎಲ್ಲ ಕಡೆಗಳಿಂದಲೂ ಪ್ರವೇಶಿಸುವವರಾಗಿರಿ. ಅಂದರೆ ಅದರಲ್ಲಿ ಮನಸ್ಸಿಟ್ಟು ಸಂಪದ್ಭರಿತರಾಗುತ್ತ ಅದು ನಷ್ಟವಾಗದಂತೆ ಮಾಡಿರಿ.

**ಭಾವಾರ್ಥ:-** ಯಾರು ವಿದ್ಯುತ್ ಸಂಬಂಧೀ ವಿದ್ಯೆಯನ್ನು ಚೆನ್ನಾಗಿ ತಿಳಿದುಕೊಂಡು ಅದರ ಮೂಲಕ ತಮ್ಮ ಕಾರ್ಯ ಕಲಾಪಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ವಿದ್ಯುತ್ತಿನ ಸಕಲ ವಿಧ ಉಪಕಾರವನ್ನು ಪಡೆಯುವರೋ ಅವರು ಲಕ್ಷ್ಮೀವಂತರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಂ ಸೋಮಮಿಂದ್ರ ಪೃಥಿವೀದ್ಯಾವಾ ಗರ್ಭಂ ನ ಮಾತಾ ಬಿಭೃತಸ್ತ್ವಾಯಾ ।**

**ತಂ ತೇ ಹಿನ್ವಂತಿ ತಮು ತೇ ಮೃಜಂತ್ಯ-ಧ್ವರ್ಯವೋ ವೃಷಭ ಪಾತವಾ ಉ ॥೫॥**

**ಪದಾರ್ಥ:-** [**ವೃಷಭ**] ಬಲಿಷ್ಠನಾದ [**ಇಂದ್ರ**] ಐಶ್ವರ್ಯದಾಯಕನೇ! [**ತ್ವಯಾ**] ನಿನ್ನಿಂದ [**ಪೃಥಿವೀದ್ಯಾವ**... ಭೂಮಿ ಮತ್ತು ವಿದ್ಯುತ್‌ಗಳು [**ಮಾತಾ**] ತಾಯಿಯು [**ಗರ್ಭಂ**] [**ನ**] ಗರ್ಭಧರಿಸುವ ರೀತಿಯಲ್ಲಿ [**ಯ**... [**ಸೋಮಂ**] ಯಾವ ಸಂಪತ್ತನ್ನು [**ಬಿಭೃತಃ**] ಧಾರಣ ಮಾಡುತ್ತಾನೋ [**ತಂ**] ಅವನನ್ನು [**ತೇ**] ನಿನಗಾಗಿ [**ಹಿನ್ವಂ**... ವೃದ್ಧಿಪಡಿಸುತ್ತಾರೆ. [**ತಂ, ಉ**] ಅವನನ್ನೇ [**ತೇ**] ನಿನಗಾಗಿ [**ಅಧ್ವರ್ಯವಃ**] ಹಿಂಸಾರಹಿತವಾಗಿ ವೃದ್ಧಿಪಡಿಸಲ... ನಿನಗಾಗಿ ನಾವು [**ಮೃಜಂತಿ**] ಶುದ್ಧಿಗೊಳಿಸುತ್ತೇವೆ. [**ಉ**] ಅವರನ್ನೇ [**ಪಾತವೈ**] ರಕ್ಷಿಸಲು ನೀನು ಪ್ರಯತ್ನಿಸ...

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ವಿದ್ಯಾವಂತರು ಭೂಮಿ... ಮತ್ತು ಸೂರ್ಯನಿಗೆ ಸಮನಾಗಿ ಎಲ್ಲಾ ಜನರ ವಿದ್ಯೆ ಮತ್ತು ಬಲವನ್ನು ಹೆಚ್ಚಿಸುವರೋ ಮತ್ತು ಉತ್ತ... ಶಿಕ್ಷಣದಿಂದ ಅವರನ್ನು ಪವಿತ್ರಗೊಳಿಸುವರೋ ಅವರೇ ತಾಯಿಯಂತೆ ಪಾಲನೆ ಮಾಡುವವರಾಗುತ್ತಾರೆ. ಆದ್ದರಿಂ... ಅಂತಹ ವಿದ್ಯಾವಂತರು ಎಲ್ಲರಿಂದ ಸತ್ಕಾರಕ್ಕೆ ಯೋಗ್ಯರಾಗಿರುತ್ತಾರೆ.

ಈ ಸೂಕ್ತದಲ್ಲಿ ವಿದ್ಯುತ್ ಮತ್ತು ಭೂಮ್ಯಾದಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥ... ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತಾನೆಯ ಸೂಕ್ತ ಸಮಾಪ್ತ**

## ಸೂಕ್ತ ೪೭

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧-೩ ನಿಚೃತ್ ತ್ರಿಷ್ಟುಪ್, ೪ ತ್ರಿಷ್ಟುಪ್, ೫ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಚಾರವನ್ನು ತಿಳಿಸಲಾಗಿದೆ.

**ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।**
**ಆ ಸಿಂಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಮ್ ॥೧॥**

**ಪದಾರ್ಥ:-** [**ಇಂದ್ರ**] ಅತುಲೈಶ್ವರ್ಯ ಸಂಪನ್ನನೇ! [**ಮರುತ್ವಾನ್**] ಶ್ರೇಷ್ಠ ಮನುಷ್ಯರಿಂದೊಡಗೂಡಿ... ರಾಜನೇ! [**ವೃಷಭಃ**] ಬಲಿಷ್ಠನಾದ ನೀನು [**ರಣಾಯ**] ಸಂಗ್ರಾಮಕ್ಕಾಗಿ [**ಮದಾಯ**] ಆನಂದಕ್ಕಾಗಿ [**ಅನುಷ್ವಧ**... ಅನುಕೂಲಕರ ಆಹಾರ ಸಾಮಗ್ರಿಗಳಿರುವ [**ಸೋಮಂ**] ಶ್ರೇಷ್ಠ ಓಷಧಿ ರಸವನ್ನು [**ಪಿಬ**] ಸೇವನೆ ಮಾಡ... [**ಜಠರೇ**] ಉದರದಲ್ಲಿ [**ಮಧ್ವಃ**] ಮಧುರವಾದ [**ಊರ್ಮಿಂ**] ಅಲೆಗಳನ್ನು [**ಆ, ಸಿಂಚಸ್ವ**] ಉತ್ಪಾದನೆಗೊಳಿಸ... [**ತ್ವಂ**] ನೀನು [**ಪ್ರದಿವಃ**] ವಿದ್ಯಾವಿನಯಗಳಿಂದ ಶೋಭಿಸುತ್ತಿರುವ [**ಸುತಾನಾಂ**] ಉತ್ಪಾದನೆಗೊಳಿಸಿದ ಐಶ್ವರ್ಯ... ಪದಾರ್ಥಗಳ [**ರಾಜಾ**] ಒಡೆಯನು [**ಅಸಿ**] ಆಗಿರುವೆ.

**ಭಾವಾರ್ಥ:-** ರಾಜನೇ! ನೀನು ವಿಜಯಶೀಲನಾಗಬೇಕು. ಆರೋಗ್ಯವಂತನಾಗಬೇಕು. ಬಲವಂತನಾಗಬೇ... ಬಹುಕಾಲ ಬದುಕಬೇಕು ಎಂಬುದಾಗಿ ಇಚ್ಛಿಸುತ್ತಿದ್ದರೆ ಬ್ರಹ್ಮಚರ್ಯಾಶ್ರಮದಲ್ಲಿ ಧನುರ್ವೇದವನ್ನು ಅಭ್ಯಾಸ ಮಾ... ಜಿತೇಂದ್ರಿಯನಾಗಿ ನಿಯಮಿತ ಆಹಾರ ವಿಹಾರಗಳನ್ನು ಸೇವಿಸುವವನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಜೋಷಾ ಇಂದ್ರ ಸಗಣೋ ಮರುದ್ಭಿಃ ಸೋಮಂ ಪಿಬ ವೃತ್ರಹಾ ಶೂರ ವಿದ್ವಾನ್ ।**
**ಜಹಿ ಶತ್ರೂರಪ ಮೃಧೋ ನುದಸ್ವಾ-ಥಾಭಯಂ ಕೃಣುಹಿ ವಿಶ್ವತೋ ನಃ ॥೨॥**

**ಪದಾರ್ಥಃ-** [ಶೂರ] ಶತ್ರುನಾಶಕನೇ! [ಇಂದ್ರ] ಐಶ್ವರ್ಯದಾಯಕನೇ! [ಮರುದ್ಭಿಃ] ಗಾಳಿಗೆ ಸಮನಾಗಿ ವೀರಪುರುಷರ [ಸಗಣಃ] ಗಣಗಳೊಂದಿಗೆ ಕೂಡಿರುವ [ವೃತ್ರಃ] ಮೇಘನಾಶಕ ಸೂರ್ಯನು ಹೇಗೋ ಹಾಗೆ [ಸಜೋಷಾಃ] ಸಮಾನಪ್ರೀತಿಯನ್ನು ತೋರುವ ಗಾಳಿಯಂತಿರುವ ವೀರಪುರುಷರೊಂದಿಗೆ [ವಿದ್ವಾನ್] ಸಕಲ ವಿದ್ಯೆಯನ್ನು ಅರಗಿಸಿಕೊಂಡಿರುವ ನೀನು [ಸೋಮಂ] ಸೋಮಲತೆಯ ರಸವನ್ನು [ಪಿಬ] ಮಾಡು. [ಶತ್ರೂನ್] ಶತ್ರುಗಳನ್ನು [ಅಪ, ಜಹಿ] ದೇಶದಿಂದ ಹೊರಗೆ ಅಟ್ಟಿಸಿ ನಾಶಮಾಡು. [ಮೃಧಃ] ಸಂಗ್ರಾಮಗಳಿಗೆ [ನುದಸ್ವ] ಪ್ರೇರಣೆ ನೀಡು. [ಅಥ] ಆಮೇಲೆ [ವಿಶ್ವತಃ] ಎಲ್ಲ ಕಡೆಗಳಿಂದಲೂ [ನಃ] ನಮ್ಮೆಲ್ಲರಿಗೆ [ಅಭಯಂ] ಭಯವಿಲ್ಲದಂತೆ [ಕೃಣುಹಿ] ಮಾಡು.

**ಭಾವಾರ್ಥಃ-** ಯಾವ ರಾಜನು/ರಾಜಪುರುಷರು ಸ್ನೇಹಭಾವದಿಂದ ನಿಯತ ಆಹಾರ ವಿಹಾರಗಳೊಂದಿಗೆ ಬ್ರಹ್ಮಚರ್ಯ ಜಿತೇಂದ್ರಿಯತ್ವ ಗುಣಗಳಿಂದ ಸಮಗ್ರವಾಗಿ ಶರೀರಬಲ, ಆತ್ಮಬಲವನ್ನು ಹೆಚ್ಚಿಸಿಕೊಂಡು ಶತ್ರುಗಳನ್ನು ನಾಶಗೊಳಿಸುವವರಾಗಿ ಸಂಗ್ರಾಮವನ್ನು ಜಯಿಸಿ ಪ್ರಜೆಗಳಿಗೆ ಎಲ್ಲ ಕಡೆಗಳಿಂದಲೂ ಭಯರಹಿತ ವಾತಾವರಣವನ್ನು ನಿರ್ಮಿಸಿ ಸುಖವನ್ನು ಉಂಟು ಮಾಡುವರೋ, ಅವರೇ ಶ್ರೇಷ್ಠ ರಾಜ/ರಾಜಪುರುಷರೆನಿಸಿಕೊಳ್ಳುತ್ತಾರೆ.

ಸೂರ್ಯನ ವಿಷಯವನ್ನಿಲ್ಲಿ ಹೇಳಿದೆ.

**ಉತ ಋತುಭಿರ್ಋತುಪಾಃ ಪಾಹಿ ಸೋಮ-ಮಿಂದ್ರ ದೇವೇಭಿಃ ಸಖಿಭಿಃ ಸುತಂ ನಃ ।**
**ಯಾಁ ಆಭಜೋ ಮರುತೋ ಯೇ ತ್ವಾನ್ವ-ಹನ್ ವೃತ್ರಮದಧುಸ್ತುಭ್ಯಮೋಜಃ ॥೩॥**

**ಪದಾರ್ಥಃ-** [ಇಂದ್ರ] ದುಃಖನಾಶಕನೇ! ನೀನು [ಋತುಭಿಃ] ವಸಂತಾದಿ ಋತುಗಳೊಂದಿಗೆ [ಋತುಪಾಃ] ಋತುಗಳನ್ನು ರಕ್ಷಿಸುವ ಸೂರ್ಯನಿಗೆ ಸಮನಾಗಿ [ದೇವೇಭಿಃ] ವಿದ್ಯಾವಂತರಾದ [ಸಖಿಭಿಃ] ಸ್ನೇಹಿತರೊಂದಿಗೆ [ಸುತಂ] ಉತ್ಪನ್ನವಾದ [ಸೋಮಂ] ಪ್ರಪಂಚವನ್ನು [ಪಾಹಿ] ರಕ್ಷಣೆ ಮಾಡು. [ಯಾನ್] ಯಾವ [ಮರುತಃ] ಮರಣ ಧರ್ಮವಂತರಾದ [ನಃ] ನಮ್ಮೆಲ್ಲರ [ಆ] [ಅಭಜಃ] ಸೇವನೆ ಮಾಡುವವನಾಗು. [ಯೇ] ಯಾರು [ತುಭ್ಯಂ] ನಿನಗೆ [ಓಜಃ] ಪರಾಕ್ರಮವನ್ನು ಮತ್ತು [ವೃತ್ರಂ] ಸುಖದಾಯಕ ಧನವನ್ನು [ತ್ವಾ] ನಿನಗೆ [ಅನು, ಅದಧುಃ] ಅನುಕೂಲಕರವಾಗಿ ಒದಗಿಸುವರೋ ಅವರ ರಕ್ಷಣೆ ಮಾಡು. [ಉತ] ಹಾಗೂ ಸೂರ್ಯನು ಮೇಘವನ್ನು ನಾಶಗೊಳಿಸುವ ರೀತಿಯಲ್ಲಿ [ಅಹನ್] ಶತ್ರುಗಳನ್ನು ನಾಶಗೊಳಿಸು.

**ಭಾವಾರ್ಥಃ-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜ ಮತ್ತು ರಾಜಪುರುಷರೇ! ಸೂರ್ಯನು ಹೇಗೆ ವಸಂತಾದಿ ಋತುಗಳ ಮೂಲಕ ಸಂಪೂರ್ಣ ಜಗತ್ತಿನ ರಕ್ಷಣೆ ಮಾಡುತ್ತಾನೋ ಜಲಾದಿ ರಸಗಳನ್ನು ಆಕರ್ಷಿಸಿ ಪುನಃ ಮಳೆಗರೆಯುವುದರ ಮೂಲಕ ಪೋಷಣೆ ಮಾಡುತ್ತಾನೋ, ಹಾಗೆ ನೀವು ವಿದ್ಯಾವಂತ ಸ್ನೇಹಿತರೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತ ಪುರುಷಾರ್ಥ ಸಾಧನೆಯೊಂದಿಗೆ ಎಲ್ಲರ ಪಾಲನೆ ಪೋಷಣೆ ಮಾಡುವವರಾಗಿರಿ.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ಯೇ ತ್ವಾಹಿಹತ್ಯೇ ಮಘವನ್ನವರ್ಧನ್ ಯೇ ಶಾಂಬರೇ ಹರಿವೋ ಯೇ ಗವಿಷ್ಟೌ ।**
**ಯೇ ತ್ವಾ ನೂನಮನುಮದಂತಿ ವಿಪ್ರಾಃ ಪಿಬೇಂದ್ರ ಸೋಮಂ ಸಗಣೋ ಮರುದ್ಭಿಃ ॥೪॥**

**ಪದಾರ್ಥ:-** [ಹರಿವಃ] ಉತ್ತಮ ಕುದುರೆಗಳಿಂದೊಡಗೂಡಿರುವ [ಮಘವನ್] ಶ್ರೇಷ್ಠ ಧನ ಸಂಪತ್ತಿರುವ [ಇಂದ್ರ] ಧನೋತ್ಪಾದಕನಾದ ರಾಜನೇ! [ಯೇ] ಯಾವ [ವಿಪ್ರಾಃ] ಬುದ್ಧಿವಂತ ಜನರು [ತ್ವಾಂ] ನಿನ್ನನ್ನು [ಮರುದ್ಭಿಃ] ಗಾಳಿಗೆ ಸಮನಾದ ತನ್ನ ಸ್ನೇಹಿತರೊಂದಿಗೆ ಸೂರ್ಯನು ಹೇಗೋ ಹಾಗೆ [ಅಹಿ ಹತ್ಯೇ] ಮೇಘನಾಶಕನಾಗು. [ಶಾಂಬರೇ] ಮೇಘ ಸಂಬಂಧೀ ವ್ಯವಹಾರದಲ್ಲಿ ಹೇಗೋ ಹಾಗೆ [ಅವರ್ಧನ್] ವೃದ್ಧಿಗೊಳಿಸು [ಯೇ] ಯಾರು [ಗವಿಷ್ಟೌ] ಕಿರಣಗಳ ಸಮೂಹದಲ್ಲಿ ತನ್ನನ್ನು ವೃದ್ಧಿಗೊಳಿಸಿಕೊಳ್ಳುವರೋ [ಯೇ] ಯಾರು ಯುದ್ಧದಲ್ಲಿ [ನೂನಂ] ನಿಶ್ಚಿತವಾಗಿ [ಅನು, ಮದಂತಿ] ಅನುಕೂಲಕರ ರೀತಿಯಿಂದ ಆನಂದಗೊಳ್ಳುವರೋ ಅವರಂತೆ [ಸಗಣಃ] ವೀರಪುರುಷರಿಂದೊಡಗೂಡಿ [ಸೋಮಂ] ಓಷಧಿಗಳಿಂದ ಉತ್ಪನ್ನವಾದ ಹಾಲು ಮೊಸರು ಮುಂತಾದ ರಸಗಳನ್ನು [ಪಿಬ] ಪಾನಮಾಡುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವೃದ್ಧಿ ಹೊಂದದಿರುವ ಮೋಡಗಳನ್ನು ಸೂರ್ಯನು ಹೇಗೆ ವೃದ್ಧಿಪಡಿಸುವನೋ ಮತ್ತು ವೃದ್ಧಿ ಹೊಂದಿದ ಮೋಡಗಳನ್ನು ಹೇಗೆ ನಾಶಪಡಿಸುವನೋ ಹಾಗೆ ಧಾರ್ಮಿಕರಾದ ರಾಜ ಮತ್ತು ರಾಜಪುರುಷರು ಶಾಂತಚಿತ್ತರಾದ ಮನುಷ್ಯರ ರಕ್ಷಣೆ ಮಾಡಬೇಕು. ದುಷ್ಟ ಪುರುಷರ ನಾಶ ಮಾಡಬೇಕು. ತಾವು ಪ್ರಸನ್ನಚಿತ್ತರಾಗಿ ಪ್ರಜೆಗಳನ್ನೂ ಪ್ರಸನ್ನಚಿತ್ತರನ್ನಾಗಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮರುತ್ವಂತಂ ವೃಷಭಂ ವಾವೃಧಾನ-ಮಕವಾರಿಂ ದಿವ್ಯಂ ಶಾಸಮಿಂದ್ರಮ್ ।**
**ವಿಶ್ವಾಸಾಹಮವಸೇ ನೂತನಾಯೋ-ಗ್ರಂ ಸಹೋದಾಮಿಹ ತಂ ಹುವೇಮ ॥೫॥**

**ಪದಾರ್ಥ:-** [ಇಹ] ಈ ರಾಜ್ಯದ ವ್ಯವಹಾರಗಳಲ್ಲಿ [ನೂತನಾಯ] ಹೊಸ ಹೊಸ ವ್ಯವಹಾರಗಳ [ಅವಸೇ] ರಕ್ಷಣೆಗಾಗಿ [ಮರುತ್ವಂತಂ] ಪ್ರಶಂಸಾರ್ಹ ಮನುಷ್ಯರನ್ನು [ವೃಷಭಂ] ಬಲಿಷ್ಠನಾದ [ವಾವೃಧಾನಂ] ಬೆಳೆಯುವ/ಬೆಳೆಸುವಂತಹ [ಅಕವಾರಿಂ] ಶತ್ರುಗಳಿಲ್ಲದ [ದಿವ್ಯಂ] ಪರಿಶುದ್ಧ ಗುಣ ಕರ್ಮ ಸ್ವಭಾವಗಳಿಂದ [ವಿಶ್ವಾಸಾಹಂ] ಎಲ್ಲವನ್ನೂ ಸಹಿಸಿಕೊಳ್ಳುವ ಸಾಮರ್ಥ್ಯವಿರುವ ಮತ್ತು [ಉಗ್ರಂ] ದುಷ್ಟರನ್ನು ದಮನಿಸುವಂತಹ [ಸಹೋದಾಂ] ಶಕ್ತಿಯನ್ನು ಕೊಡುವ [ಇಂದ್ರಂ] ಐಶ್ವರ್ಯವಂತನನ್ನು [ಶಾಸಂ] ಶಾಸನ ಮಾಡುವಂತೆ ಪ್ರಶಂಸೆ ಮಾಡಿರಿ. [ತಂ] ಅವನನ್ನು [ಹುವೇಮ] ನಾವೂ ಪ್ರಶಂಸೆಮಾಡೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಅಂತಹ ವ್ಯಕ್ತಿಯನ್ನೇ ತಮ್ಮ ರಾಜನನ್ನಾಗಿ ನೇಮಿಸಿಕೊಳ್ಳಬೇಕು. ಯಾರಲ್ಲಿ ಸಂಪೂರ್ಣ ರಾಜ್ಯಕ್ಕೆ ಸಂಬಂಧಿಸಿದ ಅಂಗ ಉಪಾಂಗಗಳ ಜ್ಞಾನವಿದ್ದು ಅವುಗಳ ರಕ್ಷಣೆ ಮಾಡುವ ಸಾಮರ್ಥ್ಯವಿರುವಂತಹ ಮನುಷ್ಯನನ್ನೇ ನಿಯಮಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ರಾಜ, ಸೂರ್ಯನ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೪೮

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೨ ನಿಚೃತ್ ತ್ರಿಷ್ಟುಪ್, ೩, ೪ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೫ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಷಯ ತಿಳಿಸಲಾಗಿದೆ.

**ಸದ್ಯೋ ಹ ಜಾತೋ ವೃಷಭಃ ಕನೀನಃ ಪ್ರಭರ್ತುಮಾವದಂಧಸಃ ಸುತಸ್ಯ ।**
**ಸಾಧೋಃ ಪಿಬ ಪ್ರತಿಕಾಮಂ ಯಥಾ ತೇ ರಸಾಶಿರಃ ಪ್ರಥಮಂ ಸೋಮ್ಯಸ್ಯ ॥೧॥**

**ಪದಾರ್ಥ:-** [**ಯಥಾ**] ಹೇಗೆ [**ಸದ್ಯಃ**] ತತ್ಕ್ಷಣ [**ಜಾತಃ**] ಜನಿಸಿದ [**ವೃಷಭಃ**] ವೃಷ್ಟಿಕಾರಕನಾದ [**ಕನೀನಃ**] ಪ್ರಕಾಶಮಾನನಾದ [**ರಸಾಶಿರಃ**] ರಸಗಳ ಭೋಜನ ಮಾಡುವ ಸೂರ್ಯನು [**ಅಂಧಸಃ**] ಅನ್ನದಿಂದ [**ಸುತಸ್ಯ**] ಉತ್ತಮ ರೀತಿಯಿಂದ ಸಂಸ್ಕಾರ ಮಾಡಲಾದ [**ಸೋಮ್ಯಸ್ಯ**] ಐಶ್ವರ್ಯದಲ್ಲಿ ಉತ್ಪನ್ನವಾದ [**ಪ್ರಥಮಂ**] ಮೊದಲು [**ಆವತ್**] ರಕ್ಷಣೆ ಮಾಡುವ ನೀನು [**ಪ್ರತಿಕಾಮಂ**] ಪ್ರತಿ ಸಲವೂ ಇಚ್ಛಿಸಿದಾಗ [**ಪಿಬ**] ಪಾನ ಮಾಡುವವನಾಗು. [**ಸಾಧೋಃ**] ಉತ್ತಮ ಮಾರ್ಗದಲ್ಲಿರುವ [**ತೇ**] ನಿನ್ನ [**ಹ**] ನಿಶ್ಚಯದಿಂದಾಗಿ [**ಪ್ರಭರ್ತುಂ**] ಪ್ರಜೆಗಳನ್ನು ಧರಿಸಲು ಸಮರ್ಥನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜ ಮತ್ತು ರಾಜ ಪುರುಷರೇ! ಸೂರ್ಯ ಹಾಗೂ ಅನ್ಯ ಪದಾರ್ಥಗಳು ಈಶ್ವರನ ನಿಯಮದಂತೆ ತಮ್ಮ ತಮ್ಮ ಸಾಮರ್ಥ್ಯದಿಂದ ಎಲ್ಲಾ ಪದಾರ್ಥಗಳ ರಕ್ಷಣೆಯನ್ನು ಮಾಡುತ್ತ ಹೇಗೆ ಅವುಗಳಲ್ಲಿ ಇರುವ ದೋಷಗಳನ್ನು ನಾಶ ಮಾಡುತ್ತವೆಯೋ, ಹಾಗೆ ನೀವು ಸತ್ಪುರುಷರ ರಕ್ಷಣೆ ಮಾಡುತ್ತ ದುರ್ಜನರ ನಾಶವನ್ನು ಮಾಡಿರಿ.

ಸಂತಾನೋತ್ಪತ್ತಿ ವಿಷಯವನ್ನಿಲ್ಲಿ ತಿಳಿಸಲಾಗಿದೆ.

**ಯಜ್ಜಾಯಥಾಸ್ತದಹರಸ್ಯ ಕಾಮೇ ಽ ಂಶೋಃ ಪೀಯೂಷಮಪಿಬೋ ಗಿರಿಷ್ಠಾಮ್ ।**
**ತಂ ತೇ ಮಾತಾ ಪರಿ ಯೋಷಾ ಜನಿತ್ರೀ ಮಹಃ ಪಿತುರ್ದಮ ಆಸಿಂಚದಗ್ರೇ ॥೨॥**

**ಪದಾರ್ಥ:-** [**ಯತ್**] ಯಾವ [**ಅಹಃ**] ದಿನದಲ್ಲಿ [**ಜಾಯಥಾಃ**] ಉತ್ಪನ್ನವಾದ [**ತತ್**] ಆ ದಿನದ [**ಕಾಮೇ**] ಇಚ್ಛೆಯಲ್ಲಿ [**ಅಸ್ಯ**] [**ಅಂಶೋಃ**] ಈ ಪ್ರಾಪ್ತವಾದ ಭಾಗದ [**ಗರಿಷ್ಠಂ**] ಮೇಘದಲ್ಲಿ ಇರುವ [**ಪಿಯೂಷಂ**] ಅಮೃತದಂತಹ ರಸವನ್ನು [**ತೇ**] ನಿನ್ನ ಜನಕನು [**ಅಪಿಬಃ**] ಪಾನ ಮಾಡಲಿ. [**ತಂ**] ಆ ರಸವನ್ನು [**ಪಿತುಃ**] ನಿನ್ನ ಜನಕ ಮತ್ತು ಪಾಲಕನಾದ ತಂದೆಯ [**ಯೋಷಾ**] ಸ್ತ್ರೀಯು [**ಜನಿತ್ರೀ**] ನಿನಗೆ ಜನ್ಮ ನೀಡುವವಳು [**ಮಾತಾ**] ಜನನಿಯು [**ಅಗ್ರೇ**] ಮೊದಲು [**ದಮೇ**] ಮನೆಯಲ್ಲಿ [**ಮಹಃ**] ಹಿರಿಯರನ್ನು [**ಪರಿ, ಆ, ಅಸಿಂಚತ್**] ನಾಲ್ಕು ದಿಕ್ಕುಗಳಿಂದಲೂ ಆಸೇಚನ ಮಾಡಲಿ.

**ಭಾವಾರ್ಥ:-** ಯಾವಾಗ ಸ್ತ್ರೀ ಪುರುಷರು ಗರ್ಭಧಾರಣೆ ಮಾಡುವರೋ ಆಗ ಕಲುಷಿತ, ರೋಗೋತ್ಪಾದಕ ಅನ್ನಪಾನಾದಿಗಳನ್ನು ತ್ಯಜಿಸಿ ಶ್ರೇಷ್ಠವಾದ ಅನ್ನಪಾನಾದಿಗಳನ್ನು ಸೇವಿಸುತ್ತ ಗರ್ಭಧಾರಣ ಮಾಡಿ ಸಂತಾನವನ್ನು ಉತ್ಪಾದಿಸಿ ಆ ಸಂತಾನದ ರಕ್ಷಣೆಯನ್ನು ಇದೇ ರೀತಿ ಮಾಡುತ್ತ ಅದನ್ನು ಬೆಳೆಸಿದರೆ ಆ ರೀತಿ ಉತ್ತಮ ಸಂಸ್ಕಾರದಿಂದ ಬೆಳೆದವನು ರಾಜನಾಗಲು ಅರ್ಹನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಪಸ್ಥಾಯ ಮಾತರಮನ್ನಮೈಟ್ಟ ತಿಗ್ಮಮಪಶ್ಯದಭಿ ಸೋಮಮೂಧಃ ।**
**ಪ್ರಯಾವಯನ್ನಚರದ್ಗೃತ್ಸೋ ಅನ್ಯಾನ್ ಮಹಾನಿ ಚಕ್ರೇ ಪುರುಧಪ್ರತೀಕಃ ॥೩॥**

**ಪದಾರ್ಥ:-** [ಗೃತ್ಸಃ] ಬುದ್ಧಿವಂತನು [ಪುರುಧಪ್ರತೀಕಃ] ಬಹು ಪದಾರ್ಥಗಳನ್ನು ಧಾರಣೆ ಮಾಡುವವರಿಗೆ ಪ್ರಾಪ್ತನಾಗುವ ಸೂರ್ಯನು [ಊಧಃ] ಬೆಳಗಿನ ಸಮಯದ ರಾತ್ರಿಯು ಹೇಗೋ ಹಾಗೆ [ಮಾತರಂ] ತಾಯಿಯನ್ನು [ಉಪಸ್ಥಾಯ] ಸಮೀಪಿಸಿ ಪುತ್ರನು [ಅನ್ನಂ] ಭಕ್ಷಣಯೋಗ್ಯ ಪದಾರ್ಥದ [ಐಟ್ಟ] ಪ್ರಶಂಸೆ ಮಾಡುವನು [ಪ್ರಯಾವಯನ್] ಸಂಯೋಗ ವಿಭಾಗಗಳನ್ನು ಮಾಡುವವನಾಗಿ [ಸೋಮಂ] ಐಶ್ವರ್ಯವನ್ನು [ಅಭಿ] ಎಲ್ಲ ದಿಕ್ಕುಗಳಿಂದ [ಅಪಶ್ಯತ್] ನೋಡುವನು. [ಅನ್ಯಾನ್] ಅನ್ಯರನ್ನು [ಅಚರತ್] ಅದೇ ರೀತಿ ಮಾಡುವನು [ಮಹಾನಿ] ಸತ್ವಶಾಲಿ ಸಂತಾನವನ್ನು [ಚಕ್ರೇ] ಉತ್ಪಾದನೆ ಮಾಡಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಪ್ರಾತಃಕಾಲದಲ್ಲಿ ರಾತ್ರಿಯನ್ನು ಸಂಧಿಸಿ ಬೆಳಕನ್ನು ಉತ್ಪಾದಿಸುವನೋ ಅದೇ ರೀತಿ ಸಂತಾನೋತ್ಪಾದಕ ತಾಯಿಯನ್ನು ಸಂತಾನೋತ್ಪಾದಕ ತಂದೆಯು ಸಂಧಿಸಿ ಗರ್ಭವನ್ನು ನೆಲೆಗೊಳಿಸಬೇಕು ಹಾಗೂ ಗರ್ಭ ಸಂಸ್ಕಾರವನ್ನು ತಂದೆ ತಾಯಿಯರು ಉತ್ತಮರೀತಿಯಲ್ಲಿ ಮಾಡಿ ಆ ಸಂತಾನವು ಶ್ರೇಷ್ಠ ಲಕ್ಷಣ ಗುಣ ಕರ್ಮ ಸ್ವಭಾವಗಳಿಂದ ಯೋಗ್ಯನಾಗುವಂತೆ ಮಾಡಿದರೆ ಅಂತಹ ಸಂತಾನವು ರಾಜ್ಯ ಕಾರ್ಯವನ್ನು ನಿರ್ವಹಿಸಲು ಸಮರ್ಥವಾಗುತ್ತದೆ.

ಪ್ರಜಾಪಾಲನೆಯ ವಿಷಯವನ್ನಿಸಲ್ಲಿ ಹೇಳಿದೆ.

**ಉಗ್ರಸ್ತುರಾಷಾಳಭಿಭೂತ್ಯೋಜಾ ಯಥಾವಶಂ ತನ್ವಂ ಚಕ್ರ ಏಷಃ ।**
**ತ್ವಷ್ಟಾರಮಿಂದ್ರೋ ಜನುಷಾಭಿಭೂಯಾ ऽऽ ಮುಷ್ಯಾ ಸೋಮಮಪಿಬಚ್ಚಮೂಷು ॥೪॥**

**ಪದಾರ್ಥ:-** [ಏಷಃ] ಈ [ಚಮೂಷು] ಸೇನೆಗಳಲ್ಲಿ [ಸೋಮಂ] ಓಷಧಿ ರಸವನ್ನು [ಆಮುಷ್ಯ] ಅಪಹರಿಸಿ [ಅಪಿಬತ್] ಕುಡಿದನು. [ತ್ವಷ್ಟಾರಂ] ಅಂತಹ ತೇಜಸ್ವೀ ಶತ್ರುವನ್ನು [ಅಭಿಭೂಯ] ತಿರಸ್ಕರಿಸಿ [ಜನುಷಾ] ಜನ್ಮದಿಂದ [ಉಗ್ರಃ] ತೇಜಸ್ವಿಯಾದ [ತುರಾಷಾಟ್] ಶೀಘ್ರಗತಿಯವರನ್ನು ಸಹಿಸಿಕೊಳ್ಳುವ [ಅಭಿಭೂತ್ಯೋಜಾಃ] ಶತ್ರುಗಳನ್ನು ತಿರಸ್ಕರಿಸುವಂತಹ ಪರಾಕ್ರಮದಿಂದೊಡಗೂಡಿರುವ [ಇಂದ್ರಃ] **ಐಶ್ವರ್ಯವಂತ ಪುರುಷನು** [ಯಥಾವಶಂ] ತನ್ನ ಸಾಮರ್ಥ್ಯಕ್ಕನುಗುಣವಾಗಿ [ತನ್ವಂ] ಶರೀರವನ್ನು [ಚಕ್ರೇ] ಬೆಳೆಸಿಕೊಳ್ಳುವವನು ರಾಜನಾಗಲು ಅರ್ಹನು.

**ಭಾವಾರ್ಥ:-** ಯಾರು ಧಾರ್ಮಿಕರೂ ವಿದ್ಯಾವಂತರೂ ಆಗಿರುವರೋ ಅಂತಹ ರಾಜರು ಕಳ್ಳರು ದುಷ್ಟರು ಇವರನ್ನೆಲ್ಲ ತಿರಸ್ಕಾರ ಮಾಡಿ ಮಾದಕ ದ್ರವ್ಯ ಸೇವನೆ ಮಾಡುವವರನ್ನು ದಂಡಿಸಿ ತಾನೂ ವ್ಯಸನರಹಿತನಾಗಿ ಪ್ರಜಾಪಾಲನೆಗೆ ಸಮರ್ಥನಾಗಬೇಕು. ಅಂದರೆ ಅವರು ಪ್ರಜಾಪಾಲನ, ರಾಜ್ಯ ವೃದ್ಧಿಗೊಳಿಸಲು ಯೋಗ್ಯರಾಗಿರುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೫॥**

**ಪದಾರ್ಥ:-** **[ಅಸ್ಮಿನ್]** ಈ **[ವಾಜಸಾತ್]** ಸತ್ಯಾಸತ್ಯತೆಗಳನ್ನು ವಿಭಾಗಿಸುವ ಮತ್ತು **[ಭರೇ]** ಪೋಷಣೆ ಮಾಡಲು ಯೋಗ್ಯವಾದ ರಾಜ್ಯದಲ್ಲಿ **[ಊತಯೇ]** ರಕ್ಷಣಾದಿ ಕಾರ್ಯಗಳಿಗೆ **[ಮಘವಾನಂ]** ನ್ಯಾಯ ಮಾರ್ಗದಿಂದ ಸಂಪಾದಿಸಿದ ಸಂಪತ್ತಿನಿಂದ **[ನೃತಮಂ]** ಮನುಷ್ಯರಲ್ಲಿಯೇ ಶ್ರೇಷ್ಠರಾದ ಮನುಷ್ಯರ **[ಶೃಣ್ವಂತಂ]** ಸತ್ಯಾಸತ್ಯಗಳನ್ನು ವಿವೇಚಿಸಿ ಆಜ್ಞೆ ಮಾಡುವವನಾದ **[ಉಗ್ರಂ]** ದುಷ್ಟರೊಂದಿಗೆ ಕಠಿಣವಾಗಿಯೂ ಶ್ರೇಷ್ಠರೊಂದಿಗೆ ಸರಳವಾಗಿಯೂ ವ್ಯವಹರಿಸುವ **[ಸಮತ್ಸು]** ಧರ್ಮಯುಕ್ತ ಸಂಗ್ರಾಮದಲ್ಲಿ **[ಘನಂತಂ]** ದುಷ್ಟರನ್ನು ದಮನಿಸುವವನಾಗಿ **[ಧನಾನಾಂ]** ಸಂಪತ್ತನ್ನು **[ಸಂಜಿತಂ]** ರಕ್ಷಿಸುವವನು ದಾನ ಮಾಡುವವನೂ ಆಗಿ **[ವೃತ್ರಾಣಿ]** ಸಂಪತ್ತನ್ನು ಪಡೆದಿರುವ **[ಇಂದ್ರಂ]** ರಾಜನನ್ನು ಪಡೆದು **[ಶುನಂ]** ಧರ್ಮಮಾರ್ಗದಿಂದ ಸುಖವನ್ನು **[ಹುವೇಮ]** ನಾವೆಲ್ಲರೂ ಪಡೆದುಕೊಳ್ಳೋಣ.

**ಭಾವಾರ್ಥ:-** ವಿದ್ವಾಂಸರು ಎಲ್ಲಾ ಶಾಸ್ತ್ರಗಳಲ್ಲೂ ನಿಪುಣರಾಗಿ, ಉತ್ತಮ ಗುಣ, ಕರ್ಮ, ಸ್ವಭಾವಗಳೊಂದಿಗೆ ರಾಜ ಧರ್ಮದಲ್ಲೂ ಚತುರರಾಗಿ ಉತ್ತಮ ಕುಲದವನಾಗಿರುವ ಐಶ್ವರ್ಯವಂತ ಮನುಷ್ಯನನ್ನು ರಾಜ ಸಭೆಯ ಅಧೀಶನನ್ನಾಗಿ ಮಾಡಿ ನಿರಂತರ ರಾಜ್ಯದ ರಕ್ಷಣೆ ಮಾಡಬೇಕು. ದುಷ್ಟರನ್ನು ದಮನಿಸಿ, ರಾಜ್ಯವನ್ನು ಅಭಿವೃದ್ಧಿ ಪಡಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ರಾಜ ಧರ್ಮ, ಸಂತಾನೋತ್ಪತ್ತಿ, ರಾಜ್ಯ ಶಾಸನ ಮುಂತಾದ ವಿಚಾರಗಳನ್ನು ತಿಳಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೪೯

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೪ ನಿಚೃತ್ ತ್ರಿಷ್ಟುಪ್, ೨, ೫ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಭೂರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಪ್ರಜೆಗಳ ವಿಷಯ ತಿಳಿಸಲಾಗಿದೆ.

**ಶಂಸಾ ಮಹಾಮಿಂದ್ರಂ ಯಸ್ಮಿನ್ ವಿಶ್ವಾ ಆ ಕೃಷ್ಟಯಃ ಸೋಮಪಾಃ ಕಾಮಮವ್ಯನ್ ।**
**ಯಂ ಸುಕ್ರತುಂ ಧಿಷಣೇ ವಿಭ್ವತಷ್ಟಂ ಘನಂ ವೃತ್ರಾಣಾಂ ಜನಯಂತ ದೇವಾಃ ॥೧॥**

**ಪದಾರ್ಥ:-** **[ಯಸ್ಮಿನ್]** ಯಾವುದರಲ್ಲಿ **[ವಿಶ್ವಾಃ]** ಸಂಪೂರ್ಣ **[ಸೋಮಪಾಃ]** ಐಶ್ವರ್ಯಪಾಲಕರಾದ **[ಕೃಷ್ಟಯಃ]** ಮನುಷ್ಯರು **[ಕಾಮಂ]** ತಮ್ಮ ಅಭಿಲಾಷೆಗಳನ್ನು **[ಆ]** **[ಅವ್ಯನ್]** ಎಲ್ಲ ರೀತಿಯಿಂದಲೂ ಪಡೆಯಲು ಇಚ್ಛಿಸಬೇಕು. **[ವೃತ್ರಾಣಾಂ]** ಮೇಘಗಳ **[ಘನಂ]** ಸಮೂಹವನ್ನು **[ವಿಭುವತಷ್ಟಂ]** ವ್ಯಾಪಕನಾದ ಭಗವಂತನಿಂದ ಸೃಷ್ಟಿಸಲಾದ **[ಮಹಾಂ]** ಶ್ರೇಷ್ಠ ಸೇವೆಗೆ ಯೋಗ್ಯನಾದ **[ಇಂದ್ರಂ]** ರಾಜನನ್ನು **[ಧಿಷಣೇ]** ಭೂಮಿ ಅಂತರಿಕ್ಷವನ್ನು ಬೆಳಗುವ ಸೂರ್ಯನಂತೆ ವಿದ್ಯೆ ನೀತಿಗಳಿಂದ ಬೆಳಗುತ್ತಿರುವ **[ಯಂ]** ಯಾವ **[ಸುಕ್ರತುಂ]** ಉತ್ತಮ ಕೆಲಸಗಳನ್ನು ಮಾಡುವಂತಹ ಬುದ್ಧಿವಂತನನ್ನು **[ದೇವಾಃ]** ವಿದ್ವಾಂಸರು **[ಜನಯಂತ]** ಸೃಷ್ಟಿಸಿಕೊಳ್ಳುತ್ತಾರೆ. **[ಶಂಸ]** ಅಂತಹ ರಾಜನ ಪ್ರಶಂಸೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ವಾಂಸರೇ! ವಿಸ್ತಾರನಾದ ಒಬ್ಬನೇ ಸೂರ್ಯನು ಪ್ರತಿಯೊಂದು ಭೂಗೋಲಕ್ಕೂ ಸಂಬಂಧಿಸಿದ ಮೋಡಗಳನ್ನು ನಾಶಗೊಳಿಸಿ, ಎಲ್ಲ ಜೀವರಾಶಿಗಳಿಗೂ ಹೇಗೆ ಸುಖವನ್ನುಂಟುಮಾಡುತ್ತಾನೋ ಹಾಗೆಯೇ ರಾಜನೂ ಸಹ ದುಷ್ಟ ಪುರುಷರನ್ನು ನಾಶಮಾಡಿ ಶ್ರೇಷ್ಠ ಜನರ ಇಚ್ಛೆಯನ್ನು ಪೂರ್ಣಗೊಳಿಸುತ್ತಾ ತನ್ನ ಎಲ್ಲಾ ಪ್ರಜೆಗಳಿಗೂ ಸುಖವನ್ನು ಕೊಡಬೇಕು.

ರಾಜನ ವಿಷಯವನ್ನಿಲ್ಲಿ ತಿಳಿಸಲಾಗಿದೆ.

ಯಂ ನು ನಕಿಃ ಪೃತನಾಸು ಸ್ವರಾಜಂ ದ್ವಿತಾ ತರತಿ ನೃತಮಂ ಹರಿಷ್ಠಾಮ್ ।
ಇನತಮಃ ಸತ್ವಭಿರ್ಯೋ ಹ ಶೂಷೈಃ ಪೃಥುಜ್ರಯಾ ಅಮಿನಾದಾಯುರ್ದಸ್ಯೋಃ ॥೨॥

**ಪದಾರ್ಥ:-** [**ಯಂ**] ಯಾವ [**ಹರಿಷ್ಠಾಂ**] ಮನುಷ್ಯರಿರುವಂತಹ ಪ್ರದೇಶದಲ್ಲಿ [**ನೃತಮಂ**] ಶ್ರೇಷ್ಠನಾದ ನಾಯಕನನ್ನು [**ಸ್ವರಾಜಂ**] ತನ್ನ ಸೂರ್ಯನಿಗೆ ಸಮನಾಗಿ ಪ್ರಕಾಶಮಾನರಾದ [**ಪೃತನಾಸು**] ವೀರಪುರುಷರಿರುವ ಸೇನೆಗಳಲ್ಲಿ [**ದ್ವಿತಾ**] ಇಬ್ಬಗೆಯ ಭಾವನೆಯನ್ನು [**ನಕಿಃ**] [**ತರತಿ**] ಉಲ್ಲಂಘಿಸಲಾರನೋ ಮತ್ತು [**ಯಃ**] ಯಾವನು [**ಪೃಥುಜ್ರಯಾಃ**] ಅತಿಶಯ ವೇಗಗತಿಯ [**ಇನತಮಃ**] ಸಮರ್ಥನಾದ [**ಹ**] [**ಶೂಷೈಃ**] ನಿಶ್ಚಯವಾಗಿಯೂ ಬಲಿಷ್ಠರಾದ [**ಸತ್ವಭಿಃ**] ಶತ್ರುಗಳನ್ನು ಪೀಡಿಸುವಂತಹ ವೀರ ಯೋಧರೊಂದಿಗೆ [**ದಸ್ಯೋಃ**] ದುಷ್ಟಜನರ [**ಆಯುಃ**] ಜೀವನಾವಧಿಯನ್ನು [**ನು**] [**ಅಮಿನಾತ್**] ಬೇಗನೆ ನಾಶಮಾಡುವನೋ ಅವನನ್ನೇ ಎಲ್ಲರ ರಾಜವನ್ನಾಗಿ ಮಾಡಿರಿ.

**ಭಾವಾರ್ಥ:-** ಮನುಷ್ಯರೇ! ಯಾವ ರಾಜನನ್ನು ಶತ್ರುಗಳ ಇಮ್ಮಡಿ ಬಲವೂ ಸಹ ಗೆಲ್ಲಲಾರದೋ ಅಂತಹ ಸಾಮರ್ಥ್ಯವಿರುವ ದುಷ್ಟರನ್ನು ಸದಾ ಸದೆಬಡಿಯುವ ಸಾಮರ್ಥ್ಯವಿರುವಂತಹ ವ್ಯಕ್ತಿಯನ್ನೇ ಸೇನಾಪತಿಯನ್ನಾಗಿ ನಿಯಮಿಸಿಕೊಂಡು ಸದಾವಿಜಯಶೀಲರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ಸಹಾವಾ ಪೃತ್ಸು ತರಣಿರ್ನಾರ್ವಾ ವ್ಯಾನಶೀ ರೋದಸೀ ಮೇಹನಾವಾನ್ ।
ಭಗೋ ನ ಕಾರೇ ಹವ್ಯೋ ಮತೀನಾಂ ಪಿತೇವ ಚಾರುಃ ಸುಹವೋ ವಯೋಧಾಃ ॥೩॥

**ಪದಾರ್ಥ:-** [**ಪೃತ್ಸು**] ಸ್ಪರ್ಧಾತ್ಮಕ ಯುದ್ಧಗಳಲ್ಲಿ [**ತರಣಿಃ**] ವೇಗಗತಿಯ [**ಅರ್ವಾ**] [**ನ**] ಕುದುರೆಗೆ ಸಮನಾಗಿ [**ಸಹಾವ**] ಸಹನಶೀಲವಾದ [**ರೋದಸೀ**] ಭೂಮ್ಯಂತರಿಕ್ಷಗಳಿಗೆ ಸಮನಾಗಿ [**ಮೇಹನಾವಾನ್**] ಬಹಳ ಮಳೆಗೆರೆಯುವ ಸಾಮರ್ಥ್ಯವಿರುವಂತಹ [**ಕಾರೇ**] ಮಾಡಲು ಯೋಗ್ಯವಾದ ವ್ಯವಹಾರಗಳಲ್ಲಿ [**ವ್ಯಾನಶಿ**] ವ್ಯಾಪ್ತನಾಗಿರುವ [**ಹವ್ಯಃ**] ಸ್ವೀಕರಿಸಲು ಯೋಗ್ಯವಾದ [**ಭಗಃ**] [**ನ**] ಐಶ್ವರ್ಯಕ್ಕೆ ಸದೃಶನಾಗಿ [**ಮತೀನಾಂ**] ಮನನಶೀಲರಾದ ಮನುಷ್ಯರ [**ವಯೋಧಾಃ**] ಜೀವನಾವಸ್ಥೆಯನ್ನು ಧಾರಣ ಮಾಡುವ [**ಸುಹವಃ**] ಉತ್ತಮ ರೀತಿಯಿಂದ ಸ್ತುತಿಮಾಡಲು ಯೋಗ್ಯನಾದ [**ಚಾರುಃ**] ಸುಂದರನಾದ [**ಪಿತೇವ**] ತಂದೆಯಂತಿರುವ ಮನುಷ್ಯನನ್ನು ರಾಜನನ್ನಾಗಿಸಿಕೊಳ್ಳಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಕುದುರೆಯಂತೆ ವೇಗಗತಿಯವನೋ, ಬಲಿಶಾಲೀ ಯುವಕನೋ, ಸೂರ್ಯಭೂಮಿಗಳಂತೆ ಎಲ್ಲರಿಗೂ ಸುಖ ಸಂಪತ್ತುಗಳನ್ನು ಕೊಡುವವನೋ ಮತ್ತು ತಂದೆಯಂತೆ ಎಲ್ಲರ ಪಾಲನೆ ಪೋಷಣೆ ಮಾಡುವವನೋ ಅಂತಹ ವ್ಯಕ್ತಿಯನ್ನೇ ರಾಜ್ಯದಲ್ಲಿ ರಾಜನನ್ನಾಗಿ ನಿಯಮಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ಧರ್ತಾ ದಿವೋ ರಜಸಸ್ಪೃಷ್ಟ ಊರ್ಧ್ವೋ ರಥೋ ನ ವಾಯುರ್ವಸುಭಿರ್ನಿಯುತ್ವಾನ್ ।
ಕ್ಷಪಾಂ ವಸ್ತಾ ಜನಿತಾ ಸೂರ್ಯಸ್ಯ ವಿಭಕ್ತಾ ಭಾಗಂ ಧಿಷಣೇವ ವಾಜಮ್ ॥೪॥

**ಪದಾರ್ಥ:-** **[ದಿವಃ]** ಪ್ರಕಾಶಮಾನನಾದ **[ಸೂರ್ಯಸ್ಯ]** ಸೂರ್ಯನಿಗೆ ಸಂಬಂಧಿಸಿದ **[ರಜಸಃ]** ಲೋಕ ಸಮೂಹದ **[ಜನಿತಾ]** ಜನಕನಾದ **[ಧರ್ತಾ]** ಧಾರಣ ಮಾಡುವವನಾದ **[ಪೃಷ್ಟ]** ಪ್ರಶ್ನಾತೀತವಾದ **[ಊರ್ಧ್ವಃ]** ಶ್ರೇಷ್ಠವಾದ **[ರಥಃ][ನ]** ವಾಹನಕ್ಕೆ ಸದೃಶವಾಗಿ **[ವಸುಭಿಃ]** ಸಂಪೂರ್ಣ ಲೋಕಗಳಿಂದ **[ವಾಯುಃ]** ಗಾಳಿಯಂತೆ ಬಲಿಷ್ಠನಾದವನು **[ಕ್ಷಪಾಂ]** ರಾತ್ರಿಯನ್ನು **[ವಸ್ತಾ]** ಮರೆ ಮಾಡುವವನು ಮತ್ತು **[ಧಿಷಣೇವ]** ಭೂಮ್ಯಂತರಿಕ್ಷಗಳಿಗೆ ಸಮನಾಗಿ **[ವಾಜಂ]** ಅನ್ನಾದಿ ಪದಾರ್ಥಗಳ **[ಭಾಗಂ]** **[ವಿಭಕ್ತಾ]** ಭಾಗವಾಗಿ ವಿಭಾಗಿಸುವವನು ಮತ್ತು **[ನಿಯುತ್ವಾನ್]** ಅವುಗಳ ಮೇಲೆ ನಿಯಂತ್ರಣ ಮಾಡುವಂತಹ ಮನುಷ್ಯನನ್ನೇ ರಾಜನನ್ನಾಗಿ ಒಪ್ಪಿಕೊಳ್ಳಬೇಕು.

**ಭಾವಾರ್ಥ:-** ಮನುಷ್ಯರೇ! ಯಾವ ರಾಜನು ಭಗವಂತನು ಪ್ರತಿಯೊಬ್ಬರಲ್ಲೂ ಹೇಗೆ ನೆಲೆಸಿರುವನೋ, ಹಾಗೆಯೇ ಪ್ರಜೆಗಳ ಸಮುದಾಯದ ಮಧ್ಯದಲ್ಲಿ ನೆಲೆಗೊಳ್ಳುವನೋ ಅಂತಹ ರಾಜನನ್ನು ಯಾವಾಗಲೂ ಗೌರವಿಸುವವರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**

**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ॥೫॥**

**ಪದಾರ್ಥ:-** **[ಅಸ್ಮಿನ್]** ಈ **[ವಾಜಸಾತ್]** ಸತ್ಯಾಸತ್ಯತೆಗಳನ್ನು ವಿಭಾಗಿಸುವ ಮತ್ತು **[ಭರೇ]** ಪೋಷಣೆ ಮಾಡಲು ಯೋಗ್ಯವಾದ ರಾಜ್ಯದಲ್ಲಿ **[ಊತಯೇ]** ರಕ್ಷಣಾದಿ ಕಾರ್ಯಗಳಿಗೆ **[ಮಘವಾನಂ]** ನ್ಯಾಯ ಮಾರ್ಗದಿಂದ ಸಂಪಾದಿಸಿದ ಸಂಪತ್ತಿನಿಂದ **[ನೃತಮಂ]** ಮನುಷ್ಯರಲ್ಲಿಯೇ ಶ್ರೇಷ್ಠರಾದ ಮನುಷ್ಯರ **[ಶೃಣ್ವಂತಂ]** ಸತ್ಯಾಸತ್ಯಗಳನ್ನು ವಿವೇಚಿಸಿ ಆಜ್ಞೆ ಮಾಡುವವನಾದ **[ಉಗ್ರಂ]** ದುಷ್ಟರೊಂದಿಗೆ ಕಠಿಣವಾಗಿಯೂ ಶ್ರೇಷ್ಠರೊಂದಿಗೆ ಸರಳವಾಗಿಯೂ ವ್ಯವಹರಿಸುವ **[ಸಮತ್ಸು]** ಧರ್ಮಯುಕ್ತ ಸಂಗ್ರಾಮದಲ್ಲಿ **[ಘನಂತಂ]** ದುಷ್ಟರನ್ನು ದಮನಿಸುವವನಾಗಿ **[ಧನಾನಾಂ]** ಸಂಪತ್ತನ್ನು **[ಸಂಜಿತಂ]** ರಕ್ಷಿಸುವವನು ದಾನ ಮಾಡುವವನೂ ಆಗಿ **[ವೃತ್ರಾಣಿ]** ಸಂಪತ್ತನ್ನು ಪಡೆದಿರುವ **[ಇಂದ್ರಂ]** ರಾಜನನ್ನು ಪಡೆದು **[ಶುನಂ]** ಧರ್ಮಮಾರ್ಗದಿಂದ ಸುಖವನ್ನು **[ಹುವೇಮ]** ನಾವೆಲ್ಲರೂ ಪಡೆದುಕೊಳ್ಳೋಣ.

**ಭಾವಾರ್ಥ:-** ವಿದ್ಯಾವಂತರು ಎಲ್ಲಾ ಶಾಸ್ತ್ರಗಳಲ್ಲೂ ನಿಪುಣರಾಗಿ, ಉತ್ತಮ ಗುಣ, ಕರ್ಮ, ಸ್ವಭಾವಗಳೊಂದಿಗೆ ರಾಜ ಧರ್ಮದಲ್ಲೂ ಚತುರರಾಗಿ ಉತ್ತಮ ಕುಲದವನಾಗಿರುವ ಐಶ್ವರ್ಯವಂತ ಮನುಷ್ಯನನ್ನು ರಾಜ ಸಭೆಯ ಅಧೀಶನನ್ನಾಗಿ ಮಾಡಿ ನಿರಂತರ ರಾಜ್ಯದ ರಕ್ಷಣೆ ಮಾಡಬೇಕು. ದುಷ್ಟರನ್ನು ದಮನಿಸಿ, ರಾಜ್ಯವನ್ನು ಅಭಿವೃದ್ಧಿ ಪಡಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ರಾಜ ಹಾಗೂ ಪ್ರಜೆಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೫೦

ಮಂತ್ರಸಂಖ್ಯೆ ೫ । ವಿಶ್ವಾಮಿತ್ರ ಋಷಿಃ । ಇಂದ್ರೋ ದೇವತಾ । ೧, ೨, ೪ ನಿಚೃತ್ ತ್ರಿಷ್ಟುಪ್, ೩, ೫ ತ್ರಿಷ್ಟುಪ್ ಛಂದಃ। ಧೈವತಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಷಯವನ್ನು ತಿಳಿಸಲಾಗಿದೆ.

**ಇಂದ್ರಃ ಸ್ವಾಹಾ ಪಿಬತು ಯಸ್ಯ ಸೋಮ ಆಗತ್ಯಾ ತುಮ್ರೋ ವೃಷಭೋ ಮರುತ್ವಾನ್।**

**ಓರುವ್ಯಚಾಃ ಪೃಣತಾಮೇಭಿರನ್ನೈ ೄ-ರಾಸ್ಯ ಹವಿಸ್ತನ್ವ (ಅ) ೧ ಃ ಕಾಮಮೃಧ್ಯಾಃ ॥೧॥**

**ಪದಾರ್ಥ:-** [**ಸೋಮಃ**] ಸಂಪತ್ತುಗಳ ಸಮೂಹವು [**ತುಮ್ರಃ**] ವಿಘ್ನಕಾರಿಗಳನ್ನು ಹಿಂಸಿಸುವ [**ವೃಷಭಃ**] ಬಲಿಷ್ಠರಾದ [**ಮರುತ್ವಾನ್**] ಶ್ರೇಷ್ಠ ಪುರುಷರಿಂದೊಡಗೂಡಿರುವ [**ಉರುವ್ಯಚಾಃ**] ಉತ್ತಮ ಗುಣಗಳಿಂದ ವ್ಯಾಪ್ತವಾದ [**ಇಂದ್ರಃ**] ಐಶ್ವರ್ಯಕಾರಕವಾದ [**ಸ್ವಾಃ**] ಸತ್ಕ್ರಿಯೆಯಿಂದ [**ಯಸ್ಯ**] ಯಾವನ [**ಸೋಮಃ**] ಸಂಪತ್ತುಗಳ ಸಮೂಹವೋ ಅದು [**ಅಸ್ಯ**] ಇರುವಂತಹ ಮನುಷ್ಯನ [**ಏಭಿಃ**] [**ಅನ್ನೈಃ**] ಈ ಧಾನ್ಯಾದಿ ಆಹಾರ ಪದಾರ್ಥಗಳಿಂದ [**ತನ್ವಃ**] ಶರೀರವನ್ನು [**ಕಾಮಂ**] ಮನೋರಥವನ್ನು [**ಅ**] [**ವೃಣತಾಂ**] ಎಲ್ಲ ರೀತಿಯಿಂದಲೂ ಪೂರ್ಣಗೊಳಿಸಿಕೊಂಡು ಸುಖವನ್ನು ಪಡೆಯಿರಿ. [**ಆ**] [**ಋಧ್ಯಾಃ**] ಎಲ್ಲ ರೀತಿಯಿಂದಲೂ ವೃದ್ಧಿ ಹೊಂದಿರಿ.

**ಭಾವಾರ್ಥ:-** ಮನುಷ್ಯರೇ! ಯಾವ ರಾಜನು ಸತ್ಯನ್ಯಾಯಗಳಿಂದ ರಾಜ್ಯಸಂಪತ್ತನ್ನು ವಿಭಾಗ ಮಾಡಿ ಅಂಶತಃ ಪ್ರಜೆಗಳ ರಕ್ಷಣೆಗೆ ಅಂಶತಃ ರಾಜ್ಯಾಂಗದ ವರ್ಧನೆಗೆ ಅಂಶತಃ ದುಷ್ಟ ಪುರುಷರ ನಾಶಕ್ಕೆ ಈ ರೀತಿ ಉಪಯೋಗಿಸಿಕೊಳ್ಳುತ್ತಾನೋ ಅಂತಹ ರಾಜ ಮತ್ತು ರಾಜ್ಯ ಸಂಮೃದ್ಧಿಗೊಳ್ಳುತ್ತದೆ.

ಪ್ರೀತಿ ವಿಷಯವನ್ನಿಲ್ಲಿ ಹೇಳಲಾಗಿದೆ.

**ಆ ತೇ ಸಪರ್ಯೂ ಜವಸೇ ಯುನಜ್ಮಿ ಯಯೋರನು ಪ್ರದಿವಃ ಶ್ರುಷ್ಟಿಮಾವಃ ।**
**ಇಹ ತ್ವಾ ಧೇಯುರ್ಹರಯಃ ಸುಶಿಪ್ರ ಪಿಬಾ ತ್ವ (ಅ) ೧ ಸ್ಯ ಸುಷುತಸ್ಯ ಚಾರೋಃ ॥೨॥**

**ಪದಾರ್ಥ:-** [**ಸುಶಿಪ್ರ**] ಸುಂದರಾಂಗನೇ! ನೀನು [**ಯಯೋಃ**] ಯಾರ [**ಅನುಪ್ರದಿವಃ**] ಉತ್ತಮ ಪ್ರಕಾಶಗಳನ್ನು [**ಶ್ರುಷ್ಟಿಂ**] ಪಡೆದು ಶೀಘ್ರವಾಗಿ [**ಅವಃ**] ರಕ್ಷಣಾದಿ ಕಾರ್ಯಗಳನ್ನು ಮಾಡುವೆಯೋ [**ಇಹ**] ಈ ಪ್ರಪಂಚದಲ್ಲಿ [**ಸಪರ್ಯ್ಯೂ**] ಸೇವೆ ಮಾಡುವವರು. [**ತೇ**] ನಿನ್ನ [**ಜವಸೇ**] ವೇಗಗತಿ ಸಾಧಿಸಲು [**ಆ**] [**ಯುನಜ್ಮಿ**] ಸಂಯೋಗಗೊಳಿಸುವೆನು. ಮತ್ತು [**ಹರಯಃ**] ಪುರುಷಾರ್ಥ ಸಾಧಕ ಮನುಷ್ಯರು [**ತ್ವಾ**] ನಿನ್ನನ್ನು ಧಾರಣ ಮಾಡುವರು. ಅವರೊಂದಿಗೆ [**ತು**] ವೇಗಗತಿಯಲ್ಲಿ [**ಅಸ್ಯ**] ಈ [**ಸುಷುತಸ್ಯ**] ಉತ್ತಮ ರೀತಿಯಿಂದ ಸಂಸ್ಕಾರಗೊಳಿಸಲಾದ [**ಚಾರೋಃ**] ಅತಿ ಶ್ರೇಷ್ಠವಾದ ಸೋಮ ರಸವನ್ನು [**ಪಿಬಃ**] ಪಾನ ಮಾಡುವವನಾಗು.

**ಭಾವಾರ್ಥ:-** ಜಗತ್ತಿನಲ್ಲಿ ಯಾರ ಸೇವಕರು ಯಾವ ಸ್ವಾಮಿಯ ಮತ್ತು ಯಾವ ಸ್ವಾಮಿಯು ತನ್ನ ಸೇವಕರ ಪಾಲನೆ ಪೋಷಣೆಗಳನ್ನು ಪರಸ್ಪರರಲ್ಲಿ ಪ್ರೀತಿಪೂರ್ವಕ ವ್ಯವಹರಿಸುತ್ತಾ ಒಬ್ಬರು ಮತ್ತೊಬ್ಬರ ಸುಖವನ್ನು ವೃದ್ಧಿಪಡಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗೋಭಿರ್ಮಿಮಿಕ್ಷುಂ ದಧಿರೇ ಸುಪಾರ-ಮಿಂದ್ರಂ ಜ್ಯೈಷ್ಠ್ಯಾಯ ಧಾಯಸೇ ಗೃಣಾನಾಃ ।**
**ಮಂದಾನಃ ಸೋಮಂ ಪಪಿವಾँ ಋಜೀಷಿನ್ ತ್ಸಮಸ್ಮಭ್ಯಂ ಪುರುಧಾ ಗಾ ಇಷಣ್ಯ ॥೩॥**

**ಪದಾರ್ಥ:-** [**ಋಜೀಷಿನ್**] ನಮ್ರ ಸ್ವಭಾವದವನೇ! [**ಗೃಣಾನಾಃ**] ಪ್ರಶಂಸಾರ್ಹನೇ! ನೀನು [**ಗೋಭಿಃ**] ಕಿರಣಗಳೊಂದಿಗೆ [**ಧಾಯಸೇ**] ಧಾರಣ ಮಾಡುವುದಕ್ಕೆ [**ಜ್ಯೈಷ್ಠ್ಯಾಯ**] ಬೆಳೆಯುವುದಕ್ಕೆ [**ಮಿಮಿಕ್ಷುಂ**] ಮಳೆಸುರಿಸುವ ಇಚ್ಛೆ ಉಳ್ಳವನನ್ನು [**ದಧಿರೇ**] ಧಾರಣ ಮಾಡುವವನಾಗು. ಅದರಿಂದ [**ಸೋಮಂ**] ಸೋಮರಸವನ್ನು [**ಪಪಿವಾನ್**] ಪಾನಮಾಡಿದವನಾಗಿ [**ಮಂದಾನಃ**] ಆನಂದವನ್ನು ಪಡೆದು [**ಅಸ್ಮಭ್ಯಂ**] ನಮ್ಮೆಲ್ಲರಿಗೆ [**ಇಷಣ್ಯ**] ಪ್ರೇರಣೆ ಮಾಡು. [**ಸೋಮ**] ಸೋಮಲತೆ ಮತ್ತು ರಸವನ್ನು [**ಪುರುಧಾ**] ಅನೇಕ ರೀತಿಯಿಂದ [**ಗಾಃ**] ಪೃಥ್ವಿಯಾದಿ ಲೋಕವನ್ನು ಧರಿಸುವವನಾಗು.

**ಭಾವಾರ್ಥ:-** ಸೂರ್ಯನು ತನ್ನ ಕಿರಣಗಳ ಮೂಲಕ ವೃಷ್ಟಿಗರೆದು ಎಲ್ಲ ಜೀವರಾಶಿಗಳ ಪುಷ್ಟಿ ಮಾಡುತ್ತಾನೋ ಹಾಗೆ ವಿದ್ಯಾವಂತರು ತಮ್ಮ ಉಪದೇಶ ಬೋಧನೆಗಳಿಂದ ವೃಷ್ಟಿಗರೆದು ಎಲ್ಲ ಮನುಷ್ಯರನ್ನು ಪುಷ್ಟಿಗೊಳಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಂ ಕಾಮಂ ಮಂದಯಾ ಗೋಭಿರಶ್ವೈ-ಶ್ಚಂದ್ರವತಾ ರಾಧಸಾ ಪಪ್ರಥಶ್ಚ ।**
**ಸ್ವರ್ಯವೋ ಮತಿಭಿಸ್ತುಭ್ಯಂ ವಿಪ್ರಾ ಇಂದ್ರಾಯ ವಾಹಃ ಕುಶಿಕಾಸೋ ಅಕ್ರನ್ ।।೪।।**

**ಪದಾರ್ಥ:-** **[ಸ್ವರ್ಯವಃ]** ಸುಖದಾಯಕರಾದ **[ಕುಶಿಕಾಸಃ]** ಸಮಗ್ರ ಶಾಸ್ತ್ರ ಸಿದ್ಧಾಂತಗಳನ್ನು ತಿಳಿದುಕೊಂಡಿರುವ **[ವಾಃ]** ಮತ್ತು ತಿಳಿಸುವವರಾದ **[ವಿಪ್ರಾಃ]** ಬುದ್ಧಿವಂತ ಜನರು **[ಮತಿಭಿಃ]** ಮನುಷ್ಯರಿಂದ **[ಇಂದ್ರಾಯ]** ಧನ ಸಂಪನ್ನನಾದ **[ತುಭ್ಯಂ]** ನಿನಗೆ **[ಇಮಂ]** **[ಕಾಮಂ]** ಈ ಮನದಾಸೆಯನ್ನು **[ಅಕ್ರನ್]** ಪೂರ್ಣಗೊಳಿಸಲಿ. ಅವರ ಮನೋರಥವನ್ನು **[ಗೋಭಿಃ]** ಗವಾದಿಗಳಿಂದ **[ಅಶ್ವೈಃ]** ಅಶ್ವಾದಿಗಳಿಂದ **[ಚಂದ್ರವತಾ]** ಸುವರ್ಣಾದಿಗಳಿಂದ **[ರಾಧಸಾ]** ಮತ್ತು ಧನಾದಿಗಳಿಂದ **[ಪಪ್ರಥಃ]** ನೀನು ಪೂರ್ಣಗೊಳಿಸು. **[ಚ]** ಮತ್ತು **[ಮಂದಯ]** ಅವರನ್ನು ಸಂತೋಷಗೊಳಿಸು.

**ಭಾವಾರ್ಥ:-** ಯಾರು, ಪರಸ್ಪರರಿಗೆ ಅನುಕೂಲಕರವಾಗಿ ವ್ಯವಹರಿಸುತ್ತಾ ಸಂಪತ್ತು ಪಶುಗಳು, ಧನ ಮುಂತಾದುವುಗಳಿಂದ ಪರಸ್ಪರರ ಮನದಾಸೆಯನ್ನು ಪೂರ್ಣಗೊಳಿಸುತ್ತಾರೋ ಅವರೇ ಸುಖಜೀವಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ಹುವೇಮ ಮಘವಾನಮಿಂದ್ರ-ಮಸ್ಮಿನ್ ಭರೇ ನೃತಮಂ ವಾಜಸಾತೌ ।**
**ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾನಾಮ್ ।।೫।।**

**ಪದಾರ್ಥ:-** **[ಅಸ್ಮಿನ್]** ಈ **[ವಾಜಸಾತ್]** ಸತ್ಯಾಸತ್ಯತೆಗಳನ್ನು ವಿಭಾಗಿಸುವ ಮತ್ತು **[ಭರೇ]** ಪೋಷಣೆ ಮಾಡಲು ಯೋಗ್ಯವಾದ ರಾಜ್ಯದಲ್ಲಿ **[ಊತಯೇ]** ರಕ್ಷಣಾದಿ ಕಾರ್ಯಗಳಿಗೆ **[ಮಘವಾನಂ]** ನ್ಯಾಯ ಮಾರ್ಗದಿಂದ ಸಂಪಾದಿಸಿದ ಸಂಪತ್ತಿನಿಂದ **[ನೃತಮಂ]** ಮನುಷ್ಯರಲ್ಲಿಯೇ ಶ್ರೇಷ್ಠರಾದ ಮನುಷ್ಯರ **[ಶೃಣ್ವಂತಂ]** ಸತ್ಯಾಸತ್ಯಗಳನ್ನು ವಿವೇಚಿಸಿ ಆಜ್ಞೆ ಮಾಡುವವನಾದ **[ಉಗ್ರಂ]** ದುಷ್ಟರೊಂದಿಗೆ ಕಠಿಣವಾಗಿಯೂ ಶ್ರೇಷ್ಠರೊಂದಿಗೆ ಸರಳವಾಗಿಯೂ ವ್ಯವಹರಿಸುವ **[ಸಮತ್ಸು]** ಧರ್ಮಯುಕ್ತ ಸಂಗ್ರಾಮದಲ್ಲಿ **[ಘ್ನಂತಂ]** ದುಷ್ಟರನ್ನು ದಮನಿಸುವವನಾಗಿ **[ಧನಾನಾಂ]** ಸಂಪತ್ತನ್ನು **[ಸಂಜಿತಂ]** ರಕ್ಷಿಸುವವನು ದಾನ ಮಾಡುವವನೂ ಆಗಿ **[ವೃತ್ರಾಣಿ]** ಸಂಪತ್ತನ್ನು ಪಡೆದಿರುವ **[ಇಂದ್ರಂ]** ರಾಜನನ್ನು ಪಡೆದು **[ಶುನಂ]** ಧರ್ಮಮಾರ್ಗದಿಂದ ಸುಖವನ್ನು **[ಹುವೇಮ]** ನಾವೆಲ್ಲರೂ ಪಡೆದುಕೊಳ್ಳೋಣ.

**ಭಾವಾರ್ಥ:-** ವಿದ್ಯಾವಂತರು ಎಲ್ಲಾ ಶಾಸ್ತ್ರಗಳಲ್ಲೂ ನಿಪುಣರಾಗಿ, ಉತ್ತಮ ಗುಣ, ಕರ್ಮ, ಸ್ವಭಾವಗಳೊಂದಿಗೆ ರಾಜ ಧರ್ಮದಲ್ಲೂ ಚತುರರಾಗಿ ಉತ್ತಮ ಕುಲದವನಾಗಿರುವ ಐಶ್ವರ್ಯವಂತ ಮನುಷ್ಯನನ್ನು ರಾಜ ಸಭೆಯ ಅಧೀಶನನ್ನಾಗಿ ಮಾಡಿ ನಿರಂತರ ರಾಜ್ಯದ ರಕ್ಷಣೆ ಮಾಡಬೇಕು. ದುಷ್ಟರನ್ನು ದಮನಿಸಿ, ರಾಜ್ಯವನ್ನು ಅಭಿವೃದ್ಧಿ ಪಡಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ರಾಜ ಹಾಗೂ ಪ್ರಜೆಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಐವತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೫೧

ಮಂತ್ರಸಂಖ್ಯೆ ೧೨ । ವಿಶ್ವಾಮಿತ್ರ ಋಷಿಃ । ಇಂದ್ರೋದೇವತಾ । ೪, ೭-೯ ತ್ರಿಷ್ಟುಪ್, ೫, ೬ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೧-೩ ನಿಚೃಜ್ಜಗತೀ ಛಂದಃ । ನಿಷಾದಃ ಸ್ವರಃ । ೧೦, ೧೧ ಯವ ಮಧ್ಯಾ ಗಾಯತ್ರೀ, ೧೨ ವಿರಾಡ್ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಷಯ ತಿಳಿಸಲಾಗಿದೆ.

**ಚರ್ಷಣೀಧೃತಂ ಮಘವಾನಮುಕ್ಥ್ಯ (ಅ) ೧ -ಮಿಂದ್ರಂ ಗಿರೋ ಬೃಹತೀರಭ್ಯನೂಷತ ।**
**ವಾವೃಧಾನಂ ಪುರೂಹೂತಂ ಸುವೃಕ್ತಿಭಿ-ರಮರ್ತ್ಯಂ ಜರಮಾಣಂ ದಿವೇದಿವೇ ॥೧॥**

**ಪದಾರ್ಥ:-** [**ಬೃಹತೀಃ**] ಮಹತ್ತರ ವಿಷಯವಿರುವಂತಹ [**ಗಿರಃ**] ವಿದ್ಯಾವಂತರ ನುಡಿಗಳನ್ನು [**ದಿವೇ ದಿವೇ**] ಪ್ರತಿದಿನವೂ [**ಸುವೃಕ್ತಿಭಿಃ**] ಉತ್ತಮ ಸಂವಿಭಾಗದೊಂದಿಗೆ [**ಚರ್ಷಣೀಧೃತಂ**] ಮನುಷ್ಯರು ಧಾರಣ ಮಾಡುವಂತಹ [**ಮಘವಾನಂ**] ವೃದ್ಧಿ ಹೊಂದಿದ ಸಂಪತ್ತಿನೊಂದಿಗೆ [**ಉಕ್ಥ್ಯಂ**] ಪ್ರಶಂಸೆಗೆ ಯೋಗ್ಯವಾದ [**ವಾವೃಧಾನಂ**] ವೃದ್ಧಿ ಹೊಂದುತ್ತಿರುವ [**ಪುರುಹೂತಂ**] ಬಹು ಜನರಿಂದ ಸತ್ಕರಿಸಲಾದ [**ಅಮರ್ತ್ಯಂ**] ಮರಣಧರ್ಮರಹಿತವಾದ [**ಜರಮಾಣಂ**] ಸ್ತವನ ಮಾಡುತ್ತಲಿರುವ [**ಇಂದ್ರಂ**] ರಾಜನನ್ನು [**ಅಭ್ಯನೂಷತ**] ಪ್ರಶಂಸೆ ಮಾಡಬೇಕು.

**ಭಾವಾರ್ಥ:-** ರಾಜ ಪುರುಷರೇ! ಬಹುಜನರಿಂದ ಪ್ರಶಂಸೆಗೊಳಗಾದ ಪ್ರಜೆಗಳನ್ನು ಧಾರಣ ಮಾಡುವುದರಲ್ಲಿ ಸಮರ್ಥನಾದ ರಾಜನನ್ನು ವಿದ್ಯಾವಂತರು ಪ್ರಶಂಸೆ ಮಾಡಬೇಕು. ಅಂತಹ ರಾಜನಿಗೆ ನೀವೂ ಮೊರೆ ಹೋಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶತಕ್ರತುಮರ್ಣವಂ ಶಾಕಿನಂ ನರಂ ಗಿರೋ ಮ ಇಂದ್ರಮುಪ ಯಂತಿ ವಿಶ್ವತಃ ।**
**ವಾಜಸನಿಂ ಪೂರ್ಭಿದಂ ತೂರ್ಣಿಮಪ್ತುರಂ ಧಾಮಸಾಚಮಭಿಷಾಚಂ ಸ್ವರ್ವಿದಮ್ ॥೨॥**

**ಪದಾರ್ಥ:-** [**ಮೇ**] ನನ್ನ [**ಗಿರಃ**] ಮಾತುಗಳನ್ನು [**ಅರ್ಣವಂ**] ಸಮುದ್ರದಂತೆ ಗಂಭೀರವಾದ [**ಶತಕ್ರತುಂ**] ಅಳೆಯುವ ಸಾಧನವಾದ ಬುದ್ಧಿಯನ್ನು [**ಶಾಕಿನಂ**] ಶಕ್ತಿವಂತನಾದ [**ನರಂ**] ನಾಯಕನನ್ನು [**ವಾಜಸನಿಂ**] ಆಹಾರ, ವಿಜ್ಞಾನಗಳ ವಿಭಾಗ ಮಾಡುವವನನ್ನು [**ಪೂರ್ಭಿದಂ**] ಶತ್ರುನಗರ ಭೇದಕನನ್ನು [**ತೂರ್ಣಿಂ**] ಶೀಘ್ರಕಾರಿಯನ್ನು [**ಅಪ್ತುರಂ**] ಪ್ರಾಣಗಳಿಗೆ ಪ್ರೇರಣೆ ನೀಡುವವನನ್ನು [**ಧಾಮಸಾಚಂ**] ರಕ್ಷಣೆ ಮಾಡುವವರಾಗಿ [**ಅಭಿಷಾಚಂ**] ಅಭಿಮುಖವಾಗಿರುವ [**ಸ್ವರ್ವಿದಂ**] ಸುಖದಾಯಕನಾದ [**ಇಂದ್ರಂ**] ಐಶ್ವರ್ಯದಾತೃವನ್ನು [**ವಿಶ್ವತಃ**] ಎಲ್ಲಾ ರೀತಿಯಿಂದ [**ಉಪ, ಯಂತಿ**] ಪ್ರಾಪ್ತನಾಗುವವನಿಗೆ ಶರಣಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಸಮಗ್ರವಿದ್ಯೆಗಳಲ್ಲಿ ಕುಶಲನಾದ ಸಮರ್ಥನಾದ ಸತ್ಯವಚನಪಾಲಿಸುವ ದುಷ್ಟರ ದಮನ ಮಾಡುವ ರಾಜನ ಹತ್ತಿರ ಹೋಗುವರೋ ಅವರಿಗೆ ಯಾರಿಂದಲೂ ಭಯವಿರುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಕರೇ ವಸೋರ್ಜರಿತಾ ಪನಸ್ಯತೇಽನೇಹಸಃ ಸ್ತುಭ ಇಂದ್ರೋ ದುವಸ್ಯತಿ ।**
**ವಿವಸ್ವತಃ ಸದನ ಆ ಹಿ ಪಿಪ್ರಿಯೇ ಸತ್ರಾಸಾಹಮಭಿಮಾತಿಹನಂ ಸ್ತುಹಿ ॥೩॥**

**ಪದಾರ್ಥ:-** **[ಸುಭಃ]** ಫಲಪ್ರಾಪ್ತಿಯಾಗುವಂತಹ **[ಜರಿತಾ]** ಸ್ತುತಿಯನ್ನು ಮಾಡುವವನು **[ಅನೇಹಸಃ]** ನಾಶಗೊಳಿಸಲಾಗದಂತಹ **[ವಸೋಃ]** ಸಂಪತ್ತಿನ **[ಆಕರೇ]** ಗಣಿಯಲ್ಲಿ **[ವಿವಸ್ವತಃ]** ಸೂರ್ಯನ **[ಸದನೇ]** ಸ್ಥಾನದಲ್ಲಿ **[ಇಂದ್ರಃ]** ಮಿಂಚಿಗೆ ಸಮನಾಗಿರುವ ಎಲ್ಲರ ಸ್ವಾಮಿ ರಾಜನು **[ಪನಸ್ಯತೇ]** ವ್ಯವಹರಿಸುವನು ಮತ್ತು ವಿದ್ಯಾವಂತರ ಧರ್ಮವನ್ನು **[ದುವಸ್ಯತಿ]** ಸೇವನ ಮಾಡುವನು. **[ಸತ್ರಾಸಾಹಂ]** ಸತ್ಯವನ್ನು ಸಹಿಸಿಕೊಳ್ಳುವವನು **[ಅಭಿಮಾತಿಹನಂ]** ಸ್ವಾಭಿಮಾನಿಶತ್ರುಗಳನ್ನು ನಾಶಗೊಳಿಸುವನೂ ಆದವನನ್ನು **[ಪ್ರ, ಪ್ರೀಣಾತಿ]** ಪ್ರಸನ್ನಗೊಳಿಸುವನೋ **[ಹಿ]** ಅವನನ್ನೇ **[ಸ್ತುಹಿ]** ಸ್ತವನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಭಗವಂತನಿಂದ ವಿದ್ಯುತ್ತಿನ ಮೂಲಕ ಸೃಷ್ಟಿಸಲಾದ ಸೂರ್ಯನು ಒಂದೇ ಕಡೆಯಲ್ಲಿದ್ದುಕೊಂಡು ಎಲ್ಲಾ ಕಡೆಗಳಲ್ಲಿ ವಿಕೀರ್ಣವಾದ ಎಲ್ಲಾ ವಸ್ತುಗಳನ್ನು ಹೇಗೆ ಪ್ರಕಾಶಗೊಳಿಸುವನೋ, ಹಾಗೆಯೇ ಒಂದೇ ಸ್ಥಳದಲ್ಲಿರುವ ರಾಜನು ಮಂತ್ರಿ, ದೂತ, ಪದಾತಿಗಳ ಮೂಲಕ ಸಮಗ್ರ ರಾಜ್ಯವನ್ನು ವಿದ್ಯಾ-ವಿನಯಗಳಿಂದ ಪ್ರಕಾಶಿತಗೊಳಿಸಬೇಕು ಮತ್ತು ರಾಜಸ್ವದಿಂದ ಧರ್ಮದ ಏಳಿಗೆಯಾಗುವಂತಹ ವ್ಯವಹಾರ ಮಾಡಬೇಕು.

ಈ ಮಂತ್ರದಲ್ಲಿ ಪ್ರಜಾಪ್ರಶಂಸೆ ಮಾಡಲಾಗಿದೆ.

**ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈ-ರಭಿ ಪ್ರ ವೀರಮರ್ಚತಾ ಸಬಾಧಃ ।**
**ಸಂ ಸಹಸೇ ಪುರುಮಾಯೋ ಜಿಹೀತೇ ನಮೋ ಅಸ್ಯ ಪ್ರದಿವ ಏಕ ಈಶೇ ॥೪॥**

**ಪದಾರ್ಥ:-** **[ಸಬಾಧಃ]** ತೊಂದರೆಗಳಲ್ಲಿರುವ **[ಪುರುಮಾಯಃ]** ಬಹಳ ಕಾರ್ಯವನ್ನು ಮಾಡುವವನಾದ **[ಏಕಃ]** ಒಬ್ಬಂಟಿಗನಾದ ಸೇನಾಪತಿಯು **[ಅಸ್ಯ]** ಈ **[ಪ್ರದಿವಃ]** ಬೆಳಕಿನ **[ಈಶಃ]** ಸ್ವಾಮಿಯಾಗಿರುವನು. **[ಸಹಸೇ]** ಬಲಪ್ರಾಪ್ತಿಗಾಗಿ **[ನಮಃ]** ಆಹಾರ ಅಥವಾ ಸತ್ಕಾರವನ್ನು **[ಸಂ, ಜಿಹೀತೇ]** ಪಡೆದುಕೊಳ್ಳುವನು **[ವೀರಂ]** ಅಂತಹ ಬಲ ಮತ್ತು ರಾಜವಿದ್ಯೆಗಳಿಂದ ವ್ಯಾಪ್ತನಾದವನ **[ಪ್ರ, ಅರ್ಚತ್]** ಸತ್ಕಾರ ಮಾಡಬೇಕು. **[ಗೀರ್ಭಿಃ]** ಉತ್ತಮ ನುಡಿ ಮತ್ತು **[ಉಕ್ಥೈಃ]** ಪ್ರಶಂಸಾವಚನಗಳಿಂದ **[ನೃಣಾಂ]** ಶ್ರೇಷ್ಠ ಮನುಷ್ಯರ **[ನೃತಮಂ]** ನಾಯಕನಾದ **[ತ್ವಾ]** ನಿನ್ನನ್ನೂ ಸತ್ಕರಿಸಬೇಕು. **[ಉ]** ಹಾಗೆಯೇ ನೀನೂ ಸತ್ಕರಿಸು.

**ಭಾವಾರ್ಥ:-** ಯಾರು ಪ್ರಶಂಸಾರ್ಹವಾದ ಕೆಲಸಗಳನ್ನು ಮಾಡುವನೋ ಅವನ ಪ್ರಶಂಸೆಯನ್ನೇ ವಿದ್ಯಾವಂತರು ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪೂರ್ವೀರಸ್ಯ ನಿಷ್ಷಿಧೋ ಮರ್ತ್ಯೇಷು ಪುರೂ ವಸೂನಿ ಪೃಥಿವೀ ಬಿಭರ್ತಿ ।**
**ಇಂದ್ರಾಯ ದ್ಯಾವ ಓಷಧೀರುತಾಪೋ ರಯಿಂ ರಕ್ಷಂತಿ ಜೀರಯೋ ವನಾನಿ ॥೫॥**

**ಪದಾರ್ಥ:-** **[ಜೀರಯಃ]** ವೃದ್ಧಿಹೊಂದುತ್ತಲಿರುವ ಮನುಷ್ಯನು **[ಅಸ್ಯ]** ಈ ರಾಜನ **[ಮರ್ತ್ಯೇಷು]** ಮನುಷ್ಯರಲ್ಲಿ **[ಪೂರ್ವೀಃ]** ಅನಾದಿ ಕಾಲದಿಂದಲೂ ಸಿದ್ಧವಾದ **[ನಿಷ್ಷಿಧಃ]** ಅತಿಶಯವಾಗಿ ಸಿದ್ಧಗೊಳಿಸುವವಳನ್ನು **[ರಕ್ಷಂತಿ]** ರಕ್ಷಣೆ ಮಾಡುವರು. **[ಪುರು]** ಬಹಳಷ್ಟು **[ವಸೂನಿ]** ದ್ರವ್ಯಗಳನ್ನು **[ಪೃಥಿವೀ]** ಭೂಮಿಗೆ ಸಮನಾದವನು **[ಬಿಭರ್ತಿ]** ಧಾರಣೆ ಮಾಡುತ್ತಾನೆ. **[ದ್ಯಾವಃ]** ಸೂರ್ಯದಿಗಳ ಪ್ರಕಾಶವು **[ಇಂದ್ರಾಯ]** ಐಶ್ವರ್ಯಕ್ಕಾಗಿ **[ರಯಿಂ]**

ಧನವನ್ನು ಮತ್ತು [ವನಾನಿ] ಸುಖದಾಯಕ ವಸ್ತುಗಳನ್ನು [ಉತ] ಮತ್ತು [ಆಪಃ] ಪ್ರಾಣ/ನೀರಿನಂತಹ [ಓಷಧೀಃ] ಸೋಮಲತೆ ಮೊದಲಾದ ಓಷಧಿಗಳ ರಕ್ಷಣೆ ಮಾಡುವರು. ಅದೇರೀತಿ ಯಾವನು [ಬಿಭರ್ತಿ] ರಾಜ್ಯದ ಧಾರಣೆ ಪೋಷಣೆ ಮಾಡುವನೋ ಅವನೇ ರಾಜನಾಗಲು ಅರ್ಹನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಧನ ವಿಜ್ಞಾನ ಮತ್ತು ಓಷಧಿ ಇವುಗಳ ಧಾರಣೆ ಮಾಡಿರುವರೋ, ಅವರೇ ರಾಜನ ಕರ್ಮಚಾರಿಗಳಾಗಲು ಯೋಗ್ಯರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತುಭ್ಯಂ ಬ್ರಹ್ಮಾಣಿ ಗಿರ ಇಂದ್ರ ತುಭ್ಯಂ ಸತ್ರಾ ದಧಿರೇ ಹರಿವೋ ಜುಷಸ್ವ । ಬೋಧ್ಯಾ**
**(ಆ) ೩ ಪಿರವಸೋ ನೂತನಸ್ಯ ಸಖೇ ವಸೋ ಜರಿತೃಭ್ಯೋ ವಯೋ ಧಾಃ ॥೬॥**

**ಪದಾರ್ಥ:-** [ಇಂದ್ರ] ಐಶ್ವರ್ಯಧಾರಕನೇ! [ಗಿರಃ] ಯಾವ ನುಡಿಗಳು [ತುಭ್ಯಂ] ನಿನಗೆ [ಬ್ರಹ್ಮಾಣಿ] ಸಂಪತ್ತುಗಳನ್ನು ಮತ್ತು [ಹರಿವಃ] ಶ್ರೇಷ್ಠ ಅಶ್ವಾದಿ ಪ್ರಾಣಿಗಳೊಂದಿಗೆ [ತುಭ್ಯಂ] ನಿನಗಾಗಿ [ಸತ್ರಾ] ಸತ್ಯವನ್ನು [ದಧಿರೇ] ಧಾರಣೆ ಮಾಡಿರುವರೋ ಅವರನ್ನು [ಜುಷಸ್ವ] ನೀನು ಸೇವಿಸುವವನಾಗು. [ಸಖೇ] ಮಿತ್ರನೇ! [ನೂತನಸ್ಯ] ಹೊಸತಾದ [ಅವಸಃ] ರಕ್ಷಣಾದಿ ಕ್ರಿಯೆಗಳಲ್ಲಿ [ಆಪಿಃ] ವ್ಯಾಪ್ತನಾದ ನೀನು [ಬೋಧಿ] ಅವರನ್ನು ತಿಳಿದುಕೋ. [ವಸೋ] ಧನವಂತನಾದ ನೀನು [ಜರಿತೃಭ್ಯಃ] ಸ್ತೋತ್ರ ಮಾಡುವ ವಿದ್ಯಾವಂತರಿಗೆ [ವಯಃ] ಜೀವನವನ್ನು [ಧಾಃ] ಧಾರಣೆ ಮಾಡಿಸುವವನಾಗು.

**ಭಾವಾರ್ಥ:-** ಮನುಷ್ಯರು ಯಾವ ಮಾತುಗಳನ್ನು ಗ್ರಹಣ ಮಾಡುವುದರಿಂದ/ಕೇಳಿಸಿಕೊಳ್ಳುವುದರಿಂದ ಧನ ಪ್ರಾಪ್ತಿಯಾಗುತ್ತದೆಯೋ, ಸತ್ಯದ ರಕ್ಷಣೆಯಾಗುತ್ತದೆಯೋ, ಜೀವನದ ಬೆಳವಣಿಗೆಯಾಗುತ್ತದೆಯೋ ಅಂತಹ ಮಾತುಗಳನ್ನೇ ಆಲಿಸಬೇಕು, ನುಡಿಯಬೇಕು.

ರಾಜನ ವಿಷಯವಿಲ್ಲಿದೆ.

**ಇಂದ್ರ ಮರುತ್ವ ಇಹ ಪಾಹಿ ಸೋಮಂ ಯಥಾ ಶಾರ್ಯಾತೇ ಅಪಿಬಃ ಸುತಸ್ಯ ।**
**ತವ ಪ್ರಣೀತೀ ತವ ಶೂರ ಶರ್ಮ-ನ್ನಾ ವಿವಾಸಂತಿ ಕವಯಃ ಸುಯಜ್ಞಾಃ ॥೭॥**

**ಪದಾರ್ಥ:-** [ಇಂದ್ರ] ಐಶ್ವರ್ಯಧಾರಕನೇ! ನೀನು [ಇಹ] ಈ ಪ್ರಪಂಚದಲ್ಲಿ [ಸೋಮಂ] ಐಶ್ವರ್ಯಕಾರಕ ಪದಾರ್ಥಗಳನ್ನು [ಪಾಹಿ] ಕಾಪಾಡು. [ಮರುತ್ವಃ] ಧನಸಂಪನ್ನನೇ! ನೀನು [ಯಥಾ] ಯಾವ ರೀತಿಯಿಂದ [ಶಾರ್ಯಾತೇ] ಹಿಂಸಕನನ್ನು ಪಡೆಯುವಂತಹ ವ್ಯವಹಾರಗಳಲ್ಲಿ [ಸುತಸ್ಯ] ಉಂಟಾದ ರಸವನ್ನು [ಅಪಿಬಃ] ನೀನು ಸೇವಿಸುವವನಾಗು [ಶೂರ] ವೀರ ಪುರುಷನೇ! [ಸುಯಜ್ಞಾಃ] ಉತ್ತಮ ಕ್ರಿಯಾಕಲಾಪಗಳನ್ನು ಮಾಡುವ [ಕವಯಃ] ವಿದ್ಯಾವಂತರು [ತವ] ನಿನ್ನ [ಪ್ರಣೀತೀ] ಉತ್ತಮ ನೀತಿಯಿಂದ ಮತ್ತು [ತವ] ನಿನ್ನ [ಶರ್ಮನ್] ಸುಖಕಾರಕ ಮನೆಯಲ್ಲಿ ಐಶ್ವರ್ಯಕಾರಕರು [ಆ, ವಿವಾಸಂತಿ] ಯಾರು ಬರುವರೋ ಅವರ ರಕ್ಷಣೆ ಮಾಡು.

**ಭಾವಾರ್ಥ:-** ರಾಜನೇ! ನೀನು ನಿನ್ನ ರಾಜ್ಯ, ಐಶ್ವರ್ಯ, ನ್ಯಾಯ ಮತ್ತು ಧರ್ಮಗಳ ರಕ್ಷಕನು ಹೇಗಾಗಿರುವಿಯೋ ಅದೇ ರೀತಿ ನಿನ್ನ ಮಂತ್ರಿಗಳು ಅಧಿಕಾರಿಗಳೂ ಸೇವಕರೂ ಎಲ್ಲರೂ ಆಗಲಿ. ಅಂತಹ ಸಹಕಾರಿ ವರ್ಗದವರನ್ನು ಯಾವಾಗಲೂ ನೀನೂ ಗೌರವಿಸುವವನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ಸ ವಾವಶಾನ ಇಹ ಪಾಹಿ ಸೋಮಂ ಮರುದ್ಭಿರಿಂದ್ರ ಸಖಿಭಿಃ ಸುತಂ ನಃ ।

ಜಾತಂ ಯತ್ತ್ವಾ ಪರಿ ದೇವಾ ಅಭೂಷನ್ ಮಹೇ ಭರಾಯ ಪುರುಹೂತ ವಿಶ್ವೇ ॥೮॥

**ಪದಾರ್ಥ:-** [ಇಂದ್ರ] ಸಮಗ್ರ ಸಂಪತ್ಸಂಪನ್ನನೇ! ನೀನು [ಇಹ] ಈ ರಾಜ್ಯಕ್ಕೆ ಸಂಬಂಧಿಸಿದ ವ್ಯವಹಾರಗಳಲ್ಲಿ [ಸಃ] ಅಂತಹ [ವಾವಶಾನಃ] ಕಾಮನೆಗಳನ್ನು ಮಾಡುವ ನೀನು [ಮರುದ್ಭಿಃ] ಗಾಳಿಯೊಂದಿಗೆ ಸೂರ್ಯನು ಹೇಗೋ ಹಾಗೆ [ಸಖಿಭಿಃ] ಮಿತ್ರರೊಂದಿಗೆ [ನಃ] ನಮಗೆ [ಜಾತಂ] ಪ್ರಕಟವಾದ [ಸುತಂ] ತಯಾರಿಸಿದ [ಸೋಮಂ] ಸಂಪತ್ತನ್ನು [ಪಾಹಿ] ರಕ್ಷಿಸು. [ಪುರುಹೂತ] ಬಹುಪ್ರಶಂಸಿತನೇ! [ವಿಶ್ವೇ] ಸಮಗ್ರ [ದೇವಾಃ] ವಿದ್ಯಾವಂತರು [ಯತ್] ಯಾವುದರಿಂದ [ಮಹೇ] ಅತಿಶಯ [ಭರಾಯ] ಪೋಷಣಾರ್ಹ ಸಂಗ್ರಾಮಕ್ಕಾಗಿ [ತ್ವಾ] ನಿನ್ನನ್ನು [ಪರಿ] ಎಲ್ಲಾ ರೀತಿಯಿಂದಲೂ [ಅಭೂಷನ್] ಶೋಭಿತನನ್ನಾಗಿಸುವರು. ಅದೇ ರೀತಿ ನೀನೂ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ವಾಯುವಿನ ಸಹಾಯದಿಂದ ಹೇಗೆ ಎಲ್ಲರ ರಕ್ಷಣೆ ಮಾಡುವನೋ ಹಾಗೆ ಯಥಾರ್ಥನುಡಿಯುವ ಮಿತ್ರರೊಂದಿಗೆ ರಾಜನಾದ ನೀನೂ ಸಹ ರಾಜ್ಯದ ರಕ್ಷಣೆ ಮಾಡುವವನಾಗು ಮತ್ತು ನಿನ್ನ ಮಂತ್ರಿಯೇ ಮೊದಲಾದ ಸೇವಕ ವರ್ಗದವರು ಸಹ ರಾಜ್ಯದ ಹಿತಕಾರಕರಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ಅಪ್ತೂರ್ಯೇ ಮರುತ ಆಪಿರೇಷೋಽಮಂದನ್ನಿಂದ್ರಮನು ದಾತಿವಾರಾಃ ।

ತೇಭಿಃ ಸಾಕಂ ಪಿಬತು ವೃತ್ರಖಾದಃ ಸುತಂ ಸೋಮಂ ದಾಶುಷಃ ಸ್ವೇ ಸಧಸ್ಥೇ ॥೯॥

**ಪದಾರ್ಥ:-** [ದಾತಿವಾರಾಃ] ಛೇದನ ಮಾಡುವವರು [ಮರುತಃ] ಮನುಷ್ಯರು [ಅಮಂದನ್] ಆನಂದಗೊಳಿಸುವರು. [ತೇಭಿಃ] [ಸಾಕಂ] ಅವರೊಂದಿಗೆ [ಏಷಃ] ಇವನು [ಆಪಿಃ] ಸವಿಯುವವನು/ಶುಭಗುಣಗಳಿಂದ ವ್ಯಾಪ್ತನಾದವನು. [ವೃತ್ರಖಾದಃ] ಮೋಡವನ್ನು ಸ್ಥಿರಗೊಳಿಸುವವನು [ದಾಶುಷಃ] ದಾನ ಮಾಡುವವನ [ಸ್ವೇ] ತನಗೆ ಸಮನಾದ [ಸಧಸ್ಥೇ] ಸ್ಥಾನದಲ್ಲಿ [ಸುತಂ] ತಯಾರಿಸಲಾದ [ಸೋಮಂ] ಸಂಪತ್ತನ್ನು [ಅನು, ಪಿಬತು] ಅನುಸರಿಸಿ ಸೇವಿಸಲಿ. ಅವನನ್ನು ರಾಜನು ನಿರಂತರ ಪ್ರಸನ್ನಗೊಳಿಸಲಿ.

**ಭಾವಾರ್ಥ:-** ಯಾರು ಸತ್ಯಾಚರಣೆಗೆ ಪ್ರೇರಣೆ ನೀಡುವರೋ, ದುಷ್ಟಾಚರಣೆಯನ್ನು ತಡೆಯುವರೋ, ಎಲ್ಲರನ್ನೂ ಧಾರ್ಮಿಕರನ್ನಾಗಿಸಿ ಆನಂದವನ್ನು ಉಂಟುಮಾಡುವರೋ ಅವರೊಂದಿಗೆ ರಾಜನೂ ಆನಂದವನ್ನು ಸವಿಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ಇದಂ ಹ್ಯನ್ವೋಜಸಾ ಸುತಂ ರಾಧಾನಾಂ ಪತೇ । ಪಿಬಾ ತ್ವ (ಅ) ೧ ಸ್ಯ ಗಿರ್ವಣಃ ॥೧೦॥

**ಪದಾರ್ಥ:-** [ಗಿರ್ವಣಃ] ಪ್ರಾರ್ಥಿಸಲ್ಪಟ್ಟು [ರಾಧಾನಾಂ] ಸಂಪತ್ತಿನ [ಪತೇ] ಸ್ವಾಮಿಯೇ! ನೀನು [ಓಜಸಾ] ಬಲದಿಂದ [ಅಸ್ಯ] ಇವನ [ಇದಂ] ಈ [ಸುತಂ] ಸಿದ್ಧಪಡಿಸಲಾದ ಸೋಮರಸವನ್ನು [ಪಿಬ] ಪಾನಮಾಡು. [ಹಿ] ನಿಶ್ಚಯವಾಗಿ ಇಚ್ಛಾಪೂರ್ವಕ ಪಾನ ಮಾಡು.

**ಭಾವಾರ್ಥ:-** ರಾಜನೇ! ನೀನು ಸದಾಕಾಲ ಧನ-ಸಂಪತ್ತುಗಳ ರಕ್ಷಣೆ ಮಾಡುತ್ತ ಯಾವ ರಾಜ್ಯವನ್ನು ಪಡೆದಿರುವೆಯೋ ಅದರ ರಕ್ಷಣೆ ಮಾಡು. ವೃದ್ಧಿಗೊಳಿಸು, ಆನಂದಪಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ತೇ ಅನು ಸ್ವಧಾಮಸ-ತ್ಸುತೇ ನಿ ಯಚ್ಛ ತನ್ವಮ್ । ಸ ತ್ವಾ ಮಮತ್ತು ಸೋಮ್ಯಮ್ ॥೧೧॥**

**ಪದಾರ್ಥ:-** **[ಯಃ]** ಯಾವನು **[ತೇ]** ನಿನ್ನ **[ಸುತೇ]** ಸಿದ್ಧವಾದ ಸೋಮರಸದಲ್ಲಿ **[ಸ್ವಧಾಂ]** ಆಹಾರವನ್ನು **[ಅನು, ಅಸತ್]** ಹಿಮ್ಮೆಟ್ಟಿಸುವನೋ **[ಸಃ]** ಅವನು **[ತ್ವಾ]** ನಿನ್ನನ್ನು **[ಮಮತ್ತು]** ತೃಪ್ತಿ ಪಡಿಸಲಿ. ನೀನು **[ತನ್ವಂ]** ಶರೀರವನ್ನು **[ನಿಯಚ್ಛ]** ಧಾರಣ ಮಾಡು. **[ಸೋಮ್ಯಂ]** ಸೋಮಲತೆಗೆ ಸಂಬಂಧಿಸಿದ ಪಾನಾದಿ ಕ್ರಿಯೆಗಳನ್ನು ಮಾಡು.

**ಭಾವಾರ್ಥ:-** ರಾಜನೇ! ಯಾರು ನಿನಗೆ ಅನುಕೂಲಕರನಾಗಿ ಧರ್ಮಾತ್ಮನಾಗಿ ಪ್ರಜೆಗಳನ್ನು ಸಂತೋಷಗೊಳಿಸುವನೋ ಅವನು ಸಿರಿವಂತನಿಂದ ಸಂಪತ್ತನ್ನು ಪಡೆಯಲಿ. ನೀನು ಜಿತೇಂದ್ರಿಯನಾಗಿ ಪ್ರಜೆಗಳ ಪಾಲನೆ ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ತೇ ಅಶ್ನೋತು ಕುಕ್ಷ್ಯೋಃ ಪ್ರೇಂದ್ರ ಬ್ರಹ್ಮಣಾ ಶಿರಃ । ಪ್ರ ಬಾಹೂ ಶೂರ ರಾಧಸೇ ॥೧೨॥**

**ಪದಾರ್ಥ:-** **[ಇಂದ್ರ]** ಶ್ರೇಷ್ಠರಾಜನೇ! **[ತೇ]** ನಿನ್ನ **[ಕುಕ್ಷ್ಯೋಃ]** ಉದರದ ಅಕ್ಕ ಪಕ್ಕದ ಭಾಗಗಳಲ್ಲಿ **[ಬ್ರಹ್ಮಣಾ]** ಧನದೊಂದಿಗೆ ರಸವನ್ನು **[ಪ್ರ]** **[ಅಶ್ನೋತು]** ಪ್ರಾಪ್ತಿಗೊಳಿಸಲಿ. **[ಶೂರ]** ವೀರಪುರುಷನೇ! **[ತೇ]** ನಿನ್ನ **[ಶಿರಃ]** ಶ್ರೇಷ್ಠಾಂಗ ಮಸ್ತಕವನ್ನು **[ಬಾಹೂ]** ಭುಜಗಳನ್ನೂ **[ರಾಧಸೇ]** ಧನಕ್ಕಾಗಿ ಪ್ರಾಪ್ತನಾಗುವನೋ ಅವನ ಪಾಲನೆಯನ್ನು ನೀನು ಮಾಡು.

**ಭಾವಾರ್ಥ:-** ರಾಜನೇ! ಯಾವ ವಸ್ತುವು ನಿನ್ನ ಉದರವನ್ನು ಸೇರಿ ರೋಗಾದಿಗಳನ್ನು ಉಂಟು ಮಾಡುವುದಿಲ್ಲವೋ, ಬುದ್ಧಿ ಭ್ರಮಣೆ ಮಾಡುವುದಿಲ್ಲವೋ ಅಂತಹ ಆಹಾರ ಪಾನ ವಸ್ತುಗಳನ್ನೇ ನೀನು ಸ್ವೀಕರಿಸಬೇಕು. ಅದರಿಂದ ನಿನ್ನ ಬಲ, ಬುದ್ಧಿ ಹೆಚ್ಚಿ ನಿನ್ನ ರಾಜ್ಯ ಹಾಗೂ ಸುಖಗಳನ್ನು ಹೆಚ್ಚಿಸಿಕೊಳ್ಳಬಹುದು.

ಈ ಸೂಕ್ತದಲ್ಲಿ ರಾಜ ಪ್ರಜೆ ಮತ್ತು ಧರ್ಮ ಇವುಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥದೊಂದಿಗೆ ಹಿಂದಿನ ಸೂಕ್ತಾರ್ಥವು ಸಂಗತವಾಗಿರುತ್ತದೆ.

**ಐವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೫೨

**ಮಂತ್ರಸಂಖ್ಯೆ** ೮ । **ವಿಶ್ವಾಮಿತ್ರ ಋಷಿಃ** । ಇಂದ್ರೋ ದೇವತಾ । ೧, ೩, ೪ ಗಾಯತ್ರೀ, ೨ ನಿಚೃದ್ಗಾಯತ್ರೀ ಛಂದಃ । ಷಡ್ಜಃ ಸ್ವರಃ । ೬ ಜಗತೀ ಛಂದಃ । ನಿಷಾದಃ ಸ್ವರಃ । ೫, ೭ ನಿಚೃತ್ರಿಷ್ಟುಪ್, ೮ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಸೂಕ್ತದ ಪ್ರಥಮ ಮಂತ್ರದಲ್ಲಿ ರಾಜ ವಿಷಯವನ್ನಿಲ್ಲಿ ಹೇಳಲಾಗಿದೆ.

**ಧಾನಾವಂತಂ ಕರಂಭಿಣ-ಮಪೂಪವಂತಮುಕ್ಥಿನಮ್ । ಇಂದ್ರ ಪ್ರಾತರ್ಜುಷಸ್ವ ನಃ ॥೧॥**

**ಪದಾರ್ಥ:-** [**ಇಂದ್ರ**] ಐಶ್ವರ್ಯವಂತನೇ! ನೀನು [**ಪ್ರಾತಃ**] ಬೆಳಗಿನ ಸಮಯದಲ್ಲಿ [**ಧಾನಾವಂತಂ**] ಹುರಿದ ಗೋಧಿ ಇವಂತಹ [**ಕರಂಭಿಣಂ**] ಬಹು ಪರಿಶ್ರಮದಿಂದ ತಯಾರಿಸಿದ ದಧ್ಯಾದಿ ಪದಾರ್ಥಗಳಿರುವಂತಹ [**ಅಪೂಪವಂತಂ**] ಉತ್ತಮ ರೊಟ್ಟಿ ಇರುವಂತಹ [**ಉಕ್ಥಿನಂ**] ವೇದದ ಸ್ತುತಿ ವಚನಗಳಿರುವಂತಹ [**ಪ್ರಾತಃ**] ಪ್ರಾತಃಕಾಲದಲ್ಲಿ ಸೇವನೆ ಮಾಡುವಂತೆ ಹಾಗೆ [**ನಃ**] ನಮ್ಮೆಲ್ಲರನ್ನು [**ಜುಷಸ್ವ**] ಸೇವನೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಯಾಚಕನು ಹಣವಂತನನ್ನು ಯಾಚಿಸುವನೋ ಹಾಗೆಯೇ ರಾಜಾ ಮತ್ತು ರಾಜ ಪುರುಷರು. ರಾಜಧರ್ಮವನ್ನು ತಿಳಿದುಕೊಳ್ಳುವುದಕ್ಕಾಗಿ ಶ್ರೇಷ್ಠರೂ ಯಥಾರ್ಥ ನುಡಿಯುವವರೂ ಆದ ವಿದ್ಯಾವಂತರನ್ನು ಯಾಚಿಸಬೇಕು.

ರಾಜಧರ್ಮ ವಿಚಾರವನ್ನಿಲ್ಲಿ ಹೇಳಿದೆ.

**ಪುರೋಳಾಶಂ ಪಚತ್ಯಂ ಜುಷಸ್ವೇಂದ್ರಾ ಗುರುಸ್ವ ಚ । ತುಭ್ಯಂ ಹವ್ಯಾನಿ ಸಿಸ್ರತೇ ॥೨॥**

**ಪದಾರ್ಥ:-** [**ಇಂದ್ರ**] ಐಶ್ವರ್ಯವನ್ನು ಅನುಭವಿಸುವವನೇ! ನೀನು [**ಪಚತ್ಯಂ**] ಉತ್ತಮ ರೀತಿಯಿಂದ ಪಾಕ ಮಾಡಲಾದ [**ಪುರೋಳಾಶಂ**] ಆಹಾರ ವಿಶೇಷವನ್ನು [**ಜುಷಸ್ವ**] ಸೇವನೆ ಮಾಡು. [**ಗುರಸ್ವ**] ಉದ್ಯೋಗವನ್ನು ಮಾಡು. [**ತುಭ್ಯಂ**] ನಿನಗೆ [**ಹವ್ಯಾನಿ**] ಹವನ ಯೋಗ್ಯ ಪದಾರ್ಥಗಳನ್ನು [**ಸಿಸ್ರತೇ**] ಕೊಡಲಾಗುತ್ತದೆ.

**ಭಾವಾರ್ಥ:-** ರಾಜನೇ! ನೀನು ರೋಗನಾಶಕ ಹಾಗೂ ಬುದ್ಧಿವರ್ಧಕ ಅನ್ನ-ಪಾನಗಳನ್ನು ಭೋಗಿಸು. ಅದರಿಂದ ರೋಗರಹಿತನಾಗಿ ನಿರಂತರ ಕಾರ್ಯ ಮಾಡುವವನಾಗು. ಹಾಗೆ ಮಾಡಿದರೆ ನಿನಗೆ ಸಂಪೂರ್ಣ ಸುಖ ಲಭಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುರೋಳಾಶಂ ಚ ನೋ ಘಸೋ ಜೋಷಯಾಸೇ ಗಿರಶ್ಚ ನಃ ।**
**ವಧೂಯುರಿವ ಯೋಷಣಾಮ್ ॥೩॥**

**ಪದಾರ್ಥ:-** [**ನಃ**] ನಮ್ಮ [**ಪುರೋಳಾಶಂ**] ಪ್ರಥಮ ಸೇವನೆಗೆ ಯೋಗ್ಯವಾದ [**ಘಸಃ**] ಪದಾರ್ಥಗಳನ್ನು ಭಕ್ಷಿಸು. ನಮಗೂ ಭಕ್ಷಣೆ ಮಾಡಿಸು. [**ಚ**] ಮತ್ತು [**ಯೋಷಣಾಂ**] ತನ್ನ ಸ್ತ್ರೀಯನ್ನು [**ವಧೂಯುರಿವ**] ತನ್ನ ಸ್ತ್ರೀ ವಿಷಯಕ ಇಚ್ಛೆ ಮಾಡುವವನಂತೆ [**ನಃ**] ನಮ್ಮೆಲ್ಲರ [**ಜೋಷಯಾಸೇ**] ಸೇವೆ ಮಾಡು. [**ಚ**] ಮತ್ತು ನಾವು ನಿನ್ನ [**ಗಿರಃ**] ಮಾತುಗಳನ್ನು ([**ಜೋಷಯೇಮ**] ಸೇವನೆ ಮಾಡುತ್ತೇವೆ.)

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜ ಮತ್ತು ಪ್ರಜೆಗಳು ಪರಸ್ಪರರ ಸಂಪತ್ತನ್ನು ತನ್ನದೆಂದೇ ಭಾವಿಸಬೇಕು. ಹೇಗೆ ಸ್ತ್ರೀಯನ್ನು ಬಯಸುವ ಪುರುಷನು ಪ್ರಿಯಳಾದ ಸ್ತ್ರೀಯನ್ನು ಪಡೆದು ಆನಂದಿತನಾಗುವನೋ ಹಾಗೆಯೇ ರಾಜನು ಧರ್ಮಾಚರಣೆಯಲ್ಲಿ ನಿರತರಾದ ಪ್ರಜೆಗಳನ್ನು ಪಡೆದು ನಿರಂತರವಾಗಿ ಆನಂದಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುರೋಳಾಶಂ ಸನಶ್ರುತ ಪ್ರಾತಃಸಾವೇ ಜುಷಸ್ವ ನಃ । ಇಂದ್ರ ಕ್ರತುರ್ಹಿ ತೇ ಬೃಹನ್ ॥೪॥**

**ಪದಾರ್ಥ:-** **[ಸನಶ್ರುತ]** ಸತ್ಯಾಸತ್ಯವಿಚಾರ ಮಾಡುವವರಿಂದ ಉತ್ತಮ ಕಾರ್ಯಗಳ ವಿಷಯ ಕೇಳಿಸಿಕೊಳ್ಳುವವನಾದ **[ಇಂದ್ರ]** ವಿದ್ಯೈಶ್ವರ್ಯ ಸಂಪನ್ನನೇ! **[ಹಿ]** ಯಾವುದರಿಂದ **[ತೇ]** ನಿನ್ನ **[ಕ್ರತುಃ]** ಬುದ್ಧಿ ಮತ್ತು ಕರ್ಮವು **[ಬೃಹನ್]** ಬೆಳೆದಿದೆಯೋ ಅದರಿಂದ **[ಪ್ರಾತಃಸಾವೇ]** ಬೆಳಗಿನ ಸಮಯದಲ್ಲಿ ಮಾಡಲಾದ **[ನಃ]** ನಮ್ಮ **[ಪುರೋಳಾಶಂ]** ಉತ್ತಮ ಸಂಸ್ಕಾರಯುಕ್ತ ಆಹಾರವನ್ನು **[ಜುಷಸ್ವ]** ಸೇವಿಸು.

**ಭಾವಾರ್ಥ:-** ಮನುಷ್ಯರು, ಯಾರಲ್ಲಿ ಎಂತಹ ವಿದ್ಯೆ ಮತ್ತು ಶೀಲಗಳಿರುತ್ತವೆಯೋ ಅದಕ್ಕನುಗುಣವಾಗಿ ಅವರ ಮೇಲೆ ದಯೆ ತೋರಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾಧ್ಯಂದಿನಸ್ಯ ಸವನಸ್ಯ ಧಾನಾಃ ಪುರೋಳಾಶಮಿಂದ್ರ ಕೃಷ್ವೇಹ ಚಾರುಮ್ ।**
**ಪ್ರಯತ್ಸ್ತೋತಾ ಜರಿತಾ ತೂರ್ಣ್ಯರ್ಥೋ ವೃಷಾಯಮಾಣ ಉಪ ಗೀರ್ಭಿರೀಟ್ಟೇ ॥೫॥**

**ಪದಾರ್ಥ:-** **[ಇಂದ್ರ]** ಪ್ರತಾಪಿಯೇ! ನೀನು **[ಮಾಧ್ಯಂದಿನಸ್ಯ]** ಮಧ್ಯಾಹ್ನದಲ್ಲಿ ನಡೆಯುವಂತಹ **[ಸವನಸ್ಯ]** ಕರ್ಮ ವಿಶೇಷದಲ್ಲಿನ **[ಧಾನಾಃ]** ಬೋಜನ ಮಾಡಿರುವ ಆಹಾರ ಮತ್ತು **[ಚಾರು]** ಭಕ್ಷಣಯೋಗ್ಯ **[ಪುರೋಳಾಶಂ]** ಅನ್ನ ವಿಶೇಷವನ್ನು **[ಇಹ]** ಈ ಉತ್ತಮ ಕರ್ಮದಲ್ಲಿ **[ಕೃಷ್ವ]** ಸಂಗ್ರಹ ಮಾಡಿಕೊ. **[ಯತ್]** ಯಾವುದು **[ವೃಷಾಯಮಾಣಃ]** ಜಲದ ಉತ್ಪತ್ತಿ ಮಾಡುವವನು **[ತೂರ್ಣ್ಯರ್ಥಃ]** ಶೀಘ್ರಪ್ರಯೋಜನಕಾರೀ **[ಜರಿತಾ]** ನಿನ್ನ ಸೇವಕನು **[ಸ್ತೋತಾ]** ಮತ್ತು ಸ್ತುತಿ ಮಾಡುವವನು **[ಉಪ]** ಸಮೀಪದಿಂದ **[ಗೀರ್ಭಿಃ]** ನುಡಿಗಳಿಂದ **[ಪ್ರ, ಉಪ]** ಸಮೀಪದಲ್ಲಿ **[ಈಟ್ಟೇ]** ಸಿರಿವಂತನಾಗಲಿ.

**ಭಾವಾರ್ಥ:-** ಯಾವ ರಾಜ ಪುರುಷರು ಋತ್ವಿಜರಂತೆ ರಾಜ್ಯದ ವೃದ್ಧಿ ಮಾಡುವರೋ ಅವರನ್ನು ರಾಜನು ಸತ್ಕರಿಸಿ ಪ್ರಸನ್ನಗೊಳಿಸಬೇಕು.

ಇಲ್ಲಿ ಅಧ್ಯಾಪಕರ ವಿಷಯ ತಿಳಿಸಲಾಗಿದೆ.

**ತೃತೀಯೇ ಧಾನಾಃ ಸವನೇ ಪುರುಷ್ಟುತ ಪುರೋಳಾಶಮಾಹುತಂ ಮಾಮಹಸ್ವ ನಃ ।**
**ಋಭುಮಂತಂ ವಾಜವಂತಂ ತ್ವಾ ಕವೇ ಪ್ರಯಸ್ವಂತ ಉಪ ಶಿಕ್ಷೇಮ ಧೀತಿಭಿಃ ॥೬॥**

**ಪದಾರ್ಥ:-** **[ಪುರುಷ್ಟುತ]** ಬಹುಜನರಿಂದ ಪ್ರಶಂಸೆಗೊಳಗಾದ **[ಕವೇ]** ವಿದ್ಯಾವಂತ ಪುರುಷನೇ! **[ಪ್ರಯಸ್ವಂತಃ]** ಪ್ರಯತ್ನ ಮಾಡುತ್ತಲಿರುವ ನಾವು **[ನೀತಿಭಿಃ]** ಬೆರಳು ತೋರಿಸಿ ತಿಳಿಸಿರುವ ವಚನಾರ್ಥಗಳಿಂದ **[ತೃತೀಯೇ]** ಮೂರನೆಯ **[ಸವನೇ]** ಸಾಯಂಕಾಲದಲ್ಲಿ ಮೂಡಲು ಯೋಗ್ಯವಾದ ಕರ್ಮಗಳಲ್ಲಿ **[ಪುರೋಡಾಶಂ]** ಸಂಸ್ಕರಿಸಲಾದ ಆಹಾರ ವಿಶೇಷವನ್ನು **[ಧಾನಾಃ]** ಹುರಿದು ತಯಾರಿಸಿರುವ ಆಹಾರ ವಿಶೇಷವನ್ನು **[ಋಭುಮಂತಂ]** ಶ್ರೇಷ್ಠ ವಿದ್ವಾಂಸರಿರುವಂತಹ **[ವಾಜವಂತಂ]** ಶುಷ್ಕ ಆಹಾರ ಯಾರಲ್ಲಿದೆಯೋ ಅವನನ್ನು **[ಆಹುತಂ]** ಆಮಂತ್ರಿಸಲಾದ **[ತ್ವಾ]** ನಿನ್ನನ್ನು **[ಉಪ, ಶಿಕ್ಷೇಮ]** ಶಿಕ್ಷಣ ನೀಡುವೆವು. ಅಂತಹ ನೀನು **[ನಃ]** ನಮ್ಮೆಲ್ಲರನ್ನು **[ಮಾಮಹಸ್ವ]** ಗೌರವಿಸುವವನಾಗು.

**ಭಾವಾರ್ಥ:-** ವಿದ್ಯಾವಂತರು ಯಜ್ಞ ಮಾಡುವಂತಹ ಯಜಮಾನರಿಗೆ ಯಜ್ಞಕಾರ್ಯಗಳ ಶಿಕ್ಷಣವನ್ನು ಹೇಗೆ ಪ್ರಾಯೋಗಿಕವಾಗಿ ಕೊಡುವರೋ, ಅದೇ ರೀತಿ ಅಧ್ಯಾಪಕ ವರ್ಗದವರು ಅನ್ಯ ಜನರಿಗೆ ಪ್ರಾಯೋಗಿಕವಾಗಿ ಶಿಕ್ಷಣ ನೀಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪೂಷಣ್ವತೇ ತೇ ಚಕೃಮಾ ಕರಂಭಂ ಹರಿವತೇ ಹರ್ಯಶ್ವಾಯ ಧಾನಾಃ ।**
**ಅಪೂಪಮದ್ಧಿ ಸಗಣೋ ಮರುದ್ಭಿಃ ಸೋಮಂ ಪಿಬ ವೃತ್ರಹಾ ಶೂರ ವಿದ್ವಾನ್ ॥೭॥**

**ಪದಾರ್ಥ:-** **[ಶೂರ]** ದುಷ್ಟರನ್ನು ನಾಶಮಾಡುವ ಸಾಮರ್ಥ್ಯವಿರುವವನೇ! **[ವೃತ್ರಹಾ]** ಸಂಪತ್ತಿರುವ ದ್ಯಾವಂತನಂತೆ **[ಪೂಷಣ್ವತೇ]** ಪುಷ್ಟಿಕಾರಕರಿರುವಂತಹ **[ಹರಿವತೇ]** ಉತ್ತಮ ಅಶ್ವಾದಿ ವಾಹನಗಳಿರುವಂತಹ **ರ್ಯಶ್ವಾಯ]** ಹರಣಶೀಲ ಶೀಘ್ರಗತಿಯ ಅಶ್ವ ಅಥವಾ ಅಗ್ನಿಯಂತಹ ಶಕ್ತಿ ಸಾಧನವಿರುವ **[ತೇ]** ನಿನಗೋಸ್ಕರ **ರಂಭಂ]** ದಧ್ಯಾದಿಗಳಿರುವಂತಹ ಭೋಜನವನ್ನು **[ಧಾನಾಃ]** ಹುರಿದ ಧಾನ್ಯಗಳಿರುವ ಆಹಾರವನ್ನೂ **[ಅಪೂಪಂ]** ೊಟ್ಟಿಯನ್ನೂ ಕೊಡುವೆವು. **[ಸಗಣಃ]** ತನ್ನ ಪರಿವಾರದವರೊಂದಿಗೆ ಬಂದಿರುವ ನೀನು **[ಮರುದ್ಭಿಃ]** ಉತ್ತಮ ನುಷ್ಯರೊಂದಿಗೆ **[ಅದ್ಧಿ]** ಭಕ್ಷಿಸು. **[ಸೋಮಂ]** ಓಷಧಿರಸವನ್ನು **[ಪಿಬ]** ಪಾನಮಾಡು. **[ಚಕೃಮ]** ನಾವು ನಗಾಗಿಯೇ ಮಾಡಿರುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ವಿದ್ಯೆ ವಿನಯ ಸಂಪನ್ನರೋ ವರು ಶ್ರೇಷ್ಠ ರಾಜನಿಗೆ ಉತ್ತಮ ಪದಾರ್ಥಗಳನ್ನು ಕೊಟ್ಟು ನಿರಂತರ ಅವನ ಸೇವೆ ಮಾಡಬೇಕು ಹಾಗೂ ತಾವು ಜನ ಗೌರವಕ್ಕೆ ಪಾತ್ರರಾಗಬೇಕು.

ಈ ಮಂತ್ರದಲ್ಲಿ ಯಜ್ಞ ಅಗ್ನಿ ಸಂಚಯನದ ವಿಚಾರವಿದೆ.

**ಪ್ರತಿ ಧಾನಾ ಭರತ ತೂಯಮಸ್ಮೈ ಪುರೋಳಾಶಂ ವೀರತಮಾಯ ನೃಣಾಮ್ ।**
**ದಿವೇದಿವೇ ಸದೃಶೀರಿಂದ್ರ ತುಭ್ಯಂ ವರ್ಧಂತು ತ್ವಾ ಸೋಮಪೇಯಾಯ ಧೃಷ್ಣೋ ॥೮॥**

**ಪದಾರ್ಥ:-** **[ಧೃಷ್ಣೋ]** ಮಾತನಾಡುವುದರಲ್ಲಿ ಚತುರನಾದ **[ಇಂದ್ರ]** ದುಷ್ಟರನ್ನು ನಾಶಮಾಡುವ ರಾಜನೇ! **ದೃಶೀ]** ಸಮಾನ ಸ್ವರೂಪದ ಸೇನೆಯು **[ದಿವೇದಿವೇ]** ಪ್ರತಿದಿನವೂ **[ನೃಣಾಂ]** ಮುಂದಾಳುಗಳ ಮಧ್ಯದಲ್ಲಿ **ೀರತಮಾಯ]** ಅತ್ಯಂತ ವೀರನಾದವನಿಗೆ **[ಸೋಮಪೇಯಾಯ]** ಸೋಮಪಾನ ಮಾಡುವ ನಿನಗೆ **[ವರ್ಧಂತು]** ದ್ಧಿ ಹೊಂದುವಂತೆ ಮಾಡಲಿ. **[ತ್ವಾ]** ಯಾರು ನಿನ್ನನ್ನು ವೃದ್ಧಿ ಪಡಿಸುವರೋ ಅವರನ್ನು ನೀನೂ ವೃದ್ಧಿಪಡಿಸು. **ಸ್ಮೈ]** ಇದಕ್ಕಾಗಿ **[ಧಾನಾಃ]** ಹುರಿದು ತಯಾರಿಸಿದ ಆಹಾರ ಮತ್ತು **[ಪುರೋಳಾಶಂ]** ವಿಶಿಷ್ಟರೀತಿಯಲ್ಲಿ ಂಸ್ಕರಿಸಲಾದ ಆಹಾರವನ್ನೂ **[ತೂಯಂ]** ಶೀಘ್ರವಾಗಿ **[ಪ್ರತಿಭರತ]** ಸಂಗ್ರಹ ಮಾಡು.

**ಭಾವಾರ್ಥ:-** ರಾಜನು ಮತ್ತು ಸಮಸ್ತ ಪ್ರಜೆಗಳೂ ರಾಜ್ಯದ ಅಭಿವೃದ್ಧಿಗೆ ಬೇಕಾಗುವಂತಹ ಪದಾರ್ಥಗಳನ್ನು ಂಗ್ರಹಿಸಿಕೊಳ್ಳಬೇಕು. ಅವುಗಳಿಂದ ಉತ್ತಮ ಸೇನೆಯನ್ನೂ ಸಿದ್ಧಗೊಳಿಸಿ ದುಷ್ಟರ ದಮನವನ್ನೂ ಶಿಷ್ಟರ ಸಂರಕ್ಷಣೆಯನ್ನೂ ಮಾಡುತ್ತ ಆನಂದವನ್ನನುಭವಿಸಬೇಕು.

ಈ ಸೂಕ್ತದಲ್ಲಿ ರಾಜ, ಪ್ರಜೆ, ಯಜ್ಞ ಸಂಸ್ಕಾರಾದಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಐವತ್ತೆರಡನೆಯ ಸೂಕ್ತ ಸಮಾಪ್ತ

## ಸೂಕ್ತ ೫೩

ಮಂತ್ರಸಂಖ್ಯೆ ೨೪ । ವಿಶ್ವಾಮಿತ್ರ ಋಷಿಃ । ೧ ಇಂದ್ರಾಪರ್ವತೌ, ೨-೧೪, ೨೧-೨೪ ಇಂದ್ರಃ, ೧೫, ೧೬ ವಾಕ್, ೧೭-೨೦ ರಥಾಂಗಾನಿ ದೇವತಾಃ । ೧, ೫, ೯, ೨೧ ನಿಚೃತ್ರಿಷ್ಟುಪ್, ೨, ೬, ೭, ೧೪, ೧೭, ೧೯, ೨೩, ೨೪ ತ್ರಿಷ್ಟುಪ್ । ಧೈವತಃ ಸ್ವರಃ । ೧೨, ೨೨ ಅನುಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೧೦, ೧೬ ನಿಚೃಜ್ಜಗತೀ ಛಂದಃ । ನಿಷಾದಃ ಸ್ವರಃ । ೧೩ ನಿಚೃದ್ಗಾಯತ್ರೀ ಛಂದಃ । ಷಡ್ಜಃ ಸ್ವರಃ । ೧೮ ನಿಚೃದ್ಬೃಹತೀ ಛಂದಃ । ಮಧ್ಯಮಃ ಸ್ವರಃ.

ಈ ಮಂತ್ರದಲ್ಲಿ ರಾಜ, ಸೇನಾ ವಿಷಯ ಹೇಳಲಾಗಿದೆ.

**ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।**
**ವೀತಂ ಹವ್ಯಾನ್ಯಧ್ವರೇಷು ದೇವಾ ವರ್ಧೇಥಾಂ ಗೀರ್ಭಿರಿಳಯಾ ಮದಂತಾ ॥೧॥**

**ಪದಾರ್ಥಃ-** [ಇಂದ್ರಾ ಪರ್ವತಾ] ಮಿಂಚು-ಮೋಡಗಳಂತಿರುವ ರಾಜ್ಯ, ಸೇನಾಪತಿಗಳೇ! [ಬೃಹತಾ] ದೊಡ್ಡದಾದ [ರಥೇನ] ವಾಹನದಿಂದ [ಸುವೀರಾಃ] ಉತ್ತಮ ವೀರರು [ವಾಮೇಃ] ಶ್ರೇಷ್ಠವಾದ [ಇಷಃ] ಅನ್ನಾದಿಗಳನ್ನು [ಆ, ವಹತಂ] ಪಡೆದುಕೊಳ್ಳಿರಿ. [ಅಧ್ವರೇಷು] ಅಹಿಂಸಾತ್ಮಕ ಯಜ್ಞಗಳಲ್ಲಿ [ಹವ್ಯಾನಿ] ದಾನ-ಗ್ರಹಣಯೋಗ್ಯವಾದ ಪದಾರ್ಥಗಳನ್ನು [ವೀತಂ] ಪಡೆದುಕೊಳ್ಳಿರಿ. [ಇಳಯಾ] ಸಮಗ್ರಶಾಸ್ತ್ರ ಪ್ರಕಾಶಕ ವಾಣಿಯಿಂದ [ಮದಂತಾ] ಸಂತೃಪ್ತಿಗೊಳಿಸುತ್ತಿರುವ ವಿದ್ಯಾವಂತರು [ದೇವಾಃ] ದಾನಿಗಳಾಗಿ [ಗೀರ್ಭಿಃ] ಸ್ತುತಿ ಮಾಡುವ ವಚನಗಳಿಂದ [ವರ್ಧೇಥಾಂ] ವೃದ್ಧಿಪಡಿಸಲಿ.

**ಭಾವಾರ್ಥಃ-** ಹೇಗೆ ಇಂದ್ರನು ಸಮಗ್ರ ಜಲವಾಯುಗಳ ಮತ್ತು ಓಷಧಿಗಳ ರಕ್ಷಣೆ ಮಾಡುವನೋ ಹಾಗೆಯೇ ಸೇನಾಪತಿಯಾದವರು ಬಹಳಷ್ಟು ಸಾಮಗ್ರಿಗಳಿಂದ ಸೇನೆಯ ಸುಖ-ಭೋಗಗಳನ್ನು ಪೂರ್ಣಗೊಳಿಸಬೇಕು ಮತ್ತು ಸೇನೆಯು ಮಿಂಚಿನಂತೆ ಶತ್ರುಗಳನ್ನು ನಾಶಮಾಡಬೇಕು ಹಾಗೂ ಸೇನೆಯಲ್ಲಿರುವ ಪ್ರತಿಯೊಬ್ಬರೂ ಯುದ್ಧ ಕುಶಲರೂ ರಾಜವಿದ್ಯಾ ಚತುರರೂ ಆಗಿ ಎಲ್ಲಾ ಕಾಮನೆಗಳನ್ನು ಈಡೇರಿಸಿಕೊಳ್ಳಬೇಕು.

ಈ ಮಂತ್ರದಲ್ಲಿ ರಾಜನ ವಿಷಯ ಹೇಳಿದೆ.

**ತಿಷ್ಠಾ ಸು ಕಂ ಮಘವನ್ಮಾ ಪರಾ ಗಾಃ ಸೋಮಸ್ಯ ನು ತ್ವಾ ಸುಷುತಸ್ಯ ಯಕ್ಷಿ ।**
**ಪಿತುರ್ನ ಪುತ್ರಃ ಸಿಚಮಾ ರಭೇ ತ ಇಂದ್ರ ಸ್ವಾದಿಷ್ಠಯಾ ಗಿರಾ ಶಚೀವಃ ॥೨॥**

**ಪದಾರ್ಥಃ-** [ಮಘವನ್] ಬಹುಧನ ಸಂಪನ್ನನೇ! [ಇಂದ್ರ] ಸಂಪತ್ಪ್ರದಾಯಕನೇ! ನೀನು [ಸುಷುತಸ್ಯ] ಉತ್ತಮರೀತಿಯಲ್ಲಿ ತಯಾರಿಸಿದ [ಸೋಮಸ್ಯ] ಸೋಮರಸದ [ಕಂ] ಸುಖವನ್ನು [ಸು, ತಿಷ್ಠ] ಸವಿಯುತ್ತಿರು. [ಶಚೀವಃ] ಪ್ರಜಾಪಾಲಕನೇ! [ತೇ] ನಿನ್ನ [ಸ್ವಾದಿಷ್ಠಯಾ] ಮಧುರವಾದ [ಗಿರಾ] ಮಾತಿನಿಂದ [ಸಿಂಚತಂ] ಸೇಚನವನ್ನು [ಆ, ರಭೇ] ಪ್ರಾರಂಭಿಸು. [ತ್ವಾ] ನಿನಗೆ [ನು] ಶೀಘ್ರವಾಗಿ [ಪುತ್ರಃ] ಮಗನು [ಪಿತುಃ] ತಂದೆಯಿಂದ [ನ] ಹೇಗೋ ಹಾಗೆ [ಆ, ರಭೇ] ಆರಂಭ ಮಾಡುವಂತೆ [ಯಕ್ಷಿ] ಪ್ರಾಪ್ತನಾಗು. [ಮಾ] [ಪರಾ, ಗಾ] ನಮ್ಮಿಂದ ದೂರವಾಗಬೇಡ.

**ಭಾವಾರ್ಥಃ-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ಮಗನು ಹೇಗೆ ತಂದೆಯ ಸೇವೆ ಮಾಡುವನೋ, ಹಾಗೆ ನೀನು ವಿದ್ಯಾವಂತರ ಸೇವೆ ಮಾಡು ಮತ್ತು ಎಂದೂ ಧರ್ಮಾಚರಣೆಯಿಂದ ದೂರವಾಗಬೇಡ. ಅನ್ಯರನ್ನು ಸುಖಿಗಳನ್ನಾಗಿಸಿ ನೀನೂ ಸುಖಪಡು.

ಪ್ರಜೆಗಳ ವಿಷಯವಿಲ್ಲಿದೆ.

**ಶಂಸಾವಾಧ್ವರ್ಯೋ ಪ್ರತಿ ಮೇ ಗೃಣೀಹೀ-೦ದ್ರಾಯ ವಾಹಃ ಕೃಣುವಾವ ಜುಷ್ಟಮ್ ।**
**ಏದಂ ಬರ್ಹಿರ್ಯಜಮಾನಸ್ಯ ಸೀದಾ-ಥಾ ಚ ಭೂದುಕ್ಥಮಿಂದ್ರಾಯ ಶಸ್ತಮ್ ॥೩॥**

**ಪದಾರ್ಥ:-** **[ಅಧ್ವರ್ಯೋ]** ಅಹಿಂಸಕನೇ! ನೀನು **[ಇಂದ್ರಾಯ]** ಐಶ್ವರ್ಯವಂತ ಪುರುಷನಿಗೆ **[ಉಕ್ಥಂ]** ಹೇಳಲು ಯೋಗ್ಯವಾದ **[ಶಸ್ತಂ]** ಪ್ರಶಂಸಾವಚನಗಳನ್ನು **[ಜುಷ್ಟಂ]** ಸೇವಿಸು. **[ಇದಂ]** ಈ **[ಬರ್ಹಿಃ]** ಉತ್ತಮ ಸ್ಥಾನವನ್ನು **[ಯಜಮಾನಸ್ಯ]** ಪ್ರಾಪ್ತನಾದ ನಿನಗೆ **[ಭೂತ್]** ಸಿದ್ಧವಾಗಲಿ. **[ಆ, ಸೀದ]** ಅಲ್ಲಿ ವಿರಾಜಮಾನನಾಗು. **[ಅಥ]** ಅನಂತರ **[ಚ]** ಅನ್ಯರಿಗೆ ಪ್ರಾಪ್ತನಾಗು. **[ವಾಹಃ]** ನಿನ್ನ ಹತ್ತಿರ ಬಂದವರು ನಾವು **[ಶಂಸಾವ]** ಪ್ರಶಂಸೆ ಮಾಡುವೆವು. **[ಕೃಣುವಾವ]** ಸ್ತುತಿ ಮಾಡುವೆವು. **[ಮೇ]** ನನಗಾಗಿ **[ಪ್ರತಿಗೃಣೀಹಿ]** ಸ್ತವನ ಮಾಡು.

**ಭಾವಾರ್ಥ:-** ರಾಜಾ ಮತ್ತು ಪ್ರಜೆಗಳು ಯಾವುದರಿಂದ ಐಶ್ವರ್ಯ ಪ್ರಾಪ್ತಿಯಾಗುವುದೋ ಅಂತಹ ಕರ್ಮಗಳನ್ನು ಮಾಡಬೇಕು. ಸಂಪತ್ತನ್ನು ವೃದ್ಧಿಪಡಿಸಿಕೊಳ್ಳಬೇಕು ಮತ್ತು ರಾಜನು ಪ್ರಜೆಗಳ ಮಧ್ಯದಲ್ಲಿದ್ದು ಪ್ರಶಂಸೆ ಪಡೆದುಕೊಳ್ಳಬೇಕು.

ವಿದ್ಯಾವಂತರ ವಿಷಯವಿಲ್ಲಿ ಹೇಳಿದೆ.

**ಜಾಯೇ ದಸ್ತಂ ಮಘವನ್ತ್ಸೇದು ಯೋನಿ-ಸ್ತದಿತ್ತ್ವಾ ಯುಕ್ತಾ ಹರಯೋ ವಹಂತು ।**
**ಯದಾ ಕದಾ ಚ ಸುನವಾಮ ಸೋಮ-ಮಗ್ನಿಷ್ಟ್ವಾ ದೂತೋ ಧನ್ವಾತ್ಯಚ್ಛ ॥೪॥**

**ಪದಾರ್ಥ:-** **[ಮಘವನ್]** ಧನವಂತನೇ! **[ತೇ]** ನಿನ್ನ **[ಜಾಯಾ]** ಮಡದಿಯು **[ಅಸ್ತಂ]** ಮನೆಯನ್ನು ಸೇರಲಿ. **[ಸಾ]** ಅವಳು **[ಇತ್]** **[ಉ]** ಸಂತಾನಕ್ಕೆ **[ಯೋನಿಃ]** ಕಾರಣವಾಗಲಿ. **[ತತ್]** ಅವಳಿಗೆ **[ತ್ವಾ]** ನಿನಗೆ **[ಚ]** **[ಇತ್]** ಇಬ್ಬರಿಗೂ **[ಯುಕ್ತಾಃ]** ಸೇರಿದ **[ಹರಯಃ]** ಅಶ್ವದಂತಹ ವಾಹನವು **[ಸೋಮಂ]** ಸೋಮರಸವನ್ನು **[ವಹಂತು]** ತರಲಿ ಮತ್ತು **[ಯದಾ]** ಯಾವಾಗ **[ಕದಾ]** ಆವಾಗ **[ಸುನವಾಮ]** ಸೋಮರಸ ಸೇಚನ ಮಾಡುವೆವು. ನೀನು **[ದೂತಃ]** ಸೇವಕನಾದ **[ಅಗ್ನಿಃ]** ಅಗ್ನಿಯ ಮೂಲಕ **[ಧನ್ವಾತಿ]** ಪಡೆಯುವವನಾಗು. **[ತ್ವಾ]** ನಿನ್ನನ್ನೇ **[ಅಚ್ಛ]** ಉತ್ತಮ ರೀತಿಯಿಂದ ಪಡೆಯುವೆವು.

**ಭಾವಾರ್ಥ:-** ಎರಡು ಕುದುರೆಗಳು ಎಳೆದುಕೊಂಡು ಹೋಗುವಂತಹ ವಾಹನದಿಂದ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುವಂತೆ ಪರಸ್ಪರ ಪ್ರಸನ್ನರಾದ ಇಬ್ಬರು ವಿದ್ವಾಂಸರು ಗ್ರಹಸ್ಥಾಶ್ರಮದ ಶೋಭೆ ಹೆಚ್ಚಿಸಲು ಸಮರ್ಥರಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪರಾ ಯಾಹಿ ಮಘವನ್ನಾ ಚ ಯಾಹೀಂದ್ರ ಭ್ರಾತರುಭಯತ್ರಾ ತೇ ಅರ್ಥಮ್ ।**
**ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ರಾಸಭಸ್ಯ ॥೫॥**

**ಪದಾರ್ಥ:-** **[ಮಘವನ್]** ಧನಸಂಪನ್ನನಾದ **[ಇಂದ್ರ]** ಉತ್ತಮ ಸ್ವಭಾವದವನೇ! **[ಪರಾ]** **[ಯಾಹಿ]** ದೂರ ಚಲಿಸು. **[ಭ್ರಾತಃ]** ಬಂಧು ಜನರೇ! **[ಯತ್ರ]** ಎಲ್ಲಿ **[ಬೃಹತಃ]** ದೊಡ್ಡದಾದ **[ರಥಸ್ಯ]** ವಾಹನದ **[ರಾಸಭಸ್ಯ]** ವಹನ ಸಮರ್ಥ ಇಂಧನದಂತೆ **[ವಾಜಿನಃ]** ವೇಗಯುಕ್ತ **[ನಿಧಾನಂ]** ಸ್ಥಾಪನೆಯು **[ಚ]** ಮತ್ತು

[ವಿಮೋಚನಂ] ಬೇರೆಗೊಳಿಸುವುದು ನಡೆಯುತ್ತದೆಯೋ [ಯತ್ರ] ಎಲ್ಲಿ [ಉಭಯತ್ರ] ಗಮನಾಗಮನ ಕ್ರಿಯೆಯಲ್ಲಿ [ತೇ] ನಿನಗೆ [ಅರ್ಥಂ] ಪ್ರಯೋಜನವನ್ನು ನಾವು ಮಾಡುವೆವು.

**ಭಾವಾರ್ಥ:-** ಮನುಷ್ಯರೇ! ಕಾರ್ಯಸಿದ್ಧಿಗಾಗಿ ಎಲ್ಲ ಕಡೆಗೂ ಸಂಚರಿಸಿರಿ. ಆದರೆ ಯಾವಾಗಲೂ ಸಂಚಾರ ಮಾಡುತ್ತಲೇ ಇರಬೇಡಿ. ಮನೆಯಲ್ಲೂ ಇದ್ದು ಬಂಧುಗಳಿಂದೊಡಗೂಡಿ ಐಶ್ವರ್ಯವನ್ನು ಸಂಪಾದಿಸಿಕೊಂಡು ದೇಶ ದೇಶಕ್ಕೆ ಪ್ರಯಾಣವನ್ನೂ ಮಾಡಿರಿ, ಹೋಗಿರಿ, ಬನ್ನಿರಿ.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ ।**
**ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ದಕ್ಷಿಣಾವತ್ ॥೬॥**

**ಪದಾರ್ಥ:-** [ಇಂದ್ರ] ಐಶ್ವರ್ಯವಂತ ರಾಜನೇ! [ಯತ್ರ] ಯಾವುದರಲ್ಲಿ [ಬೃಹತಃ] ದೊಡ್ಡದಾದ [ರಥಸ್ಯ] ವಿಮಾನದಂತಹ ವಾಹನದ [ವಾಜಿನಃ] ಅಗ್ನ್ಯಾದಿಗಳಂತಹ ಇಂಧನವನ್ನು [ನಿಧಾನಂ] ಸ್ಥಾಪಿಸಿಕೊಂಡು [ವಿಮೋಚನಂ] ಬೇರೆ ಮಾಡುವುದಕ್ಕೆ / ವಿಮೋಚನೆಗೊಳಿಸುವುದಕ್ಕೆ [ದಕ್ಷಿಣಾವತ್] ದಕ್ಷಿಣೆಯು ಹೇಗೋ ಹಾಗೆ ಮಾಡಿರಿ. [ಗೃಹೇ] ಮನೆಯಲ್ಲಿದ್ದು [ಜಾಯಾ] ಮಡದಿಯೊಂದಿಗೆ [ಅಸ್ತಂ] ಮನೆಯನ್ನು [ಪ್ರ, ಯಾಹಿ] ಕುರಿತು ಪ್ರಯಾಣ ಮಾಡು. [ಸೋಮಂ] ರೋಗನಾಶಕ ಸೋಮರಸವನ್ನು [ಅಪಾಃ] ಸೇವಿಸುವವನಾಗಿ [ಸುರಣಂ] ಶ್ರೇಷ್ಠ ಸಂಗ್ರಾಮವನ್ನು ಪಡೆದುಕೊ.

**ಭಾವಾರ್ಥ:-** ರಾಜಪುರುಷ ಮುಂತಾದವರು ವಿಮಾನದಂತಹ ವಾಹನಗಳನ್ನು ತಯಾರಿಸಿಕೊಂಡು ಅವುಗಳಲ್ಲಿ ಯಂತ್ರಗಳ ಜೋಡಣೆ ಮಾಡಿ ಅಗ್ನ್ಯಾದಿ ಇಂಧನ ಪದಾರ್ಥಗಳನ್ನು ಸಂಯೋಜನೆ ವಿಭಜನೆ ಮಾಡುತ್ತ ತಮ್ಮ ಮಡದಿಯೊಂದಿಗೆ ಮನೆಗೂ ಬರಬೇಕು; ದೇಶಾಂತರಕ್ಕೂ ಹೋಗಬೇಕು. ಸ್ತ್ರೀಯು ಶೂರಳೂ ವೀರಳೂ ಆಗಿದ್ದರೆ ಅವಳೊಂದಿಗೆ ಸಂಗ್ರಾಮ ವಿಜಯಕ್ಕೂ ಹೋಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮೇ ಭೋಜಾ ಅಂಗಿರಸೋ ವಿರೂಪಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ ।**
**ವಿಶ್ವಾಮಿತ್ರಾಯ ದದತೋ ಮಘಾನಿ ಸಹಸ್ರಸಾವೇ ಪ್ರ ತಿರಂತ ಆಯುಃ ॥೭॥**

**ಪದಾರ್ಥ:-** [ಇಮೇ] ಈ [ಅಂಗಿರಸಃ] ಪ್ರಾಣಗಳಂತೆ ಬಲಿಷ್ಠದಾದ [ಭೋಜಾಃ] ಭೋಜನ ಮಾಡುವ/ ಪ್ರಜೆಗಳನ್ನು ಪಾಲನೆ ಮಾಡುವ [ವಿರೂಪಾಃ] ಅನೇಕ ವಿಧ ರೂಪ ಅಥವಾ ವಿರೂಪವಾದ [ದಿವಃ] ಪ್ರಕಾಶ ಸ್ವರೂಪ [ಅಸುರಸ್ಯ] ಶತ್ರುಗಳೆಲ್ಲರನ್ನೂ ದೂರ ಎಸೆಯುವವನ [ಪುತ್ರಾಸಃ] ವಾಯುವಿನಂತೆ ಬಲಿಷ್ಠರಾದ [ವೀರಾಃ] ಯುದ್ಧ ವಿದ್ಯೆಯನ್ನರಿತ [ಸಹಸ್ರಸಾವೇ] ಅಸಂಖ್ಯಾತ ಧನ ತರುವ ಯುದ್ಧದಲ್ಲಿ [ವಿಶ್ವಾಮಿತ್ರಾಯ] ಎಲ್ಲ ಪ್ರಪಂಚಕ್ಕೆ ಮಿತ್ರನಾದವನಿಗೆ [ಮಘಾನಿ] ಶ್ರೇಷ್ಠವಾದ ಧನ ಸಂಪತ್ತನ್ನು [ದದತಃ] ಕೊಡುವವರು [ಆಯುಃ] ಜೀವನದ [ಪ್ರ, ತರಂತಿ] ಉಲ್ಲಂಘನೆ ಮಾಡುವರೋ ಅವರು ರಕ್ಷಣೆಗೆ ಅರ್ಹರಾಗುತ್ತಾರೆ.

**ಭಾವಾರ್ಥ:-** ರಾಜನೇ! ನೀನು ಪ್ರಸನ್ನ ಚಿತ್ತರೂ ಬಲಿಷ್ಠರೂ ಆದ ವೀರಪುರುಷರಿರುವ ಯುದ್ಧ ವಿದ್ಯೆಯನ್ನರಿತಿರುವ ಅದರಲ್ಲಿ ಕುಶಲರಾದ ಸೇನೆಯನ್ನು ಸದಾ ವಿಜಯಕ್ಕಾಗಿ ಕಳಿಸಬೇಕು.

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯ ತಿಳಿಸಿದೆ.

**ರೂಪಂರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನಸ್ತನ್ವ (ಅಂ) ೧ ಪರಿ ಸ್ವಾಮ್ ।**

**ತ್ರಿರ್ಯದ್ದಿವಃ ಪರಿ ಮುಹೂರ್ತಮಾಗಾತ್ ಸ್ವೈರ್ಮಂತ್ರೈರನೃತುಪಾ ಋತಾವಾ ॥೮॥**

**ಪದಾರ್ಥ:-** [ಯತ್] ಯಾವನು [ಋತಾವಾ] ಸತ್ಯವಂತನಾದ [ಮಘವಾ] ಬಹುಧನ ಸಂಪನ್ನನಾದ [ಸೂರ್ಯಃ] ಸೂರ್ಯನು [ದಿವಃ] ಬೆಳಕನ್ನು [ಮೂಹೂರ್ತಂ] ಎರಡು ಘಳಿಗೆಗಳ ಕಾಲ [ಸ್ವೈಃ] ತನ್ನ [ಮಂತ್ರೈಃ] ವಿಚಾರಗಳಿಂದ [ಅನೃತುಪಾಃ] ಋತುಮಾನಗಳನ್ನು ಪಾಲಿಸದವನಾಗಿ [ಸ್ವಾಂ] ತನ್ನ [ತನ್ವಂ] ಶರೀರವನ್ನು [ತ್ರಿಃ] ಮೂರು ಬಾರಿ [ಪರಿ, ಆ] ಎಲ್ಲಾ ರೀತಿಯಿಂದ [ಅಗಾತ್] ಪ್ರಾಪ್ತನಾಗುವನು. [ರೂಪಂರೂಪಂ] ತನ್ನ ಪ್ರತಿರೂಪದಲ್ಲೂ [ಮಾಯಾಃ] ಬುದ್ಧಿಗಳನ್ನು [ಕೃಣ್ವಾನಾಃ] ಸಂಯೋಜಿಸುವವನಾಗಿ [ಪರಿ, ಬೋಭವೀತಿ] ಅತಿ ತೀಕ್ಷ್ಣನಾಗುವನು.

**ಭಾವಾರ್ಥ:-** ಯಾರು ಪರಮೇಶ್ವರನಾದಿಯಾಗಿ ಭೂಮಿಯವರೆಗಿನ ಪದಾರ್ಥಗಳ ಸ್ವರೂಪವನ್ನು ತಿಳಿದುಕೊಂಡು ಬೇರೆಯವರಿಗೂ ಆ ವಿಜ್ಞಾನವನ್ನು ಬಹುಬೇಗನೇ ಬೋಧಿಸುವ ಸಾಮರ್ಥ್ಯ ಪಡೆದಿರುವರೋ ಅವರೇ ವಿದ್ಯಾ-ವಿನಯ-ಧರ್ಮಗಳ ಪ್ರಕಾಶಕರಾಗಿ ವಿದ್ಯಾವಿನಯ ರಾಜಧರ್ಮಗಳ ಮಂತ್ರಾಲೋಚನೆಗಳ ಸಭೆಗೆ ನಿಯುಕ್ತರಾಗಲು ಯೋಗ್ಯರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹಾಁ ಋಷಿರ್ದೇವಜಾ ದೇವಜೂತೋಽಸ್ತಭ್ನಾತ್ಸಿಂಧುಮರ್ಣವಂ ನೃಚಕ್ಷಾಃ ।**

**ವಿಶ್ವಾಮಿತ್ರೋ ಯದವಹತ್ಸುದಾಸ-ಮಪ್ರಿಯಾಯತ ಕುಶಿಕೇಭಿರಿಂದ್ರಃ ॥೯॥**

**ಪದಾರ್ಥ:-** [ಯತ್] ಯಾವನು [ಮಹಾನ್] ಎಲ್ಲಾ ಪದಾರ್ಥಗಳಿಗಿಂತಲೂ ಬೃಹತ್ತಾಗಿರುವನೋ [ಋಷಿಃ] ಮಂತ್ರಾರ್ಥವನ್ನು ತಿಳಿದಿರುವ [ದೇವಜಾಃ] ವಿದ್ಯಾವಂತರಲ್ಲಿ ಉತ್ಪನ್ನನಾಗಿ [ದೇವಜೂತಃ] ವಿದ್ಯಾವಂತರಿಂದ ಪ್ರೇರಣೆ ಪಡೆದವನಾಗಿ [ನೃಚಕ್ಷಾಃ] ಮನುಷ್ಯರನ್ನು ನೋಡುವಂತಹ [ವಿಶ್ವಾಮಿತ್ರಃ] ಎಲ್ಲರಿಗೂ ಮಿತ್ರನಾದ [ಇಂದ್ರ] ಐಶ್ವರ್ಯಕಾರಕನು [ಕುಶಿಕೇಭಿಃ] ಕಾರ್ಯಸಿದ್ಧಾಂತ ತಿಳಿದವರೊಂದಿಗೆ [ಸಿಂಧುಂ] ನದಿಯನ್ನು [ಅರ್ಣವಂ] ಸಾಗರವನ್ನೂ [ಅಸ್ತಭ್ನಾತ್] ಧಾರಣ ಮಾಡುವ ರೀತಿಯಲ್ಲಿ ರಾಜ್ಯಧಾರಕನಾಗಿ [ಅವಹತ್] ಸಂಪತ್ತನ್ನು ಪಡೆಯುವನು. [ಸುದಾಸಂ] ಶ್ರೇಷ್ಠದಾನವನ್ನು [ಅಪ್ರಿಯಾಯತ] ಪ್ರೀತಿಪೂರ್ವಕ ಮಾಡುತ್ತಾನೆ.

**ಭಾವಾರ್ಥ:-** ಸೂರ್ಯನು ಹೇಗೆ ಎಲ್ಲಾ ಲೋಕಗಳಿಗಿಂತಲೂ ದೊಡ್ಡವನೋ, ಎಲ್ಲಾ ಲೋಕಗಳನ್ನು ಧಾರಣ ಮಾಡುವವನು ಆಗಿರುವನೋ, ಅದೇರೀತಿ ವೇದವಿತ್ ಅಂದರೆ ವೇದ-ವೇದಾರ್ಥಗಳನ್ನು ಬಲ್ಲವನು ಎಲ್ಲಾ ಜನರಿಗಿಂತಲೂ ದೊಡ್ಡವನೂ ಸಮಗ್ರ ಜ್ಞಾನಧಾರಣ ಮಾಡುವವನೂ ಆಗಿರುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹಂಸಾ ಇವ ಕೃಣುಥ ಶ್ಲೋಕಮದ್ರಿಭಿ-ರ್ಮದಂತೋ ಗೀರ್ಭಿರಧ್ವರೇ ಸುತೇ ಸಚಾ ।**

**ದೇವೇಭಿರ್ವಿಪ್ರಾ ಋಷಯೋ ನೃಚಕ್ಷಸೋ ವಿ ಪಿಬಧ್ವಂ ಕುಶಿಕಾಃ ಸೋಮ್ಯಂ ಮಧು ॥೧೦॥**

**ಪದಾರ್ಥ:-** **[ಕಾಶಿಕಾಸಃ]** ವಿದ್ಯಾಸಿದ್ಧಾಂತಗಳನ್ನು ತಿಳಿದಿರುವ **[ನೃಚಕ್ಷಸಃ]** ಮನುಷ್ಯರನ್ನು ವಿದ್ಯಾದೃಷ್ಟಿಯಿಂದ ಪರೀಕ್ಷಿಸುವವರು **[ಋಷಯಃ]** ಮಂತ್ರಾರ್ಥವನ್ನರಿತವರೂ **[ವಿಪ್ರಾಃ]** ಬುದ್ಧಿವಂತರೇ! ನೀವು **[ಸುತೇ]** ತಯಾರಾಗಿರುವ **[ಅಧ್ವರೇ]** ಅಧ್ಯಯನ-ಅಧ್ಯಾಪನ ವ್ಯವಹಾರಗಳಲ್ಲಿ **[ಅದ್ರಿಭಿಃ]** ಮೇಘಗಳಿಂದ **[ಮದಂತಃ]** ಸಂತೋಷ ಪಡೆಯುವವರಾಗಿ **[ದೇವೇಭಿಃ]** ವಿದ್ಯಾವಂತರೊಂದಿಗೆ **[ಶ್ಲೋಕಂ]** ಉತ್ತಮ ಮಾತುಗಳನ್ನು **[ಕೃಣುಥ]** ನೀಡಿರಿ/ಆಡಿರಿ. ಮತ್ತು **[ಸಚಾ]** ಸಮೂಹಾತ್ಮಕರಾಗಿ **[ಸೋಮ್ಯಂ]** ಶ್ರೇಷ್ಠವಾದ **[ಮಧು]** ಮಧುರಾದಿ ಗುಣಯುಕ್ತ ದ್ರವ್ಯವನ್ನು/ ರಸವನ್ನು **[ವಿ ಪಿಬಧ್ವಂ]** ವಿಶಿಷ್ಟವಾಗಿ ಸೇವನೆ ಮಾಡಿರಿ.

**ಭಾವಾರ್ಥ:-** ವಿದ್ಯಾವಂತರು ಅನ್ಯ ವಿದ್ವಾಂಸರಲ್ಲಿರುವ ಜಿತೇಂದ್ರಿಯತೆ, ಧಾರ್ಮಿಕತೆ, ಒಳ್ಳೆಯ ನಡತೆ ಮತ್ತು ಸಭ್ಯತೆಗಳನ್ನು ಗ್ರಹಣ ಮಾಡಬೇಕು. ಅದರಿಂದ ಅವರೂ ಶ್ರೇಷ್ಠರಾಗಿ ಜಗತ್ತಿಗೆ ಕಲ್ಯಾಣಕಾರಕರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಪ ಪ್ರೇತ ಕುಶಿಕಾಶ್ಚೇತಯಧ್ವ-ಮಶ್ವಂ ರಾಯೇ ಪ್ರ ಮುಂಚತಾ ಸುದಾಸಃ ।**
**ರಾಜಾ ವೃತ್ರಂ ಜಂಘನತ್ಪ್ರಾಗಪಾಗುದ-ಗಥಾ ಯಜಾತೇ ವರ ಆ ಪೃಥಿವ್ಯಾಃ ॥೧೧॥**

**ಪದಾರ್ಥ:-** **[ಕುಶಿಕಾಃ]** ಕುಶಲ ಕರ್ಮ ಮಾಡುವವರೂ ಮತ್ತು ಉಪದೇಶ ಮಾಡುವವರು ಯಾರೋ ಅವರು ಕುಶಿಕರು ಹಾಗೂ **[ಸುದಾಸಃ]** ಉತ್ತಮ ದಾನ ಮಾಡುವವನೂ ಆದ **[ರಾಜಾ]** ಪ್ರಕಾಶಮಾನನಾದ **[ಪ್ರಾಕ್]** ಪೂರ್ವದಿಕ್ಕಿನಲ್ಲಿ **[ಅಪಾಕ್]** ಪಶ್ಚಿಮ ದಿಕ್ಕಿನಲ್ಲಿ **[ಉದಕ್]** ಉತ್ತರ ದಿಕ್ಕಿನಲ್ಲಿ **[ವೃತ್ರಂ]** ಮೇಘಸದೃಶ ಶತ್ರುಗಳನ್ನು **[ಜಂ ಘನತ್]** ನಾಶ ಮಾಡಬೇಕು. **[ಅಥ]** ಅನಂತರ **[ಪೃಥಿವ್ಯಾಃ]** ಭೂಮಿಯ **[ವರೇ]** ಉತ್ತಮ ಸ್ಥಾನಗಳಲ್ಲಿ **[ಆ, ಯಜಾತೇ]** ಯಜ್ಞಮಾಡಬೇಕು. **[ರಾಯೇ]** ಸಂಪತ್ತಿಗಾಗಿ **[ಪ್ರ, ಮುಂಚತ]** ತ್ಯಾಗ ಮಾಡಬೇಕು. **[ಅಶ್ವಂ]** ಅಶ್ವವೇಗದ ವಿದ್ಯುತ್ತನ್ನು **[ಚೇತಯಧ್ವಂ]** ಜಾಗ್ರತಗೊಳಿಸಿಕೊಂಡು **[ಉಪ, ಪ್ರ, ಇತ್]** ಪ್ರಾಪ್ತರಾಗಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ವಾಂಸರೇ! ಯಾವ ವೀರಪುರುಷರು ಶತ್ರುಗಳನ್ನು ಸಂಹರಿಸುವರೋ, ಅವರಿಗೆ ಯೋಗ್ಯ ಧನವನ್ನು ನೀಡಿ ಅವರ ಪ್ರತಿಷ್ಠೆ ಹೆಚ್ಚಿಸಿರಿ. ಅದರಿಂದ ಎಲ್ಲಾ ದಿಕ್ಕುಗಳಲ್ಲೂ ವಿಜಯಿಗಳಾಗಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯ ಇಮೇ ರೋದಸೀ ಉಭೇ ಅಹಮಿಂದ್ರಮತುಷ್ಟವಮ್ ।**
**ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಮ್ ॥೧೨॥**

**ಪದಾರ್ಥ:-** **[ಯಃ]** ಯಾವ **[ಇಮೇ]** **[ಉಭೇ]** ಈ ಇಬ್ಬರೂ **[ರೋದಸೀ]** ಭೂಮ್ಯಂತರಿಕ್ಷಗಳು **[ಬ್ರಹ್ಮ]** ಬ್ರಹ್ಮಾಂಡ **[ಇದಂ]** ಈ ವರ್ತಮಾನವಾದ **[ಭಾರತಂ]** ವಾಣಿಯ ಧಾರಣ/ಜ್ಞಾನವಿರುವ **[ಜನಂ]** ಮನುಷ್ಯರೂಪ ಜೀವ ಸ್ವರೂಪವನ್ನು **[ರಕ್ಷತಿ]** ಯಾವನು ರಕ್ಷಣೆ ಮಾಡುವನೋ ಅಂತಹ **[ಇಂದ್ರಂ]** ಪರಮಾತ್ಮನನ್ನು **[ಅತುಷ್ಟುವಂ]** ನಾವು ಪ್ರಶಂಸೆ ಮಾಡುವೆವು. **[ವಿಶ್ವಾಮಿತ್ರಸ್ಯ]** ವಿಶ್ವಕ್ಕೆ ಮಿತ್ರನಾದವನ ಉಪಾಸನೆ ಮಾಡುವೆವು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು ಸಮಗ್ರ ಬ್ರಹ್ಮಾಂಡವನ್ನು ಸೃಷ್ಟಿಸಿ ಅದರ ರಕ್ಷಣೆ ಮಾಡುವನು ಅವನನ್ನೇ ನೀವು ನಿರಂತರ ಸ್ತುತಿ, ಪ್ರಾರ್ಥನೆ, ಉಪಾಸನೆಗಳಿಂದ ಆರಾಧನೆ ಮಾಡಿರಿ.

ಈ ಮಂತ್ರದಲ್ಲಿ ಪ್ರಜೆಗಳ ವಿಷಯ ಹೇಳಿದೆ.

**ವಿಶ್ವಾಮಿತ್ರಾ ಅರಾಸತ ಬ್ರಹ್ಮೇಂದ್ರಾಯ ವಜ್ರಿಣೇ । ಕರದಿನ್ನಃ ಸುರಾಧಸಃ ||೧೩||**

**ಪದಾರ್ಥ:-** **[ವಿಶ್ವಾಮಿತ್ರಾಃ]** ಎಲ್ಲರ ಸ್ನೇಹಿತರೇ! ನೀವೆಲ್ಲರೂ **[ನಃ]** ನಮ್ಮೆಲ್ಲರನ್ನೂ **[ಸುರಾಧಸಃ]** ಉತ್ತಮ ಧನ ಸಂಪನ್ನರನ್ನಾಗಿ **[ಕರತ್]** ಮಾಡಿರಿ. **[ಇತ್]** ಮತ್ತು **[ವಜ್ರಿಣೆ]** ಧನುರ್ವೇದ ತಿಳಿದಿರುವ **[ಇಂದ್ರಾಯ]** ರಾಜನಿಗೆ **[ಬ್ರಹ್ಮ]** ಧನದ **[ಅರಾಸತ್]** ವೃದ್ಧಿಮಾಡಿರಿ.

**ಭಾವಾರ್ಥ:-** ಯಾವ ರಾಜನು ಪ್ರಜೆಗಳನ್ನು ಸುಖವಾಗಿ ನೋಡಿಕೊಳ್ಳುವನೋ ಅಂತಹ ರಾಜನ ಧನ ವೃದ್ಧಿಯನ್ನು ಪ್ರಜೆಗಳು ಮಾಡಬೇಕು.

ವಿದ್ಯಾವಂತರ ವಿಷಯ ಎಲ್ಲಿ ಹೇಳಿದೆ.

**ಕಿಂ ತೇ ಕೃಣ್ವಂತಿ ಕೀಕಟೇಷು ಗಾವೋ ನಾಶಿರಂ ದುಹ್ರೇ ನ ತಪಂತಿ ಘರ್ಮಮ್ ।**
**ಆ ನೋ ಭರ ಪ್ರಮಗಂದಸ್ಯ ವೇದೋ ನೈಚಾಶಾಖಂ ಮಘವನ್ರಂಧಯಾ ನಃ ||೧೪||**

**ಪದಾರ್ಥ:-** **[ತೇ]** ನಿನ್ನ **[ಕೀಕಟೇಷು]** ಅನಾರ್ಯ ಸ್ಥಳದಲ್ಲಿ ವಾಸಿಸುವ **[ಗಾವಃ]** ಗೋವುಗಳ **[ನ]** **[ಆಶಿರಂ]** **[ದುಹ್ರೇ]** ಹಾಲನ್ನು ಯಾರೂ ಕರೆಯುವುದಿಲ್ಲ. **[ಘರ್ಮಂ]** ದಿನವನ್ನು **[ನ, ತಪಂತಿ]** ತಪನ ಮಾಡುವುದಿಲ್ಲ. **[ಕಿಂ]** **[ಕೃಣ್ವಂತಿ]** ಏನು ಮಾಡಲು ಸಾಧ್ಯ? **[ನಃ]** ನಮ್ಮಲ್ಲಿಗೆ **[ಪ್ರಮಗಂದಸ್ಯ]** ಯಾವ ಕುಲೀನನು ಪ್ರಾಪ್ತನಾಗುವನೋ ಅವನಿಗೆ **[ವೇದಃ]** ಧನವನ್ನು **[ಆ, ಭರ]** ಎಲ್ಲಾ ರೀತಿಯಿಂದಲೂ ತುಂಬಿಸು. **[ಮಘವನ್]** ಶ್ರೇಷ್ಠ ಧನಸಂಪನ್ನನೇ! ನೀನು **[ನಃ]** ನಮ್ಮೆಲ್ಲರಲ್ಲಿ **[ನೈಚಾಶಾಖಂ]** ನೀಚ ಶಕ್ತಿಯವನನ್ನು **[ರಂಧಯ]** ನಿವೃತ್ತಿಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮ್ಲೇಚ್ಛರು ವಾಸಿಸುವಂತಹ ಪ್ರದೇಶಗಳಲ್ಲಿ ಗೋವುಗಳ ಧಾರ್ಮಿಕ ಗುಣಗಳ ಅಭಿವೃದ್ಧಿಯು ಹೇಗೆ ಆಗುವುದಿಲ್ಲವೋ ಹಾಗೆಯೇ ವಿದ್ವಾಂಸರಲ್ಲಿ ಭಗವಂತನನ್ನು ಒಪ್ಪದ ನಾಸ್ತಿಕರ ಪ್ರಾಬಲ್ಯವು ಹೆಚ್ಚುವುದಿಲ್ಲ. ಆದ್ದರಿಂದ ವಿದ್ಯಾವಂತರು ನಾಸ್ತಿಕತೆಯನ್ನು ಸರ್ವದಾ ನಿರಾಕರಣ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಸರ್ಪರೀರಮತಿಂ ಬಾಧಮಾನಾ ಬೃಹನ್ಮಿಮಾಯ ಜಮದಗ್ನಿದತ್ತಾ ।**
**ಆ ಸೂರ್ಯಸ್ಯ ದುಹಿತಾ ತತಾನ ಶ್ರವೋ ದೇವೇಷ್ವಮೃತಮಜುರ್ಯಮ್ ||೧೫||**

**ಪದಾರ್ಥ:-** **[ಜಮದಗ್ನಿದತ್ತಾ]** ಕಣ್ಣುಗಳಿಂದ ಪ್ರತ್ಯಕೊಡಲಾದ **[ಸಸರ್ಪರೀಃ]** ಅತ್ಯಂತ ಚಲನಶೀಲ ವಾಣಿಯು **[ಅಜುರ್ಯಂ]** ವಿನಾಶ ರಹಿತ **[ಸೂರ್ಯಸ್ಯ]** ಸೂರ್ಯನ **[ದುಹಿತಾ]** ಮಗಳಂತಿರುವ ಅಂಧಕಾರ ನಾಶಮಾಡುವ ಉಷಃಕಾಲವು **[ಬೃಹತ್]** ವಿಸ್ತೃತ **[ಅಮತಿಂ]** ರೂಪವನ್ನು **[ಮಿಮಾಯ]** ಅಳೆಯುವಳು. **[ದೇವೇಷು]** ವಿದ್ವಾಂಸರಲ್ಲಿ **[ಅಮೃತಂ]** ಅಮೃತದಂತಹ **[ಶ್ರವಃ]** ಧ್ವನಿ/ಶಬ್ದವನ್ನು **[ಆ, ತತಾನ]** ವಿಸ್ತರಿಸುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಬ್ರಹ್ಮಚರ್ಯಾನುಷ್ಠಾನ, ಶ್ರೇಷ್ಠ ವಿದ್ಯಾವಂತರಿಂದ ಅಧ್ಯಯನ ಹಾಗೂ ಶಿಕ್ಷಣವನ್ನು ಪಡೆದುಕೊಳ್ಳುವರೋ ಅವರಿಗೆ ಯಾವುದೇ ಬಗೆಯ ಸುಖವು ದುಷ್ಕರವಾಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಸರ್ಪರೀರಭರತ್ತೂಯಮೇಭ್ಯೋಽಧಿ ಶ್ರವಃ ಪಾಂಚಜನ್ಯಾಸು ಕೃಷ್ಟಿಷು । ಸಾ ಪಕ್ಷ್ಯಾ(ಆ) ೩ ನವ್ಯಮಾಯುರ್ದಧಾನಾ ಯಾಂ ಮೇ ಪಲಸ್ತಿಜಮದಗ್ನಯೋ ದದುಃ ॥೧೬॥**

**ಪದಾರ್ಥ:-** [**ಪಲಸ್ತಿಜಮದಗ್ನಯಃ**] ಯಾರು ಪ್ರಾಜಾಪತ್ಯಾದಿ ಅಗ್ನಿವಿದ್ಯೆಯನ್ನು ತಿಳಿದಿರುವರೋ ಅವರು ಮತ್ತು ವಯಸ್ಸಿನಿಂದಲೂ ಜ್ಞಾನದಿಂದಲೂ ಹಿರಿಯರೋ ಅವರು [**ಯಾಂ**] ಯಾವುದನ್ನು [**ದದುಃ**] ಕೊಡುವರೋ [**ಸಾ**] ಅವಳು [**ಪಕ್ಷ್ಯಾ**] ಪಕ್ಕೆಗಳಲ್ಲಿ ಶ್ರೇಷ್ಠಳೂ [**ಪಾಂಚಜನ್ಯಾಸು**] ಪಂಚಪ್ರಾಣಗಳಲ್ಲಿ [**ಕೃಷ್ಟಿಷು**] ಮನುಷ್ಯರಾದಿ ಪ್ರಜೆಗಳಲ್ಲಿ [**ನವ್ಯಂ**] ಹೊಸರೀತಿಯ [**ಆಯುಃ**] ಅನ್ನ/ಜೀವನವನ್ನು [**ದಧಾನಾ**] ಧಾರಣ ಮಾಡಿಸುವವಳಾಗಿ [**ಏಭ್ಯಃ**] ಇಂತಹ ಜನರನ್ನು ಇಚ್ಛಿಸುವವರಿಗೆ [**ಶ್ರವಃ**] ಅನ್ನವನ್ನು [**ಅಧಿ**] ಊರ್ಧ್ವಭಾಗದಲ್ಲಿ [**ತೂಯಂ**] ಬೇಗನೇ [**ದದುಃ**] ಕೊಡುವಳು. [**ಸಸರ್ಪರೀಃ**] ಅಂತಹ ಸುಖದಾತ್ರಿಯನ್ನು [**ಅಭರತ್**] ಪಡೆಯಿರಿ.

**ಭಾವಾರ್ಥ:-** ಮನುಷ್ಯರೇ! ಯಾವ ವಾಣಿಯು ನಿಮ್ಮ ಕಾರ್ಯಸಿದ್ಧಿಗೊಳಿಸುತ್ತದೆಯೋ, ಐಶ್ವರ್ಯವೃದ್ಧಿ ಪಡಿಸುತ್ತದೆಯೋ, ಆಯುಸ್ಸನ್ನು ಹೆಚ್ಚಿಸುತ್ತದೆಯೋ, ಯಥಾರ್ಥ ಲಕ್ಷಣದೊಂದಿಗೆ ಹೊಸ ಹೊಸ ಜ್ಞಾನವನ್ನು ಹೊಸ ಹೊಸ ಬಗೆಯ ಜೀವನವನ್ನೂ ನಿರೂಪಿಸುತ್ತದೆಯೋ ಅಂತಹ ವಾಣಿಯ ಧಾರಣ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ಥಿರೌ ಗಾವೌ ಭವತಾಂ ವೀಳುರಕ್ಷೋ ಮೇಷಾ ವಿ ವರ್ಹಿ ಮಾ ಯುಗಂ ವಿ ಶಾರಿ ।**
**ಇಂದ್ರಃ ಪಾತಲ್ಯೇ ದದತಾಂ ಶರೀತೋ-ರರಿಷ್ಟನೇಮೇ ಅಭಿ ನಃ ಸಚಸ್ವ ॥೧೭॥**

**ಪದಾರ್ಥ:-** [**ಅರಿಷ್ಟನೇಮೇ**] ಅವಿನಾಶಕ ಕರ್ಮಧಾರಕನೇ! ನೀನು [**ಇಂದ್ರಃ**] ಐಶ್ವರ್ಯವಂತನೂ [**ಶರೀತಃ**] ದುಷ್ಟರನ್ನು ದಮನಿಸಲು ಸಮರ್ಥನೂ [**ಪಾತಲ್ಯೈ**] ಪತನ ಹೊಂದುತ್ತಿರುವವನಿಗೆ [**ದದತಾಂ**] ದಾನ ಮಾಡು. [**ವೀಳುಃ**] ಪ್ರಶಂಸಾಯುಕ್ತ [**ಅಕ್ಷಃ**] ಇಂದ್ರಿಯಗಳ ರಂಧ್ರವನ್ನು [**ಈಷಾಃ**] ಹಿಂಸಕನು [**ಸ್ಥಿರಾ**] ಚಲನರಹಿತ [**ಗಾವೌ**] ಎತ್ತುಗಳನ್ನು [**ಮಾ, ವಿ, ಶಾರೀ**] ನಾಶಗೊಳಿಸಬೇಡ. [**ಯುಗಂ**] ವರ್ಷವನ್ನು [**ಮಾ, ವಿ, ವರ್ಹಿ**] ಉತ್ಪಾದಿಸಬೇಡ. [**ಭವತಾಂ**] ಇರುವಂತಹ [**ನಃ**] ನಮಗೆ [**ಅಭಿ, ಸಚಸ್ವ**] ಎಲ್ಲಾ ರೀತಿಯಿಂದಲೂ ಸೇರುವವನಾಗು.

**ಭಾವಾರ್ಥ:-** ಮನುಷ್ಯರು ಉಪಕಾರ ಜೀವಿಗಳಾದ ಹಸು ಮುಂತಾದ ಪಶುಗಳನ್ನು ಎಂದೂ ನಾಶ ಮಾಡಬಾರದು. ಯಾವಾಗಲೂ ಕಾಲಹರಣ ಮಾಡಬಾರದು. ಶ್ರೇಷ್ಠ ಜನರ ಸಂಗವನ್ನು ಸದಾ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬಲಂ ಧೇಹಿ ತನೂಷು ನೋ ಬಲಮಿಂದ್ರಾನಳುತ್ಸು ನಃ ।**
**ಬಲಂ ತೋಕಾಯ ತನಯಾಯ ಜೀವಸೇ ತ್ವಂ ಹಿ ಬಲದಾ ಅಸಿ ॥೧೮॥**

**ಪದಾರ್ಥ:-** [**ಇಂದ್ರ**] ಐಶ್ವರ್ಯದಾಯಕನೇ! [**ಹಿ**] ಯಾವುದರಿಂದ ನೀನು [**ಬಲದಾಃ**] ಬಲದಾಯಕನು [**ಅಸಿ**] ಆಗಿರುವೆ. [**ನಃ**] ನಮಗೆ [**ತನೂಷು**] ದೇಹಗಳಲ್ಲಿ [**ಬಲಂ**] ಬಲವನ್ನು [**ಧೇಹಿ**] ಧಾರಣಮಾಡಿಸು. [**ನಃ**] ನಮ್ಮ [**ಅನಳುತ್ಸು**] ಗವಾದಿ ಪಶುಗಳಲ್ಲಿ [**ಬಲಂ**] ಬಲದ ಧಾರಣಮಾಡಿಸು. ನಮಗೆ [**ಜೀವಸೇ**] ಜೀವನವನ್ನು ಮತ್ತು [**ತೋಕಾಯ**] ಮಕ್ಕಳಿಗೆ [**ತನಯಾಯ**] ಕೌಮಾರಾವಸ್ಥೆ ಪಡೆದವರಿಗೆ [**ಬಲಂ**] ಸಾಮರ್ಥ್ಯವನ್ನು ಧಾರಣ ಮಾಡಿಸು.

**ಭಾವಾರ್ಥ:-** ಆಚಾರ್ಯನೇ! ನೀನು ಶರೀರಾತ್ಮಗಳ ಬಲಸಂಪನ್ನನು. ಆದ್ದರಿಂದ ನಮಗೂ ಸಂಪೂರ್ಣ ಶರೀರಾತ್ಮ ಬಲಗಳನ್ನು ಧಾರಣಮಾಡಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭಿ ವ್ಯಯಸ್ವ ಖದಿರಸ್ಯ ಸಾರ-ಮೋಜೋ ಧೇಹಿ ಸ್ಪಂದನೇ ಶಿಂಶಪಾಯಾಮ್ ।**
**ಅಕ್ಷ ವೀಳೋ ವೀಳಿತ ವೀಳಯಸ್ವ ಮಾ ಯಾಮಾದಸ್ಮಾದವ ಜೀಹಿಪೋ ನಃ ॥೧೯॥**

**ಪದಾರ್ಥ:-** [**ಅಕ್ಷ**] ವಿದ್ಯೆಯಿಂದ ವ್ಯಾಪ್ತನಾದವನೇ! [**ಖದಿರಸ್ಯ**] ಖದಿರ ವೃಕ್ಷದ [**ಸಾರಂ**] ಗಟ್ಟಿಭಾಗವನ್ನು [**ಓಜಃ**] ಬಲವನ್ನೂ [**ಧೇಹಿ**] ಧಾರಣ ಮಾಡು. [**ಶಿಂಶಪಾಯಾ**] ಶಿಂಶಪಾ ವೃಕ್ಷದ [**ಸ್ಪಂದನೇ**] ಕಂಪನದಲ್ಲಿ [**ಅಭಿ**] [**ವ್ಯಯಸ್ವ**] ಸ್ವಲ್ಪ ವ್ಯಯ ಮಾಡು. [**ವೀಳೋ**] ಬಲಿಷ್ಠನೇ! [**ವೀಳತ**] ಬಹುಜನರಲ್ಲಿ ಪ್ರಶಂಸಿತನಾದವನೇ! [**ನಃ**] ನಮಗೆ [**ವೀಳಯಸ್ವ**] ಪ್ರೇರಣೆ ನೀಡು. [**ಅಸ್ಮಾತ್**] ಈ [**ಯಾಮಾತ್**] ಸಮಯದಿಂದ [**ಮಾ, ಅವ, ಜೀಹಿಪಃ**] ತ್ಯಾಗ ಮಾಡಬೇಡ.

**ಭಾವಾರ್ಥ:-** ಆಚಾರ್ಯನೇ! ನಮ್ಮ ಬಲವನ್ನು ಹೆಚ್ಚಿಸು. ಉತ್ತಮ ಕೆಲಸ ಮಾಡಲು ಪ್ರೇರಣೆ ನೀಡು. ಎಂದೂ ನಮ್ಮನ್ನು ಕೈಬಿಡಬೇಡ.

ರಾಜ ಪುರುಷರ ವಿಷಯವಿಲ್ಲಿದೆ.

**ಅಯಮಸ್ಮಾನ್ ವನಸ್ಪತಿ-ರ್ಮಾ ಚ ಹಾ ಮಾ ಚ ರೀರಿಷತ್ ।**
**ಸ್ವಸ್ತ್ಯಾ ಗೃಹೇಭ್ಯ ಆವಸಾ ಆ ವಿಮೋಚನಾತ್ ॥೨೦॥**

**ಪದಾರ್ಥ:-** [**ಅಯಂ**] ಈ [**ವನಸ್ಪತಿಃ**] ವನಪಾಲಕನು [**ಅಸ್ಮಾನ್**] ನಮ್ಮನ್ನು ತ್ಯಜಿಸುವುದಿಲ್ಲ. ನೀನೂ [**ಮಾ, ಹಾಃ**] ತ್ಯಜಿಸಬೇಡ ಮತ್ತು [**ಚ**] ಸೂರ್ಯನು ಹೇಗೋ ಹಾಗೆ [**ಮಾಚ**] [**ರೀರಿಷತ್**] ನಾಶ ಮಾಡಬೇಡ. [**ಆ, ಅವಸೈ**] ಉತ್ತಮ ರಕ್ಷಣೆಗಾಗಿ [**ಆ, ಗೃಹೇಭ್ಯಃ**] ಎಲ್ಲಾ ಮನೆಯವರಿಗೂ [**ಸ್ವಸ್ತಿ**] ಸುಖ ಲಭಿಸಲಿ. [**ಆ, ವಿಮೋಚನಾತ್**] ವಿಮೋಚನೆಯಾಗುವವರೆಗೂ ಸುಖಲಭಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅನ್ನಾದಿ ಪದಾರ್ಥಗಳು ಹೇಗೆ ಎಲ್ಲರ ರಕ್ಷಣೆ ಮಾಡುತ್ತವೆಯೋ ಹಾಗೆ ರಾಜ ಪುರುಷರೂ ಎಲ್ಲರ ರಕ್ಷಕರಾಗಲಿ. ನ್ಯಾಯ ಮಾರ್ಗ ತ್ಯಜಿಸಿ ಅನ್ಯಾಯ ಮಾರ್ಗವನ್ನು ಎಂದೂ ಆಶ್ರಯಿಸದಿರಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ಇಂದ್ರೋತಿಭಿರ್ಬಹುಲಾಭಿರ್ನೋ ಅದ್ಯ ಯಾಚ್ಛ್ರೇಷ್ಠಾಭಿರ್ಮಘವಞ್ಛೂರ ಜಿನ್ವ ।
ಯೋ ನೋ ದ್ವೇಷ್ಟ್ಯಧರಃ ಸಸ್ಪದೀಷ್ಟ ಯಮು ದ್ವಿಷ್ಮಸ್ತಮು ಪ್ರಾಣೋ ಜಹಾತು ॥೨೧॥

**ಪದಾರ್ಥ:-** [ಇಂದ್ರ] ಐಶ್ವರ್ಯ ಸಂಪನ್ನನೇ! [ಯಃ] ಯಾವ [ಅಧರಃ] ನೀಚನು [ನಃ ದ್ವೇಷ್ಟಿ] ನಮ್ಮನ್ನು ದ್ವೇಷಿಸುವನೋ [ಸಃ] ಅವನು [ಪದೀಷ್ಟ] ದುಃಖಿತನಾಗಲಿ. [ಯಂ, ಉ] ಯಾರನ್ನು ನಾವು [ದ್ವಿಷ್ಮಃ] ದ್ವೇಷಿಸುವೆವೋ [ತಂ] [ಉ] ಅವನ [ಪ್ರಾಣಃ] ಉಸಿರನ್ನು/ಜೀವವನ್ನು [ಜಹಾತು] ನಾಶಗೊಳಿಸು/ ತ್ಯಜಿಸು. [ಮಘವನ್] ಧನ ಸಂಪನನಾದ [ಶೂರ] ವೀರ ಪುರುಷನೇ! ನೀನು [ಬಹುಲಾಭಿಃ] ಬಹಳಷ್ಟು [ಶ್ರೇಷ್ಠಾಭಿಃ] ಶ್ರೇಷ್ಠವಾದ [ಊತಿಭಿಃ] ರಕ್ಷಣಾದಿಗಳಿಂದ [ನಃ] ನಮ್ಮನ್ನು [ಯಾತ್] ಪ್ರಾಪ್ತನಾಗಿ [ಅಪ, ಜಿನ್ವ] ಪ್ರಸನ್ನಗೊಳಿಸು.

**ಭಾವಾರ್ಥ:-** ವಿದ್ಯಾವಂತರು ದುಷ್ಟರನ್ನು ದ್ವೇಷಿಸಬೇಕು; ಶಿಷ್ಟರನ್ನು ಪ್ರೀತಿಸಬೇಕು. ಪ್ರಜೆಗಳ ರಕ್ಷಣೆಗೆ ದುಷ್ಟರ ವಿನಾಶಕ್ಕೆ ಬೇಕಾಗುವ ಎಲ್ಲಾ ರಕ್ಷಣಾ ಸಾಧನಗಳನ್ನು ಸಂಗ್ರಹಿಸಿಕೊಂಡು ರಾಜನು ನಿರಂತರ ಶಾಸನ ಮಾಡಬೇಕು.

ರಾಜನ ವಿಷಯವನಿಲ್ಲಿ ಹೇಳಿದೆ.

ಪರಶುಂ ಚಿದ್ವಿ ತಪತಿ ಶಿಂಬಲಂ ಚಿದ್ವಿ ವೃಶ್ಚತಿ ।
ಉಖಾ ಚಿದಿಂದ್ರ ಯೇಷಂತೀ ಪ್ರಯಸ್ತಾ ಫೇನಮಸ್ಯತಿ ॥೨೨॥

**ಪದಾರ್ಥ:-** [ಇಂದ್ರ] ಐಶ್ವರ್ಯ ಸಂಪನ್ನನೇ! [ಪರಶುಂ] ಕೊಡಲಿಯಂತಹ ಆಯುಧವು [ಚಿತ್] ಹೇಗೆ ಶತ್ರುಗಳನ್ನು [ಶಿಂಬಲಂ ಚಿತ್] ವೃಕ್ಷ ವಿಶೇಷವೊಂದನ್ನು ಯಾವ ರೀತಿ [ವಿ, ತಪತಿ] ವಿಶೇಷ ರೀತಿಯಿಂದ ಸಂತಾಪ ನೀಡುತ್ತದೆಯೋ/ಕತ್ತರಿಸುತ್ತದೆಯೋ, [ಪ್ರಯಸ್ತಾ] ಪ್ರೇರಣೆ ಪಡೆದು [ಯೇಷಂತೀ] ಹರಿಯುವ ರೀತಿಯಲ್ಲಿ ಪ್ರಾಪ್ತವಾದ [ಉಖಾ] ಪಾಕ ಮಾಡುವ ಪಾತ್ರೆ [ಚಿತ್] ಯಂತೆ [ಫೇನಂ] ನೊರೆಯಂತೆ ಶತ್ರುಗಳನ್ನು [ಅಸ್ಯತಿ] ಎಸೆಯುವಳೋ ಅವಳ ಸತ್ಕಾರವನ್ನು ನೀವು ಮಾಡಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜರು ವೀರಸೇನೆಯ ರಕ್ಷಣೆ ಮಾಡುವರೋ ಅವರೇ ವಿಜಯಶ್ರೀಯನ್ನು ಪಡೆದು ಸುಶೋಭಿತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

ನ ಸಾಯಕಸ್ಯ ಚಿಕಿತೇ ಜನಾಸೋ ಲೋಧಂ ನಯಂತಿ ಪಶು ಮನ್ಯಮಾನಾಃ ।
ನಾವಾಜಿನಂ ವಾಜಿನಾ ಹಾಸಯಂತಿ ನ ಗರ್ದಭಂ ಪುರೋ ಅಶ್ವಾನ್ನಯಂತಿ ॥೨೩॥

**ಪದಾರ್ಥ:-** [ಜನಾಸಃ] ವೀರಪುರುಷರು [ಲೋಧಂ] ಪ್ರಾಪ್ತನಾಗುವವನನ್ನು [ನ] [ನಯಂತಿ] ಕರೆದೊಯ್ಯುವುದಿಲ್ಲ [ಪಶು] ಪಶುವಿಗೆ ಸಮನಾಗಿ [ಮನ್ಯಮಾನಾಃ] ತಿಳಿದುಕೊಳ್ಳುವವರಾಗಿ [ವಾಜಿನಾ] ಕುದುರೆಯಿಂದ [ಅವಾಜಿನಂ] ಕುದುರೆಗಳಿಲ್ಲದ ಸಂಗ್ರಾಮವನ್ನು [ನ] [ಹಾಸಯಂತಿ] ಸೋಲಿಸುವುದಿಲ್ಲ. [ಅಶ್ವಾತ್] ಕುದುರೆಗಿಂತ [ಪ್ರಥಮಂ] ಮೊದಲು [ಗರ್ದಭಂ] ಕತ್ತೆಯನ್ನು [ನ] [ನಯಂತಿ] ತೆಗೆದುಕೊಂಡು ಹೋಗುವುದಿಲ್ಲ. [ಸಾಯಕಸ್ಯ] ಶಸ್ತ್ರಾಸ್ತ್ರ ಸಮೂಹದ ಬಳಕೆಯನ್ನು [ಚಿಕಿತ್ಸೆ] ತಿಳಿಯಿರಿ.

**ಭಾವಾರ್ಥ:-** ಯಾರು ಯುದ್ಧ ವಿದ್ಯೆಯನ್ನು ತಿಳಿದುಕೊಂಡು ಸೇನಾಂಗಗಳನ್ನು ಯೋಗ್ಯರೀತಿಯಿಂದ ರಕ್ಷಿಸಲು ಸ್ಥಿರಗೊಳಿಸಲು ಮತ್ತು ಯುದ್ಧ ಮಾಡಲು ತಿಳಿದಿರುವವರೋ ಅವರೇ ರಾಜನ ವೀರಪುರುಷರೆನಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮ ಇಂದ್ರ ಭರತಸ್ಯ ಪುತ್ರಾ ಅಪಪಿತ್ವಂ ಚಿಕಿತುರ್ನ ಪ್ರಪಿತ್ವಮ್ ।**
**ಹಿನ್ವಂತ್ಯಶ್ವಮರಣಂ ನ ನಿತ್ಯಂ ಜ್ಯಾವಾಜಂ ಪರಿಣಯಂತ್ಯಾಜೌ ॥೨೪॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕನೇ! **[ಭರತಸ್ಯ]** ನಿನ್ನ ಸೇನೆಯ ರಕ್ಷಣೆಮಾಡಲು **[ಚಿಕಿತುಃ]** **[ನಃ]** ತಿಳಿದವರಿಗೆ ಸಮನಾಗಿ **[ಇಮೇ]** ಈ ನನ್ನ **[ಪುತ್ರಾಃ]** ಉತ್ತಮ ಶಿಕ್ಷಣ ಪಡೆದಿರುವ ಮಕ್ಕಳಂತಿರುವ ಸೈನಿಕರು **[ಅಪಪಿತ್ವಂ]** ನಾಶಗೊಳಿಸಲು **[ಪ್ರಪಿತ್ವಂ]** ಉತ್ತಮ ರೀತಿಯಿಂದ ಪ್ರಾಪ್ತಿಗೊಳಿಸಲು **[ಅಶ್ವಂ]** ಕುದುರೆಯನ್ನು **[ಅರಣಂ]** ಪ್ರೇರಣೆಗೊಳಿಸಲಾದ **[ನ]** ಸಮನಾದ **[ಹಿನ್ವಂತಿ]** ವೃದ್ಧಿ ಪಡಿಸುವರು. **[ಆಜೌ]** ಸಂಗ್ರಾಮದಲ್ಲಿ **[ಜ್ಯಾವಾಜಂ]** ಧನುಸ್ಸಿನ ಟಂಕಾರಶಬ್ದವನ್ನು **[ನಿತ್ಯಂ]** ಪ್ರತಿದಿನವೂ **[ಪರಿ]** **[ನಯಂತಿ]** ಎಲ್ಲಾ ಕಡೆಗಳಲ್ಲೂ ಕೇಳಿಸುವಂತೆ ಮಾಡುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜ-ರಾಜಪುರುಷರು ತಮ್ಮ ನಾಶ ಅಥವಾ ವೃದ್ಧಿಯನ್ನು ತಿಳಿದುಕೊಳ್ಳುವರೋ, ಸೇನೆಯಲ್ಲಿರುವ ಸೇನಾಪತಿಯು ಸೇವಕರನ್ನು ಯುದ್ಧ ಕರ್ಮ ಚತುರರು ಅನುರಕ್ತರೂ ಆದವರನ್ನು ಮಕ್ಕಳಂತೆ ಪಾಲನೆ ಮಾಡುವರೋ, ಅವರ ಏಳಿಗೆಯು ಸದಾ ಆಗುತ್ತದೆ. ಪರಾಜಯ ಎಂದೂ ಇರುವುದಿಲ್ಲ.

ಈ ಸೂಕ್ತದಲ್ಲಿ ವಿದ್ಯುತ್, ಮೋಡ, ವಿದ್ವಾಂಸರು, ರಾಜ ಪ್ರಜೆ ಮತ್ತು ಸೇನೆ ಇವರೆಲ್ಲರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಐವತ್ತಮೂರನೆಯ ಸೂಕ್ತ ಸಮಾಪ್ತ**

## ಪಂಚಮೋಽನುವಾಕಃ (ಸೂಕ್ತ ೫೪-೬೨)

### ಸೂಕ್ತ ೫೪

ಮಂತ್ರಸಂಖ್ಯೆ ೨೨ । ಪ್ರಜಾಪತಿಃ ವೈಶ್ವಾಮಿತ್ರೋ ವಾಚ್ಯೋವಾ ಋಷಿಃ । ವಿಶ್ವೇದೇವಾ ದೇವತಾಃ । ೧ ನಿಚೃತ್ಪಂಕ್ತಿಃ, ೯ ಭುರಿಕ್ಪಂಕ್ತಿಃ, ೧೨ ಸ್ವರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೩, ೬, ೮, ೧೦, ೧೧, ೧೩, ೧೪ ತ್ರಿಷ್ಟುಪ್, ೪, ೭, ೧೫, ೧೬, ೧೮, ೨೦, ೨೧ ನಿಚೃತ್ತ್ರಿಷ್ಟುಪ್, ೫ ಸ್ವರಾಟ್ ತ್ರಿಷ್ಟುಪ್, ೧೭ ಭುರಿಕ್ ತ್ರಿಷ್ಟುಪ್, ೧೯, ೨೨ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಷಯ ಹೇಳಿದೆ.

**ಇಮಂ ಮಹೇ ವಿದಥ್ಯಾಯ ಶೂಷಂ ಶಶ್ವತ್ ಕೃತ್ವ ಈಡ್ಯಾಯ ಪ್ರ ಜಭ್ರುಃ ।**
**ಶೃಣೋತು ನೋ ದಮ್ಯೇಭಿರನೀಕೈಃ ಶೃಣೋತ್ವಗ್ನಿರ್ದಿವ್ಯೈರಜಸ್ರಃ ॥೧॥**

**ಪದಾರ್ಥ:-** **[ಕೃತ್ವಃ]** ಬಹುಕಾರ್ಯ ಮಾಡುವವನೇ! ನೀನು **[ಮಹೇ]** ಮಹತ್ವವಾದ **[ಈಡ್ಯಾಯ]** ಸ್ತುತಿ ಮಾಡುವುದಕ್ಕೆ ಯೋಗ್ಯವಾದ **[ವಿದಥ್ಯಾಯ]** ಸಂಗ್ರಾಮದಲ್ಲಿ ಉತ್ಪನ್ನವಾದದ್ದಕ್ಕೆ **[ಇಮಂ]** ಈ **[ಶಶ್ವತ್]** ನಿರಂತರ **[ಶೂಷಂ]** ಬಲವನ್ನು **[ಪ್ರ, ಜಭ್ರುಃ]** ಉತ್ತಮ ರೀತಿಯಿಂದ ಧಾರಣ ಮಾಡು. **[ನಃ]** ನಮಗೆ ನೀನು **[ದಮ್ಯೇಭಿಃ]** ದಾನ ಯೋಗ್ಯ **[ಅನೀಕೈಃ]** ಸೇನೆಯವರೊಂದಿಗೆ **[ಶೃಣೋತು]** ಶ್ರವಣ ಮಾಡು. **[ಅಜಸ್ರಃ]** ನಿರಂತರ ಇರುವಂತಹ **[ಅಗ್ನಿಃ]** ವಿದ್ಯಾವಂತನಾದ ನೀನು **[ದಿವ್ಯೈಃ]** ಶ್ರೇಷ್ಠ ಕರ್ಮಗಳೊಂದಿಗೆ **[ಶೃಣೋತು]** ನಮಗೆ ಶ್ರವಣ ಮಾಡಿಸು.

**ಭಾವಾರ್ಥ:-** ಯಾರು ಯುದ್ಧಕ್ಕಾಗಿ ಪೂರ್ಣಬಲ ಮತ್ತು ವಿದ್ಯೆಯ ಧಾರಣೆ ಮಾಡುವರೋ ಅವರನ್ನು ರಾಜಜನರು ನಿರಂತರ ಸತ್ಕರಿಸಬೇಕು ಮತ್ತು ಅವರ ಕೆಲಸಗಳನ್ನು ಊರ್ಜಿತಗೊಳಿಸಬೇಕು. ಆದರಿಂದ ಪ್ರಸನ್ನರಾದ ಅವರು ರಾಜನ ಏಳಿಗೆ ಸಾಧಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹಿ ಮಹೇ ದಿವೇ ಅರ್ಚಾ ಪೃಥಿವ್ಯೈ ಕಾಮೋ ಮ ಇಚ್ಛಞ್ಚರತಿ ಪ್ರಜಾನನ್ । ಯಯೋರ್ಹ**
**ಸ್ತೋಮೇ ವಿದಥೇಷು ದೇವಾಃ ಸಪರ್ಯವೋ ಮಾದಯಂತೇ ಸಚಾಯೋಃ ॥೨॥**

**ಪದಾರ್ಥ:-** **[ಪ್ರಜಾನನ್]** ತಿಳಿದವನಾಗಿ ವಿಜಯ ಸಾಧಿಸುತ್ತಿರುವವನು ರಾಜ್ಯವನ್ನು **[ಇಚ್ಛನ್]** ಬಯಸುವವನಾಗಿ **[ಮಹೇ]** ಮಹಿಮೆಯಿಂದ **[ದಿವೇ]** ಪ್ರಕಾಶಿಸುತ್ತಿರುವವನ **[ಪೃಥಿವ್ಯೈ]** ಭೂಮಿಯ ರಾಜ್ಯ ಪಡೆಯಲು **[ಚರತಿ]** ಯಾವನು ಸಂಚರಿಸುವನೋ ಅವನು **[ಮೇ]** ನನ್ನ **[ಮಹೀ]** ದೊಡ್ಡದಾದ **[ಕಾಮಃ]** ಅಭಿಲಾಷೆಯನ್ನು ಪೂರ್ಣಗೊಳಿಸುವನೋ ಅವನ **[ಅರ್ಚ]** ಸತ್ಕಾರ ಮಾಡು. **[ಯಯೋಃ]** ಯಾವ ವಿದ್ಯೆ ಮತ್ತು ರಾಜ್ಯಗಳ **[ಸ್ತೋಮೇ]** ಪ್ರಶಂಸಾರ್ಹ ವಿಜಯದಲ್ಲಿ **[ವಿದಥೇಷು]** ಸಂಗ್ರಾಮದಲ್ಲಿ **[ಸಪರ್ಯವಃ]** ಸೇವಕರಾದ **[ದೇವಾಃ]** ವಿದ್ಯಾವಂತರು **[ಹ]** ನಿಶ್ಚಯವಾಗಿ **[ಆಯೋಃ]** ಜೀವನದ **[ಸಚಾ]** ಸಂಬಂಧದಿಂದ **[ಮಾದಯಂತೇ]** ಪ್ರಸನ್ನಗೊಳಿಸುವರು.

**ಭಾವಾರ್ಥ:-** ಯಾರು ರಾಜ್ಯದ ಮತ್ತು ವಿದ್ಯೆಯ ಅಭಿವೃದ್ಧಿಯನ್ನು ಇಚ್ಛಿಸುವರೋ ಅಂತಹ ಹೆಚ್ಚುಕಾಲ ಬದುಕಿರುವವರು ಯುದ್ಧ ವಿದ್ಯಾ ನಿಪುಣರೂ, ಆದ ರಾಜ, ಮಂತ್ರಿ ಮುಂತಾದವರನ್ನು ಸಂಪತ್ತು ಮತ್ತು ವಿಜಯಗಳಿಗಾಗಿ ಗೌರವಿಸಬೇಕು. ರಾಜ-ಮಂತ್ರಿ ಮುಂತಾದವರೂ ಅವರನ್ನು ಗೌರವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯುವೋರ್‌ಋತಂ ರೋದಸೀ ಸತ್ಯಮಸ್ತು ಮಹೇ ಷು ಣಃ ಸುವಿತಾಯ ಪ್ರ ಭೂತಮ್ ।**
**ಇದಂ ದಿವೇ ನಮೋ ಅಗ್ನೇ ಪೃಥಿವ್ಯೈ ಸಪರ್ಯಾಮಿ ಪ್ರಯಸಾ ಯಾಮಿ ರತ್ನಮ್ ॥೩॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತ ರಾಜನೇ! **[ಯುವೋಃ]** ಸ್ವಾಮಿ ಸೇವಕರಾದ ನೀವಿಬ್ಬರ **[ರೋದಸೀ]** ಭೂಮ್ಯಂತರಿಕ್ಷಗಳಿಗೆ ಸಮನಾದ **[ಮಹೇ]** ದೊಡ್ಡ **[ಸುವಿತಾಯ]** ಸಂಪತ್ತಿಗಾಗಿ **[ಇದಂ]** ಈ **[ಪ್ರಭೂತಂ]** ಅತಿಶಯವಾದ **[ಋತಂ]** ಪಡೆಯಲು ಯೋಗ್ಯ ಕಾರಣವಾಗಿರುವ **[ಸತ್ಯಂ]** ವಿಪರಿಣಾಮ ಬೀರದಂತಹ **[ರತ್ನಂ]** ರತ್ನಾದಿ ಸಂಪತ್ತನ್ನು **[ನಃ]** ನಮಗೆ **[ಸು, ಅಸ್ತು]** ಉತ್ತಮ ರೀತಿಯಲ್ಲಿ ದೊರಕಿಸಿ ಕೊಡಿರಿ. **[ಪೃಥಿವ್ಯೈಃ]** ಭೂಮಿ ಮತ್ತು **[ದಿವೇ]** ಪ್ರಕಾಶಮಾನನಾದವನಿಗೆ **[ನಮಃ]** ಅನ್ನಾದಿಗಳನ್ನು **[ಸಪರ್ಯಾಮಿ]** ಸೇವನೆಗೊಳಿಸುತ್ತ **[ಪ್ರಯಸಾ]** ಪ್ರಯತ್ನದಿಂದ ವಿಜಯವನ್ನು **[ಯಾಮಿ]** ಪಡೆದುಕೊಳ್ಳುವಂತೆ ಮಾಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯ ಮತ್ತು ಭೂಮಿಗಳು ಹೇಗೆ ಪ್ರಪಂಚದ ಸಮಗ್ರ ವ್ಯವಹಾರಗಳನ್ನು ನಡೆಸುತ್ತ ಧನ, ಅನ್ನಗಳಿಂದ ಸಂಪನ್ನರಾಗಿಸುತ್ತದೆಯೋ ಹಾಗೆ ರಾಜ ಪುರುಷರು ಪ್ರಯತ್ನಪೂರ್ವಕ ಉತ್ತಮ ಕರ್ಮಗಳನ್ನು ಮಾಡಿ ಸಂಪತ್ತನ್ನು ಪಡೆದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತೋ ಹಿ ವಾಂ ಪೂರ್ವ್ಯಾ ಆವಿವಿದ್ರ ಋತಾವರೀ ರೋದಸೀ ಸತ್ಯವಾಚಃ ।**
**ನರಶ್ಚಿದ್ವಾಂ ಸಮಿಥೇ ಶೂರಸಾತೌ ವವಂದಿರೇ ಪೃಥಿವಿ ವೇವಿದಾನಾಃ ॥೪॥**

**ಪದಾರ್ಥ:-** [**ಪೃಥಿವೀ**] ಭೂಮಿಯಂತೆ ಕ್ಷಮಾಶೀಲಳಾದ ರಾಣಿಯೇ! [**ಸತ್ಯವಾಚಃ**] ಯಥಾರ್ಥ ನುಡಿಯುವವರು [**ವೇವಿದಾನಃ**] ಅತಿಶಯ ತಿಳಿದಿರುವ ನಿನ್ನನ್ನು [**ವವಂದಿರೇ**] ಪ್ರಮಾಣೀಕರಿಸಬೇಕು ಮತ್ತು ನೀನೂ ನಿನ್ನ ಸ್ವಾಮೀ [**ವಾಂ**] ಇಬ್ಬರೂ [**ಶೂರಸಾತೌ**] ಶೂರವೀರರಿರುವಂತಹ [**ಸಮಿಥೆ**] ಸಂಗ್ರಾಮದಲ್ಲಿ [**ನರಃ**] ಶ್ರೇಷ್ಠ ಪುರುಷರ [**ಚಿತ್**] ಸದೃಶ ಪ್ರಮಾಣೀಕರಿಸಿರಿ. [**ಉತೋ**] ಹಾಗೂ [**ಋತಾವರೀ**] ಸತ್ಯವನ್ನು ಪ್ರಾಪ್ತಿಗೊಳಿಸುವ ವನಿತೆಯ [**ರೋದಸೀ**] ಭೂಮ್ಯಂತರಿಕ್ಷಗಳಂತೆ [**ಪೂರ್ವ್ಯಾಃ**] ಪ್ರಾಚೀನ ಜನರಲ್ಲಿ ಚತುರನಾದ ನೀನು [**ಹಿ**] ಇಬ್ಬರನ್ನು [**ಆ, ವಿವಿದ್ರೇ**] ಎಲ್ಲಾ ರೀತಿಯಿಂದಲೂ ಪಡೆದುಕೊಳ್ಳುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸತ್ಯಾಚರಣೆ, ಸತ್ಯನುಡಿ, ಜಿತೇಂದ್ರಿಯರೆ, ಸತ್ಯದ ಒಪ್ಪುವಿಕೆ ಇಂತಹ ಗುಣಗಳನ್ನೆಲ್ಲ ಪಡೆದುಕೊಂಡಿರುವಂತಹ ವಿದ್ಯಾವತಿಯರಾಗಿರುವರೋ ಅವರೇ ರಾಣಿಯಾಗಲು ಮತ್ತು ರಾಜ್ಯದ ವ್ಯವಹಾರ ನೋಡಿಕೊಳ್ಳಲು ಯೋಗ್ಯರಾಗುವರು.

ಈ ಮಂತ್ರದಲ್ಲಿ ವಿದ್ವದ್ವಿಷಯ ಹೇಳಿದೆ.

**ಕೋ ಅದ್ಧಾ ವೇದ ಕ ಇಹ ಪ್ರ ವೋಚ-ದ್ದೇವಾँ ಅಚ್ಛಾ ಪಥ್ಯಾ (ಆ) ೩ ಕಾ ಸಮೇತಿ।**
**ದದೃಶ್ರ ಏಷಾಮವಮಾ ಸದಾಂಸಿ ಪರೇಷು ಯಾ ಗುಹ್ಯೇಷು ವ್ರತೇಷು ॥೫॥**

**ಪದಾರ್ಥ:-** [**ಇಹ**] ಈ ವಿಜ್ಞಾನದಲ್ಲಿ [**ಅದ್ಧಾ**] ಸಾಕ್ಷಾತ್ [**ಕಃ**] ಯಾವನು [**ವೇದ**] ಭಗವಂತನನ್ನು ತಿಳಿದಿರುವನು? [**ಕಃ**] ಯಾವನು [**ದೇವಾನ್**] ವಿದ್ವಾಂಸರನ್ನು [**ಅಚ್ಛ**] ಉತ್ತಮ ರೀತಿಯಿಂದ [**ಪ್ರ, ವೋಚತ್**] ಉಪದೇಶಿಸುವನು? [**ಕಾ**] ಯಾವಳು [**ಪಥ್ಯಾ**] ಉತ್ತಮ ಮಾರ್ಗದಿಂದ [**ದೇವಾನ್**] ವಿದ್ಯಾವಂತರನ್ನು [**ಸಂ ಏತಿ**] ಪಡೆದುಕೊಳ್ಳುವಳು? [**ಏಷಾಂ**] ಈ ವಿದ್ಯಾವಂತರ [**ಪರೇಷು**] ಸೂಕ್ಷ್ಮ ವಿಷಯಗಳಲ್ಲಿ [**ಅವಮಾ**] ನೀಚ ಭಾಗದಲ್ಲಿರುವ [**ಸದಾಂಸಿ**] ವಸ್ತುಗಳು [**ಗುಹ್ಯೇಷು**] ಗುಪ್ತವಾದ [**ವ್ರತೇಷು**] ಸತ್ಯನುಡಿ ಮುಂತಾದ ವ್ರತಗಳಲ್ಲಿ [**ಯಾ**] ಯಾವ ಸತ್ಯನುಡಿ ಯಥಾರ್ಥ ಭಾಷಣ ಆದಿ ವ್ಯವಹಾರಗಳಲ್ಲಿ [**ದದೃಶ್ರೇ**] ಕಂಡುಬರುವರೋ ಗೊತ್ತಿಲ್ಲ.

**ಭಾವಾರ್ಥ:-** ಈ ಪ್ರಪಂಚದಲ್ಲಿ ಭಗವಂತನನ್ನು ತಿಳಿದುಕೊಂಡು ಅವನ ಆದೇಶಕ್ಕನುಗುಣವಾಗಿ ಆಚಾರಗಳನ್ನು ಮಾಡುವವನಾಗಿ ಸತ್ಯೋಪದೇಶವನ್ನು ಮಾಡುವಂತಹ ವಿದ್ಯಾವಂತ ಜನರು ಅತಿ ವಿರಳವಾಗಿರುತ್ತಾರೆ. ಅವರೇ ಪರಲೋಕದ ಜ್ಞಾನ ತಿಳಿದವರಾಗಿರುತ್ತಾರೆ. ಅಂತಹವರು ಇರುವರೋ ಇಲ್ಲವೋ ಗೊತ್ತಿಲ್ಲ.

ಈಶ್ವರನ ವಿಷಯವನ್ನಿಲ್ಲಿ ತಿಳಿಸಿದೆ.

**ಕವಿರ್ನೃಚಕ್ಷಾ ಅಭಿ ಷೀಮಚಷ್ಟ ಋತಸ್ಯ ಯೋನಾ ವಿಘೃತೇ ಮದಂತೀ ।**
**ನಾನಾ ಚಕ್ರಾತೇ ಸದನಂ ಯಥಾ ವೇಃ ಸಮಾನೇನ ಕ್ರತುನಾ ಸಂವಿದಾನೇ ॥೬॥**

**ಪದಾರ್ಥ:-** **[ಯಥಾ]** ಹೇಗೆ **[ಕವಿಃ]** ಎಲ್ಲವನ್ನರಿತು **[ನೃಚಕ್ಷಾಃ]** ಮನುಷ್ಯರನ್ನೆಲ್ಲ ನೋಡಿಕೊಳ್ಳುವ ಭಗವಂತನು **[ಋತಸ್ಯ]** ಸತ್ಯಕ್ಕೆ ಕಾರಣವಾದ **[ಯೋನಾ]** ಮನೆಯಲ್ಲಿ **[ವಿಧೃತೇ]** ವಿಶೇಷ ರೀತಿಯ ಬೆಳಕಿನಲ್ಲಿ **[ನಾನಾ]** ಅನೇಕ ರೀತಿಯ **[ಸದನಂ]** ಸ್ಥಾನವನ್ನು **[ಚಕ್ರಾತೇ]** ನಿರ್ಮಿಸುವರೋ **[ಮದಂತೀ]** ಸಂತೋಷಗೊಳ್ಳುವವಳಾಗಿ **[ವೇಃ]** ಪಕ್ಷಿಯ **[ಸಮಾನೇನ]** ಸಮಾನ ರೀತಿಯಲ್ಲಿ **[ಋತುನಾ]** ಕರ್ಮಗಳಿಂದ **[ಸಂವಿದಾನೇ]** ಉತ್ತಮ ಪ್ರತಿಜ್ಞೆ ಕೈಗೊಂಡ ಸ್ತ್ರೀಯರಂತೆ ಭೂಮ್ಯಂತರಿಕ್ಷಗಳನ್ನು **[ಸೀಂ]** ಎಲ್ಲ ರೀತಿಯಿಂದ **[ಅಭಿ, ಅಚಷ್ಟ]** ಪ್ರಕಾಶಮಾನಗೊಳಿಸುವರು.

**ಭಾವಾರ್ಥ:-** ಮನುಷ್ಯರೇ! ಭಗವಂತನು ಅನೇಕ ವಿಧವಾದ ಬೆಳಕಿನ ಲೋಕವನ್ನೂ ಮತ್ತು ಬೆಳಕಿಲ್ಲದ ಲೋಕವನ್ನೂ ರಚಿಸಿರುವನು. ಹಾಗೂ ಅವನೇ ಆ ಎಲ್ಲ ಲೋಕಗಳ ವ್ಯವಹಾರಗಳನ್ನು ನೋಡಿಕೊಳ್ಳುವವನು. ನೀವೆಲ್ಲರೂ ಅಂತಹ ಪರಮಾತ್ಮನ ಉಪಾಸನೆಯನ್ನು ನಿರಂತರ ಮಾಡುವವರಾಗಿ.

ಈ ಮಂತ್ರದಲ್ಲಿ ಶಿಷ್ಯರ ವಿಷಯವನ್ನು ತಿಳಿಸಿದೆ.

**ಸಮಾನ್ಯಾ ವಿಯುತೇ ದೂರೇಅಂತೇ ಧ್ರುವೇ ಪದೇ ತಸ್ಥತುರ್ಜಾಗರೂಕೇ ।**
**ಉತ ಸ್ವಸಾರಾ ಯುವತೀ ಭವಂತೀ ಆದು ಬ್ರುವಾತೇ ಮಿಥುನಾನಿ ನಾಮ ॥೭॥**

**ಪದಾರ್ಥ:-** **[ಯುವತೀ]** ಯೌವನಾವಸ್ಥೆಗೆ ಪದಾರ್ಪಣ ಮಾಡಿರುವವಳು. **[ಸ್ವಸಾರಾ]** ಸೋದರಿಯಂತೆ **[ಭವಂತೀ]** ಇರುವವಳು **[ಮಿಥುನಾನಿ]** ಜೊತೆಯನ್ನು **[ನಾಮ]** ಸಂಜ್ಞೆಯನ್ನು **[ಬ್ರುವಾತೇ]** ಹೇಳುವರು. **[ಸಮಾನ್ಯಾ]** ಸಮಾನ ಸ್ವಭಾವದವರಿಬ್ಬರು. **[ವಿಯುತೇ]** ಸೇರಿದವರೂ ಸೇರದವರು **[ದೂರೇ ಅಂತೇ]** ದೂರದಲ್ಲಿ ಮತ್ತು ಸಮೀಪದಲ್ಲಿ **[ಧ್ರುವೇ]** ದೃಢವಾದ **[ಪದೇ]** ಸ್ಥಾನದಲ್ಲಿ **[ಉತ]** ಹಾಗೂ **[ಜಾಗರೂಕೇ]** ಪ್ರಸಿದ್ಧವಾದ ಭೂಮ್ಯಂತರಿಕ್ಷಗಳಲ್ಲಿ **[ತಸ್ಥತುಃ]** ನೆಲೆಗೊಂಡಿರುವರು. **[ಉ]** ಅದನ್ನರಿಯಲು **[ಆತ್]** ಪ್ರಯತ್ನಶೀಲರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪರಸ್ಪರರಲ್ಲಿ ಪ್ರೀತಿ ಇರುವ ಸಹೋದರಿಯರು ಹೇಗೆ ಇಷ್ಟವಾದ ವಚನಗಳನ್ನೇ ಹೇಳುವರೋ ಜೊತೆ ಜೊತೆಯಾಗಿಯೇ ಇರುವರೋ, ಅದೇ ರೀತಿ ದೂರದೂರವಿರುವಂತಹ ಬೆಳಕಿನ ಮತ್ತು ಕತ್ತಲೆಯ ಲೋಕಗಳು ಪರಸ್ಪರ ಪೂರಕವಾಗಿಯೇ ಇರುವುವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿಶ್ವೇದೇತೇ ಜನಿಮಾ ಸಂ ವಿವಿಕ್ತೋ ಮಹೋ ದೇವಾನ್ ಬಿಭ್ರತೀ ನ ವ್ಯಥೇತೇ ।**
**ಏಜ ದ್ಧ್ರುವಂ ಪತ್ಯತೇ ವಿಶ್ವಮೇಕಂ ಚರತ್ ಪತತ್ರಿ ವಿಷುಣಂ ವಿ ಜಾತಮ್ ॥೮॥**

**ಪದಾರ್ಥ:-** **[ಏತೇ]** ಈ ಭೂಮ್ಯಂತರಿಕ್ಷಗಳೆರಡೂ **[ಮಹಃ]** ಶ್ರೇಷ್ಠವಾಗಿವೆ. **[ದೇವಾನ್]** ಉತ್ತಮ ಪದಾರ್ಥಗಳನ್ನು **[ಬಿಭ್ರತೀ]** ಧಾರಣ ಮಾಡುವವರಾಗಿ **[ವಿಶ್ವಾ]** ಸಮಗ್ರವಾದ **[ಜನಿಮಾ]** ಜೀವರಾಶಿಗಳನ್ನು **[ಸಂ, ವಿವಿಕ್ತ]** ಬೇರೆ ಬೇರೆ ಮಾಡುವರು. **[ನ ವ್ಯಥೇತೇ]** ತಮ್ಮ ಕಾರ್ಯ ಪರಿಧಿಯಿಂದ ಚಲಿಸುವುದಿಲ್ಲ. **[ಯತ್ರ]** ಯಾವುದರಲ್ಲಿ **[ಇತ್]** ಈ ವ್ಯವಹಾರವು **[ಧ್ರುವಂ]** ಅಂತರಿಕ್ಷದಲ್ಲಿ **[ಏಜತ್]** ನಡೆಯುತ್ತಿರುವುದಾಗಿ **[ಏಕಂ]** ಒಬ್ಬನು **[ವಿಷುಣಂ]** ಅಧೋಲೋಕವನ್ನು ಪಡೆಯುವನು. **[ಜಾತಂ]** ಜನಿಸಿದ **[ಪತತ್ರಿ]** ಪಕ್ಷಿಯ ರೀತಿಯಲ್ಲಿ **[ಚರತ್]** ಚಲಿಸುವವನಾಗಿ **[ವಿಶ್ವಂ]** ಸಮಗ್ರ ಪ್ರಪಂಚವನ್ನು **[ವಿಪತ್ಯತೇ]** ಸ್ವಾಮಿಯಂತೆ ಪಡೆದುಕೊಳ್ಳುವನು.

**ಭಾವಾರ್ಥ:-** ಮನುಷ್ಯರೇ! ಈ ಭೂಮಿ, ಸೂರ್ಯ ಇವುಗಳ ಮಧ್ಯದಲ್ಲಿರುವ ಅಂತರಿಕ್ಷವನ್ನಾಶ್ರಯಿಸಿ ಸೃಷ್ಟಿಯ ಎಲ್ಲಾ ಪದಾರ್ಥಗಳು ಉತ್ಪತ್ತಿಯಾಗುತ್ತವೆ, ನೆಲೆಸುತ್ತವೆ, ಸಾಯುತ್ತವೆ, ನಾಶವಾಗುತ್ತವೆ. ಇದನ್ನು ಎಲ್ಲರೂ ತಿಳಿದುಕೊಂಡಿರಬೇಕು.

ಈ ಮಂತ್ರದಲ್ಲಿ ಈಶ್ವರನ ವಿಷಯವನ್ನು ಹೇಳಿದೆ.

**ಸನಾ ಪುರಾಣಮಧ್ಯೇಮ್ಯಾರಾ-ನ್ಮಹಃ ಪಿತುರ್ಜನಿತುರ್ಜಾಮಿ ತನ್ನಃ ।**
**ದೇವಾಸೋ ಯತ್ರ ಪನಿತಾರ ಏವೈ-ರುರೌ ಪಥಿ ವ್ಯುತೇ ತಸ್ಥುರಂತಃ ॥೯॥**

**ಪದಾರ್ಥ:-** **[ಯತ್ರ]** ಯಾವುದರಲ್ಲಿ **[ಪನಿತಾರಃ]** ವ್ಯವಹರಿಸಲು ಅಥವಾ ಸ್ತುತಿಸಲು **[ದೇವಾಸಃ]** ವಿದ್ಯಾವಂತರು **[ಏವೈಃ]** ಪಡೆದುಕೊಳ್ಳುವವರಿಂದ **[ಉರೌ]** ದೊಡ್ಡದಾದ **[ವ್ಯುತೇ]** ಆವರಣವಿರುವ **[ಪಥಿ]** ಹೆದ್ದಾರಿಯಲ್ಲಿ **[ಅಂತಃ]** ಮಧ್ಯದಲ್ಲಿ **[ತಸ್ಥುಃ]** ವರ್ತಮಾನವಾಗಿರುವರು. **[ತತ್]** ಆ **[ಪಿತುಃ]** ಪಾಲಕನು **[ಜನಿತುಃ]** ಉತ್ಪಾದಕನು ಆದ **[ಮಹಃ]** ಶ್ರೇಷ್ಠ ಪುರುಷನಿಂದ **[ಜಾಮೀ]** ಸೃಷ್ಟಿಸಲಾದ **[ಆರಾತ್]** ದೂರದಲ್ಲಿ ಅಥವಾ ಸಮೀಪದಲ್ಲಿ ಚಲಿಸುವನೋ ಅವನು **[ನಃ]** ನಮ್ಮೆಲ್ಲರ ದೂರ ಅಥವಾ ಸಮೀಪದಿಂದ **[ಸನಾ]** ಪ್ರಾಚೀನಕಾಲದಿಂದ ಪ್ರಸಿದ್ಧವಾದ **[ಪುರಾಣಂ]** ಮೊದಲು ಹೊಸತಾದದ್ದನ್ನು **[ಅಧಿ, ಏಮಿ]** ಸ್ಮರಿಸಿಕೊಳ್ಳುವೆನು.

**ಭಾವಾರ್ಥ:-** ಮನುಷ್ಯರೇ! ಯಾವುದರಲ್ಲಿ ಸಮಗ್ರ ಪ್ರಪಂಚವು ನೆಲೆಗೊಂಡಿದೆಯೋ, ಯಾವುದು ಎಲ್ಲೆಯಿಂದ ಚಲಿಸುತ್ತದೆಯೋ, ಅಂತಹ ಎಲ್ಲವನ್ನೂ ಸೃಷ್ಟಿಸುವವನೂ ಪಾಲಿಸುವವನೂ ಎಲ್ಲ ಪದಾರ್ಥಗಳಿಗಿಂತ ಆಕಾರದಲ್ಲಿ ದೊಡ್ಡವನೂ ಅನಾದಿಯೂ ಆಗಿರುವನೋ ಅಂತಹ ಬ್ರಹ್ಮನ ಉಪಾಸನೆಯನ್ನು ಮಾಡಿರಿ. ಅವನನ್ನು ತಿಳಿದುಕೊಳ್ಳಿರಿ. ಅವನನ್ನು ಅರಿತರೆ ಸಮೀಪವರ್ತಿಗಳಾಗುವಿರಿ. ತಿಳಿಯದಿದ್ದರೆ ದೂರವರ್ತಿಗಳಾಗುವಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಂ ಸ್ತೋಮಂ ರೋದಸೀ ಪ್ರ ಬ್ರವೀ-ಮ್ಯೃದೂದರಾಃ ಶೃಣವನ್ನಗ್ನಿಜಿಹ್ವಾಃ ।**
**ಮಿತ್ರಃ ಸಮ್ರಾಜೋ ವರುಣೋ ಯುವಾನ ಆದಿತ್ಯಾಸಃ ಕವಯಃ ಪಪ್ರಥಾನಾಃ ॥೧೦॥**

**ಪದಾರ್ಥ:-** **[ಇಮಂ]** ಈ **[ಸ್ತೋಮಂ]** ಪ್ರಶಂಸೆಯನ್ನು **[ರೋದಸೀ]** ಎಲ್ಲವನ್ನೂ ಧಾರಣಮಾಡಲು ಯೋಗ್ಯವಾದ ಭೂಮ್ಯಾಕಾಶಗಳು **[ಮಿತ್ರಃ]** ಎಲ್ಲರ ಗೆಳೆಯ **[ವರುಣಃ]** ಶ್ರೇಷ್ಠನಾದ ನಾನು **[ಪ್ರ ಬ್ರವೀಮಿ]** ಉಪದೇಶ ಮಾಡುವೆನು. **[ಋದೂದರಾಃ]** ಉದರದಲ್ಲಿ ಸತ್ಯವನ್ನೇ ಇರಿಸಿಕೊಂಡವರು **[ಸಮ್ರಾಜಃ]** ಉತ್ತಮ ರೀತಿಯಿಂದ ಶೋಭಿಸುತ್ತಿರುವವನು **[ಅಗ್ನಿಜಿಹ್ವಾಃ]** ಅಗ್ನಿಯಂತೆ ಪ್ರಕಾಶಮಾನ ಸತ್ಯೋಪದೇಶ ಮಾಡುವಂತಹ **[ಯುವಾನಃ]** ಯುವಾವಸ್ಥೆಗೆ ಪದಾರ್ಪಣ ಮಾಡಿರುವ **[ಆದಿತ್ಯಾಸಃ]** ಸೂರ್ಯನಂತೆ ಪೂರ್ಣವಿದ್ಯೆಯಿಂದ ಪ್ರಕಾಶಮಾನರಾದ **[ಕವಯಃ]** ವಿಚಕ್ಷಣರು **[ಪಪ್ರಥಾನಾಃ]** ಬುದ್ಧಿವಂತರು **[ಶೃಣವನ್]** ಕೇಳಿಸಿಕೊಳ್ಳುವರು.

**ಭಾವಾರ್ಥ:-** ಚಕ್ರವರ್ತಿರಾಜನು ತನ್ನ ಆಜ್ಞೆಯಿಂದ ಹೇಗೆ ಸಂಪೂರ್ಣ ನ್ಯಾಯವನ್ನು ಜಾರಿಗೆ ತರುತ್ತಾನೋ ಹಾಗೆ ಯಥಾರ್ಥ ನುಡಿಯುವವನಾದ ವಿದ್ಯಾವಂತನು ಅಧ್ಯಾಪನ - ಉಪದೇಶಗಳಿಂದ ಪರಮೇಶ್ವರನ ಮತ್ತು ಅವನ ಆಜ್ಞೆಗಳನ್ನು ಪ್ರಸಿದ್ಧಗೊಳಿಸುತ್ತಾರೆ. ಯಾರು ಬ್ರಹ್ಮಚರ್ಯದಿಂದ ವಿದ್ಯಾಗ್ರಹಣ ಮಾಡುವರೋ ಅವರೇ ಇದನ್ನು ಹೇಳಲು, ಕೇಳಲು, ಪ್ರಕಟಗೊಳಿಸಲು ಸಮರ್ಥರಾಗುವರು.

ವಿದ್ಯಾವಂತರ ವಿಷಯವಿಲ್ಲಿದೆ.

**ಹಿರಣ್ಯಪಾಣಿಃ ಸವಿತಾ ಸುಜಿಹ್ವ-ಸ್ತ್ರಿರಾ ದಿವೋ ವಿದಥೇ ಪತ್ಯಮಾನಃ ।**
**ದೇವೇಷು ಚ ಸವಿತಃ ಶ್ಲೋಕಮಶ್ರೇ- ರಾದಸ್ಮಭ್ಯಮಾಸುವ ಸರ್ವತಾತಿಮ್ ॥೧೧॥**

**ಪದಾರ್ಥ:-** [**ಸವಿತಃ**] ಐಶ್ವರ್ಯದಾಯಕನಾದ [**ಸುಜಿಹ್ವಃ**] ಉತ್ತ ಷ್ಟ ವಾಗಿಂದ್ರಿಯವಿರುವ [**ಪತ್ಯಮಾನಃ**] ಪತಿಯಂತೆ ಆಚರಿಸುವ ನೀನು [**ದಿವಃ**] ಮಿಂಚು ಮುಂತಾದವುಗಳಿಂದ [**ವಿದಥೇ**] ವಿಜ್ಞಾನ ಯಜ್ಞದಲ್ಲಿ [**ದೇವೇಷು**] ಪೃಥಿವ್ಯಾದಿ ಪದಾರ್ಥಗಳಲ್ಲಿ [**ಹಿರಣ್ಯಪಾಣಿಃ**] ತೇಜೋಮಯ ಹಸ್ತಗಳಿಂದೊಡಗೂಡಿ [**ಸವಿತಾ**] ಸೂರ್ಯನಿಗೆ ಸಮನಾಗಿ [**ಅಸ್ಮಭ್ಯಂ**] ನಮಗೆ [**ಸರ್ವತಾತಿಂ**] ಸಮಗ್ರ [**ಶ್ಲೋಕಂ**] ವಾಣಿಯನ್ನು/ವಿದ್ಯೆಯನ್ನು [**ಅಕ್ರೇಃ**] ಕೊಡುವವನಾಗು. [**ಚ**] ಮತ್ತು [**ಆ**] ಆಮೇಲೆ [**ಆ**] ಎಲ್ಲಾ ಕಡೆಗಳಿಂದ [**ತ್ರಿಃ**] ಮೂರು ಸಲ [**ಆ, ಸುವ**] ಉಪದೇಶ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಎಲ್ಲಾ ಲೋಕಗಳಿಗೆ ಆಶ್ರಯದಾತನೋ ಹಾಗೆ ವಿದ್ಯಾವಂತರೂ ಎಲ್ಲಾ ಜನರಿಗೂ / ಜೀವಿಗಳಿಗೂ ಆಶ್ರಯದಾತನಾಗಬೇಕು.

**ಶಿಷ್ಯರ ವಿಚಾರವಿಲ್ಲಿ ಹೇಳಲಾಗಿದೆ.**

**ಸುಕೃತ್ಸುಪಾಣಿಃ ಸ್ವವಾಂ ಋತಾವಾ ದೇವಸ್ತ್ವಷ್ಟಾವಸೇ ತಾನಿ ನೋ ಧಾತ್ ।**
**ಪೂಷಣ್ವಂತ ಋಭವೋ ಮಾದಯಧ್ವ-ಮೂರ್ಧ್ವಗ್ರಾವಾಣೋ ಅಧ್ವರಮತಷ್ಟ ॥೧೨॥**

**ಪದಾರ್ಥ:-** [**ಪೂಷಣ್ವಂತಃ**] ಪುಷ್ಟಿಕಾರಕ ವಿಷಯಗಳಿರುವವನು [**ಋಭವಃ**] ಬುದ್ಧಿವಂತರಾದ ನೀವು [**ಸುಕೃತ್**] ಉತ್ತಮ ಕೆಲಸ ಮಾಡವವರು [**ಸುಪಾಣಿಃ**] ಶ್ರೇಷ್ಠಕರಗಳಿರುವವರು [**ಸ್ವವಾನ್**] ಆತ್ಮಜ್ಞಾನವಿರುವವರು. [**ಋತಾವಾ**] ಸತ್ಯವನ್ನು ಬೆಳಗಿಸುವವರು. [**ತ್ವಷ್ಟಾ**] ಪ್ರಕಾಶಮಾನರೂ ಆದ [**ದೇವಃ**] ವಿದ್ಯಾವಂತನು [**ನಃ**] ನಮ್ಮನ್ನು [**ಅವಸೇ**] ರಕ್ಷಿಸುವುದಕ್ಕೆ [**ತಾನಿ**] ಆ ಎಲ್ಲಾ ಅಪೇಕ್ಷಿತ ಪದಾರ್ಥಗಳನ್ನು [**ಧಾತ್**] ಧಾರಣ ಮಾಡಿಸಲಿ. [**ಗ್ರಾವಾಣಃ**] ಮೇಘಗಳಿಗೆ ಸದೃಶವಾಗಿ [**ಅಧ್ವರಂ**] ಪಾಲನೆ ಮಾಡುವಂತಹ ವ್ಯವಹಾರವನ್ನು [**ಅತಷ್ಟ**] ಸೂಕ್ಷ್ಮಗೊಳಿಸುವ ರೀತಿಯಲ್ಲಿ ನಮ್ಮನ್ನು [**ಮಾದಯಧ್ವಂ**] ಆನಂದಗೊಳಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಧಾರ್ಮಿಕ ವಿದ್ವಾಂಸರು ಮೋಡಗಳಂತೆ ಎಲ್ಲರನ್ನೂ ಹೇಗೆ ಸಂತೋಷಗೊಳಿಸುವರೋ ಹಾಗೆಯೇ ಎಲ್ಲರೂ ಅಂತಹ ವಿದ್ವಾಂಸರನ್ನು ಸಂತೋಷಗೊಳಿಸಬೇಕು.

**ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.**

**ವಿದ್ಯುದ್ರಥಾ ಮರುತ ಋಷ್ಟಿವಂತೋ ದಿವೋ ಮರ್ಯಾ ಋತಜಾತಾ ಅಯಾಸಃ ।**
**ಸರಸ್ವತೀ ಶೃಣವನ್ ಯಜ್ಞಿಯಾಸೋ ಧಾತಾ ರಯಿಂ ಸಹವೀರಂ ತುರಾಸಃ ॥೧೩॥**

**ಪದಾರ್ಥ:-** [**ಸರಸ್ವತೀ**] ವಿದ್ಯಾವತಿಯು [**ಸಹವೀರಂ**] ವೀರಪುರುಷರೊಂದಿಗೆ [**ರಯಿಂ**] ಧನವನ್ನು [**ವಿದ್ಯುದ್ರಥಾಃ**] ವಿದ್ಯುತ್ ಸಂಯೋಜಿಸಿದ ವಾಹನಗಳಿರುವ [**ಮರುತಃ**] ಮರಣಶೀಲರಾದ [**ಋಷ್ಟಿಮಂತಃ**] ವೇಗಗತಿಯೊಂದಿಗೆ ಕೂಡಿದ [**ದಿವಃ**] ಬಯಸುವವರಿಗೆ ಸಂಧಿಸಿದ [**ಮರ್ಯಾಃ**] ಮನುಷ್ಯರು [**ಋತಜಾತಾಃ**] ಸತ್ಯದಿಂದ ಪ್ರಸಿದ್ಧರಾದ [**ಅಯಾಸಃ**] ವಿದ್ಯೆಯನ್ನು ಪಡೆದಿರುವ [**ಯಜ್ಞಿಯಾಸಃ**] ಶಿಲ್ಪ-ವ್ಯವಹಾರವನ್ನು ಮಾಡುವವರಾದ [**ತುರಾಸಃ**] ಶೀಘ್ರಕಾರ್ಯ ಮಾಡುವವರು [**ಶೃಣವತ್**] ಶ್ರವಣ ಮಾಡಿರಿ ಮತ್ತು [**ಧಾತ್**] ಧಾರಣ ಮಾಡುವಂತೆ ನೀವೂ ಧಾರಣ ಮಾಡಿರಿ.

**ಭಾವಾರ್ಥ:-** ಹೇಗೆ ಪುರುಷರು ವಿದ್ಯಾಭ್ಯಾಸ ಮಾಡುವರೋ ಹಾಗೆಯೇ ಸ್ತ್ರೀಯರೂ ಮಾಡಬೇಕು. ಸ್ತ್ರೀ ಪುರುಷರಿಬ್ಬರೂ ಉತ್ಸಾಹದಿಂದ ಶಿಲ್ಪ ವಿಷಯಕ ಕರ್ಮಗಳನ್ನು ಸಿದ್ಧ ಮಾಡಬೇಕು.

ಇಲ್ಲಿ ವಕ್ತ ವಿಷಯ ಹೇಳಿದೆ.

**ವಿಷ್ಣುಂ ಸ್ತೋಮಾಸಃ ಪುರುದಸ್ಮಮರ್ಕಾ ಭಗಸ್ಯೇವ ಕಾರಿಣೋ ಯಾಮನಿ ಗ್ಮನ್ ।**
**ಉರುಕ್ರಮಃ ಕಕುಹೋ ಯಸ್ಯ ಪೂರ್ವೀ-ರ್ನ ಮರ್ಧಂತಿ ಯುವತಯೋ ಜನಿತ್ರೀಃ ॥೧೪॥**

**ಪದಾರ್ಥ:-** **[ಉರುಕ್ರಮಃ]** ಬಹುವಾಗಿ ಪುರುಷಾರ್ಥ ಉಳ್ಳವನೇ! ನೀನು **[ಸ್ತೋಮಾಸಃ]** ಸ್ತವನ ಮಾಡುವ **[ಅರ್ಕಾಃ]** ಪೂಜಾರ್ಹವಾದ **[ಭಗಸ್ಯೇವ]** ಸಂಪತ್ತಿಗೆ ಸಮನಾಗಿ **[ಕಾರಿಣಃ]** ಕಾರ್ಯಮಾಡುವ ವಿದ್ವಾಂಸರು **[ಯಾಮನಿ]** ಯೋಗ್ಯವಾದ ಮಾರ್ಗದಲ್ಲಿ **[ಪುರುದಸ್ಮಂ]** ದುಃಖನಾಶಕನಾದ **[ವಿಷ್ಣುಂ]** ವ್ಯಾಪಕನನ್ನು **[ಗ್ಮನ್]** ಪಡೆಯುವರು ಮತ್ತು **[ಯಸ್ಯ]** ಯಾವನ **[ಯುವತಯಃ]** ಯುವಾವಸ್ಥೆಯನ್ನು ಪಡೆದಿರುವ **[ಕಕುಹಃ]** ದೊಡ್ಡದಾದ **[ಪೂರ್ವೀಃ]** ಪ್ರಾಚೀನಕಾಲದಲ್ಲಿರುವಂತಹ **[ಜನಿತ್ರೀಃ]** ಜನನಿಯರ **[ನ]** **[ಮರ್ಧಂತಿ]** ನಾಶಗೊಳಿಸುವುದಿಲ್ಲ. ಹಾಗೇ ನೀವೂ ವರ್ತಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಯಾರು ಭಗವಂತನ ಉಪಾಸನೆ ಮಾಡುವವರಾಗಿ ಈಶ್ವರನಿಗೆ ಅನುಕೂಲಕರ ವ್ಯವಹಾರ ಮಾಡುತ್ತ ಐಶ್ವರ್ಯವಂತರಾಗುವರೋ ಅವರು ದುಃಖವನ್ನು ದಾಟಿ ಅವಿನಾಶಕವಾದ ದೊಡ್ಡ ಸಂಪತ್ತನ್ನು, ಸುಖವನ್ನು ಪಡೆಯುವರು.

ರಾಜನ ವಿಷಯವನ್ನಿಲ್ಲಿ ತಿಳಿಸಿದೆ.

**ಇಂದ್ರೋ ವಿಶ್ವೈರ್ವೀರ್ಯೈ (ಐ) ೩ ಪತ್ಯಮಾನ ಉಭೇ ಆ ಪಪ್ರೌ ರೋದಸೀ ಮಹಿತ್ವಾ।**
**ಪುರಂದರೋ ವೃತ್ರಹಾ ಧೃಷ್ಣುಷೇಣಃ ಸಂಗೃಭ್ಯಾ ನ ಆ ಭರಾ ಭೂರಿ ಪಶ್ವಃ ॥೧೫॥**

**ಪದಾರ್ಥ:-** **[ವೃತ್ರಹಾ]** ಮೇಘಹಂತಕ ಸೂರ್ಯನಂತೆ **[ಪುರಂದರಃ]** ಶತ್ರುನಗರಗಳನ್ನು ನಾಶಗೊಳಿಸುವ **[ಪತ್ಯಮಾನಃ]** ಸ್ವಾಮಿಯಂತೆ ಆಚರಿಸುವವನಾಗಿ **[ಧೃಷ್ಣುಷೇಣಃ]** ಧೃಡವಾದ ಸೇನೆ ಮತ್ತು **[ಇಂದ್ರ]** ಐಶ್ವರ್ಯವಂತ ರಾಜನು **[ವಿಶ್ವೇಃ]** ಸಮಗ್ರ **[ವೀರ್ಯೈಃ]** ಪರಾಕ್ರಮಗಳಿಂದ **[ಮಹಿತ್ವಾ]** ಮಹಿಮೆಯಿಂದ **[ಉಭೇ]** ಎರಡೂ **[ರೋದಸೀ]** ನ್ಯಾಯ ಮತ್ತು ಭೂಮಿಯ ರಾಜ್ಯವನ್ನೂ **[ಆ, ಪಪ್ರೌ]** ವ್ಯಾಪ್ತನಾಗುವೆ. ಅಂತಹ ನೀನು **[ಭೂರಿ]** ಬಹುವಾಗಿ **[ನಃ]** ನಮ್ಮನ್ನು ಮತ್ತು **[ಪಶವಃ]** ಪಶುಗಳ್ನೂ **[ಸಂಗೃಭ್ಯ]** ಪಡೆದುಕೊಂಡು **[ಆ, ಭರೇ]** ಪೋಷಣ ಮಾಡು.

**ಭಾವಾರ್ಥ:-** ಭೂಮಿ ಮತ್ತು ಸೂರ್ಯರು ಎಲ್ಲಾ ಪದಾರ್ಥಗಳನ್ನು ಧಾರಣ ಮಾಡಿ ಪೋಷಣ ಮಾಡಿ ಹೇಗೆ ಬೆಳೆಸುವರೋ, ಹಾಗೆ ರಾಜ ಮತ್ತು ಸೇನಾಧ್ಯಕ್ಷರಿಬ್ಬರೂ ಉತ್ತಮ ಗುಣಗಳನ್ನು ಧಾರಣ ಮಾಡಿ ಪ್ರಜೆಗಳ ಪೋಷಣೆ ಸೇನೆಯ ವೃದ್ಧಿ ಮತ್ತು ಶತ್ರುಗಳ ನಾಶ ಮಾಡಬೇಕು.

ವಿದ್ವದ್ವಿಷಯವನ್ನಿಲ್ಲಿ ಹೇಳಿದೆ.

**ನಾಸತ್ಯಾ ಮೇ ಪಿತರಾ ಬಂಧುಪೃಚ್ಛಾ ಸಜಾತ್ಯಮಶ್ವಿನೋಶ್ಚಾರು ನಾಮ । ಯುವಂ ಹಿ**
**ಸ್ಥೋ ರಯಿದೌ ನೋ ರಯೀಣಾಂ ದಾತ್ರಂ ರಕ್ಷೇಥೇ ಅಕವೈರದಬ್ಧಾ ॥೧೬॥**

**ಪದಾರ್ಥ:-** **[ಯುವಂ]** ಸಭಾಪತಿ, ಸೇನಾಪತಿಗಳಾದ ನೀವಿಬ್ಬರೂ **[ಹಿ]** ಯಾವ ಕಾರಣದಿಂದ **[ನಃ]** ನಮಗೆ **[ರಯಿದೌ]** ಧನವನ್ನು ನೀಡುವವರು **[ರಯಿಣಾಂ]** ಧನಗಳ **[ದಾತ್ರಂ]** ದಾನವನ್ನು **[ರಕ್ಷೇಥೇ]** ರಕ್ಷಣೆ ಮಾಡುವಿರೋ **[ಅಕವೈಃ]** ಕುತ್ಸಿತವಲ್ಲದ/ಉತ್ತಮ ಕರ್ಮಗಳಿಂದ **[ಅದಬ್ಧಾಃ]** **[ಸ್ಥಃ]** ದಮನ ಮಾಡದವರಾಗಿರುವಿರೋ, **[ಅಶ್ವಿನೋಃ]** ಸೂರ್ಯ-ಚಂದ್ರರಂತೆ **[ಚಾರು, ನಾಮ]** ಉತ್ತಮ ಹೆಸರನ್ನು ಪಡೆದಿರುವಿರೋ, **[ಬಂಧುಪೃಚ್ಛಾ]** ಬಂಧುಗಳ ಕುಶಲವನ್ನು ಕೇಳುವಿರೋ **[ನಾಸತ್ಯಾ]** ಅಸತ್ಯ ತ್ಯಾಗಿಗಳೂ ಆಗಿರುವಿರೋ **[ಮೇ]** ನನ್ನ **[ಪಿತರಾ]** ಪೋಷಕರಂತೆ **[ಸಜಾತ್ಯಂ]** ಸಮಾನ ಜಾತಿಯವರ ಶ್ರೇಷ್ಠ ಹೆಸರಿನ ರಕ್ಷಣೆ ಮಾಡಿರಿ.

**ಭಾವಾರ್ಥ:-** ಯಾರು ತಂದೆ-ತಾಯಿಯರಂತೆ ಎಲ್ಲರಿಗೂ ವಿದ್ಯೆ-ಧನಗಳನ್ನು ಕೊಡುವರೋ, ಧರ್ಮಾಚರಣೆ ಮಾಡುವರೋ ತನ್ನ ಸಮಾನರಾದ ಅನ್ಯರ ರಕ್ಷಣೆ ಮಾಡುವರೋ ಅವರು ಗೌರವಾರ್ಹರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹತ್ತದ್ವಃ ಕವಯಶ್ಚಾರು ನಾಮ ಯದ್ಧ ದೇವಾ ಭವಥ ವಿಶ್ವ ಇಂದ್ರೇ ।**
**ಸಖ ಋಭುಭಿಃ ಪುರುಹೂತ ಪ್ರಿಯೇಭಿ-ರಿಮಾಂ ಧಿಯಂ ಸಾತಯೇ ತಕ್ಷತಾ ನಃ ॥೧೭॥**

**ಪದಾರ್ಥ:-** **[ಕವಯಃ]** ವಿದ್ಯಾವಂತರೇ! **[ವಃ]** ನಿಮಗೆ **[ಯತ್]** ಯಾವ **[ಮಹತ್]** ಪ್ರಸಿದ್ಧ **[ಚಾರು]** ಸುಂದರ **[ನಾಮ]** ಹೆಸರಿದೆಯೋ **[ತತ್]** ಅದು **[ವಿಶ್ವೇ]** ಸಮಸ್ತ **[ದೇವಾಃ]** ವಿದ್ಯಾವಂತರು **[ಹ]** ನಿಶ್ಚಯವಾಗಿ **[ಭವಥ]** ಆಗಿರಿ. **[ಪ್ರಿಯೇಭಿಃ]** ತನಗೆ ಸಮನಾದ **[ಋತುಭಿಃ]** ಬುದ್ಧಿವಂತರೊಂದಿಗೆ **[ಇಂದ್ರೇ]** ಐಶ್ವರ್ಯವಂತನಾದ ರಾಜನಲ್ಲಿ **[ಸಾತಯೇ]** ಸತ್ಯಾ ಸತ್ಯಗಳ ವಿಚಾರ ಮಾಡುವುದಕ್ಕಾಗಿ **[ನಃ]** ನಮ್ಮ **[ಇಮಾಂ]** ಈ **[ಧಿಯಂ]** ಬುದ್ಧಿಯನ್ನು **[ತಕ್ಷತಾ]** ಚುರುಕುಗೊಳಿಸಿರಿ. **[ಪುರುಹೂತ]** ಬಹುಜನರಿಂದ ಪ್ರಶಂಸಿತ ರಾಜನೇ! ನೀನು ಇವರೊಂದಿಗೆ **[ಸಖಾ]** ಗೆಳೆಯನಾಗಿ ಅವರ ಬುದ್ಧಿಯನ್ನು ಪಡೆದುಕೊ.

**ಭಾವಾರ್ಥ:-** ಯಾವ ಮನುಷ್ಯರ ಹೆಸರು ಪ್ರಶಂಸಾರ್ಹವೂ ಪ್ರಸಿದ್ಧವೂ ಆಗಿರುತ್ತದೆಯೋ, ಯಾರು ವಿದ್ಯಾವಂತ-ಅವಿದ್ಯಾವಂತರೊಂದಿಗೆ ಸ್ನೇಹವನ್ನು ಹೊಂದಿ ಧರ್ಮಾಧರ್ಮಗಳ ವಿಚಾರ ಮಾಡುವರೋ, ಅವರು ಎಲ್ಲರಿಗೂ ಉತ್ತಮ ಬುದ್ಧಿಯನ್ನು ಕೊಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ಯಮಾ ಣೋ ಅದಿತಿರ್ಯಜ್ಞಿಯಾಸೋಽದಬ್ಧಾನಿ ವರುಣಸ್ಯ ವ್ರತಾನಿ ।**
**ಯುಯೋತ ನೋ ಅನಪತ್ಯಾನಿ ಗಂತೋಃ ಪ್ರಜಾವಾನ್ನಃ ಪಶುಮಾಁ ಅಸ್ತು ಗಾತುಃ ॥೧೮॥**

**ಪದಾರ್ಥ:-** **[ಅದಿತಿಃ]** ಮಾತೆಯಂತಿರುವ **[ಅರ್ಯಮಾ]** ನ್ಯಾಯಾಧೀಶ್ವನು **[ಯಜ್ಞಿಯಾಸಃ]** ಅಹಿಂಸಾತ್ಮಕ ಯಜ್ಞಗಳನ್ನು ಮಾಡುವ ನೀವು **[ನಃ]** ನಮ್ಮ **[ವರುಣಸ್ಯ]** ಶ್ರೇಷ್ಠವಾದ **[ಅದಬ್ಧಾನಿ]** ಹಿಂಸಾರಹಿತವಾದ **[ವ್ರತಾನಿ]** ಸತ್ಯಾಚರಣಾದಿ ವ್ರತಗಳನ್ನು **[ಯುಯೋತ]** ಪಡೆಯಿರಿ. **[ನಃ]** ನಮ್ಮ **[ಗಂತೋಃ]** ಪಡೆಯಲು ಯೋಗ್ಯವಾದ ವ್ಯವಹಾರಗಳಿಂದ **[ಅನಪತ್ಯಾನಿ]** ಸಂತಾನರಹಿತವಾದವುಗಳನ್ನು **[ನಃ]** ನಮ್ಮ **[ಗಾತುಃ]** ಭೂಲೋಕದ **[ಪ್ರಜಾವಾನ್]** ಸಂತಾನಯುಕ್ತರನ್ನಾಗಿ ಮಾಡಿ **[ಪಶುಮಾನ್]** ಪಶುಮಂತರನ್ನು **[ಅಸ್ತು]** ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರೇ! ನೀವು ನಮ್ಮನ್ನು ನ್ಯಾಯವಂತರೂ ಮತ್ತು ಅನ್ಯಾಯ ಮಾಡದವರೂ ಆಗುವಂತೆ ಮಾಡಿ ತಾಯಿಯಂತೆ ಧರ್ಮ-ಕರ್ಮಗಳಲ್ಲಿ ಪ್ರವೃತ್ತರಾಗುವಂತೆ ಮಾಡಿರಿ. ಸಮಗ್ರ ಭೂಮಿಯನ್ನೇ ಪರಿಪೂರ್ಣ ಪ್ರಜೆಗಳೂ ಅಸಂಖ್ಯಾತ ಸಂಪತ್ತು ಇರುವಂತೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವಾನಾಂ ದೂತಃ ಪುರುಧ ಪ್ರಸೂತೋಽನಾಗಾನ್ನೋ ವೋಚತು ಸರ್ವತಾತಾ । ಶೃಣೋತು**
**ನಃ ಪೃಥಿವೀ ದ್ಯೌರುತಾಪಃ ಸೂರ್ಯೋ ನಕ್ಷತ್ರೈರುರ್ವ (ಅಂ) ೧ ಂತರಿಕ್ಷಮ್ ॥೧೯॥**

**ಪದಾರ್ಥ:-** **[ಪುರುಧ]** ಬಹು ಪದಾರ್ಥಗಳನ್ನು ಧಾರಣ ಮಾಡುವವನೇ! **[ದೇವಾನಾಂ]** ವಿದ್ಯಾವಂತರ **[ದೂತಃ]** ಸತ್ಯಾಸತ್ಯ ವಿಚಾರಗಳನ್ನು ತಿಳಿಸುವ ಸೇವಕನು **[ಪ್ರಸೂತಃ]** ಇರುವ ನೀನು **[ಸರ್ವತಾತಾ]** ಎಲ್ಲರಿಗೂ **[ಅನಾಗಾನ್]** ಅಪರಾಧ ರಹಿತರಾದ **[ನಃ]** ನಮಗೆ **[ವೋಚತು]** ವಿದ್ಯೆಯನ್ನು ಉಪದೇಶಿಸು. **[ನಕ್ಷತ್ರೈಃ]** ಕಾರಣ ರೂಪದಿಂದ ನಾಶವಾಗದವರೊಂದಿಗೆ **[ಉರು]** ವ್ಯಾಪಕವಾದ **[ಅಂತರಿಕ್ಷಂ]** ಆಕಾಶದಂತೆ ಅಚಲವಾದ **[ಸೂರ್ಯಃ]** ಸೂರ್ಯನಿಗೆ ಸದೃಶವಾಗಿ ಪ್ರಕಾಶಮಾನ **[ಪೃಥಿವೀ]** ಭೂಮಿಯಂತೆ ಕ್ಷಮಾಶೀಲ **[ದ್ಯೌಃ]** ಮಿಂಚಿನಂತೆ ವಿದ್ಯಾವಂತ **[ಉತ]** ಮತ್ತು **[ಆಪಃ]** ನೀರಿನಂತೆ ಶಾಂತಿಯು **[ನಃ]** ನಮಗೆ ಲಭಿಸಲಿ. **[ಶೃಣೋತು]** ನಮ್ಮ ವಚನಗಳನ್ನು ಕೇಳಿಸಿಕೋ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಧರ್ಮಸಭೆಯಲ್ಲಿ ಆಸೀನರಾದ ಜನರ ಅಧೀನವಿರುವ ಉಪದೇಶಕನು ಎಲ್ಲರಿಗೂ ಸತ್ಯಾಸತ್ಯಗಳ ಬಗ್ಗೆ ಉಪದೇಶ ನೀಡಿ ಧರ್ಮಾತ್ಮರನ್ನಾಗಿ ಮಾಡಬೇಕು. ಅವರ ಪ್ರಶ್ನೆಗಳನ್ನೆಲ್ಲ ಕೇಳಿಸಿಕೊಂಡು ಸಮಾಧಾನ ಹೇಳಬೇಕು. ಪೃಥಿವ್ಯಾದಿಗಳಿಂದ ಕ್ಷಮಾದಿಗಳನ್ನು ಗ್ರಹಣ ಮಾಡಿಸಬೇಕು. ಅನ್ಯತರ ಗ್ರಹಣ-ಅನ್ಯತರ ನಾಶ ಮಾಡಿಸಿ ಎಲ್ಲರೂ ಶ್ರೇಷ್ಠ ಪುರುಷರಾಗುವಂತೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶೃಣ್ವಂತು ನೋ ವೃಷಣಃ ಪರ್ವತಾಸೋ ಧ್ರುವಕ್ಷೇಮಾಸ ಇಳಯಾ ಮದಂತಃ ।**
**ಆದಿತ್ಯೈರ್ನೋ ಅದಿತಿಃ ಶೃಣೋತು ಯಚ್ಛಂತು ನೋ ಮರುತಃ ಶರ್ಮ ಭದ್ರಮ್ ॥೨೦॥**

**ಪದಾರ್ಥ:-** **[ಇಳಯಾ]** ಪ್ರಶಂಸಾತ್ಮಕ ನುಡಿಗಳಿರುವ **[ನಃ]** ನಮ್ಮ ಮಾತುಗಳನ್ನು **[ಶೃಣ್ವಂತು]** ಕೇಳಿಸಿಕೊಳ್ಳಿರಿ. **[ವೃಷಣಃ]** ವೃಷ್ಟಿಕಾರಕ **[ಧ್ರುವಕ್ಷೇಮಾಸಃ]** ಸ್ಥಿರವಾದ ರಕ್ಷಣೆ ಇರುವಂತಹ **[ಪರ್ವತಾಸಃ]** ಮೇಘಗಳ ರೀತಿಯಲ್ಲಿ **[ಮದಂತಃ]** ನಮ್ಮನ್ನು ಪ್ರಸನ್ನರಾಗಿರಿಸಿರಿ. **[ಆದಿತ್ಯೈಃ]** ವಿದ್ಯಾವಂತರೊಂದಿಗೆ **[ಅದಿತಿಃ]** ಮಾತೆಯು **[ನಃ]** ನಮ್ಮನ್ನು **[ಶೃಣೋತು]** ಕೇಳಿಸಿಕೊಳ್ಳಲಿ. **[ಮರುತಃ]** ಮನುಷ್ಯರಾದ **[ನಃ]** ನಮಗೆ **[ಭದ್ರಂ]** ಕಲ್ಯಾಣಕಾರಕನು **[ಶರ್ಮ]** ಸುಖವನ್ನು **[ಯಚ್ಛಂತು]** ಕೊಡಲಿ.

**ಭಾವಾರ್ಥ:-** ಮನುಷ್ಯರು ಬೇರೆಲ್ಲ ಪಡೆಯುವುದಕ್ಕಿಂತ ಮೊದಲು ಉತ್ತಮ ಶಿಕ್ಷಣ/ವರ್ತನೆ ಅನಂತರ ವಿದ್ಯೆ ಮತ್ತೆ ಸತ್ಸಂಗ ಅದರಿಂದ ಕಲ್ಯಾಣಕಾರಕ ಆಚರಣೆ, ಉತ್ತಮ ಮಾತುಗಳ ಶ್ರವಣ-ಉಪದೇಶ ಈ ಎಲ್ಲದರ ಸಂಯೋಗದಿಂದ ಕ್ಷೇಮ-ಭೋಜನ, ಆಚ್ಛಾದನೆ ಕೊನೆಯಲ್ಲಿ ಸುಖ ಈ ರೀತಿ ಅನುಗುಣವಾಗಿ ಪಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸದಾ ಸುಗಃ ಪಿತುಮಾँ ಅಸ್ತು ಪಂಥಾ ಮಧ್ವಾ ದೇವಾ ಓಷಧೀಃ ಸಂ ಪಿಪೃಕ್ತ । ಭಗೋ ಮೇ ಅಗ್ನೇ ಸಖ್ಯೇ ನ ಮೃಧ್ಯಾ ಉದ್ರಾಯೋ ಅಶ್ಯಾಂ ಸದನಂ ಪುರುಕ್ಷೋಃ ॥೨೦॥**

**ಪದಾರ್ಥ:-** **[ದೇವಾಃ]** ವಿದ್ಯಾವಂತರೇ! ನೀವು **[ಮಧ್ವಾ]** ಮಧುರಾದಿ ಗುಣಗಳಿರುವ **[ಓಷಧೀ]** ಸೋಮಲತಾದಿ ಓಷಧಿಗಳನ್ನು **[ಸಂ]** **[ಪಿಪೃಕ್ತ]** ಉತ್ತಮ ರೀತಿಯಿಂದ ಪಡೆದುಕೊಳ್ಳಿರಿ. **[ಸುಗಃ]** ಸುಖವಾಗಿ ಚಲಿಸಲು ಸಾಧ್ಯವಾಗುವ **[ಪಿತುಮಾನ್]** ಬಹ್ವನ್ನ ಸಂಪನ್ನ **[ಪಂಥಾಃ]** ಮಾರ್ಗವು **[ಅಸ್ತು]** ಯಾವಾಗಲೂ ಇರುವಂತಾಗಲಿ. **[ಮೇ]** ನನ್ನ **[ಸಖ್ಯೇ]** ಸ್ನೇಹತನವನ್ನು **[ನ, ಮೃಧ್ಯಾಃ]** ನಾಶಗೊಳಿಸಬೇಡ. **[ಭಗಃ]** ಸಂಪತ್ತು ನಿಮ್ಮದಾಗಲಿ. **[ಪುರುಕ್ಷೋ]** ಬಹ್ವನ್ನ ಸಂಪನ್ನನೇ! **[ಸದನಂ]** ಮನೆಯನ್ನು **[ರಾಯಃ]** ಧನವನ್ನೂ **[ಉತ್, ಅಶ್ಯಾಮ]** ಪಡೆದುಕೊಳ್ಳೋಣ.

**ಭಾವಾರ್ಥ:-** ವಿದ್ಯಾವಂತ ವೈದ್ಯರು ಯಾವಾಗಲೂ ಓಷಧಿಗಳಿಂದ ರೋಗಗಳನ್ನು ನಿವಾರಣೆ ಮಾಡಿ ಎಲ್ಲರೂ ರೋಗರಹಿತರಾಗುವಂತೆ ಮಾಡಬೇಕು. ರಾಜರು ಎಲ್ಲರೊಂದಿಗೆ ಸ್ನೇಹ ಬೆಳೆಸಿ ದುಷ್ಟರನ್ನು ದಂಡಿಸಿ ಎಲ್ಲರ ಮಾರ್ಗವನ್ನೂ ಸುಗಮಗೊಳಿಸಬೇಕು. ಅಂತಹ ಮಾರ್ಗದಲ್ಲಿ ಸಂಚರಿಸುವ ಪ್ರಜೆಗಳು ಧನವಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ವದಸ್ವ ಹವ್ಯಾ ಸಮಿಷೋ ದಿದೀ-ಹ್ಯಸ್ಮದ್ರ್ಯ (ಅ)೧ ಕ್ಸಂ ಮಿಮೀಹಿ ಶ್ರವಾಂಸಿ । ವಿಶ್ವಾँ ಅಗ್ನೇ ಪೃತ್ಸು ತಾನ್ ಜೇಷಿ ಶತ್ರೂ-ನಹಾ ವಿಶ್ವಾ ಸುಮನಾ ದಿದೀಹಿ ನಃ ॥೨೧॥**

**ಪದಾರ್ಥ:-** **[ಅಗ್ನೇ]** ಅಗ್ನಿಗೆ ಸದೃಶನಾಗಿರುವವನೇ! ನೀನು **[ಅಸ್ಮದ್ರ್ಯಕ್]** ನಮಗೆ ಜ್ಞಾನ, ಗಮನ, ಪ್ರಾಪ್ತಿ, ಸತ್ಕಾರಗಳನ್ನು ಒದಗಿಸುವವನು **[ಹವ್ಯಾ]** ಭೋಜನ ಯೋಗ್ಯ **[ಶ್ರವಾಂಸಿ]** ಅನ್ನಾದಿಗಳನ್ನು **[ಸ್ವದಸ್ವ]** ಕೊಡುವವನಾಗಲಿ. **[ಇಷಃ]** ವಿಜ್ಞಾನವನ್ನು **[ಸಂ, ದಿದೀಹಿ]** ಉತ್ತಮ ರೀತಿಯಲ್ಲಿ ಬೆಳಗಿಸು. **[ಸಂ, ಮಿಮೀಹಿ]** ಚೆನ್ನಾಗಿ ಪರೀಕ್ಷಿಸು. **[ಪೃತ್ಸು]** ಸಂಗ್ರಾಮಗಳಲ್ಲಿ **[ತಾನ್]** ಅವುಗಳನ್ನು **[ವಿಶ್ವಾನ್]** ಸಂಪೂರ್ಣ **[ಶತ್ರೂನ್]** ವೈರಿಗಳನ್ನು **[ಜೇಷಿ]** ಜಯಿಸುವೆ. **[ವಿಶ್ವಾ]** ಎಲ್ಲಾ **[ಅಹಾ]** ದಿನಗಳನ್ನೂ **[ಸುಮನಾಃ]** ಪ್ರಸನ್ನ ಚಿತ್ತನಾಗಿ **[ದಿದೀಹಿ]** ಕಳೆಯುವವನಾಗು **[ನಃ]** ನಮಗೂ ಹಾಗೆಯೇ ಮಾಡು.

**ಭಾವಾರ್ಥ:-** ರಾಜಾದಿಗಳು ಬುದ್ಧಿ ಭ್ರಮಣಗೊಳಿಸುವಂತಹ ಅನ್ನ ಪಾನಾದಿಗಳನ್ನು ತ್ಯಜಿಸಿ ಉತ್ತಮ ಜ್ಞಾನವಂತರಾಗಬೇಕು. ಸೇನೆಯನ್ನು ಬಲಪಡಿಸಿ ಶತ್ರುಗಳನ್ನು ಸದೆ ಬಡಿಯಬೇಕು. ದುಃಖ ದೂರ ಮಾಡಿಕೊಂಡು ಸುಖ ಸವಿಯಬೇಕು. ಧರ್ಮ-ಪ್ರಜೆಗಳ ರಕ್ಷಣೆ ಮಾಡುತ್ತ ಆನಂದವನ್ನನುಭವಿಸಬೇಕು.

ಈ ಸೂಕ್ತದಲ್ಲಿ ರಾಜ, ವಿದ್ಯಾವಂತರು, ಅಧ್ಯಾಪಕ-ಶಿಷ್ಯ, ಈಶ್ವರ ಮುಂತಾದವರ ಗುಣ ಕರ್ಮ ಸ್ವಭಾವಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಐವತ್ತನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೫೫

ಮಂತ್ರಸಂಖ್ಯೆ ೨೨ । ಪ್ರಜಾಪತಿರ್ವಿಶ್ವಾಮಿತ್ರೋವಾಚ್ಯೋವಾ ಋಷಿಃ । ವಿಶ್ವೇದೇವತಾಃ, ೧ ಉಷಾಃ, ೨-೧೦ ಅಗ್ನಿಃ, ೧೧ ಅಹೋರಾತ್ರೌ, ೧೨-೧೪ ರೋದಸೀ, ೧೫ ರೋದಸೀದ್ಯುನಿಶೌ ವಾ, ೧೬ ದಿಶಃ, ೧೭-೨೨ ಇಂದ್ರಃ ಪರ್ಜನ್ಯಾತ್ಮಾ ತ್ವಷ್ಟಾವಾಗ್ನಿಶ್ಚ ದೇವತಾಃ । ೧, ೨, ೬, ೭, ೯-೧೨, ೧೯, ೨೨ ನಿಚೃತ್ತ್ರಿಷ್ಟುಪ್, ೪, ೮, ೧೩, ೧೬, ೨೧ ತ್ರಿಷ್ಟುಪ್, ೧೪, ೧೫, ೧೮ ವಿರಾಟ್ ತ್ರಿಷ್ಟುಪ್, ೧೭ ಭುರಿಕ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಭುರಿಕ್ ಪಂಕ್ತಿಃ ಛಂದಃ । ೫, ೨೦ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

**ಉಷಸಃ ಪೂರ್ವಾ ಅಧ ಯದ್ವ್ಯೂಷು-ರ್ಮಹದ್ವಿ ಜಜ್ಞೇ ಅಕ್ಷರಂ ಪದೇ ಗೋಃ ।**
**ವ್ರತಾ ದೇವಾನಾಮುಪ ನು ಪ್ರಭೂಷನ್ ಮಹದ್ದೇವಾನಾಮಸುರತ್ವಮೇಕಮ್ ॥೧॥**

**ಪದಾರ್ಥ:-** **[ಯತ್]** ಯಾವ **[ಉಷಸಃ]** ಪ್ರಾತಃಕಾಲದಿಂದ **[ಪೂರ್ವಾಃ]** ಮೊದಲೇ **[ವ್ಯೂಷು]** ವಿಶೇಷವಾಗಿ ವಾಸಿಸುವರೋ **[ಮಹತ್]** ದೊಡ್ಡದಾದ **[ಅಕ್ಷರಂ]** ನಾಶರಹಿತವಾದ **[ಗೋಃ]** ಭೂಮಿಯ **[ಪದೇ]** ಸ್ಥಾನದಲ್ಲಿ **[ವಿ, ಜಜ್ಞೇ]** ಜನ್ಮ ಪಡೆದಿರುವನೋ **[ಏಕಂ]** ಮತ್ತೊಬ್ಬ ಸಹಾಯರಹಿತ **[ದೇವಾನಾಂ]** ಪೃಥಿವ್ಯಾದಿ ಪದಾರ್ಥಗಳ **[ಅಸುರತ್ವಂ]** ಪ್ರಾಣಗಳಲ್ಲಿ ರಮಿಸುವವನನ್ನು **[ಪ್ರ, ಭೂಷನ್]** ಶೋಭೆಗೊಳಪಡಿಸುತ್ತ **[ಅಧ]** ಅನಂತರ **[ದೇವಾನಾಂ]** ವಿದ್ಯಾವಂತರ **[ವ್ರತಾ]** ನಿಯಮಗಳ **[ಉಪ]** ಸಮೀಪದಲ್ಲಿ **[ನು]** ಶೀಘ್ರವಾಗಿ ಜನಿಸುವನು.

**ಭಾವಾರ್ಥ:-** ಯಾರು ಮಿಂಚನ್ನು ಬೆಳಗಿನ ಸಮಯದಿಂದಲೂ ಸೇವನೆ ಮಾಡುವರೋ ಅವರಂತೆ ಇರುವ ಇನ್ನೊಬ್ಬನು ಅದ್ವೈತನಾದ ಬ್ರಹ್ಮನ ಪ್ರಕೃತ್ಯಾದಿ ಪದಾರ್ಥಗಳಲ್ಲಿ ವ್ಯಾಪ್ತನಾಗಿ ಎಲ್ಲವನ್ನೂ ಧಾರಣ ಮಾಡುವನೋ ಅವನ ಉಪಾಸನೆಯನ್ನು ಎಲ್ಲರೂ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮೋ ಷೂ ಣೋ ಅತ್ರ ಜುಹುರಂತ ದೇವಾ ಮಾ ಪೂರ್ವೇ ಅಗ್ನೇ ಪಿತರಃ ಪದಜ್ಞಾಃ ।**
**ಪುರಾಣ್ಯೋಃ ಸದ್ಮನೋಃ ಕೇತುರಂತ-ರ್ಮಹದ್ದೇವಾನಾಮಸುರತ್ವಮೇಕಮ್ ॥೨॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಪುರಾಣ್ಯೋಃ]** ಅನಾದಿಸಿದ್ಧ ಮಿಂಚು, ಬೆಳಕಿನ ರೂಪದ ಪ್ರಕೃತಿಗಳ **[ಸದ್ಮನೋಃ]** ಎಲ್ಲರೂ ವಾಸಿಸುವಂತಹ ಸ್ಥಾನಗಳ **[ದೇವಾನಾಂ]** ಪೃಥಿವ್ಯಾದಿ ಪದಾರ್ಥಗಳ / ಎಲ್ಲಾ ಜೀವಿಗಳ **[ಅಂತಃ]** ಒಳಭಾಗದಲ್ಲಿ **[ಕೇತುಃ]** ಜ್ಞಾನ ರೂಪ **[ಮಹತ್]** ಮಹತ್ವವಾದ **[ಏಕಂ]** ಬ್ರಹ್ಮನು **[ಅಸುರತ್ವಂ]** ಪ್ರಾಣಗಳಲ್ಲಿ ಕ್ರೀಡಿಸುತ್ತಲಿರುವನು. **[ಅತ್ರ]** ಈ ಬ್ರಹ್ಮನಲ್ಲಿ / ವಿಜ್ಞಾನ ರೂಪ ವ್ಯವಹಾರಗಳಲ್ಲಿ **[ನಃ]** ನಮಗೆ **[ಪದಜ್ಞಾಃ]** ಅರಿಯಬೇಕಾದದ್ದನ್ನು ತಿಳಿದಿರುವ **[ಪೂರ್ವೇ]** ಮೊದಲೇ ಉತ್ಪನ್ನವಾಗಿರುವ **[ಪಿತರಃ]** ಜ್ಞಾನವಂತರು **[ಮೋ, ಜುಹುರಂತ]** ಪ್ರಸನ್ನಗೊಳ್ಳುವುದಿಲ್ಲ/ ಪ್ರಹಸನ ಮಾಡುವುದಿಲ್ಲ. **[ದೇವಾಃ]** ವಿದ್ಯಾವಂತರು ಈ ವಿಜ್ಞಾನರೂಪ ವ್ಯವಹಾರದಲ್ಲಿ **[ಮಾ]** ನಮ್ಮನ್ನು ಸಹಿಸುವುದಿಲ್ಲ. **[ಸು]** ನೀವು ಉತ್ತಮರೀತಿಯಿಂದ ಸಹಿಸಿರಿ.

**ಭಾವಾರ್ಥ:-** ಯಾರು ಪ್ರಕೃತಿಯಲ್ಲಿ ವ್ಯಾಪ್ತನಾಗಿರುವ ಬ್ರಹ್ಮನನ್ನು ಚೆನ್ನಾಗಿ ತಿಳಿದುಕೊಂಡು ಇನ್ನೊಬ್ಬರಿಗೂ ಬ್ರಹ್ಮಜ್ಞಾನವನ್ನು ಬೋಧಿಸುವರೋ ಅವರೇ ಈ ಪ್ರಪಂಚದಲ್ಲಿ ಉತ್ತಮ ವಿದ್ಯಾವಂತರು ಹಾಗೂ ತಂದೆಯಂತೆ ಎಲ್ಲರನ್ನೂ ಪಾಲನೆ ಮಾಡುವವರೂ ಆಗಿರುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿ ಮೇ ಪುರುತ್ರಾ ಪತಯಂತಿ ಕಾಮಾಃ ಶಮ್ಯಚ್ಛಾ ದೀದ್ಯೇ ಪೂರ್ವ್ಯಾಣಿ ।**
**ಸಮಿದ್ಧೇ ಅಗ್ನಾವೃತಮಿದ್ವದೇಮ ಮಹದ್ದೇವಾನಾಮಸುರತ್ವಮೇಕಮ್ ॥೩॥**

**ಪದಾರ್ಥ:-** **[ಮೇ]** ನನ್ನ **[ಪುರುತ್ರಾ]** ಬಹಳಷ್ಟು **[ಕಾಮಾಃ]** ಅಭಿಲಾಷೆಗಳು **[ಪತಯಂತಿ]** ಸ್ವಾಮಿಗೆ ಸ್ಪಷ್ಟವಾಗಿ ತಿಳಿಸಲು ಇಚ್ಛಿಸುತ್ತಾನೆ. **[ಪೂರ್ವ್ಯಾಣಿ]** ಹಿಂದಿನವರಿಂದ ಸಿದ್ಧಗೊಳಿಸಲಾದ **[ಶಮೀ]** ಕೆಲಸಗಳನ್ನು **[ಅಚ್ಛಾ]** ಉತ್ತಮ ರೀತಿಯಿಂದ **[ವಿ, ದೀದ್ಯೇ]** ವಿಶೇಷ ರೀತಿಯಿಂದ ಪ್ರಕಾಶಗೊಳಿಸುವೆನು. **[ಸಮಿದ್ಧೇ]** ಪ್ರಜ್ವಲಿಸುವ **[ಅಗ್ನೌ]** ಅಗ್ನಿಯಲ್ಲಿ **[ದೇವಾನಾಂ]** ಉತ್ತಮ ಪದಾರ್ಥಗಳಲ್ಲಿ **[ಮಹತ್]** ಶ್ರೇಷ್ಠವಾದ **[ಏಕಂ]** ಏಕಾಕಿಯಾದ **[ಅಸುರತ್ವಂ]** ಪ್ರಾಣಗಳಿಗಾಧಾರಭೂತ **[ಋತಂ]** ಸತ್ಯವನ್ನು **[ವದೇಮ]** ನುಡಿಯುವೆವೋ **[ಇತ್]** ಅದನ್ನೇ ಅನ್ಯರೂ ನುಡಿಯಲಿ.

**ಭಾವಾರ್ಥ:-** ಮನುಷ್ಯರು ಆಲಸ್ಯವನ್ನು ತೊರೆದು ತಮ್ಮ ಪೂರ್ವಿಕರು ಮಾಡಿ ಪ್ರಯೋಜನ ಪಡೆದಿರುವ ಕೆಲಸಗಳನ್ನು ತಾವೂ ಮಾಡುವವರಾಗಿ ದೇವತೆಗಳಿಗೂ ದೇವನಾದ ಮಹತ್ತರನಾದ, ಸತ್ಯ-ಅಮೃತ ರೂಪನಾದ ಪರಮಾತ್ಮನನ್ನು ಸಾಕ್ಷಾತ್ ನೋಡಲು ಯತ್ನಿಸಬೇಕು ಮತ್ತು ಅನ್ಯರಿಗೂ ತಮ್ಮಂತೆ ಮಾಡಲು ಪ್ರಚೋದಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಮಾನೋ ರಾಜಾ ವಿಭೃತಃ ಪುರುತ್ರಾ ಶಯೇ ಶಯಾಸು ಪ್ರಯುತೋ ವನಾನು ।**
**ಅನ್ಯಾ ವತ್ಸಂ ಭರತಿ ಕ್ಷೇತಿ ಮಾತಾ ಮಹದ್ದೇವಾನಾಮಸುರತ್ವಮೇಕಮ್ ॥೪॥**

**ಪದಾರ್ಥ:-** **[ಪುರುತ್ರಾ]** ಪ್ರಾಚೀನಕಾಲದಿಂದಲೂ ಪ್ರಸಿದ್ಧನಾದ **[ಶಯಾಸುಃ]** ಶಯನಯೋಗ್ಯ ಪದಾರ್ಥಗಳಲ್ಲಿ **[ಪ್ರಯುಕ್ತಃ]** ವಿಭಾಗಗೊಂಡು ಮತ್ತೆ ಒಂದಾದ **[ವಿಭೃತಃ]** ವಿಶೇಷ ರೀತಿಯಲ್ಲಿ ಧಾರಣ ಮಾಡಲಾದ **[ಸಮಾನಃ]** ಏಕ ರೀತಿಯ **[ರಾಜಾ]** ಪ್ರಕಾಶಮಾನ ಸೂರ್ಯನು **[ಶಯೇ]** ಶಯನ ಮಾಡಿರುವನು. **[ವನಾ]** ಕಿರಣಗಳಿಂದ ಸೇವಿಸುವವನಾಗಿ **[ಅನ್ಯಾ]** ಭಿನ್ನ ತ್ರಿಗುಣರೂಪ **[ಮಾತಾ]** ಪ್ರಕೃತಿ ಮಾತೆಯು **[ವತ್ಸಂ]** ಮಗನನ್ನು ಧಾರಣಮಾಡುವ ರೀತಿಯಲ್ಲಿ **[ಕ್ಷೇತಿ]** ವಾಸಗೊಳಿಸುವಳು. **[ದೇವಾನಾಂ]** ಸೂರ್ಯಾದಿಗಳಲ್ಲಿ / ವಿದ್ವಾಂಸರಲ್ಲಿ **[ಮಹತ್]** ಮಹಿಮಾನ್ವಿತ **[ಏಕಂ]** ಅದ್ವಿತೀಯನಾದ **[ಅಸುರತ್ವಂ]** ದುಃಖವನ್ನು ನಿವಾರಣೆ ಮಾಡುವವನು **[ಅನು]** ಅವನನ್ನು ನೀವು ಶೀಘ್ರ ತಿಳಿದುಕೊಳ್ಳಿ.

**ಭಾವಾರ್ಥ:-** ಮನುಷ್ಯರೇ! ಯಾವನಿಂದ ಸೂರ್ಯಾದಿ ಪದಾರ್ಥಗಳು ಪ್ರಕಾಶಮಾನವಾಗಿವೆಯೋ, ಯಾವನು ಅವ್ಯಕ್ತನಾಗಿ ಪ್ರಕೃತಿಯ ಎಲ್ಲಾ ಪದಾರ್ಥಗಳಲ್ಲೂ ವ್ಯಾಪಕನಾಗಿರುವನೋ ಎಲ್ಲವನ್ನೂ ಧಾರಣ ಮಾಡಿರುವನೋ ತಾಯಿಯಂತೆ ರಕ್ಷಣೆ ಮಾಡುವನೋ ಅಂತಹ ಬ್ರಹ್ಮನ ಉಪಾಸನೆಯನ್ನು ನೀವೆಲ್ಲರೂ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಕ್ಷಿತ್ಪೂರ್ವಾಸ್ವಪರಾ ಅನೂರು-ತ್ಸದ್ಯೋ ಜಾತಾಸು ತರುಣೀಷ್ವಂತಃ ।**
**ಅಂತರ್ವತೀಃ ಸುವತೇ ಅಪ್ರವೀತಾ ಮಹದ್ದೇವಾನಾಮಸುರತ್ವಮೇಕಮ್ ॥೫॥**

**ಪದಾರ್ಥ:-** **[ಪೂರ್ವಾಸು]** ಪ್ರಾಚೀನ ಕಾಲದಲ್ಲಿ ಇರುವಂತಹ **[ಸದ್ಯಃ]** ಸಮಾನಕಾಲದಲ್ಲೂ **[ಜಾತಾಸು]** ಉತ್ಪನ್ನವಾದ **[ತರುಣೀಷು]** ಯುವಾವಸ್ಥೆಯಲ್ಲಿರುವ ಪ್ರಜೆಗಳಲ್ಲಿ **[ಅಂತಃ]** ಒಳಭಾಗದಲ್ಲಿ **[ಆಕ್ಷಿತ್]** ಎಲ್ಲಾಭಾಗದಲ್ಲಿ ವಾಸಿಸುವನೋ **[ಅನೂರೂತ್]** ಬೋಧಿಸುವವನಿರುವನೋ ಅವನನ್ನು ಉತ್ಪಾದನೆ ಮಾಡುವುದರಿಂದ **[ಅಪರಾಃ]** ಅನ್ಯಳು **[ಅಂತರ್ವತೀಃ]** ಮಧ್ಯದಲ್ಲಿದ್ದು ಕಾರಣ ರೂಪಳು **[ಅಪ್ರವೀತಾಃ]** ಗಣನೆಯಿಂದಳೆಯಲು ಸಾಧ್ಯವಾಗದಂತಹ ಪ್ರಜೆಗಳು **[ಸುವತೇ]** ಜನ್ಮತಳೆಯುವರು. **[ದೇವಾನಾಂ]** ಉತ್ತಮಗುಣಗಳ ಸೂರ್ಯಾದಿ ಪದಾರ್ಥಗಳಲ್ಲಿ **[ಮಹತ್]** ಎಲ್ಲದಕ್ಕಿಂತ ದೊಡ್ಡದಾದ **[ಅಸುರತ್ವಂ]** ಎಲ್ಲರಿಂದ ಎಸೆಯಲ್ಪಡುವ **[ಏಕಂ]** ಅದ್ವಿತೀಯ, ಚೇತನಸ್ವರೂಪ ಪರಮಾತ್ಮನನ್ನು ನೀವೆಲ್ಲರೂ ತಿಳಿಯಿರಿ.

**ಭಾವಾರ್ಥ:-** ಮನುಜರೇ! ಯಾವನು ಉತ್ಪನ್ನವಾದ ಉತ್ಪನ್ನವಾಗಿರುವ ಉತ್ಪನ್ನವಾಗಬೇಕಾದ ಪ್ರಜೆಗಳಲ್ಲಿ ವ್ಯಾಪ್ತನಾಗಿದ್ದು ಎಲ್ಲವನ್ನೂ ಧಾರಣೆ ಮಾಡುವ ಅಂತರ್ಯಾಮಿ ಪರಮಾತ್ಮನೋ ಅವನ ಉಪಾಸನೆಯನ್ನು ನೀವೆಲ್ಲರೂ ಮಾಡುವವರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶಯುಃ ಪರಸ್ತಾದಧ ನು ದ್ವಿಮಾತಾ-ಬಂಧನಶ್ಚರತಿ ವತ್ಸ ಏಕಃ ।**
**ಮಿತ್ರಸ್ಯ ತಾ ವರುಣಸ್ಯ ವ್ರತಾನಿ ಮಹದ್ದೇವಾನಾಮಸುರತ್ವಮೇಕಮ್ ॥೬॥**

**ಪದಾರ್ಥ:-** **[ಪರಸ್ತಾತ್]** ಅನ್ಯದೇಶದಿಂದ **[ಶಯುಃ]** ವ್ಯಾಪ್ತನಾಗಿ ಶಯನ ಮಾಡುವವನು **[ದ್ವಿಮಾತಾ]** ವಾಯ್ವಾಕಾಶಗಳೆಂಬ ಇಬ್ಬರು ಜನನಿಯರು ಇರುವಂತಹ ಅಗ್ನಿಯ **[ಅಬಂಧನಃ]** ಬಂಧನರಹಿತನ **[ವತ್ಸಃ]** ಮಗನಂತಿರುವ **[ಏಕಃ]** ಒಬ್ಬನೇ ಆಗ **[ನು, ಚರತಿ]** ಶೀಘ್ರಚಲಿಸುವಂತಹ **[ಅಥ]** ಇದರ ನಂತರ **[ದೇವಾನಾಂ]** ವಿದ್ವಾಂತರ **[ಮಹತ್]** ದೊಡ್ಡದಾದ **[ಏಕಂ]** ಅದ್ವಿತೀಯ ತೇಜಸ್ಸಿನ **[ಅಸುರತ್ವಂ]** ಎಸೆಯುವಿಕೆಯನ್ನು **[ತಾ]** ಅವುಗಳು **[ವ್ರತಾನಿ]** ಸತ್ಯಭಾಷಣಾದಿ ಕರ್ಮಗಳು **[ಮಿತ್ರಸ್ಯ]** ಸ್ನೇಹಿತನಾದ **[ವರುಣಸ್ಯ]** ಶ್ರೇಷ್ಠನಾದ ಪರಮಾತ್ಮನ ವ್ಯವಸ್ಥೆಯೇ ಆಗಿದೆ ಎಂದು ಭಾವಿಸಬೇಕು.

**ಭಾವಾರ್ಥ:-** ಮನುಜರೇ! ಯಾವ-ಯಾವ ಪದಾರ್ಥಗಳು ಈ ಪ್ರಪಂಚದಲ್ಲಿವೆಯೋ ಅವುಗಳೆಲ್ಲವುದರ ವ್ಯವಸ್ಥೆ ಮತ್ತು ವಿಚಿತ್ರರೂಪದ ಕಾರ್ಯಗಳು ಇವೆಯೋ ಅವೆಲ್ಲ ತಮ್ಮ ಪರಿಧಿಯಲ್ಲಿ ಸಂಚರಿಸುವವುಗಳಾಗಿ ಪ್ರಲಯಕ್ಕಿಂತ ಮೊದಲು ವಿನಾಶವಾಗುವುದಿಲ್ಲವೋ ಅದೆಲ್ಲವೂ ಪರಮಾತ್ಮನ ಕಾರ್ಯವಾಗಿದೆಯೆಂದು ತಿಳಿಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದ್ವಿಮಾತಾ ಹೋತಾ ವಿದಥೇಷು ಸಮ್ರಾ-ಳನ್ವಗ್ರಂ ಚರತಿ ಕ್ಷೇತಿ ಬುಧ್ನಃ ।**
**ಪ್ರ ರಣ್ಯಾನಿ ರಣ್ಯವಾಚೋ ಭರಂತೇ ಮಹದ್ದೇವಾನಾಮಸುರತ್ವಮೇಕಮ್ ॥೭॥**

**ಪದಾರ್ಥ:-** **[ದ್ವಿಮಾತಾ]** ವಾಯ್ವಾಕಾಶಗಳ ನಿರ್ಮಾತಾ ಯಾವ ಸೂರ್ಯನೋ ಅವನು **[ಹೋತಾ]** ಲೇವಾದೇವಿ ಮಾಡುವ **[ಬುಧ್ನಃ]** ಅಂತರಿಕ್ಷದಲ್ಲಿ ನೆಲೆಸಿದವನಾಗಿ **[ವಿದಥೇಷು]** ಪೃಥಿವ್ಯಾದಿ ಪದಾರ್ಥಗಳಲ್ಲಿ **[ಸಮ್ರಾಟ್]** ಉತ್ತಮ ರೀತಿಯ ಪ್ರಕಾಶವಂತನಾಗಿ **[ಅಗ್ರಂ]** ಎಲ್ಲವುಗಳ ಕೇಂದ್ರ ಸ್ಥಾನನಾಗಿದ್ದು **[ಅನು, ಚರತಿ]** ಎಲ್ಲರಿಗೂ ಪ್ರಾಪ್ತನಾಗುವನು. ಎಲ್ಲರನ್ನೂ ನೆಲೆಗೊಳಿಸುವನು. **[ರಣ್ಯಾನಿ]** ಬೇರೆ ಲೋಕಗಳಲ್ಲಿ ಉತ್ಪನ್ನವಾದವುಗಳನ್ನು

[ಪ್ರ, ಕ್ಷೇತಿ] ನೆಲೆಗೊಳಿಸುವನು. [ದೇವಾನಾಂ] ವಿದ್ಯಾವಂತರ [ಮಹತ್] ಮಹಿಮಾನ್ವಿತ [ಏಕಂ] ಅದ್ವಿತೀಯವಾದ [ಅಸುರತ್ವಂ] ಪ್ರಾಣಗಳಲ್ಲಿ ರಮಣಮಾಡುವ [ರಣ್ಯವಾಚಃ] ರಮಣೀಯ ವಚನಗಳನ್ನು [ಭರಂತೇ] ಧಾರಣೆ-ಪೋಷಣೆ ಮಾಡುವನು. ಅವನ ಉಪಾಸನೆ ಮಾಡಬೇಕು.

**ಭಾವಾರ್ಥ:-** ಜಗದೀಶ್ವರನು ಸೂರ್ಯಾದಿಗಳನ್ನು ಸೃಷ್ಟಿಸಿ ಅವುಗಳೆಲ್ಲವನ್ನೂ ಧಾರಣ-ಪೋಷಣಗಳನ್ನು ಮಾಡುತ್ತ ಸಮಗ್ರ ಪ್ರಪಂಚವನ್ನು ಪಾಲನೆ ಮಾಡುತ್ತಾನೆ ಮತ್ತು ತಾನು ಎಲ್ಲರಲ್ಲೂ ನೆಲೆಸಿದ್ದು ಎಲ್ಲವನ್ನೂ ತನ್ನಲ್ಲಿ ನೆಲೆಗೊಳಿಸಿಕೊಂಡಿರುವನು. ಅಂತಹ ಅದ್ವಿತೀಯನನ್ನೇ ವಿದ್ವಾಂಸರು ಸೇವೆ ಮಾಡುತ್ತಾರೆ. ಅಂತಹ ಪರಮೇಶ್ವರನ ಉಪಾಸನೆಯನ್ನೇ ಎಲ್ಲರೂ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶೂರಸ್ಯೇವ ಯುಧ್ಯತೋ ಅಂತಮಸ್ಯ ಪ್ರತೀಚೀನಂ ದದೃಶೇ ವಿಶ್ವಮಾಯತ್ ।**
**ಅಂತರ್ಮತಿಶ್ಚರತಿ ನಿಷ್ಷಿಧಂ ಗೋರ್ಮಹದ್ದೇವಾನಾಮಸುರತ್ವಮೇಕಮ್ ॥೮॥**

**ಪದಾರ್ಥ:-** [ಅಂತಮಸ್ಯ] ಸಮೀಪದಲ್ಲಿರುವಂತಹ [ಯುಧ್ಯತಃ] ಪ್ರಹಾರ ಮಾಡುತ್ತಲಿರುವ [ಶೂರಸ್ಯೇವ] ಶೂರನಂತೆ [ಪ್ರತೀಚೀನಂ] ನಂತರ ಉತ್ಪನ್ನವಾದ [ಆ, ಯತ್] ಪ್ರಾಪ್ತವಾಗುತ್ತ [ವಿಶ್ವಂ] ಸಂಪೂರ್ಣ ಪ್ರಪಂಚದ [ಅಂತಃ] ಮಧ್ಯದಲ್ಲಿ [ದದೃಶೇ] ಗೋಚರವಾಗುವನು. [ಗೋಃ] ವಾಣಿಯ [ಮಹತ್] ಅತಿಯಾಗಿ [ನಿಷ್ಷಿಧಂ] ಶಾಸನ ಮಾಡುವ [ದೇವಾನಾಂ] ವಿದ್ಯಾವಂತರಲ್ಲಿ [ಏಕಂ] ಅದ್ವಿತೀಯನಾಗಿ [ಅಸುರತ್ವಂ] ಜೀವಗಳಲ್ಲಿ ರಮಿಸುವ [ಮತಿಃ] ಬುದ್ಧಿವಂತನು [ಚರತಿ] ಸಂಚರಿಸುವನು ಅವನೇ ಬ್ರಹ್ಮನೆಂದು ಜನರು ತಿಳಿಯಬೇಕು.

**ಭಾವಾರ್ಥ:-** ಮನುಷ್ಯರೇ! ಯುದ್ಧ ಮಾಡುವವನು ತನ್ನ ಸಮೀಪದಲ್ಲಿರುವ ಶತ್ರುಗಳನ್ನು ನಾಶ ಮಾಡುವ ವೀರ-ಪುರುಷರ ಸಮೀಪದಲ್ಲಿ ಹೇಡಿಗಳು ಹೇಗೆ ತಿರಸ ತರಾಗುವರೋ ಹಾಗೆಯೇ ಅತಿಶಯ ಶಕ್ತಿಶಾಲಿ ಪರಮಾತ್ಮನೆದುರು ಸೂರ್ಯಾದಿ ಪ್ರಪಂಚವು ಕ್ಷುಲ್ಲಕವೆನಿಸಿ ತಿರಸ ತವಾಗುತ್ತದೆ. ವಿದ್ಯೆಗಳ ಗಣಿಯಂತಿರುವ ಪರಮಾತ್ಮನು ನಾಲ್ಕು ವೇದವಾಣಿಗಳೆಂಬ ಆಭರಣ ಧರಿಸಿದವರನ್ನು ಇಷ್ಟಪಡುತ್ತಾನೆ. ಅದರಂತೆ ನೀವೂ ವೇದವಾಣಿಯನ್ನು ಇಷ್ಟಪಡುವವರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಿ ವೇವೇತಿ ಪಲಿತೋ ದೂತ ಆ-ಸ್ವಂತರ್ಮಹಾಂಶ್ಚರತಿ ರೋಚನೇನ ।**
**ವಪೂಂಷಿ ಬಿಭ್ರದಭಿ ನೋ ವಿ ಚಷ್ಟೇ ಮಹದ್ದೇವಾನಾಮಸುರತ್ವಮೇಕಮ್ ॥೯॥**

**ಪದಾರ್ಥ:-** [ಆಸು] ಈ ಪ್ರಪಂಚದಲ್ಲಿ [ಅಂತಃ] ಒಳಗಡೆಯಲ್ಲಿ [ನಿ, ವೇವೇತಿ] ಪರಿಪೂರ್ಣ ವ್ಯಾಪ್ತನಾಗಿರುವನು. [ಪಲಿತಃ] ಶ್ವೇತಕೇಶಗಳಿಂದೊಡಗೂಡಿ [ದೂತಃ] ಸಮಾಚಾರ ತಲುಪಿಸುವವನಂತೆ [ಮಹಾನ್] ಎಲ್ಲ ಕಡೆ ವ್ಯಾಪಕನಾಗಿ [ರೋಚನೇನ] ತನ್ನ ಪ್ರಕಾಶದಿಂದ [ಚರತಿ] ಎಲ್ಲಾಕಡೆಗೆ ಪ್ರಾಪ್ತನಾಗುತ್ತಾನೆ. [ವಪೂಂಷಿ] ರೂಪಗಳನ್ನು [ಬಿಭ್ರತ್] ಧಾರಣ ಮಾಡುತ್ತ [ನಃ] ನಮ್ಮೆಲ್ಲರ [ಅಭಿ] [ವಿಚಷ್ಟೇ] ಎದುರಿಗೆ ವಿಶೇಷ ರೀತಿಯಿಂದ ಉಪದೇಶ ಮಾಡುತ್ತಾನೆ. [ದೇವಾನಾಂ] ವಿದ್ವಾಂಸರ [ಏಕಂ] ಅದ್ವಿತೀಯನಾಗಿ [ಅಸುರತ್ವಂ] ದೋಷತ್ಯಾಗಕ್ಕೆ ಕಾರಣನಾಗುವನು. [ಮಹತ್] ಆ ಮಹಾಮಹಿಮನನ್ನು ಅರ್ಚಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯೋಗಿಗಳು ಗಾಳಿಯ ಮೂಲಕವೇ ದೂರದೇಶದ ಸಮಾಚಾರವನ್ನು ತಿಳಿಯುವರೋ ಹಾಗೆ ಪರಮೇಶ್ವರನು ಅಂತರ್ಯಾಮಿಯಾಗಿ ಸಮಗ್ರ ಬ್ರಹ್ಮಾಂಡದ ಸಮಾಚಾರವನ್ನು ತಿಳಿಯುತ್ತಾನೆ ಮತ್ತು ಅವುಗಳೆಲ್ಲವುಗಳಲ್ಲಿ ನೆಲೆಸಿದವನಾಗಿ ಅವರವರ ಕರ್ಮಗಳಿಗನುಗುಣವಾಗಿ ಎಲ್ಲಾ ಜೀವಿಗಳಿಗೂ ಬೆಳಕು ನೀಡಿ ಫಲವನ್ನು ಕೊಡುತ್ತಾನೆ. ಅಂತಕರಣದಲ್ಲಿ ನೆಲೆಗೊಂಡು ನ್ಯಾಯ, ಅನ್ಯಾಯಗಳನ್ನು ಮಾಡಲು ಪ್ರೇರಣೆ ನೀಡುತ್ತಾನೆ. ಅವನೇ ಎಲ್ಲರಿಂದಲೂ ಗೌರವಿಸಲು ಯೋಗ್ಯನಾದ ಬ್ರಹ್ಮನಾಗಿರುತ್ತಾನೆ. ಅದನ್ನು ಬ್ರಹ್ಮವಸ್ತುವನ್ನು ನೀವೆಲ್ಲರೂ ತಿಳಿದುಕೊಳ್ಳಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿಷ್ಣುರ್ಗೋಪಾಃ ಪರಮಂ ಪಾತಿ ಪಾಥಃ ಪ್ರಿಯಾ ಧಾಮಾನ್ಯಮೃತಾ ದಧಾನಃ ।**
**ಅಗ್ನಿಷ್ಟಾ ವಿಶ್ವಾ ಭುವನಾನಿ ವೇದ ಮಹದ್ದೇವಾನಾಮಸುರತ್ವಮೇಕಮ್ ।।೧೦।।**

**ಪದಾರ್ಥ:-** **[ಅಗ್ನಿಃ]** ಅಗ್ನಿಯಂತೆ ತೇಜೋಮಯ ಸರ್ವವ್ಯಾಪಕನಾದ **[ವಿಷ್ಣುಃ]** ಚರಾಚರ ಪ್ರಪಂಚದ ಸ್ವಾಮಿಯು **[ಗೋಪಾಃ]** ಎಲ್ಲವನ್ನೂ ರಕ್ಷಿಸುವ ಪರಮೇಶ್ವರನು **[ಪರಮಂ]** ಅತ್ಯುತ್ತಮವಾದ **[ಪಾಥಃ]** ಪೃಥಿವ್ಯಾದಿಗಳ **[ಪ್ರಿಯಾ]** ಇಚ್ಛಿಸಲು / ಪ್ರೀತಿಸಲು ಯೋಗ್ಯವಾದ **[ಅಮೃತಾ]** ನಾಶರಹಿತ ಪ್ರಕೃತ್ಯಾದಿ **[ಧಾಮಾನಿ]** ಲೋಕಗಳನ್ನು **[ದಧಾನಃ]** ಧಾರಣ-ಪೋಷಣ ಮಾಡುತ್ತ **[ಪಾತಿ]** ರಕ್ಷಣೆ ಮಾಡುವನು. **[ತಾ]** ಅಂತಹ **[ವಿಶ್ವಾ]** ಸಮಗ್ರ **[ಭುವನಾನಿ]** ನಿವಾಸ ಸ್ಥಾನಗಳನ್ನು **[ವೇದ]** ತಿಳಿದಿರುವನು. **[ದೇವಾನಾಂ]** ಪೃಥಿವ್ಯಾದಿಗಳಲ್ಲಿ **[ಮಹತ್]** ಅತಿ ದೊಡ್ಡದಾದ **[ಏಕಂ]** ಅದ್ವಿತೀಯ ಬ್ರಹ್ಮನನ್ನು **[ಅಸುರತ್ವಂ]** ಎಲ್ಲವನ್ನು ತಿರಸ್ಕರಿಸುವ ಪರಮಾತ್ಮನನ್ನು ನೀವರಿಯಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ನೀವು ಈ ಪ್ರಪಂಚದಲ್ಲಿನ ಎಲ್ಲವನ್ನೂ ಸೃಷ್ಟಿಸುವವನೂ, ಧಾರಣ-ಪೋಷಣ ಮಾಡುವವನೂ ಎಲ್ಲಾ ಜೀವಿಗಳ ಹಿತಚಿಂತಕನೂ ಅವುಗಳಿಗೆಲ್ಲ ನಾನಾ ವಿಧ ಪದಾರ್ಥಗಳನ್ನು ನಿರ್ಮಿಸುವವನೂ ಆದ ಪರಮಾತ್ಮನನ್ನೇ ನೀವೆಲ್ಲರೂ ಪೂಜೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಾನಾ ಚಕ್ರಾತೇ ಯಮ್ಯಾ (ಆ) ೩ ವಪೂಂಷಿ ತಯೋರನ್ಯದ್ರೋಚತೇ ಕೃಷ್ಣಮನ್ಯತ್ ।**
**ಶ್ಯಾವೀ ಚ ಯದರುಷೀ ಚ ಸ್ವಸಾರೌ ಮಹದ್ದೇವಾನಾಮಸುರತ್ವಮೇಕಮ್ ।।೧೧।।**

**ಪದಾರ್ಥ:-** **[ದೇವಾನಾಂ]** ಪೃಥಿವ್ಯಾದಿಗಳ ಸಮೀಪದಿಂದ **[ಮಹತ್]** ದೊಡ್ಡದಾಗಿರುವ **[ಏಕಂ]** ಅದ್ವಿತೀಯವಾದ **[ಅಸುರತ್ವಂ]** ದೋಷನಾಶಕಗಳಲ್ಲಿ ನೆಲೆಗೊಂಡಿರುವ **[ಯತ್]** ಯಾವ **[ಶ್ಯಾವೀ]** ಅಂಧಕಾರ ರೂಪ **[ಯಮ್ಯಾ]** ಎಲ್ಲಾ ಬ್ರಹ್ಮಾಂಡವನ್ನೇ ನಿದ್ರೆಗೊಳಪಡಿಸುವ ರಾತ್ರಿಯು **[ಚ]** ಮತ್ತು **[ಅರುಷೀ]** ಪ್ರಕಾಶರೂಪ ಹಗಲೂ **[ಸ್ವಸಾರೌ]** ಸೋದರಿಯರಂತಿರುವ **[ನಾನಾ]** ಬಹುವಿಧ **[ವಪೂಂಷಿ]** ರೂಪಗಳನ್ನು **[ಚಕ್ರಾತೇ]** ಸೃಜಿಸುವರು **[ತಯೋ]** ಆ ಇಬ್ಬರಲ್ಲಿ **[ಅನ್ಯತ್]** ಅನ್ಯತರವಾದ ಬೆಳಗಿನ ರೂಪವು **[ರೋಚತೇ]** ಎಲ್ಲವನ್ನೂ ಪ್ರಕಾಶಮಾನಗೊಳಿಸುತ್ತದೆ. **[ಚ]** ಮತ್ತು **[ಕೃಷ್ಣಂ]** ಕಪ್ಪುಕೆಲಸಗಳನ್ನು **[ಅನ್ಯತ್]** ಮತ್ತೊಂದಾದ ರಾತ್ರಿಯು ಮಾಡುತ್ತದೆ. ಅವೆರಡೂ ಯಾವನಿಂದ ನಿಯಾಮಕಗೊಂಡಿವೆಯೋ ಅವನೇ ಬ್ರಹ್ಮ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಭೂಮಿಯನ್ನೂ ಸೂರ್ಯನನ್ನೂ ಸಂಚಾರ ಮಾಡುವ ವ್ಯವಸ್ಥೆ ಮಾದಿರುವನೋ ಅವನೇ ಬ್ರಹ್ಮ. ಅವನು ಈ ವ್ಯವಸ್ಥೆ ಮಾಡದಿದ್ದರೆ ರಾತ್ರಿಯಾಗಲೀ

ಹಗಲಾಗಲೀ ಆಗುವುದಕ್ಕೆ ಸಾಧ್ಯವೇ ಇರಲಿಲ್ಲ ಆ ಬ್ರಹ್ಮನು ಪುರುಷಾರ್ಥ ಸಾಧನೆಗಾಗಿ ಹಗಲನ್ನೂ ಮತ್ತು ವಿಶ್ರಮಿಸಲು ರಾತ್ರಿಯನ್ನು ನಿರ್ಮಿಸಿರುವನೆಂದು ತಿಳಿದು ಆ ಪರಮೇಶ್ವರನ ಧ್ಯಾನವನ್ನು ಹಗಲಿರುಳೂ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾತಾ ಚ ಯತ್ರ ದುಹಿತಾ ಚ ಧೇನೂ ಸಬರ್ದುಘೇ ಧಾಪಯೇತೇ ಸಮೀಚೀ ।**
**ಋತಸ್ಯ ತೇ ಸದಸೀಳೇ ಅಂತ-ರ್ಮಹದ್ದೇವಾನಾಮಸುರತ್ವಮೇಕಮ್ ॥೧೨॥**

**ಪದಾರ್ಥ:-** [**ತೇ**] ನಿನ್ನ [**ಸದಸಿ**] ಸಭೆಯಲ್ಲಿ [**ಯತ್ರ**] ಯಾವಾಗ [**ಮಾತಾ**] ಮಾತೆಯಂತಿರುವ ರಾತ್ರಿಯು [**ಚ**] ಮತ್ತು [**ದುಹಿತಾ**] ಕನ್ಯೆಯಂತಿರುವ ಉಷೆಯು [**ಚ**] ಮತ್ತು [**ಸಮೀಚೀ**] ಉತ್ತಮ ರೀತಿಯಾಗಿ ಪ್ರಾಪ್ತವಾಗುವವರಾಗಿ [**ಸಬರ್ದುಘೇ**] ಪೋಷಕವಾದ ಹಾಲಿನಂತಿರುವ ರಸದ ಪೂರ್ತಿಗಾಗಿ [**ಧೇನೂ**] ಹಸುವಿನಂತೆ ರಸಪ್ರದವಾದ [**ಋತಸ್ಯ**] ಸತ್ಯದ ಸಂಬಂಧದಿಂದ [**ಧಾಪಯೇತೇ**] ಪಾನಮಾಡಿಸುವ ರೀತಿಯಲ್ಲಿ ಸಭೆಯ [**ಅಂತಃ**] ಮಧ್ಯದಲ್ಲಿರುವ [**ಋತಸ್ಯ**] ಸತ್ಯದ [**ದೇವಾನಾಂ**] ಶ್ರೇಷ್ಠವಿದ್ಯಾವಂತರ [**ಮಹತ್**] ಮಹತ್ತಾದ [**ಏಕಂ**] ಅದ್ವಿತೀಯ [**ಅಸುರತ್ವಂ**] ದೋಷದೂರೀಕರಿಸುವವನನ್ನು [**ಈಳೇ**] ಸ್ತುತಿಸುವೆನು.

**ಭಾವಾರ್ಥ:-** ಯಾವ ಸಭಾಸದನು ಪರಮೇಶ್ವರನಿಗೆ ಹೆದರಿ ಅವನ ಆಜ್ಞೆಯಂತೆ ಹಗಲು - ರಾತ್ರಿಗಳು ಸೃಷ್ಟಿಯ ನಿಯಮಕ್ಕನುಗುಣವಾಗಿ ಪಾಲನೆ ಮಾಡುತ್ತಿರುವವೋ ಹಾಗೆಯೇ ಸಭೆಯಲ್ಲಿ ಧರ್ಮಕ್ಕೆ ವಿಜಯವೂ ಅಧರ್ಮಕ್ಕೆ ವಿನಾಶವೂ ಆಗುವಂತೆ ಮಾಡಿ ಪ್ರಜೆಗಳಿಗೆ ಆನಂದವನ್ನುಂಟುಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅನ್ಯಸ್ಯಾ ವತ್ಸಂ ರಿಹತೀ ಮಿಮಾಯ ಕಯಾ ಭುವಾ ನಿ ದಧೇ ಧೇನುರೂಧಃ ।**
**ಋತಸ್ಯ ಸಾ ಪಯಸಾಪಿನ್ವತೇಳಾ ಮಹದ್ದೇವಾನಾಮಸುರತ್ವಮೇಕಮ್ ॥೧೩॥**

**ಪದಾರ್ಥ:-** [**ದೇವಾನಾಂ**] ಪೃಥಿವ್ಯಾದಿ ಪದಾರ್ಥಗಳ [**ಮಹತ್**] ದೊಡ್ಡದಾದ [**ಏಕಂ**] ಅದ್ವಿತೀಯ [**ಅಸುರತ್ವಂ**] ದೋಷಗಳನ್ನು ನಿವಾರಿಸುವಂತಹ [**ಧೇನುಃ**] ಗೋವಿನಂತಿರುವ ರಾತ್ರಿಯು [**ಊಧಃ**] ಉಷಃಕಾಲವು [**ಅನ್ಯಸ್ಯಾಃ**] ಇವೆರಡರ ಮಧ್ಯದಲ್ಲಿರುವ ಮತ್ತೊಂದರ [**ವತ್ಸಂ**] ಕರುವಿನಂತೆ ಪಾಲನೆಗೆ ಯೋಗ್ಯವಾದದ್ದನ್ನು [**ರಿಹತೀ**] ನಾಶಗೊಳಿಸುತ್ತ [**ಕಯಾ**] ಯಾವುದರಿಂದ [**ಭುವಾ**] ಭೂಮಿಯೊಂದಿಗೆ [**ಮಿಮಾಯ**] ಅಳೆಯುತ್ತಾಳೆ. [**ನಿಃ ದಧೇ**] ಧಾರಣ ಮಾಡುತ್ತಾಳೆ. [**ಸಾ**] ಅವಳು [**ಋತಸ್ಯ**] ಸತ್ಯದ [**ಪಯಸಾ**] ನೀರಿನೊಂದಿಗೆ [**ಇಳಾ**] ಭೂಮಿಯು [**ಅಪಿನ್ವಂತ**] ಸೇಚನ ಮಾಡುವಳು/ಸೇಚನೆ ಮಾಡುವಳು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು ಹಗಲು-ರಾತ್ರಿಗಳ ರೂಪದಲ್ಲಿ ಪೃಥ್ವಿಯಲ್ಲಿರುವ ಪದಾರ್ಥಗಳಿಗೆ ಶಯನ ಜಾಗರಣ ರೂಪವಾದ ಪ್ರಯೋಜನವನ್ನು ಕೊಡದಿದ್ದರೆ ಕತ್ತಲು ಮಳೆಗಳಿಂದ ಈ ಭೂಮಿಯ ರಕ್ಷಣೆ ಮಾಡದಿದ್ದರೆ ದಿನ-ರಾತ್ರಿಗಳು ಸಂಭವಿಸುತ್ತಲೇ ಇರಲಿಲ್ಲ. ಜನಜೀವನವು ಶೂನ್ಯವಾಗುತ್ತಿತ್ತು. ಅಂತಹ ಮಹತ್ಕಾರ್ಯವೆಸಗುವ ಪರಮಾತ್ಮನ ಉಪಾಸನೆಯನ್ನು ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪದ್ಯಾ ವಸ್ತೇ ಪುರುರೂಪಾ ವಪೂಂ-ಷ್ಯೂರ್ಧ್ವಾ ತಸ್ಥೌ ತ್ರ್ಯವಿಂ ರೇರಿಹಾಣಾ ।**
**ಋತಸ್ಯ ಸದ್ಮ ವಿ ಚರಾಮಿ ವಿದ್ವಾನ್ ಮಹದ್ದೇವಾನಾಮಸುರತ್ವಮೇಕಮ್ ॥೧೪॥**

**ಪದಾರ್ಥ:-** [**ವಿದ್ವಾನ್**] ವಿದ್ಯಾವಂತನಾದ ನಾನು [**ಋತಸ್ಯ**] ಸತ್ಯವಂತರಾದ [**ದೇವಾನಾಂ**] ವಿದ್ಯಾವಂತರಿಗೆ [**ಮಹತ್**] ಅತಿಶಯವಾದ [**ಏಕಂ**] ಅದ್ವಿತೀಯವಾದ [**ಸದ್ಮ**] ಸ್ಥಾನವನ್ನು [**ಅಸುರತ್ವಂ**] ದೋಷ ನಿವಾರಣೆ ಮಾಡುವವನನ್ನು [**ವಿ, ಚರಾಮಿ**] ಪಡೆದುಕೊಳ್ಳುವೆನು. ಅವನಿಂದ [**ಪದ್ಯಾ**] ದಿನದ ಬಿಂದು ಭಾಗದಲ್ಲಿ ಆಗುವಂತಹ ರಾತ್ರಿಯನ್ನು [**ವಸ್ತೇ**] ಮರೆ ಮಾಡುತ್ತ ಸುತ್ತುವರೆಯುವವಳಾದ [**ಅನ್ಯಾ**] ಇನ್ನೊಬ್ಬಳು [**ತ್ರ್ಯವಿಂ**] ಕಾರ್ಯ, ಕಾರಣ ಮತ್ತು ಜೀವನಾತ್ಮಕ ಎಂಬ ಮೂರು ವಸ್ತುಗಳ ರಕ್ಷಣೆ ಮಾಡುವವಳಾದ [**ವಪೂಂಷಿ**] ರೂಪಗಳನ್ನು [**ರೇರಿಹಾಣಾ**] ಚಪ್ಪರಿಸುವವಳಾಗಿ [**ಊರ್ಧ್ವಾ**] ಉತ್ತಮ [**ಪುರುರೂಪಾ**] ಬಹುರೂಪಿಯಾದ ಉಷೆಯು [**ತಸ್ಥೌ**] ಬಂದು ನೆಲೆಸುವಳು.

**ಭಾವಾರ್ಥ:-** ಮನುಷ್ಯರೇ! ಹಗಲು ಹೇಗೆ ನಾನಾವಿಧ ರೂಪಗಳನ್ನು ಪ್ರಕಟಿಸುತ್ತದೆಯೋ ಹಾಗೆಯೇ ರಾತ್ರಿಯು ಅವೆಲ್ಲವನ್ನೂ ಸುತ್ತುವರೆದು ಮರೆ ಮಾಡುತ್ತದೆ. ಈ ಎಲ್ಲವೂ ಸತ್ಯದ ಕಾರಣದಿಂದ ಉಂಟಾಗಿದೆ. ಹೀಗೆಯೇ ಮುಂದೆ ಉಂಟಾಗುವವುಗಳೂ ಸಹ ಆ ಪರಮೇಶ್ವರನ ಇಚ್ಛಾಶಕ್ತಿಗೆ ಒಳಪಟ್ಟವುಗಳಾಗಿವೆ. ಆ ಪರಮೇಶ್ವರನನ್ನು ನೀವೆಲ್ಲರೂ ತಿಳಿದುಕೊಳ್ಳಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪದೇ ಇವ ನಿಹಿತೇ ದಸ್ಮೇ ಅಂತ-ಸ್ತಯೋರನ್ಯದ್ಗುಹ್ಯಮಾವಿರನ್ಯತ್ ।**
**ಸಧ್ರಿಚೀನಾ ಪಥ್ಯಾ (ಆ) ೩ ಸಾ ವಿಷೂಚೀ ಮಹದ್ದೇವಾನಾಮಸುರತ್ವಮೇಕಮ್ ॥೧೫॥**

**ಪದಾರ್ಥ:-** [**ದೇವಾನಾಂ**] ವಿದ್ಯಾವಂತರ [**ಮಹತ**] ದೊಡ್ಡದಾದ [**ಏಕಂ**] ಅದ್ವಿತೀಯವಾದ [**ಅಸುರತ್ವಂ**] ದೋಷವನ್ನು ನಿವಾರಿಸುವಂತಹವನು [**ದಸ್ಮೇ**] ನಾಶಗೊಳ್ಳುವಂತಹ [**ಪದೇ, ಇವ**] ಸ್ಥಾನಗಳಂತೆ [**ನಿಹಿತೇ**] ಧಾರಣ ಮಾಡಿರುವ ರಾತ್ರಿ ಮತ್ತು ದಿನಗಳು ವರ್ತಮಾನವಾಗಿದೆ. [**ಸಧ್ರೀಚೀನಾ**] ಜೊತೆ ಜೊತೆಯಲ್ಲಿ ಸೇವನೆ ಮಾಡುವವರಾಗಿ [**ಪಥ್ಯಾ**] ತನ್ನ ಪಥವನ್ನು ಬಿಟ್ಟು ಇನ್ನೊಂದನ್ನು ತಿಳಿಯದವರಾಗಿ [**ಸಾ**] ಅವಳು [**ವಿಷೂಚೀ**] ತನ್ನಲ್ಲಿ ವ್ಯಾಪ್ತವಾದ ಪದಾರ್ಥಗಳನ್ನು ಸೇವಿಸುವಳು. [**ತಯೋಃ**] ಅವರಿಬ್ಬರ [**ಅಂತಃ**] ಮಧ್ಯದಲ್ಲಿ [**ಅನ್ಯತ್**] ಒಂದು [**ಗುಹ್ಯಂ**] ಗುಪ್ತವಾದದ್ದನ್ನು [**ಅನ್ಯತ್**] ಮತ್ತೊಂದು [**ಆವಿಹಿ**] ಪ್ರಕಟವಾದದನ್ನು ರಕ್ಷಣೆ ಮಾಡುತ್ತಾಳೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ಹೇಗೆ ಎರಡು ಕಾಲುಗಳಿಂದ ಚಲಿಸುವರೋ, ಹಾಗೆಯೇ ದಿನವೆಂಬುದು ಹಗಲು ರಾತ್ರಿಗಳೆಂಬ ಎರಡು ಕಾಲುಗಳಿಂದ ಚಲಿಸುತ್ತದೆ. ಹಗಲು ಹೇಗೆ ಹಿತವೋ, ರಾತ್ರಿಯು ಹಾಗೆಯೇ ಅಹಿತಕರವಾದುದು. ಅದೇ ರೀತಿ ಸರ್ವಾಂತರಯಾಮಿ ಬ್ರಹ್ಮನನ್ನು ತ್ಯಜಿಸಿ ಬೇರೆ ಯಾವುದರದ್ದೇ ಉಪಾಸನೆ ಮಾಡುವುದು ಪಥ್ಯವಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ಧೇನವೋ ಧುನಯಂತಾಮಶಿಶ್ವೀಃ ಸಬರ್ದುಘಾಃ ಶಶಯಾ ಅಪ್ರದುಗ್ಧಾಃ ।**
**ನವ್ಯಾನವ್ಯಾ ಯುವತಯೋ ಭವಂತೀ-ರ್ಮಹದ್ದೇವಾನಾಮಸುರತ್ವಮೇಕಮ್ ॥೧೬॥**

**ಪದಾರ್ಥ:-** [**ಸಬರ್ದುಘಾಃ**] ಎಲ್ಲರ ಮನೋಕಾಮನೆಯನ್ನು ಪೂರೈಸುವ [**ಶಶಯೋಃ**] ಶಯನ ಮಾಡುತ್ತಿರುವಳೋ ಎಂಬಂತೆ ಭಾಸವಾಗುವ [**ಅಪ್ರದುಗ್ಧಾಃ**] ಎಲ್ಲ ರೀತಿಯ ಕಾಮನೆಗಳನ್ನು ಪೂರ್ಣಗೊಳಿಸುವವಳು ಆದ [**ಧೇನವಃ**] ಮಾತುಗಳು [**ಅಶಿಶ್ವೀಃ**] ಶಿಶುವಲ್ಲದವರ [**ನವ್ಯಾನವ್ಯಾಃ**] ನವೀನ-ಪ್ರಾಚೀನವಾಗುತ್ತ [**ಭವಂತೀಃ**]

ನೆಲೆಗೊಳ್ಳುವವರಾಗಿ **[ಯುವತಯಃ]** ಯೌವನಾವಸ್ಥೆಯನ್ನು ಪಡೆದ ಸ್ತ್ರೀಯರಂತೆ **[ದೇವಾನಾಂ]** ವಿದ್ಯಾವಂತರಿಗೆ **[ಮಹತ್]** ಹಿರಿದಾದ **[ಏಕಂ]** ಅದ್ವಿತೀಯವಾದ **[ಅಸುರತ್ವಂ]** ದೋಷವನ್ನು ದೂರಗೊಳಿಸುವ **[ಆ, ಧುನಯಂತಂ]** ಉತ್ತಮ ರೀತಿಯಲ್ಲಿ ಕಂಪನೆಗೆ ಒಳಪಡಿಸುತ್ತವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಪ್ರಥಮಾವಸ್ಥೆಯಲ್ಲಿರುವ ಶಿಶುವು ದ್ವಿತೀಯಾವಸ್ಥೆಯನ್ನು ಪಡೆಯುತ್ತಿದ್ದಂತೆ ವಿದ್ಯಾವತಿಯರಾಗಿ ತೃತೀಯಾವಸ್ಥೆಗೆ ತಲುಪುವ ಯುವತಿಯರು ತನಗೆ ಸದೃಶನಾದ ಪತಿಯರನ್ನು ಪಡೆದು ಸಂತೋಷಗೊಳ್ಳುತ್ತಾರೋ, ಅದೇ ರೀತಿ ವಿದ್ಯೆಯಿಂದೊಡಗೂಡಿದ ವಾಣಿಯನ್ನು/ ಸುಶಿಕ್ಷಿತ ನುಡಿಯನ್ನು ಪಡೆದು ವಿದ್ಯಾವಂತರು ಸಂತುಷ್ಟರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದನ್ಯಾಸು ವೃಷಭೋ ರೋರವೀತಿ ಸೋ ಅನ್ಯಸ್ಮಿನ್ ಯೂಥೇ ನಿ ದಧಾತಿ ರೇತಃ ।**
**ಸ ಹಿ ಕ್ಷಪಾವಾನ್ತ್ಸ ಭಗಃ ಸ ರಾಜಾ ಮಹದ್ದೇವಾನಾಮಸುರತ್ವಮೇಕಮ್ ॥೧೭॥**

**ಪದಾರ್ಥ:-** **[ಯತ್]** ಯಾವನು **[ಅನ್ಯಾಸು]** ರಾತ್ರಿ ಉಷಸ್ಸುಗಳಲ್ಲಿ **[ವೃಷಭಃ]** ಬಲಿಷ್ಠನು **[ರೋರವೀತಿ]** ಅತಿಶಯ ಶಬ್ದ ಮಾಡುವನೋ **[ಸಃ]** ಅವನು **[ಅನ್ಯಸ್ಮಿನ್]** ಬೇರೆ **[ಯೂಥ]** ಚಂದ್ರಾದಿಗಳ ಸಮೂಹದಲ್ಲಿ **[ರೇತಃ]** ಪರಾಕ್ರಮವನ್ನು **[ನಿದಧಾತಿ]** ಸ್ಥಾಪಿಸುತ್ತಾನೆ. **[ಹಿ]** ಅದರಿಂದ **[ಸಃ]** ಅವನು **[ಕ್ಷಪಾವಾನ್]** ರಾತ್ರಿಯ ಸಂಬಂಧಿಯಾಗುವನು. **[ಸಃ]** ಅವನು **[ಭಗಃ]** ಐಶ್ವರ್ಯದಾಯಕ ಸೂರ್ಯನು. **[ಸಃ]** ಅವನು **[ರಾಜಾ]** ಪ್ರಕಾಶಮಾನನು. **[ದೇವಾನಾಂ]** ವಿದ್ಯಾವಂತರಲ್ಲಿ **[ಮಹತ್]** ಮಹಿಮಾನ್ವಿತನು, **[ಏಕಂ]** ಅದ್ವಿತೀಯನು, **[ಅಸುರತ್ವಂ]** ದೋಷನಿವಾರಕನು.

**ಭಾವಾರ್ಥ:-** ಮನುಷ್ಯರೇ! ಸೂರ್ಯನು ರಾತ್ರಿಯ ಕೊನೆಯಲ್ಲಿ ಮತ್ತು ಹಗಲಿನ ಆದಿಯಲ್ಲಿ ಎಲ್ಲರನ್ನೂ ಎಚ್ಚರಿಸಿ ಎಲ್ಲಾ ಜೀವಿಗಳನ್ನು ಶಬ್ದಗುಣಕರನ್ನಾಗಿಸಿ ವ್ಯವಹಾರಗಳನ್ನು ನಡೆಸಿ. ಸಂಪತ್ತನ್ನು ಪ್ರಾಪ್ತಿಗೊಳಿಸುತ್ತಾನೆ. ಚಂದ್ರಾದಿಗಳ ಮೇಲೆ ತನ್ನ ಕಿರಣವನ್ನು ಸಂಯೋಜಿಸಿ ಪ್ರಕಾಶಿಸುವಂತೆ ಮಾಡುವನು. ಆ ಸೂರ್ಯನು ಪ್ರಕಾಶಮಾನ ಜಗದೀಶ್ವರನಿಂದ ಜನ್ಮ ಪಡೆದವನಾಗಿರುವನು.

ಈಶ್ವರನ ಗುಣಗಳನ್ನಿಲ್ಲಿ ಹೇಳಲಾಗಿದೆ.

**ವೀರಸ್ಯ ನು ಸ್ವಶ್ವ್ಯಂ ಜನಾಸಃ ಪ್ರ ನು ವೋಚಾಮ ವಿದುರಸ್ಯ ದೇವಾಃ ।**
**ಷೋಳ್ಹಾ ಯುಕ್ತಾಃ ಪಂಚಪಂಚಾ ವಹಂತಿ ಮಹದ್ದೇವಾನಾಮಸುರತ್ವಮೇಕಮ್ ॥೧೮॥**

**ಪದಾರ್ಥ:-** **[ಜನಾಸಃ]** ವಿದ್ಯಾವಂತ ಮನುಷ್ಯರೇ! **[ಅಸ್ಯ]** ಈ **[ವೀರಸ್ಯ]** ವೀರಪುರುಷನ **[ಸ್ವಶ್ವ್ಯಂ]** ಅಶ್ವ ವಿಷಯಕ ಉತ್ತಮ ವಚನವನ್ನು **[ನು]** ಶೀಘ್ರವಾಗಿ **[ಪ್ರ, ವೋಚಾಮ]** ಉಪದೇಶ ಮಾಡೋಣ. **[ಯುಕ್ತಾಃ]** ಸಂಯುಕ್ತರಾಗಿ **[ದೇವಾಃ]** ವಿದ್ಯಾಮಂತರು **[ದೇವಾನಾಂ]** ವಿದ್ಯಾಮಂತರಲ್ಲಿ **[ಮಹತ್]** ಮಹಿಮಾನ್ವಿತನಾದ **[ಏಕಂ]** ಒಬ್ಬನಾದ **[ಅಸುರತ್ವಂ]** ದೋಷ ನಿವಾರಕನನ್ನು **[ವಿದುಃ]** ತಿಳಿಯುವರು. **[ಷೋಢಾ]** ಆರು ಬಗೆಯ ಸಂಯುಕ್ತ ಇಂದ್ರಿಯಗಳು **[ಪಂಚಪಂಚ]** ಐದೈದು ಪ್ರಾಣಗಳನ್ನು **[ಆ, ವಹಂತಿ]** ಪಡೆದುಕೊಳ್ಳುತ್ತವೆ. ಈ ಬ್ರಹ್ಮನನ್ನು **[ನು]** ಶೀಘ್ರ ತಿಳಿಯಪಡಿಸೋಣ.

**ಭಾವಾರ್ಥ:-** ಮನುಷ್ಯರೇ! ಯಾವನನ್ನು ಪಡೆಯಲು ಪಂಚಪ್ರಾಣಗಳು ಕಾರಣವಾಗಿವೆಯೋ ಯಾವನನ್ನು ಯೋಗಿಗಳು ಸಮಾಧಿಯಿಂದ ತಿಳಿದುಕೊಳ್ಳುವರೋ ಅಂತಹ ಬ್ರಹ್ಮೋಪಾಸನೆಯನ್ನು ಮಾಡಿರಿ. ಅವನೇ ಭೃತ್ಯರಿಗೆ ಕರ್ಮೇಂದ್ರಿಯಗಳಿಗೆ ಪ್ರಚೋದನೆ ನೀಡುವವನು ಎಂಬುದಾಗಿ ತಿಳಿಯಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ಪುಪೋಷ ಪ್ರಜಾಃ ಪುರುಧಾ ಜಜಾನ ।**

**ಇಮಾ ಚ ವಿಶ್ವಾ ಭುವನಾನ್ಯಸ್ಯ ಮಹದ್ದೇವಾನಾಮಸುರತ್ವಮೇಕಮ್ ॥೧೯॥**

**ಪದಾರ್ಥ:-** [**ತ್ವಷ್ಟಾ**] ಪ್ರಕಾಶಕರನಾದ ಪರಮೇಶ್ವರನು [**ದೇವಃ**] ಪ್ರಕಾಶಮಾನನಾದ [**ವಿಶ್ವರೂಪಃ**] ಸಮಗ್ರ ರೂಪವಂತನು [**ಸವಿತಾ**] ಪ್ರೇರಣಾದಾಯಕ ಸೂರ್ಯ ಮಂಡಲಕ್ಕೆ ಸಮನಾದವನು [**ಪ್ರಜಾಃ**] ಜನ್ಯ ಸಮಸ್ತ ಪದಾರ್ಥಗಳನ್ನು [**ಪುಪೋಷ**] ಪೋಷಣೆ ಮಾಡುವನು. [**ಇಮಾಃ**] ಈ [**ವಿಶ್ವಾ**] ಸಮಗ್ರ [**ಭುವನಾನಿ**] ಲೋಕಗಳನ್ನು [**ಚ**] ಹಾಗೂ [**ಪುರುಧಾ**] ಬಹುವಿಧವಾಗಿ [**ಜಜಾನ**] ಸೃಷ್ಟಿ ಮಾಡುವನು. [**ಅಸ್ಯ**] ಈ ಪರಮೇಶ್ವರನ [**ದೇವಾನಾಂ**] ವಿದ್ವಾಂಸರ ಮಧ್ಯದಲ್ಲಿ [**ಏಕಂ**] ಅದ್ವಿತೀಯನು [**ಅಸುರತ್ವಂ**] ದೋಷ ನಿವಾರಕನೆಂಬುದಾಗಿ ತಿಳಿಯಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಸೂರ್ಯನು ಜಗತ್ತಿನ ಪಾಲನೆ ಮಾಡುವನೋ ಹಾಗೆಯೇ ಪರಮೇಶ್ವರನು ಸೂರ್ಯಾದಿಯಾಗಿ ಸಮಗ್ರ ಬ್ರಹ್ಮಾಂಡವನ್ನೇ ಸೃಷ್ಟಿಸಿ ರಕ್ಷಣೆ ಮಾಡುತ್ತಾನೆ. ಇದೇ ಪರಮಾತ್ಮನ ಅತಿ ದೊಡ್ಡ ಹಾಗೂ ಆಶ್ಚರ್ಯಕರ ಕರ್ಮವಾಗಿರುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹೀ ಸಮೈರಚ್ಚಮ್ವಾ ಸಮೀಚೀ ಉಭೇ ತೇ ಅಸ್ಯ ವಸುನಾ ನ್ಯೃಷ್ಟೇ ।**

**ಶೃಣ್ವೇ ವೀರೋ ವಿಂದಮಾನೋ ವಸೂನಿ ಮಹದ್ದೇವಾನಾಮಸುರತ್ವಮೇಕಮ್ ॥೨೦॥**

**ಪದಾರ್ಥ:-** [**ತೇ**] ಆ [**ಉಭೇ**] ಇಬ್ಬರೂ [**ಮಹೀ**] ಮಹತ್ತಾದ [**ಸಮೀಚೀ**] ಅಂತರಿಕ್ಷ ಮತ್ತು ಭೂಮಿಗಳನ್ನು [**ಚಮ್ವಾ**] ಸೇನೆಯ ರೀತಿಯಲ್ಲಿ [**ಸಂ, ಐರತ್**] ಪ್ರೇರಣೆ ನೀಡುವನು. ಅವೆರಡೂ [**ಅಸ್ಯ**] ಇವನ [**ವಸುನಾ**] ದ್ರವ್ಯಗಳೊಂದಿಗೆ [**ನ್ಯೃಷ್ಟೇ**] ನಿಶ್ಚಿತ ಸ್ವರೂಪವನ್ನು ಪಡೆದುಕೊಂಡಿವೆ. [**ದೇವಾನಾಂ**] ವಿದ್ಯಾವಂತರ [**ಮಹತ್**] ದೊಡ್ಡದಾದ [**ಏಕಂ**] ಒಂದು [**ಅಸುರತ್ವಂ**] ದೋಷ ನಿವಾರಕನನ್ನು [**ವಸೂನಿ**] ಧನಗಳನ್ನು [**ವಿಂದಮಾನಃ**] ಪಡೆಯುವವನಾಗಿ [**ವೀರಃ**] ಬಲಿಷ್ಠ ಬ್ರಹ್ಮನನ್ನು [**ಶೃಣ್ವೇ**] ಪ್ರತಿದಿನವೂ ಶ್ರವಣ ಮಾಡುವೆನು.

**ಭಾವಾರ್ಥ:-** ಯಾರೇ ಆಗಲೀ ಪರಮೇಶ್ವರನ ಇಚ್ಛೆ ಇಲ್ಲದೇ ಐಶ್ವರ್ಯವಂತನಾಗುವುದಿಲ್ಲ ಮತ್ತು ಯಥಾರ್ಥ ನುಡಿಯುವವರ ಉಪದೇಶ ಕೇಳದೇ ಪರಮೇಶ್ವರನ ಅರಿವು ಆಗುವುದಿಲ್ಲ. ಆದ್ದರಿಂದಲೇ ಪ್ರತಿಯೊಬ್ಬರೂ ಪರಮೇಶ್ವರನ ಆಜ್ಞೆಯನ್ನು ಪಾಲಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಾಂ ಚ ನಃ ಪೃಥಿವೀಂ ವಿಶ್ವಧಾಯಾ ಉಪ ಕ್ಷೇತಿ ಹಿತಮಿತ್ರೋ ನ ರಾಜಾ ।**

**ಪುರಃಸದಃ ಶರ್ಮಸದೋ ನ ವೀರಾ ಮಹದ್ದೇವಾನಾಮಸುರತ್ವಮೇಕಮ್ ॥೨೧॥**

**ಪದಾರ್ಥ:-** [**ನಃ**] ನಮ್ಮ [**ಇಮಾಂ**] ಈ ಅಂತರಿಕ್ಷವನ್ನು [**ಚ**] ಮತ್ತು [**ಪೃಥಿವೀಂ**] ಭೂಮಿಯನ್ನು [**ವಿಶ್ವಧಾಯಾಃ**] ಎಲ್ಲವನ್ನೂ ಧಾರಣ ಮಾಡುವ ಭೂಮಂಡಲದ [**ಹಿತಮಿತ್ರಃ**] ಮಿತ್ರರನ್ನು ಧಾರಣ ಮಾಡುವವನಾದ [**ರಾಜಾ**] ವಿದ್ಯಾ-ವಿನಯ ಭೂಷಿತ ಅಧಿಪತಿಯಿಂದ [**ನ**] ಸದೃಶನಾಗಿ [**ಉಪ, ಕ್ಷೇತಿ**] ವಾಸಿಸುವನು. [**ಪುರಃ ಸದಃ**] ಮುಂದೆ ಚಲಿಸುವ [**ಶರ್ಮಸದಃ**] ಮನೆಯಲ್ಲಿರುವ [**ವೀರಾಃ**] ಕ್ಷಾತ್ರಗುಣಗಳಿರುವ ಶೂರರಿಗೆ [**ನ**]

ಸದೃಶವಾಗಿ **[ದೇವಾನಾಂ]** ಪ್ರಕಾಶಮಾನ ರಾಜರಲ್ಲಿ **[ಮಹತ್]** ದೊಡ್ಡದಾದ **[ಏಕಂ]** ಒಂದು ಅದ್ವಿತೀಯ **[ಅಸುರತ್ವಂ]** ಶತ್ರುನಾಶಕ ಗುಣವಿದೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಯಾರು ಧರ್ಮಾತ್ಮ ರಾಜನಿಗೆ ಸದೃಶನಾಗಿ ಈ ಜಗತ್ತಿನಲ್ಲಿ ನೆಲೆಸುವನೋ ಧನುರ್ವೇದಬಲ್ಲ ಶೂರ ಪುರುಷನಂತೆ ಜಯಗಳಿಸುತ್ತಾನೋ ಅವನೇ ಬ್ರಹ್ಮ. ಅವನ ಉಪಾಸನೆಯನ್ನೇ ಎಲ್ಲರೂ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಿಷ್ಷಿದ್ವರೀಸ್ತ ಓಷಧೀರುತಾಪೋ ರಯಿಂ ತ ಇಂದ್ರ ಪೃಥಿವೀ ಬಿಭರ್ತಿ ।**
**ಸಖಾಯಸ್ತೇ ವಾಮಭಾಜಃ ಸ್ಯಾಮ ಮಹದ್ದೇವಾನಾಮಸುರತ್ವಮೇಕಮ್ ॥೨೨॥**

**ಪದಾರ್ಥ:-** [ಇಂದ್ರ] ಶ್ರೇಷ್ಠ ಸಂಪತ್ತನ್ನು ಕೊಡುವ ಪರಮಾತ್ಮನೇ! **[ತೇ]** ನಿನ್ನ ಸೃಷ್ಟಿಯಲ್ಲಿ **[ಪೃಥಿವೀ]** ಭೂಮಿಯ **[ನಿಷದ್ವರೀಃ]** ಅತಿಶಯ ಮಂಗಳಕಾರಕಳು **[ಓಷಧೀಃ]** ಸೋಮಲತಾದಿ ಓಷಧಿಗಳನ್ನು **[ಭಿಭರ್ತಿ]** ಧಾರಣ-ಪೋಷಣ ಮಾಡುವವಳು. **[ಉತ]** ಮತ್ತು **[ತೇ]** ನಿನ್ನ **[ಆಪಃ]** ಜಲ **[ರಯಿಂ]** ಸಂಪತ್ತನ್ನು ಧಾರಣ ಮಾಡುವವಳು ಅವಳೇ. **[ದೇವಾನಾಂ]** ಸೂರ್ಯಾದಿ ಅನ್ಯ ಪದಾರ್ಥಗಳಲ್ಲಿ **[ಮಹತ್]** ಅತಿ ದೊಡ್ಡದಾದ **[ಏಕಂ]** ಅದ್ವಿತೀಯ **[ಅಸುರತ್ವಂ]** ಶತ್ರುನಾಶಕ ಗುಣ ಪಡೆದು **[ತೇ]** ನಿನ್ನ **[ವಾಮಭಾಜಃ]** ಉತ್ತಮ ಕರ್ಮಗಳ ಸೇವನೆ ಮಾಡಿ ಭೋಗಿಸುವ **[ಸಖಾಯಃ]** ಸ್ನೇಹಿತರು **[ಸ್ಯಾಮ]** ನಾವಾಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಜಗದೀಶ್ವರನೇ! ನೀನು ನಮ್ಮೆಲ್ಲಾ ಜೀವಿಗಳಿಗೆ ಸುಖಕ್ಕಾಗಿ ನಿನ್ನ ಸೃಷ್ಟಿಯಲ್ಲಿ ಅನೇಕ ವಿಧವಾದ ಓಷಧಿ-ವನಸ್ಪತಿಗಳನ್ನೂ ನೀರನ್ನು ಉತ್ಪಾದಿಸಿರುವೆಯೋ ಆದ್ದರಿಂದ ನಾವು ನಿನ್ನ ಉಪಾಸಕರಾಗೋಣ. ನಿನ್ನನ್ನು ಬಿಟ್ಟು ಅನ್ಯರ ಉಪಾಸನೆ ಎಂದೂ ಮಾಡುವುದಿಲ್ಲ.

ಈ ಸೂಕ್ತದಲ್ಲಿ ಹಗಲು, ರಾತ್ರಿ, ವಿದ್ವಾಂಸರು, ಅಂತರಿಕ್ಷ, ಭೂಮಿ, ರಾಜಧರ್ಮ ಮತ್ತು ಈಶ್ವರ ಇವೆಲ್ಲವುಗಳ ಗುಣ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ಐವತ್ತೈದನೆಯ ಸೂಕ್ತ ಸಮಾಪ್ತ

# ॥ ಇತಿ ತೃತೀಯೋಽಧ್ಯಾಯಃ ॥

# ಚತುರ್ಥೋಽಧ್ಯಾಯಃ

## ಸೂಕ್ತ ೫೬

ಮಂತ್ರಸಂಖ್ಯೆ ೮ । ಪ್ರಜಾಪತಿರ್ವೈಶ್ವಾಮಿತ್ರಃ ವಾಚ್ಯೋ ವಾ ಋಷಿಃ । ವಿಶ್ವೇದೇವಾ ದೇವತಾಃ । ೧, ೬, ೮ ನಿಚೃತ್ತ್ರಿಷ್ಟುಪ್, ೨, ೪ ವಿರಾಟ್ ತ್ರಿಷ್ಟುಪ್, ೫, ೭ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಇಲ್ಲಿ ಈಶ್ವರನ ಗುಣ ಹೇಳಲಾಗಿದೆ.

**ನ ತಾ ಮಿನಂತಿ ಮಾಯಿನೋ ನ ಧೀರಾ ವ್ರತಾ ದೇವಾನಾಂ ಪ್ರಥಮಾ ಧ್ರುವಾಣಿ ।**
**ನ ರೋದಸೀ ಅದ್ರುಹಾ ವೇದ್ಯಾಭಿ-ರ್ನ ಪರ್ವತಾ ನಿನಮೇ ತಸ್ಥಿವಾಂಸಃ ॥೧॥**

**ಪದಾರ್ಥ:-** **[ದೇವಾನಾಂ]** ಯಥಾರ್ಥ ನುಡಿಯುವ ವಿದ್ವಾಂಸರಲ್ಲಿ **[ಪ್ರಥಮಾ]** ಯಾರು ಆದಿಯಲ್ಲಿರುವನೋ **[ಧ್ರುವಾಣಿ]** ಅಖಂಡಿತ **[ವ್ರತಾ]** ಉತ್ತಮ ಕರ್ಮ ಮಾಡಿರುವ / ರಚಿಸಿರುವ **[ತಾ]** ಅವುಗಳ **[ಮಾಯಿನಃ]** ನಿಂದೆ ಮಾಡುವವರು **[ನ]** **[ಮಿನಂತಿ]** ನಾಶ ಮಾಡುವುದಿಲ್ಲ. **[ಧೀರಾಃ]** ಧ್ಯಾನ ಮಾಡುವ ಶ್ರೇಷ್ಠ ಪುರುಷರೂ ನಾಶಮಾಡುವುದಿಲ್ಲ. **[ರೋದಸೀ]** ಭೂಮ್ಯಂತರಿಕ್ಷಗಳೂ **[ನ]** ನಾಶಮಾಡುವುದಿಲ್ಲ. **[ಅದ್ರುಹಾ]** ದ್ರೋಹರಹಿತರೂ **[ನ]** ನಾಶ ಮಾಡುವುದಿಲ್ಲ. **[ವೇದ್ಯಾಭಿಃ]** ತಿಳಿದಿರುವ ಯೋಗ್ಯ ಪ್ರಜೆಗಳೊಂದಿಗೆ **[ನಿನಮೇ]** ನಮಿಸಲು ಯೋಗ್ಯ ಸ್ಥಾನದಲ್ಲಿ **[ತಸ್ಥಿವಾಂಸಃ]** ಸ್ಥಿರರಾಗಿರುವ **[ಪರ್ವತಾಃ]** ಪರ್ವತಗಳೂ **[ನ]** ನಾಶಗೊಳಿಸುವುದಿಲ್ಲ.

**ಭಾವಾರ್ಥ:-** ಈಶ್ವರ ನಿಯಮವನ್ನುಲ್ಲಂಘಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ ಮತ್ತು ಪರಮೇಶ್ವರನ ಭ್ರಮರಹಿತ / ಸತ್ಯ ಕರ್ಮಗಳು ಯಾವುವಿವೆಯೋ ಅಂತಹ ಕರ್ಮಗಳನ್ನು ಮತ್ತು ಸುಖದಾಯಕ ದಯಾನಿಧಿ ಪರಮೇಶ್ವರನನ್ನು ಎಲ್ಲರೂ ಉಪಾಸನೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಷಡ್ಭಾರಾಂ ಏಕೋ ಅಚರನ್ ಬಿಭ-ರ್ತ್ಯೃತಂ ವರ್ಷಿಷ್ಠಮುಪ ಗಾವ ಆಗುಃ ।**
**ತಿಸ್ರೋ ಮಹೀರುಪರಾಸ್ತಸ್ಥುರತ್ಯಾ ಗುಹಾ ದ್ವೇ ನಿಹಿತೇ ದರ್ಶ್ಯೇಕಾ ॥೨॥**

**ಪದಾರ್ಥ:-** **[ದ್ವೇ]** ಈ ಪ್ರಪಂಚದಲ್ಲಿ ಎರಡು ಕಾರ್ಯಗಳು ಮತ್ತು ಕಾರಣಗಳು **[ನಿಯತೇ]** ಪರಮೇಶ್ವರನು ನಿಯತಗೊಳಿಸಿರುವನು. ಅವೆರಡರಲ್ಲಿ **[ಏಕಾ]** ಕಾರ್ಯವೆಂಬುದೊಂದು **[ದರ್ಶಿ]** ಗೋಚರವಾಗುತ್ತದೆ. **[ಅತ್ಯಾಃ]** ಸರ್ವತ್ರ ವ್ಯಾಪಕವಾಗಿರುವ ಆಕಾಶಾದಿಗಳು **[ಗುಹಾ]** ಮಹತ್ತತ್ತ್ವವೆಂಬ ಬುದ್ಧಿಯಲ್ಲಿ **[ಉಪರಾಃ]** ಮೇಘವು **[ತಸ್ಥುಃ]** ನೆಲೆಗೊಂಡಿವೆ. **[ತಿಸ್ರಃ]** ಸ್ಥೂಲ-ಮಧ್ಯ-ಸೂಕ್ಷ್ಮಗಳೆಂಬ ಮೂರು **[ಮಹೀಃ]** ಭೂಮಿ ಮತ್ತು **[ಗಾವಃ]** ಕಿರಣಗಳು **[ಉಪ, ಆ, ಅಗುಃ]** ಪ್ರಾಪ್ತವಾಗುವವು. **[ಷಟ್]** ಆರು ಬಗೆಯ **[ಭಾರಾನ್]** ಪಂಚತತ್ವ ಮಹತ್ತತ್ವ ಮತ್ತು ಬುದ್ಧಿಯನ್ನು **[ಅಚರನ್]** ಕಂಪಿಸದೇ **[ಏಕಃ]** ಅದ್ವಿತೀಯ ಈಶ್ವರನು **[ವರ್ಷಿಷ್ಠಂ]** ಅತಿ ಶ್ರೇಷ್ಠನು. **[ಋತಂ]** ಸತ್ಯಕಾರಣದ **[ಬಿಭರ್ತಿ]** ಧಾರಣ ಮಾಡುವನು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು ಪೃಥಿವ್ಯಾದಿ ತನ್ಮಾತ್ರಗಳವರೆಗಿನ ಸಮಗ್ರ ಪ್ರಕೃತಿಯನ್ನು ಸೃಷ್ಟಿಸಿ ಜಗತ್ತನ್ನು ರಚಿಸಿ ಅದರ ಧಾರಣ ಪೋಷಣ ಮಾಡುವನು. ಆ ಪ್ರಕೃತಿಯನ್ನು ವ್ಯವಸ್ಥಿತವಾಗಿ ತನ್ನದೇ ಆದ ರೀತಿಯಲ್ಲಿ ನಡೆಸಿಕೊಂಡು ಹೋಗುತ್ತಿರುವನು. ಅವನು ಪರಮಪೂಜ್ಯನಾಗಿರುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ರಿಪಾಜಸ್ಯೋ ವೃಷಭೋ ವಿಶ್ವರೂಪ ಉತ ತ್ರ್ಯುಧಾ ಪುರುಧ ಪ್ರಜಾವಾನ್ ।**
**ತ್ರ್ಯನೀಕಃ ಪತ್ಯತೇ ಮಾಹಿನಾವಾನ್ ತ್ಸ ರೇತೋಧಾ ವೃಷಭಃ ಶಶ್ವತೀನಾಮ್ ॥೩॥**

**ಪದಾರ್ಥ:-** **[ಪುರುಷ]** ಬಹು ಪದಾರ್ಥಗಳನ್ನು ಧಾರಣ ಮಾಡುವ ಅತಿಶ್ರೇಷ್ಠ ಪುರುಷನು **[ತ್ರಿಪಾಜಸ್ಯಃ]** ಶರೀರ ಆತ್ಮ ಮತ್ತು ಬಲಗಳೆಂಬ ಮೂರು ಪದಾರ್ಥಗಳಲ್ಲಿ ಚತುರನೂ **[ವೃಷಭಃ]** ಮಳೆಗರೆಯುವವನೂ ಆಗಿ **[ತ್ರ್ಯುಧಾ]** ಕಾರಣ, ಸೂಕ್ಷ್ಮ ಮತ್ತು ಸ್ಥೂಲಗಳೆಂಬ ಮೂರರಿಂದ ಬೆಳೆದಿರುವ ಜೀವ ಶರೀರ ಮತ್ತು **[ವಿಶ್ವರೂಪಃ]** ಸಮಗ್ರ ರೂಪವು ಯಾವುದರಲ್ಲಿದೆಯೋ ಅಂತಹ ತೇಜೋಮಯವಾದ **[ಉತ]** ಮತ್ತು **[ಪ್ರಜಾವಾನ್]** ಬಹು

ಪ್ರಜೆಗಳಿರುವ **[ತ್ರ್ಯನೀಕಃ]** ಹಾಗೂ ತ್ರಿಗುಣಿತ ಸೇನೆಗೆ ಸಮನಾಗಿ **[ಮಹಿಮಾವಾನ್]** ಹಿರಿಮೆಯನ್ನು ಪಡೆದಿರುವ **[ಪತ್ಯತೇ]** ಸ್ವಾಮಿಯಂತೆ ಆಚರಿಸುವ **[ಸಃ]** ಅವನು **[ವೃಷಭಃ]** ಅತ್ಯಂತ ಬಲಶಾಲಿಯು **[ಶಶ್ವತೀನಾಂ]** ಅನಾದಿ ಕಾಲದಿಂದ ಇರುವ ಪ್ರಕೃತಿ ಮತ್ತು ಜೀವವೆಂಬ ಹೆಸರಿನ ಪ್ರಜೆಗಳ **[ರೇತೋಧಾಃ]** ನೀರಿನಂತೆ ಮತ್ತು ಸೂರ್ಯನಂತೆ ವೀರ್ಯವನ್ನು ಧಾರಣೆ ಮಾಡಿಕೊಡುವವನಾದ ಮಹಾಮಹಿಮನು ಜಗದೀಶ್ವರನಾಗಿರುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಜಗದೀಶ್ವರನು ಸಮಗ್ರ ಜಗತ್ತಿನಲ್ಲಿ ವ್ಯಾಪಕನಾಗಿದ್ದು ಮಿಂಚಿನಂತೆ ಪ್ರಕಾಶಕಾರಕನು, ಎಲ್ಲವನ್ನೂ ಧಾರಣೆ ಮಾಡುವವನು, ಎಲ್ಲರಿಗೂ ನ್ಯಾಯ ಒದಗಿಸುವ ಸ್ವಾಮಿ, ಕೊನೆಯೇ ಇಲ್ಲದ ಮಹಿಮೆ ಮತ್ತವನು ಅನಾದಿ, ಎಲ್ಲಾ ಜೀವಿಗಳಿಗೂ ನ್ಯಾಯ ದೊರಕಿಸುವವನು. ಆದ್ದರಿಂದ ಎಲ್ಲರೂ ಭಯರಹಿತರಾಗಿ ಪಾಪತ್ಯಾಗ ಮಾಡಿದವರಾಗಿ ಪ್ರೀತಿಯಿಂದ ಧರ್ಮಾಚರಣೆ ಮಾಡುತ್ತ ತನ್ನ ಅಂತಃಕರಣದಲ್ಲಿ ಆ ಪರಮೇಶ್ವರನ ಧ್ಯಾನ ಮಾಡಬೇಕು.

ಈಶ್ವರನ ಗುಣಗಳನ್ನಿಲ್ಲಿ ಹೇಳಿದೆ.

**ಅಭೀಕ ಆಸಾಂ ಪದವೀರಬೋ-ಧ್ಯಾದಿತ್ಯಾನಾಮಹ್ವೇ ಚಾರು ನಾಮ ।**
**ಆಪಶ್ಚಿದಸ್ಮಾ ಅರಮಂತ ದೇವೀಃ ಪೃಥಗ್ವ್ರಜಂತೀಃ ಪರಿಷೀಮವೃಂಜನ್ ।।೪।।**

**ಪದಾರ್ಥ:-** **[ಆಸಾಂ]** ಅನಾದಿ ಸಿದ್ಧವಾದ ಪ್ರಕೃತಿರೂಪ ಪ್ರಜೆಗಳು **[ಆದಿತ್ಯಾನಾಂ]** ಸೂರ್ಯಾದಿ ಪದಾರ್ಥಗಳು, ಮಾಸಾದಿ ಕಾಲಗಳು ಇವುಗಳನ್ನು ವಿಭಾಗಿಸುವ **[ಪದವೀಃ]** ಉಪಾಧಿಗಳಲ್ಲಿ ವ್ಯಾಪ್ತನಾಗಿ **[ಅಬೋಧಿ]** ತಿಳಿದಿರುವ **[ಚಾರು]** ಅತಿಶ್ರೇಷ್ಠವಾದ **[ನಾಮ]** ಹೆಸರುಗಳಲ್ಲಿ **[ಚಿತ್]** ನಿಶ್ಚಿತ ರೂಪವಾಗಿ **[ವ್ರಜಂತೀಃ]** ಚಲಿಸುವವಳಾಗಿ **[ದೇವೀಃ]** ಪ್ರಕಾಶಮಾನಳಾದ **[ಆಪಃ]** ಪ್ರಾಣವನ್ನು **[ಸೀಂ]** ಪರಿಗ್ರಹ ಮಾಡುವುದರಲ್ಲಿ **[ಪೃಥಕ್]** ಪ್ರತ್ಯೇಕ ಪ್ರತ್ಯೇಕವಾಗಿ **[ಪರಿ, ಅರಮಂತ]** ಎಲ್ಲ ರೀತಿಯಿಂದಲೂ ರಮಿಸುವಳು. **[ಪ್ರವೃಂಜನ್]** ತ್ಯಾಗ ಮಾಡುತ್ತ **[ಅಸ್ಮೈ]** ಇವನಿಗಾಗಿ **[ಅಭೀಕೇ]** ಬಯಸುವವರಲ್ಲಿ ನೆಲೆಗೊಳ್ಳುವರು. **[ಅಹ್ವೇ]** ನಾನು ಆಹ್ವಾನಿಸುವೆನು.

**ಭಾವಾರ್ಥ:-** ಮನುಷ್ಯರೇ! ಯಾವನು ಎಲ್ಲರಿಗೂ ಸುಖವನ್ನು ಬಯಸುವನೋ ಎಲ್ಲಾ ಜೀವಿಗಳೊಂದಿಗೆ ಎಲ್ಲಾ ಪದಾರ್ಥಗಳೊಂದಿಗೆ ಪ್ರತ್ಯೇಕ ಪ್ರತ್ಯೇಕವಾಗಿ ರಮಿಸುವನೋ ಅವುಗಳನ್ನು ಸ್ವೀಕರಿಸುವವನೂ, ತ್ಯಜಿಸುವವನೂ ಆಗಿರುವನೋ ಅಂತಹ ಪರಬ್ರಹ್ಮನನ್ನು ಬಿಟ್ಟು ಬೇರಾರನ್ನೂ ಅಂತಃಕರಣದಲ್ಲಿ ಧ್ಯಾನಿಸಬೇಡ.

ಈಶ್ವರನು ಎಲ್ಲರನ್ನೂ ಎಲ್ಲವನ್ನೂ ನೆಲೆಗೊಳಿಸುವುದಕ್ಕಾಗಿ ಜಗತ್ತನ್ನು ಸೃಷ್ಟಿಸಿರುವನೆಂಬ ವಿಚಾರವು ಈ ಮಂತ್ರದಲ್ಲಿದೆ.

**ತ್ರೀ ಷದಸ್ಥಾ ಸಿಂಧವಸ್ತ್ರಿಃ ಕವೀನಾ-ಮುತ ತ್ರಿಮಾತಾ ವಿದಥೇಷು ಸಮ್ರಾಟ್ ।**
**ಋತಾವರೀರ್ಯೋಷಣಾಸ್ತಿಸ್ರೋ ಅಪ್ಯಾ-ಸ್ತ್ರಿರಾ ದಿವೋ ವಿದಥೇ ಪತ್ಯಮಾನಾಃ ।।೫।।**

**ಪದಾರ್ಥ:-** **[ತ್ರೀ]** ಮೂರು ರೀತಿಯ ಜೊತೆ ಜೊತೆಗಿರುವ ಸ್ಥಾನದಲ್ಲಿ **[ಸಿಂಧವಃ]** ನದಿಗಳು **[ಉತ]** ಮತ್ತು **[ಕವೀನಾಂ]** ವಿದ್ಯಾವಂತರ **[ತ್ರಿಃ]** ಮೂರು ಬಾರಿ **[ತ್ರಿಮಾತಾ]** ಜನ್ಮ, ಸ್ಥಾನ, ನಾಮಗಳೆಂಬ ಮೂರನ್ನೂ ಉತ್ಪಾದಿಸುವ **[ವಿದಥೇಷು]** ಸಂಗ್ರಾಮದಲ್ಲಿ ತಿಳಿಯಲು ಯೋಗ್ಯವಾದ ವ್ಯವಹಾರಗಳಲ್ಲಿ **[ಸಮ್ರಾಟ್]** ಭೂಮಿಯನ್ನು ಉತ್ತಮ ರೀತಿಯಲ್ಲಿ ಶಾಸನ ಮಾಡುವ ರಾಜನಂತೆ **[ಋತಾವರೀಃ]** ಸತ್ಯಭಾಷಣ ಮಾಡುವ **[ಯೋಷಣಾಃ]** ಯುವತಿಯರಂತಿರುವ **[ತಿಸ್ರಃ]** ಸ್ಥೂಲ, ಸೂಕ್ಷ್ಮ, ಮತ್ತು ಕಾರಣಗಳೆಂಬ ಹೆಸರಿನ ಮೂರು **[ಅಪ್ಯಾಃ]** ಅಂತರಿಕ್ಷದಲ್ಲಿ

ಉತ್ಪನ್ನವಾಗುವಂತಹ **[ವಿದಥೇ]** ಸಂಗ್ರಾಮದಲ್ಲಿ **[ಪತ್ಯಮಾನಾಃ]** ಪತಿಯೊಂದಿಗೆ ಹೇಗೋ ಹಾಗೆ ಆಚರಣೆ ಮಾಡುವವರಾದ **[ತ್ರಿಃ]** ಮೂರು ಸಲ **[ದಿವಃ]** ತಾರಾಗಣಗಳನ್ನು ಉತ್ಪಾದಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಪರಮಾತ್ಮನು ಪ್ರಪಂಚದಲ್ಲಿರುವ ಚರಾಚರ ಜೀವಿಗಳ ನಿವಾಸಕ್ಕಾಗಿ ಜಲ, ಸ್ಥಳ, ಅಂತರಿಕ್ಷಗಳೆಂಬ ಮೂರು ಬಗೆಯ ಪದಾರ್ಥಗಳನ್ನು ರಚಿಸಿ ಜಗತ್ತನ್ನು ನೆಲೆಗೊಳಿಸಿದ್ದಾನೆ. ಅಂತಹ ಜಗದೀಶ್ವರನನ್ನು ಪತಿವ್ರತಾ ಸತಿಯು ಪತಿಯ ಸೇವೆಗೈಯುವ ರೀತಿಯಲ್ಲಿ ನೀವೆಲ್ಲರೂ ಸೇವಿಸುವವರಾಗಿರಿ.

ಈ ಮಂತ್ರದಲ್ಲಿ ಈಶ್ವರನ ಪ್ರಾರ್ಥನಾರೂಪದಲ್ಲಿ ಜಗದ್ವಿಷಯವನ್ನು ತಿಳಿಸಲಾಗಿದೆ.

**ತ್ರಿರಾ ದಿವಃ ಸವಿತರ್ವಾರ್ಯಾಣಿ ದಿವೇದಿವ ಆ ಸುವ ತ್ರಿರ್ನೋ ಅಹ್ನಃ ।**
**ತ್ರಿಧಾತು ರಾಯ ಆ ಸುವಾ ವಸೂನಿ ಭಗ ತ್ರಾತರ್ಧಿಷಣೇ ಸಾತಯೇ ಧಾಃ ॥೬॥**

**ಪದಾರ್ಥ:-** **[ಸವಿತಃ]** ಐಶ್ವರ್ಯದಾಯಕನೇ! ನೀನು **[ದಿವೇ ದಿವೇ]** ಪ್ರತಿದಿನವೂ **[ನಃ]** ನಮಗಾಗಿ **[ದಿವಃ]** ಇಚ್ಛಿಸಲು ಯೋಗ್ಯವಾದ ಕ್ರಿಯೆಗಳನ್ನು **[ವಾರ್ಯಾಣಿ]** ವರಿಸಲು ಯೋಗ್ಯವಾದ ಸಂಪತ್ತನ್ನು **[ತ್ರಿಃ]** ಮೂರು ಬಾರಿ **[ಆಸುವ]** ಉತ್ಪಾದನೆ ಮಾಡು. **[ಭಗ]** ಐಶ್ವರ್ಯವನ್ನು ಸೇವಿಸುವವನೇ **[ಅಹ್ನಃ]** ದಿನದ ಮಧ್ಯದಲ್ಲಿ **[ರಾಯಃ]** ಸಂಪತ್ತನ್ನು **[ತ್ರಿಃ]** **[ಆಸುವ]** ಮೂರು ಬಾರಿ ಉತ್ಪಾದನೆಗೊಳಿಸು. **[ತ್ರಾತಃ]** ರಕ್ಷಕನೇ! **[ಸಾತಯೇ]** ಉತ್ತಮ ವಿಭಜನೆಗಾಗಿ **[ತ್ರಿಧಾತುಃ]** ಸುವರ್ಣ, ಬೆಳ್ಳಿ, ಕಬ್ಬಿಣಗಳೆಂಬ ಮೂರು ರೀತಿಯ ಲೋಹಗಳನ್ನು **[ವಸೂನಿ]** ಸಂಪತ್ತನ್ನು **[ಧಿಷಣೇ]** ಭೂಮ್ಯಾಕಾಶಗಳನ್ನು **[ಆ, ಧಾಃ]** ಸಮಗ್ರ ರೀತಿಯಲ್ಲಿ ಧಾರಣೆ ಮಾಡುವವನಾಗು.

**ಭಾವಾರ್ಥ:-** ಜಗದೀಶ್ವರನೇ! ನೀನು ನಮ್ಮನ್ನು ಧರ್ಮಮಾರ್ಗದಿಂದ ಪುರುಷಾರ್ಥ ಸಾಧಿಸುವವರನ್ನಾಗಿ ಮಾಡು. ಪ್ರತಿದಿನವೂ ಸಂಪನ್ನರನ್ನಾಗಿ ಮಾಡು. ನಿರಂತರ ರಕ್ಷಣೆ ಮಾಡುವವನಾಗಿ ಎಲ್ಲರ ಸುಖಕ್ಕಾಗಿ ವಿಭಜನೆಯನ್ನು ಮಾಡು.

ಈ ಮಂತ್ರದಲ್ಲಿ ರಾಜನ ಉದಾಹರಣೆಯ ಮೂಲಕ ವಿದ್ಯಾವಂತರ ವಿಷಯವನ್ನು ತಿಳಿಸಲಾಗಿದೆ.

**ತ್ರಿರಾ ದಿವಃ ಸವಿತಾ ಸೋಷವೀತಿ ರಾಜಾನಾ ಮಿತ್ರಾವರುಣಾ ಸುಪಾಣೀ ।**
**ಆಪಶ್ಚಿದಸ್ಯ ರೋದಸೀ ಚಿದುರ್ವೀ ರತ್ನಂ ಭಿಕ್ಷಂತ ಸವಿತುಃ ಸವಾಯ ॥೭॥**

**ಪದಾರ್ಥ:-** **[ಸವಿತಾ]** ಪ್ರೇರಣೆ ನೀಡುವ ಅಂತರ್ಯಾಮಿಯು **[ಮಿತ್ರಾ ವರುಣಾ]** ಪ್ರಾಣೋದಾನ ವಾಯುಗಳಂತಿರುವ ಎಲ್ಲರ ಸ್ನೇಹಿತರು **[ಸುಪಾಣೀ]** ಉತ್ತಮವಾದ ಕರಗಳಿರುವವನು **[ರಾಜಾನಾ]** ವಿದ್ಯಾವಿನಯಗಳಿಂದ ಪ್ರಕಾಶಮಾನರಾದವರು **[ದಿವಃ]** ಬೆಳಕಿನಲ್ಲಿ **[ತ್ರಿಃ, ಆ, ಸೋಷವೀತಿ]** ಮೂರು ಬಾರಿ ಪ್ರೇರಣೆ ನೀಡುವರು. **[ಅಸ್ಯ]** ಇಂತಹ **[ಸವಿತುಃ]** ಸೂರ್ಯನ ಹತ್ತಿರ **[ಸವಾಯ]** ಸಂಪತ್ತಿಗಾಗಿ **[ಆಪಃ]** **[ಚಿತ್]** ಪ್ರಾಣಗಳಿಗೆ ಸಮನಾದ **[ಉರ್ವೀ]** ವಿಸ್ತೃತವಾದ **[ರೋದಸೀ]** ಬೆಳಕಿನ ಮತ್ತು ಕತ್ತಲಿನ ಪ್ರಪಂಚವು **[ರತ್ನಂ]** ಶ್ರೇಷ್ಠ ಧನವನ್ನು **[ಚಿತ್]** ಎಲ್ಲರೂ **[ಭಿಕ್ಷಂತೇ]** ಯಾಚನೆ ಮಾಡುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜಪುರುಷರು ಪರಮೇಶ್ವರನಿಗೆ ಸಮನಾಗಿ ಗುಣ ಕರ್ಮ ಸ್ವಭಾವಗಳನ್ನು ಪಡೆದುಕೊಂಡಿರುವರೋ, ಅಂತಹ ರಾಜ ಪುರುಷರು ಪ್ರಜೆಗಳ ಮಧ್ಯದಲ್ಲಿದ್ದು ಚಕ್ರವರ್ತೀ ರಾಜ್ಯವನ್ನು ಅಸಂಖ್ಯಾತ ಧನ ಕನಕಾದಿ ಸಂಪನ್ನಗಳನ್ನು ಪಡೆದುಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ರಿರುತ್ತಮಾ ದೂಣಶಾ ರೋಚನಾನಿ ತ್ರಯೋ ರಾಜಂತ್ಯಸುರಸ್ಯ ವೀರಾಃ ।**

**ಋತಾವಾನ ಇಷಿರಾ ದೂಳಭಾಸ-ಸ್ತ್ರಿರಾ ದಿವೋ ವಿದಥೇ ಸಂತು ದೇವಾಃ ॥೮॥**

**ಪದಾರ್ಥ:-** **[ತ್ರಯಃ]** ಅಗ್ನಿ, ವಿದ್ಯುದಗ್ನಿ ಮತ್ತು ಸೂರ್ಯಾಗ್ನಿ ಮೂವರಿಗೂ ಸದೃಶನಾದ **[ಅಸುರಸ್ಯ]** ದುಷ್ಟರನ್ನು ನಾಶಗೊಳಿಸುವ ಶಕ್ತಿ ಇರುವ **[ವೀರಾಃ]** ಶೌರ್ಯಬಲಗಳಿಂದ ಕೂಡಿರುವ **[ದೂಳಭಾಸಃ]** ಹಿಂಸಾರಹಿತರಾಗಿ **[ಆ, ದಿವಃ]** ಎಲ್ಲಾ ರೀತಿಯಿಂದ ಇಚ್ಛಿಸುವವರಾಗಿ **[ದೇವಾಃ]** ವಿದ್ವಾಂಸರು **[ವಿದಥೇ]** ಸಂಗ್ರಾಮದಂತಹ ವ್ಯವಹಾರದಲ್ಲಿ **[ತ್ರಿಃ]** ಮೂರಾವರ್ತಿ **[ಸಂತು]** ಪ್ರಸಿದ್ಧರಾಗಲಿ. **[ದೂಣಶಾ]** ದುಃಖದಿಂದ ನಾಶವಾಗುವವರು **[ಉತ್ತಮಾ]** ಶ್ರೇಷ್ಠವಾದ **[ರೋಚನಾನಿ]** ಪ್ರಕಾಶಮಾನ **[ತ್ರಿಃ]** ಮೂರಾವರ್ತಿ **[ರಾಜಂತಿ]** ಸುಶೋಭಿತರಾಗುವರು.

**ಭಾವಾರ್ಥ:-** ಯಾರು ಪರಮಾತ್ಮನಿಗೆ ಪ್ರಾಣದಂತೆ ಪ್ರಿಯರೋ ರಾಜನಂತೆ ಉಪದೇಶ ಮಾಡುವವರೋ ನ್ಯಾಯಾಧೀಶನಂತೆ ನಾಯಕನೋ ಸೂರ್ಯನಂತೆ ಸ್ವಯಂ ಪ್ರಕಾಶನೋ, ಬೇರೆಯುವರನ್ನೂ ಪ್ರಕಾಶಮಾನಗೊಳಿಸುವವನೋ, ಗೌರವಿಸಿ ಸೇವಿಸುವನೋ, ಅವನೇ ಶತ್ರುಗಳಿಂದೊಡಗುವ ದುಃಖವನ್ನು ಜಯಿಸಲು ಯೋಗ್ಯನು. ತಾನು ಸತ್ಯಾಚರಣೆ ಮಾಡುವವನಾಗಿ ಅನ್ಯರಿಗೂ ಸುಖ ಬಯಸುವವರಾಗುತ್ತಾರೆ. ಅವರೇ ಚಕ್ರವರ್ತಿ ರಾಜ್ಯವನ್ನು ಪಡೆದು ಸೂರ್ಯನಂತೆ ಮಿಂಚುತ್ತಾರೆ. ಅವರೇ ಈ ಜಗತ್ತಿನಲ್ಲಿ ರಕ್ಷಣೆಯ ಅಧಿಕಾರಿಗಳಾಗುತ್ತಾರೆ.

ಈ ಸೂಕ್ತದಲ್ಲಿ ಈಶ್ವರ, ಜಗತ್ತು ಮತ್ತು ವಿದ್ವಾಂಸರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೫೭

ಮಂತ್ರಸಂಖ್ಯೆ ೬ । ವಿಶ್ವಾಮಿತ್ರ ಋಷಿಃ । ವಿಶ್ವೇದೇವಾ ದೇವತಾಃ । ೧, ೨, ೪ ತ್ರಿಷ್ಟುಪ್, ೩, ೫, ೬ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ವಾಣೀ ವಿಷಯ ತಿಳಿಸಲಾಗಿದೆ.

**ಪ್ರ ಮೇ ವಿವಿಕ್ವಾ ಅವಿದನ್ಮನೀಷಾಂ ಧೇನುಂ ಚರಂತೀಂ ಪ್ರಯುತಾಮಗೋಪಾಮ್ ।**

**ಸದ್ಯಶ್ಚಿದ್ಯಾ ದುದುಹೇ ಭೂರಿ ಧಾಸೇ-ರಿಂದ್ರಸ್ತದಗ್ನಿಃ ಪನಿತಾರೋ ಅಸ್ಯಾಃ ॥೧॥**

**ಪದಾರ್ಥ:-** **[ವಿವಿಕ್ವಾನ್]** ವಿವೇಚನಶೀಲನಾದ ಮನುಷ್ಯನು **[ಮೇ]** ನನ್ನ **[ಮನೀಷಾಂ]** ಬುದ್ಧಿಯನ್ನು **[ಚರಂತೀಂ]** ಪಡೆದುಕೊಂಡಿರುವ **[ಪ್ರಯುತಾಂ]** ಅಸಂಖ್ಯಾತ ತಿಳುವಳಿಕೆ ಇರುವ **[ಧೇನುಂ]** ಕರುವನ್ನು ಪೋಷಿಸುವ ಗೋವಿನಂತೆ ಇರುವ ವಾಣಿಯನ್ನು **[ಪ್ರ, ಅವಿದತ್]** ಪಡೆದುಕೊಂಡು **[ಯಾ]** ಯಾವುದು **[ಧಾಸೇಃ]** ಪ್ರಾಣ ಧಾರಣ ಮಾಡುವ ಅನ್ನದ **[ಇಂದ್ರಃ]** ವಿದ್ಯುತ್ತಿನಂತಿರುವ **[ಅಗೋಪಾಂ]** ಅರಕ್ಷಿತನನ್ನು **[ಭೂರಿ]** ಬಹಳಷ್ಟು **[ಸದ್ಯಃ]** ಶೀಘ್ರವಾಗಿ **[ಹಿ]** **[ದುದುಹೇ]** ನಿಶ್ಚಿತವಾಗಿ ಪೂರ್ಣಗೊಳಿಸುವನು. **[ತತ್]** ಆ, ಅನ್ನವನ್ನು **[ಅಗ್ನಿಃ]** ಅಗ್ನಿಯಂತಿರುವ ಪುರುಷನು ಪಡೆಯುವನು. **[ಅಸ್ಯಾಃ]** ಈ ವಾಣಿಯ **[ಪನಿತಾರಃ]** ಸ್ತವನ ಮಾಡುವವರು ಉಪದೇಶಿಸಬೇಕು. ಅದನ್ನು ಎಲ್ಲರೂ ಪಡೆದುಕೊಳ್ಳಬೇಕು.

**ಭಾವಾರ್ಥ:-** ತನ್ನ ಕರುವನ್ನು ಪಾಲಿಸುವ ಹಸುವಿನಂತೆ ವಿವೇಚನಾಯುಕ್ತನಾದ ಮನುಷ್ಯನು ತನ್ನ ಬುದ್ಧಿಯನ್ನು, ವಾಣಿಯನ್ನು ಪಾಲಿಸಿಕೊಂಡು ಉನ್ನತಿಯನ್ನು ಸಾಧಿಸಬೇಕು.

ಬುದ್ಧಿಯ ವಿಷಯವನ್ನಿಲ್ಲಿ ಹೇಳಿದೆ.

**ಇಂದ್ರಃ ಸು ಪೂಷಾ ವೃಷಣಾ ಸುಹಸ್ತಾ ದಿವೋ ನ ಪ್ರೀತಾಃ ಶಶಯಂ ದುದುಹ್ರೇ ।**
**ವಿಶ್ವೇ ಯದಸ್ಯಾಂ ರಣಯಂತ ದೇವಾಃ ಪ್ರ ವೋಽತ್ರ ವಸವಃ ಸುಮ್ನಮಶ್ಯಾಮ್ ॥೨॥**

**ಪದಾರ್ಥ:-** **[ವಸವಃ]** ವಿದ್ಯೆಯ ಜಿಜ್ಞಾಸೆ ಮಾಡುವವರೇ! **[ಯತ್]** ಯಾವುದು **[ಅತ್ರ]** ಈ ವ್ಯವಹಾರದಲ್ಲಿ **[ವಿಶ್ವೇ]** ಸಮಗ್ರ **[ದೇವಾಃ]** ವಿದ್ಯಾವಂತ ಜನರು **[ಅಸ್ಯಾಂ]** ಬುದ್ಧಿವಂತಿಕೆಯ ಮಾತಿನಲ್ಲಿ **[ಶಶಯಂ]** ಮೇಘಸದೃಶ **[ಸುಮ್ನಂ]** ಸುಖವನ್ನು **[ಪ್ರ, ದುದುಹ್ರೇ]** ದೋಹನ ಮಾಡುವವರೋ, ಕರೆಯುವವರೋ, **[ರಣಯಂತೇ]** ಯುದ್ಧೋಪಾದಿಯಲ್ಲಿ ಆಚರಣೆ ಮಾಡುತ್ತ **[ದಿವಃ]** **[ನಃ]** ಬೆಳಕಿನ ಕಿರಣಗಳಿಗೆ ಸದೃಶವಾಗಿ **[ಪ್ರೀತಾಃ]** ಪ್ರಸನ್ನರಾಗುವವರು. **[ಸುಹಸ್ತಾ]** ಸಿದ್ಧಹಸ್ತರಾದ ಇಬ್ಬರು ಪುರುಷರಂತೆ ಇರುವ **[ಇಂದ್ರ]** ವಿದ್ಯುತ್ **[ಪೂಷಾ]** ಮತ್ತು ಪುಷ್ಟಿಕಾರಕ ಪ್ರಾಣಗಳು **[ವೃಷಣೌ]** ಬಲದಾಯಕಗಳು ಅದನ್ನು ಪೂರ್ಣಗೊಳಿಸುವವರು **[ಸು, ಪ್ರೀತಾಃ]** ಪ್ರಸನ್ನಚಿತ್ತರಾಗಿ ಸತ್ಸಂಗದಿಂದ **[ವಃ]** ನಿಮ್ಮೆಲ್ಲರಿಗೆ **[ಸುಮ್ನಂ]** ಸುಖವನ್ನು **[ಅಶ್ಯಾಂ]** ಪ್ರಾಪ್ತಿಗೊಳಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾ ಮತ್ತು ಉಪಮಾಲಂಕಾರಗಳಿವೆ. ಯಾರು ಶರೀರ ಬಲ ಮತ್ತು ಆತ್ಮಬಲವನ್ನು ಬಯಸುವವರೋ ಅವರು ವಿದ್ಯಾವಂತರಾದವರಿಂದ ಶಾಸ್ತ್ರ ಮತ್ತು ಈಶ್ವರಜ್ಞಾನವನ್ನು ಪಡೆದು. ಮಾತಿನಲ್ಲಿ ರಮಿಸುವವರಾಗಿ ವಿದ್ಯುದಾದಿ ವಿದ್ಯೆಗಳನ್ನು ಬೋಧಿಸುತ್ತ ವಿಜಯಶಾಲಿಗಳಾಗುವರು. ಅತಿಶಯ ಅನ್ನಾದಿಗಳನ್ನು ಪಡೆದು. ಅನ್ಯರನ್ನೂ ಆನಂದಿತರನ್ನಾಗಿ ಮಾಡುವವರೋ ಅವರೇ ಜಗತ್ತಿನಲ್ಲಿ ಪೂಜ್ಯರಾಗಿ ಎಲ್ಲರಿಗೂ ಗುರುಗಳಾಗುವರು.

ಗೃಹಸ್ಥಾಶ್ರಮದ ವಿಷಯವನ್ನಿಲ್ಲಿ ತಿಳಿಸಲಾಗಿದೆ.

**ಯಾ ಜಾಮಯೋ ವೃಷ್ಣ ಇಚ್ಛಂತಿ ಶಕ್ತಿಂ ನಮಸ್ಯಂತೀರ್ಜಾನತೇ ಗರ್ಭಮಸ್ಮಿನ್ ।**
**ಅಚ್ಛಾ ಪುತ್ರಂ ಧೇನವೋ ವಾವಶಾನಾ ಮಹಶ್ಚರಂತಿ ಬಿಭ್ರತಂ ವಪೂಂಷಿ ॥೩॥**

**ಪದಾರ್ಥ:-** **[ಯಾಃ]** ಯಾವಳು **[ನಮಸ್ಯಂತೀಃ]** ಸತ್ಕರಿಸುವವಳಾಗಿ **[ಜಾಮಯಃ]** ಯೌವ್ವನಾವಸ್ಥೆಗೆ ಪದಾರ್ಪಣ ಮಾಡಿರುವ ಬ್ರಹ್ಮಚಾರಿಣೀ ಯುವತಿಯು **[ವೃಷ್ಣೇ]** ವರ್ಷಣ ಸಮರ್ಥನಾದ ಬ್ರಹ್ಮಚಾರೀ ಯುವಕನಿಗೆ **[ಶಕ್ತಿಂ]** ಸಾಮರ್ಥ್ಯವನ್ನು **[ಇಚ್ಛಂತೀ]** ಇಚ್ಛಿಸುವವಳಾಗಿ **[ಅಸ್ಮಿನ್]** ಈ ಸಂಸಾರದಲ್ಲಿ **[ಗರ್ಭಂ]** ಗರ್ಭಧಾರಣೆ ಮಾಡಲು **[ಜಾನತೇ]** ತಿಳಿದಿರುವಳೋ ಅವಳು **[ವಾವಶಾನಾಃ]** ಪತಿಯನ್ನು ಬಯಸುವವಳಾಗಿ **[ಧೇನವಃ]** ಗೋವುಗಳು ವೃಷಭನನ್ನು ಹೇಗೊ ಹಾಗೆ **[ಮಹ]** ಅತಿಶಯ/ಪೂಜ್ಯರಾದವರ **[ವಪೂಂಷಿ]** ರೂಪವಂತ ಶರೀರವನ್ನು **[ಬಿಭ್ರತಂ]** ಧಾರಣ-ಪೋಷಣ ಮಾಡುವವನ **[ಅಚ್ಛ]** ಶ್ರೇಷ್ಠನಾದ **[ಪುತ್ರಂ]** ಮಗುವನ್ನು **[ಚರಂತಿ]** ಗ್ರಹಣಮಾಡುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಕನ್ಯೆಯರು ತನಗಿಂತ ಎರಡರಷ್ಟು ವಿದ್ಯಾವಂತ ಮತ್ತು ಬಲಿಷ್ಠನಾದ ಪತಿಯನ್ನು ಸ್ವಯಂವರ ಪದ್ಧತಿಯಿಂದ ಪರೀಕ್ಷಿಸಿ ಸ್ವೀಕರಿಸುವರೋ, ಅವರೇ ಸುಖ ಪಡೆಯುವರು. ಹಾಗೆಯೇ ಪುರುಷನೂ ತನಗೆ ಸರಿಸಮಾನಳಾದ ವಿದ್ಯಾವತೀ ಕನ್ಯೆಯನ್ನು ಗ್ರಹಣ

ಮಾಡಿದರೆ ಅವರಿಬ್ಬರೂ ಪರಸ್ಪರ ಪ್ರೀತಿಪೂರ್ವಕ ಅನುಕೂಲಕರ ವ್ಯವಹಾರದಲ್ಲಿ ಉತ್ತಮ ಸಂತಾನವನ್ನು ಪಡೆದು ಅದರ ಪಾಲನ-ಪೋಷಣ ಸಂಸ್ಕಾರಗಳನ್ನು ಮಾಡಿದರೆ ಅವರು ಭಾಗ್ಯವಂತ ಪುತ್ರನನ್ನು ಪಡೆದವರಾಗಿ ಅತಿ ಪರಮಾನಂದದಿಂದ ಜೀವನ ಸಂಗ್ರಾಮದಲ್ಲಿ ವಿಜಯಿಗಳಾಗುತ್ತಾರೆ.

ಈ ಮಂತ್ರದಲ್ಲಿ ಸ್ತ್ರೀ ಪುರುಷರ ವಿಷಯ ಹೇಳಿದೆ.

**ಅಚ್ಛಾ ವಿವಕ್ಮಿ ರೋದಸೀ ಸುಮೇಕೇ ಗ್ರಾವ್ಣೋ ಯುಜಾನೋ ಅಧ್ವರೇ ಮನೀಷಾ ।**
**ಇಮಾ ಉ ತೇ ಮನವೇ ಭೂರಿವಾರಾ ಊರ್ಧ್ವಾ ಭವಂತಿ ದರ್ಶತಾ ಯಜತ್ರಾಃ ॥೪॥**

**ಪದಾರ್ಥ:-** **[ಅಧ್ವರೇ]** ಈ ಸಂಗತಿಕರಣ ವ್ಯವಹಾರದಲ್ಲಿ **[ಇಮಾಃ]** ಯಾವ ಪ್ರಜೆಗಳು **[ಮನೀಷಾ]** ಬುದ್ಧಿವಂತರಾಗಿ **[ಭೂರಿವಾರಾಃ]** ಬಹುವಿಧ ಸುಖವನ್ನು ಪಡೆದು **[ದರ್ಶತಾಃ]** ನೋಡಲು **[ಯಜತ್ರಾಃ]** ಸಂಗತವಾಗಲು ಮತ್ತು ಗೌರವಿಸಲು ಯೋಗ್ಯರಾಗಿ **[ಊರ್ಧ್ವಾಃ]** ಉತ್ತಮರು **[ಭವಂತಿ]** ಆಗುವರು. **[ಯುಜಾನಃ]** ಪ್ರಾಪ್ತರಾಗುವ ನೀವು **[ಗ್ರಾವ್ಣಃ]** ಮೇಘದಂತೆ ಸಂಯೋಗ ಸುಖವನ್ನು ಪಡೆಯುವಿರಿ. **[ಸುಮೇಕೇ]** ಯಾವ ಸ್ತ್ರೀ-ಪುರುಷರು ಉತ್ತಮ ರೀತಿಯಲ್ಲಿ ಒಂದುಗೂಡಿ **[ರೋದಸೀ]** ಭೂಮ್ಯಂತರಿಕ್ಷಗಳಂತೆ **[ತೇ]** ಅವರು **[ಮನವೇ]** ಮನುಷ್ಯರಿಗಾಗಿರುವರು **[ಉ]** ಚಕಿತರಾಗುವ ರೀತಿಯಲ್ಲಿ **[ಅಚ್ಛಾ]** ಉತ್ತಮವಾಗಿ **[ವಿವಕ್ಮಿ]** ವಿಶೇಷರೀತಿಯ ಉಪದೇಶ ಮಾಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಸ್ತ್ರೀ-ಪುರುಷರು ಭೂಮಿ-ಸೂರ್ಯರಂತೆ ಒಂದಾಗಿರುವರೋ ಅವರೇ ಭಾಗ್ಯಶಾಲಿಗಳಾಗುವರು. ಯಾವ ಸ್ತ್ರೀ-ಪುರುಷರು ಅನುರಕ್ತರಾಗಿ ಸ್ವಯಂವರ ಪದ್ಧತಿಯಿಂದ ವಿವಾಹವಾಗಿ ಗೃಹಸ್ಥಾಶ್ರಮ ಪ್ರವೇಶಿಸುವರೋ ಅವರು ಮೇಘವು ಮಳೆಗರೆಯುವಂತೆ ಉತ್ತಮ ಸಂತತಿ ಪಡೆದು ಸದಾಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಾ ತೇ ಜಿಹ್ವಾ ಮಧುಮತೀ ಸುಮೇಧಾ ಅಗ್ನೇ ದೇವೇಷೂಚ್ಯತ ಉರೂಚೀ ।**
**ತಯೇಹ ವಿಶ್ವಾಂ ಅವಸೇ ಯಜತ್ರಾ-ನಾ ಸಾದಯ ಪಾಯಯಾ ಚಾ ಮಧೂನಿ ॥೫॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! / ವಿದುಷಿಯೇ! **[ತೇ]** ನಿಮ್ಮ **[ಯಾ]** ಯಾವುದು **[ದೇವೇಷು]** ವಿದ್ಯಾವಂತರಲ್ಲಿರುವ **[ಮಧುಮತೀ]** ಸತ್ಯನುಡಿಯುವ/ಮಧುರವಾದ **[ಸುಮೇಧಾಃ]** ಶ್ರೇಷ್ಠ ಮೇಧಾಶಕ್ತಿ ಇದೆಯೋ ಅದು **[ಉರೂಚೀ]** ಬಹುವಿದ್ಯೆಯನ್ನು ಪ್ರಾಪ್ತಿಗೊಳಿಸುತ್ತದೆ. **[ಜಿಹ್ವಾ]** ಅಂತಹ ವಾಗಿಂದ್ರಿಯವು ವಾಣಿ ಎಂದು **[ಉಚ್ಯತೇ]** ಕರೆಯಲ್ಪಡುತ್ತದೆ. **[ತಯಾ]** ಆ ವಾಗಿಂದ್ರಿಯದಿಂದ **[ಇಹ]** ಈ ಗೃಹಸ್ಥಾಶ್ರಮದಲ್ಲಿ **[ವಿಶ್ವಾನ್]** ಸಮಸ್ತ **[ಯಜತ್ರಾನ್]** ಸಂಗತವಾದ ಶ್ರೇಷ್ಠ ಸಂತಾನವನ್ನು **[ಆ, ಸಾದಯ]** ಪಡೆದುಕೋ **[ಚ]** ಮತ್ತು ಇವರ **[ಅವಸೇ]** ರಕ್ಷಣೆಗಾಗಿ **[ಮಧೂನೀ]** ಪಾನಯೋಗ್ಯ ರಸವನ್ನು **[ಪಾಯಯ]** ಪಾನಮಾಡಿಸು.

**ಭಾವಾರ್ಥ:-** ಸ್ತ್ರೀ-ಪುರುಷರು ಪರಸ್ಪರ ಸಂತೋಷದಿಂದ/ಪ್ರಸನ್ನತೆಯಿಂದ ವಿವಾಹವಾಗಿ, ವಿದ್ಯಾ-ಬುದ್ಧಿ ಉತ್ತಮ ನುಡಿಗಳಿಂದ ಗೃಹಸ್ಥಾಶ್ರಮವನ್ನು ನಡೆಸುತ್ತ, ಪ್ರೇಮದಿಂದ ಉತ್ಪನ್ನವಾಗುವ ಮಕ್ಕಳನ್ನು ಪಾಲನೆ ಪೋಷಣೆ ಶಿಕ್ಷಣ ನೀಡಿ ಸುಖಿಗಳಾಗುವರೋ, ಅವರು ಮೋಕ್ಷಸುಖದ ಅನುಭವ ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಾ ತೇ ಅಗ್ನೇ ಪರ್ವತಸ್ಯೇವ ಧಾರಾ-ಸಶ್ಚಂತೀ ಪೀಪಯದ್ದೇವ ಚಿತ್ರಾ ।**
**ತಾಮಸ್ಮಭ್ಯಂ ಪ್ರಮತಿಂ ಜಾತವೇದೋ ವಸೋ ರಾಸ್ವ ಸುಮತಿಂ ವಿಶ್ವಜನ್ಯಾಮ್ ॥೬॥**

**ಪದಾರ್ಥ:-** **[ಅಗ್ನೇ]** ಸ್ತ್ರೀ/ಪುರುಷನೇ! **[ತೇ]** ನಿನ್ನ **[ಯಾ]** ಯಾವಳು **[ಅಸಶ್ಚಂತೀ]** ಸೇರಿದವಳಾಗಿ **[ಚಿತ್ರಾ]** ಅದ್ಭುತವಾದ **[ಪರ್ವತಸ್ಯೇವ]** ಮೇಘದಂತೆ **[ಧಾರಾಃ]** ಪ್ರವಾಹದಂತೆ ಬುದ್ಧಿಯನ್ನು **[ಪೀಪಯತ್]** ಸೇವಿಸುವಳೋ **[ತಾಂ]** ಅವಳನ್ನು **[ಪ್ರಮತಿಂ]** ಉತ್ತಮ ಬುದ್ಧಿಯನ್ನು **[ವಿಶ್ವಜನ್ಯಾಂ]** ಸಮಗ್ರ ಸಂತಾನ ಜನನಿಯಾದವಳನ್ನು **[ಸುಮತಿಂ]** ಬುದ್ಧಿಮತೀ ಸ್ತ್ರೀ / ಬುದ್ಧಿವಂತ ಪುರುಷನಾದ ನೀನು **[ರಾಸ್ವ]** ಸ್ವೀಕರಿಸು. **[ದೇವ]** ಉತ್ತಮಗುಣಗಳಿರುವ **[ವಸೋ]** ಎಲ್ಲಾ ಕಡೆಯಲ್ಲೂ ವಾಸಿಸುವ / ಇರುವ **[ಜಾತವೇದಃ]** ಉತ್ಪನ್ನ ಪದಾರ್ಥಗಳಲ್ಲಿ ಇರುವ ಭಗವಂತನು **[ಅಸ್ಮಭ್ಯಂ]** ನಮ್ಮೆಲ್ಲರಿಗೆ ಮೇಲೆ ಹೇಳಿರುವುದೆಲ್ಲವನ್ನು ಕೊಡಲಿ.

**ಭಾವಾರ್ಥ:-** ಸ್ತ್ರೀ-ಪುರುಷರೇ! ನೀವು ಬಾಲ್ಯಾವಸ್ಥೆ / ಕುಮಾರಾವಸ್ಥೆಯಲ್ಲಿ ಉತ್ತಮ ವಿದ್ಯೆ-ಶಿಕ್ಷಣಗಳನ್ನು ಪಡೆದು ಯುವಾವಸ್ಥೆಯಲ್ಲಿ ಪರಸ್ಪರ ಅನುರಕ್ತರಾದ ಸ್ತ್ರೀ/ಪುರುಷನೊಂದಿಗೆ ವಿವಾಹವಾಗಿ ಗೃಹಸ್ಥಾಶ್ರಮದಲ್ಲಿ ಸುಖವನ್ನನುಭವಿಸಿರಿ.

ಈ ಸೂಕ್ತದಲ್ಲಿ ವಾಣೀ, ಬುದ್ಧಿ, ಗೃಹಸ್ಥಾಶ್ರಮ ಮತ್ತು ಸ್ತ್ರೀ ಪುರುಷ ಕರ್ತವ್ಯವನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೫೮

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಅಶ್ವಿನೌ ದೇವತೇ । ೧, ೮, ೯ ತ್ರಿಷ್ಟುಪ್,
೨-೫, ೭ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೬ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಶಿಲ್ಪಿಗಳ ಕೃತ್ಯವನ್ನು ಹೇಳಲಾಗಿದೆ.

**ಧೇನುಃ ಪ್ರತ್ನಸ್ಯ ಕಾಮ್ಯಂ ದುಹಾನಾ-ಂತಃ ಪುತ್ರಶ್ಚರತಿ ದಕ್ಷಿಣಾಯಾಃ ।**
**ಆ ದ್ಯೋತನಿಂ ವಹತಿ ಶುಭ್ರಯಾಮೋ-ಷಸಃ ಸ್ತೋಮೋ ಅಶ್ವಿನಾವಜೀಗಃ ॥೧॥**

**ಪದಾರ್ಥ:-** **[ಶುಭ್ರಯಾಮಾ]** ಶುದ್ಧ ದಿನಗಳಿರುವ ಕಾಲದಲ್ಲಿ **[ಪ್ರತ್ನಸ್ಯ]** ಪ್ರಾಚೀನವಾದ **[ಕಾಮ್ಯಂ]** ಕಾಮನಾಯೋಗ್ಯ ಜ್ಞಾನವನ್ನು **[ದುಹಾನಾಃ]** ಪೂರ್ಣಗೊಳಿಸುವ **[ಧೇನುಃ]** ಗೋವಿನಂತಿರುವ ವಾಣಿಯು **[ದಕ್ಷಿಣಾಯಾಃ]** ಜ್ಞಾನಪ್ರಾಪಕ ವಾಣಿಯ **[ಪುತ್ರಃ]** ಸಂತಾನ ಅಂದರೆ ಅದರಿಂದುತ್ಪನ್ನ ಜ್ಞಾನವು **[ಅಂತಃ]** ಒಳಭಾಗದಲ್ಲಿ **[ಚರತಿ]** ನಲಿಯುತ್ತದೆ. **[ದ್ಯೋತನಿಂ]** ಪ್ರಕಾಶರೂಪ ವಿದ್ಯೆಯನ್ನು **[ಅಶ್ವಿನೌ]** ಯಥಾರ್ಥ ಬೋಧಕ ಅಧ್ಯಾಪಕೋಪದೇಶಕರು **[ಅಜೀಗಃ]** ಸಮೀಪಕ್ಕಾಗಮಿಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಉಷೆಯನ್ನು ಉತ್ಪಾದಿಸುವನೋ ಹಾಗೆ ಆತ್ಮಜ್ಞಾನವು ಅಭಿಲಷಿತವನ್ನು ಮಾಡುತ್ತದೆ. ಸತ್ಯಾಸತ್ಯತೆಯನ್ನು ಪ್ರಕಟಗೊಳಿಸುತ್ತದೆ. ವಿದ್ಯಾಧರ್ಮದಿಂದ ಯಾರಿಗೆ ಶ್ರೇಷ್ಠ ಧರ್ಮ ಅಥವಾ ಜ್ಞಾನ ಲಭಿಸಿರುತ್ತದೆಯೋ ಅವರಿಗೆ ಪರಮ ಪುರುಷಾರ್ಥದ ಬೋಧೆಯಾಗುತ್ತದೆ.

ಈ ಮಂತ್ರದಲ್ಲಿ ಮೇಲೆ ಮತ್ತು ಕೆಳಗೆ ಇರುವ ಶಿಲ್ಪಿಗಳ ವಿಷಯ ಹೇಳಿದೆ.

**ಸುಯುಗ್ವಹಂತಿ ಪ್ರತಿ ವಾಮೃತೇನೋ-ರ್ಧ್ವಾ ಭವಂತಿ ಪಿತರೇವ ಮೇಧಾಃ ।**

**ಜರೇಥಾಮಸ್ಮದ್ವಿ ಪಣೇರ್ಮನೀಷಾಂ ಯುವೋರವಶ್ಚಕೃಮಾ ಯಾತಮರ್ವಾಕ್ ॥೨॥**

**ಪದಾರ್ಥ:-** **[ಸುಯುಕ್]** ಉತ್ತಮ ಕೃತ್ಯಗಳ ಸಂಯೋಜಕರು **[ಊರ್ಧ್ವಾಃ]** ಮೇಲಕ್ಕೆ ಸೆಳೆಯುವ **[ಮೇಧಾಃ]** ಬುದ್ಧಿಶಕ್ತಿಗಳು **[ಋತೇನ]** ಸತ್ಯದಿಂದ **[ವಾಂ]** ನಿಮ್ಮಿಬ್ಬರನ್ನೂ **[ವಹಂತಿ]** ಪಡೆದುಕೊಳ್ಳುತ್ತವೆ. **[ಪ್ರತಿ]** ಅವರನ್ನು ನಮಗೆ **[ಪಿತರೇವ]** ಪಾಲನೆ ಮಾಡುವ ತಂದೆ-ತಾಯಿಯರಂತೆ **[ಭವಂತಿ]** ಇರುವ ನೀವಿಬ್ಬರೂ **[ಜರೇಥಾಂ]** ಅವರ ಸ್ತುತಿ ಮಾಡಿರಿ. **[ಅಸ್ಮತ್]** ನಮಗೆ **[ವಿ, ಪಣೇಃ]** ವ್ಯವಹಾರದ **[ಮನೀಷಾಂ]** ಬುದ್ಧಿಯನ್ನು **[ಆ, ಯಾತಂ]** ಎಲ್ಲಾ ರೀತಿಯಿಂದ ಪ್ರಾಪ್ತಿಗೊಳಿಸಿರಿ. **[ಅರ್ವಾಕ್]** ಕೆಳಭಾಗದಲ್ಲಿ **[ಯುವೋಃ]** ನಿಮ್ಮಿಬ್ಬರ **[ಅವಃ]** ರಕ್ಷಣೆಯನ್ನು **[ಚಕೃಮ]** ನಾವು ಮಾಡುವೆವು.

**ಭಾವಾರ್ಥ:-** ವಾಯು ಮತ್ತು ಕಿರಣಗಳು ಮೇಲುಗಡೆ ಇರುವ ಸೂರ್ಯಾದಿಗಳಿಗೆ ತಲುಪಿಸುವಂತೆ ಬುದ್ಧಿಗೆ ಸದೃಶವಾಗಿರುವ ಸ್ತ್ರೀಯರು ಸುಖವು ಸಿಗುವಂತೆ ಮಾಡುವರು. ವಿದ್ಯಾವಂತರಲ್ಲಿ ಯಾರು ತಂದೆಗೆ ಸುಮನಾಗಿರುತ್ತಾರೋ ಅವರೊಂದಿಗೆ ಎಲ್ಲರೂ ಮಗನಂತೆ ವ್ಯವಹರಿಸಬೇಕು. ಎಲ್ಲ ವ್ಯವಹಾರಗಳನ್ನೂ ತಿಳಿದು ಯಥಾವತ್ ಮಾಡಬೇಕು.

ಅಗ್ನ್ಯಾದಿ ಇಂಧನಗಳಿಂದ ಚಲಿಸುವ ವಾಹನ ಮತ್ತು ಶಿಲ್ಪಿ ಜನ ಕೃತ್ಯವಿಲ್ಲಿ ಹೇಳಿದೆ.

**ಸುಯುಗ್ಭಿರಶ್ವೈಃ ಸುವೃತಾ ರಥೇನ ದಸ್ರಾವಿಮಂ ಶೃಣುತಂ ಶ್ಲೋಕಮದ್ರೇಃ ।**

**ಕಿಮಂಗ ವಾಂ ಪ್ರತ್ಯವರ್ತಿಂ ಗಮಿಷ್ಠಾ ಽಽಹುರ್ವಿಪ್ರಾಸೋ ಅಶ್ವಿನಾ ಪುರಾಜಾಃ ॥೩॥**

**ಪದಾರ್ಥ:-** **[ದಸ್ರೌ]** ದುಃಖದ ನಾಶ ಮಾಡುವವರು **[ಅಶ್ವಿನಾ]** ಸೂರ್ಯ-ಚಂದ್ರರಂತಿರುವ ಅಧ್ಯಾಪಕೋಪದೇಶಕರೇ! ನೀವಿಬ್ಬರೂ **[ಸುಯುಗ್ಭಿಃ]** ಉತ್ತಮ ರೀತಿಯಿಂದ ಸಂಯೋಜಿಸಲಾದ **[ಅಶ್ವೈಃ]** ಅಗ್ನ್ಯಾದಿ ಶಕ್ತಿಗಳಿಂದ **[ಸುವೃತಾ]** ಶ್ರೇಷ್ಠವಾದ **[ರಥೇನ]** ವಿಮಾನಾದಿ ವಾಹನಗಳಿಂದ **[ಅದ್ರೇಃ]** ಮೇಘಸದೃಶ ಜನರ **[ಇಮಂ]** ಈ **[ಶ್ಲೋಕಂ]** ವಾಣಿಯನ್ನು **[ಶೃಣುತಂ]** ಶ್ರವಣ ಮಾಡಿರಿ. **[ಅಂಗ]** ಸ್ನೇಹಿತರೇ! **[ವಾಂ]** ನಿಮ್ಮಿಬ್ಬರನ್ನು **[ಗಮಿಷ್ಠಾ]** ಗಮನ ಶೀಲರಾದ **[ಪುರೋಜಾಃ]** ಮೊದಲು ಜನಿಸಿದ **[ವಿಪ್ರಾಸಃ]** ಬುದ್ಧಿವಂತ ಜನರು **[ಆಹುಃ]** ಹೇಳುವರು. ನೀವಿಬ್ಬರೂ **[ಪ್ರತಿ, ಅವರ್ತಿಂ]** ಅಲಭ್ಯ ಪದಾರ್ಥಗಳನ್ನು **[ಕಿಂ]** ಯಾಕೆ ಪ್ರಾಪ್ತಿಗೊಳಿಸುವುದಿಲ್ಲ?

**ಭಾವಾರ್ಥ:-** ವಿದ್ಯಾವಂತರು ಅಗ್ನ್ಯಾದಿಗಳಿಂದ ಚಲಿಸುವಂತಹ ವಾಹನಗಳಲ್ಲಿ ಸಂಚರಿಸುತ್ತ ವ್ಯವಹಾರ ಮಾಡಿದರೆ ಎಂತೆಂತಹ ಐಶ್ವರ್ಯಗಳನ್ನು ಏಕೆ ಪಡೆಯಲಾರರು?

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ಮನ್ಯೇಥಾಮಾ ಗತಂ ಕಚ್ಚಿದೇವೈ-ರ್ವಿಶ್ವೇ ಜನಾಸೋ ಅಶ್ವಿನಾ ಹವಂತೇ । ಇಮಾ ಹಿ**

**ವಾಂ ಗೋಋಜೀಕಾ ಮಧೂನಿ ಪ್ರ ಮಿತ್ರಾಸೋ ನ ದದುರುಸ್ರೋ ಅಗ್ರೇ ॥೪॥**

**ಪದಾರ್ಥ:-** **[ಅಶ್ವಿನಾ]** ಅಧ್ಯಾಪಕೋಪದೇಶಕರೇ! ನೀವಿಬ್ಬರನ್ನು **[ವಿಶ್ವೇ]** ಸಂಪೂರ್ಣ **[ಜನಾಸಃ]** ಎಲ್ಲಾ ಜನರೂ **[ಹವಂತೇ]** ಗ್ರಹಣ ಮಾಡುವರು. **[ಅಗ್ರೇ]** ಮೊದಲು **[ಹಿ]** ಯಾವ ಕಾರಣದಿಂದ **[ಇಮಾಃ]** ಈ

**[ಗೋಋಜೀಕಾ]** ಗವ್ಯ ಪದಾರ್ಥಗಳಿಂದೊಡಗೂಡಿರುವ **[ಮಧೂನಿ]** ಸೋಮಲತೆಯ ರಸವನ್ನು **[ಮಿತ್ರಾಸಃ]** **[ನ]** ಮಿತ್ರ ಜನರಿಗೆ ಸಮನಾಗಿ **[ಪ್ರದದುಃ]** ಪ್ರದಾನ ಮಾಡುವಿರಿ. **[ಉಸ್ರಃ]** ಅವರ ಗೋವುಗಳನ್ನು **[ವಾಂ]** ನೀವಿಬ್ಬರೂ **[ಏವೈಃ]** ಮಿಂಚಿನಿಂದ ಚಲಿಸುವ ವಾಹನಗಳಿಂದ **[ಕತ್]** ಯಾವಾಗ **[ಆ, ಗತಂ]** ತಲುಪುವಿರಿ? **[ಚಿತ್]** ಹಾಗೂ **[ಆ, ಮನ್ಯೇಥಾಂ]** ತಿಳಿದುಕೊಳ್ಳುವಿರಿ.

**ಭಾವಾರ್ಥ:-** ವಿದ್ಯಾವಂತರು, ತಮ್ಮ ಸಮೀಪಕ್ಕೆ ಬರುವಂತಹ ಧಾರ್ಮಿಕರು ಪ್ರೀತಿಯಿಂದ ಸೇವಿಸುವವರೂ ಆದ ವಿದ್ಯಾರ್ಥಿಗಳಿಗೆ ಶ್ರೇಷ್ಠವಿಜ್ಞಾನವನ್ನು ಬೋಧಿಸಬೇಕು. ಅದರಿಂದ ಅವರೆಲ್ಲರೂ ಎಲ್ಲರೊಂದಿಗೆ ಸ್ನೇಹಿತರಂತೆ ವ್ಯವಹರಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಿರಃ ಪುರೂ ಚಿದಶ್ವಿನಾ ರಜಾಂ-ಸ್ಯಾಂಗೂಷೋ ವಾಂ ಮಘವಾನಾ ಜನೇಷು । ಏಹ**
**ಯಾತಂ ಪಥಿಭಿರ್ದೇವಯಾನೈ-ರ್ದಸ್ರಾವಿಮೇ ವಾಂ ನಿಧಯೋ ಮಧೂನಾಮ್ ।।೫।।**

**ಪದಾರ್ಥ:-** **[ದಸ್ರೌ]** ಕ್ಲೇಶನಾಶಕರಾದ **[ಮಘವಾನಾ]** ಧನ ಸಂಪನ್ನರಾದ **[ಅಶ್ವಿನಾ]** ಶಿಲ್ಪ ವಿದ್ಯೆಯನ್ನರಿತ ಅಧ್ಯಾಪಕೋಪದೇಶಕರೇ! **[ವಾಂ]** ನೀವಿಬ್ಬರು **[ದೇವಯಾನೈಃ]** ವಿದ್ಯಾವಂತರು ಚಲಿಸುವಂತಹ **[ಪಥಿಭಿಃ]** ಮಾರ್ಗಗಳಿಂದ **[ಪುರು]** **[ರಜಾಂಸಿ]** ಬಹಳಷ್ಟು ಲೋಕಗಳನ್ನು **[ತಿರಃ]** ಅಡ್ಡಾದಿಡ್ಡಿ ಮಾರ್ಗಗಳಿಂದ **[ಆಯಾತಂ]** ತಲುಪುವವರಾಗಿರಿ. **[ಇಹ]** ಎಲ್ಲಿ **[ವಾಂ]** ನಿಮ್ಮಿಬ್ಬರನ್ನು **[ಜನೇಷು]** ಮನುಷ್ಯರಲ್ಲಿ **[ಇಮೇ]** ಈ **[ಮಧೂನಾಂ]** ಮಾಧುರ್ಯ ಗುಣಗಳಿರುವಂತಹ **[ನಿಧಯಃ]** ಸಂಪತ್ತುಗಳು ಲಭಿಸುತ್ತವೆ. **[ಆಂಗೂಷಃ]** ವಿದ್ಯಾವಂತರು **[ಚಿತ್]** ಸಹ ಪ್ರಾಪ್ತರಾಗುವರು.

**ಭಾವಾರ್ಥ:-** ಯಾರು ವಿದ್ಯಾವಂತರ ದಾರಿಯನ್ನನುಸರಿಸಿ ಪದಾರ್ಥ ವಿದ್ಯೆಗಳ ಅನ್ವೇಷಣೆ ಮಾಡುವರೋ ಸಂಪೂರ್ಣ ವಿದ್ಯೆಗಳನ್ನು ಪಡೆದವರಾಗಿ ಜಲ, ಸ್ಥಳ ಮತ್ತು ಅಂತರಿಕ್ಷಗಳಲ್ಲಿ ಸಂಚರಿಸುತ್ತ ಲಕ್ಷ್ಮೀವಂತರಾಗುವರು ದಾರಿದ್ರ್ಯವನ್ನು ತಿರಸ್ಕರಿಸಿ ಧನವನ್ನು ಸ್ವೀಕರಿಸುವರು. ಅನ್ಯರೂ ಹಾಗೇ ಆಗುವಂತೆ ಮಾಡುವರು.

ಶಿಲ್ಪವಿದ್ಯಾಸಂಪನ್ನರು ಪರಸ್ಪರ ಸ್ನೇಹವನ್ನು ಬೆಳೆಸಿಕೊಂಡರೆ ಏನನ್ನು ಪಡೆಯಬಹುದೆಂಬುದನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಪುರಾಣಮೋಕಃ ಸಖ್ಯಂ ಶಿವಂ ವಾಂ ಯುವೋರ್ನರಾ ದ್ರವಿಣಂ ಜಹ್ನಾವ್ಯಾಮ್ ।**
**ಪುನಃ ಕೃಣ್ವಾನಾಃ ಸಖ್ಯಾ ಶಿವಾನಿ ಮಧ್ವಾ ಮದೇಮ ಸಹ ನೂ ಸಮಾನಾಃ ।।೬।।**

**ಪದಾರ್ಥ:-** **[ನರಾ]** ಸಭಾನಾಯಕ ಸೇನೇಶರೇ! **[ವಾಂ]** ನೀವಿಬ್ಬರೂ **[ಪುರಾಣಂ]** ಪ್ರಾಚೀನ ಕಾಲದಿಂದಲೂ ಸಿದ್ಧವಾದ **[ಓಕಃ]** ಎಲ್ಲಾ ಋತುಮಾನಗಳಲ್ಲೂ ಸುಖದಾಯಕ ಸ್ಥಾನದಂತಿರುವ **[ಶಿವಂ]** ಕಲ್ಯಾಣಕರವಾದ **[ಸಖ್ಯಂ]** ಸ್ನೇಹದ ಕೆಲಸಗಳನ್ನು ಮಾಡಿರಿ. **[ಜಹ್ನಾವ್ಯಾಂ]** ತ್ಯಾಗ ಮಾಡುವಂತಹ ನೀತಿಗಳಲ್ಲಿ **[ಯುವೋಃ]** ನಿಮ್ಮಿಬ್ಬರಿಗೆ **[ದ್ರವಿಣಂ]** ಧನವು ಲಭಿಸಲಿ. **[ಪುನಃ]** ಮತ್ತೆ **[ಶಿವಾನಿ]** ಸುಖಕಾರಕವಾದ **[ಸಖ್ಯಾ]** ಸ್ನೇಹಕರ್ಮಗಳನ್ನು **[ಕೃಣ್ವಾನಾಃ]** ಮಾಡುವವರಾಗಿ **[ಸಮಾನಾಃ]** ಗುಣ ಕರ್ಮ ಸ್ವಭಾವಗಳಿಂದ ಸಮಾನರಾದ ನಾವು **[ಮಧ್ವಾ]** **[ಸಹ]** ಮಧುರ ಭಾವದೊಂದಿಗೆ **[ನು]** **[ಮದೇಮ]** ಬೇಗನೇ ಆನಂದಗೊಳಿಸುವೆವು.

**ಭಾವಾರ್ಥ:-** ವಿದ್ಯಾವಂತರೂ, ಅವಿದ್ಯಾವಂತರೂ ಪರಸ್ಪರ ಸ್ನೇಹವನ್ನು ಬೆಳೆಸಿಕೊಂಡರೆ ಅನಾದಿ ಸಿದ್ಧವಾದ ಕಲ್ಯಾಣಕರ ಬ್ರಹ್ಮನನ್ನು ಸಂಪತ್ತು ಮತ್ತು ಜ್ಞಾನಗಳನ್ನು ಪಡೆದುಕೊಂಡು ಧಾರ್ಮಿಕರಾಗಿ ದುಷ್ಟವ್ಯಸನಗಳನ್ನು ತ್ಯಜಿಸಿ ಸದಾ ಸುಖಿಗಳಾಗುವರು.

ಶಿಲ್ಪ ವಿದ್ಯೆಗಳನ್ನು ಉಪದೇಶಿಸಲು ಆಜ್ಞೆಯಂತಹ ವಿಷಯವನ್ನು ಇಲ್ಲಿ ಹೇಳಲಾಗಿದೆ.

**ಅಶ್ವಿನಾ ವಾಯುನಾ ಯುವಂ ಸುದಕ್ಷಾ ನಿಯುದ್ಭಿಶ್ಚ ಸಜೋಷಸಾ ಯುವಾನಾ ।**

**ನಾಸತ್ಯಾ ತಿರೋಅಹ್ನ್ಯಂ ಜುಷಾಣಾ ಸೋಮಂ ಪಿಬತಮಸ್ರಿಧಾ ಸುದಾನೂ ॥೭॥**

**ಪದಾರ್ಥ:-** [**ಯುವಾನಾ**] ಯೌವನಾವಸ್ಥೆಯನ್ನು ಪಡೆದಿರುವ [**ನಾಸತ್ಯಾ**] ಅಸತ್ಯ ವ್ಯವಹಾರಗಳನ್ನು ಮಾಡದಿರುವ [**ಸುದಕ್ಷಾ**] ದಕ್ಷರಾದ [**ಸಜೋಷಸಾ**] ಸಮಾನ ಪ್ರೀತಿಯನ್ನು ಸೇವಿಸುವವರಾದ [**ತಿರೋ ಅಹ್ನ್ಯಂ**] ರಾತ್ರಿಯನ್ನು ಮರೆ ಮಾಡುವಂತಹ ಉಷಃಕಾಲದಲ್ಲಿ ಯೋಗ್ಯವಾದದ್ದನ್ನು [**ಜುಷಾಣಾ**] ಸೇವಿಸುವವರಾಗಿ [**ಸೋಮಂ**] ಓಷಧಿರಸವನ್ನು [**ಪಿಬತಂ**] ಪಾನಮಾಡಿರಿ. [**ಅಸ್ರಿಧಾ**] ಅಹಿಂಸಕ [**ಸುದಾನೂ**] ಉತ್ತಮ ಪದಾರ್ಥಗಳನ್ನು ಕೊಡುವ [**ಅಶ್ವಿನಾ**] ಶಿಲ್ಪ ವಿದ್ಯೆಯ ಪಾಠನ, ಗ್ರಹಣ ಮಾಡುವಂತಹ ಸ್ವಾಮಿ ಸೇವಕರೇ! [**ಯುವಂ**] ನೀವಿಬ್ಬರೂ [**ವಾಯುನಾ**] ಗಾಳಿಯಿಂದ [**ನಿಯುದ್ಭಿಶ್ಚ**] ನಿಶ್ಚಿತ ವಾಹನಗಳಲ್ಲಿ ಬರುವವರಾಗಿರಿ.

**ಭಾವಾರ್ಥ:-** ಮನುಷ್ಯರೇ! ನೀವು ಹಿಂಸೆ ಮತ್ತು ಅಧರ್ಮ ವ್ಯವಹಾರಗಳನ್ನು ತ್ಯಜಿಸಿ ವಾಯು ವಿದ್ಯುತ್ ಮುಂತಾದ ಪದಾರ್ಥ ವಿಜ್ಞಾನಗಳನ್ನು ತಿಳಿದುಕೊಂಡು ಬೇರೆಯವರಿಗೂ ಅದನ್ನು ತಿಳಿಸಿಕೊಡಿರಿ. ಬಹುಕಾಲ ಬದುಕುವವರಾಗಿರಿ.

ಶಿಲ್ಪ ವಿದ್ಯೆಯಿಂದ ತಯಾರಿಸಿದ ವಾಹನಗಳಲ್ಲಿ ಗಮನಾಗಮನ ಮಾಡುವ ವಿಷಯವನ್ನಿಲ್ಲಿ ಹೇಳಿದೆ.

**ಅಶ್ವಿನಾ ಪರಿ ವಾಮಿಷಃ ಪುರೂಚೀ-ರೀಯುರ್ಗೀರ್ಭಿರ್ಯತಮಾನಾ ಅಮೃಧ್ರಾಃ ।**

**ರಥೋ ಹ ವಾಮೃತಜಾ ಅದ್ರಿಜೂತಃ ಪರಿ ದ್ಯಾವಾಪೃಥಿವೀ ಯಾತಿ ಸದ್ಯಃ ॥೮॥**

**ಪದಾರ್ಥ:-** [**ಅಶ್ವಿನಾ**] ಸಂಪೂರ್ಣ ವಿದ್ಯೆಯಲ್ಲಿ ವ್ಯಾಪ್ತರಾಗಿ ರಮಿಸುವಂತಹ [**ವಾಂ**] ನಿಮ್ಮಿಬ್ಬರನ್ನು [**ಋತಜಾಃ**] ಸತ್ಯದಿಂದ ಉತ್ಪನ್ನವಾದ [**ಅದ್ರಿಜೂತಃ**] ಮೇಘ ಮಂಡಲದಲ್ಲಿ ಬೇಗನೆ ಚಲಿಸುವ [**ರಥಃ**] ವಾಹನವನ್ನು / ವಿಮಾನವನ್ನು ತಯಾರಿಸಿಕೊಂಡು [**ದ್ಯಾವಾ ಪೃಥಿವೀ**] ಭೂಮ್ಯಾಕಾಶಗಳಲ್ಲಿ [**ಸದ್ಯಃ**] ಶೀಘ್ರವಾಗಿ [**ಪರಿ, ಯಾತಿ**] ಎಲ್ಲ ಕಡೆಗಳಲ್ಲೂ ಸಂಚರಿಸಿರಿ. [**ವಾಂ**] ನೀವಿಬ್ಬರೂ [**ಹ**] ನಿಶ್ಚಯವಾಗಿಯೂ [**ಗೀರ್ಭಿಃ**] ಮಾತುಗಳಿಂದ ಹೇಗೋ ಹಾಗೆ [**ಅಮೃಧ್ರಾಃ**] ಅಧ್ಯಾಪಕೋಪದೇಶಕರಾಗಿ [**ಯತಮಾನಾಃ**] ಪ್ರಯತ್ನಿಸುವವರಾಗಿ [**ಪುರೂಚೀಃ**] ಸುಖದಾಯಕವಾದ [**ಇಷಃ**] ಇಚ್ಛಾಸಿದ್ಧಿಯನ್ನು [**ಪರಿ, ಈಯುಃ**] ಎಲ್ಲ ರೀತಿಯಿಂದಲೂ ಪಡೆದುಕೊಳ್ಳಿರಿ.

**ಭಾವಾರ್ಥ:-** ಯಾರು ಅಗ್ನ್ಯಾದಿ ವಿದ್ಯೆಗಳಿಂದ ವಿಮಾನಾದಿಗಳನ್ನು ತಯಾರಿಸಿಕೊಳ್ಳುವರೋ ಅವರು ಅಭೀಷ್ಟಸಿದ್ಧಿಗಾಗಿ ತಮ್ಮ ಇಚ್ಛೆಯಂತೆ ಎಲ್ಲಿ ಬೇಕೋ ಅಲ್ಲಿ ಸಂಚರಿಸುವರು.

ಈ ಮಂತ್ರದಲ್ಲಿ ಶಿಲ್ಪ ವಿದ್ಯೆಯ ಫಲವನ್ನು ತಿಳಿಸಲಾಗಿದೆ.

**ಅಶ್ವಿನಾ ಮಧುಷುತ್ತಮೋ ಯುವಾಕುಃ ಸೋಮಸ್ತಂ ಪಾತಮಾ ಗತಂ ದುರೋಣೇ ।**

**ರಥೋ ಹ ವಾಂ ಭೂರಿ ವರ್ಪಃ ಕರಿಕ್ರ-ತ್ಸುತಾವತೋ ನಿಷ್ಕೃತಮಾಗಮಿಷ್ಠಃ ॥೯॥**

**ಪದಾರ್ಥ:-** [**ಅಶ್ವಿನಾ**] ರಾಜ ಮತ್ತು ಸೇನಾಪತಿಗಳೇ! [**ಹ**] ನಿಶ್ಚಯವಾಗಿ [**ವಾಂ**] ನೀವಿಬ್ಬರೂ [**ರಥಃ**] ನಿಮ್ಮ ನಿಮ್ಮ ರಥಗಳಲ್ಲಿ [**ಭೂರಿ**] ಅತಿಶಯ [**ವರ್ಪಃ**] ರೂಪ ಸಂಪನ್ನರಾಗಿ [**ಸುತಾವತಃ**] ಸಂಪಾದಿಸಿದ

ಖಜಾನೆಯ [ನಿಷ ತು] ಸಿದ್ಧ ವಿಷಯಗಳನ್ನು [ಆಗಮಿಷ್ಠಃ] ಅತಿಶಯವಾಗಿ ಪ್ರಾಪ್ತಿಗೊಳಿಸುವಂತಹ [ಕರಿಕ್ರತ್] ನಿರಂತರಗೊಳಿಸುವ [ಮಧುಷುತ್ತಮಃ] ಮಧುರರಸವನ್ನು ತಯಾರಿಸುವ [ಯುವಾಕುಃ] ಸಂಯುಕ್ತ ಅಸಂಯುಕ್ತ [ಸೋಮಃ] ಐಶ್ವರ್ಯವಿದೆಯೋ [ತಂ] ಅದನ್ನು [ದುರೋಣೇ] ಮನೆಯಲ್ಲಿ [ಪಾತಂ] ರಕ್ಷಣೆ ಮಾಡಿರಿ. [ಆ, ಗತಂ] ಅದಕ್ಕಾಗಿ ಅನ್ಯ ದೇಶದಿಂದ ಸ್ವದೇಶಕ್ಕೆ ಬನ್ನಿರಿ.

**ಭಾವಾರ್ಥ:-** ಯಾವ ಮನುಷ್ಯನು ಶಿಲ್ಪವಿದ್ಯೆಯಿಂದ ಬಹು ವಿಧ ಯಂತ್ರಗಳನ್ನು ತಯಾರಿಸಿ ವಾಹನಗಳಲ್ಲಿ ಜೋಡಿಸಿಕೊಂಡು ಸಂಚರಿಸಿದರೆ ತನ್ನ ಮನೆ ಕುಲ ದೇಶ ಎಲ್ಲಾ ಕಡೆಗಳಲ್ಲೂ ಸಮಗ್ರ ಐಶ್ವರ್ಯವನ್ನು ಪಡೆದುಕೊಳ್ಳಬಹುದು.

ಈ ಸೂಕ್ತದಲ್ಲಿ ಶಿಲ್ಪಿ ಜನರ ಕೆಲಸ ಕಾರ್ಯಗಳನ್ನು ವರ್ಣಿಸಿರುವುದರಿಂದ ಹಿಂದಿನ ಸೂಕ್ತದೊಂದಿಗೆ ಈ ಸೂಕ್ತಾರ್ಥವು ಸಂಗತವಾಗಿದೆ.

**ಐವತ್ತೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೫೯

ಮಂತ್ರಸಂಖ್ಯೆ ೯ । ವಿಶ್ವಾಮಿತ್ರ ಋಷಿಃ । ಮಿತ್ರೋ ದೇವತಾ । ೧, ೨, ೫ ತ್ರಿಷ್ಟುಪ್, ೩ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೬, ೯ ನಿಚೃದ್ಗಾಯತ್ರೀ, ೭, ೮ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಮಿತ್ರನ ಗುಣವನ್ನು ಈ ಮಂತ್ರದಲ್ಲಿ ಹೇಳಿದೆ.

**ಮಿತ್ರೋ ಜನಾನ್ ಯಾತಯಾತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಮ್।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥೧॥**

**ಪದಾರ್ಥ:-** [ಬ್ರುವಾಣಃ] ಉಪದೇಶದಿಂದ ಪ್ರೇರಣೆ ಮಾಡುವವನಾಗಿ [ಮಿತ್ರಃ] ಎಲ್ಲರಿಗೂ ಗೆಳೆಯನಾದವನು [ಜನಾನ್] ಮನುಷ್ಯರನ್ನು [ಅನಿಮಿಷಾ] ಹಗಲು - ರಾತ್ರಿಗಳಲ್ಲಿ ನಡೆಯುವಂತಹ ಕಾರ್ಯಗಳಿಂದ [ಯಾತಯಾತಿ] ಪುರುಷಾರ್ಥವನ್ನು ಸಾಧಿಸುವನು. [ಮಿತ್ರಃ] ಸೂರ್ಯನಿಗೆ ಸಮನಾದ ಪರಮಾತ್ಮನು [ಪೃಥಿವೀಂ] ಭೂಮಿಯನ್ನು [ಉತ] ಮತ್ತು [ದ್ಯಾಂ] ದ್ಯುಲೋಕವನ್ನು ನಿರಂತರವಾಗಿ [ದಧಾರ] ಧಾರಣ ಮಾಡಿರುವನು. [ಮಿತ್ರಃ] ಎಲ್ಲರ ಗೆಳೆಯನು [ಕೃಷ್ಟೀಃ] ಸೆಳೆದುಕೊಳ್ಳುವ ಮತ್ತು ಸಂಗ್ರಹಿಸುವ ಮನುಷ್ಯ ರೂಪ ಪ್ರಜೆಗಳನ್ನು [ಅಭಿ, ಚಷ್ಟೇ] ಉಪದೇಶಿಸುವನು. [ಮಿತ್ರಾಯ] ಸ್ನೇಹಿತನಿಗಾಗಿ [ಘೃತಂ] ಮಧುರವಾದ [ಹವ್ಯಂ] ಹವನೀಯ ದ್ರವ್ಯಗಳನ್ನು [ಜಹೋತ] ಹೋಮ ಮಾಡಿರಿ.

**ಭಾವಾರ್ಥ:-** ಯಾವ ಮನುಷ್ಯರು ಸತ್ಯೋಪದೇಶವನ್ನು ಮಾಡಿ ಸತ್ಯವಿದ್ಯೆಯನ್ನು ಬೋಧಿಸುತ್ತ ಸ್ನೇಹ ಭಾವವನ್ನು ರಕ್ಷಿಸಿಕೊಂಡು ಸರ್ವಧಾರಕ ಪರಮಾತ್ಮನ ಸರ್ವ ವ್ಯವಸ್ಥಾಪಕ ರಾಜನ ಸತ್ಕಾರವನ್ನು ಮಾಡುವರೋ ಅವರು ಎಲ್ಲರಿಗೂ ಮಿತ್ರರಾಗುತ್ತಾರೆ.

ಈಶ್ವರ ಮತ್ತು ಆಪ್ತಮಿತ್ರನ ವಿಚಾರವನ್ನಿಲ್ಲಿ ಹೇಳಿದೆ.

**ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ ಯಸ್ತ ಆದಿತ್ಯ ಶಿಕ್ಷತಿ ವ್ರತೇನ । ನ ಹನ್ಯತೇ**
**ನ ಜೀಯತೇ ತ್ವೋತೋ ನೈನಮಂಹೋ ಅಶ್ನೋತ್ಯಂತಿತೋ ನ ದೂರಾತ್ ॥೨॥**

**ಪದಾರ್ಥ:-** [**ಮಿತ್ರ**] ಯಥಾರ್ಥವಕ್ತಾ ಜಗದೀಶ್ವರನೇ! [**ಯಃ**] ಯಾವ [**ಮರ್ತಃ**] ಮನುಷ್ಯನು [**ಪ್ರಯಸ್ವಾನ್**] ಪ್ರಯತ್ನಶೀಲನು [**ಅಸ್ತು**] ಆಗಿರುವನೋ [**ಆದಿತ್ಯಃ**] ಅವಿನಾಶಿ ಸ್ವರೂಪನೇ! [**ತೇ**] ನಿನ್ನ [**ವ್ರತೇನ**] ಕೆಲಸ ಕಾರ್ಯಗಳಿಂದ [**ಪ್ರ, ಶಿಕ್ಷತಿ**] ಅನ್ಯರಿಗೆ ಶಿಕ್ಷಣ ನೀಡುತ್ತಾನೋ [**ಸಃ**] ಅವನು [**ತ್ವೋತಃ**] ನಿನ್ನಿಂದ ರಕ್ಷಿತ ಅನ್ಯ ಜನರಿಂದ [**ನ**] [**ಹನ್ಯತೇ**] ಸಾಯಿಸಲಾಗುವುದಿಲ್ಲ. [**ನ**] [**ಜೀಯತೇ**] ಗೆಲ್ಲಲೂ ಆಗುವುದಿಲ್ಲ. [**ಏನಂ**] ಇವನನ್ನು [**ಅಂತಿತಃ**] ಸಮೀಪದಿಂದ [**ಅಂಹಃ**] ಪಾಪವು [**ನ**] [**ಅಶ್ನೋತಿ**] ಸ್ಪರ್ಶ ಮಾಡುವುದಿಲ್ಲ. [**ನ**] [**ದೂರಾತ್**] ದೂರದಿಂದಲೂ ಪ್ರಾಪ್ತವಾಗುವುದಿಲ್ಲ.

**ಭಾವಾರ್ಥ:-** ಯಾವ ಮನುಷ್ಯನು ಈಶ್ವರನ ಗುಣ ಕರ್ಮ ಸ್ವಭಾವಗಳಂತೆ ತನ್ನ ಗುಣ, ಕರ್ಮ ಸ್ವಭಾವಗಳನ್ನೂ ಒಂದುಗೂಡಿಸಿಕೊಂಡು ನ್ಯಾಯಮಾರ್ಗದಿಂದ ಎಲ್ಲರಿಗೂ ಶಿಕ್ಷಣವನ್ನು ನೀಡುತ್ತ ಪರಮಾತ್ಮನಿಂದ ರಕ್ಷಿತನಾಗಿ ಯಥಾರ್ಥ ಬೋಧಿಸುವವನೋ, ಅವನು ಯಾವುದೇ ರೀತಿಯಿಂದ ಪರಾಜಯ ಪಾಪಕರ್ಮಗಳ ದೋಷ ಪಕ್ಷಪಾತ ಇವುಗಳಿಂದ ಸದಾ ಮುಕ್ತನಾಗಿರುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅನಮೀವಾಸ ಇಳಯಾ ಮದಂತೋ ಮಿತಜ್ಞವೋ ವರಿಮನ್ನಾ ಪೃಥಿವ್ಯಾಃ ।**
**ಆದಿತ್ಯಸ್ಯ ವ್ರತಮುಪಕ್ಷಿಯಂತೋ ವಯಂ ಮಿತ್ರಸ್ಯ ಸುಮತೌ ಸ್ಯಾಮ ।।೩।।**

**ಪದಾರ್ಥ:-** [**ಆನಮೀವಾಸ**] ಶರೀರಾತ್ಮಗಳಿಗೆ ರೋಗ ಇಲ್ಲದವನು [**ಇಳಯಾ**] ಸುಶಿಕ್ಷಿತ ವಾಣಿಯಿಂದ [**ಮದಂತಃ**] ಸಂತೋಷಗೊಳ್ಳುತ್ತ [**ಮಿತಜ್ಞವಃ**] ಮಿತವಾದ ಜಾನುಗಳಿರುವ [**ಪೃಥಿವ್ಯಾಃ**] ಭೂಮಿಯ ಹಾಗೂ [**ಆದಿತ್ಯಸ್ಯ**] ಸೂರ್ಯನ [**ವರಿಮನ್**] ಶ್ರೇಷ್ಠಗುಣಗಳಿಂದೊಡಗೂಡಿ [**ವ್ರತಂ**] ಕ್ಷಮೆ/ನ್ಯಾಯ ಒದಗಿಸುವ ಕೆಲಸಗಳನ್ನು [**ಆ, ಉಪಕ್ಷಿಯಂತಃ**] ಪಡೆದುಕೊಳ್ಳುತ್ತ [**ವಯಂ**] ನಾವು [**ಮಿತ್ರಸ್ಯ**] ಎಲ್ಲರ ಮಿತ್ರ ಪರಮೇಶ್ವರನ [**ಸುಮತೌ**] ಶ್ರೇಷ್ಠ ಬುದ್ಧಿಯಲ್ಲಿ [**ಸ್ಯಾಮ**] ನೆಲೆಗೊಳ್ಳೋಣ.

**ಭಾವಾರ್ಥ:-** ಯಾರು ಪರಮೇಶ್ವರನೊಂದಿಗೆ / ಯಥಾರ್ಥನುಡಿಯುವವರೊಂದಿಗೆ ಸ್ನೇಹಭಾವವನ್ನು ಮಾಡುವವರಾಗಿ ಕ್ಷಮೆ, ವಿದ್ಯೆ, ನ್ಯಾಯ ಮುಂತಾದ ಗುಣಗಳನ್ನು ಪಡೆದು ಧರ್ಮಮಾರ್ಗದಲ್ಲಿದ್ದು ಪರಮೇಶ್ವರನ ಪ್ರೀತಿಗೆ ಪಾತ್ರರಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಯಂ ಮಿತ್ರೋ ನಮಸ್ಯಃ ಸುಶೇವೋ ರಾಜಾ ಸುಕ್ಷತ್ರೋ ಅಜನಿಷ್ಟ ವೇಧಾಃ ।**
**ತಸ್ಯ ವಯಂ ಸುಮತೌ ಯಜ್ಞಿಯಸ್ಯಾ-ಪಿ ಭದ್ರೇ ಸೌಮನಸೇ ಸ್ಯಾಮ ।।೪।।**

**ಪದಾರ್ಥ:-** [**ಅಯಂ**] ಈ ಪರಮಾತ್ಮನು [**ಮಿತ್ರಃ**] ಮಿತ್ರನು [**ಸುಶೇವಃ**] ಸುಖದಾಯಕನು [**ಸುಕ್ಷತ್ರಃ**] ಯಾವನ ರಾಜ್ಯವು ಸುಖಮಯವೋ ಅಂತಹ [**ರಾಜಾ**] ಭೂಪಾಲಕನು [**ವೇಧಾಃ**] ಬುದ್ಧಿವಂತನು [**ನಮಸ್ಯಃ**] ಸತ್ಕಾರಾರ್ಹನು [**ಅಜನಿಷ್ಟ**] ಜನಿಸಿದನು. [**ತಸ್ಯ**] ಅವನ [**ಯಜ್ಞಿಯಸ್ಯ**] ಸತ್ಯವ್ಯವಹಾರವನ್ನುತ್ಪಾದಿಸುವ [**ಸುಮತೌ**] ಉತ್ತಮ ಬುದ್ಧಿಯಲ್ಲಿ [**ಸೌಮನಸೇ**] ಮಾನಸಿಕ ವ್ಯವಹಾರದಲ್ಲಿ [**ಭದ್ರೇ**] ಕಲ್ಯಾಣಕಾರಕ ವ್ಯವಹಾರದಲ್ಲಿ [**ಅಪಿ**] ಇನ್ನೂ [**ವಯಂ**] ನಾವು [**ಸ್ಯಾಮ**] ಇರುವೆವು.

**ಭಾವಾರ್ಥ:-** ಈಶ್ವರನು ಮತ್ತು ನ್ಯಾಯದಿಂದ ರಾಜ್ಯಶಾಸನ ಮಾಡುವ ರಾಜನು ಸತ್ಕಾರಾರ್ಹರು. ಸಜ್ಜನರು ಸಜ್ಜನರ ಕರ್ಮಗಳಲ್ಲಿ ನೆಲೆಗೊಂಡಿರುವರು. ನಾವು ಅದೇರೀತಿ ವ್ಯವಹಾರ ಮಾಡಬೇಕು.

ಸ್ನೇಹಿತನಿಗೆ ಪ್ರಿಯ ಪದಾರ್ಥಗಳನ್ನು ದಾನ ಮಾಡಿ ಎಂಬುದನ್ನು ಇಲ್ಲಿ ಹೇಳಿದೆ.

**ಮಹಾಁ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

**ತಸ್ಮಾ ಏತತ್ಪನ್ಯತಮಾಯ ಜುಷ್ಟ-ಮಗ್ನೌ ಮಿತ್ರಾಯ ಹವಿರಾ ಜುಹೋತ ॥೫॥**

**ಪದಾರ್ಥ:-** [**ಆದಿತ್ಯಃ**] ಸೂರ್ಯನಂತೆ ಉತ್ತಮ ಗುಣಗಳ ಪ್ರಕಾಶಕನು [**ಮಹಾನ್**] ದೊಡ್ಡ-ದೊಡ್ಡ ಗುಣಗಳಿರುವವನು [**ಸುಶೇವಃ**] ಶ್ರೇಷ್ಠ ಸುಖ ಭೋಕ್ತಾ [**ಯಾತ ಯಜ್ಜನಃ**] ಪ್ರೇರಣಾದಾಯಕ ಮನುಷ್ಯನು [**ನಮಸಾ**] ಸತ್ಕಾರದಿಂದ [**ಉಪಸದ್ಯಃ**] ಪಡೆಯಲು ಯೋಗ್ಯನು. ಅವನನ್ನು [**ಗೃಣತೇ**] ಎಲ್ಲರೂ ಸ್ತುತಿ ಮಾಡುವರು. [**ತಸ್ಮೈ**] ಅಂತಹ [**ಪನ್ಯತಮಾಯ**] ಪ್ರಶಂಸಾರ್ಹನಾದ [**ಮಿತ್ರಾಯ**] ಜೀವದಂತಿರುವ ಮಿತ್ರನಿಗೆ [**ಅಗ್ನೌ**] ಅಗ್ನಿಯಲ್ಲಿ [**ಹವಿಃ**] ಹವನೀಯ ಪದಾರ್ಥಗಳನ್ನು [**ಏತತ್**] ಈ [**ಜುಷ್ಟಂ**] ಇಷ್ಟವಾದ ಪದಾರ್ಥವನ್ನು [**ಆ**] [**ಜುಹೋತ**] ಹೋಮ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನಂತೆ ಯಾರು ವಿದ್ಯಾ-ಧರ್ಮಗಳಿಗೆ ಪ್ರಕಾಶಮಾನರಾಗಿರುವರೋ ಅವರೇ ಯೋಗ್ಯರೆನಿಸಿಕೊಳ್ಳುತ್ತಾರೆ. ಅಂತಹ ವಿದ್ವಾಂಸರು ಹವನೀಯ ಯೋಗ್ಯ ಪದಾರ್ಥಗಳನ್ನು ಅಗ್ನಿಗೆ ಅರ್ಪಿಸಿ ದೇವತೆಗಳನ್ನು ಹೇಗೆ ಸಂತೃಪ್ತಗೊಳಿಸುವರೋ, ಹಾಗೆಯೇ ವಿದ್ಯಾರ್ಥಿಗಳಿಗೆ ಉತ್ತಮ-ವಿದ್ಯೆ, ಧರ್ಮ ಮತ್ತು ಗುಣಗಳನ್ನು ಕೊಡುವವರಾಗಿ ಎಲ್ಲಾ ಮನುಷ್ಯರನ್ನೂ ಸಂತೃಪ್ತಗೊಳಿಸುತ್ತಾರೆ.

ಈ ಮಂತ್ರದಲ್ಲಿ ಪ್ರಜೆ, ರಾಜ ಮತ್ತು ಮಿತ್ರರ ಗುಣ ಹೇಳಿದೆ.

**ಮಿತ್ರಸ್ಯ ಚರ್ಷಣೀಧೃತೋಽವೋ ದೇವಸ್ಯ ಸಾನಸಿ । ದ್ಯುಮ್ನಂ ಚಿತ್ರಶ್ರವಸ್ತಮಮ್ ॥೬॥**

**ಪದಾರ್ಥ:-** [**ಚರ್ಷಣೀಧೃತಂ**] ಮನುಷ್ಯರನ್ನು ಧಾರಣ ಮಾಡುವವನು [**ಮಿತ್ರಸ್ಯ**] ಸ್ನೇಹಿತನಾದ [**ದೇವಸ್ಯ**] ವಿದ್ಯಾವಂತ [**ಸಾನಸಿ**] ಪ್ರಾಚೀನವಾದ [**ಅವಃ**] ರಕ್ಷಣಾದಿ ಸಾಮಗ್ರಿ [**ಚಿತ್ರ ಶ್ರವಸ್ತಮಂ**] ಅತಿಯಾಗಿರುವುದರಿಂದ ಅದ್ಭುತ ಶ್ರವಣ ಅನ್ನಾದಿಗಳಿಂದ ಸಿದ್ಧನಾಗಿ [**ದ್ಯುಮ್ನಂ**] ಯಶದಾಯಕ ವಿಜ್ಞಾನದಿಂದ ಪ್ರಜೆಗಳ ರಕ್ಷಣೆ ಮಾಡಲು ಸಮರ್ಥನಾಗುವನು.

**ಭಾವಾರ್ಥ:-** ಯಾರು ಅನಾದಿ ಸಿದ್ಧವಾದ ವಿದ್ಯೆಯನ್ನು ಪಡೆದುಕೊಂಡು ಸಮಗ್ರ ಪ್ರಜೆಗಳ ರಕ್ಷಣೆ ಮಾಡುವರೋ ಅವರು ಇಹ-ಪರ ಎರಡೂ ಲೋಕಗಳಲ್ಲಿ ಸುಖ ಪಡೆಯುವರು.

ಸ್ನೇಹಭಾವದಿಂದ ಈಶ್ವರನ ಪದಾರ್ಥ ರಚನೆ ಸೇವನೆಗಳನ್ನಿಲ್ಲಿ ಹೇಳಿದೆ.

**ಅಭಿ ಯೋ ಮಹಿನಾ ದಿವಂ ಮಿತ್ರೋ ಬಭೂವ ಸಪ್ರಥಾಃ ।**

**ಅಭಿ ಶ್ರವೋಭಿಃ ಪೃಥಿವೀಮ್ ॥೭॥**

**ಪದಾರ್ಥ:-** [**ಯಃ**] ಯಾವನು [**ಸಪ್ರಥಾಃ**] ವಿಸ್ತಾರವಾದ ಜಗತ್ತಿನೊಂದಿಗೆ ಇರುವನೋ, [**ಮಿತ್ರಃ**] ಮಿತ್ರನಂತಿರುವ ಜಗದೀಶ್ವರನು. [**ಮಹಿನಾ**] ತನ್ನ ಮಹಿಮೆಯಿಂದ [**ದಿವಂ**] ತೇಜೋಮಯ ಸೂರ್ಯನನ್ನುತ್ಪಾದಿಸಿ

[ಅಭಿ] ಸಂಮ್ಮುಖ [ಬಭೂವ] ನಾಗುವನು. [ಶ್ರವೋಭಿಃ] ಅನ್ನಾದಿ ಪದಾರ್ಥಗಳೊಂದಿಗೆ [ಪೃಥಿವೀಂ] ಭೂಮಿಯನ್ನುತ್ಪಾದಿಸಿ [ಅಭಿ] ಸಮ್ಮುಖನಾಗುತ್ತಾನೆ.

**ಭಾವಾರ್ಥ:-** ಮನುಷ್ಯರೇ! ಯಾವ ಪರಮಾತ್ಮನು ಸೂರ್ಯ ಭೂಮಂಡಲಾದಿಗಳನ್ನು ರಚಿಸಿ ಸರ್ವರನ್ನೂ ಜ್ಞಾನ-ಧಾರಣ-ನಿಯಮಗಳಿಗೆ ಬದ್ಧರಾಗಿಸಿರುವನೋ ಅವನ ಉಪಾಸನೆಯನ್ನು ಎಲ್ಲರೂ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಿತ್ರಾಯ ಪಂಚ ಯೇಮಿರೇ ಜನಾ ಅಭಿಷ್ಟಿಶವಸೇ । ಸ ದೇವಾನ್ ವಿಶ್ವಾನ್ ಬಿಭರ್ತಿ ॥೮॥**

**ಪದಾರ್ಥ:-** [ಪಂಚ] ಪಂಚಪ್ರಾಣಗಳಂತೆ [ಜನಾಃ] ವಿದ್ವಾಂಸರು [ಅಭಿಷ್ಟಿಶವಸೇ] ಅಪೇಕ್ಷಿತಬಲವಿರುವ [ಮಿತ್ರಾಯ] ಮಿತ್ರನಂತೆ ಸುಖದಾಯಕ ಪರಮಾತ್ಮನನ್ನು [ಯೇಮಿರೇ] ಪಡೆಯುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ತಡೆ ಹಿಡಿಯಲಾದ ಪ್ರಾಣವು ಇಂದ್ರಿಯಗಳನ್ನು ತಡೆಹಿಡಿಯುತ್ತದೆಯೋ ಹಾಗೆಯೇ ಯೋಗಿಗಳು ಪರಮಾತ್ಮನನ್ನು ತನ್ನಲ್ಲಿ ನೆಲೆಗೊಳಿಸುವರು.

ಮಿತ್ರತ್ವದಿಂದ ಪರಮೇಶ್ವರನ ಉಪಾಸನೆ ಇಲ್ಲಿ ಹೇಳಲಾಗಿದೆ.

**ಮಿತ್ರೋ ದೇವೇಷ್ವಾಯುಷು ಜನಾಯ ವೃಕ್ತಬರ್ಹಿಷೇ । ಇಷ ಇಷ್ಟವ್ರತಾ ಅಕಃ ॥೯॥**

**ಪದಾರ್ಥ:-** [ಮಿತ್ರಃ] ಈಶ್ವರನು [ವೃಕ್ತ ಬರ್ಹಿಷೇ] ಕಿರಿದಾದ ನೀರಿನಿಂದ [ಜನಾಯ] ಮನುಷ್ಯರಿಗೆ [ದೇವೇಷು] ಉತ ಷ್ಟಾದ [ಆಯುಷು] ಜೀವನದಲ್ಲಿ [ಇಷ್ಟವ್ರತಾಃ] ಬಯಸುವ ಇಚ್ಛೆಯನ್ನು ಪೂರ್ಣಗೊಳಿಸುವಂತಹ [ಇಷಃ] ಆಸೆಗಳನ್ನು [ಅಕಃ] ಪೂರ್ಣಗೊಳಿಸುವನು.

**ಭಾವಾರ್ಥ:-** ಪರಮಾತ್ಮನು ಅನ್ಯಾಯರಹಿತರ ಆಸೆಗಳನ್ನೆಲ್ಲ ಪೂರ್ಣಗೊಳಿಸುತ್ತಾನೆ. ಎಲ್ಲರೂ ಅವನ ಧ್ಯಾನ ಮಾಡಬೇಕು.

ಈ ಸೂಕ್ತದಲ್ಲಿ ಮಿತ್ರಾದಿಗುಣ ವಿಶಿಷ್ಟ ಪರಮಾತ್ಮನ ಗುಣಗಳನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೬೦

ಮಂತ್ರಸಂಖ್ಯೆ ೭ । ವಿಶ್ವಾಮಿತ್ರ ಋಷಿಃ । ಋಭವೋ ದೇವತಾ, ೧-೩ ಜಗತೀ, ೪, ೫ ನಿಚೃಜ್ಜಗತೀ, ೬ ವಿರಾಡ್ಜಗತೀ, ೭ ಭುರಿಗ್ಜಗತೀ ಛಂದಃ । ನಿಷಾದಃ ಸ್ವರಃ.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ಇಹೇಹ ವೋ ಮನಸಾ ಬಂಧುತಾ ನರ ಉಶಿಜೋ ಜಗ್ಮುರಭಿ ತಾನಿ ವೇದಸಾ ।**
**ಯಾಭಿರ್ಮಾಯಾಭಿಃ ಪ್ರತಿಜೂತಿವರ್ಪಸಃ ಸೌಧನ್ವನಾ ಯಜ್ಞಿಯಂ ಭಾಗಮಾನಶ ॥೧॥**

**ಪದಾರ್ಥ:-** **[ನರಃ]** ನಾಯಕನೇ! **[ಉಶಿಜಃ]** ಇಚ್ಛಿಸುವವನಾಗಿ **[ಮನಸಾ]** ಮನಃಪೂರ್ವಕವಾಗಿ **[ಇಹೇಹ]** ಈ ವ್ಯವಹಾರಗಳಲ್ಲಿ **[ವಃ]** ನಿಮ್ಮ **[ಬಂಧುತಾ]** ಬಂಧುತ್ವವನ್ನು **[ತಾನಿ]** ಆ ಮಿತ್ರಭಾವಯುಕ್ತ ಕರ್ಮಗಳನ್ನು **[ಅಭಿ, ಜಗ್ಮುಃ]** ಪ್ರಾಪ್ತಿಗೊಳಿಸುವನು. **[ಯಾಭಿಃ]** ಯಾವ **[ಮಾಯಾಭಿಃ]** ಬುದ್ಧಿಗಳಿಂದ **[ಪ್ರತಿಜೂತಿ ವರ್ಪಸಃ]** ಗೋಚರವಾಗುವಂತಹ ರೂಪದೊಂದಿಗೆ ಇರುವವರು **[ವೇಧಸಾ]** ಧನದಿಂದ **[ಸೌಧನ್ವನಾಃ]** ಉತ್ತಮಾಂತರಿಕ್ಷದ ಪುತ್ರರಾಗಿ **[ಯಜ್ಞಿಯಂ]** ಯಜ್ಞಕ್ಕೆ ಯೋಗ್ಯವಾದ **[ಭಾಗಂ]** ಅಂಶವನ್ನು **[ಆನಶ]** ಸೇವಿಸು ಭಾಗ್ಯಶಾಲಿಯಾಗು.

**ಭಾವಾರ್ಥ:-** ಯಾವ ಮನುಷ್ಯರು ಎಲ್ಲರೊಂದಿಗೆ ಭ್ರಾತೃತ್ವಭಾವದಿಂದ ಬುದ್ಧಿ ಧನಗಳನ್ನು ಬೆಳೆಸಿಕೊಳ್ಳುವರೋ ಅವರು ತಮ್ಮ ಮನೋರಥಗಳನ್ನು ಪೂರ್ಣಗೊಳಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಾಭಿಃ ಶಚೀಭಿಶ್ಚಮಸಾँ ಅಪಿಂಶತ ಯಯಾ ಧಿಯಾ ಗಾಮರಿಣೀತ ಚರ್ಮಣಃ ।**
**ಯೇನ ಹರೀ ಮನಸಾ ನಿರತಕ್ಷತ ತೇನ ದೇವತ್ವಮೃಭವಃ ಸಮಾನಶ ॥೨॥**

**ಪದಾರ್ಥ:-** **[ಋಭವಃ]** ಬುದ್ಧಿವಂತರು **[ಯಾಭಿಃ]** ಯಾವ **[ಶಚೀಭಿಃ]** ಬುದ್ಧಿ-ಕರ್ಮಗಳಿಂದ **[ಚಮಸಾನ್]** ಮೇಘಗಳನ್ನು **[ಅಪಿಂಶತ್]** ಅವಯವಯುಕ್ತರನ್ನಾಗಿ ಮಾಡುವರೋ **[ಯಯಾ]** ಯಾವುದರಿಂದ **[ಧಿಯಾ]** ಬುದ್ಧಿ ಶಕ್ತಿಯೊಂದಿಗೆ **[ಚರ್ಮಣಃ]** ಚರ್ಮಗಳನ್ನು ಪಡೆಯುವುದರಿಂದ **[ಗಾಂ]** ಧೇನುವನ್ನು **[ಅರಿಣೀತ]** ಪಡೆದುಕೊಳ್ಳುವರು **[ಯೇನ]** ಯಾವ **[ಮನಸಾ]** ವಿಜ್ಞಾನದಿಂದ **[ಹರೀ]** ಧಾರಣಾಕರ್ಷಣಗಳ **[ನಿರತಕ್ಷತ್]** ವಿಸ್ತಾರವನ್ನು ನಿರಂತರ ಮಾಡುವರೋ **[ತೇನ]** ಅದರಿಂದ ನೀವು **[ದೇವತ್ವಂ]** ವಿದ್ವತ್ತನ್ನು **[ಸಂ, ಆನಶ]** ಉತ್ತಮ ರೀತಿಯಿಂದ ಪಡೆದುಕೊಳ್ಳಿರಿ.

**ಭಾವಾರ್ಥ:-** ಮನುಷ್ಯರೇ! ನೀವು ಬುದ್ಧಿವಂತರು ವರ್ತಿಸುವ ರೀತಿಯಲ್ಲಿ ನೀವೂ ವರ್ತಿಸಿ ವಿದ್ಯಾವಂತರಾಗಿರಿ.

ಸರ್ವಾಧೀಶ್ವರ ಪರಮಾತ್ಮನ ಸ್ನೇಹ ಫಲವಿಲ್ಲಿ ಹೇಳಿದೆ.

**ಇಂದ್ರಸ್ಯ ಸಖ್ಯಮೃಭವಃ ಸಮಾನಶು-ರ್ಮನೋರ್ನಪಾತೋ ಅಪಸೋ ದಧನ್ವಿರೇ ।**
**ಸೌಧನ್ವನಾಸೋ ಅಮೃತತ್ವಮೇರಿರೇ ವಿಷ್ಟ್ವೀ ಶಮೀಭಿಃ ಸುಕೃತಃ ಸುಕೃತ್ಯಯಾ ॥೩॥**

**ಪದಾರ್ಥ:-** **[ಋಭವಃ]** ಬುದ್ಧಿವಂತರು **[ಇಂದ್ರಸ್ಯ]** ಪರಮಾತ್ಮನ **[ಸಖ್ಯಂ]** ಸ್ನೇಹತನವನ್ನು **[ಸಂ, ಆನಶುಃ]** ಉತ್ತಮರೀತಿಯಲ್ಲಿ ಪಡೆದುಕೊಳ್ಳುವರು. **[ಮನೋಃ]** ಮನನಶೀಲನ **[ನಪಾತಃ]** ಪತನವಾಗದಿರುವುದಕ್ಕೆ **[ಅಪಸಃ]** ಕರ್ಮಗಳನ್ನು **[ದಧನ್ವಿರೇ]** ಧಾರಣ ಮಾಡಿರುವರೋ ಅವರು **[ಸೌಧನ್ವನಾಸಃ]** ಉತ್ತಮ ಜ್ಞಾನವಂತರನ್ನಾಗಿಸುವವರು **[ಶಮೀಭಿಃ]** ಕರ್ಮಗಳೊಂದಿಗೆ **[ವಿಷ್ಟೀ]** ಕರ್ಮಗಳನ್ನು ಮಾಡಿ **[ಸುಕೃತ್ಯಯಾ]** ಧಾರ್ಮಿಕ ಕ್ರಿಯೆಯಿಂದ **[ಸುಕೃತಃ]** ಉತ್ತಮ ಕರ್ಮಕರಾಗುವರು. **[ಅಮೃತತ್ವಂ]** ಪರಮ ಪುರುಷಾರ್ಥವನ್ನು **[ಆ, ಈರಿರೇ]** ಪಡೆದುಕೊಳ್ಳುವರು.

**ಭಾವಾರ್ಥ:-** ಬುದ್ಧಿವಂತರಾದವರು ಈಶನ ಸಖ್ಯವನ್ನು ಮಾಡಿ ಸದಾಚಾರ ನಿರತರೂ, ಮನನಶೀಲರೂ, ಎಂದಿಗೂ ಪತನಗೊಳ್ಳದವರೂ, ಜ್ಞಾನಪೂರ್ವಕ ಕರ್ಮಗಳನ್ನು ಮಾಡುವ ಪರಮಾ ಪುರುಷಾರ್ಥಿಗಳೂ ಆಗುತ್ತಾರೆ.

ರಾಜ್ಯ ವಿಷಯವಿಲ್ಲಿದೆ.

**ಇಂದ್ರೇಣ ಯಾಥ ಸರಥಂ ಸುತೇ ಸಚಾಁ ಅಥೋ ವಶಾನಾಂ ಭವಥಾ ಸಹ ಶ್ರಿಯಾ ।**
**ನ ವಃ ಪ್ರತಿಮೈ ಸುಕೃತಾನಿ ವಾಘತಃ ಸೌಧನ್ವನಾ ಋಭವೋ ವೀರ್ಯಾಣಿ ಚ ॥೪॥**

**ಪದಾರ್ಥ:-** **[ಸೌಧನ್ವನಾಃ]** ಯಥಾರ್ಥನುಡಿಯುವವರ ಪುತ್ರರೇ! **[ವಾಘತಃ]** ವಿದ್ಯಾವಂತರೂ **[ಋಭವಃ]** ಬುದ್ಧಿವಂತರೂ ಆದ ನೀವು **[ಸುತೇ]** ಪ್ರಾಪ್ತವಾದ ರಾಜ್ಯದಲ್ಲಿ **[ಸಚಾ]** ವಿಜ್ಞಾನದಿಂದ **[ಇಂದ್ರೇಣ]** ಅತಿಶಯ ಐಶ್ವರ್ಯದಿಂದ **[ಸರಥಂ]** ರಥದೊಂದಿಗೆ **[ಯಾಥ]** ಬರುವವರಾಗಿರಿ. **[ಅಥೋ]** ಅನಂತರ **[ವಶಾನಾಂ]** ಇಚ್ಛಿಸಲು ಯೋಗ್ಯವಾದದ್ದನ್ನು **[ಶ್ರಿಯಾ]** **[ಸಹ]** ಸಂಪತ್ತಿನೊಂದಿಗೆ **[ಭವಥ]** ಪಡೆಯಿರಿ. **[ವಃ]** ನಿಮಗೆ **[ಸುಕೃತಾನಿ]** ಧರ್ಮ-ಕರ್ಮಗಳು **[ವೀರ್ಯಾಣಿ, ಚ]** ಪರಾಕ್ರಮಗಳ **[ಪ್ರತಿಮೈ]** ಸಮಾನರೂಪವಾದದ್ದು **[ನ]** ಆಗದಿರಲಿ.

**ಭಾವಾರ್ಥ:-** ಸತ್ಯವಾಕ್ಕಿನಿಂದ ಕೂಡಿದವರು ವಿಜ್ಞಾನದ ಸಹಾಯದಿಂದ ತಾವು ಬಯಸಿದ ಯೋಗ್ಯವಾದ ಸಂಪತ್ತನ್ನು ಹೊಂದಿ ಧರ್ಮಕಾರ್ಯಗಳಿಗೆ ಅನುರೂಪವಾದ ಪರಾಕ್ರಮವನ್ನು ಮೆರೆಯುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಂ ಸುತಂ ಸೋಮಮಾ ವೃಷಸ್ವಾ ಗಭಸ್ತ್ಯೋಃ ।**
**ಧಿಯೇಷಿತೋ ಮಘವನ್ ದಾಶುಷೋ ಗೃಹೇ ಸೌಧನ್ವನೇಭಿಃ ಸಹ ಮತ್ಸ್ವಾ ನೃಭಿಃ ॥೫॥**

**ಪದಾರ್ಥ:-** **[ಮಘವನ್]** ಧನ ಸಂಪನ್ನನಾದ **[ಇಂದ್ರ]** ರಾಜನೇ! **[ಧಿಯಾ]** ಬುದ್ಧಿವಂತಿಕೆಯಿಂದ **[ಇಷಿತಃ]** ಪ್ರೇರಣೆ ಪಡೆದ ನೀನು **[ವಾಜವದ್ಭಿಃ]** ಪ್ರಶಂಸನೀಯ ಆಹಾರ ಸಾಧನಗಳಿರುವ **[ಋತುಭಿಃ]** ಬುದ್ಧಿವಂತರೊಂದಿಗೆ **[ಸಮುಕ್ಷಿತಂ]** ಚೆನ್ನಾಗಿ ನೀರೆರೆದು **[ಸುತಂ]** ಉತ್ಪನ್ನವಾದ **[ಸೋಮಂ]** ಓಷಧಿಯನ್ನು **[ಗಭಸ್ತ್ಯೋಃ]** ಕೈಗಳ ಬಲದಿಂದ **[ಆ]** **[ವೃಷಸ್ವ]** ಪುಷ್ಟಿಗೊಳಿಸು. **[ಸೌಧನ್ವನೇಭಿಃ]** ಬುದ್ಧಿವಂತ ಪುತ್ರರೊಂದಿಗೆ ಮತ್ತು **[ನೃಭಿಃ ಸಹ]** ವಿದ್ಯಾದಿಗಳಿಂದ ಶ್ರೇಷ್ಠರಾದವರೊಂದಿಗೆ **[ದಾಶುಷಃ]** ದಾತೃವಿನ **[ಗೃಹೇ]** ಮನೆಯಲ್ಲಿ **[ಮತ್ಸ್ವ]** ನಲಿಯುವವನಾಗು.

**ಭಾವಾರ್ಥ:-** ರಾಜನು ಬುದ್ಧಿವಂತರೊಂದಿಗೆ ಪ್ರಜೆಗಳ ರಕ್ಷಣೆ ಮತ್ತು ನ್ಯಾಯವಂತರೊಂದಿಗೆ ಧನದ ವೃದ್ಧಿಯನ್ನು ಮಾಡಿಕೊಂಡು ರಾಜ್ಯದ ಕರಕೊಡುವವರನ್ನು / ಪ್ರಜೆಗಳನ್ನು ಸಂತೋಷಗೊಳಿಸುತ್ತ ಪ್ರಜೆಗಳೊಂದಿಗೆ ಸದಾ ಸುಖಿಯಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರ ಋಭುಮಾನ್ ವಾಜವಾನ್ಮತ್ಸ್ವೇಹ ನೋಽಸ್ಮಿನ್ ತ್ಸವನೇ ಶಚ್ಯಾ ಪುರುಷ್ಟುತ ।**
**ಇಮಾನಿ ತುಭ್ಯಂ ಸ್ವಸರಾಣಿ ಯೇಮಿರೇ ವ್ರತಾ ದೇವಾನಾಂ ಮನುಷಶ್ಚ ಧರ್ಮಭಿಃ ॥೬॥**

**ಪದಾರ್ಥ:-** **[ಶಚ್ಯಾ]** ಬುದ್ಧಿವಂತಿಕೆಯ ಮಾತಿನಿಂದ **[ಪುರುಷ್ಟುತ]** ಬಹು ಜನ ಪ್ರಶಂಸಿತನಾದ **[ಇಂದ್ರ]** ಸಂಪದ್ಭರಿತ ರಾಜನೇ! ನೀನು **[ಇಹ]** ಈ ರಾಜ್ಯದಲ್ಲಿ **[ಋಭುಮಾನ್]** ಬುದ್ಧಿವಂತನು **[ವಾಜವಾನ್]** ಅನ್ನವಂತನು

ಆಗಿ **[ನಃ]** ನಮಗೆ **[ಅಸ್ಮಿನ್]** ಈ **[ಸವನೇ]** ಧನ ಸಂಪನ್ನ ರಾಜ್ಯದಲ್ಲಿ **[ಮತ್ಸ್ವ]** ಆನಂದಿತರನ್ನಾಗಿ ಮಾಡು. **[ತುಭ್ಯಂ]** ನಿನಗೆ **[ಇಮಾನಿ]** ಈ **[ಸ್ವಸರಾಣಿ]** ದಿನಗಳು **[ಯೇಮಿರೆ]** ನಿಯತವಾಗುತ್ತವೆ. **[ದೇವಾನಾಂ]** ವಿದ್ಯಾವಂತರ **[ಧರ್ಮಭಿಃ]** ಧರ್ಮಗಳೊಂದಿಗೆ **[ವ್ರತಾ]** ಸುಂದರ ಕರ್ಮಗಳನ್ನು ಧಾರಣ ಮಾಡಿ **[ಮನುಷಃ]** ಮಾನವರನ್ನು **[ಚ]** ಮತ್ತಷ್ಟು ಸಂತೋಷಪಡಿಸು.

**ಭಾವಾರ್ಥ:-** ಪ್ರಶಂಸಿತನಾದ ರಾಜನು ಬುದ್ಧಿವಂತನೂ, ಧನ ಧಾನ್ಯ ಸಂಪನ್ನನೂ ಆಗಿ ನಿಯಮಿತವೂ, ಧರ್ಮಯುಕ್ತವೂ ಆದ ಸತ್ಕರ್ಮಗಳನ್ನು ಮಾಡುತ್ತ ಎಲ್ಲರನ್ನೂ ಸಂತೋಷಪಡಿಸುತ್ತಾನೆ.

ರಾಜನ ಪ್ರಸಂಗದಿಂದ ಅಮಾತ್ಸರ, ಪ್ರಜೆಗಳ ವಿಷಯವಿಲ್ಲಿ ಹೇಳಿದೆ.

**ಇಂದ್ರ ಋಭುಭಿರ್ವಾಜಿಭಿರ್ವಾಜಯನ್ನಿಹ ಸ್ತೋಮಂ ಜರಿತುರುಪ ಯಾಹಿ ಯಜ್ಞಿಯಮ್ ।**

**ಶತಂ ಕೇತೇಭಿರಿಷಿರೇಭಿರಾಯವೇ ಸಹಸ್ರಣೀಥೋ ಅಧ್ವರಸ್ಯ ಹೋಮನಿ ॥೭॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕ ರಾಜನೇ! ನೀನು **[ಇಹ]** ಈ ಜಗತ್ತಿನಲ್ಲಿ **[ವಾಜಿಭಿಃ]** ವೇಗಗುಣಗಳಿರುವ **[ಋಭುಭಿಃ]** ಬುದ್ಧಿವಂತರೊಂದಿಗೆ **[ವಾಜಯನ್]** ಬರುವವನಾಗಿ **[ಜರಿತುಃ]** ಸ್ತವನ ಮಾಡುವ ವಿದ್ಯಾವಂತರ **[ಸೋಮಂ]** ಸ್ತುತಿಯನ್ನು **[ಉಪ, ಯಾಹಿ]** ಪಡೆದುಕೋ. **[ಆಯವೇ]** ಮನುಷ್ಯರಿಗೆ **[ಇಷಿರೇಭಿಃ]** ಇಷ್ಟವಾದ **[ರೇತೇಭಿಃ]** ಬುದ್ಧಿಗಳಿಂದ **[ಸಹಸ್ರಣೀಥಃ]** ಅಸಂಖ್ಯಾತ ಧಾರ್ಮಿಕರ **[ಅಧ್ವರಸ್ಯ]** ನ್ಯಾಯಯುತ ವ್ಯವಹಾರಗಳ **[ಹೋಮಾನಿ]** ಗ್ರಹಣ ಯೋಗ್ಯವಾದವುಗಳನ್ನು **[ಶತಂ]** ಅಸಂಖ್ಯಾತ **[ಯಜ್ಞಿಯಂ]** ರಾಜ್ಯ ವ್ಯವಹಾರಗಳನ್ನು ಪಡೆಯುವವನಾಗು.

**ಭಾವಾರ್ಥ:-** ರಾಜನೇ! ನೀನು ಈ ರಾಜ್ಯದಲ್ಲಿ ಮನುಷ್ಯರ ಹಿತಕ್ಕಾಗಿ ಅಸಂಖ್ಯಾತ ಕರ್ಮಗಳನ್ನು ಮಾಡು. ಬಹಳಷ್ಟು ಧಾರ್ಮಿಕರೂ ಉಪದೇಶಕರೂ ಆದಂತಹ ಮಂತ್ರಿ ಅಧಿಕಾರಿಗಳೊಂದಿಗೆ ಅಸಂಖ್ಯಾತ ಪ್ರಶಂಸೆ/ ಪಶಸ್ತಿಗಳನ್ನು ಪಡೆದು ಜನ್ಮಾಂತರದಲ್ಲಿ ಪರಮ ಪುರುಷಾರ್ಥವನ್ನು ಸಾಧಿಸು.

ಈ ಸೂಕ್ತದಲ್ಲಿ ರಾಜ, ಪ್ರಜೆ ಮಂತ್ರಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಅರವತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೬೧

ಮಂತ್ರಸಂಖ್ಯೆ ೭ । ವಿಶ್ವಾಮಿತ್ರ ಋಷಿಃ । ಉಷೋ ದೇವತಾ । ೧, ೫, ೭ ತ್ರಿಷ್ಟುಪ್, ೨ ವಿರಾಟ್ ತ್ರಿಷ್ಟುಪ್,

೬ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೪ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಬೆಳಗಿನ ಸಮಯದಲ್ಲಿನ ಸ್ತ್ರೀ ಗುಣವನ್ನಿಲ್ಲಿ ತಿಳಿಸಿದೆ.

**ಉಷೋ ವಾಜೇನ ವಾಜಿನಿ ಪ್ರಚೇತಾಃ ಸ್ತೋಮಂ ಜುಷಸ್ವ ಗೃಣತೋ ಮಘೋನಿ ।**

**ಪುರಾಣೀ ದೇವಿ ಯುವತಿಃ ಪುರಂಧಿ-ರನು ವ್ರತಂ ಚರಸಿ ವಿಶ್ವವಾರೇ ॥೧॥**

**ಪದಾರ್ಥ:-** **[ವಾಜೀನೀ]** ವಿಜ್ಞಾನವಂತಳು **[ಮಘೋನಿ]** ಧನವಂತಳು **[ದೇವಿ]** ದಿವ್ಯಗುಣ ಸಂಪನ್ನಳು **[ವಿಶ್ವವಾರೇ]** ವಿಶ್ವವೇ ವರಿಸುವಂತಹ ಗುಣವಂತಳೂ ಆದ ನೀನು **[ಉಷಃ]** ಪ್ರಾತಃಕಾಲದಲ್ಲಿ **[ವಾಜೇನ]** ವಿಜ್ಞಾನದಿಂದ **[ಪ್ರಚೇತಾಃ]** ಪ್ರಕೃಷ್ಟವಾಗಿ ಚೇತನ ನೀಡುವವಳಾಗಿ **[ಗೃಣತಃ]** ಸ್ತವನ ಮಾಡುವವನ **[ಸೋಮಂ]** ಸ್ತುತಿಯನ್ನು **[ಜಷಸ್ವ]** ಸೇವಿಸು. **[ಪುರಾಣಿ]** ಹಳೆಯ ಮತ್ತು ಹೊಸ **[ಪುರಂಧಿಃ]** ಉತ್ತಮಗುಣಧಾರಣೆ ಮಾಡಿರುವ ನೀನು **[ಯುವತಿಃ]** ಯೌವ್ವನಾವಸ್ಥೆ ಪಡೆದಿರುವೆ. **[ವ್ರತಂ]** ಕರ್ಮಗಳನ್ನು **[ಅನು, ಚರಸಿ]** ಅನುಕೂಲತೆಗಳಿಗನುಸರಿಸಿ ಮಾಡುತ್ತಿರುವೆ.

**ಭಾವಾರ್ಥ:-** ಸ್ತ್ರೀಯರೇ! ನೀವು ಪ್ರಾತಃಕಾಲದಲ್ಲಿ ಉಷೆಯು ಎಲ್ಲರನ್ನೂ ಎಚ್ಚರಗೊಳಿಸಿ ಕಾರ್ಯಪ್ರವೃತ್ತರನ್ನಾಗಿ ಮಾಡುವಳೋ ಹಾಗೆ ನೀವು ನಿಮ್ಮ ಪತಿಗೆ ಅನುಕೂಲಕರವಾಗಿ ವರ್ತಿಸುತ್ತ ಪ್ರಶಂಸೆ ಪಡೆಯಿರಿ.

**ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.**

**ಉಷೋ ದೇವ್ಯಮರ್ತ್ಯಾ ವಿ ಭಾಹಿ ಚಂದ್ರರಥಾ ಸೂನೃತಾ ಈರಯಂತೀ ।**
**ಆ ತ್ವಾ ವಹಂತು ಸುಯಮಾಸೋ ಅಶ್ವಾ ಹಿರಣ್ಯವರ್ಣಾಂ ಪೃಥುಪಾಜಸೋ ಯೇ ॥೨॥**

**ಪದಾರ್ಥ:-** **[ದೇವಿ]** ಸುಶೋಭಿತಳೇ! **[ಉಷಃ]** ಪ್ರಾತಃಕಾಲದಂತಿರುವ **[ಸೂನೃತಾಃ]** ಸತ್ಕ್ರಿಯೆಯೊಂದಿಗೆ **[ಈರಯಂತೀ]** ಪ್ರೇರಣೆ ನೀಡುವವಳಾಗಿ **[ಚಂದ್ರರಥಾ]** ಚಂದ್ರನಂತಹ ರಥದಿಂದ **[ಅಮರ್ತ್ಯಾ]** ಮರಣಧರ್ಮರಹಿತಳಾಗಿ **[ವಿ, ಭಾಹಿ]** ಶೋಭಿತಳಾಗು. **[ಯೇ]** ಯಾರು **[ಪೃಥುಪಾಜಸಃ]** ಬಹು ಬಲವಿರುವ **[ಸುಯಮಾಸಃ]** ಉತ್ತಮ ನಿಯಮಪಾಲಿಸುವ **[ಹಿರಣ್ಯವರ್ಣಾಂ]** ತೇಜೋಮಯ ಕಾಂತಿಯನ್ನು **[ಅಶ್ವಾಃ]** ಕಿರಣಗಳು **[ತ್ವಾ]** ನಿನ್ನನ್ನು **[ಆ, ವಹಂತು]** ಆವರಿಸಲಿ.

**ಭಾವಾರ್ಥ:-** ಚಂದ್ರನೆಂಬ ರಥವನ್ನು ಪಡೆದು ಉಷಃಕಾಲವು ತೇಜೋಮಯವಾಗಿ ಎಲ್ಲಾ ಜೀವರಾಶಿಗಳನ್ನು ಹೇಗೆ ಎಚ್ಚರಗೊಳಿಸುತ್ತದೆಯೋ ಹಾಗೆಯೇ ವಿದುಷಿಯಾದ ಸ್ತ್ರೀಯು ತನ್ನ ಉತ್ತಮ ಸೇವಾಗುಣಗಳಿಂದ ಸ್ವಸ್ವಪತಿಯರನ್ನು ಉತ್ತಮ ಶೀಲವಂತರನ್ನಾಗಿ ಮಾಡುವರು.

**ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.**

**ಉಷಃ ಪ್ರತೀಚೀ ಭುವನಾನಿ ವಿಶ್ವೋ-ರ್ಧ್ವಾ ತಿಷ್ಠಸ್ಯಮೃತಸ್ಯ ಕೇತುಃ ।**
**ಸಮಾನಮರ್ಥಂ ಚರಣೀಯಮಾನಾ ಚಕ್ರಮಿವ ನವ್ಯಸ್ಯಾ ವವೃತ್ಸ್ವ ॥೩॥**

**ಪದಾರ್ಥ:-** **[ವಿಶ್ವಾ]** ಸಮಗ್ರ **[ಭುವನಾನಿ]** ಲೋಕಗಳನ್ನು **[ಪ್ರತೀಚೀ]** ಪ್ರಾಪ್ತವಾಗಿ **[ಅಮೃತಸ್ಯ]** ಅಮೃತದಂತಹ ರಸದ **[ಕೇತುಃ]** ತಿಳಿದಿರುವ **[ಊರ್ಧ್ವಾಃ]** ಮೇಲುಗಡೆ ಇರುವ **[ಚಕ್ರಮಿವ]** ಗಾಲಿಯಂತೆ **[ಸಮಾನಂ]** ಸದೃಶವಾದ **[ಅರ್ಥಂ]** ವಸ್ತುವನ್ನು **[ಚರಣೀಯಮಾನಾ]** ಪಡೆದವಳಾಗಿ **[ನವ್ಯಸೀ]** ಹೊಸತನದಿಂದ **[ಉಷಃ]** ಪ್ರಾತಃಕಾಲವು **[ತಿಷ್ಠಸಿ]** ಸ್ಥಿರಗೊಳ್ಳುವೆಯೋ ಹಾಗೇ **[ಆ, ವೃಷಸ್ವ]** ವರ್ತಿಸುವವಳಾಗು.

**ಭಾವಾರ್ಥ:-** ಯಾವ ರೀತಿ ಉಷೆಯು ಅಮೃತಮಯ ರಥದಂತಹ ನವ ನವೀನವಾದುದರ ಧಾರಿಣಿಯು, ವಾಹಕಿಯೂ, ಆಗಿರುವಳೋ ಅದೆ ರೀತಿ ಎಲ್ಲ ಸ್ತ್ರೀಯರೂ ಆಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅವ ಸ್ಯೂಮೇವ ಚಿನ್ವತೀಮಘೋ-ನ್ಯುಷಾ ಯಾತಿ ಸ್ವಸರಸ್ಯ ಪತ್ನೀ ।**
**ಸ್ವ(ಅ) ೧ ರ್ಜನಂತೀ ಸುಭಗಾ ಸುದಂಸಾ ಆಂತಾದ್ದಿವಃ ಪಪ್ರಥ ಆ ಪೃಥಿವ್ಯಾಃ ॥೪॥**

**ಪದಾರ್ಥ:-** **[ಸ್ಯೂಮೇವ]** ತಂತುಗಳಂತೆ/ದಾರಗಳಂತೆ ವ್ಯಾಪ್ತವಾದ **[ಚಿನ್ವತೀ]** ಸಂಗ್ರಹ ಮಾಡುತ್ತ **[ಮಘೋನೀ]** ಧನಸಂಪನ್ನಳಾಗಿ **[ಸ್ವಸರಸ್ಯ]** ಹಗಲಿನ **[ಪತ್ನೀ]** ಮಡದಿಗೆ ಸಮನಾಗಿ **[ಸ್ವಃ]** **[ಜನಂತೀ]** ಸೂರ್ಯನನ್ನ / ಸುಖವನ್ನೂ ಉತ್ಪಾದಿಸುವಳು. **[ಸುಭಗಾ]** ಸೌಭಾಗ್ಯದಾಯಕಳು **[ಸುದಂಸಾ]** ಉತ್ತಮಕರ್ಮಗಳಿರುವವಳೂ ಆದ **[ಉಷಾಃ]** ಉಷೆಯು **[ಆ, ಅಂತಾತ್]** ಅತ್ಯಂತ ಸಮೀಪದಿಂದ **[ದಿವಃ]** ಪ್ರಕಾಶಮಾನ ಸೂರ್ಯನ ಮತ್ತು **[ಪೃಥಿವ್ಯಾಃ]** ಭೂಮಿಯ ಯೋಗದಿಂದ **[ಆ]** ಸಮೀಪದಲ್ಲಿ **[ಪಪ್ರಥೇ]** ಪ್ರಖ್ಯಾತಳಾಗುವಳು.; **[ಅವ, ಯಾತಿ]** ಅಧೋಭಾಗದಲ್ಲಿ ಪ್ರಾಪ್ತಳಾಗುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ವನಿತೆಯರೇ! ಪ್ರಾತಃಕಾಲವು ಹೇಗೆ ದಿನಕ್ಕೆ ಸಂಬಂಧಿಸಿದ ವ್ಯವಹಾರ ಮಾಡುವುದೋ, ಹಾಗೆಯೇ ನೀವು ನಿಮ್ಮ ನಿಮ್ಮ ಪತಿಗೆ ಅನುಕೂಲಕರ ವ್ಯವಹಾರವನ್ನು ಮಾಡಿರಿ. ಬೆಳಕು ಸೂರ್ಯ-ಭೂಮಿಗಳ ಯೋಗದಿಂದ ಉಂಟಾಗುತ್ತದೆ. ಸಂತಾನವು ಸತಿ-ಪತಿಯರ ಯೋಗದಿಂದ ಉಂಟಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಚ್ಛಾ ವೋ ದೇವೀಮುಷಸಂ ವಿಭಾತೀಂ ಪ್ರ ವೋ ಭರಧ್ವಂ ನಮಸಾ ಸುವೃಕ್ತಿಮ್ ।**
**ಊರ್ಧ್ವಂ ಮಧುಧಾ ದಿವಿ ಪಾಜೋ ಅಶ್ರೇತ್ ಪ್ರ ರೋಚನಾ ರುರುಚೇ ರಣ್ವಸಂದೃಕ್ ॥೫॥**

**ಪದಾರ್ಥ:-** **[ರಣ್ವಸಂದೃಕ್]** ಸುಂದರ ಪದಾರ್ಥಗಳನ್ನು ನೋಡಲು **[ರೋಚನಾ]** ರುಚಿಗೊಳಿಸಲು ಯೋಗ್ಯ **[ದುಧುಧಾ]** ಮಧುರ ಪದಾರ್ಥಗಳ ಧಾರಣ ಮಾಡುವವಳು. **[ದಿವಿ]** ಬೆಳಕಿನಲ್ಲಿ **[ವಃ]** ನಿಮಗೆ **[ಪ್ರ, ರುರುಚೆ]** ರುಚಿಕರವಾಗಿರುತ್ತದೆ. **[ವಃ]** ನಿಮಗೆ **[ಊರ್ಧ್ವಂ]** ಉತ್ತಮವಾದ **[ಪಾಜಃ]** ಬಲದ **[ಅಶ್ರೇತ್]** ಸಂಯೋಗ ಮಾಡಿಸುವಳು. **[ದೇವೀಂ]** ಪ್ರಕಾಶಮಾನರಾದ ನೀವು **[ವಿಭಾತೀಂ]** ಪದಾರ್ಥಗಳನ್ನು ಬೆಳಗಿಸುವವರಾಗಿ **[ಸುವೃಕ್ತಿಂ]** ಉತ್ತಮರೀತಿಯಲ್ಲಿ ವರ್ತಿಸುವವರಾಗಿ **[ಉಷಸಂ]** ಪ್ರಭಾತಸಮಯವನ್ನು **[ನಮಸಾ]** ಮಿಂಚಿನೊಂದಿಗೆ ನೀವು **[ಅಚ್ಛ]** ಉತ್ತಮರೀತಿಯಿಂದ **[ಪ್ರ, ಭರಧ್ವಂ]** ಪುಷ್ಟಿಗೊಳಿಸಿರಿ.

**ಭಾವಾರ್ಥ:-** ಬೆಳಗಿನ ಸಮಯವನ್ನು ಸೇವಿಸುವ ಜನರು ಉತ್ತಮ ಬಲವನ್ನು ಪಡೆಯುವರು. ಅದರಂತೆ ಸ್ನೇಹಪಾತ್ರ ಪತಿವ್ರತಾ ಸ್ತ್ರೀಯನ್ನು ಪಡೆದ ಪುರುಷರು ಶರೀರಬಲ, ಆತ್ಮಬಲ ಹಾಗೂ ಆರೋಗ್ಯವನ್ನು ಪಡೆದುಕೊಳ್ಳುವರು. ಪರಸ್ಪರ ಸಾಮರಸ್ಯವಿರುವ ಸತಿ ಪತಿಯರು ಉತ್ತಮ ಗೃಹಸ್ಥರೆನಿಸಿಕೊಳ್ಳುವರು.

ಬೆಳಗಿನ ಸಮಯದ ಗುಣಗಳನ್ನಿಲ್ಲಿ ಹೇಳಿದೆ.

**ಋತಾವರೀ ದಿವೋ ಅರ್ಕೈರಬೋ-ಧ್ಯಾ ರೇವತೀ ರೋದಸೀ ಚಿತ್ರಮಸ್ಥಾತ್ ।**
**ಆಯತೀಮಗ್ನ ಉಷಸಂ ವಿಭಾತೀಂ ವಾಮಮೇಷಿ ದ್ರವಿಣಂ ಭಿಕ್ಷಮಾಣಃ ॥೬॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ರೇವತೀ]** ಧನದಾಯಕಳು **[ಋತಾವರೀ]** ಸತ್ಯನುಡಿಯುವವಳೂ **[ದಿವಃ]** ಬೆಳಕಿನ ಸಮಯವು **[ಅರ್ಕೈಃ]** ಸೂರ್ಯನಿಂದ **[ಅಬೋಧಿ]** ಎಚ್ಚರಗೊಳ್ಳುವಳು **[ರೋದಸೀ]** ಭೂಮ್ಯಂತರಿಕ್ಷಗಳನ್ನು **[ಆ, ಅಸ್ಥಾತ್]** ಉತ ಷ್ಟವಾಗಿ ನೆಲೆಗೊಳಿಸುವಳು. **[ಆಯತೀಂ]** ಆಗಮಿಸುವಳು ಮತ್ತು **[ವಿಭಾತೀಂ]** ಬೆಳಗಿಸುವವಳೂ ಆದ **[ಉಷಸಂ]** ಉಷಃಕಾಲವನ್ನು ಪಡೆದು **[ಭಿಷಮಾಣಃ]** ಜಗದೀಶ್ವರನನ್ನು ಯಾಚಿಸುವವನಾಗಿ **[ಚಿತ್ರಂ]** ಅದ್ಭುತವಾದ **[ವಾಮಂ]** ಪ್ರಶಂಸಾರ್ಹ **[ದ್ರವಿಣಂ]** ಧನವನ್ನು **[ಏಷಿ]** ಪಡೆದುಕೊಳ್ಳುವೆ.

**ಭಾವಾರ್ಥ:-** ವಿದ್ವಾಂಸರೂ, ವಿವೇಕಿಗಳೂ ಆದವರು ಉಷಃಕಾಲದಲ್ಲಿ ಜಾಗ್ರತರಾಗಿ ಉಸ ಷ್ಟವಾದ, ಪ್ರಶಂಸಾರ್ಹವಾದ,. ಸಂತ್ತನ್ನು ಪಡೆದುಕೊಳ್ಳಲು ಯೋಗ್ಯರಾಗುತ್ತಾರೆ

ವಿದ್ಯುತ್ ಶಿಲ್ಪಗುಣಗಳನ್ನಿಲ್ಲಿ ಹೇಳಿದೆ.

**ಋತಸ್ಯ ಬುಧ್ನ ಉಷಸಾಮಿಷಣ್ಯನ್ ವೃಷಾ ಮಹೀ ರೋದಸೀ ಆ ವಿವೇಶ ।**
**ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ ವಿ ದಧೇ ಪುರುತ್ರಾ ॥೭॥**

**ಪದಾರ್ಥ:-** **[ಬುಧ್ನ]** ಅಂತರಿಕ್ಷದಲ್ಲಿ **[ಉಷಸಾಂ]** ಪ್ರಾತಃಕಾಲದ **[ಋತಸ್ಯ]** ಸತ್ಯದ **[ಇಷಣ್ಯನ್]** ಪ್ರೇರಣೆ ಇಚ್ಛಿಸುವನೋ ಎಂಬಂತೆ **[ವೃಷಾ]** ವೃಷ್ಟಿಯ ನಿಮಿತ್ತ **[ಮಹೀ]** ಬೃಹತ್ತಾದ **[ರೋದಸೀ]** ಭೂಮ್ಯಂತರಿಕ್ಷಗಳನ್ನು **[ಆ, ವಿವೇಶ]** ಪ್ರವೇಶಿಸುವನು. **[ಮಿತ್ರಸ್ಯ]** ಮಿತ್ರನಾದ **[ವರುಣಸ್ಯ]** ಶ್ರೇಷ್ಠಪುರುಷನ **[ಮಹೀ]** ಪೂಜ್ಯವಾದ **[ಮಾಯಾ]** ಬುದ್ಧಿಯು **[ಚಂದ್ರೇವ]** ಸುವರ್ಣದಂತೆ **[ಪುರುತ್ರಾ]** ರೂಪಯುಕ್ತ **[ಭಾನುಂ]** ಸೂರ್ಯನನ್ನು **[ವಿದಧೇ]** ಧಾರಣೆ ಮಾಡುವನು. ಅದನ್ನರಿತು ನಿನ್ನ ಕಾರ್ಯವನ್ನು ಸಾಧಿಸು.

**ಭಾವಾರ್ಥ:-** ವಿದ್ಯಾವಂತರ ವಾಣಿ ಮತ್ತು ಬುದ್ಧಿಯು ಐಶ್ವರ್ಯದಾಯಕವಾಗಲಿ; ವಿದ್ಯಾಪ್ರವೇಶ ಮಾಡಿ ಸುಖದಾಯಕವಾಗಲಿ. ಹಾಗೆಯೇ ಸರ್ವತ್ರ ವ್ಯಾಪಕವಾಗಿ ಮಿಂಚಿನಂತೆ ಕಾರ್ಯಸಾಧಕವಾಗಲಿ. ತನ್ಮೂಲಕ ಸಂಪತ್ಕಾರಕವಾಗಲಿ.

ಈ ಸೂಕ್ತದಲ್ಲಿ ಪ್ರಾತಃಕಾಲ, ಸ್ತ್ರೀ, ಮಿಂಚು ಮತ್ತು ಶಿಲ್ಪಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಅರವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೬೨

ಮಂತ್ರಸಂಖ್ಯೆ ೧೮ । ವಿಶ್ವಾಮಿತ್ರ ಋಷಿಃ । ೧೬-೧೮ ವಿಶ್ವಾಮಿತ್ರೋಜಮದಗ್ನಿರ್ವಾ, ೧-೩ ಇಂದ್ರಾ ವರುಣೌ, ೪-೬ ಬೃಹಸ್ಪತಿಃ, ೭-೯ ಪೂಷಾ, ೧೦-೧೨ ಸವಿತಾ, ೧೩-೧೫ ಸೋಮಃ, ೧೬-೧೮ ಮಿತ್ರಾವರುಣೌ ದೇವತಾಃ । ೧ ವಿರಾಟ್ ತ್ರಿಷ್ಟುಪ್, ೨ ತ್ರಿಷ್ಟುಪ್, ೩ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪, ೫, ೧೦, ೧೧, ೧೬ ನಿಚೃದ್ಗಾಯತ್ರೀ, ೬ ತ್ರಿಪಾದ್ಗಾಯತ್ರೀ, ೭-೯, ೧೨-೧೫, ೧೭, ೧೮ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ಮಿತ್ರ, ಅಧ್ಯಾಪಕ, ಉಪದೇಶಕರ ಗುಣಗಳನ್ನು ಹೇಳಲಾಗಿದೆ.

**ಇಮಾ ಉ ವಾಂ ಭೃಮಯೋ ಮನ್ಯಮಾನಾ ಯುವಾವತೇ ನ ತುಜ್ಯಾ ಅಭೂವನ್ ।**
**ಕ್ವ (ಅ) ೧ ತ್ಯದಿಂದ್ರಾವರುಣಾ ಯಶೋ ವಾಂ ಯೇನ ಸ್ಮಾ ಸಿನಂ ಭರಥಃ ಸಖಿಭ್ಯಃ ॥೧॥**

**ಪದಾರ್ಥ:-** [**ವಾಂ**] ಅಧ್ಯಾಪಕೋಪದೇಶಕರೇ! ನೀವಿಬ್ಬರೂ [**ಇಮಾಃ**] ಈ [**ಮನ್ಯಮಾನಾಃ**] ಸತ್ಕರಿಸಲಾದ [**ಭೃಮಯಃ**] ಭ್ರಮಣಾದಿ [**ಯುವಾವತೇ**] ನಿಮ್ಮ ರಕ್ಷಕನಿಗಾಗಿ [**ತುಜ್ಯಾಃ**] ಹಿಂಸಾಯೋಗ್ಯರು [**ನ, ಅಭೂವನ್**] ಆಗದಿರಲಿ. [**ಇಂದ್ರಾವರುಣಾ**] ಮಿಂಚುಗಾಳಿಗಳಿಗೆ ಸದೃಶರಾಗಿರುವ [**ಯೇನ**] ಯಾವ ಯಶದಿಂದ [**ವಾಂ**] ನಿಮ್ಮಿಬ್ಬರ [**ಸಖಿಭ್ಯಃ**] ಸ್ನೇಹಿತರಿಗೆ [**ಸಿನಂ**] [**ಸ್ಮ**] ಅನ್ನಾದಿಗಳನ್ನೇ [**ಭರಥಃ**] ಭರಣ ಮಾಡಿರಿ. [**ತ್ಯತ್**] ಆ [**ಯಶಃ**] [**ಹಿ**] ಕೀರ್ತಿಯು [**ಕ್ವ**] ಎಲ್ಲಿ?

**ಭಾವಾರ್ಥ:-** ಅಧ್ಯಾಪಕೋಪದೇಶಕರು ಮಿಂಚುಗಾಳಿಗಳಂತೆ ಎಲ್ಲರಿಗೂ ಉಪಕಾರ ಮಾಡುವವರೂ, ಪ್ರೀತಿವಂತರೂ ಎಲ್ಲರಿಗೂ ಪ್ರಿಯವಾದ ಆಚರಣೆ ಮಾಡುವವರೂ ಆಗುವರು. ಅವರೊಂದಿಗೆ ಸದಾ ಸ್ನೇಹಾಚರಣೆ ಮಾಡುವವರಾಗಿ ಅವರಿಗೆ ಅನ್ನಾದಿಗಳನ್ನು ಕೊಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಯಮು ವಾಂ ಪುರುತಮೋ ರಯೀಯ-ಞ್ಛಶ್ವತ್ತಮಮವಸೇ ಜೋಹವೀತಿ ।**
**ಸಜೋಷಾವಿಂದ್ರಾವರುಣಾ ಮರುದ್ಭಿ-ರ್ದಿವಾ ಪೃಥಿವ್ಯಾ ಶೃಣುತಂ ಹವಂ ಮೇ ॥೨॥**

**ಪದಾರ್ಥ:-** [**ಇಂದ್ರಾವರುಣಾ**] ಮಿಂಚು-ಜಲಗಳಂತಿರುವ [**ಮರುದ್ಭಿಃ**] ಗಾಳಿಗಳಂತೆ ಕೊಳಿಸಿಕೊಳ್ಳುವ ಜನರಿಂದ [**ದಿವಾ**] ಸೂರ್ಯನು ಮತ್ತು [**ಪೃಥಿವೀ**] ಭೂಮಿಯೊಂದಿಗೆ ಇದ್ದು ಸುಖದಾಯಕನಾದ [**ಅಯಂ**] ಈ ರಾಜನು [**ಉ**] ಏನು [**ಪುರುತಮಃ**] ಅತಿಶಯವಾದ [**ರಯಿಯನ್**] ಧನವನ್ನು ಬಯಸುತ್ತ [**ವಾಂ**] ನಿಮ್ಮಿಬ್ಬರಿಗೆ [**ಅವಸೇ**] ರಕ್ಷಣಾದಿಗಳಿಗಾಗಿ [**ಶಶ್ವತ್ತಮಂ**] ಅನಾದಿ ಸಿದ್ಧ ಪದಾರ್ಥಗಳನ್ನು [**ಜೋಹವೀತಿ**] ಪದೇಪದೇ ಕೊಡುವನೋ! [**ಸಜೋಷಾ**] ಸಮಾನ ಪ್ರೀತಿಯ ಸೇವನೆ ಮಾಡುವ ನೀವಿಬ್ಬರೂ [**ಮೇ**] ನನ್ನ [**ಹವಂ**] ಸ್ತವನವನ್ನು [**ಶೃಣುತಂ**] ಶ್ರವಣ ಮಾಡಿರಿ.

**ಭಾವಾರ್ಥ:-** ರಾಜನು, ಅಧ್ಯಾಪಕರು, ಉಪದೇಶಕರು ಹೇಗೆ ಎಲ್ಲರ ರಕ್ಷಣೆ, ಬುದ್ಧಿ, ವಿದ್ಯೆ, ಶಿಕ್ಷಣ ನೀಡಿ ಅಭಿವೃದ್ಧಿ ಪಡಿಸುವರೋ ಹಾಗೆ ನೀವು ಪರಸ್ಪರರನ್ನು ಪ್ರಶಂಸಿಸುತ್ತ ಪೃಥಿವ್ಯಾದಿಗಳಲ್ಲಿರುವ ಸಂಪತ್ತನ್ನು ಪ್ರಯತ್ನಪೂರ್ವಕ ಪಡೆದುಕೊಂಡು ಪ್ರಖ್ಯಾತ ಮನುಷ್ಯರಾಗಿರಿ.

ಅಧ್ಯಾಪಕರ ವಿಷಯವನ್ನಿಲ್ಲಿ ಹೇಳಿದೆ.

**ಅಸ್ಮೇ ತದಿಂದ್ರಾವರುಣಾ ವಸುಷ್ಯಾ-ದಸ್ಮೇ ರಯಿರ್ಮರುತಃ ಸರ್ವವೀರಃ ।**
**ಅಸ್ಮಾನ್ ವರೂತ್ರೀಃ ಶರಣೈರವಂ-ತ್ವಸ್ಮಾನ್ ಹೋತ್ರಾ ಭಾರತೀ ದಕ್ಷಿಣಾಭಿಃ ॥೩॥**

**ಪದಾರ್ಥ:-** [**ಇಂದ್ರಾವರುಣಾ**] ಗಾಳಿ ಮಿಂಚುಗಳಂತಿರುವವರೇ! [**ಅಸ್ಮೇ**] ನಮ್ಮವರಲ್ಲಿ [**ತತ್**] ಆ [**ವಸು**] ಧನವು [**ಸ್ಯಾತ್**] ಇರಲಿ. [**ಅಸ್ಮೇ**] ನಮ್ಮವರಲ್ಲಿ [**ಸರ್ವವೀರಃ**] ಸರ್ವರೂ ಶೂರರಾಗುವಂತಹ [**ರಯಿಃ**] ಸಂಪತ್ತಿರಲಿ. [**ಮರುತಃ**] ಮನುಷ್ಯರೇ! [**ಅಸ್ಮಾನ್**] ನಮ್ಮೆಲ್ಲರನ್ನೂ [**ವರೂತ್ರೀಃ**] ಅತಿಶ್ರೇಷ್ಠ ವಿದ್ಯೆಯು [**ಹೋತ್ರಾ**] ಗ್ರಹಣ ಯೋಗ್ಯವಾದ ಕ್ರಿಯೆಯು [**ಭಾರತೀ**] ವಿದ್ಯಾಯುಕ್ತ ನುಡಿಯು [**ಶರಣೈಃ**] ದುಃಖನಾಶಕ [**ದಕ್ಷಿಣಾಭಿಃ**] ದಾನಗಳಿಂದ [**ಅಸ್ಮಾತ್**] ನಮ್ಮೆಲ್ಲರನ್ನು [**ಅವಂತು**] ರಕ್ಷಣೆ ಮಾಡಿರಿ.

**ಭಾವಾರ್ಥ:-** ಅಧ್ಯಾಪಕರೇ, ಉಪದೇಶಕರೇ, ರಾಜರೇ! ನೀವೆಲ್ಲರೂ ನಮ್ಮನ್ನು ವಿದ್ಯಾವಂತರೂ, ಲಕ್ಷ್ಮೀವಂತರೂ, ಧನವಂತರೂ, ಆಗುವಂತೆ ಪ್ರೇರೇಪಣೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬೃಹಸ್ಪತೇ ಜುಷಸ್ವ ನೋ ಹವ್ಯಾನಿ ವಿಶ್ವದೇವ್ಯ । ರಾಸ್ವ ರತ್ನಾನಿ ದಾಶುಷೇ ॥೪॥**

**ಪದಾರ್ಥ:-** [ವಿಶ್ವದೇವ್ಯ] ಉತ್ತಮ ವಿದ್ಯಾವಂತರೇ! [ಬೃಹಸ್ಪತೇ] ಶ್ರೇಷ್ಠನುಡಿಗಳನ್ನು ಪಾಲಿಸುವ ವಿದ್ವಾಂಸರೇ! ನೀವು [ನಃ] ನಮಗೆ [ಹವ್ಯಾನಿ] ದಾನಯೋಗ್ಯ ಪದಾರ್ಥಗಳನ್ನು [ಜುಷಸ್ವ] ದಾನ ಮಾಡಿರಿ/ ಸೇವಿಸಿರಿ. [ದಾಶುಷೇ] ದಾನಮಾಡುವವನಿಗಾಗಿ [ರತ್ನಾನಿ] ಧನಗಳನ್ನು [ರಾಸ್ವ] ಕೊಡಿರಿ.

**ಭಾವಾರ್ಥ:-** ಅಧ್ಯಾಪಕರೇ! ನೀವು ನಮ್ಮೆಲ್ಲರಿಗೂ ವಿದ್ಯೆಯನ್ನು ದಾನ ಮಾಡಿರಿ. ರಾಜನೇ! ನೀನು ವಿದ್ಯೆಯನ್ನು ನೀಡುವವರಿಗೆ ಧನ ನೀಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುಚಿಮರ್ಕೈರ್ಬೃಹಸ್ಪತಿ-ಮಧ್ವರೇಷು ನಮಸ್ಯತ । ಅನಾಮ್ಯೋಜ ಆ ಚಕೇ ॥೫॥**

**ಪದಾರ್ಥ:-** [ಅಧ್ವರೇಷು] ಅಹಿಂಸಾತ್ಮಕ ವಿದ್ಯಾ ಸಂಗತಿಕರಣ ವಿಷಯದಲ್ಲಿ [ಅರ್ಕೈಃ] ಸತ್ಕಾರ ಯೋಗ್ಯ ವಿಚಾರಗಳೊಂದಿಗೆ [ಶುಚಿಂ] ಪವಿತ್ರನಾದ [ಬೃಹಸ್ಪತಿಂ] ವಾಣಿರೂಪ ವಿದ್ಯೆಯ ರಕ್ಷಣೆ ಮಾಡುವವನಿಗೆ [ನಮಸ್ಯತ] ಸತ್ಕಾರ ಮಾಡಿರಿ. [ಓಜಃ] ಪರಾಕ್ರಮೀ ಹಾಗೂ [ಅನಾಮಿ] ನಮ್ರನಾಗದವನು [ಆ, ಚಕೆ] ಪಡೆಯಲು ಬಯಸುವೆನು.

**ಭಾವಾರ್ಥ:-** ಮನುಷ್ಯನು ವೇದಾರ್ಥ ತಿಳಿದ ವಿದ್ವಾಂಸನನ್ನು ಅಧ್ಯಾಪಕೋಪದೇಶಕನನ್ನು ನಮಸ್ಕಾರ, ಸತ್ಕಾರಗಳನ್ನು ಮಾಡಬೇಕು. ಅದರಿಂದವರು ಶ್ರೇಷ್ಠ ವಿದ್ಯಾವಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವೃಷಭಂ ಚರ್ಷಣೀನಾಂ ವಿಶ್ವರೂಪಮದಾಭ್ಯಮ್ । ಬೃಹಸ್ಪತಿಂ ವರೇಣ್ಯಮ್ ॥೬॥**

**ಪದಾರ್ಥ:-** [ಚರ್ಷಣೀನಾಂ] ವಿದ್ಯೆಯಿಂದ ಪ್ರಕಾಶಮಾನರಾದವರಲ್ಲಿ [ವೃಷಭಂ] ಉತ್ತಮ [ವಿಶ್ವರೂಪಂ] ಕರ್ಮ-ವಸ್ತುಗಳನ್ನು ರೂಪಿಸುವವರ [ಅದಾಭ್ಯಂ] ಹಿಂಸೆಗೆ ಯೋಗ್ಯವಲ್ಲದ [ವರೇಣ್ಯಂ] ಶ್ರೇಷ್ಠನಾದ [ಬೃಹಸ್ಪತಿಂ] ವಿದ್ಯೆಯ ಪಾಲಕನನ್ನು ನೀವು ಬಯಸಿರಿ.

**ಭಾವಾರ್ಥ:-** ರಾಜರು ಪ್ರಜೆಗಳನ್ನು ಸತ್ಕರಿಸಿ ಹೇಗೆ ಲಕ್ಷ್ಮೀವಂತರಾಗುವರೋ ಹಾಗೆ ಪ್ರಜೆಗಳೂ ರಾಜರನ್ನು ಸತ್ಕರಿಸಿ ಸಿರಿವಂತರಾಗುವರು.

ವಿದ್ಯಾವಂತರ ವಿಷಯವಿಲ್ಲಿ ಹೇಳಿದೆ.

**ಇಯಂ ತೇ ಪೂಷನ್ನಾಘೃಣೇ ಸುಷ್ಟುತಿರ್ದೇವ ನವ್ಯಸೀ । ಅಸ್ಮಾಭಿಸ್ತುಭ್ಯಂ ಶಸ್ಯತೇ ॥೭॥**

**ಪದಾರ್ಥ:-** **[ಪೂಷನ್]** ಪುಷ್ಟಿಕಾರಕನೇ! **[ಆಘೃಣೇ]** ಎಲ್ಲಾ ರೀತಿಯಲ್ಲಿ ಪ್ರಕಾಶಮಾನ **[ದೇವ]** ಉತ್ತಮ ಗುಣಸಂಪನ್ನ ರಾಜನೇ! **[ತೇ]** ನಿನ್ನ **[ಇಯಂ]** ಈ **[ನವ್ಯಸೀ]** ನೂತನವಾದ **[ಸುಷ್ಟುತಿಃ]** ಪ್ರಶಂಸೆಯು **[ತುಭ್ಯಂ]** ನಿನಗೆ **[ಅಸ್ಮಾಭಿಃ]** ನಮ್ಮಿಂದ **[ಶಸ್ಯತೇ]** ಎಚ್ಚರಿಸಲ್ಪಡುತ್ತದೆ.

**ಭಾವಾರ್ಥ:-** ಯಾರು ಧರ್ಮ ಸಂಬಂಧಿ ಕರ್ಮ ಮಾಡುವರೋ ಅವರನ್ನು ನೋಡಿ-ಕೇಳಿ ಎಲ್ಲರೂ ಸಂತೋಷಗೊಳ್ಳುವರು.

ಅಧ್ಯಯನ ವಿಷಯವನ್ನಿಲ್ಲಿ ಹೇಳಿದೆ.

**ತಾಂ ಜುಷಸ್ವ ಗಿರಂ ಮಮ ವಾಜಯಂತೀಮವಾ ಧಿಯಮ್ ।**
**ವಧೂಯುರಿವ ಯೋಷಣಾಮ್ ॥೮॥**

**ಪದಾರ್ಥ:-** **[ತಾಂ]** ಆ **[ವಾಜಯಂತೀಂ]** ಸತ್ಯಾಸತ್ಯತೆಯನ್ನು ತಿಳಿಯುವ **[ಮಮ]** ನನ್ನ **[ಗಿರಂ]** ಶಾಸ್ತ್ರ ಸಂಪನ್ನ ವಾಣಿಯನ್ನು **[ಯೋಷಣಾಂ]** ತನ್ನ ಸತಿಯನ್ನು **[ವಧೂಯುರಿವ]** ತನ್ನ ಸ್ತ್ರೀಯನ್ನು ಬಯಸುವವನ ರೀತಿಯಲ್ಲಿ **[ಜುಷಸ್ವ]** ಸೇವಿಸು. **[ಧಿಯಂ]** ಬುದ್ಧಿಯನ್ನು **[ಅವ]** ರಕ್ಷಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಸ್ತ್ರೀಯನ್ನು ಬಯಸುವ ಪುರುಷರು ಹೇಗೆ ಸ್ವಸತಿಯನ್ನು ರಕ್ಷಿಸಿ ಸೇವೆ ಮಾಡುವರೋ, ಹಾಗೆ ಶಾಸ್ತ್ರಯುಕ್ತ ವಾಣಿಯನ್ನು ರಕ್ಷಿಸಿ ಸೇವೆ ಮಾಡಬೇಕು.

ಪರಮಾತ್ಮನ ವಿಷಯವನ್ನಿಲ್ಲಿ ಹೇಳಿದೆ.

**ಯೋ ವಿಶ್ವಾಭಿ ವಿಪಶ್ಯತಿ ಭುವನಾ ಸಂಚ ಪಶ್ಯತಿ । ಸ ನಃ ಪೂಷಾವಿತಾ ಭುವತ್ ॥೯॥**

**ಪದಾರ್ಥ:-** **[ಯಃ]** ಯಾವ ಪರಮಾತ್ಮನು **[ವಿಶ್ವಾ]** ಸಮಗ್ರ **[ಭುವನಾ]** ಜೀವ ಲೋಕವನ್ನು **[ಅಭಿ]** ಸಮ್ಮುಖಗೊಳಿಸಿ **[ವಿಪಶ್ಯತಿ]** ಉತ್ತಮ ರೀತಿಯಲ್ಲಿ ನೋಡುವನೋ, **[ಸಂ]** **[ಚ]** **[ಪಶ್ಯತಿ]** ಸಂಯತವಾಗಿ ನೋಡುವನೋ, **[ಸಃ]** ಅವನು **[ನಃ]** ನಮಗೆ **[ಪೂಷಾ]** ಪುಷ್ಟಿಕರ್ತನು **[ಅವಿತಾ]** ರಕ್ಷಕನು **[ಭುವತ್]** ಆಗಿರುವವನು.

**ಭಾವಾರ್ಥ:-** ಯಾವನು ಎಲ್ಲವನ್ನು ಸೃಷ್ಟಿಸಿ, ಅವುಗಳ ಕರ್ಮಗಳನ್ನು ನೋಡಿ ಅದಕ್ಕನುಗುಣವಾಗಿ ಫಲಕೊಡುವನೋ ಅವನೇ ಪರಮಾತ್ಮನು. ಅವನನ್ನು ನಮ್ಮ ಏಳಿಗೆಗಾಗಿ ಅಭಿಲಾಷಿಸೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।**
**ಧಿಯೋ ಯೋ ನಃ ಪ್ರಚೋದಯಾತ್ ॥೧೦॥**

**ಪದಾರ್ಥ:-** **[ಯಃ]** ಯಾವನು **[ನಃ]** ನಮಗೆ **[ಧಿಯಃ]** ಬುದ್ಧಿಗಳನ್ನು **[ಪ್ರಚೋದಯಾತ್]** ಪ್ರಚೋದಿಸುವನೋ (ಅಂತಹ) **[ಸವಿತುಃ]** ಸ್ವಾಮಿಯ **[ದೇವಸ್ಯ]** ಸಮಸ್ತ ಸಂಪತ್ಪ್ರದಾಯಕ ಅಂತರ್ಯಾಮಿಯ **[ತತ್]** ಆ **[ವರೇಣ್ಯಂ]** ಪಡೆಯಲರ್ಹವಾದ **[ಭರ್ಗಃ]** ಪ್ರಭಾವವನ್ನು/ತೇಜಸ್ಸನ್ನು **[ಧೀಮಹಿ]** ಧಾರಣ ಮಾಡೋಣ.

**ಭಾವಾರ್ಥ:-** ಯಾವನು ಎಲ್ಲರಿಗೂ ಪಾಲಕ, ರಕ್ಷಕ, ನ್ಯಾಯಾದೀಶ, ಕರುಣಾಳು, ಶುದ್ಧ, ಸನಾತನ, ಆತ್ಮಸಾಕ್ಷೀ, ಪುರುಷಾರ್ಥದಾಯಕ ಕೃಪಾಸಾಗರನೋ ಆ ಪರಮೇಶ್ವರನನ್ನು ನಮ್ಮ ಅಂತಃಕರಣದಲ್ಲಿ ಧಾರಣ ಮಾಡೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವಸ್ಯ ಸವಿತುರ್ವಯಂ ವಾಜಯಂತಃ ಪುರಂಧ್ಯಾ । ಭಗಸ್ಯ ರಾತಿಮೀಮಹೇ ॥೧೧॥**

**ಪದಾರ್ಥ:-** [**ಪುರಂಧ್ಯಾ**] ಬುದ್ಧಿವಂತಿಕೆಯಿಂದ ಬಹುವಿದ್ಯೆಯನ್ನು ಧಾರಣ ಮಾಡಿರುವವನಿಂದ [**ವಾಜಯಂತಃ**] ತಿಳಿದುಕೊಳ್ಳುವವರಾಗಿ [**ವಯಂ**] ನಾವು [**ಸವಿತುಃ**] ಪ್ರೇರಣಾಕಾರಕ ಅಂತರ್ಯಾಮಿಯಾದ [**ದೇವಸ್ಯ**] ಬಯಸಲರ್ಹ [**ಭಗಸ್ಯ**] ಐಶ್ವರ್ಯದಾಯಕನ [**ರಾತಿಂ**] ದಾನವನ್ನು [**ಈಮಹೇ**] ಯಾಚಿಸೋಣ.

**ಭಾವಾರ್ಥ:-** ಮನುಷ್ಯರು ತಮ್ಮ ಬುದ್ಧಿಶಕ್ತಿಯನ್ನು ಬೆಳೆಸಿಕೊಂಡು ಧರ್ಮಾನುಷ್ಠಾನ ಮಾಡುತ್ತ ಈಶ್ವರನ ಆಜ್ಞಾನುಕೂಲ ವರ್ತಿಸುತ್ತ ಪ್ರಾರ್ಥಿಸಿದರೆ ಆ ಈಶ್ವರನು ಅವರನ್ನು ಬೇಗನೇ ಶುದ್ಧಚಾರಿತ್ರ್ಯರನ್ನಾಗಿ ಮಾಡುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವಂ ನರಃ ಸವಿತಾರಂ ವಿಪ್ರಾ ಯಜ್ಞೈಃ ಸುವೃಕ್ತಿಭಿಃ । ನಮಸ್ಯಂತಿ ಧಿಯೇಷಿತಾಃ ॥೧೨॥**

**ಪದಾರ್ಥ:-** [**ಧಿಯಾ**] ಬುದ್ಧಿ ಕರ್ಮಗಳಿಂದ [**ಇಷಿತಾಃ**] ಪ್ರೇರಣೆ ಪಡೆದ [**ನರಃ**] ಮನುಷ್ಯನು [**ವಿಪ್ರಾಃ**] ಬುದ್ಧಿವಂತರು [**ಸುವೃಕ್ತಿಭಿಃ**] ದೋಷ ನಿವಾರಣೆ ಮಾಡುವಂತಹ [**ಯಜ್ಞೈಃ**] ಜ್ಞಾನಯಜ್ಞಗಳಿಂದ [**ಸವಿತಾರಂ**] ಸಮಗ್ರ ಜೀವ ಜಗತ್ತನ್ನುತ್ಪಾದಿಸುವ [**ದೇವಂ**] ಸುಖಕಾರಕನನ್ನು [**ನಮಸ್ಯಂತಿ**] ನಮಿಸುವರು.

**ಭಾವಾರ್ಥ:-** ಜಿತೇಂದ್ರಿಯರಾದ ವಿದ್ವಾಂಸರು ಧರ್ಮಾಚರಣೆ, ಪ್ರೇಮ, ಸತ್ಯನುಡಿಗಳಿಂದ ಪರಮಾತ್ಮನ ಉಪಾಸನೆ ಮಾಡಿ ಸುಖಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸೋಮೋ ಜಿಗಾತಿ ಗಾತುವಿ-ದ್ದೇವಾನಾಮೇತಿ ನಿಷ್ಕೃತಮ್ ।**
**ಋತಸ್ಯ ಯೋನಿಮಾಸದಮ್ ॥೧೩॥**

**ಪದಾರ್ಥ:-** [**ಗಾತುವಿತ್**] ಪ್ರಶಂಸೆ ಮಾಡುವವನು [**ಸೋಮಃ**] ಐಶ್ವರ್ಯ ಸಂಪನ್ನನಾಗಿ [**ದೇವಾನಾಂ**] ವಿದ್ಯಾವಂತರ ಮತ್ತು [**ಋತಸ್ಯ**] ಸತ್ಯದ [**ನಿಷ ತು**] ನಿರಂತರ ತಿಳಿದಿರುವರು [**ಆಸದಂ**] ಯಾವುದರಲ್ಲಿ ವರ್ತಮಾನರಾಗುವರೋ ಅಂತಹ [**ಯೋನಿಂ**] ಕಾರಣೀಭೂತವಾದವನನ್ನು [**ಜಿಗಾತಿ**] ಸ್ತುತಿ ಮಾಡುವನು; [**ಏತಿ**] ಸುಖ ಪಡೆಯುವನು.

**ಭಾವಾರ್ಥ:-** ವಿದ್ಯಾವಂತನು ಬಹುವಿಧ ಪ್ರಪಂಚಕ್ಕೆ ಕಾರಣನಾದ ಅವ್ಯಕ್ತ ಈಶ್ವರನನ್ನು ತಿಳಿದುಕೊಳ್ಳುವನು ಮತ್ತು ಅಂತಹ ಪರಮಾತ್ಮನ ಸ್ತುತಿಮಾಡಿ ಐಶ್ವರ್ಯವಂತನಾಗುವನು.

ವಿದ್ಯಾವಂತರ ವಿಷಯವಿಲ್ಲಿದೆ.

**ಸೋಮೋ ಅಸ್ಮಭ್ಯಂ ದ್ವಿಪದೇ ಚತುಷ್ಪದೇ ಚ ಪಶವೇ । ಅನಮೀವಾ ಇಷಸ್ಕರತ್ ॥೧೪॥**

**ಪದಾರ್ಥ:-** **[ಸೋಮಃ]** ಚಂದ್ರನು **[ದ್ವಿಪದೇ]** ದ್ವಿಪಾದಗಳವರಾದ **[ಅಸ್ಮಭ್ಯಂ]** ನಮಗೆ **[ಚತುಷ್ಪದೇ]** ನಾಲ್ಕು ಕಾಲಿನ ಗವಾದಿಗಳು **[ಚ]** ಮತ್ತು **[ಪಶವೇ]** ಮತ್ತು ಅನ್ಯಪಶುಗಳು ಇವರೆಲ್ಲರಿಗೂ **[ಅನಮೀವಾಃ]** ರೋಗನಿವಾರಕ **[ಇಷಃ]** ಅನ್ನೌಷಧಿಗಳನ್ನು **[ಕರತ್]** ತಯಾರಿಸುವನು.

**ಭಾವಾರ್ಥ:-** ವೈದ್ಯರು ದ್ವಿಪಾದ ಮತ್ತು ಚತುಷ್ಪಾದ ಜೀವಿಗಳಿಗೆ ರೋಗರಹಿತರನ್ನಾಗಿ ಮಾಡಬೇಕು. ಎಲ್ಲ ಜನರನ್ನೂ ಗೌರವಿಸಿ ಯೋಗ್ಯರೆನಿಸಿಕೊಳ್ಳಬೇಕು.

ಸ್ನೇಹದ ವಿಚಾರವಿಲ್ಲಿ ಹೇಳಿದೆ.

**ಅಸ್ಮಾಕಮಾಯುರ್ವರ್ಧಯ-ನ್ನಭಿಮಾತೀಃ ಸಹಮಾನಃ । ಸೋಮಃ ಸಧಸ್ಥಮಾಸದತ್ ॥೧೫॥**

**ಪದಾರ್ಥ:-** **[ಸೋಮಃ]** ಪಥ್ಯ ವ್ಯವಹಾರಗಳಿಗೆ ಪ್ರೇರಣೆ ನೀಡುವ **[ಅಭಿಮಾತೀಃ]** ಶತ್ರುಗಳಂತಿರುವ ರೋಗಗಳನ್ನು **[ಸಹಮಾನಃ]** ಎದುರಿಸುವವನಂತೆ **[ಅಸ್ಮಾಕಂ]** ನಮ್ಮೆಲ್ಲರ **[ಆಯುಃ]** ಜೀವನವನ್ನು **[ವರ್ಧಯನ್]** ವೃದ್ಧಿಪಡಿಸುತ್ತ **[ಸಧಸ್ಥಂ]** ಜೊತೆಯ ಸ್ಥಾನವನ್ನು **[ಆ, ಅಸದತ್]** ಪಡೆಯುವನು. ಅವನು ನಮ್ಮ ಮಿತ್ರನಾಗಲಿ.

**ಭಾವಾರ್ಥ:-** ಧಾರ್ಮಿಕನೂ ಶೂರನೂ ಆದ ಪುರುಷನು. ರೋಗಾದಿ ಶರೀರದಲ್ಲೇ ಇರುವ ಶತ್ರುಗಳನ್ನು ನಾಶ ಮಾಡಿ ಮಿತ್ರರನ್ನು ರಕ್ಷಿಸಿ ಎಲ್ಲಾ ಸಜ್ಜನರಿಗೆ ಜೀವನವನ್ನು, ವಿನಯವನ್ನು ವೃದ್ಧಿಯನ್ನೂ ಮಾಡುವರು. ಅವರೊಂದಿಗೆ ಯಾವಾಗಲೂ ಸ್ನೇಹವನ್ನು ಬೆಳೆಸಬೇಕು.

ಅಧ್ಯಾಪಕೋಪದೇಶಕರ ವಿಷಯವಿಲ್ಲಿದೆ.

**ಆ ನೋ ಮಿತ್ರಾವರುಣಾ ಘೃತೈರ್ಗವ್ಯೂತಿಮುಕ್ಷತಮ್ । ಮಧ್ವಾ ರಜಾಂಸಿ ಸುಕ್ರತೂ ॥೧೬॥**

**ಪದಾರ್ಥ:-** **[ಸುಕ್ರತೂ]** ಉತ್ತಮ ಬುದ್ಧಿ ಮತ್ತು ಶ್ರೇಷ್ಠ ಕರ್ಮಗಳಿರುವವರಾದ **[ಮಿತ್ರಾವರುಣಾ]** ಪ್ರಾಣೋದಾನಗಳಿಗೆ ಸಮನಾದ ಅಧ್ಯಾಪಕೋಪದೇಶಕರು **[ಘೃತೈಃ]** ಜಲಾದಿಗಳಿಂದ **[ಗವ್ಯೂತಿಂ]** ಎರಡು ಕ್ರೋಷ ದೂರದವರೆಗೆ **[ರಜಾಂಸಿ]** ಜನರಿಗೆ ಸೇಚನ ಮಾಡುವವರಂತೆ **[ಮಧ್ವಾ]** ಮಾಧುರ್ಯದಿಂದ **[ನಃ]** ನಮಗೆ **[ಆ, ಉಕ್ಷಿತಂ]** ಸೇಚನ ಮಾಡುವರು.

**ಭಾವಾರ್ಥ:-** ಅಧ್ಯಾಪಕೋಪದೇಶಕರು ತಾವು ಬೋಧಿಸಿದ ಪ್ರಾಣ-ವಾಯುವಿಗೆ ಸಂಬಂಧಿಸಿದ ವಿದ್ಯೆಯನ್ನು ಅರಿತು ಲೋಕ-ಲೋಕಾಂತರಗಳಿಗೆ ವ್ಯವಹಾರಗಳಿಂದಾಗಿ ಸಮಗ್ರ ದೇಶಗಳಲ್ಲಿ ಸಂಚಾರ ಮಾಡುತ್ತ ನೀರಿನಂತೆ ಶುದ್ಧಾಂತಕರಣವನ್ನು ಪಡೆದಿರುತ್ತಾರೆ. ಅವರನ್ನು ಎಲ್ಲರೂ ತಿಳಿದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉರುಶಂಸಾ ನಮೋವೃಧಾ ಮಹ್ನಾ ದಕ್ಷಸ್ಯ ರಾಜಥಃ । ದ್ರಾಘಿಷ್ಠಾಭಿಃ ಶುಚಿವ್ರತಾ ॥೧೭॥**

**ಪದಾರ್ಥ:-** **[ಶುಚಿವ್ರತಾ]** ಉತ್ತಮ ಕರ್ಮಾಚರಣೆ ಮಾಡುವವರು **[ಉರುಶಂಸಾ]** ಬಹು ಪ್ರಶಂಸೆ ಪಡೆದವರು **[ನಮೋವೃಧಾ]** ಅನ್ನಾದಿಗಳ ವೃದ್ಧಿಗೊಳಿಸುವ ಅಧ್ಯಾಪಕೋಪದೇಶಕರೇ! **[ದಕ್ಷಸ್ಯ]** ಬಲದ **[ಮಹ್ನಾ]** ಮಹಿಮೆಯಿಂದ **[ದ್ರಾಘಿಷ್ಠಾಭಿಃ]** ಪುರುಷಾರ್ಥ ಸಾಧಕ ವಿಸ್ತೃತಕ್ರಿಯೆಗಳಿಂದ **[ರಾಜಥಃ]** ರಾರಾಜಿಸುವಿರಿ.

**ಭಾವಾರ್ಥ:-** ಯಾರು ಪವಿತ್ರರೂ ಯಶಸ್ವಿಗಳೂ ಆಗಿರುವರೋ ಅವರು ಜನಬಲ, ಧನಬಲ, ಪಡೆದು ಆಹಾರಾದಿಗಳನ್ನು ವೃದ್ಧಿಪಡಿಸಿಕೊಂಡು ಉತ್ತಮ ಕರ್ಮಗಳಿಂದ ಲೋಕದಲ್ಲಿ ಪ್ರಸಿದ್ಧರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗೃಣಾನಾ ಜಮದಗ್ನಿನಾ ಯೋನಾವೃತಸ್ಯ ಸೀದತಮ್ । ಪಾತಂ ಸೋಮಮೃತಾವೃಧಾ ॥೧೮॥**

**ಪದಾರ್ಥ:-** **[ಋತಾವೃಧಾ]** ಸತ್ಯದ ಅಭಿವೃದ್ಧಿಗೊಳಿಸುವವರು **[ಗೃಣಾನಾ]** ಸ್ತವನಶೀಲರಾದ ಅಧ್ಯಾಪಕೋಪದೇಶಕರೇ! ನೀವಿಬ್ಬರು **[ಜಮದಗ್ನಿನಾ]** ನೇತ್ರಾಗ್ನಿಯಿಂದ **[ಋತಸ್ಯ]** ಸತ್ಯಾಚರಣದ **[ಯೋನೌ]** ಸ್ಥಾನದಲ್ಲಿ **[ಸೀದತಂ]** ನೆಲೆಗೊಳ್ಳಿರಿ. **[ಸೋಮಂ]** ಸಂಪತ್ತಿನ **[ಪಾತಂ]** ರಕ್ಷಣೆ ಮಾಡಿರಿ.

**ಭಾವಾರ್ಥ:-** ಯಾರು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪೃಥಿವ್ಯಾದಿಯಾಗಿ ಪರಮೇಶ್ವನವರೆಗಿನ ಎಲ್ಲಾ ಸೃಷ್ಟಿ ಪದಾರ್ಥಗಳ ಸಾಕ್ಷಾತ್ಕಾರ ಮಾಡಿಕೊಂಡು ಸತ್ಯವಿದ್ಯೆಯ ಪ್ರಚಾರ, ಧರ್ಮಾಚರಣೆ ಮತ್ತು ಸ್ನೇಹಭಾವಗಳಿಂದ ಕೂಡಿರುತ್ತಾರೆಯೋ ಅವರು ಎಲ್ಲರಿಗೂ ಸತ್ಕಾರಾರ್ಹರಾಗಿರುವರು.

ಈ ಸೂಕ್ತದಲ್ಲಿ ಸ್ನೇಹಿತ, ಅಧ್ಯಾಪಕ, ಶ್ರೋತೃವರ್ಗ, ಉಪದೇಶಕ, ವಿದ್ಯಾವಂತ, ಪ್ರಾಣ, ಉದಾನ, ಪರಮಾತ್ಮ ಇವರೆಲ್ಲರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಇಲ್ಲಿಗೆ ಮೂರನೇ ಮಂಡಲದ ೬೨ನೇ ಸೂಕ್ತ ಮತ್ತು ಋಗ್ವೇದದ ಮೂರನೇ ಅಷ್ಟಕದ ನಾಲ್ಕನೇ ಅಧ್ಯಾಯದ ೧೨ನೇ ವರ್ಗ ಐದನೇ ಅನುವಾಕ ಮುಗಿಯಿತು.

# ॥ ತೃತೀಯಂ ಮಂಡಲಂ ಸಮಾಪ್ತಮ್॥

# ಚತುರ್ಥ ಮಂಡಲಮ್

## ಪ್ರಥಮೋಽನುವಾಕಃ (ಸೂಕ್ತ ೧-೧೦)

### ಸೂಕ್ತ ೧

ಮಂತ್ರಸಂಖ್ಯೆ ೨೦ । ವಾಮದೇವ ಋಷಿಃ । ೧, ೫-೨೦ ಅಗ್ನಿಃ, ೨-೪ ಅಗ್ನಿರ್ವಾವರುಣ ಚ ದೇವತಾ । ೧ ಸ್ವರಾಟತಿಶಕ್ವರೀ ಛಂದಃ । ಪಂಚಮಃ ಸ್ವರಃ । ೨ ಅತಿ ಜಗತೀ ಛಂದಃ । ನಿಷಾದ ಸ್ವರಃ । ೩ ಅಷ್ಟ ಛಂದಃ । ಮಧ್ಯಮಃ ಸ್ವರಃ । ೪, ೬ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೫, ೧೮, ೨೦ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೭, ೯, ೧೫, ೧೭, ೧೯ ವಿರಾಟ್ ತ್ರಿಷ್ಟುಪ್ ಛಂದಃ । ೮, ೧೦, ೧೧, ೧೨, ೧೬ ನಿಚೃತ್ ತ್ರಿಷ್ಟುಪ್ ಛಂದಃ । ೧೩, ೧೪ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ ।

ಈ ಮಂತ್ರದಲ್ಲಿ ವಾಣಿಯ ವಿಷಯವನ್ನು ತಿಳಿಸಲಾಗಿದೆ.

**ತ್ವಾಂ ಹ್ಯಗ್ನೇ ಸದಮಿತ್ಸಮನ್ಯವೋ ದೇವಾಸೋ ದೇವಮರತಿಂ ನ್ಯೇರಿರ ಇತಿ ಕ್ರತ್ವಾ ನ್ಯೇರಿರೇ । ಅಮರ್ತ್ಯಂ ಯಜತ ಮರ್ತ್ಯೇಷ್ವಾ ದೇವಮಾದೇವಂ ಜನತ ಪ್ರಚೇತಸಂ ವಿಶ್ವಮಾದೇವಂ ಜನತ ಪ್ರಚೇತಸಮ್ ॥೧॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತ ಪುರುಷನೇ! **[ಸಮನ್ಯವಃ]** ಕ್ರೋಧ ಸಹಿತನಾಗಿರುವ **[ದೇವಾಸಃ]** ವಿದ್ಯಾವಂತನು **[ಹಿ]** ಯಾವ ಕಾರಣದಿಂದಾಗಿ **[ಅರಾತಿಂ]** ಸಮೀಪಿಸಲು ಯೋಗ್ಯವಾದ **[ದೇವಂ]** ಉತ್ತಮ ಗುಣಗಳಿಂದ **[ಸದಂ]** ಮನೆಯಂತಹ ಸನ್ನಿವೇಶವನ್ನು ಒದಗಿಸಿಕೊಡುವ **[ತ್ವಾಂ]** **[ಹಿ]** ನಿನ್ನನ್ನೇ **[ನ್ಯೇರಿರೇ]** ಪ್ರೇರಣೆಗೊಳಿಸುತ್ತಾನೆ. **[ಇತಿ]** ಈ ರೀತಿಯಾಗಿ **[ಕ್ರತ್ವಾ]** ಮಾಡಿ **[ನ್ಯೇರಿರೇ]** ನನ್ನನ್ನು ನಿಶ್ಚಯವಾಗಿ ಸಮೀಪಿಸಲಿ. **[ಮರ್ತ್ಯೇಷು]** ಮರಣಶೀಲರಾದ ಮನುಷ್ಯರಲ್ಲಿ **[ಅಮರ್ತ್ಯಂ]** ಮರಣ ಧರ್ಮ ರಹಿತನಾದ ಪರಮಾತ್ಮನನ್ನು **[ಯಜತ]** ಸಂಗತಿಕರಣಗೊಳಿಸು. **[ಆದೇವಂ]** ಎಲ್ಲ ರೀತಿಯ ವಿದ್ಯಾದಿ ಬೆಳಕಿನಿಂದ ಕೂಡಿರುವ **[ಆ ದೇವಂ]** ದೇದೀಪ್ಯಮಾನನಾದ **[ಪ್ರಚೇತಸಂ]** ಉತ್ತಮ ಜ್ಞಾನ ಸಂಪನ್ನನಾದವನನ್ನು **[ಜನತ]** ಉತ್ಪನ್ನ ಮಾಡು. **[ವಿಶ್ವಂ]** ಎಲ್ಲರನ್ನು **[ಆ, ದೇವಂ]** ಎಲ್ಲ ರೀತಿಯ ಬೆಳಕು **[ಪ್ರಚೇತಸಂ]** ಉತ್ತಮ ಜ್ಞಾನ ಇವುಗಳಿಂದ **[ಜನತ]** ಸಂಪನ್ನರನ್ನಾಗಿ ಮಾಡು.

**ಭಾವಾರ್ಥ:-** ಯಾವ ಅಧ್ಯಾಪಕರು ಮತ್ತು ರಾಜರು ಹುಬ್ಬುಗಳನ್ನೇರಿಸಿ ವಿದ್ಯಾರ್ಥಿಗಳಿಗೆ ಮಂತ್ರಿಗಳಿಗೆ ಮತ್ತು ಪ್ರಜೆಗಳಿಗೆ ಪ್ರೇರಣೆಯನ್ನು ನೀಡುತ್ತಾರೋ ಅಂತಹ ವಿದ್ಯಾರ್ಥಿ, ಮಂತ್ರಿ, ಪ್ರಜಾಜನರು ಉತ್ತಮ ಗುಣ ಸಂಪನ್ನರು, ಶ್ರೇಷ್ಠ ವಿದ್ವಾಂಸರೂ ಮತ್ತು ಧಾರ್ಮಿಕರೂ ಆಗುತ್ತಾರೆ. ಯಾರು ಮರಣಧರ್ಮದ ಮನುಷ್ಯರಲ್ಲಿ ಮರಣ ಧರ್ಮರಹಿತನಾದ, ತನ್ನಲ್ಲಿಯೇ ಇರುವ ಪ್ರಕಾಶರೂಪನಾದ ಪರಮಾತ್ಮನ ಉಪಾಸನೆಯನ್ನು ಮಾಡಿ ಎಲ್ಲಾ ಮನುಷ್ಯರನ್ನು ಬುದ್ಧಿವಂತರೂ, ವಿದ್ಯಾವಂತರೂ ಆಗುವಂತೆ ಮಾಡುತ್ತಾರೋ ಅವರೇ ಯಾವಾಗಲೂ ಸತ್ಕಾರಯೋಗ್ಯರೂ ಮತ್ತು ಸುಖಿಗಳೂ ಆಗುತ್ತಾರೆ.

ಈ ಮಂತ್ರದಲ್ಲಿ ವಾಣಿಯ ವಿಷಯವನ್ನೇ ತಿಳಿಸಲಾಗಿದೆ.

**ಸ ಭ್ರಾತರಂ ವರುಣಮಗ್ನ ಆ ವವೃತ್ಸ್ವ ದೇವಾ ಅಚ್ಛಾ ಸುಮತೀ ಯಜ್ಞವನಸಂ ಜ್ಯೇಷ್ಠಂ ಯಜ್ಞವನಸಮ್ । ಋತಾವಾನಮಾದಿತ್ಯಂ ಚರ್ಷಣೀಧೃತಂ ರಾಜಾನಂ ಚರ್ಷಣೀಧೃತಮ್ ॥೨॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಸಃ]** ಆ ನೀನು **[ಭ್ರಾತರಂ]** ಪ್ರಿಯ ಬಂಧುವಿಗೆ ಸಮನಾಗಿ **[ವರುಣಂ]** ಶ್ರೇಷ್ಠ ಜನರನ್ನು **[ಸುಮತೀ]** ಉತ್ತಮ ಬುದ್ಧಿಯಿಂದ **[ಯಜ್ಞವನಸಂ]** ವಿದ್ಯಾ ವ್ಯವಹಾರಗಳ ವಿಭಾಗ ಮಾಡುವವನು **[ಜ್ಯೇಷ್ಠಂ]** ವಿದ್ಯೆಯಿಂದ ಹಿರಿಯನಾದ **[ಯಜ್ಞವನಸಂ]** ರಾಜ್ಯವ್ಯವಹಾರಗಳ ವಿಭಾಗ ಮಾಡುವವನು **[ರಾಜಾನಂ]** ಪ್ರಕಾಶಮಾನನಾದ ರಾಜನು **[ಚರ್ಷಣೀಧೃತಂ]** ಮನುಷ್ಯರನ್ನು ಧಾರಣ ಮಾಡುವವನು / ವಿದ್ಯಾವಂತರಿಂದ ಧಾರಣ ಮಾಡಲ್ಪಟ್ಟವನು **[ಆದಿತ್ಯಂ]** ಸೂರ್ಯನಂತಿರುವ **[ಋತಾವಾನಂ]** ಸತ್ಯವನ್ನು ವಿಭಜಿಸುವುದರಲ್ಲಿ ಪ್ರಸಿದ್ಧನಾದವನು **[ಚರ್ಷಣೀಧೃತಂ]** ಸತ್ಯಾಸತ್ಯಗಳ ವಿವೇಚನೆ ಮಾಡಿ ಧಾರಣ ಮಾಡುವ ಅಧ್ಯಾಪಕ / ಉಪದೇಶಕ **[ದೇವಾನ್]** ಮತ್ತು ಧಾರ್ಮಿಕ ವಿದ್ಯಾವಂತರನ್ನು **[ಅಚ್ಛ]** ಉತ್ತಮರೀತಿಯಿಂದ **[ಆ, ವವೃತ್ಸ್ವ]** ಎಲ್ಲಾ ರೀತಿಯಲ್ಲೂ ಅನುಕೂಲಕರ ಸ್ಥಿತಿಯಲ್ಲಿ ಇರುವಂತೆ ಮಾಡು.

**ಭಾವಾರ್ಥ:-** ಅಧ್ಯಾಪಕರು ಮತ್ತು ರಾಜರು ಶ್ರೇಷ್ಠ ಶ್ರೋತೃಜನರನ್ನು ಮತ್ತು ಮಂತ್ರಿಗಳನ್ನು ಉತ್ತಮಬುದ್ಧಿ ಮತ್ತು ಸತ್ಯಾಚರಣೆ ಇವುಗಳಿಂದ ಸಂಯೋಜನಗೊಳಿಸಿ ಅವರವರಿಗೆ ಯೋಗ್ಯವಾದ ಕರ್ಮಗಳಲ್ಲಿ ಅಂದರೆ ಕೆಲಸ ಕಾರ್ಯಗಳಲ್ಲಿ ನಿಯಮಿಸಿದರೆ ರಾಜಕಾರ್ಯವು ಸೂರ್ಯನಂತೆ ವಿದ್ಯಾತ್ಮಕವಾಗಿ, ನ್ಯಾಯಯುತವಾಗಿ, ಶೋಭಾಯಮಾನವಾಗಿ ನಿರಂತರವೂ ನಡೆಯುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಖೇ ಸಖಾಯಮಭ್ಯಾ ವವೃತ್ಸ್ವಾ-ಶುಂ ನ ಚಕ್ರಂ ರಥ್ಯೇವ ರಂಹ್ಯಾ-ಸ್ಮಭ್ಯಂ ದಸ್ಮ ರಂಹ್ಯಾ । ಅಗ್ನೇ ಮೃಳೀಕಂ ವರುಣೇ ಸಚಾ ವಿದೋ ಮರುತ್ಸು ವಿಶ್ವಭಾನುಷು । ತೋಕಾಯ ತುಜೇ ಶುಶುಚಾನ ಶಂ ಕೃ-ಧ್ಯಸ್ಮಭ್ಯಂ ದಸ್ಮ ಶಂ ಕೃಧಿ ॥೩॥**

**ಪದಾರ್ಥ:-** **[ಸಖೇ]** ಗೆಳೆಯನೇ! **[ಚಕ್ರಂ]** ಗಾಲಿಯ ಮತ್ತು **[ಆಶುಂ]** ವೇಗವಾಗಿ ಚಲಿಸುವ ಕುದುರೆಯ **[ನ]** ಸಮಾನಗತಿಯಲ್ಲಿ **[ಸಖಾಯಂ]** ಸ್ನೇಹಿತರನ್ನು **[ಅಭಿ, ಆ, ವವೃತ್ಸ್ವ]** ಎಲ್ಲ ರೀತಿಯಲ್ಲೂ ಸಮೀಪವರ್ತಿಯನ್ನಾಗಿ ವ್ಯವಹರಿಸು. ಮತ್ತು **[ದಸ್ಮ]** ದುಃಖವನ್ನು ದಮನಿಸುವವನು **[ರಂಹ್ಯಾ]** ಪಡೆಯಲು ಯೋಗ್ಯವಾದ **[ರಥ್ಯೇವ]** ವಾಹನಕ್ಕೆ ನಿಮಿತ್ತವಾದ ಉತ್ತಮ ಸ್ಥಾನವು ಹೇಗೋ ಹಾಗೆ **[ಅಸ್ಮಭ್ಯಂ]** ನಮ್ಮೆಲ್ಲರಿಗಾಗಿ **[ರಂಹ್ಯಾ]** ಪ್ರಾಪ್ತವಾಗಲು ಯೋಗ್ಯವಾದ ಎಲ್ಲವುಗಳೊಂದಿಗೆ ಸಮೀಪವರ್ತಿಯಾಗು **[ಅಗ್ನೇ]** ಅಗ್ನಿಯಂತೆ ಪ್ರಕಾಶಮಾನನಾದ ನೀನು **[ಸಚಾ]** ಸತ್ಯದ ಸಂಯೋಗದೊಂದಿಗೆ **[ವರುಣೇ]** ಉಪದೇಶ ಮಾಡುವವನ ವಿಷಯದಲ್ಲಿ **[ಮೃಳೀಕಂ]** ಸುಖಕರ್ತೃವನ್ನು **[ವಿದಃ]** ಪ್ರಾಪ್ತಿಗೊಳಿಸು ಮತ್ತು **[ಶುಶುಚಾನ]** ಶುಚಿಗೊಳಿಸುವವನೇ! **[ವಿಶ್ವಭಾನುಷು]** ಎಲ್ಲ ಕಡೆಗಳಲ್ಲೂ ಸೂರ್ಯನಿಗೆ ಸಮಾನನಾದ ಪ್ರಕಾಶ ಉಳ್ಳವನೇ! **[ಮರುತ್ಸು]** ಮನುಷ್ಯರಲ್ಲಿ **[ತುಜೇ]** ವಿದ್ಯೆ ಮತ್ತು ಬಲವನ್ನು ಇಚ್ಛಿಸುವವನು **[ತೋಕಾಯ]** ಸಂತಾನಕ್ಕಾಗಿ **[ಶಂ]** ಸುಖವನ್ನು **[ಕೃಧಿ]** ಉಂಟುಮಾಡು. **[ದಸ್ಮ]** ಅವಿದ್ಯೆಯನ್ನು ನಾಶಗೊಳಿಸುವವನಾದ ನೀನು **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ಶಂ]** **[ಕೃಧಿ]** ಸುಖವನ್ನುಂಟುಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಎಲೈ ಮನುಷ್ಯರೇ! ನೀವು ಎಲ್ಲರೊಂದಿಗೂ ಮಿತ್ರಭಾವದಿಂದ ವ್ಯವಹರಿಸಿರಿ. ಹೇಗೆ ಕುದುರೆಗಳು ರಥವನ್ನು ಉತ್ತಮ ಮಾರ್ಗದಲ್ಲಿ ತೆಗೆದುಕೊಂಡು ಹೋಗುತ್ತವೆಯೋ ಹಾಗೆ ನೀವು ಮಿತ್ರರನ್ನು ಉತ್ತಮ ಮಾರ್ಗದಲ್ಲಿ ಪ್ರವೃತ್ತಿಗೊಳಿಸಿರಿ. ನಮ್ಮೆಲ್ಲರನ್ನು ಶ್ರೇಷ್ಠ ಮಾರ್ಗದಲ್ಲಿ, ಗೌರವಯುತ ಮಾರ್ಗದಲ್ಲಿ ನಡೆಸಿಕೊಳ್ಳಿ. ನಾವೆಲ್ಲರೂ ಉತ್ತಮಗುಣ ಸಂಪನ್ನರಾಗಿ ಪ್ರತಿಯೊಬ್ಬರಲ್ಲಿಯೂ ನೆಲೆಸಿರುವ ಆತ್ಮವನ್ನು ಪ್ರಕಟಗೊಳಿಸೋಣ. ಸುಖವನ್ನು ಪಡೆದು ಗೌರವಕ್ಕೆ ಪಾತ್ರರಾಗೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ ದೇವಸ್ಯ ಹೇಳೋಽವ ಯಾಸಿಸೀಷ್ಠಾಃ ।**
**ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ ದ್ವೇಷಾಂಸಿ ಪ್ರ ಮುಮುಗ್ಧ್ಯಸ್ಮತ್ ॥೪॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯಾದ ವಿದ್ಯಾವಂತನೇ! **[ವಿದ್ವಾನ್]** ವಿದ್ಯಾವಂತನಾದ **[ತ್ವಂ]** ನೀನು **[ವರುಣಸ್ಯ]** ಶ್ರೇಷ್ಠನಾದ **[ದೇವಸ್ಯ]** ವಿದ್ಯಾಪ್ರಕಾಶಕನಾದ **[ಹೇಳಃ]** ಅನಾದರಕ್ಕೊಳಗಾದವನನ್ನು **[ಅವ]** ನಿವಾರಣೆಗೊಳಿಸುವುದರಲ್ಲಿ **[ಯಾಸಿಸೀಷ್ಠಾಃ]** ಪ್ರೇರಣೆ ಮಾಡು. **[ಯಜಿಷ್ಠಃ]** ಅತ್ಯಂತ ಯಜ್ಞಶೀಲನೂ ಮತ್ತು **[ವಹ್ನಿತಮಃ]** ಅತ್ಯಂತ ಸಂಗತಿಕರಣ ಮಾಡುವವನು **[ನಃ]** ನಮ್ಮೆಲ್ಲರಿಗೆ **[ಶೋಶುಚಾನಃ]** ಪ್ರಕಾಶದಾಯಕನೂ ಆದ ನೀನು **[ವಿಶ್ವಾ]** ಎಲ್ಲ ರೀತಿಯ **[ದ್ವೇಷಾಂಸಿ]** ದ್ವೇಷಯುಕ್ತ ಕರ್ಮಗಳನ್ನು **[ಅಸ್ಮತ್]** ನಮ್ಮ ಸಮೀಪದಿಂದ **[ಪ್ರ, ಮುಮುಗ್ಧಿ]** ಪ್ರತ್ಯೇಕಗೊಳಿಸು.

**ಭಾವಾರ್ಥ:-** ಯಾರು ವಿದ್ಯಾವಂತ ಪುರುಷರನ್ನು ಅನಾದರ ಮೂಡುವುದಿಲ್ಲವೋ ಅವರೇ ಅಧ್ಯಾಪಕರು, ಉಪದೇಶಕರು, ಕಲ್ಯಾಣಕಾರಿಗಳೂ ಆಗುತ್ತಾರೆ. ಯಾರು ನಮ್ಮಲ್ಲಿರುವ ದೋಷಗಳನ್ನು ದೂರೀಕರಿಸಿ ನಮ್ಮನ್ನು ಪವಿತ್ರಗೊಳಿಸುತ್ತಾರೋ ಅವರೇ ಗೌರವಾರ್ಹರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ ।**
**ಅವ ಯಕ್ಷ್ವ ನೋ ವರುಣಂ ರರಾಣೋ ವೀಹಿ ಮೃಳೀಕಂ ಸುಹವೋ ನ ಏಧಿ ॥೫॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವೀ ವಿದ್ಯಾವಂತನೇ! **[ಸಃ]** **[ತ್ವಂ]** ಆ ನೀನು **[ಅಸ್ಯಾಃ]** **[ಉಷಸಃ]** ಈ ಪ್ರಾತಃಕಾಲದ **[ವ್ಯುಷ್ಟೌ]** ವಿಶೇಷ ರೀತಿಯ ಉಷ್ಣತೆಯಲ್ಲಿ **[ನೇದಿಷ್ಠಃ]** ಅತ್ಯಂತ ಸಮೀಪದಲ್ಲಿರುವ **[ಊತೀ]** ರಕ್ಷಣಾದಿ ಕಾರ್ಯಗಳಿಂದ **[ನಃ]** ನಮ್ಮೆಲ್ಲರ **[ಅವಮಃ]** ರಕ್ಷಣೆ ಮಾಡುವವನು **[ಭವ]** ಆಗು. **[ವರುಣಂ]** ಶ್ರೇಷ್ಠ ಅಧ್ಯಾಪಕ / ಉಪದೇಶಕರನ್ನು **[ರರಾಣಃ]** ಕೊಡುವವನಾಗು. **[ನಃ]** ನಮ್ಮೆಲ್ಲರನ್ನು **[ಅವಯಕ್ಷ್ವ]** ಸಮೀಪಿಸುವವನಾಗು. **[ಸುಹವಃ]** ಗೌರವಯುತ ಕರೆ ಕೊಡುವವರಾದ **[ನಃ]** ನಮಗೆ **[ಮೃಳೀಕಂ]** ಸುಖದಾಯಕ ಕಾರ್ಯವನ್ನು **[ವೀಹಿ]** ವ್ಯಾಪ್ತಗೊಳಿಸು. **[ಏಧಿ]** ಮತ್ತು ವೃದ್ಧಿಪಡಿಸು.

**ಭಾವಾರ್ಥ:-** ಯಾರು ಉತ್ತಮ ಶಿಕ್ಷಣದಿಂದ ನಮ್ಮೆಲ್ಲರನ್ನು ಪ್ರಭಾತಕಾಲದಂತೆ ರಕ್ಷಣೆ ಮಾಡುತ್ತಾನೋ ಅವನೇ ಶ್ರೇಷ್ಠ ಅಧ್ಯಾಪಕ-ಅವನೇ ಶ್ರೇಷ್ಠ ರಾಜ, ಅಂತಹ ಅಧ್ಯಾಪಕ ಮತ್ತು ರಾಜನು ದುಷ್ಟ ಆಚರಣೆಗಳಿಂದ ದೂರೀಕರಿಸಿ ಶ್ರೇಷ್ಠ ಆಚರಣೆಗಳಲ್ಲಿ ಪ್ರವೃತ್ತಗೊಳಿಸಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಯ ಶ್ರೇಷ್ಠಾ ಸುಭಗಸ್ಯ ಸಂದೃ-ಗ್ದೇವಸ್ಯ ಚಿತ್ರತಮಾ ಮರ್ತ್ಯೇಷು ।**
**ಶುಚಿ ಘೃತಂ ನ ತಪ್ತಮಘ್ನ್ಯಾಯಾಃ ಸ್ಪಾರ್ಹಾ ದೇವಸ್ಯ ಮಂಹನೇವ ಧೇನೋಃ ॥೬॥**

**ಪದಾರ್ಥ:-** **[ಮರ್ತ್ಯೇಷು]** ಮನುಷ್ಯರಲ್ಲಿ **[ಅಸ್ಯ]** ಆ ಎಲ್ಲಾ ವಸ್ತುಜೀವಗಳ ಪಾಲನೆ ಮಾಡುವವನು **[ಸುಭಗಸ್ಯ]** ಉತ್ತಮ ಸಂಪತ್ತಿನ ಮತ್ತು **[ದೇವಸ್ಯ]** ದಿವ್ಯಗುಣ ಕರ್ಮ ಸ್ವಭಾವಗಳು ಇರುವ ರಾಜನ **[ಚಿತ್ರತಮ]** ಅದ್ಭುತ ರೂಪವಾದ **[ಶ್ರೇಷ್ಠ]** ಶ್ರೇಷ್ಠ ಕಾರ್ಯವನ್ನು **[ತಪ್ತಂ]** ಪ್ರಕಾಶಗೊಳಿಸು. **[ಶುಚಿ]** ಪವಿತ್ರವಾದ **[ಘೃತಂ]** **[ನ]** ಆಜ್ಯಕ್ಕೆ ಸಮನಾಗಿರುವ **[ಅಘ್ನ್ಯಾಯಾಃ]** ನಾಶಿಸಲು ಯೋಗ್ಯವಲ್ಲದ **[ಧೇನೋಃ]** ವಾಣಿಯ / ಹಸುವಿನ ಪರಿಶುದ್ಧವಾದ ತುಪ್ಪದಂತಿರುವ **[ದೇವಸ್ಯ]** ಪರಮಾತ್ಮನನ್ನು **[ಸ್ಪಾರ್ಹಾಃ]** ಬಯಸಲು ಯೋಗ್ಯವಾದ **[ಮಂಹನೇವ]** ಗೌರವಾರ್ಹವಾದ ಕರ್ಮಗಳು ಇರುವವನನ್ನು **[ಸಂದೃಕ್]** ನೋಡುವವನಾಗು; ರಾಜ್ಯವನ್ನು ವೃದ್ಧಿಪಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಅಧ್ಯಾಪಕ/ರಾಜರುಗಳಿಗೆ ಅಗ್ನಿಯಿಂದ ಪರಿಶುದ್ಧಗೊಳಿಸಿದ ತುಪ್ಪದಂತಿರುವ ಸುಶಿಕ್ಷಿತ ವಾಣಿ ಇರುತ್ತದೆಯೋ, ಭಗವಂತನ ಗುಣ ಕರ್ಮ ಸ್ವಭಾವಗಳಿಗನುಗುಣ ವಾದ ಗುಣಕರ್ಮ ಸ್ವಭಾವಗಳಿರುತ್ತವೆಯೋ, ಅಂತಹ ಅಧ್ಯಾಪಕ/ರಾಜರು ಆಶ್ಚರ್ಯಕರ ಐಶ್ವರ್ಯವನ್ನು ಅದ್ಭುತವಾದ ರಾಜ್ಯವನ್ನು ಪಡೆದವರಾಗಿ ಕೀರ್ತಿವಂತರಾಗುತ್ತಾರೆ.

ಈ ಮಂತ್ರದಲ್ಲಿ ಅಗ್ನಿಯ ದೃಷ್ಟಾಂತದಿಂದ ವಿದ್ಯಾವಂತರ ಗುಣವನ್ನು ಹೇಳಲಾಗಿದೆ.

**ತ್ರಿರಸ್ಯ ತಾ ಪರಮಾ ಸಂತಿ ಸತ್ಯಾ ಸ್ಪಾರ್ಹಾ ದೇವಸ್ಯ ಜನಿಮಾನ್ಯಗ್ನೇಃ ।**
**ಅನಂತೇ ಅಂತಃ ಪರಿವೀತ ಆಗಾ-ಚ್ಛುಚಿಃ ಶುಕ್ರೋ ಅರ್ಯೋ ರೋರುಚಾನಃ ॥೭॥**

**ಪದಾರ್ಥ:-** **[ಅಗ್ನೇಃ]** ಅಗ್ನಿಗೆ ಸದೃಶವಾದ **[ಅಸ್ಯ]** **[ದೇವಸ್ಯ]** ಉತ್ತಮ ಗುಣಕರ್ಮ ಸ್ವಭಾವಗಳಿರುವ ಈ ರಾಜನ **[ಸತ್ಯಾ]** ಉತ್ತಮ ವ್ಯವಹಾರಗಳಲ್ಲಿ **[ಸ್ಪಾರ್ಹಾ]** ಅಭಿಲಾಷಿಸಲು ಯೋಗ್ಯವಾದ **[ಪರಮ]** ಶ್ರೇಷ್ಠವಾದ **[ಜನಿಮಾನಿ]** ಯಾವ ಜನ್ಮಗಳು **[ಸಂತಿ]** ಇವೆಯೋ **[ರೋರುಚಾನಃ]** ಅತ್ಯಂತ ಪ್ರಕಾಶಮಾನವಾದ **[ಅರ್ಯಃ]** ಸ್ವಾಮಿಯು **[ಶುಕ್ರಃ]** ಶೀಘ್ರಗತಿಶೀಲನು **[ಶುಚಿಃ]** ಪವಿತ್ರನೂ **[ಪರಿವೀತಃ]** ಯಾರ ಸುತ್ತಲೂ ಉತ್ತಮಗುಣಕರ್ಮಗಳೇ ಪಸರಿಸಿವೆಯೋ ಅಂತಹವನು **[ಅನಂತೇ]** ಆಕಾಶದಲ್ಲಿ ಅಥವಾ ಪರಮಾತ್ಮನಲ್ಲಿ **[ಅಂತಃ]** ಅಂತರ್ಗತವಾಗಿವೆಯೋ **[ತಾಃ]** **[ತ್ರಿಃ]** ಅವುಗಳನ್ನು ಮೂರು ಬಾರಿ **[ಆ, ಅಗಾತ್]** ಪಡೆದುಕೊಳ್ಳುತ್ತಾರೆಯೋ ಅವರೇ ಎಲ್ಲರ ಒಡೆಯರಾಗಲು ಯೋಗ್ಯರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಯಾವಾಗಲೂ ಉತ್ತಮ ಕೆಲಸಗಳನ್ನೇ ಮಾಡುತ್ತಾನೋ, ಅವನೇ ಉತ್ತಮ ಕುಲದಲ್ಲಿ ಜನ್ಮ ಪಡೆಯುತ್ತಾನೆ. ಮಿಂಚಿನ ರೂಪದಲ್ಲಿರುವ ಅಗ್ನಿಯು ಅಂತರಿಕ್ಷದಲ್ಲಿ ಹೇಗೆ ಪರಿಮಿತಿಯೇ ಇಲ್ಲದೇ ಸುಶೋಭಿತವಾಗುತ್ತದೆಯೋ, ಅದೇ ರೀತಿ ಅನಂತನಾದ ಜಗದೀಶ್ವರನ ಧ್ಯಾನೋಪಾಸನಾದಿರೂಪ ಉತ್ತಮ ಕರ್ಮಗಳನ್ನು ಮಾಡುವವನು ಎಲ್ಲಾ ಬಗೆಯ ಜ್ಞಾನವನ್ನೂ ಪಡೆದು ಪರಿಶುದ್ಧನಾಗಿ ಪ್ರಶಂಸಾರ್ಹನಾಗಿ ಶ್ರೇಷ್ಠಕರ್ಮಗಳನ್ನು ಮಾಡಲು ಸಮರ್ಥನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ದೂತೋ ವಿಶ್ವೇದಭಿ ವಷ್ಟಿ ಸದ್ಮಾ ಹೋತಾ ಹಿರಣ್ಯರಥೋ ರಂಸುಜಿಹ್ವಃ।**
**ರೋಹಿದಶ್ವೋ ವಪುಷ್ಯೋ ವಿಭಾವಾ ಸದಾ ರಣ್ವಃ ಪಿತುಮತೀವ ಸಂಸತ್ ॥೮॥**

**ಪದಾರ್ಥ:-** [**ಹಿರಣ್ಯರಥಃ**] ತೇಜೋಮಯವಾದ ಸೂರ್ಯನಿಗೆ ಸದೃಶವಾದ ವ್ಯವಹಾರ ಯಾರಿಗಿದೆಯೋ ಅವನು [**ರಂಸುಜಿಹ್ವಃ**] ಸುಂದರವಾದ ಮಾತುಗಳು ಯಾವನಿಗಿದೆಯೋ ಅವನು [**ರೋಹಿದಶ್ವಃ**] ಯಾವನಿಗೆ ಕೆಂಪು ಬಣ್ಣದ ವಿಶಿಷ್ಟ ಗುಣಗಳಿಂದ ಶೀಘ್ರಗತಿಯ ಕುದುರೆಗಳಿವೆಯೋ ಅವನು [**ವಪುಷ್ಯಃ**] ಸುಂದರ ರೂಪವಿರುವವನು [**ವಿಭಾವ**] ಐಶ್ವರ್ಯವಂತನು [**ರಣ್ವಃ**] ರಮಣೀಯ ಸ್ವರೂಪನು [**ವಿಶ್ವಾ**] ಸಮಸ್ತವಾದ [**ಸದ್ಮ**] ಉತ್ತಮ ಕರ್ಮಗಳಿಗೆ ಸ್ಥಾನವಾದ [**ಅಭಿ ವಷ್ಟಿ**] ನಿನ್ನನ್ನು ಬಯಸುವವನು. [**ಸಃ**] ಅಂತಹ [**ಇತ್**] ನೀನೇ [**ಸಂಸತ್**] ಚಕ್ರವರ್ತಿ ಸಭೆಗಳಿಗೆ ಯೋಗ್ಯನು. [**ಪಿತುಮತೀವ**] ಏಕೆಂದರೆ ಅನ್ನ ಐಶ್ವರ್ಯಾದಿಗಳಿಂದ ಸಂಪನ್ನನಾದವನಂತೆ [**ಸದಾ**] ಎಲ್ಲಾ ಕಾಲಗಳಲ್ಲೂ ಉನ್ನತಿಶೀಲನಾಗುತ್ತೀಯೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಹೇಗೆ ರಾಜದೂತರು ರಾಜನ ಸೇವೆ ಮಾಡುತ್ತಾರೋ ಹಾಗೆಯೇ ರಾಜಾಜನರೂ ಸಹ ಪ್ರಜೆಗಳ ಸೇವೆಯನ್ನು ಮಾಡಬೇಕು. ರಾಜಾ ಮತ್ತು ಪ್ರಜೆಗಳು ಪರಸ್ಪರ ಪ್ರೀತಿ-ಸಹಕಾರದಿಂದ ವ್ಯವಹರಿಸಿದರೆ ಅಂತಹ ರಾಜನ ಸಭೆಯು ಚಕ್ರವರ್ತಿ ಸಭೆ ಎನಿಸಿಕೊಂಡು ಸಭಾಧ್ಯಕ್ಷರು ಸಭಾಸದರು ಪುಣ್ಯಭಾಗಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಚೇತಯನ್ಮನುಷೋ ಯಜ್ಞಬಂಧುಃ ಪ್ರ ತಂ ಮಹ್ಯಾ ರಶನಯಾ ನಯಂತಿ ।**
**ಸ ಕ್ಷೇತ್ಯಸ್ಯ ದುರ್ಯಾಸು ಸಾಧನ್ ದೇವೋ ಮರ್ತಸ್ಯ ಸಧನಿತ್ವಮಾಪ ॥೯॥**

**ಪದಾರ್ಥ:-** [**ಸಃ**] ಅಂತಹ [**ಯಜ್ಞಬಂಧುಃ**] ನ್ಯಾಯ ವ್ಯವಹಾರಗಳಿಗೆ ಬಂಧುವಂತೆ ಇರುವ ರಾಜನು [**ಮನುಷಃ**] ಮಂತ್ರಿ ಮತ್ತು ಪ್ರಜಾಜನರನ್ನು [**ಚೇತಯತ್**] ಹುರಿದುಂಬಿಸಬೇಕು. [**ತಂ**] ಅವನನ್ನು ಸಭಾಸದರು [**ಮಹ್ಯಾ**] ಹಿರಿದಾದ [**ರಶನಯಾ**] ಕುದುರೆಯನ್ನು ನಿಯಂತ್ರಿಸುವ ಹಗ್ಗದಂತಿರುವ ನೀತಿಯಿಂದ [**ಪ್ರ, ನಯಂತಿ**] ಉತ್ತಮ ರೀತಿಯಲ್ಲಿ ಪ್ರಾಪ್ತಿಗೊಳಿಸುತ್ತಾರೆ [**ಸಃ**] ಅಂತಹ ರಾಜನು [**ಅಸ್ಯ**] ಈ ರಾಜ್ಯದ [**ದುರ್ಯಾಸು**] ನ್ಯಾಯ ಸ್ಥಾನದಲ್ಲಿ ರಾಜ್ಯವ್ಯವಹಾರಗಳನ್ನು [**ಸಾಧನ್**] ಕಾರ್ಯಗತಗೊಳಿಸುತ್ತಾ [**ಕ್ಷೇತಿ**] ತನ್ನ ಸ್ಥಾನದಲ್ಲಿ ನೆಲೆಸುತ್ತಾನೆ. [**ದೇವಃ**] ದಾನಶೀಲನು [**ಮರ್ತಸ್ಯ**] ಮನುಷ್ಯರಿಗೆ ಸಂಬಂಧಿಸಿದ [**ಸಧನಿತ್ವಂ**] ಸಂಪದ್‌ಭರಿತವಾದ ರಾಜ್ಯವನ್ನು [**ಆಪ**] ಪಡೆದುಕೊಳ್ಳುವವನಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಥಾರ್ಥವಾದಿ ಅಧ್ಯಾಪಕ-ಉಪದೇಶಕರು ಹೇಗೆ ಉತ್ತಮ ಶಿಕ್ಷಣದಿಂದ ವಿದ್ಯಾರ್ಥಿಗಳನ್ನು ಧರ್ಮಯುಕ್ತ ಎಲ್ಲೆಗಳಿಗೆ ತಲುಪಿಸುತ್ತಾರೋ, ಅದೇ ರೀತಿ ರಾಜ ನೀತಿಯ ಶಿಕ್ಷಣದಿಂದ ರಾಜನಾದವನು ರಾಜಧರ್ಮದ ಪರಿಧಿಯನ್ನು ತಲುಪಿಸುತ್ತಾನೆ ಮತ್ತು ಅಂತಹ ರಾಜನು ಮಂತ್ರಿಪ್ರಜೆಗಳ ಸಹಿತನಾಗಿ ವ್ಯಸನರಹಿತ ರಾಜ ಧರ್ಮಯುಕ್ತವಾದ ಶಾಸನವನ್ನು ನಡೆಸುವುದರ ಮೂಲಕ ತಾನು ತನ್ನ ಪ್ರಜೆಗಳು ಐಶ್ವರ್ಯಸಂಪನ್ನರೂ ಸುಖವಾಗಿ ನೆಲೆಸುವವರೂ ಆಗುವಂತೆ ಶಾಸನ ಮಾಡುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ತೂ ನೋ ಅಗ್ನಿರ್ನಯತು ಪ್ರಜಾನ-ನ್ನಚ್ಛಾ ರತ್ನಂ ದೇವಭಕ್ತಂ ಯದಸ್ಯ ।**
**ಧಿಯಾ ಯದ್ವಿಶ್ವೇ ಅಮೃತಾ ಅಕೃಣ್ವನ್ ದ್ಯೌಷ್ಪಿತಾ ಜನಿತಾ ಸತ್ಯಮುಕ್ಷನ್ ॥೧೦॥**

**ಪದಾರ್ಥ:-** [ಸಃ] ಅವನು [ಅಸ್ಯ] ಈ ಪ್ರಪಂಚದ [ಪಿತಾ] ಪಾಲಕನು ಮತ್ತು [ಜನಿತಾ] ಉತ್ಪತ್ತಿ ಮಾಡುವವನು [ದ್ಯೌಃ] ಪ್ರಕಾಶಮಾನವಾದ [ಅಗ್ನಿಃ] ಸ್ವಯಂಪ್ರಕಾಶನಾದ ಪರಮಾತ್ಮನಿಗೆ ಸದೃಶನಾದ ರಾಜನು [ಧಿಯಾ] ಬುದ್ಧಿವಂತಿಕೆಯಿಂದ [ಪ್ರಜಾನನ್] ಎಲ್ಲವನ್ನು ತಿಳಿದುಕೊಳ್ಳುವವನಾಗಿ [ನಃ] ನಮ್ಮೆಲ್ಲರಿಗೂ [ಯತ್] [ದೇವಭಕ್ತಂ] ಯಾವುದು ದೇವರಿಂದಲೂ ಸೇವಿಸಲ್ಪಡುತ್ತದೆಯೋ ಅಂತಹ [ರತ್ನಂ] ಶ್ರೇಷ್ಠಧನವನ್ನು [ಅಚ್ಛ] ಉತ್ತಮ ರೀತಿಯಲ್ಲಿ ಪ್ರಾಪ್ತಿಗೊಳಿಸುತ್ತಾನೆ. [ನಯತು] ನೀನೂ ಸಹ ಹಾಗೇ ಪ್ರಾಪ್ತಿಗೊಳಿಸು. [ಯತ್] ಯಾವುದರಲ್ಲಿ [ತು] ಪುನಃ [ವಿಶ್ವೇ] ಸಂಪೂರ್ಣವಾಗಿ [ಅಮೃತಾಃ] ಜನ್ಮಮರಣರಹಿತವಾದ ಜೀವನವನ್ನು [ಸತ್ಯಂ] ಸತ್ಯದ ಮಾರ್ಗವನ್ನು [ಉಕ್ಷನ್] ಸೇವನೆ ಮಾಡುತ್ತಾ ಮೋಕ್ಷವನ್ನು [ಅಕೃಣ್ವನ್] ಪ್ರಾಪ್ತಿಗೊಳಿಸುತ್ತಾನೆ.

**ಭಾವಾರ್ಥ:-** ರಾಜನಾಗಲಿ ಅಥವಾ ಪ್ರಜೆಗಳಾಗಲಿ ಪರಮಾತ್ಮನ ಸೃಷ್ಟಿಯಲ್ಲಿನ ಬಹಳಷ್ಟು ಪದಾರ್ಥಗಳನ್ನು ಉಪಯೋಗಿಸಿಕೊಂಡು ತಮ್ಮ ಜೀವನವನ್ನು ಸುಖಮಯಗೊಳಿಸುತ್ತಾರೆ. ಆದರೆ ಹೇಗೆ ಆ ಪರಮಾತ್ಮನು ಅಭಿಮಾನಗೊಳ್ಳುವುದಿಲ್ಲವೋ ಅದೇ ರೀತಿ ನೀವೂ ಆಗಿರಿ. ಆ ಭಗವಂತನ ಉತ್ತಮಗುಣಕರ್ಮ ಸ್ವಭಾವಗಳಿಗೆ ಸಮನಾಗಿ ತಮ್ಮ ಗುಣ ಕರ್ಮ ಸ್ವಭಾವಗಳನ್ನು ತಮ್ಮ ದೈನಂದಿನ ವ್ಯವಹಾರಗಳಲ್ಲಿ ತೊಡಗಿ ರಾಜ್ಯವಾಳಿದರೆ ಕೊನೆಯಲ್ಲಿ ಮೋಕ್ಷವು ಲಭಿಸುತ್ತದೆ.

ಈ ಮಂತ್ರದಲ್ಲಿ ಅಗ್ನಿಪದದಿಂದ ಪರಮಾತ್ಮನ ವಿಷಯವನ್ನು ತಿಳಿಸಲಾಗಿದೆ.

**ಸ ಜಾಯತ ಪ್ರಥಮಃ ಪಸ್ತ್ಯಾಸು ಮಹೋ ಬುಧ್ನೇ ರಜಸೋ ಅಸ್ಯ ಯೋನೌ ।**
**ಅಪಾದಶೀರ್ಷಾ ಗುಹಮಾನೋ ಅಂತಾ ಽಽಯೋಯುವಾನೋ ವೃಷಭಸ್ಯ ನೀಳೇ ॥೧೧॥**

**ಪದಾರ್ಥ:-** [ಸಃ] ಮಿಂಚಿನ ರೂಪದಲ್ಲಿರುವ ಅಗ್ನಿಯು [ಪ್ರಥಮಃ] ಮೊದಲ ಸೂರ್ಯನು [ಮಹಃ] ವಿಸ್ತಾರವಾದ [ಬುಧ್ನೇ] ಅಂತರಿಕ್ಷದಲ್ಲಿ [ಅಸ್ಯ] [ರಜಸಃ] ಈ ಲೋಕಗಳ ಸಮೂಹಕ್ಕೆ [ಯೋನೌ] ಕಾರಣವಾದುದರಲ್ಲಿ [ಜಾಯತ] ಜನ್ಮ ತಳೆಯುತ್ತಾನೆ ಮತ್ತು [ಗುಹಮಾನಃ] ಮರೆ ಮಾಡಿಕೊಂಡವನಾಗಿ [ಅಪಾತ್] ಮರಗಳು ಮತ್ತು [ಅಶೀರ್ಷಾಃ] ಶಿರ ಆದಿಗಳಲ್ಲಿ [ಆಯೋಯುವಾನಃ] ಎಲ್ಲ ರೀತಿಯಲ್ಲಿಯೂ ಸಂಯೋಗ-ವಿಯೋಗ ಕ್ರಿಯೆ ಮಾಡುವವನು [ವೃಷಭಸ್ಯ] ಮಳೆಗರೆಯುವ ಸೂರ್ಯನ [ನೀಳೇ] ಸ್ಥಾನದಲ್ಲಿ [ಅಂತಾ] ಅತ್ಯಂತ ಸಮೀಪವರ್ತಿಯಾಗಿ ಗೋಚರವಾಗುತ್ತಾನೆ. ಅದೇ ರೀತಿ ನೀವು [ಪಸ್ತ್ಯಾಯ] ಮನೆ-ಮನೆಗಳಲ್ಲೂ ಗೋಚರವಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಅಂತರಿಕ್ಷದಲ್ಲಿ ಆಕಾಶದಲ್ಲಿ ಪ್ರಕೃತಿಗೆ ಮೂಲಕಾರಣವಾದ ಮಹತ್ ತತ್ವಾದಿಗಳು ಉತ್ಪನ್ನವಾಗುತ್ತವೆಯೋ ಅಂದರೆ ಬುದ್ಧಿ - ಅಹಂಕಾರದವರೆಗಿನ ಪದಾರ್ಥಗಳು ಕ್ರಮವಾಗಿ ಈ ಪ್ರಪಂಚದಲ್ಲಿ ಉತ್ಪನ್ನವಾಗಿವೆಯೋ, ಅವುಗಳು ಅವಯವರಹಿತವಾಗಿ ಜೀವಾತ್ಮನ ರೂಪದಲ್ಲಿ ಪರಮಾತ್ಮನ ಸಮೀಪವರ್ತಿಗಳಾಗಿರುತ್ತವೆಯೋ, ಅದೇ ರೀತಿಯಲ್ಲಿ ಸಾವಯವ ಜೀವಾತ್ಮನ ರೂಪದಲ್ಲಿ ಅಂದರೆ ಶರೀರಧಾರಣ ಮಾಡಿ ಮನೆ-ಮನೆಗಳಲ್ಲಿ ಪ್ರಕಟವಾಗುತ್ತವೆಯೋ, ಇದನ್ನರಿತು ಧಾರಣತ್ಯಾಗದಲ್ಲಿ ಭಗವಂತನನ್ನು ಹೃದಯದಲ್ಲಿ ಧ್ಯಾನಮಾಡಿ ಸುಖಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಶರ್ಧ ಆರ್ತ ಪ್ರಥಮಂ ವಿಪನ್ಯಾ ಋತಸ್ಯ ಯೋನಾ ವೃಷಭಸ್ಯ ನೀಳೇ ।**
**ಸ್ಪಾರ್ಹೋ ಯುವಾ ವಪುಷ್ಯೋ ವಿಭಾವಾ ಸಪ್ತ ಪ್ರಿಯಾಸೋಽಜನಯಂತ ವೃಷ್ಣೇ ॥೧೨॥**

**ಪದಾರ್ಥ:-** **[ವೃಷ್ಣೇ]** ಪುಷ್ಟಿಕಾರಕ ಜೀವಕ್ಕಾಗಿ **[ಸಪ್ತ]** ಪಂಚಪ್ರಾಣ ಮನಸ್ಸು ಬುದ್ಧಿಗಳೆಂಬ ಏಳು **[ಪ್ರಿಯಾಸಃ]** ಪ್ರಿಯಕರವೂ ಅನುಭವಿಸಲು ಅರ್ಹವೂ ಆಗಿ **[ಅಜನಯಂತ]** ಉತ್ಪನ್ನವಾಗಿವೆ. **[ಋತಸ್ಯ]** ಸತ್ಯದ **[ಯೋನೌ]** ಸ್ಥಾನದಲ್ಲಿ **[ವೃಷಭಸ್ಯ]** ಮಳೆಗರೆಯುವ (ಅಗ್ನಿಯ) **[ನೀಳೆ]** ಸ್ಥಾನದಲ್ಲಿ **[ಸ್ಪಾರ್ಹಃ]** ಅಭಿಲಾಷಿಸಲರ್ಹವಾದ **[ಯುವಾ]** ಯುವಾವಸ್ಥೆಯನ್ನು ಪಡೆದು **[ವಪುಷ್ಯಃ]** ರೂಪದಲ್ಲಿ ಶ್ರೇಷ್ಠವಾದ **[ವಿಭಾವಾ]** ಭೂ ವಿದ್ಯಾ ಪ್ರಕಾಶಕನಾದ ನೀನು **[ವಿಪನ್ಯಾ]** ನಾನಾವಿಧ ವ್ಯವಹಾರದಿಂದ ಪಡೆದ ಪ್ರಶಂಸೆಯಿಂದ **[ಪ್ರಥಮಂ]** ಮೊದಲು **[ಶರ್ಧಃ]** ಬಲವನ್ನು **[ಪ್ರ, ಆರ್ತಂ]** ಪಡೆದುಕೊ.

**ಭಾವಾರ್ಥ:-** ಪ್ರಾಣ ಮತ್ತು ಅಂತಃಕರಣಗಳು ಕಾರ್ಯಸಾಧಕಗಳಾಗಿವೆಯೋ ಹಾಗೆಯೇ ಪುರುಷಾರ್ಥದಿಂದ ಕಾರ್ಯಕಾರಣ ಭಾವಗಳನ್ನು ತಿಳಿದುಕೊಂಡು ಪರಮೇಶ್ವರನ ಜ್ಞಾನ ಪಡೆದು ಜೀವನದಲ್ಲಿ ಶರೀರಾತ್ಮಗಳನ್ನು ಪುಷ್ಟಿಗೊಳಿಸಿ ಸುಖ ಪಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾಕಮತ್ರ ಪಿತರೋ ಮನುಷ್ಯಾ ಅಭಿ ಪ್ರ ಸೇದುರ್ಋತಮಾಶುಷಾಣಾಃ ।**
**ಅಶ್ಮವ್ರಜಾಃ ಸುದುಘಾ ವವ್ರೇ ಅಂತ-ರುದುಸ್ರಾ ಆಜನ್ನುಷಸೋ ಹುವಾನಾಃ ॥೧೩॥**

**ಪದಾರ್ಥ:-** **[ಅತ್ರ]** ಆ ಪ್ರಾಪಂಚಿಕ ವ್ಯವಹಾರದಲ್ಲಿ **[ಅಸ್ಮಾಕಂ]** ನಮ್ಮೆಲ್ಲರ **[ಮನುಷ್ಯಾಃ]** ಮನನ ಮಾಡಲು **[ಪಿತರಃ]** ಪಾಲಕರು **[ಋತಂ]** ಸತ್ಯವನ್ನು **[ಆಶುಷಾಣಾಃ]** ವ್ರತ ನಿಯಮಗಳಿಂದ ಶುಷ್ಕ ಶರೀರ ಪಡೆದವರು **[ಅಶ್ಮೌರಜಾಃ]** ಮೋಡದಲ್ಲಿ ಚಲಿಸುವವರು **[ಸುದುಘಾಃ]** ಇಚ್ಛೆಯನ್ನು ಪೂರ್ಣಗೊಳಿಸುವ **[ಉಷಸಃ]** ಬೆಳಗಿನ ಸಮಯವನ್ನು **[ಉಸ್ರಾಃ]** ಕಿರಣಗಳಿಗೆ ಸದೃಶವಾಗಿ **[ಹುವಾನಾಃ]** ಆಹ್ವಾನಿಸುವವರು **[ಉತ್, ಆಜನ್]** ಪ್ರಾಪ್ತರಾಗುವರು. ಅಂತಹ ಮಧ್ಯದಲ್ಲಿ **[ಅಭಿ]** ಸಮ್ಮುಖವಾಗಿ **[ಪ್ರ, ಸೇದು]** ಚಲಿಸುವ ಅವರನ್ನು **[ವವ್ರೇ]** ಮರೆ ಮಾಡುವನು.

**ಭಾವಾರ್ಥ:-** ಮನುಷ್ಯರೇ! ಯಾರು ನಿಮ್ಮನ್ನು ಪಾಲನೆ ಮಾಡುವರೋ ಅವರು ಬ್ರಹ್ಮಚರ್ಯಾದಿ ವ್ರತಗಳಿಂದ, ಸೂರ್ಯನು ಕಿರಣಗಳಿಂದ ಮಳೆಗರೆಯುವ ರೀತಿಯಲ್ಲಿ ಆಹ್ವಾನ ಪಡೆದು ಸತ್ಯದ ಬೆಳಕನ್ನು ಚೆಲ್ಲುವರೋ ಅವರನ್ನು ಗೌರವಿಸಿ ಭಾಗ್ಯಶಾಲಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೇ ಮರ್ಮೃಜತ ದದೃವಾಂಸೋ ಅದ್ರಿಂ ತದೇಷಾಮನ್ಯೇ ಅಭಿತೋ ವಿ ವೋಚನ್ ।**
**ಪಶ್ವಯಂತ್ರಾಸೋ ಅಭಿ ಕಾರಮರ್ಚನ್ ವಿದಂತ ಜ್ಯೋತಿಶ್ಚಕೃಪಂತ ಧೀಭಿಃ ॥೧೪॥**

**ಪದಾರ್ಥ:-** [**ಅದ್ರಿಂ**] ಮೋಡವನ್ನು [**ದದೃವಾಂಸಃ**] ಭೇದಿಸುವ ಕಿರಣಗಳಿರುವ ಸೂರ್ಯನಂತೆ ನಮ್ಮನ್ನು [**ಮರ್ಮೃಜತ**] ಪರಿಶುದ್ಧಗೊಳಿಸುವರು. [**ಏಷಾಂ**] ಈ ಮಧ್ಯದಲ್ಲಿ [**ಅನ್ಯೇ**] ಬೇರೆ ಜನರು [**ತತ್**] ಆದ್ದರಿಂದ [**ಅಭಿತಃ**] ನಾಲ್ಕೂದಿಕ್ಕುಗಳಿಂದ [**ವಿ, ವೋಚಂ**] ಉಪದೇಶ ಮಾಡುತ್ತ [**ಪಶ್ವಯಂತ್ರಾಸಃ**] ಯಂತ್ರಗಳನ್ನು ನೋಡಿದವರಾಗಿ [**ಕಾರಂ**] ಶಿಲ್ಪ ಕೆಲಸಗಳ [**ಅಭಿ, ಅರ್ಚನ್**] ಗೌರವಿಸುವವರು [**ಧೀಭಿಃ**] ಬುದ್ಧಿಕರ್ಮಗಳಿಂದ [**ಜ್ಯೋತಿಃ**] ಬೆಳಕನ್ನು [**ವಿಂದತ**] ಪಡೆಯುವರು. [**ಚಕೃಪಂತ**] ಕರುಣಾಳುಗಳಾಗುವರು. [**ತೇ**] ಅವರು ಎಲ್ಲರಿಗೂ ಗೌರವಾರ್ಹರಾಗುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲೈ ಮನುಷ್ಯರೇ! ಯಾರು ವೇದ ವೇದಾಂಗಗಳನ್ನು ಬೋಧಿಸುವುದರಲ್ಲಿ ಪಾರಂಗತರೋ ಮತ್ತು ಶಿಲ್ಪ ವಿದ್ಯೆಯನ್ನರಿತ ಮನುಷ್ಯರು ಕರುಣೆಯಿಂದ ಎಲ್ಲರಿಗೂ ಉತ್ತಮ ರೀತಿಯಿಂದ ಶಿಕ್ಷಣ ಉಪದೇಶಗಳನ್ನು ನೀಡಿ ವಿದ್ಯಾವಂತರನ್ನಾಗಿ ಮಾಡುವರೋ, ಅವರು ಎಲ್ಲರಿಂದಲೂ ಸತ್ಕರಿಸಲು ಯೋಗ್ಯರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೇ ಗವ್ಯತಾ ಮನಸಾ ದೃಧ್ರಮುಬ್ಧಂ ಗಾ ಯೇಮಾನಂ ಪರಿಷಂತಮದ್ರಿಮ್ ।**
**ದೃಳ್ಹಂ ನರೋ ವಚಸಾ ದೈವ್ಯೇನ ವ್ರಜಂ ಗೋಮಂತಮುಶಿಜೋ ವಿ ವವ್ರುಃ ॥೧೫॥**

**ಪದಾರ್ಥ:-** [**ನರಃ**] ವೀರ ಪುರುಷರು [**ಮನಸಃ**] ಮನಃಪೂರ್ವಕವಾಗಿ [**ಗವ್ಯತಾ**] ಗೋವುಗಳ ಸಮೂಹದಂತೆ ಆಚರಿಸುವವರು [**ದೈವ್ಯೇನ**] ಸುಶಿಕ್ಷಿತ [**ವಚಸಾ**] ವಚನಗಳಿಂದ [**ಗಾಃ**] ಕಿರಣಗಳನ್ನು [**ದೃಧ್ರಂ**] ವೃದ್ಧಿಪಡಿಸುವರು. [**ಉಬ್ಧಂ**] ಎಲ್ಲರೂ ಸೇರಿರುವ / ಎಲ್ಲರನ್ನೂ ಭೇಟಿ ಮಾಡುವ [**ಯೇಮಾನಂ**] ನಿಯಂತ್ರಕನಾದ ನಾಯಕನನ್ನು [**ಸಂತಂ**] ಪಡೆದುಕೊಂಡಿರುವ [**ದೃಳ್ಹಂ**] ಸುಖವನ್ನು ವೃದ್ಧಿಗೊಳಿಸುವ ಸೂರ್ಯನು [**ವ್ರಜಂ**] ಚಲನಶೀಲನಾದ [**ಗೋಮಂತಂ**] ಕಿರಣಗಳನ್ನು ಪಡೆದಿರುವ [**ಅದ್ರಿಂ**] ಮೇಘದಂತೆ [**ಉಶಿಜಃ**] ಇಚ್ಛೆ ಮಾಡುವವರಾಗಿ [**ಪರಿ, ವಿ, ವವ್ರುಃ**] ಪ್ರಕಟಗೊಳಿಸುವರು. [**ತೇ**] ಅವರು ಬಯಸಿದ್ದನ್ನು ಪಡೆಯುವರು.

**ಭಾವಾರ್ಥ:-** ಕಿರಣಗಳು ಮೋಡಗಳನ್ನು ಮೇಲಕ್ಕೆ ಸೆಳೆದು ಹೇಗೆ ಮಳೆಗರೆಯುತ್ತವೆಯೋ ಅದೇ ರೀತಿ ವಿದ್ಯಾವಂತರು ತಮ್ಮ ವಿಚಾರಶಕ್ತಿಯಿಂದ ಜ್ಞಾನವನ್ನು ಉನ್ನತಗೊಳಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೇ ಮನ್ವತ ಪ್ರಥಮಂ ನಾಮ ಧೇನೋ-ಸ್ತ್ರಿಃ ಸಪ್ತ ಮಾತುಃ ಪರಮಾಣಿ ವಿಂದನ್ ।**
**ತಜ್ಜಾನತೀರಭ್ಯನೂಷತ ವ್ರಾ ಆವಿರ್ಭುವದರುಣೀರ್ಯಶಸಾ ಗೋಃ ॥೧೬॥**

**ಪದಾರ್ಥ:-** [**ಮಾತುಃ**] ತಾಯಿಯಂತೆ [**ಧೇನೋಃ**] ವಾಣಿಯ [**ಸಪ್ತ**] ಏಳು ಛಂದಸ್ಸಿನಲ್ಲಿ ವಿಭಕ್ತವಾದ [**ಪರಮಾಣಿ**] ಉತ್ತಮ ವ್ಯವಹಾರವನ್ನು [**ವಿಂದನ್**] ತಿಳಿಯುವರು. [**ತೇ**] ಅವರು [**ಪ್ರಥಮಂ**] ಪ್ರಸಿದ್ಧ [**ನಾಮ**] ಸ್ತುತಿಸಾಧಕ ಶಬ್ದವನ್ನು [**ತ್ರಿಃ**] ಮೂರಾವರ್ತಿ [**ಮನ್ವತ್**] ಗೌರವಿಸುವರು. [**ಯಶಸಾ**] ಯಶಸ್ಸಿನೊಂದಿಗೆ [**ಆವಿಃ**] ಪ್ರಕಟ [**ಭುವತ್**] ಆಗುವರು. [**ತತ್**] ಆ [**ಗೋಃ**] ವಾಣಿಯ ವಿಜ್ಞಾನವನ್ನು ತಿಳಿದವರು [**ಅರುಣೀಃ**] ರಕ್ತವರ್ಣ ವಿಶಿಷ್ಟ [**ಜಾನತೀ**] ವಿಜ್ಞಾನಯುಕ್ತ [**ವ್ರಾಃ**] ಪ್ರಕಟವಾಗುವ [**ಅಭಿ**] ಎಲ್ಲ ರೀತಿಯಲ್ಲಿ [**ಅನೂಷತ**] ಸ್ತುತಿ ಮಾಡುವರು.

**ಭಾವಾರ್ಥ:-** ಕಾಮಧೇನುವು ಹಾಲು ಮುಂತಾದವುಗಳಿಂದ ಹೇಗೆ ಇಚ್ಛೆಯನ್ನು ಪೂರ್ಣಗೊಳಿಸುತ್ತದೆಯೋ ಹಾಗೆ ವಿದ್ಯೆ ಮತ್ತು ಶಿಕ್ಷಣಗಳಿಂದ ವಾಣಿಯು ವಿದ್ಯಾವಂತರನ್ನು ಪ್ರಸನ್ನಗೊಳಿಸುತ್ತದೆ. ಯಾರು ಧರ್ಮಾಚರಣೆ ಮಾಡುವರೋ ಅವರು ಯಶಸ್ವಿಗಳಾಗಿ ಪ್ರಸಿದ್ಧರಾಗುವರು.

ಈ ಮಂತ್ರದಲ್ಲಿ ಸೂರ್ಯನ ದೃಷ್ಟಾಂತದಿಂದ ಆತ್ಮಬಲದ ರಕ್ಷಣೆ ಹೇಳಲಾಗಿದೆ.

**ನೇಶತ್ತಮೋ ದುಧಿತಂ ರೋಚತ ದ್ಯೌ-ರುದ್ದೇವ್ಯಾ ಉಷಸೋ ಭಾನುರರ್ತ ।**
**ಆ ಸೂರ್ಯೋ ಬೃಹತಸ್ತಿಷ್ಠದಜ್ರಾ ಋಜು ಮರ್ತೇಷು ವೃಜಿನಾ ಚ ಪಶ್ಯನ್ ॥೧೭॥**

**ಪದಾರ್ಥ:-** [ದ್ಯೌಃ] ಆಕಾಶದಲ್ಲಿರುವ [ಭಾನುಃ] ಪ್ರಕಾಶಮಾನ [ಸೂರ್ಯಃ] ಸೂರ್ಯನು [ದೇವ್ಯಾಃ] ಉತ್ತಮ ಸುಖದ ಪ್ರಾಪ್ತಿಗೊಳಿಸುವವಳಾದ [ಉಷಸಃ] ಪ್ರಭಾತ ಸಮಯದಿಂದ [ದುಧಿತಂ] ಸಮಗ್ರ [ತಮಃ] ಕತ್ತಲನ್ನು [ಉತ್, ನೇಶತ್] ನಾಶಗೊಳಿಸುತ್ತದೆ. [ರೋಚತೇ] ಮತ್ತು ಬೆಳಗುತ್ತದೆ. [ತಿಷ್ಠತ್] ಬೆಳಕನ್ನು ಕೊಡುತ್ತ ಇರುತ್ತದೆ. [ಬೃಹತಃ] ದೊಡ್ಡದಾದ [ಅಜ್ರಾನ್] ಸಂಸಾರದಲ್ಲಿ ಪ್ರಕ್ಷೇಪವಾದವುಗಳನ್ನು [ಪಶ್ಯನ್] ನೋಡುತ್ತ [ಮರ್ತೇಷು] ಮನುಷ್ಯರಲ್ಲಿ [ವೃಜಿನಾ] ಬಲವನ್ನು [ಚ] ಮತ್ತು [ಋಜು] ಸರಳತೆಯನ್ನು [ಆ, ಅರ್ತ] ಪ್ರಾಪ್ತಗೊಳಿಸುತ್ತದೆ.

**ಭಾವಾರ್ಥ:-** ಸೂರ್ಯ ಹೇಗೆ ಪ್ರಭಾತವೇಳೆಯಿಂದ ರಾತ್ರಿಯನ್ನು ನಿವಾರಿಸಿ ಬೆಳಕನ್ನು ಉತ್ಪಾದಿಸುವನೋ ಹಾಗೇ ಅದ್ಯಾಪಕೋಪದೇಶಕರು ವ್ಯಾಪ್ತವಾದ ಪದಾರ್ಥಗಳನ್ನು ನೋಡಿ ನಮ್ರತೆಯಿಂದ ಮನುಷ್ಯರಲ್ಲಿ ಶರೀರ ಬಲ, ಆತ್ಮಬಲಗಳನ್ನು ವೃದ್ಧಿಪಡಿಸುವರು.

ವಿದ್ಯೆಯ ವಿಷಯವನ್ನಿಲ್ಲಿ ಹೇಳಿದೆ.

**ಆದಿತ್ ಪಶ್ಚಾ ಬುಬುಧಾನಾ ವ್ಯಖ್ಯ-ನ್ನಾದಿದ್ರತ್ನಂ ಧಾರಯಂತ ದ್ಯುಭಕ್ತಮ್ ।**
**ವಿಶ್ವೇ ವಿಶ್ವಾಸು ದುರ್ಯಾಸು ದೇವಾ ಮಿತ್ರ ಧಿಯೇ ವರುಣ ಸತ್ಯಮಸ್ತು ॥೧೮॥**

**ಪದಾರ್ಥ:-** [ವರುಣ] ದುಷ್ಟರನ್ನು ಬಂಧಿಸುವವನಾದ [ಮಿತ್ರ] ಮಿತ್ರನಂತಿರುವ [ಬುಬುಧಾನಾಃ] ವಿಶೇಷ ರೀತಿಯಿಂದ ತಿಳಿದಿರುವ [ವಿಶ್ವೇ] ಸಮಗ್ರ [ದೇವಾಃ] ವಿದ್ಯಾವಂತರು [ವಿಶ್ವಾಸು] ಎಲ್ಲಾ [ದುರ್ಯಾಸು] ಸ್ಥಾನಗಳಲ್ಲಿ [ದ್ಯುಭಕ್ತಂ] ವಿದ್ಯುದಾದಿ ಪದಾರ್ಥಗಳಿಂದ ಸೇವಿತನಾಗಿ [ರತ್ನಂ] ಧನವನ್ನು [ಧಾರಯಂತ] ಧಾರಣ ಮಾಡುವರು [ಆತ್] ಅನಂತರ [ಇತ್] ಅದನ್ನೇ [ಪಶ್ಚಾ] ಹಿಂಭಾಗದಿಂದ [ವಿ, ಅಖ್ಯನ್] ವಿಶೇಷ ರೀತಿಯಿಂದ ಉಪದೇಶ ಮಾಡುವರು. [ಆತ್] ಅನಂತರ [ಇತ್] ಅವನು [ಸತ್ಯಂ] ಸತ್ಯದ [ಧಿಯೇ] ಬುದ್ಧಿಕರ್ಮಗಳಿಗೆ [ಅಸ್ತು] ಆಗಲಿ.

**ಭಾವಾರ್ಥ:-** ಯಾರು ಬ್ರಹ್ಮಚರ್ಯಾಶ್ರಮದಲ್ಲಿ ವಿದ್ಯೆ ಉತ್ತಮ ಶಿಕ್ಷಣ ಧರ್ಮಾಚರಣೆಗಳನ್ನು ಧಾರಣ ಮಾಡಿ ಅನ್ಯರಿಗೂ ಅದನ್ನುಪದೇಶಿಸುವರೋ ಅವರು ಬುದ್ಧಿಶಕ್ತಿಯನ್ನು ಬೆಳೆಯಿಸಿಕೊಂಡು ಎಲ್ಲೆಡೆ ಪ್ರಸಿದ್ಧರಾಗಿ ಆನಂದದಿಂದ ವಾಸಿಸುವರು.

ವಿದ್ಯುದ್ವಿಷಯವನ್ನಿಲ್ಲಿ ಹೇಳಿದೆ.

**ಅಚ್ಛಾ ವೋಚೇಯ ಶುಶುಚಾನಮಗ್ನಿಂ ಹೋತಾರಂ ವಿಶ್ವಭರಸಂ ಯಜಿಷ್ಠಮ್ ।**
**ಶುಚ್ಯೂಧೋ ಅತೃಣನ್ನ ಗವಾ-ಮಂಧೋ ನ ಪೂತಂ ಪರಿಷಿಕ್ತಮಂಶೋಃ ॥೧೯॥**

**ಪದಾರ್ಥ:-** **[ಅಂಶೋಃ]** ಪ್ರಾಪ್ತನಾದ ಸೂರ್ಯನಿಂದ **[ಪರಿಷಿಕ್ತಂ]** ಎಲ್ಲಾ ಕಡೆಗಳಿಂದಲೂ ಭಿನ್ನಗೊಳಿಸಿದ **[ಪೂತಂ]** ಪವಿತ್ರವಾದ **[ಶುಚಿ]** ಪವಿತ್ರ ಕರ್ಮಗಳನ್ನು **[ಅಂಧಃ]** ಅನ್ನದ **[ನ]** ತುಲ್ಯವಾಗಿ **[ಗವಾಂ]** ಗೋವುಗಳ **[ಊಧಃ]** ಬೆಳಗಿನ ಸಮಯದಂತೆ **[ನ]** **[ಅತೃಣತ್]** ಹಿಂಸಾರಹಿತವಾದ **[ಯಜಿಷ್ಠಃ]** ಸಂಗತವಾಗಲು **[ವಿಶ್ವಭರಸಂ]** ಸಂಸಾರ ಧಾರಣ ಮಾಡುವುದಕ್ಕೆ **[ಹೋತಾರಂ]** ದಾನ ಮಾಡಲು **[ಶುಶುಚಾನಂ]** ಶುದ್ಧ-ಗುಣ-ಕರ್ಮ-ಸ್ವಭಾವವನ್ನು ಮಾಡಲು **[ಅಗ್ನಿಂ]** ವಿದ್ಯುದ್ರೂಪಾಗ್ನಿಯನ್ನು **[ಅಚ್ಛ]** ಉತ್ತಮ ರೀತಿಯಿಂದ **[ಓಚೇಯ]** ಉಪದೇಶಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮಿಂಚು ಹೇಗೆ ಎಲ್ಲರಿಗೂ ಸಮಾನ ರೀತಿಯಿಂದ ರಕ್ಷಣೆ ಮಾಡುತ್ತದೆಯೋ ವಿರೂಪವಾದದ್ದನ್ನು ನಾಶಗೊಳಿಸುತ್ತದೆಯೋ, ಆದರೆ ಅದು ಕಿರಣಗಳನ್ನು ನಾಶ ಮಾಡಲಾರದು. ಅನ್ನಕ್ಕೆ ಸದೃಶವಾಗಿ ಪೋಷಣೆ ಮಾಡುವುದಾಗಿ ಎಲ್ಲವನ್ನೂ ಚಲನಶೀಲಗೊಳಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿಶ್ವೇಷಾಮದಿತಿರ್ಯಜ್ಞಿಯಾನಾಂ ವಿಶ್ವೇಷಾಮತಿಥಿರ್ಮಾನುಷಾಣಾಮ್ ।**

**ಅಗ್ನಿರ್ದೇವಾನಾಮವ ಆವೃಣಾನಃ ಸುಮೃಳೀಕೋ ಭವತು ಜಾತವೇದಾಃ ॥೨೦॥**

**ಪದಾರ್ಥ:-** **[ವಿಶ್ವೇಷಾಂ]** ಸಮಗ್ರವಾದ **[ಯಜ್ಞಿಯಾನಾಂ]** ಯಜ್ಞ ಕರ್ಮಗಳ ಅನುಷ್ಠಾನ ಮಾಡುವವರ **[ಅದಿತಿಃ]** ಅಖಂಡ ಅಂತರಿಕ್ಷಕ್ಕೆ ಸಮನಾಗಿ **[ವಿಶ್ವೇಷಾಂ]** ಸಮಗ್ರ **[ಮಾನುಷಾಣಾಂ]** ಮನುಷ್ಯರ **[ಅತಿಥಿಃ]** ಅಭ್ಯಾಗತನಂತಿರುವ **[ದೇವಾನಾಂ]** ವಿದ್ಯಾವಂತರ **[ಅಗ್ನಿಂ]** ಅಗ್ನಿಗೆ ಸದೃಶವಾಗಿ **[ಅವಾ]** ರಕ್ಷಣೆಯನ್ನು **[ಆವೃಣಾನಃ]** ಎಲ್ಲ ಕಡೆಗಳಿಂದಲೂ ಸ್ವೀಕರಿಸುತ್ತ **[ಜಾತವೇದಾಃ]** ಉತ್ಪನ್ನವಾದ ಎಲ್ಲಾ ಪದಾರ್ಥಗಳಲ್ಲೂ ಇರುವವನಾಗಿ **[ಸುಮೃಳೀಕಃ]** ಉತ್ತಮ ಸುಖವನ್ನು ಕೊಡುವವನು **[ಭವತು]** ಆಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಜ್ಞ ಸಂಬಂಧೀ ಸುಗಂಧಿತ ಧೂಮ ಜ್ವಾಲೆಗಳು ಅಂತರಿಕ್ಷವನ್ನು ಶುದ್ಧಗೊಳಿಸುತ್ತವೆ. ಅದೇ ರೀತಿ ಪರಿಪೂರ್ಣ ವಿದ್ಯೆಯನ್ನು ಪಡೆದುಕೊಂಡವನು ಮತ್ತು ಯಥಾರ್ಥ ಉಪದೇಶಕನು ಹಾಗೂ ಸೂರ್ಯನು ಸಮಗ್ರ ಸುಖದಾಯಕರಾಗುವರೋ ಹಾಗೆ ನೀವೂ ಸಹ ಎಲ್ಲರಿಗೂ ಸುಖದಾಯಕರಾಗಿರಿ.

ಈ ಸೂಕ್ತದಲ್ಲಿ ವಿದ್ಯಾವಂತರು ತಿಳಿಯಬೇಕಾಗಿರುವ ಅಗ್ನಿ, ವಾಣಿ, ಸೂರ್ಯ, ವಿದ್ಯುತ್ ಮುಂತಾದವುಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಒಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೨

ಮಂತ್ರಸಂಖ್ಯೆ ೨೦ । ವಾಮದೇವ ಋಷಿಃ । ಅಗ್ನಿರ್ದೇವತಾ । ೧, ೧೯ ಪಂಕ್ತಿಃ, ೧೨ ನಿಚೃತ್ ಪಂಕ್ತಿಃ, ೧೪ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೪-೭, ೯, ೧೩, ೧೫, ೧೭, ೧೮, ೨೦ ನಿಚೃತ್ ತ್ರಿಷ್ಟುಪ್ ಛಂದಃ । ೩, ೧೪, ೧೬ ತ್ರಿಷ್ಟುಪ್, ೮, ೧೦, ೧೧ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ಆಪ್ತರ ಕೃತ್ಯವನ್ನು ತಿಳಿಸಲಾಗಿದೆ.

**ಯೋ ಮರ್ತ್ಯೇಷ್ವಮೃತ ಋತಾವಾ ದೇವೋ ದೇವೇಷ್ವರತಿರ್ನಿಧಾಯಿ ।**

**ಹೋತಾ ಯಜಿಷ್ಠೋ ಮಹ್ನಾ ಶುಚಧ್ಯೈ ಹವ್ಯೈರಗ್ನಿರ್ಮನುಷ ಈರಯಧ್ಯೈ ॥೧॥**

**ಪದಾರ್ಥ:-** **[ಯಃ]** ಯಾವ **[ಅಗ್ನಿಃ]** ಈಶ್ವರನು/ ಪಾವಕಾಗ್ನಿಯು **[ಮರ್ತ್ಯೇಷು]** ಮನುಷ್ಯರಲ್ಲಿ **[ಅಮೃತಃ]** ಮೃತ್ಯು ಧರ್ಮ ರಹಿತವಾದ **[ಋತಾವಾ]** ಸತ್ಯ ಸ್ವರೂಪ **[ದೇವೇಷು]** ಉತ್ತಮ ಪದಾರ್ಥಗಳಲ್ಲಿ ವಿದ್ವಾಂಸರಲ್ಲಿ **[ದೇವಃ]** ಉತ್ತಮ ಗುಣ ಕರ್ಮ ಸ್ವಭಾವದವರು **[ಅರತಿಃ]** ಎಲ್ಲ ಕಡೆಗಳಲ್ಲೂ ಪ್ರಾಪ್ತವಾದ **[ಹೋತಾ]** ದಾನಿಯು **[ಮಹ್ನಾ]** ಮಹಿಮೆಯಿಂದ **[ಯಜಿಷ್ಠ]** ಪೂಜಾರ್ಹವಾದ **[ಹವ್ಯೈಃ]** ಹವಿಸ್ಸುಗಳಿಂದ **[ಮನುಷಃ]** ಮನುಷ್ಯರನ್ನು **[ಈರಯಧ್ಯೈ]** ಪ್ರೇರೇಪಿಸುವನು. **[ಶುಚಧ್ಯೈ]** ಪವಿತ್ರವಾದ ಹೃದಯದಲ್ಲಿ **[ನಿಧಾಯಿ]** ಧಾರಣ ಮಾಡುವನು.

**ಭಾವಾರ್ಥ:-** ಮನುಷ್ಯರೇ! ಯಾವ ಜಗದೀಶ್ವರನು ಉತ್ಪತ್ತಿ ವಿನಾಶರಹಿತನಾಗಿ ದಿವ್ಯ ಸ್ವರೂಪ ಶುದ್ಧ ಪವಿತ್ರನಾಗಿ ಎಲ್ಲರಿಗೂ ಪ್ರೇರಣೆಕೊಡುವನೋ ಅವನ ಪ್ರೇರಣೆ ಪಡೆದು ಭಜಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಹ ತ್ವಂ ಸೂನೋ ಸಹಸೋ ನೋ ಅದ್ಯ ಜಾತೋ ಜಾತಾँ ಉಭಯಾँ ಅಂತರಗ್ನೇ।**
**ದೂತ ಈಯಸೇ ಯುಯುಜಾನ ಋಷ್ವ ಋಜುಮುಷ್ಕಾನ್ ವೃಷಣಃ ಶುಕ್ರಾಂಶ್ಚ ॥೨॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತಿರುವ ನಾಯಕನೇ! **[ಋಷ್ವ]** ವಿಜ್ಞಾನದಿಂದ ವ್ಯಾಪ್ತರಾದ **[ನಃ]** ನಮಗೆ **[ಸೂನೋ]** ಪವಿತ್ರಸುತ **[ತ್ವಂ]** ನೀನು **[ಇಹ]** ಈ ಜಗತ್ತಿನಲ್ಲಿ **[ಅದ್ಯ]** ಈ ದಿನ **[ಸಹಸಃ]** ಬಲದಿಂದ **[ಜಾತಃ]** ವಿದ್ಯೆಯೆಂಬ ಜನ್ಮ ಪಡೆದು **[ಋಜುಮುಷ್ಕಾನ್]** ಸರಳತನದಿಂದ ವ್ಯವಹರಿಸುವ **[ವೃಷಣಃ]** ಬಲಿಷ್ಠರಾದ **[ಶುಕ್ರಾನ್]** ಶುದ್ಧಿಗೊಳಿಸುವವರನ್ನು **[ಚ]** ಹಾಗೂ **[ಯುಯುಜಾನಃ]** ಸಮಾಧಾನಗೊಳಿಸುತ್ತ **[ದೂತಃ]** ದೂತರಂತೆ **[ಜಾತಾನ್]** ವಿದ್ವಾಂಸರನ್ನೂ **[ಉಭಯಾನ್]** ಪಠನ-ಪಾಠನ ಮಾಡುವವರನ್ನು **[ಅಂತಃ]** ಮಧ್ಯದಲ್ಲಿ **[ಈಯಸೇ]** ಪ್ರಾಪ್ತನಾಗುವೆ.

**ಭಾವಾರ್ಥ:-** ಮನುಷ್ಯರೇ! ಅಗ್ನಿಯು ಎಲ್ಲರಲ್ಲಿ ಇದ್ದು ಪಾಲಕನೂ ನಾಶಕನೂ ಆಗಿರುವನೋ ಹಾಗೇ ಈ ಜಗತ್ತಿನಲ್ಲಿ ವಿದ್ಯಾವಂತ ಸಂತತಿಗಳು ಉತ್ತಮರ ಪಾಲಕರೂ ಮೂರ್ಖತನದ ನಾಶಕರೂ ಆಗಿರುತ್ತಾರೆ. ಆದ್ದರಿಂದ ಬ್ರಹ್ಮಚರ್ಯಾದಿ ನಿಯಮಗಳನ್ನು ಪಾಲಿಸುತ್ತ ತಮ್ಮ ಸಂತಾನವನ್ನುತ್ಪಾದಿಸಿ ಕೃತಕೃತ್ಯರಾಗಿರಿ.

ಪ್ರಜೆಗಳ ವಿಷಯವಿಲ್ಲಿದೆ.

**ಅತ್ಯಾ ವೃಧಸ್ನೂ ರೋಹಿತಾ ಘೃತಸ್ನೂ ಋತಸ್ಯ ಮನ್ಯೇ ಮನಸಾ ಜವಿಷ್ಠಾ । ಅಂತರೀಯಸೇ**
**ಅರುಷಾ ಯುಜಾನೋ ಯುಷ್ಮಾಂಶ್ಚ ದೇವಾನ್ ವಿಶ ಆ ಚ ಮರ್ತಾನ್ ॥೩॥**

**ಪದಾರ್ಥ:-** **[ಋತಸ್ಯ]** ಜಲದ **[ವೃಧಸ್ನೂ]** ಸಮೃದ್ಧಿಗೊಳಿಸುತ್ತ **[ರೋಹಿತಾ]** ಅಗ್ನಿಗುಣಗಳೊಂದಿಗೆ **[ಘೃತಸ್ನೂ]** ಜಲವು ಹರಿಯುವಂತೆ ಮಾಡುತ್ತ **[ಅರುಷಾ]** ರಕ್ತ ಗುಣ ವಿಶಿಷ್ಟ **[ಮನಸಾ]** ಮನಸ್ಸಿನಿಂದ **[ಜವಿಷ್ಠಾ]** ವೇಗಗತಿಯಿಂದ **[ಅತ್ಯಾ]** ದಾರಿಯನ್ನು ವ್ಯಾಪಿಸಿ ಗಾಳಿ ಅಗ್ನಿಗಳನ್ನು **[ಯುಜಾನಃ]** ಸಂಯೋಜನೆ ಮಾಡಿ **[ದೇವಾನ್]** ವಿದ್ವಾಂಸರನ್ನು **[ಯುಷ್ಮಾನ್]** ನಿಮ್ಮನ್ನು **[ಚ]** ಮತ್ತು **[ಮರ್ತಾನ್]** ಮನುಷ್ಯರನ್ನೂ **[ಚ]** ಮತ್ತು **[ವಿಶಃ]** ಪ್ರಜೆಗಳನ್ನೂ **[ಅಂತಃ]** ಮಧ್ಯದಲ್ಲಿ **[ಆ, ಈಯಸೇ]** ಎಲ್ಲಾ ಕಡೆಗಳಿಂದಲೂ ಪ್ರಾಪ್ತನಾಗುವೆ.

**ಭಾವಾರ್ಥ:-** ಯಾವ ಮನುಷ್ಯರು ಜಲ-ವಾಯುಗಳನ್ನು ಅಗ್ನಿಯೊಂದಿಗೆ ವಾಹನಗಳಲ್ಲಿ ಸಂಯೋಜಿಸಿಕೊಂಡು ಯಂತ್ರಗಳನ್ನು ಜೋಡಿಸಿ ನಡೆಸುವರೋ ಅವರು ವೇಗಗತಿಯಲ್ಲಿ ಚಲಿಸುವ ಆವಿಯನ್ನುತ್ಪಾದಿಸಿ ಮನೋವೇಗದಲ್ಲಿ ವಾಹನವನ್ನು ಓಡಿಸಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ಯಮಣಂ ವರುಣಂ ಮಿತ್ರಮೇಷಾ-ಮಿಂದ್ರಾವಿಷ್ಣೂ ಮರುತೋ ಅಶ್ವಿನೋತ ।**
**ಸ್ವಶ್ವೋ ಅಗ್ನೇ ಸುರಥಃ ಸುರಾಧಾ ಏದು ವಹ ಸುಹವಿಷೇ ಜನಾಯ ॥೪॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಸುರಾಧಾಃ]** ಉತ್ತಮ ಧನದಿಂದ **[ಸು ಅಶ್ವಃ]** ಉತ್ತಮ ಕುದುರೆಗಳು ಮತ್ತು **[ಸುರಥಃ]** ಉತ್ತಮ ವಾಹನಗಳಿರುವ ನೀನು **[ಸುಹವಿಷೇ]** ಉತ್ತಮ ಸಾಮಗ್ರಿಗಳಿರುವ **[ಜನಾಯ]** ಮನುಷ್ಯನಿಗಾಗಿ **[ಅರ್ಯಮಣಂ]** ನ್ಯಾಯಾಧೀಶನಾದ **[ವರುಣಂ]** ಶ್ರೇಷ್ಠಗುಣಗಳಿರುವ **[ಏಷಾಂ]** ಇವರ **[ಮಿತ್ರಂ]** ಸ್ನೇಹಿತರಾದ **[ಇಂದ್ರಾವಿಷ್ಣೂ]** ವಿದ್ಯುತ್ ಮತ್ತು ಸೂತ್ರಾತ್ಮನಾದ **[ಮರುತಃ]** ಪವನ **[ಉತ]** ಮತ್ತು **[ಅಶ್ವಿನಾ]** ಸೂರ್ಯ ಚಂದ್ರರನ್ನು **[ಆ, ವಹ]** ಪ್ರಾಪ್ತಿಗೊಳಿಸು. **[ಉ, ಇತ್]** ಎಲ್ಲಾ ರೀತಿಯ ಸುಖನೀಡು.

**ಭಾವಾರ್ಥ:-** ವಿದ್ಯಾವಂತರೇ! ನೀವು ಅಗ್ನಿ ಜಲಾದಿ ಪದಾರ್ಥಗಳನ್ನು ಚೆನ್ನಾಗಿ ತಿಳಿದು ಕಾರ್ಯಗಳಲ್ಲಿ ಸಂಯೋಜಿಸಿ ಪ್ರಕಟಗೊಳಿಸಿರಿ ಮತ್ತು ಅನ್ಯರಿಗೂ ಬೋಧಿಸಿರಿ. ಅದರಿಂದ ಎಲ್ಲರೂ ಧನ-ಧಾನ್ಯ ಸುಖಸಂಪನ್ನರಾಗಲಿ.

ರಾಜ ವಿಷಯವಿಲ್ಲಿ ಹೇಳಿದೆ.

**ಗೋಮಾँ ಅಗ್ನೇಽವಿಮಾँ ಅಶ್ವೀ ಯಜ್ಞೋ ನೃವತ್ಸಖಾ ಸದಮಿದಪ್ರಮೃಷ್ಯಃ । ಇಳಾವಾँ**
**ಏಷೋ ಅಸುರ ಪ್ರಜಾವಾನ್ ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ॥೫॥**

**ಪದಾರ್ಥ:-** **[ಅಸುರ]** ದುಷ್ಟರನ್ನು ದೂರ ಮಾಡುವ **[ಅಗ್ನೇ]** ವಿದ್ಯಾವಂತನೇ! ನೀನು **[ಗೋಮಾನ್]** ಗೋವುಗಳಿರುವವನು **[ಅವಿಮಾನ್]** ಕುರಿಗಳಿರುವವನು. **[ಅಶ್ವೀ]** ಕುದುರೆಗಳಿರುವವನು **[ಯಜ್ಞಃ]** ಪಡೆಯಲರ್ಹ **[ನೃವತ್‌ಸಖಾ]** ನಾಯಕರಿಂದೊಡಗೂಡಿರುವ ಮನುಷ್ಯರ ಮಿತ್ರನು. **[ಇಹಾವಾನ್]** ಅನ್ನವಂತನು **[ಪ್ರಜಾವಾನ್]** ಪ್ರಜೆಗಳಿರುವವನು **[ಪೃಥುಬುಧ್ನಃ]** ವಿಸ್ತೃತ ಸಂಬಂಧವಿರುವವನು **[ಸಭಾವಾನ್]** ಉತ್ತಮ ಸಭೆಗಳಿರುವವನು **[ಅಪ್ರಮೃಷ್ಯಃ]** ಬೇರೆಯವರಿಂದ ದಮನಿಸಲು ಸಾಧ್ಯವಾಗದವನು **[ಏಷಃ]** ಈ **[ರಯಿಃ]** ಧನವು **[ದೀರ್ಘಃ]** ವಿಸ್ತೃತವಾದದ್ದು **[ಇತ್]** ಅದನ್ನು **[ಸದಂ]** ಪಡೆದುಕೋ.

**ಭಾವಾರ್ಥ:-** ಯಾರು ಹಸು, ಕುರಿ, ಅಶ್ವ ಮುಂತಾದ ಪಶುಪಾಲನೆ ಮಾಡಿಕೊಂಡು ಇರುವನೋ ಅನ್ಯರಿಂದ ದಮನಿಸಲು ಸಾಧ್ಯವಾಗದವನೋ ದುಷ್ಟರನ್ನು ದೂರಗೊಳಿಸುವನೋ ಉತ್ತಮ ವ್ಯವಸ್ಥೆ ಮಾಡುವವನೋ ಪ್ರಜ್ಞಾವಂತನೋ ಅಂತಹವನನ್ನು ಸಭಾಪತಿಯನ್ನಾಗಿ ಮನುಷ್ಯರು ನಿಯಮಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ತ ಇಧ್ಮಂ ಜಭರತ್ಸಿಷ್ವಿದಾನೋ ಮೂರ್ಧಾನಂ ವಾ ತತಪತೇ ತ್ವಾಯಾ ।**
**ಭುವಸ್ತಸ್ಯ ಸ್ವತವಾँಃ ಪಾಯುರಗ್ನೇ ವಿಶ್ವಸ್ಮಾತ್ಸೀಮಘಾಯತ ಉರುಷ್ಯ ॥೬॥**

**ಪದಾರ್ಥ:-** **[ತತಪತೇ]** ಉದ್ದಗಲಕ್ಕೂ ವಿಸ್ತಾರವಾದ ಪದಾರ್ಥಗಳನ್ನು ಪಾಲನೆ ಮಾಡುವ **[ಅಗ್ನೇ]** ಅಗ್ನಿಯಂತೆ ಶುಚಿಗೊಳಿಸುವವನೇ! **[ಯಃ]** ಯಾವ **[ಸಿಷ್ವಿದಾನಃ]** ಸ್ನೇಹಯುಕ್ತ **[ಸ್ವತವಾನ್]** ತನಗಿಂತ ದೊಡ್ಡದಾದ

**[ಪಾಯುಃ]** ರಕ್ಷಕನು **[ತ್ವಯಾ]** ನಿನ್ನಿಂದ **[ತೇ]** ನಿನ್ನ **[ಭುವಃ]** ಭೂಮಿಯ **[ಇಧ್ಮಂ]** ಉರಿಯುತ್ತಿರುವ. **[ಮೂರ್ಧಾನಂ]** ಮಸ್ತಕವನ್ನು **[ಜಭರತ್]** ಪೋಷಿಸುತ್ತದೆ. ಅದರ **[ಉರುಷ್ಯ]** ರಕ್ಷಣೆ ನೀನೂ ಮಾಡು. **[ವಾ]** ಅಥವಾ **[ತಸ್ಯ]** ಅವನ ಮಸ್ತಕದ **[ಶೀಂ]** ರಕ್ಷಣೆ ಮಾಡು. **[ಅಘಾಯತಃ]** ತನ್ನನ್ನು ಪಾಪಿಯೆಂದು ಚಿಂತಿಸುತ್ತ **[ವಿಶ್ವಸ್ಮಾತ್]** ಎಲ್ಲಾ ರೀತಿಯಿಂದ ಮಸ್ತಕವನ್ನು ಭೇದಿಸು.

**ಭಾವಾರ್ಥ:-** ಮನುಷ್ಯರೇ! ಯಾರು ತಮ್ಮ ಬಲದಿಂದ ಶರೀರ ಹಾಗೂ ರಾಜ್ಯದ ರಕ್ಷಣೆ ಮಾಡಿ ದುಷ್ಟರನ್ನು ಎಲ್ಲಾ ರೀತಿಯಿಂದ ನಾಶಮಾಡುವವರೋ ಅವರನ್ನು ನಿರಂತರ ರಕ್ಷಣೆ ಮಾಡಿರಿ.

ಆಪ್ತ ಜನರ ಕಾರ್ಯವನ್ನಿಲ್ಲಿ ತಿಳಿಸಿದೆ.

**ಯಸ್ತೇ ಭರಾದನ್ನಿಯತೇ ಚಿದನ್ನಂ ನಿಶಿಷನ್ಮಂದ್ರಮತಿಥಿಮುದೀರತ್ ।**
**ಆ ದೇವಯುರಿನಧತೇ ದುರೋಣೇ ತಸ್ಮಿನ್ರಯಿರ್ಧ್ರುವೋ ಅಸ್ತು ದಾಸ್ವಾನ್ ॥೭॥**

**ಪದಾರ್ಥ:-** **[ಯಃ]** ಯಾವನು **[ದಾನಸ್ವಾನ್]** ದಾನಶೀಲನು **[ತೇ]** ನಿನಗೆ **[ಅನ್ನೀಯತೇ]** ಭೋಜನ ಮಾಡುವವರ ನಿಶ್ಚಿತ ಸಮಯದಲ್ಲಿ **[ಅನ್ನಂ]** ಭೋಜನ ಪದಾರ್ಥಗಳನ್ನು **[ನಿಶಿಷತ್]** ವಿಶಿಷ್ಟಗೊಳಿಸುತ್ತ **[ಮಂದ್ರಂ]** ಆನಂದದಾಯಕನಾಗಿ **[ಅತಿಥಿಂ]** ಸತ್ಯೋಪದೇಶಕನನ್ನು **[ಉದೀರತ್]** ಪ್ರೇರಣೆ ನೀಡುತ್ತಾನೆ. **[ದುರೋಣೇ]** ಮನೆಯಲ್ಲಿ ಅನ್ನವನ್ನು **[ಆ, ಭರತ್]** ತುಂಬಿಸುತ್ತಾನೆ. **[ಚಿತ್]** ಹಾಗೂ **[ತಸ್ಮಿನ್]** ಅದರಲ್ಲಿ **[ಧ್ರುವಃ]** ನಿಶ್ಚಲವಾದ **[ರಯಿಃ]** ಸಂಪತ್ತು **[ಅಸ್ತು]** ಇರಲಿ.

**ಭಾವಾರ್ಥ:-** ಯಾರು ಯಾರಿಗೆ ಯಾವ ರೀತಿಯಲ್ಲಿ ಉಪಕಾರ ಮಾಡುವವರೋ ಅವರೂ ಅವರಿಗೆ ಅದೇ ರೀತಿ ಉಪಕಾರ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ತ್ವಾ ದೋಷಾ ಯ ಉಷಸಿ ಪ್ರಶಂಸಾತ್ ಪ್ರಿಯಂ ವಾ ತ್ವಾ ಕೃಣವತೇ ಹವಿಷ್ಮಾನ್ ।**
**ಅಶ್ವೋ ನ ಸ್ವೇ ದಮ ಆ ಹೇಮ್ಯಾವಾನ್ ತಮಂಹಸಃ ಪೀಪರೋ ದಾಶ್ವಾಂಸಂ ॥೮॥**

**ಪದಾರ್ಥ:-** **[ಯಃ]** ಯಾವನು **[ತ್ವಾ]** ನಿನ್ನನ್ನು **[ದೋಷಾಃ]** ರಾತ್ರಿಯಲ್ಲಿ **[ಉಷಸಿ]** ಬೆಳಗಿನಲ್ಲಿ **[ತ್ವಾ]** ನಿನ್ನನ್ನು **[ಆ, ಅಶಂಸತ್]** ಎಲ್ಲಾ ರೀತಿಯಿಂದಲೂ ಪ್ರಶಂಸೆ ಮಾಡುವವನೋ **[ವಾ]** ಅಥವಾ **[ಯಃ]** ಯಾವನು **[ಹವಿಷ್ಮಾನ್]** ದಾನಯೋಗ್ಯ ವಸ್ತುಗಳಿಂದೊಡಗೂಡಿ **[ಹೇಮ್ಯಾವಾನ್]** ಉತ್ತಮ ರಾತ್ರಿಯಿರುವವನು **[ತತ್]** ಆ **[ದಾಶ್ವಾಸಂ]** ದಾನಶೀಲನನ್ನು **[ಸ್ವೇ]** ತನ್ನ **[ದಮೇ]** ಮನೆಯಲ್ಲಿ **[ಅಂಹಸಃ]** ಅಪರಾಧದಿಂದ **[ಅಶ್ವಃ]** **[ನ]** ಕುದುರೆ ಸದೃಶವಾಗಿ **[ಪೀಪರಃ]** ಪಾಲನೆ ಮಾಡು. **[ಪ್ರಿಯಂ]** ಪ್ರಿಯವಾದುದನ್ನು **[ಕೃಣವತೇ]** ಮಾಡುವವನಿಗೆ ಪ್ರಿಯವನ್ನು ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಯಾರು ಹಗಲೂ ರಾತ್ರಿ ನಿಮ್ಮನ್ನು ಉತ್ಸಾಹಭರಿತರನ್ನಾಗಿ ಮಾಡುವವರೋ ಅವರಿಗೆ ನೀವು ಕುದುರೆಗೆ ಆಹಾರ ನೀಡಿ ಸಂತೋಷಗೊಳಿಸುವ ರೀತಿಯಲ್ಲಿ ಸಂತೋಷಪಡಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ತುಭ್ಯಮಗ್ನೇ ಅಮೃತಾಯ ದಾಶ ದ್ದುವಸ್ತ್ವೇ ಕೃಣವತೇ ಯತಸ್ರುಕ್ ।**
**ನ ಸ ರಾಯಾ ಶಶಮಾನೋ ವಿ ಯೋಷ-ನ್ನೈ ನಮಂಹಃ ಪರಿ ವರದಘಾಯೋಃ ॥೯॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಯಃ]** ಯಾವನು **[ತುಭ್ಯಂ]** ನಿನಗೆ **[ಅಮೃತಾಯ]** ಮೋಕ್ಷಾರ್ಥ **[ದಾಶತ್]** ಕೊಡುವನೋ **[ತ್ವೇ]** ನಿನ್ನಲ್ಲಿ **[ದುವಃ]** ಸೇವೆಯನ್ನು **[ಕೃಣವತೇ]** ಮಾಡುವವನಿಗೆ ನೀನೂ ಜ್ಞಾನವನ್ನು ಕೊಡು. **[ರಾಯಾ]** ಧನದಿಂದ **[ಶಶಮಾನಃ]** ಶಾಸನ ಮಾಡುವವನೋ **[ಯತಸ್ರುಕ್]** ಕ್ರಿಯಾಸಾಧನಗಳನ್ನೆತ್ತಿ ಹಿಡಿದವನೊ **[ಏನಂ]** ಇವನನ್ನು **[ಅಂಹಃ]** ದುಃಖದಾಯಕನನ್ನು **[ನ]** **[ವಿ, ಯೇಷತ್]** ತ್ಯಜಿಸಬೇಡ. **[ಸಃ]** ಅವನು **[ಅಘಾಯೇಃ]** ಪಾಪಿಯ ಹಿಂಸೆಯನ್ನು **[ನ]** **[ಪರಿ, ವರತ್]** ಯಾವುದೇ ರೀತಿಯಿಂದ ಸ್ವೀಕರಿಸಬೇಡ.

**ಭಾವಾರ್ಥ:-** ಮನುಷ್ಯರೇ! ನಿಮ್ಮನ್ನು ಯಾರು ಹೇಗೆ ಪ್ರೀತಿಸುವರೋ ಅವರೊಂದಿಗೆ ನೀವು ಹಾಗೆ ಸ್ನೇಹ ಬೆಳೆಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ಯ ತ್ವಮಗ್ನೇ ಅಧ್ವರಂ ಜುಜೋಷೋ ದೇವೋ ಮರ್ತಸ್ಯ ಸುಧಿತಂ ರರಾಣಃ ।**
**ಪ್ರೀತೇದಸದ್ಧೋತ್ರಾ ಸಾ ಯವಿಷ್ಠಾ- ಸಾಮ ಯಸ್ಯ ವಿಧತೋ ವೃಧಾಸಃ ॥೧೦॥**

**ಪದಾರ್ಥ:-** **[ಯವಿಷ್ಠ]** ಯುವಕನಾದ **[ಅಗ್ನೇ]** ವಿದ್ವಾಂಸನೇ! **[ಯಸ್ಯ]** ಯಾವನ **[ಅಧ್ವರಂ]** ಅಹಿಂಸಾತ್ಮಕ ವ್ಯವಹಾರವನ್ನು **[ತ್ವಂ]** ನೀನು **[ಜುಜೋಷಃ]** ಸೇವನೆ ಮಾಡುವಿಯೋ **[ದೇವಃ]** ಸುಖದಾಯಕನಾಗಿ **[ಯಸ್ಯ]** ಯಾವನ **[ವಿಧತಃ]** ವಿಧಾಯಕನು **[ಮರ್ತಸ್ಯ]** ಮನುಷ್ಯನ **[ಸುಧಿತಂ]** ಹಿತವನ್ನು **[ರರಾಣಃ]** ಕೊಡುವವನೋ, ಅವನ **[ಸಾ]** ಆ **[ಹೋತ್ರಾ]** ಗ್ರಹಣ ಯೋಗ್ಯ ಕ್ರಿಯೆಯು **[ಪ್ರೀತಾ]** ಪ್ರಸನ್ನವಾದ **[ಇತ್]** ಸಫಲನಾದ ನನ್ನಲ್ಲಿ **[ಅಸತ್]** ಇರಲಿ. **[ವೃಧಾಸಃ]** ವೃದ್ಧಿಗೊಳಿಸುವವರಾಗಿ **[ಅಸಾಮ]** ಪ್ರಸಿದ್ಧರಾಗೋಣ.

**ಭಾವಾರ್ಥ:-** ಯಾರು ಯಾರಿಗೆ ಸುಖಸಾಧಕರಾಗಿರುವರೋ ಅವರಿಗೆ ಅವರ ಸುಖವನ್ನೂ ಸಾಧಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಚಿತ್ತಿಮಚಿತ್ತಿಂ ಚಿನವದ್ವಿ ವಿದ್ವಾನ್ ಪೃಷ್ಠೇವ ವೀತಾ ವೃಜಿನಾ ಚ ಮರ್ತಾನ್ ।**
**ರಾಯೇ ಚ ನಃ ಸ್ವಪತ್ಯಾಯ ದೇವ ದಿತಿಂ ಚ ರಾಸ್ವಾದಿತಿಮುರುಷ್ಯ ॥೧೧॥**

**ಪದಾರ್ಥ:-** **[ದೇವ]** ವಿದ್ಯಾವಂತನೇ! **[ವಿ]** ವಿಶೇಷರೀತಿಯಲ್ಲಿ **[ವಿದ್ವಾನ್]** ವಿದ್ಯಾವಂತನು **[ಪೃಷ್ಠೇವ]** ಪೀಠಕ್ಕೆ ಸದೃಶವಾಗಿ **[ವೀತಾ]** ಪ್ರಾಪ್ತವಾದ **[ವೃಜಿನಾ]** ಪರಾಕ್ರಮವನ್ನು **[ಮರ್ತಾನ್]** ಮನುಷ್ಯರಿಗೆ **[ಚ]** ಹಾಗೂ **[ನಃ]** ನಮಗೆ **[ಸ್ವಪತ್ಯಾಯಃ]** ಉತ್ತಮ ಸಂತಾನಕ್ಕೆ **[ರಾಯೇ]** ಧನಕ್ಕಾಗಿ **[ಚ]** ಮತ್ತು **[ಚಿತ್ತಿಂ]** ಸಂಗ್ರಹಕ್ರಿಯೆ **[ಅಚಿತ್ತಿಂ]** ಸಂಗ್ರಹ ಮಾಡದ ಕ್ರಿಯೆಗೆ **[ಚಿನವತ್]** ಸಂಗ್ರಹ ಮಾಡುವುದಕ್ಕೆ **[ದಿತಿಂ]** ಖಂಡಿತ ಕ್ರಿಯೆಯನ್ನು **[ರಾಸ್ವ]** ಕೊಡು. **[ಚ]** ಮತ್ತು **[ಅದಿತಿಂ]** ಖಂಡಿತಕ್ರಿಯೆಯ **[ಉರುಷ್ಯ]** ಸೇವನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಒಂಟೆಯಂತಹ ಪ್ರಾಣಿಗಳು ಹೇಗೆ ಬೆನ್ನ ಮೇಲೆ ಭಾರಹೊತ್ತೊಯ್ಯುತ್ತವೆಯೋ ಹಾಗೆ ಬಲಿಷ್ಠ ಮನುಷ್ಯನು ಎಲ್ಲಾ ವ್ಯವಹಾರಗಳ ಭಾರವನ್ನು ಸಹಿಸಿಕೊಳ್ಳುವನು ಮತ್ತು ವ್ಯವಹಾರದಲ್ಲಿ ಯಾವುದರ ಖಂಡನ ಮಂಡನ ಅಗತ್ಯವೋ ಅದನ್ನು ಹಾಗೆಯೇ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕವಿಂ ಶಶಾಸುಃ ಕವಯೋಽದಬ್ಧಾ ನಿಧಾರಯಂತೋ ದುರ್ಯಾಸ್ವಾಯೋಃ ।**
**ಅತಸ್ತ್ವಂ ದೃಶ್ಯಾँ ಅಗ್ನ ಏತಾನ್ ಪಡ್ಭಿಃ ಪಶ್ಯೇರದ್ಭುತಾँ ಅರ್ಯ ಏವೈಃ ॥೧೨॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ಪ್ರಕಾಶಮಾನ ಪುರುಷನೇ! [**ಅದಬ್ಧಾಃ**] ದಮನಯೋಗ್ಯವಲ್ಲದ [**ಕವಯಃ**] ಬುದ್ಧಿವಂತರು [**ಕವಿಂ**] ಬುದ್ಧಿವಂತನನ್ನು [**ದುರ್ಯಾಸು**] ಮನೆಗಳಲ್ಲಿ [**ನಿಧಾರಯಂತಃ**] ಧಾರಣ ಮಾಡಿದವರಾಗಿ [**ಶಶಾಸುಃ**] ಶಾಸನ ಮಾಡುವರು [**ಆಯೋಃ**] ಜೀವನ ವೃದ್ಧಿಗೊಳಿಸುವಂತಹ ಶಾಸನ ಮಾಡುವರು. [**ಅತಃ**] ಆದ್ದರಿಂದ [**ತ್ವಂ**] ನೀನು [**ಏವೈಃ**] ಪ್ರಾಪ್ತ [**ಪಡ್ಭಿಃ**] ವಿಜ್ಞಾನಾದಿಗಳಿಂದ [**ಏತಾನ್**] ಈ [**ಅದ್ಭುತಾನ್**] ಆಶ್ಚರ್ಯಕರ ಜನರನ್ನು [**ದೃಶ್ಯಾನ್**] ಕಾಣಯೋಗ್ಯವಾದವರನ್ನು [**ಅರ್ಯಃ**] ಸ್ವಾಮಿಗೆ ಸಮನಾಗಿ [**ಪಶ್ಯೇಃ**] ನೋಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಅಧ್ಯಾಪಕೋಪದೇಶಕರು ಬುದ್ಧಿವಂತರಿಗೆ ಬೋಧಿಸುವರೋ ಉಪದೇಶಿಸುವರೋ, ಅವರನ್ನು ಯಾವಾಗಲೂ ಗೌರವಿಸಬೇಕು. ಏಕಂದರೆ ಮನುಷ್ಯರು ಅದ್ಭುತಗುಣ-ಕರ್ಮ-ಸ್ವಭಾವದವರಾಗಬೇಕು.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ತ್ವಮಗ್ನೇ ವಾಘತೇ ಸುಪ್ರಣೀತಿಃ ಸುತಸೋಮಾಯ ವಿಧತೇ ಯವಿಷ್ಠ ।**
**ರತ್ನಂ ಭರ ಶಶಮಾನಾಯ ಘೃಷ್ವೇ ಪೃಥು ಶ್ಚಂದ್ರಮವಸೇ ಚರ್ಷಣಿಪ್ರಾಃ ॥೧೩॥**

**ಪದಾರ್ಥ:-** [**ಘೃಷ್ವೇ**] ಪದಾರ್ಥಗಳನ್ನು ಘರ್ಷಿಸುವ [**ಯವಿಷ್ಠ**] ಯುವಕನಾದ [**ಅಗ್ನೇ**] ಅಗ್ನಿಯಂತೆ ವಿದ್ಯಾವಂತನಾದವನೇ! [**ಸುಪ್ರಣೀತಿಃ**] ಉತ ಪ್ಟ ನೀತಿಯುಳ್ಳವನು [**ಪೃಥು**] ವಿಸ್ತೃತವಾದ [**ಚರ್ಷಣಿಪ್ರಾಃ**] ಮನುಷ್ಯರನ್ನು ವ್ಯಾಪಿಸಿರುವ [**ತ್ವಂ**] ನೀನು [**ಸುತಸೋಮಾಯ**] ತಯಾರಿಸಲಾದ ಸೋಮರಸಕ್ಕೆ [**ಶಶಮಾನಾಯ**] ಶಾಸನ ಮಾಡುವವನಿಗೆ [**ವಿಧತೇ**] ವ್ಯವಹಾರವನ್ನು ಯಥಾವತ್ ನಡೆಸುವ [**ವಾಘತೇ**] ಬುದ್ಧಿವಂತನಿಗೆ [**ಅವಸೇ**] ರಕ್ಷಣಾದಿಗಳಿಗೆ [**ಚಂದ್ರಂ**] ಸುವರ್ಣವನ್ನು [**ರತ್ನಂ**] ಧನವನ್ನು [**ಭರ**] ಭರಿಸು.

**ಭಾವಾರ್ಥ:-** ರಾಜನೇ! ಯಾವನು ಧಾರ್ಮಿಕನೂ ಶೂರನೂ ಶತ್ರುಬಲವನ್ನು ಮೀರಿಸುವವನೂ ಪದಾರ್ಥಗಳನ್ನು ಪರಸ್ಪರ ಘರ್ಷಣೆಗೊಳಪಡಿಸಿ ಮಿಂಚಿನಂತಹ ಶಕ್ತಿಯನ್ನು ಪ್ರಕಟಗೊಳಿಸುವವನೂ ಆಗಿ ಜನರ ರಕ್ಷಣೆ ಮಾಡುವನೋ, ಅವನನ್ನು ತನ್ನ ಮಂತ್ರಿಯಂತಹ ಅಧಿಕಾರಸ್ಥಾನದಲ್ಲಿ ನೇಮಿಸಿಕೊಂಡು ಅವರಿಗೆ ಯಥಾಯೋಗ್ಯ ಧನ-ಕನಕಗಳನ್ನು ಕೊಡು.

ಪ್ರಜೆಗಳ ವಿಷಯವಿಲ್ಲಿ ಹೇಳಿದೆ.

**ಅಧಾ ಹ ಯದ್ವಯಮಗ್ನೇ ತ್ವಾಯಾ ಪಡ್ಭಿರ್ಹಸ್ತೇಭಿಶ್ಚಕೃಮಾ ತನೂಭಿಃ ।**
**ರಥಂ ನ ಕ್ರಂತೋ ಅಪಸಾ ಭುರಿಜೋ-ಋತಂ ಯೇಮುಃ ಸುಧ್ಯ ಆಶುಷಾಣಾಃ ॥೧೪॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತಿರುವ ರಾಜನೇ! **[ತ್ವಯಾ]** ನಿನ್ನಿಂದ **[ಸುಧ್ಯಃ]** ಬುದ್ಧಿವಂತರು **[ಆಶುಷಾಣಾಃ]** ಶೀಘ್ರ ವಿಭಾಗಿಸುವವರು **[ವಯಂ]** ನಾವು **[ಹಸ್ತೇಭಿಃ]** ಕೈಗಳಿಂದ **[ಪಡ್ಭಿಃ]** ಕಾಲುಗಳಿಂದ **[ತನೂಭಿಃ]** ಶರೀರಗಳಿಂದ **[ಯತ್]** ಯಾವ **[ರಥಂ]** **[ನ]** ವಿಮಾನಾದಿ ವಾಹನಗಳಿಗೆ ಸದೃಶ ವಾಹನಗಳನ್ನು **[ಚಕೃಮ]** ಮಾಡುವವೋ, **[ಅಧ]** ಅನಂತರ **[ಹ]** ನಿಶ್ಚಯವಾಗಿಯೂ **[ಅಪಸಾ]** ಕರ್ಮದಿಂದ **[ಭುರಿಜೋಃ]** ಧಾರಣ-ಪೋಷಣ ಮಾಡುವವನ **[ಋತಂ]** ಸತ್ಯವನ್ನು **[ಯೇಮಃ]** ಪಡೆಯುವೆವೋ, ಅಂತಹ ವಾಹನಗಳಿಂದ **[ಕ್ರಂತಃ]** ನೀನು ಮಾರ್ಗಕ್ರಮಿಸುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಸೋಮಾರಿತನವನ್ನು ಬಿಟ್ಟು ಶರೀರಾವಯವಗಳನ್ನು ಕಾರ್ಯದಲ್ಲಿ ತೊಡಗಿಸಿ ಪುರುಷಾರ್ಥವನ್ನು ಸಾಧಿಸಿ ಪ್ರಜೆ-ರಾಜಧರ್ಮಗಳ ನಿಯಮವನ್ನನುಸರಿಸಿ ಎಲ್ಲರನ್ನು ಧನವಂತರನ್ನಾಗಿ ಮಾಡಬೇಕು.

ರಾಜ ವಿಷಯವನ್ನಿಲ್ಲಿ ಹೇಳಿದೆ.

**ಅಧಾ ಮಾತುರುಷಸಃ ಸಪ್ತ ವಿಪ್ರಾ ಜಾಯೇಮಹಿ ಪ್ರಥಮಾ ವೇಧಸೋ ನೄನ್ ।**
**ದಿವಸ್ಪುತ್ರಾ ಅಂಗಿರಸೋ ಭವೇಮಾ-ದ್ರಿಂ ರುಜೇಮ ಧನಿನಂ ಶುಚಂತಃ ॥೧೫॥**

**ಪದಾರ್ಥ:-** **[ಉಷಸಃ]** ಪ್ರಭಾತ ಸಮಯದಂತೆ **[ಮಾತುಃ]** ತಾಯಿಯಂತಿರುವ ನಾವು **[ಪ್ರಥಮಾಃ]** ಪ್ರಸಿದ್ಧ **[ವಿಪ್ರಾಃ]** ಬುದ್ಧಿವಂತರು **[ಸಪ್ತ]** ರಾಜ್ಯದ ಸಪ್ತಾಂಗಗಳು ಅಂದರೆ ರಾಜ, ಪ್ರಧಾನಿ, ಮಂತ್ರಿ, ಸೇನೆ, ಸೇನಾಪತಿ, ಪ್ರಜೆ, ಚಾರರು, **[ಜಾಯೇಮಹಿ]** ಆಗಿರಬೇಕು. **[ವೇಧಸಃ]** ಬುದ್ಧಿವಂತ **[ನೄನ್]** ನಾಯಕರನ್ನು ಪಡೆದಿರಬೇಕು. **[ದಿವಃ]** ಬೆಳಕನ್ನು **[ಪುತ್ರಾಃ]** ವಿಸ್ತೃತಗೊಳಿಸುವವರು **[ಅಂಗಿರಸಃ]** ಪ್ರಾಣವಾಯುವಿನಂತೆ **[ಅದ್ರಿಂ]** ಮೇಘದಂತೆ ಶತ್ರುಗಳನ್ನು **[ರುಜೇಮ]** ಛಿದ್ರ-ಛಿದ್ರಗೊಳಿಸೋಣ. **[ಅಧ]** ಅನಂತರ **[ಧನಿನಂ]** ಪ್ರಜೆಗಳಲ್ಲಿರುವ ಧನವಂತನನ್ನು **[ಶುಚಂತಃ]** ವಿದ್ಯಾ-ವಿನಯಗಳಿಂದ ಶುಚಿಗೊಳಿಸುತ್ತ **[ಭವೇಮ]** ಪ್ರಸಿದ್ಧರಾಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜರು ಬುದ್ಧಿವಂತರಾದ ಮಂತ್ರಿ ಮುಂತಾದ ಅಧಿಕಾರಿಗಳನ್ನು ರಕ್ಷಿಸಿ ಗೌರವಿಸುವರೋ ಅವರು ಸೂರ್ಯನಂತೆ ಪ್ರಕಾಶಮಾನರೂ ಯಶಸ್ವಿಗಳೂ ಆಗುವರು ಮತ್ತು ಸದಾಕಾಲ ಕರ್ಮನಿರತರಾದವರನ್ನು ರಕ್ಷಿಸುತ್ತ ದುಷ್ಟರನ್ನು ಸೋಮಾರಿಗಳನ್ನು ದಂಡಿಸಬೇಕು. ಅದರಿಂದ ಎಲ್ಲರೂ ಶುದ್ಧಾಚರಣ ಮಾಡುವವರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತಮಾಶುಷಾಣಾಃ ।**
**ಶುಚೀದಯನ್ ದೀಧಿತಿಮುಕ್ಥಶಾಸಃ, ಕ್ಷಾಮಾ ಭಿಂದಂತೋ ಅರುಣೀರಪ ವ್ರನ್ ॥೧೬॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತಿರುವ ರಾಜನೇ! **[ಯಥಾ]** ಯಾವ ರೀತಿಯಿಂದ **[ನಃ]** ನಮ್ಮ **[ಪರಾಸಃ]** ನಡೆಯ ಬಹುದಾದ **[ಪ್ರತ್ನಾಸಃ]** ನಡೆದಿರುವ **[ಪಿತರಃ]** ಪಾಲಕರು **[ಶುಚಿ]** ಪವಿತ್ರಗೊಳಿಸುವ **[ಋತಂ]** ಸತ್ಯನ್ಯಾಯ ಸಮ್ಮತ ವ್ಯವಹಾರವನ್ನು **[ಆಶುಷಾಣಾಃ]** ಎಲ್ಲರೀತಿಯಲ್ಲಿ ಹಂಚಿಕೆ ಮಾಡುತ್ತ **[ಉಕ್ಥಶಾಸಃ]** ಪ್ರಶಂಸಾರ್ಹ ಶಾಸನ ಮಾಡುವವರ **[ಕ್ಷಾಮ]** ಭೂಮಿಯನ್ನು **[ಭಿಂದಂತಃ]** ಭೇದನಗೊಳಿಸುತ್ತ **[ದೀಧಿತಿಂ]** ನೀತಿ ಎಂಬ ಬೆಳಕನ್ನು **[ಅಯನ್]** ಪಡೆಯುವರೋ **[ಅಧ]** ಅನಂತರ **[ಅರುಣೀಃ]** ಪ್ರಜೆಗಳನ್ನು **[ಅಪ]** **[ವ್ರನ್]** ಸ್ವೀಕರಿಸುವರೋ ಹಾಗೆ **[ಇತ್]** ನೀವೂ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜ ಮತ್ತು ರಾಜ ಪುರುಷರು ತಂದೆಯಂತೆ ಪ್ರಜೆಗಳನ್ನು ರಕ್ಷಿಸುವರೋ ಸತ್ಯನ್ಯಾಯದಿಂದ ವ್ಯವಹರಿಸುವರೋ ಅಜ್ಞಾನವನ್ನು ನಿವಾರಿಸಿ ಜ್ಞಾನದ ಬೆಳಕನ್ನು ನೀಡುವರೋ ಅವರು ಪವಿತ್ರರೆನಿಸಿಕೊಳ್ಳುವವರ ಸಾಲಿನಲ್ಲಿ ಗಣನೆಗೆ ಬರುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸುಕರ್ಮಾಣಃ ಸುರುಚೋ ದೇವಯಂತೋಽಯೋ ನ ದೇವಾ ಜನಿಮಾ ಧಮಂತಃ ।**
**ಶುಚಂತೋ ಅಗ್ನಿಂ ವವೃಧಂತ ಇಂದ್ರ-ಮೂರ್ವಂ ಗವ್ಯಂ ಪರಿಷದಂತೋ ಅಗ್ಮನ್ ॥೧೭॥**

**ಪದಾರ್ಥ:-** **[ಅಯಃ]** ಚಿನ್ನವನ್ನು **[ಧಮಂತಃ]** ಕಂಪನ ಮಾಡುತ್ತ **[ನ]** ಇರುವವರಿಗೆ ಸದೃಶವಾಗಿ **[ದೇವಾಃ]** ವಿದ್ವಾಂಸರು **[ಜನಿಮ]** ಜನ್ಮದ **[ದೇವಯಂತಃ]** ಕಾಮನೆ ಮಾಡುವವರಾಗಿ **[ಸುಕರ್ಮಾಣಃ]** ಉತ್ತಮ ಕೆಲಸಗಳ **[ಸುರುಚಃ]** ಉತ ಷ್ಟ ಆಸಕ್ತಿಯ **[ಶುಚಂತಃ]** ಆಚರಣೆ ಮಾಡುವವರಾಗಿ **[ಅಗ್ನಿಂ]** ಅಗ್ನಿಯನ್ನು **[ವವೃಧಂತಃ]** ವೃದ್ಧಿಪಡಿಸುವರು. **[ಪರಿಷದಂತಃ]** ಸಭೆಯನ್ನು ನಡೆಸುತ್ತ **[ಊರ್ವಂ]** ಹಿಂಸೆ ಮಾಡುವ **[ಇಂದ್ರಂ]** ವಿದ್ಯುತ್ತನ್ನು **[ಗವ್ಯಂ]** ವಾಙ್ಮಯ ಶಾಸ್ತ್ರವನ್ನು **[ಅಗ್ಮನ್]** ಪಡೆದುಕೊಳ್ಳುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಎಲ್ಲಾ ಮನುಷ್ಯರು ಧಾರ್ಮಿಕ ಕರ್ಮಗಳನ್ನು ಮಾಡಬೇಕು. ವಿದ್ಯಾಜನ ಮಾಡಿ ಉತ್ತಮ ಸಭೆಗಳನ್ನು ನಡೆಸಬೇಕು. ಶ್ರೇಷ್ಠವಾದ ಕಾಮನೆಗಳನ್ನು ಮಾಡಬೇಕು. ವಿದ್ಯೆ ಮತ್ತು ಆಯುಸ್ಸುಗಳನ್ನು ವೃದ್ಧಿಪಡಿಸಿಕೊಳ್ಳಬೇಕು. ಚಕ್ರವರ್ತಿ ರಾಜ್ಯವನ್ನು ನಡೆಸುತ್ತ ಉತ್ತಮ ಸುಖ-ಭೋಗಗಳನ್ನು ಅನುಭವಿಸಬೇಕು.

ರಾಜನ ವಿಷಯವಿಲ್ಲಿ ಹೇಳಿದೆ.

**ಆ ಯೂಥೇವ ಕ್ಷುಮತಿ ಪಶ್ವೋ ಅಖ್ಯ-ದ್ದೇವಾನಾಂ ಯಜ್ಜನಿಮಾಂತ್ಯುಗ್ರ ।**
**ಮರ್ತಾನಾಂ ಚಿದುರ್ವಶೀರಕೃಪ್ರನ್ ವೃಧೇ ಚಿದರ್ಯ ಉಪರಸ್ಯಾಯೋಃ ॥೧೮॥**

**ಪದಾರ್ಥ:-** **[ಉಗ್ರ]** ತೇಜಸ್ವೀ ರಾಜನೇ! ನೀನು **[ದೇವಾನಾಂ]** ವಿದ್ಯಾವಂತರಾದ **[ಮರ್ತಾನಾಂ]** ಮನುಷ್ಯರ **[ಅಂತಿ]** ಸಮೀಪದಲ್ಲಿ **[ಯತ್]** ಯಾವ **[ಜನಿಮ]** ಜನ್ಮವನ್ನು **[ಆ, ಅಖ್ಯತ್]** ಎಲ್ಲ ರೀತಿಯಿಂದ ಸಾರ್ಥಕಪಡಿಸಿಕೊಳ್ಳುತ್ತೀಯೆ. **[ಕ್ಷುಮತಿ]** ಆಹಾರ ಪದಾರ್ಥಗಳಲ್ಲಿ **[ಯೂಥೇವ]** ಸೇನೆಯ ರೀತಿಯಲ್ಲಿ **[ಅರ್ಯಃ]** ಸ್ವಾಮಿಗೆ ಸಮನಾಗಿ **[ಚಿತ್]** ಹೇಗೋ ಹಾಗೆ **[ಉಪರಸ್ಯ]** ಮೋಡದ ಮತ್ತು **[ಆಯೋಃ]** ಜೀವನ ಪಡೆದ **[ಪಶ್ವಃ]** ಪಶುಗಳ **[ಚಿತ್]** ಹಾಗೆ **[ವೃಧೇ]** ವೃದ್ಧಿಪಡಿಸು. **[ಉರ್ವಶೀಃ]** ವ್ಯಾಪಕ ಕ್ರಿಯೆ ಮಾಡುವ ವಿದ್ವಾಂಸರು **[ಅಕೃಪ್ರನ್]** ಕಲ್ಪನೆ ಮಾಡುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯ ಜನ್ಮದಲ್ಲಿ ರಾಜನ ಜನ್ಮವು ಪುಣ್ಯಫಲದಿಂದ ಲಭಿಸಿದ್ದೆಂದು ಭಾವಿಸಬೇಕು. ರಾಜನಿಲ್ಲದಿದ್ದರೆ ಯಾರೂ ನೆಮ್ಮದಿಯಿಂದ ಬದುಕುತ್ತಿರಲಿಲ್ಲ. ಮೋಡಗಳಿಂದ ಹೇಗೆ ಎಲ್ಲರ ಜೀವನವೂ ವೃದ್ಧಿಯಾಗುತ್ತದೆಯೋ ಹಾಗೆ ರಾಜನಿಂದ ಎಲ್ಲಾ ಪ್ರಜೆಗಳ ಜೀವನ ವೃದ್ಧಿಯಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಕರ್ಮ ತೇ ಸ್ವಪಸೋ ಅಭೂಮ ಋತಮವಸ್ರನ್ನುಷಸೋ ವಿಭಾತೀಃ ।**
**ಅನೂನಮಗ್ನಿಂ ಪುರುಧಾ ಸುಶ್ಚಂದ್ರಂ ದೇವಸ್ಯ ಮರ್ಮೃಜತಶ್ಚಾರು ಚಕ್ಷುಃ ॥೧೯॥**

**ಪದಾರ್ಥ:-** **[ವಿಭಾತೀಃ]** ಪ್ರಕಾಶಮಾನಗೊಳಿಸುತ್ತ **[ಉಷಸಃ]** ಬೆಳಗಿನ ಸಮಯವನ್ನು **[ಅನೂನಂ]** ವಿಪುಲವಾಗಿ **[ಸುಶ್ಚಂದ್ರಂ]** ಸುವರ್ಣವಿರುವವನನ್ನು **[ಮರ್ಮೃಜತಃ]** ಅನ್ವೇಷಣೆ ಮಾಡುತ್ತ **[ದೇವಸ್ಯ]** ಬಯಸುವವನ **[ಚಾರು]** ರಮಣೀಯ **[ಚಕ್ಷುಃ]** ಕಣ್ಣುಗಳು **[ಅ.ಗ್ನಿಂ]** ಅಗ್ನಿಯನ್ನು **[ಪುರುಧಾ]** ಬಹು ಪ್ರಕಾರವಾಗಿ **[ಅವಸ್ರನ್]** ರಕ್ಷಣೆ ಮಾಡುವರು. **[ಋತಂ]** ಸತ್ಯವನ್ನು ಸೇವನೆ ಮಾಡುವರು. **[ಸ್ವಪಸಃ]** ಧರ್ಮಕರ್ಮಗಳನ್ನು **[ಅಕರ್ಮ]** ಮಾಡುವೆವು. **[ತೇ]** ನಿನ್ನ **[ಅಭೂಮ]** ಸ್ನೇಹಿತರಾಗುವೆವು.

**ಭಾವಾರ್ಥ:-** ರಾಜನೇ! ಸೂರ್ಯನಿಂದ ಉತ್ಪನ್ನವಾದ ಪ್ರಾತಃಕಾಲವು ಹೇಗೆ ಎಲ್ಲಾ ಪದಾರ್ಥಗಳನ್ನು ಸುಶೋಭಿತಗೊಳಿಸುತ್ತದೆಯೋ ಹಾಗೆ ವಿದ್ಯಾವಂತರು ನಿನ್ನ ಶಾಸನದಂತೆ ವರ್ತಿಸಬೇಕು. ನೀನು ನಮ್ಮೆಲ್ಲರ ಹಿತವನ್ನು ಮಾಡು ಮತ್ತು ಎಲ್ಲರನ್ನೂ ಪರಸ್ಪರ ಭೇಟಿಮಾಡಿಸಿ ಧರ್ಮಸಂಬಂಧೀ ಕೆಲಸಗಳನ್ನು ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏತಾ ತೇ ಅಗ್ನ ಉಚಥಾನಿ ವೇಧೋ ಽವೋಚಾಮ ಕವಯೇ ತಾ ಜುಷಸ್ವ । ಉಚ್ಛೋಚಸ್ವ**
**ಕೃಣುಹಿ ವಸ್ಯಸೋ ನೋ ಮಹೋ ರಾಯಃ ಪುರುವಾರ ಪ್ರ ಯಂಧಿ ॥೨೦॥**

**ಪದಾರ್ಥ:-** **[ವೇಧ]** ಬುದ್ಧಿವಂತನಾದ **[ಅಗ್ನೇ]** ಧಾರ್ಮಿಕ ರಾಜನೇ! **[ಕವಯೇ]** ವಿದ್ಯಾವಂತನಾದ **[ತೇ]** ನಿನಗೆ **[ಏತಾ]** ಈ **[ಉಚಥಾನಿ]** ಯೋಗ್ಯವಚನಗಳನ್ನು **[ಅವೋಚಾಮ]** ಹೇಳುವೆವು **[ತಾ]** ಅವುಗಳನ್ನು **[ಜುಷಸ್ವ]** ಸೇವನೆಮಾಡು. **[ಉತ್, ಶೋಚಸ್ವ]** ಚೆನ್ನಾಗಿ ಚಿಂತಿಸು. **[ಕೃಣುಹಿ]** ಅದನ್ನು ಮಾಡು. **[ಪುರುವಾರ]** ಸತ್ಯವಾದಿಗಳನ್ನು ಸ್ವೀಕರಿಸುವ ನೀನು **[ನಃ]** ನಮಗೆ **[ಮಹಃ]** ಮಹತ್ತರವಾದ **[ವಯಸಃ]** ಬಹುಕಾಲ ಉಳಿಯುವಂತಹ **[ರಾಯಃ]** ಧನವನ್ನು **[ಪ್ರ, ಯಂಧಿ]** ಕೊಡು.

**ಭಾವಾರ್ಥ:-** ರಾಜನು ಯಥಾರ್ಥ ನುಡಿಯುವವರ ಮಾತುಗಳನ್ನೇ ಕೇಳಬೇಕು. ಉತ್ತಮರೀತಿಯಲ್ಲಿ ಚಿಂತಿಸಿ ಅದನ್ನು ಗ್ರಹಣ ಮಾಡಬೇಕು ಮತ್ತು ಯಥಾರ್ಥ ನುಡಿಯುವವರಿಗೆ ಧನ-ಕನಕಾದಿ ವಸ್ತುಗಳನ್ನು ಕೊಡಬೇಕು. ಅವರನ್ನು ನಿರಂತರ ಸಂತುಷ್ಟರನ್ನಾಗಿಡಬೇಕು. ಅಂತಹವರ ಸಭೆ ಕರೆದು ಕಾರ್ಯಗಳನ್ನು ನಡೆಸಬೇಕು.

ಈ ಸೂಕ್ತದಲ್ಲಿ ರಾಜ ಮತ್ತು ಪ್ರಜೆಗಳ ವಿಷಯ ಹೇಳಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಎರಡನೆಯ ಸೂಕ್ತ ಸಮಾಪ್ತ**

## ಸೂಕ್ತ ೩

ಮಂತ್ರಸಂಖ್ಯೆ ೧೬ । ವಾಮದೇವ ಋಷಿಃ । ಅಗ್ನಿರ್ದೇವತಾ । ೧, ೫, ೮, ೧೦, ೧೨, ೧೫ ನಿಚೃತ್ರಿಷ್ಟುಪ್, ೨, ೧೩, ೧೪ ವಿರಾಟ್ ತ್ರಿಷ್ಟುಪ್, ೩, ೭, ೯ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪ ಸ್ವರಾಟ್ ಬೃಹತೀ ಛಂದಃ । ಮಧ್ಯಮಃ ಸ್ವರಃ । ೬, ೧೧, ೧೬ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಸೂರ್ಯರೂಪಾಗ್ನಿ ದೃಷ್ಟಾಂತದಿಂದ ರಾಜ ಪ್ರಜೆಗಳ ಕೆಲಸವನ್ನು ವರ್ಣಿಸಲಾಗಿದೆ.

**ಆ ವೋ ರಾಜಾನಮಧ್ವರಸ್ಯ ರುದ್ರಂ ಹೋತಾರಂ ಸತ್ಯಯಜಂ ರೋದಸ್ಯೋಃ ।**
**ಅಗ್ನಿಂ ಪುರಾ ತನಯಿತ್ನೋರಚಿತ್ತಾ-ದ್ಧಿರಣ್ಯರೂಪಮವಸೇ ಕೃಣುಧ್ವಮ್ ॥೧॥**

**ಪದಾರ್ಥ:-** [ವಃ] ನಿಮ್ಮ [ಅಧ್ವರಸ್ಯ] ಅವಿನಾಶಕ ರಾಜ್ಯದ [ಅವಸೇ] ರಕ್ಷಣೆಗಾಗಿ [ಹೋತಾರಂ] ದಾನಿಯನ್ನು [ಸತ್ಯಯಜಂ] ಸತ್ಯವನ್ನೇ ಸಂಗತನಾಗುವವನನ್ನು [ರುದ್ರಂ] ದುರ್ಜನರಿಗೆ ರೋದನವನ್ನು ಮಾಡಿಸುವವನನ್ನು [ಅಚಿತ್ತಾತ್] ಮನಸ್ಸಿಲ್ಲದವನಿಂದ [ತನಯಿತ್ನೋಃ] ವಿದ್ಯುತ್ತಿನಿಂದ [ಹಿರಣ್ಯರೂಪಂ] ಹಿರಣ್ಯದ ರೂಪದಂತೆ ರೂಪವಿರುವವನನ್ನು [ರೋದಸ್ಯೋಃ] ಭೂಮಿ ಅಂತರಿಕ್ಷಗಳ ಮಧ್ಯದಲ್ಲಿ [ಅಗ್ನಿಂ] ಸೂರ್ಯನಂತಿರುವವನನ್ನು [ರಾಜಾನಂ] ಪ್ರಕಾಶಮಾನನಾದವನನ್ನು [ಪುರಾ] ಮೊದಲು [ಆ, ಕೃಣುಧ್ವಂ] ಮಾಡುವವರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರೇ! ರಾಜ ಪ್ರಜೆಗಳನ್ನು ಐಕಮತ್ಯಗೊಳಿಸಿ ಪರಮೇಶ್ವರನು ಬ್ರಹ್ಮಾಂಡದ ಮಧ್ಯದಲ್ಲಿ ಸೂರ್ಯನನ್ನು ಸ್ಥಾಪಿಸಿ ಎಲ್ಲರಿಗೆ ಪ್ರಿಯವಾದುದನ್ನು ಸಾಧಿಸಿರುವನೋ ಅವನಂತಿರುವ ರಾಜನನ್ನು ನಮ್ಮೆಲ್ಲರ ಮಧ್ಯದಲ್ಲಿ ಶುಭಗುಣಕರ್ಮಗಳಿರುವ ರಾಜನನ್ನಾಗಿ ಮಾಡಿ ನಮ್ಮ ಹಿತವನ್ನು ನೀವು ಸಾಧಿಸಿರಿ. ಅದರಿಂದ ನಿಮ್ಮ ಹಿತವೂ ಸಿದ್ಧಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಯಂ ಯೋನಿಶ್ಚಕೃಮಾ ಯಂ ವಯಂ ತೇ ಜಾಯೇವ ಪತ್ಯ ಉಶತೀ ಸುವಾಸಾಃ ।**
**ಅರ್ವಾಚೀನಃ ಪರಿವೀತೋ ನಿ ಷೀದೇ-ಮಾ ಉ ತೇ ಸ್ವಪಾಕ ಪ್ರತೀಚೀಃ ॥೨॥**

**ಪದಾರ್ಥ:-** [ವಯಂ] ನಾವು [ತೇ] ನಿನ್ನ [ಯಂ] ಯಾವ ಮನೆಯನ್ನು [ಚಕೃಮಾ] ಮಾಡುವೆವೋ [ಅಯಂ] ಇವನು [ಯೋನಿಃ] ನೆಲೆಯಾಗಿರುವನು. [ಪತ್ಯೇ] ಪತಿಯನ್ನು [ಉಶತೀ] ಬಯಸುವವಳು [ಸುವಾಸಾಃ] ಸುಂದರ ವಸ್ತ್ರಾಲಂಕಾರ ಮಾಡಿಕೊಂಡ [ಜಾಯೇವ] ಹೃದಯಂಗಮ ಪತ್ನಿಯಂತೆ [ಅರ್ವಾಚೀನಃ] ಇಂದಿನ ಕಾಲದವಳು [ಪರಿವೀತಃ] ಶುಭ ಗುಣದಿಂದ ಎಲ್ಲಾ ಕಡೆಗಳಲ್ಲೂ ವ್ಯಾಪಕನಾದ [ನಿ, ಸೀದ] ನೀನು ನೆಲೆಸು. [ಇಮಾಃ] ಈ ಪ್ರಜೆಗಳು [ಪ್ರತೀಚೀಃ] ಪ್ರಸಿದ್ಧಿಯನ್ನು ಪಡೆಯುತ್ತ [ಉ] ಮತ್ತು [ತೇ] ನಿನ್ನ [ಸ್ವಪಾಕಃ] ಪರಿಪಕ್ವ ಜ್ಞಾನವಂತರಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವುದರಲ್ಲಿ ಪತಿವ್ರತೆಯೂ, ಸುಂದರೀಯೂ, ಹೃದಯಂಗಮಳೂ ಆದ ಮಡದಿಯು ಸುಖ ನೀಡುವ ರೀತಿಯಲ್ಲಿ ಆ ಮನೆಯು ಎಲ್ಲಾ ಕಾಲದಲ್ಲೂ ಸುಖ ನೀಡುವಂತಿರಬೇಕು. ಅಲ್ಲಿ ನೆಲೆಸಿ ಎಲ್ಲಾ ಪ್ರಜೆಗಳೂ ತನ್ನಲ್ಲಿ ಅನುರಕ್ತರಾಗುವಂತಹ ಕಾರ್ಯಗಳನ್ನು ಮಾಡಬೇಕು. ರಾಜನು ಅಂತಹ ಗೃಹನಿರ್ಮಾಣ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಶೃಣ್ವತೇ ಅದೃಪಿತಾಯ ಮನ್ಮ ನೃಚಕ್ಷಸೇ ಸುಮೃಳೀಕಾಯ ವೇಧಃ ।**
**ದೇವಾಯ ಶಸ್ತಿಮಮೃತಾಯ ಶಂಸ ಗ್ರಾವೇವ ಸೋತಾ ಮಧುಷುದ್ಯಮೀಳೇ ॥೩॥**

**ಪದಾರ್ಥ:-** [**ವೇಧಃ**] ಬುದ್ಧಿವಂತರು [**ಯಂ**] ಯಾರನ್ನು [**ಈಳೇ**] ಸ್ತುತಿ ಮಾಡುವರೋ [**ಆಶೃಣ್ವತೇ**] ಅದನ್ನು ಕೇಳಿಸಿಕೊಳ್ಳುವವರಿಗೆ [**ಅದೃಪಿತಾಯ**] ಮೋಹರಹಿತರಾದವರಿಗೆ [**ನೃಚಕ್ಷಸೇ**] ಸತ್ಯಾಸತ್ಯ ಕರ್ಮಗಳನ್ನು ಮಾಡುವವರನ್ನು ಪ್ರತ್ಯಕ್ಷ ನೋಡುವವನಿಗೆ [**ಸುಮೃಳೀಕಾಯ**] ಸುಖದಾಯಕನಿಗೆ/ಸುಖಸ್ವರೂಪನಿಗೆ [**ಅಮೃತಾಯ**] ನೀರಿನಂತೆ ಶಾಂತ ಸ್ವರೂಪನಿಗೆ [**ದೇವಾಯ**] ದಿವ್ಯಗುಣ ಸಂಪನ್ನನಿಗೆ [**ಮನ್ಮ**] ವಿಜ್ಞಾನವನ್ನು [**ಗ್ರಾವೇವ**] ಮೇಘದಂತೆ [**ಮಧುಷುತ್**] ಮಾಧುರ್ಯವನ್ನುಂಟುಮಾಡುವವನು [**ಸೋತಾ**] ಸಾರಭೂತವಾದುದನ್ನು ತೆಗೆಯುವವನು. [**ಶಸ್ತಿಂ**] ಪ್ರಶಂಸೆಯನ್ನು [**ಶಂಸ**] ಕೊಂಡಾಡು.

**ಭಾವಾರ್ಥ:-** ಯಾವನು ಮೋಹಾದಿದೋಷರಹಿತನೂ ಎಲ್ಲರ ಮಾತುಗಳನ್ನು ಕೇಳಿಸಿಕೊಳ್ಳುವವನೂ ಸತ್ಯಾಸತ್ಯಗಳನ್ನು ನೋಡುವವನೂ ಮೋಡದಂತೆ ಪ್ರಜೆಗಳಿಗೆ ನಾನಾ ವಿಧ ಸುಖ-ಭೋಗಗಳನ್ನು ಕೊಡುವವನೂ ಆಗಿರುವನೋ ಅವನೇ ರಾಜನಾಗಲು ಯೋಗ್ಯನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಂ ಚಿನ್ನಃ ಶಮ್ಯಾ ಅಗ್ನೇ ಅಸ್ಯಾ ಋತಸ್ಯ ಬೋಧ್ಯೃತಚಿತ್ ಸ್ವಾಧೀಃ ।**
**ಕದಾ ತ ಉಕ್ಥಾ ಸಧಮಾದ್ಯಾನಿ ಕದಾ ಭವಂತಿ ಸಖ್ಯಾ ಗೃಹೇ ತೇ ॥೪॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತಿರುವವನೇ! [**ತ್ವಂ**] ನೀನು [**ನಃ**] ನಮ್ಮ [**ಅಸ್ಯಾಃ**] ಪ್ರಜೆಯ [**ಋತಸ್ಯ**] ಸತ್ಯದ [**ಶಮ್ಯಾಃ**] ಕರ್ಮಗಳಿಗೆ [**ಸ್ವಾಧೀಃ**] ಉತ್ತಮ ಚಿಂತನಗಳಿಂದ [**ಋತಚಿತ್**] ಸತ್ಯ ಸಂಗ್ರಾಹಕನನ್ನು [**ಕದಾ**] ಯಾವಾಗ [**ಬೋಧಿ**] ತಿಳಿದಿರುವೆ. [**ಚಿತ್**] ಹಾಗೂ [**ತೇ**] ನಿನ್ನ [**ಗೃಹೇ**] ಮನೆಯಲ್ಲಿ [**ಸದಮಾದ್ಯಾನಿ**] ಒಂದುಗೂಡುವ ಸ್ಥಾನದಲ್ಲಿ [**ಉಕ್ಥಾ**] ಯೋಗ್ಯವಾದ [**ತೇ**] ನಿನ್ನ [**ಸಖ್ಯಾ**] ಸ್ನೇಹಿತರೊಂದಿಗೆ [**ಕದಾ**] ಯಾವಾಗ [**ಭವಂತಿ**] ಇರುತ್ತೀಯೆ.

**ಭಾವಾರ್ಥ:-** ರಾಜನೇ! ನೀನು ಯಾವಾಗ ಪ್ರಜೆಗಳಿಗೆ ಸತ್ಯ-ನ್ಯಾಯ ದೊರಕಿಸಿ ಕೊಡುವಿಯೋ ಆಗಲೇ ಪ್ರಜೆಗಳು ನಿನ್ನ ಆಜ್ಞೆಗನುಗುಣವಾಗಿ ವರ್ತಿಸುವರು; ಒಂದುಗೂಡುವರು.

ಉಪದೇಶಕನ ವಿಷಯವಿಲ್ಲಿ ಹೇಳಿದೆ.

**ಕಥಾ ಹ ತದ್ವರುಣಾಯ ತ್ವಮಗ್ನೇ ಕಥಾ ದಿವೇ ಗರ್ಹಸೇ ಕನ್ನ ಆಗಃ ।**
**ಕಥಾ ಮಿತ್ರಾಯ ಮೀಳ್ಹುಷೇ ಪೃಥಿವ್ಯೈ ಬ್ರವಃ ಕದರ್ಯಮ್ಣೇ ಕದ್ಭಗಾಯ ॥೫॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತಿರುವ [**ತ್ವಂ**] ನೀನು [**ಹಿ**] ನಿಶ್ಚಯವಾಗಿ [**ಕಥಾ**] ಯಾವರೀತಿ [**ವರುಣಸ್ಯ**] ಶ್ರೇಷ್ಠ ಪುರುಷನ [**ಗರ್ಹಸೇ**] ನಿಂದೆಮಾಡುವೆಯೋ [**ಕಥಾ**] ಹೇಗೆ [**ದಿವೇ**] ಪ್ರಕಾಶಮಾನನನ್ನು ಸ್ತ್ರೀಯರು ನಿಂದಿಸುವರೋ [**ನಃ**] ನಮ್ಮನ್ನು [**ಆಗಃ**] ಅಪರಾಧದ [**ಕತ್**] ಯಾವಾಗ ನಿಂದೆ ಮಾಡುವೆಯೋ [**ಮೀಳ್ಹುಷೇ**]

ಸುಖವರ್ಧಕನಾದ **[ಮಿತ್ರಾಯ]** ಸ್ನೇಹಿತನಿಗೆ **[ಕಥಾ]** ಹೇಗೆ ನಿಂದಿಸುವೆಯೋ **[ಪೃಥಿವ್ಯೈ]** ಭೂಮಿಯಂತಿರುವ ಸ್ತ್ರೀಯ **[ತತ್]** ಆ ವಚನವನ್ನು **[ಕತ್]** ಯಾವಾಗ **[ಬ್ರವಃ]** ಹೇಳುವೆ. **[ಅರ್ಯಮ್ಣೇ]** ನ್ಯಾಯಾಧೀಶನಿಗೆ **[ಭಗಾಯ]** ಸಂಪತ್ತಿಗೆ **[ಕತ್]** ಯಾವಾಗ ಹೇಳು.

**ಭಾವಾರ್ಥ:-** ವಿದ್ಯಾವಂತರೇ! ರಾಜನು ಶ್ರೇಷ್ಠ ವಿದ್ಯಾವಂತರ ನಿಂದೆ ಮಾಡಿದರೆ ಆಗಲೇ ನೀವಿದನ್ನು ತಡೆಯಬೇಕು. ಎಲ್ಲಾ ರಾಜ ಕಾರ್ಯಗಳನ್ನು ಮಾಡಲು ಸಮಯ ವ್ಯವಸ್ಥೆ ಮಾಡಬೇಕು. ಯಾವಾಗ ಯಾವಾಗ ಯಾವ ಯಾವ ಕರ್ಮಗಳು ಮಾಡಬೇಕಾಗಿದೆಯೋ ಅವೆಲ್ಲವನ್ನು ಸಕಾಲದಲ್ಲಿ ಮಾಡಬೇಕೆಂದು ರಾಜನಿಗೆ ಉಪದೇಶ ಮಾಡಬೇಕು. ಯಾವಾಗವನು ಮಿತ್ರದ್ರೋಹ ಮಾಡುವನೋ ಆಗಲೇ ಅದನ್ನು ಖಂಡಿಸಬೇಕು. ಹೀಗೆ ಮಾಡಿದರೆ ರಾಜ-ಪ್ರಜೆಗಳಿಬ್ಬರದ್ದು ಉನ್ನತಿಯಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕದ್ಧಿಷ್ಣ್ಯಾಸು ವೃಧಸಾನೋ ಅಗ್ನೇ ಕದ್ವಾತಾಯ ಪ್ರತವಸೇ ಶುಭಂಯೇ ।**
**ಪರಿಜ್ಮನೇ ನಾಸತ್ಯಾಯ ಕ್ಷೇ ಬ್ರವಃ ಕದಗ್ನೇ ರುದ್ರಾಯ ನೃಘ್ನೇ ॥೬॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೇ ಪ್ರಕಾಶಮಾನನಾದವನೇ! ನೀನು **[ಧಿಷ್ಣ್ಯಾಸು]** ಬೌದ್ಧಿಕ ಕ್ರಿಯೆಗಳಲ್ಲಿ **[ವೃಧಸಾನಃ]** ವೃದ್ಧಿ ಹೊಂದುವಂತಹದನ್ನು ವಿಭಾಗಿಸುತ್ತ **[ಪ್ರತವಸೇ]** ಶ್ರೇಷ್ಠ ಬಲ ಮತ್ತು **[ವಾತಾಯ]** ವಿಜ್ಞಾನಕ್ಕಾಗಿ **[ಕತ್]** ಯಾವಾಗ **[ವವಃ]** ವಿವರಿಸುವೆ. **[ಅಗ್ನೇ]** ವಿದ್ಯಾವಂತ ರಾಜನೇ! **[ಪರಿಜ್ಮನೇ]** ಸುತ್ತಲೂ ಭೂಮಿ ಇರುವವನಿಗೆ **[ಶುಭಂಯೇ]** ಕಲ್ಯಾಣವಂತನಿಗೆ **[ನಾಸತ್ಯಾಯ]** ಅಸತ್ಯಾಚರಣೆ ಮಾಡದವನಿಗೆ **[ಕತ್]** ಯಾವಾಗ **[ಕ್ಷೇ]** ಭೂ ಸಂಬಂಧೀ ರಾಜ್ಯದಲ್ಲಿ **[ನೃಘ್ನೇ]** ಶತ್ರುನಾಶಕನಿಗೆ **[ರುದ್ರಾಯ]** ರೋದನಗೊಳಿಸುವವನಿಗೆ **[ಕತ್]** ಯಾವಾಗ ಹೇಳು.

**ಭಾವಾರ್ಥ:-** ರಾಜ್ಯ ನಡೆಸುವ ರಾಜಾದಿಗಳಿಗೆ ಅಧ್ಯಾಪಕೋಪದೇಶಕರು ಹೀಗೆ ಉಪದೇಶಿಸಬೇಕು. ನೀವು ಬುದ್ಧಿವಂತಿಕೆಯ ಕೆಲಸ ಮಾಡುವವರು ಯಾವಾಗ ಆಗುತ್ತೀರೋ, ಬಲಿಷ್ಠರೂ, ಶುಭಕರ್ಮ ಮಾಡುವವರೂ ದುಷ್ಟಘಾತುಕರೂ ಯಾವಾಗ ಆಗುವಿರೋ, ಆಗ ಶುಭಾಚರಣೆ ಮಾಡಲು ಮತ್ತು ದುಷ್ಟ ಜನರನ್ನು ತ್ಯಜಿಸಲು ವಿಳಂಬ ಮಾಡಬೇಡಿರಿ.

ಶಿಷ್ಯ ಪರೀಕ್ಷಾ ವಿಷಯವಿಲ್ಲಿ ಹೇಳಿದೆ.

**ಕಥಾ ಮಹೇ ಪುಷ್ಟಿಂಭರಾಯ ಪೂಷ್ಣೇ ಕದ್ರುದ್ರಾಯ ಸುಮಖಾಯ ಹವಿರ್ದೇ ।**
**ಕದ್ವಿಷ್ಣವ ಉರುಗಾಯಾಯ ರೇತೋ ಬ್ರವಃ ಕದಗ್ನೇ ಶರವೇ ಬೃಹತ್ಯೈ ॥೭॥**

**ಪದಾರ್ಥ:-** **[ಅಗ್ನೇ]** ವಿದ್ವಾಂಸರೇ! ನೀವು **[ರೇತಃ]** ನೀರಿನಂತೆ ಕೋಮಲ ಚಿತ್ತರಾಗಿ **[ಮಹೇ]** ಹಿರಿದಾದ **[ಪುಷ್ಟಿಂಭರಾಯ]** ಪುಷ್ಟಿಗೊಳಿಸುವವನಿಗೆ **[ಪೂಷ್ಣೇ]** ಪೋಷಣೆ ಮಾಡುವವನಿಗೆ **[ಕಥಾ]** ಯಾವ ರೀತಿಯಿಂದ **[ಬ್ರವಃ]** ಹೇಳುವಿರಿ? **[ಸುಮಖಾಯ]** ಉತ್ತಮ ಯಜ್ಞಮಾಡುವವನಿಗೆ **[ಹವಿರ್ದೇ]** ಯೋಗ್ಯ ಹವಿಸ್ಸುಗಳನ್ನು ಕೊಡುವವರಿಗೆ **[ರುದ್ರಾಯ]** ಶತ್ರುಗಳಲ್ಲಿ ಪ್ರಬಲನಾದವನಿಗೆ **[ಕತ್]** ಯಾವಾಗ ಹೇಳುವಿರಿ? **[ಉರುಗಾಯಾಯ]** ಬಹು ಪ್ರಶಂಸೆ ಪಡೆದವನಿಗೆ **[ವಿಷ್ಣವೇ]** ವ್ಯಾಪಕನಾದವನಿಗೆ **[ಕತ್]** ಯಾವಾಗ ಹೇಳುವಿರಿ? **[ಶರವೇ]** ದುಷ್ಟನಾಶಕವಾದ **[ಬೃಹತ್ಯೈ]** ಸೇನೆಗೆ **[ಕತ್]** ಯಾವಾಗ ಹೇಳುವಿರಿ?

**ಭಾವಾರ್ಥ:-** ಅಧ್ಯಾಪಕರು ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಟ್ಟು ಪ್ರತಿವಾರ, ಪ್ರತಿ ಪಕ್ಷ, ಪ್ರತಿ ಮಾಸ ಪ್ರತಿ ಆರು ತಿಂಗಳಿಗೆ ಪ್ರತಿವರ್ಷ ಪರೀಕ್ಷೆ ಮಾಡಬೇಕು. ಅದರಿಂದ ಎಲ್ಲಾ ಶಿಷ್ಯರೂ ಭ್ರಮರಹಿತ ಜ್ಞಾನಯುಕ್ತರಾಗುವರು. ಶರೀರಬಲ, ಆತ್ಮ ಬಲ ಪಡೆದು ಧಾರ್ಮಿಕರಾಗಿ ನೂರುವರ್ಷ ಬಾಳುವರು. ನ್ಯಾಯವಾಗಿ ರಾಜ್ಯಪಾಲನೆ ಮಾಡುವರು.

ರಾಜ ವಿಷಯವಿಲ್ಲಿದೆ.

**ಕಥಾ ಶರ್ಧಾಯ ಮರುತಾಮೃತಾಯ ಕಥಾ ಸೂರೇ ಬೃಹತೇ ಪೃಚ್ಛ್ಯಮಾನಃ ।**
**ಪ್ರತಿ ಬ್ರವೋಽದಿತಯೇ ತುರಾಯ ಸಾಧಾ ದಿವೋ ಜಾತವೇದಶ್ಚಿಕಿತ್ವಾನ್ ॥೮॥**

**ಪದಾರ್ಥ:-** [**ಜಾತವೇದಃ**] ಜ್ಞಾನವಂತನು [**ಸೂರೇ**] ಸೂರ್ಯನಂತಿರುವ ಸೇನೆಯಲ್ಲಿ [**ಪೃಚ್ಛ್ಯಮಾನಃ**] ಪ್ರಶ್ನಿಸಲ್ಪಡುವ ನೀನು [**ಮರುತಾಂ**] ಪವನಗಳ ರೀತಿಯಲ್ಲಿ [**ಋತಾಯ**] ಸತ್ಯಕ್ಕಾಗಿ [**ಬೃಹತೇ**] ಬೆಳೆಯುವುದಕ್ಕೆ [**ಶರ್ಧಾಯ**] ಬಲಕ್ಕೆ [**ಕಥಾ**] ಯಾವ ರೀತಿಯಿಂದ [**ಬ್ರವಃ**] ವಿವರಿಸುವಿ? [**ತುರಾಯ**] ಶೀಘ್ರತೆಗೆ [**ಅದಿತಯೇ**] ಅವಿನಾಶೀ ಅಂತರಿಕ್ಷಕ್ಕೆ [**ಕಥಾ**] ಹೇಗೆ ಹೇಳುವೆ? [**ಪ್ರತಿ**] ನಿಶ್ಚಿತ ಹೇಳು. [**ಚಿಕಿತ್ವಾನ್**] ಜ್ಞಾನವಂತನಾಗಿ [**ದಿವಃ**] ಬೆಳಕನ್ನು [**ಸಾದ**] ಸಾಧಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜರು ವಾಯುವಿನಂತೆ ತನ್ನ ಬಲವನ್ನು ಹೆಚ್ಚಿಸಿಕೊಳ್ಳಬೇಕು. ಸೈನಿಕರನ್ನು ತರಪೇತಿಗೊಳಿಸಬೇಕು, ಸತ್ಕರಿಸಬೇಕು, ಪರೀಕ್ಷೆ ಮಾಡಬೇಕು. ಪ್ರಶ್ನೆ ಉತ್ತರಗಳ ಮೂಲಕ ತನ್ನ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಅಂದರೆ ಅವರು ಸೂರ್ಯನಂತೆ ಸಂಪತ್ತನ್ನು ಬೆಳಗಿಸಬಹುದು.

ಮನುಷ್ಯರು ಬ್ರಹ್ಮಚರ್ಯಾದಿಗಳಿಂದ ಪುರುಷಾರ್ಥ ಸಾಧಕರಾಗಬೇಕು ಎಂದಿಲ್ಲಿ ತಿಳಿಸಲಾಗಿದೆ.

**ಋತೇನ ಋತಂ ನಿಯತಮೀಳ ಆ ಗೋ-ರಾಮಾ ಸಚಾ ಮಧುಮತ್ ಪಕ್ವಮಗ್ನೇ ।**
**ಕೃಷ್ಣಾ ಸತೀ ರುಶತಾ ಧಾಸಿನೈಷಾ ಜಾಮರ್ಯೇಣ ಪಯಸಾ ಪೀಪಾಯ ॥೯॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ತೇಜಸ್ವಿಗಳೇ! [**ಗೋಃ**] ಭೂಮಿಯ ಅಥವಾ ವಾಣಿಯ [**ಋತೇನ**] ಸತ್ಯದಿಂದ [**ನಿಯತಂ**] ನಿಯಮ ಪೂರ್ವಕ [**ಋತಂ**] ಸತ್ಯವನ್ನು [**ಈಳೇ**] ಸ್ತುತಿಸುವೆನು. [**ಸಚಾ**] ಸಂದರ್ಭಾನುಸಾರ [**ಮಧುಮತ್**] ಮಾಧುರ್ಯವಿರುವ [**ಆಮಾ**] ಹಸಿಯದಾದ ಹಾಗೂ [**ಪಕ್ವಂ**] ಬೆಂದಿರುವ ಪದಾರ್ಥಗಳನ್ನು [**ಆ, ಪೀಪಾಯ**] ವೃದ್ಧಿಪಡಿಸು. [**ಏಷಾ**] ಈ [**ಕೃಷ್ಣಾ**] ಕಪ್ಪುಬಣ್ಣದ [**ಸತೀ**] ಸಜ್ಜನ ಪತಿವ್ರತೆಯು [**ರುಶತಾ**] ರೂಪದಿಂದ [**ಜಾಮರ್ಯೇಣ**] ಜೀವನಕ್ಕೆ ನಿಮಿತ್ತವಾದ [**ಪಯಸಾ**] ಹಾಲಿನಿಂದ [**ಧಾಸಿನಾ**] ಅನ್ನದಿಂದ ಬೆಳೆಯುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ನಿಯಮಪೂರ್ವಕ ವಿದ್ಯೆ-ಪ್ರಶಿಕ್ಷಣಗಳನ್ನು ಪಡೆಯಬೇಕು. ಧರ್ಮಪೂರ್ವಕ ವ್ಯವಹಾರವನ್ನು ಮಾಡಬೇಕು ಜ್ಞಾನಪೂರ್ವಕ ಕರ್ಮಗಳನ್ನು ಮಾಡಬೇಕು. ಅದರಿಂದ ಜಿತೇಂದ್ರಿಯರೂ ನಿಯತಾಹಾರ-ವಿಹಾರಿಗಳೂ ಆಗಿ ಪುರುಷಾರ್ಥವನ್ನು ಸಾಧಿಸಿಕೊಳ್ಳಬಹುದು. ಪ್ರೀತಿಯ ಸ್ತ್ರೀ-ಪುರುಷರಂತೆ ಆನಂದವನ್ನನುಭವಿಸುತ್ತ ಏಳಿಗೆ ಹೊಂದಬಹುದು.

ಪುರುಷಾರ್ಥಕರ್ತವ್ಯವನ್ನಿಲ್ಲಿ ಹೇಳಿದೆ.

**ಋತೇನ ಹಿ ಷ್ಮಾ ವೃಷಭಶ್ಚಿದಕ್ತಃ ಪುಮಾँ ಅಗ್ನಿಃ ಪಯಸಾ ಪೃಷ್ಠ್ಯೇನ ।**
**ಅಸ್ಪಂದಮಾನೋ ಅಚರದ್ವಯೋಧಾ ವೃಷಾ ಶುಕ್ರಂ ದುದುಹೇ ಪೃಶ್ನಿರೂಧಃ ॥೧೦॥**

**ಪದಾರ್ಥ:-** [ಹಿ] ಯಾವ ಕಾರಣದಿಂದ ನೀನು **[ಋತೇನ]** ಸತ್ಯ ವ್ಯವಹಾರದಿಂದ **[ವೃಷಭಃ]** ಬಲಿಷ್ಠನೂ **[ಅಕ್ತಃ]** ಉತ್ತಮಗುಣ ಸಂಪನ್ನನೂ ಆಗಿ **[ಪಯಸಾ]** ರಾತ್ರಿಯೊಂದಿಗೆ **[ಅಗ್ನಿಃ]** ಅಗ್ನಿಯಂತೆ **[ಪೃಷ್ಠ್ಯೇನ]** ನಂತರ ಉಂಟಾಗುವ ದಿನದಲ್ಲಿ **[ಪುಮಾನ್]** ಪುರುಷಾರ್ಥೀ **[ಅಸ್ಪಂದಮಾನಃ]** ಕಿಂಚಿತ್ ಚಲಿಸುವವನಾಗಿ **[ವಯೋಧಾಃ]** ಜೀವನವನ್ನು ಧರಿಸಿದವನಾಗಿ **[ವೃಷಾ]** ಸುಖದ ಮಳೆಗರೆಯುತ್ತ **[ಅಚರತ್]** ವಿಹರಿಸುವೆಯೋ **[ಪೃಶ್ನಿಃ]** ಅಂತರಿಕ್ಷ **[ಊಧಃ]** ಮತ್ತು ರಾತ್ರಿಯಂತೆ **[ಚಿತ್]** ಅದೂ **[ಶುಕ್ರಂ]** ವೀರ್ಯವನ್ನು **[ದುದುಹೇ]** **[ಸ್ಮ]** ಪೂರ್ಣವಾಗಿಸುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಭೂಮಿಯ ಅರ್ಧಭಾಗದಲ್ಲಿ ಮಿಂಚು ಸೂರ್ಯನ ರೂಪದಲ್ಲಿ ಕಂಗೊಳಿಸುತ್ತದೆ. ಇನ್ನರ್ಧಭಾಗದಲ್ಲಿ ರಾತ್ರಿಯ ಸಮಯದಲ್ಲಿ ಕತ್ತಲಾಗಿ ಚಲಿಸುತ್ತದೆ. ಅದೇರೀತಿ ಜಾಗರಣ ಶಯನ ನಿಯಮದಂತೆ ಪುರುಷಾರ್ಥಕ್ಕಾಗಿ ವಿರ್ಯವನ್ನು/ಸಾಮರ್ಥ್ಯವನ್ನು ಬೆಳೆಸಿಕೊಳ್ಳುವವರಾಗಿರಿ. ನೂರು ವರ್ಷಗಳವರೆಗೂ ಆನಂದದಿಂದ ಬದುಕಿರಿ.

ರಾಜಾದಿ ಕ್ಷತ್ರಿಯರಿಗೆ ಇಲ್ಲಿ ಉಪದೇಶಿಸಲಾಗಿದೆ.

**ಋತೇನಾದ್ರಿಂ ವ್ಯಸನ್ ಭಿದಂತಃ ಸಮಂಗಿರಸೋ ನವಂತ ಗೋಭಿಃ ।**
**ಶುನಂ ನರಃ ಪರಿ ಷದನ್ನುಷಾಸ-ಮಾವಿಃ ಸ್ವರಭವಜ್ಜಾತೇ ಅಗ್ನೌ ॥೧೧॥**

**ಪದಾರ್ಥ:-** **[ನರಃ]** ಮನುಷ್ಯರೇ! **[ಗೋಭಿಃ]** ಕಿರಣಗಳಂತಿರುವ ವಾಣಿಯಿಂದ **[ಅಂಗಿರಸಃ]** ಗಾಳಿಯು **[ಋತೇನ]** ನೀರಿನೊಂದಿಗೆ ಸೇರಿದ **[ಅದ್ರಿಂ]** ಮೇಘವನ್ನು **[ಸಂ, ಭಿದಂತಃ]** ಭೇದಿಸುವನು. **[ವಿ, ಅಸನ್]** ವಿವಿಧ ರೀತಿಯಿಂದ ಎರಚುವನು. **[ಉಷಸಂ]** ಉಷಃಕಾಲವನ್ನು **[ಪರಿ, ಸದನ್]** ಪಡೆಯುವನು. **[ಜಾತೇ]** ಉತ್ಪನ್ನವಾದ **[ಅಗ್ನೌ]** ಅಗ್ನಿಯಲ್ಲಿ **[ಸ್ವಃ]** ಸೂರ್ಯನು **[ಆವಿಃ]** **[ಅಭವತ್]** ಪ್ರಕಟನಾಗುವನು. **[ಶುನಂ]** ಸುಖವನ್ನು **[ನವಂತ]** ಪ್ರಶಂಸೆಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜಾದಿ ವೀರಪುರುಷರು ಕ್ಷತ್ರಿಯರು ಹೇಗೆ ಗಾಳಿಯು ಮೋಡಗಳನ್ನು ಅತ್ತಿತ್ತ ಬಿತ್ತರಿಸುತ್ತದೆಯೋ ಹಾಗೆಯೇ ಭೇದಿಸಿ ಭೂಮಿಗೆ ಮಳೆಗರೆಯುತ್ತದೆಯೇ, ಸುಖಕೊಡುತ್ತದೆಯೋ, ಮಿಂಚು ಮಥಿಸಿ ಸೂರ್ಯನನ್ನು ಉತ್ಪಾದಿಸುತ್ತದೆಯೋ ಹಾಗೆ ನೀವು ದುಷ್ಟರನ್ನು ದಮನಿಸಿ ಎಲ್ಲೆಡೆ ನ್ಯಾಯವೆಂಬ ಬೆಳಕು ಚೆಲ್ಲಿ ಬುದ್ಧಿಯನ್ನು ಮಥಿಸಿ ವಿದ್ಯೆಯೆಂಬ ಮಳೆಗರೆದು ಸೂರ್ಯನಂತೆ ಬೆಳಗುತ್ತ ಅತಿಶಯ ಸುಖಪಡೆಯಿರಿ.

ಸಹವಾಸದ ದೋಷ-ಗುಣ ಹಾಗೂ ರಕ್ಷಣಾ ವಿಷಯವಿಲ್ಲಿ ಹೇಳಿದೆ.

**ಋತೇನ ದೇವೀರಮೃತಾ ಅಮೃಕ್ತಾ ಅರ್ಣೋಭಿರಾಪೋ ಮಧುಮದ್ಭಿರಗ್ನೇ ।**
**ವಾಜೀ ನ ಸರ್ಗೇಷು ಪ್ರಸ್ತುಭಾನಃ ಪ್ರ ಸದಮಿತ್ ಸ್ರವಿತವೇ ದಧನ್ಯುಃ ॥೧೨॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಋತೇನ]** ಸತ್ಯದಿಂದ **[ಮಧುಮದ್ಭಿಃ]** ಮಧುರಾದಿ ಗುಣಗಳಿಂದ **[ಅರ್ಣೋಭಿಃ]** ನೀರಿನೊಂದಿಗೆ **[ಅಮೃಕ್ತಾಃ]** ಅಶುದ್ಧವಾದ **[ದೇವೀಃ]** ಶ್ರೇಷ್ಠವಾದ **[ಅಮೃತಾಃ]** ನಾಶರಹಿತ **[ಆಪಾ]** ಪ್ರಾಣ ವಾಯುವನ್ನು **[ಸ್ರವಿತವೇ]** ಚಲಿಸಲು **[ಸದಂ]** ಏಳು ವಸ್ತುಗಳನ್ನು **[ಪ್ರ, ದದನ್ಯಃ]** ಧಾರಣ ಮಾಡುವ ರೀತಿಯಲ್ಲಿ **[ಇತ್]** ಅದನ್ನು **[ಸರ್ಗೇಷು]** ಮಾಡಿದ ಕೆಲಸಗಳಲ್ಲಿ **[ವಾಜೀ]** ಅನ್ನವಂತನಿಗೆ **[ನ]** ಸದೃಶವಾಗಿ **[ಪ್ರಸ್ತುಭಾನಃ]** ಧಾರಣ ಮಾಡುತ್ತ ಪ್ರಕಟನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಹೇಗೆ ಶುದ್ಧ ಜಲವು ಸುಖಕಾರಕವೋ ಅಶುದ್ಧ ಜಲವು ದುಃಖಕಾರಕವೋ ಹಾಗೆಯೇ ಉತ್ತಮ ಗುಣಗಳು ಆನಂದದಾಯಕವೂ ದೋಷಗಳು ದುಃಖದಾಯಕಗಳೂ ಆಗಿರುತ್ತವೆ. ಸಂಪತ್ತಿರುವ ಧಾರ್ಮಿಕನು ಹೇಗೆ ಹಸಿದವನ ಹಸಿವನ್ನು ನೀಗಿಸುವನೋ ಹಾಗೆಯೇ ಸಜ್ಜನರು ಎಲ್ಲರ ರಕ್ಷಣೆ ಮಾಡುವರು.

ಬುದ್ಧಿವಂತಿಕೆಯ ವಿಷಯವಿಲ್ಲದೆ.

**ಮಾ ಕಸ್ಯ ಯಕ್ಷಂ ಸದಮಿದ್ಧುರೋ ಗಾ ಮಾ ವೇಶಸ್ಯ ಪ್ರಮಿನತೋ ಮಾಪೇಃ ।**
**ಮಾ ಭ್ರಾತುರಗ್ನೇ ಅನೃಜೋರ್ಋಣಂ ವೇ-ರ್ಮಾ ಸಖ್ಯುರ್ದಕ್ಷಂ ರಿಪೋರ್ಭುಜೇಮ ॥೧೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಪ್ರಕಾಶಮಾನನಾದವನೇ! **[ಅನೃಜೋಃ]** ಕುಟಿಲನ **[ಕಸ್ಯ]** ಯಾವನ **[ಪ್ರಿಮಿನತಃ]** ಹಿಂಸಕನ **[ವೇಶಸ್ಯ]** ಪ್ರವೇಶದ **[ಹುರಃ]** ಕುಟಿಲ ಕಾರ್ಯಕ್ಕೆ ಸಂಬಂಧಿಸಿದ **[ಸದಂ]** ವಸ್ತುವನ್ನು **[ಮಾ, ಗಾಃ]** ಪಡೆಯಬೇಡ. **[ಆಪೇಃ]** ಪಡೆದಿರುವವನ **[ಯಜ್ಞಂ]** ಪಡೆಯಲು ಯೋಗ್ಯವಾದ ವಸ್ತುವನ್ನು **[ಮಾ]** ಪಡೆಯಬೇಡ. **[ಭ್ರಾತುಃ]** ಬಂಧುವಿನ **[ಮಾ]** ವಸ್ತುವನ್ನೂ ಪಡೆಯದಿರು. **[ಸಖ್ಯುಃ]** ಸ್ನೇಹಿತನ **[ದಕ್ಷಂ]** ಬಲವನ್ನು **[ಮಾ]** **[ವೇಃ]** ಪಡೆಯಬೇಡ. **[ರಿಪೋಃ]** ಶತ್ರುವಿನ **[ಋಣಂ]** ಋಣವನ್ನೂ **[ಮಾ]** ಉಳಿಸಿಕೊಳ್ಳಬೇಡ. **[ಇತ್]** ಅಂತಹ **[ಭುಜೇಮ]** ವ್ಯವಹಾರಮಾಡೋಣ.

**ಭಾವಾರ್ಥ:-** ಯಾರು ಅನ್ಯಾಯದಿಂದ ಯಾವನ ವಸ್ತುವನ್ನೂ ಸ್ವೀಕರಿಸುವುದಿಲ್ಲವೋ, ಕಪಟ, ಹಿಂಸೆ ಮಾಡುವವನ ಸಹವಾಸ ಮಾಡುವುದಿಲ್ಲವೋ, ನ್ಯಾಯಮಾರ್ಗದಿಂದ ಪ್ರಾಪ್ತವಾದ ಧನವನ್ನು ವ್ಯರ್ಥವಾಗಿ ಖರ್ಚು ಮಾಡುವುದಿಲ್ಲವೋ, ದುಷ್ಟ ಬಂಧುವಿನ ಸಂಗವನ್ನು ಮಾಡುವುದಿಲ್ಲವೋ ಮತ್ತು ಶತ್ರುವನ್ನು ನಂಬುವುದಿಲ್ಲವೋ ಅವನೇ ಬುದ್ಧಿವಂತನೆಂದು ಭಾವಿಸಬೇಕು.

ರಾಜ್ಯ ಪಾಲನೆಯ ವಿಷಯವಿಲ್ಲಿ ಹೇಳಿದೆ.

**ರಕ್ಷಾ ಣೋ ಅಗ್ನೇ ತವ ರಕ್ಷಣೇಭೀ ರಾರಕ್ಷಾಣಃ ಸುಮಖ ಪ್ರೀಣಾನಃ ।**
**ಪ್ರತಿ ಷ್ಫುರ ವಿ ರುಜ ವೀಡ್ವಂಹೋ ಜಹಿ ರಕ್ಷೋ ಮಹಿ ಚಿದ್ವಾವೃಧಾನಮ್ ॥೧೪॥**

**ಪದಾರ್ಥ:-** **[ಸುಮಖ]** ನ್ಯಾಯಯುತ ವ್ಯವಹಾರಗಳ ರಕ್ಷಕನೇ! **[ಅಗ್ನೇ]** ಅಗ್ನಿಯಂತಿರುವ ರಾಜನೇ! **[ನಃ]** ನಮ್ಮನ್ನು **[ರಕ್ಷ]** ರಕ್ಷಿಸು. **[ಮಹಿ]** ದೊಡ್ಡದಾಗಿ **[ವಾವೃಧಾನಂ]** ವೃದ್ಧಿ ಹೊಂದಿದವನನ್ನು **[ರಾರಕ್ಷಾಣಃ]** ರಕ್ಷಿಸುವವನಾಗಿ **[ಪ್ರೀಣಾನಃ]** ಸಂತುಷ್ಟಿಗೊಳಿಸುವವನಾಗಿ **[ಪ್ರತಿ, ಷ್ಫುರ]** ಪುರುಷಾರ್ಥವನ್ನು ಸಾಧಿಸು. **[ವೀಳು]** ದೃಢವಾಗಿ **[ವಿ, ರುಜ]** ಭಂಗಗೊಳಿಸು **[ತವ ಚಿತ್]** ನಿನ್ನದನ್ನೂ **[ರಕ್ಷಣೇಭಿಃ]** ರಕ್ಷಣಾದಿಗಳಿಂದ ನಾವು ಸುಖಿಗಳಾಗುವೆವು.

**ಭಾವಾರ್ಥ:-** ರಾಜರು ಕೀರ್ತಿಭಾಜರು ಏಕೆಂದರೆ, ದುಷ್ಟರ ದುಷ್ಟತನವನ್ನು ನಿವಾರಿಸುವರು. ಶ್ರೇಷ್ಠರ ಶ್ರೇಷ್ಠತನವನ್ನು ಹೆಚ್ಚಿಸುವರು. ತಂದೆಗೆ ಸಮನಾಗಿ ಪ್ರಜೆಗಳ ರಕ್ಷಣೆ ಮಾಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏಭಿರ್ಭವ ಸುಮನಾ ಅಗ್ನೇ ಅರ್ಕೈ-ರಿಮಾನ್ ತ್ಸ್ಪೃಶ ಮನ್ಮಭಿಃ ಶೂರ ವಾಜಾನ್ ।**
**ಉತ ಬ್ರಹ್ಮಾಣ್ಯಂಗಿರೋ ಜುಷಸ್ವ ಸಂ ತೇ ಶಸ್ತಿ ರ್ದೇವವಾತಾ ಜರೇತ ॥೧೫॥**

**ಪದಾರ್ಥ:-** [ಅಂಗಿರಃ] ಪ್ರಾಣದಂತಿರುವ [ಶೂರ] ವೀರನಾದ [ಅಗ್ನೇ] ವಿದ್ಯಾವಂತ ರಾಜನೇ! ನೀನು [ಏಭಿಃ] ಈ ಧಾರ್ಮಿಕನೂ ರಕ್ಷಕನೂ ಆದ [ಅರ್ಕೈಃ] ಸತ್ಕಾರಾರ್ಹ [ಮನ್ಮಭಿಃ] ವಿದ್ವಾಂಸರೊಂದಿಗೆ [ಸುಮನಾಃ] ಉತ್ತಮ ಮನಸ್ಸುಳ್ಳವನು [ಭವ] ಆಗು. [ಇಮಾನ್] ಈ [ವಾಜಾನ್] ಉತ್ತಮ ಗುಣ-ಕರ್ಮ-ಸ್ವಭಾವದವರನ್ನು [ಸ್ಪೃಶ] ಗ್ರಹಣಮಾಡು [ಉತ] ಮತ್ತು [ಬ್ರಹ್ಮಾಣಿ] ದೊಡ್ಡ-ದೊಡ್ಡ ಸಂಪತ್ತನ್ನು [ಸಂ ಜುಷಸ್ವ] ಚೆನ್ನಾಗಿ ಅನುಭವಿಸು. [ತೇ] ನಿನ್ನ [ದೇವವಾತಾ] ವಿದ್ಯಾವಂತರಿಂದ ಮಾಡಲಾದ [ಶಸ್ತಿಃ] ಪ್ರಶಂಸೆಯನ್ನು [ಜರೇತ] ಅಧಿಕಗೊಳಿಸಿಕೋ.

**ಭಾವಾರ್ಥ:-** ರಾಜನೇ! ನೀನು ವಿದ್ವಾಂಸರ ಸಂಗವನ್ನು ನಿರಂತರ ಮಾಡು ಮತ್ತು ಅವರ ಸಲಹೆಯಂತೆ ನ್ಯಾಯಪೂರ್ವಕ ರಾಜ್ಯಶಾಸನ ಮಾಡು. ಪ್ರಶಂಸೆಯನ್ನು ಪಡೆ.

ಪ್ರಜೆಗಳ ವಿಷಯವಿಲ್ಲಿ ಹೇಳಿದೆ.

**ಏತಾ ವಿಶ್ವಾ ವಿದುಷೇ ತುಭ್ಯಂ ವೇಧೋ ನೀಥಾನ್ಯಗ್ನೇ ನಿಣ್ಯಾ ವಚಾಂಸಿ ।**
**ನಿವಚನಾ ಕವಯೇ ಕಾವ್ಯಾ-ನ್ಯಶಂಸಿಷಂ ಮತಿಭಿರ್ವಿಪ್ರ ಉಕ್ಥೈಃ ॥೧೬॥**

**ಪದಾರ್ಥ:-** [ವೇಧಃ] ಬುದ್ಧಿವಂತನಾದ [ಅಗ್ನೇ] ರಾಜನೇ! [ವಿಪ್ರಃ] ಮೇಧಾವಿಯು [ಉಕ್ಥೈಃ] ಪ್ರಶಂಸಾರ್ಹವಾದ [ಮತಿಭಿಃ] ವಿದ್ವಾಂಸರೊಂದಿಗೆ [ಕಾವ್ಯಾನಿ] ಕವಿಕರ್ಮಗಳನ್ನು [ಅಶಂಸಿಷಂ] ಪ್ರಶಂಸಿಸುವವನಾಗು. [ವಿಶ್ವಾ] ಸಮಗ್ರವಾದ [ಏತಾ] ಈ [ನಿಣ್ಯಾ] ನಿರ್ಣಯಿಸಲಾದ [ನಿವಚನಾ] ಅರ್ಥಪೂರ್ಣವಾದ [ವಚಾಂಸಿ] ಮಾತುಗಳನ್ನು [ವಿದುಷೇ] ವಿದ್ಯಾವಂತರಿಗೆ [ಕವಯೇ] ಬುದ್ಧಿವಂತರಿಗೆ [ತುಭ್ಯಂ] ನಿನಗೆ [ನೀಥಾನಿ] ಲಭಿಸಲಿ.

**ಭಾವಾರ್ಥ:-** ಧಾರ್ಮಿಕರು, ವಿದ್ಯಾವಂತರೂ ಮಾಡಿರುವ ಪ್ರಶಂಸೆಯು ಯಥಾರ್ಥ ಪ್ರಶಂಸೆಯಾಗಿರುತ್ತದೆ. ಯಾರು ಯಥಾರ್ಥವಾದಿ ವಿದ್ವಾಂಸರಾಗಿರುವರೋ ಅಂತಹ ವಿದ್ವಾಂಸರು ಅಂತಹವರನ್ನೇ ಪ್ರಶಂಸಿಸಬೇಕು.

ಈ ಸೂಕ್ತದಲ್ಲಿ ಅಗ್ನಿ, ರಾಜ, ಪ್ರಜೆಗಳ ಕೃತ್ಯದ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೪

ಮಂತ್ರಸಂಖ್ಯೆ ೧೫ । ವಾಮದೇವ ಋಷಿಃ । ಅಗ್ನೀರಕ್ಷೋಹಾ ದೇವತಾ । ೧, ೨, ೪, ೫, ೮ ಭುರಿಕ್ಪಂಕ್ತಿಃ ಛಂದಃ, ೯ ಸ್ವರಾಟ್ಪಂಕ್ತಿಃ, ೧೨ ನಿಚೃತ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೩, ೧೦, ೧೧, ೧೫ ನಿಚೃತ್ತ್ರಿಷ್ಟುಪ್, ೬ ವಿರಾಟ್ತ್ರಿಷ್ಟುಪ್, ೭, ೧೩ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೧೪ ಸ್ವರಾಡ್ಬೃಹತೀ ಛಂದಃ । ಮಧ್ಯಮಃ ಸ್ವರಃ.

ರಾಜನ ಬಗ್ಗೆ ಸೇನಾಪತಿ ಕರ್ತವ್ಯವನ್ನಿಲ್ಲಿ ಹೇಳಿದೆ.

**ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾँ ಇಭೇನ ।**
**ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥೧॥**

**ಪದಾರ್ಥ:-** [ರಾಜೇವ] ರಾಜನಂತೆಯೇ [ಅಮವನ್] ಬಲವಂತನು [ಇಭೇನ] ಆನೆಯಿಂದ [ಯಾಹಿ] ಪ್ರಾಪ್ತನಾಗು. [ಪ್ರಸಿತಿಂ] ದೃಢವಾಗಿ ಬಂಧಿಸಲ್ಪಟ್ಟ [ಪೃಥ್ವೀಂ] [ನ] ಭೂಮಿಗೆ ಸದೃಶ [ಪಾಜಃ] ಬಲವನ್ನು [ಕೃಣುಷ್ವ] ಗಳಿಸು. [ಪ್ರಸಿತಿಂ] ಬಂಧನ ಮತ್ತು [ತೃಷ್ವೀಂ] ತೃಷಿತನಿಗೆ [ಅನುದ್ರೂಣಾನಃ] ಅನುಕೂಲವಾಗಿ ಆತುರ ಪಡಿಸುವವನು. [ಅಸ್ತಾ] ದೂರಕ್ಕೆಸೆಯುವವನು [ಅಸಿ] ಆಗಿರುವೆ. [ತಪಿಷ್ಠೈಃ] ಅತಿಶಯ ಸಂತಾಪ ನೀಡುವ ಶಸ್ತ್ರಾಸ್ತ್ರಗಳಿಂದ [ರಕ್ಷಸಃ] ದುಷ್ಟರನ್ನು [ವಿಧ್ಯ] ಸಾಯಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜನಿಗೆ ಸಂಬಂಧಿಸಿದ ಪುರುಷರೇ! ನೀವು ಭೂಮಿಯಂತೆ ದೃಢವಾದ ಬಲಗಳಿಸಿರಿ. ರಾಜನಂತೆ ನ್ಯಾಯಾಧೀಶರಾಗಿರಿ. ಬಾಯಾರಿದ ಜಿಂಕೆಯನ್ನಟ್ಟಿಸಿಕೊಂಡು ಹೋಗುವ ತೋಳದಂತೆ ದುಷ್ಟ-ದರೋಡೆಕೋರರನ್ನು ಅಟ್ಟಿಸಿಕೊಂಡು ಹೋಗಿರಿ. ಅವರನ್ನು ನಾಶಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತವ ಭ್ರಮಾಸ ಆಶುಯಾ ಪತಂ- ತ್ಯನು ಸ್ಪೃಶ ಧೃಷತಾ ಶೋಶುಚಾನಃ ।**
**ತಪೂಂಷ್ಯಗ್ನೇ ಜುಹ್ವಾ ಪತಂಗಾ-ನಸಂದಿತೋ ವಿ ಸೃಜ ವಿಷ್ವಗುಲ್ಕಾಃ ॥೨॥**

**ಪದಾರ್ಥ:-** [ಅಗ್ನೇ] ಅಗ್ನಿಯಂತಿರುವವರೇ! [ತವ] ನಿನ್ನ [ಆಶುಯಾ] ಶೀಘ್ರಗತಿಯ [ಭ್ರಮಾಸಃ] ಭ್ರಮಣವು [ಪತಂತಿ] ಪತನವಾಗುವವರನ್ನು [ಧೃಷತಾ] ಬಲಿಷ್ಠ ಸೇನೆಯೊಂದಿಗೆ [ಶೋಶುಚಾನಃ] ಅತಿಪವಿತ್ರನಾಗಿ [ಅನು, ಸ್ಪೃಶ] ಸ್ಪರ್ಶ ಮಾಡು. [ಜುಹ್ವಾ] ಹೋಮ ಸಾಧನದಿಂದ [ತಪೂಂಷಿ] ಕಾಯಿಸಿದ ಪದಾರ್ಥಗಳಂತೆ [ಪತಂಗಾನ್] ಅಗ್ನಿಕಿರಣಗಳಂತಿರುವ ಕುದುರೆಗಳನ್ನು ಅನುಕೂಲಕರವಾಗಿ ಸ್ಪರ್ಶ ಮಾಡು. [ಅಸಂದಿತಃ] ಅಖಂಡಿತನಾಗಿ [ಉಲ್ಕಾಃ] ಮಿಂಚಿನುಂಡೆಗಳನ್ನು [ವಿಷ್ವಕ] ಎಲ್ಲರೀತಿಯಿಂದ [ವಿ, ಸೃಜ] ವಿಸರ್ಜಿಸು.

**ಭಾವಾರ್ಥ:-** ರಾಜರು ಸ್ಫೂರ್ತಿವಂತರಾಗಿ ಬೇಗನೇ ತನ್ನ ಕಾರ್ಯವನ್ನು ಮಾಡುವವರಾಗಬೇಕು. ಅಖಂಡಿತ ಬಲವಂತರಾಗಿ ಮಿಂಚಿನಂತಹ ಶಕ್ತಿಯನ್ನು ಬ್ರಹ್ಮಾಸ್ತ್ರದಂತಹ ಅಸ್ತ್ರವನ್ನೂ ಬಳಸಿ ಶತ್ರುಗಳ ಮೇಲೆ ವಿಜಯ ಸಾಧಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ ।**
**ಯೋ ನೋ ದೂರೇ ಅಘಶಂಸೋ ಯೋ ಅಂತ್ಯಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್ ॥೩॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತಿರುವ ರಾಜನೇ! ನೀನು [**ತೂರ್ಣಿತಮಃ**] ಶೀಘ್ರಕಾರಿಯಾಗಿದ್ದು [**ಸ್ಪಶಃ**] ಅತಿಶಯ ಸ್ಪರ್ಶ ಮಾಡುವವರನ್ನು [**ವಿ, ಸೃಜ**] ತ್ಯಾಗಮಾಡು. [**ಅಸ್ಯಾಃ**] ಈ [**ವಿಶಃ**] ಪ್ರಜೆಗಳ [**ಅದಬ್ಧಃ**] ದಮನ ಮಾಡಬೇಡ. [**ಪಾಯುಃ**] ಪಾಲನೆ ಮಾಡುವವನು [**ಪ್ರತಿ, ಭವ**] ಆಗು. [**ಯಃ**] ಯಾವನು [**ಅಘಶಂಸಃ**] ಪಾಪವನ್ನು ಪ್ರಶಂಸಿಸುವವನು [**ನಃ**] ನಮ್ಮ [**ದೂರೇ**] ದೂರದಲ್ಲಿ [**ಯಃ**] ಯಾವನು [**ಅಂತಿ**] ಸಮೀಪದಲ್ಲಿರುವವನು [**ತೇ**] ನಿನಗೆ [**ವ್ಯಥೀ**] ಪೀಡಿಸುವನೋ [**ಮಾಕಿಃ**] [**ಆ, ದಧರ್ಷೀತ್**] ಅವರನ್ನು ಸುಮ್ಮನೆ ಬಿಡಬೇಡ.

**ಭಾವಾರ್ಥ:-** ರಾಜನೇ! ನೀನು ಉತ್ತಮ ಗುಣಗಳನ್ನು ಧಾರಣ ಮಾಡು. ಪ್ರಜಾಪಾಲನೆ ಮಾಡು. ದೂರದಲ್ಲಾಗಲೀ ಸಮೀಪದಲ್ಲಾಗಲೀ ಇರುವಂತಹ ದುಷ್ಟ-ದರೋಡೆಕೋರರ ದಮನ ಮಾಡು. ಅದರಿಂದ ನಿನ್ನ ಎಲ್ಲಾ ಪ್ರಜೆಗಳೂ ಸುಖಿಗಳಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉದಗ್ನೇ ತಿಷ್ಠ ಪ್ರತ್ಯಾತನುಷ್ವ ನ್ಯ (ಅ)ಮಿತ್ರಾಂ ಓಷತಾತ್ತಿಗ್ಮಹೇತೇ ।**
**ಯೋ ನೋ ಅರಾತಿಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಮ್ ॥೪॥**

**ಪದಾರ್ಥ:-** [**ಸಮಿಧಾನ**] ಚೆನ್ನಾಗಿ ಪ್ರಜ್ವಲಿಸುತ್ತಿರುವ [**ಅಗ್ನೇ**] ಅಗ್ನಿಯಂತಿರುವ ರಾಜನೇ! [**ಉತ್, ತಿಷ್ಠ**] ಕಾರ್ಯೋನ್ಮುಖನಾಗು. [**ಆ, ತನುಷ್ವ**] ವಿಸ್ತೃತನಾಗು. [**ಅಮಿತ್ರಾನ್**] ಪ್ರತಿ ಶತ್ರುಗಳನ್ನು [**ನ, ಓಷತಾತ್**] ನಿರಂತರ ದಹಿಸುವವನಾಗು. [**ತಿಗ್ಮ ಹೇತೇ**] ಅತಿಶಯವೃದ್ಧಿ ಹೊಂದಿದವನು [**ಯಃ**] ಯಾವನು [**ನಃ**] ನಮ್ಮ [**ಅರಾತಿಂ**] ಶತ್ರುವನ್ನು [**ನೀಚಾ**] [**ಚಕ್ರೇ**] ಅಧಃಪತನಗೊಳಿಸುವವನು ಅವರಿಗಿಂತ ಎತ್ತರ ಬೆಳೆಯುವನು. [**ತಂ**] ಅವನನ್ನು [**ಶುಷ್ಕಂ**] ನೀರಿಲ್ಲದ ಒಣಗಿದ [**ಅತಸಂ**] [**ನ**] ಬಾವಿಗೆ ಸಮನಾಗಿ [**ದಕ್ಷ**] ದಹಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಸೋಮಾರಿತನವನ್ನು ಬಿಟ್ಟು ಪುರುಷಾರ್ಥವನ್ನು ಸಾಧಿಸಬೇಕು. ಶತ್ರುಗಳನ್ನು ಸಂಹರಿಸಬೇಕು. ಅಪರಾಧಿಗಳನ್ನು ಅಂಧಕೂಪದಂತಿರುವ ಕಾರಾಗೃಹದಲ್ಲಿ ಬಂಧಿಸಬೇಕು. ಕೆಳಮಟ್ಟಕ್ಕಿಳಿಸಬೇಕು. ಯಾರು ಹೀಗೆ ಮಾಡುವರೋ ಅವರನ್ನು ರಾಜನು ಗೌರವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಊರ್ಧ್ವೋ ಭವ ಪ್ರತಿ ವಿಧ್ಯಾಧ್ಯಸ್ಮ-ದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ ।**
**ಅವ ಸ್ಥಿರಾ ತನುಹಿ ಯಾತುಜೂನಾಂ ಜಾಮಿಮಜಾಮಿಂ ಪ್ರ ಮೃಣೀಹಿ ಶತ್ರೂನ್ ॥೫॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ತೇಜಸ್ವಿಯೇ! ನೀನು [**ಅಸ್ಮತ್**] ನಮ್ಮಿಂದ [**ಊರ್ಧ್ವಃ**] ಉನ್ನತನು [**ಅಧಿ**] ಉಪರಿ ಭಾವದಲ್ಲಿರುವವನು [**ಭವ**] ಆಗು. [**ಸ್ಥಿರಾ**] ಸ್ಥಿರಸೇನೆಯ [**ದೈವ್ಯಾನಿ**] ವಿದ್ವಾಂಸರಿಗೆ ಕರ್ಮಗಳನ್ನು [**ತನುಹಿ**] ವಿಸ್ತರಿಸು. [**ಯಾತುಜೂನಾಂ**] ವೇಗವನ್ನು ಪಡೆದ ಪ್ರಾಣಿಗಳ [**ಜಾಮಿಂ**] ಭೋಗವನ್ನು [**ಅಜಾಮಿಂ**] ಅಭೋಗವನ್ನು [**ಆವಿಃ**] ಪ್ರಕಟ [**ಕೃಣುಷ್ವ**] ಗೊಳಿಸು. [**ಶತ್ರೂನ್**] ಶತ್ರುಗಳನ್ನು [**ಪ್ರ, ಅವ, ಮೃಣೀಹಿ**] ಉತ್ತಮ ರೀತಿಯಲ್ಲಿ ನಾಶಗೊಳಿಸು. [**ಪ್ರತಿ, ವಿದ್ಯ**] ಮತ್ತೆ ಮತ್ತೆ ದಮನಿಸು.

**ಭಾವಾರ್ಥ:-** ಯಾವ ಮನುಷ್ಯರು ತನಗಿಂತ ಶ್ರೇಷ್ಠರಾದವರನ್ನು ನೋಡಿ ಪ್ರಸನ್ನಗೊಳ್ಳುವರೋ ಅನುತ ಪ್ಥರನ್ನು ನೋಡಿ ದುಃಖಿತರಾಗುವರೋ, ಭೋಗಯುಕ್ತರನ್ನು ನೋಡಿ ಆನಂದಿಸುವರೋ ಭೋಗರಹಿತರನ್ನು ನೋಡಿ ಮರುಗುವರೋ ಅವರು ರಾಜಕರ್ಮಗಳಲ್ಲಿ ಸ್ಥಿರರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್ ।**
**ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ ವಿ ದುರೋ ಅಭಿ ದ್ಯೌತ್ ॥೬॥**

**ಪದಾರ್ಥ:-** [**ಯವಿಷ್ಠ**] ಯುವಕನೇ! [**ಯಃ**] ಯಾವನು [**ಅರ್ಯ**] ಸ್ವಾಮಿಯು [**ಈವತೇ**] ವಿದ್ಯಾ ವ್ಯಾಪ್ತನಾದ [**ಬ್ರಹ್ಮಣೇ**] ವೇದಬ್ರಹ್ಮನಿಗೆ [**ಗಾತುಂ**] ಪ್ರಶಂಸೆ ಮಾಡಲು [**ಐರತ್**] ಬರುವನೋ, [**ಅಸ್ಮೈ**] ಇವನಿಗೆ [**ವಿಶ್ವಾನಿ**] ಸಮಗ್ರ [**ಸುದಿನಾನಿ**] ಸುಖದಾಯಕ ದಿನಗಳನ್ನು [**ರಾಯಃ**] ಧನವನ್ನೂ [**ದ್ಯುಮ್ನಾನಿ**] ಯಶಸ್ಸನ್ನು [**ದುರಃ**] ಯಶಸ್ಸಿನ ಮಾರ್ಗವನ್ನು [**ಅಭಿ, ವಿ, ದ್ಯೌತ್**] ವಿಶೇಷ ರೀತಿಯಲ್ಲಿ ಎದುರಾಗಿ ಬರುವಂತಾಗಲಿ. [**ಸಃ**] ಅಂತಹ ವಿದ್ಯಾವಂತನು [**ತೇ**] ನಿನ್ನ [**ಸುಮತಿಂ**] ಉತ್ತಮ ಬುದ್ಧಿಯನ್ನು [**ಜಾನಾತಿ**] ತಿಳಿದಿರುವನು.

**ಭಾವಾರ್ಥ:-** ರಾಜನೇ! ಯಾರು ಪ್ರತಿದಿನವೂ ಮಂಗಲಕರ ಆಚರಣೆ ಮಾಡುವರೋ ಯಶಸ್ವಿಗಳೂ, ಪ್ರಜಾಜನರಲ್ಲಿ ಅನುರಕ್ತರೋ, ಶೂರರೋ ರಾಜ ವ್ಯವಹಾರ ಕುಶಲರೋ ಮತ್ತು ನಿನಗೆ ಸದಾ ಪ್ರೇರಕರಾಗಿರುವರೋ ಅವರನ್ನು ಸ್ನೇಹಿತರೆಂದು ತಿಳಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸೇದಗ್ನೇ ಅಸ್ತು ಸುಭಗಃ ಸುದಾನು-ರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।**
**ಪಿಪ್ರೀಷತಿ ಸ್ವ ಆಯುಷಿ ದುರೋಣೇ ವಿಶ್ವೇದಸ್ಮೈ ಸುದಿನಾ ಸಾಸದಿಷ್ಟಿಃ ॥೭॥**

**ಪದಾರ್ಥ:-** [**ಅಗ್ನೇ**] ವಿದ್ಯಾ ಪ್ರಕಾಶಕನಾದ ಸಭಾಸದನೇ! [**ಯಃ**] ಯಾವನು [**ಸುಭಗಃ**] ಉತ್ತಮ ಧನ ಸಂಪನ್ನನು [**ಸುದಾನುಃ**] ದಾನಶೀಲನು [**ಸಃ ಇತ್**] ಅವನೇ ನಿನ್ನ ಸಭಾಸದನು. [**ಅಸ್ತು**] ಆಗಲಿ. [**ಯಃ**] ಯಾವನು [**ಉಕ್ಥೈಃ**] ಸ್ತುತಿಗಳಿಂದ [**ನಿತ್ಯೇನ**] ನಾಶರಹಿತವಾದ [**ಹವಿಷಾ**] ಹವಿಸ್ಸಿನಿಂದ [**ತ್ವಾ**] ನಿನ್ನನ್ನು [**ಪಿಪ್ರೀಷತಿ**] ಸುಶೋಭಿತಗೊಳಿಸಲು ಇಚ್ಛಿಸುವನೋ [**ಅಸ್ಮೈ**] ಇವನಿಗೆ [**ಸ್ವೇ**] ತನ್ನ [**ಆಯುಷಿ**] ಜೀವನದಲ್ಲಿ [**ದುರೋಣೇ**] ಮನೆಯಲ್ಲಿ [**ವಿಶ್ವಾ**] ಸಮಗ್ರವಾದ [**ಸುದಿನಾ**] ಸುಂದರ ದಿನಗಳು ಬರಲಿ. [**ಸಾ**] ಅವಳು [**ಇಷ್ಟಿಃ**] ಯಜ್ಞಕ್ರಿಯೆಯು [**ಇತ್**] ಸುಖದಾಯಕವು [**ಅಸತ್**] ಆಗಲಿ.

**ಭಾವಾರ್ಥ:-** ರಾಜನೇ! ಯಾರು ಪ್ರತಿದಿನವೂ ಪ್ರೇಮಪೂರ್ವಕ ನ್ಯಾಯ - ವಿನಯಗಳಿಂದ ರಾಜ್ಯದ ಏಳಿಗೆಯನ್ನು ಸಾಧಿಸುವರೋ ಮತ್ತು ರಾಜ, ಪ್ರಜೆಗಳಿಗೆ ಯಾವುದೇ ತೊಂದರೆಯಾಗದ ರೀತಿಯಲ್ಲಿ ಮಂಗಲಕರ ಸಮಯವು ಸದಾ ಇರುವಂತೆ ಮಾಡುವರೋ ಅವರು ರಾಜಗೃಹದ ಅಧ್ಯಕ್ಷರಾಗಿರಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ಚಾಮಿ ತೇ ಸುಮತಿಂ ಘೋಷ್ಯರ್ವಾಕ್ ಸಂ ತೇ ವಾವಾತಾ ಜರತಾಮಿಯಂ ಗೀಃ ।**
**ಸ್ವಶ್ವಾಸ್ತ್ವಾ ಸುರಥಾ ಮರ್ಜಯೇಮಾ-ಸ್ಮೇ ಕ್ಷತ್ರಾಣಿ ಧಾರಯೇರನು ದ್ಯೂನ್ ॥೮॥**

**ಪದಾರ್ಥ:-** [**ತೇ**] ನಿನ್ನ [**ಸುಮತಿಂ**] ಶ್ರೇಷ್ಠ ಬುದ್ಧಿಯವರಾದ ಸಭಾಸದರನ್ನು [**ಅರ್ಚಾಮಿ**] ಸತ್ಕರಿಸುವನು [**ತ್ವಾ**] ನಿನ್ನನ್ನು [**ವಾವಾತಾ**] ದೋಷನಾಶಗೊಳಿಸಲು ವಿದ್ಯೋತ್ಪಾದಕ [**ಇಯಂ**] ಈ [**ಗೀಃ**] ಸುಶಿಕ್ಷಿತ ವಾಣಿ

**[ಘೋಷಿತಂ]** ಶಬ್ದಾಯಮಾನವಂತ **[ಸಂ, ಜರತಾಂ]** ಚೆನ್ನಾಗಿ ಸ್ತವನಮಾಡು. **[ಸ್ವಶ್ವಾಃ]** ಉತ್ತಮ ಕುದುರೆಗಳು **[ಸುರಥಾಃ]** ಶ್ರೇಷ್ಠರಥಗಳು **[ಮರ್ಜಯೇಮ]** ಶುದ್ಧಗೊಳಿಸುವೆವು. **[ತೇ]** ನಿನ್ನ ಸ್ತವನವನ್ನು **[ಅನು, ದ್ಯೂನ್]** ಅನುದಿನವು ಧಾರಣ ಮಾಡುವೆವು. **[ಅರ್ವಾಕ್]** ಮೊದಲು **[ಅಸ್ಮೇ]** ನಮಗೆ **[ಕ್ಷತ್ರಾಣಿ]** ರಾಜ್ಯದಲ್ಲಿನ ಹಣವನ್ನು **[ಧಾರಯೇಃ]** ಧಾರಣ ಮಾಡಿರಿ.

**ಭಾವಾರ್ಥ:-** ರಾಜನು ಸಭಾಪತಿಯನ್ನು ನಿಯಮಿಸುವಾಗ ಸಭಾಸದರನ್ನು ಕೇಳಿ ಅವರ ಸಲಹೆಯಂತೆ ಧಾರ್ಮಿಕನೂ ಯೋಗ್ಯನೂ ಆದ ಪುರುಷನನ್ನು ಸಭಾಪತಿಯನ್ನಾಗಿ ನೇಮಕ ಮಾಡಬೇಕು. ರಾಜನು ರಾಜಕರ್ಮಗಳಲ್ಲಿ ಯೋಗ್ಯರನ್ನೇ ನೇಮಕ ಮಾಡಿದರೆ ದಿನದಿನವೂ ಅವನ ಖ್ಯಾತಿ ಹೆಚ್ಚುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಹ ತ್ವಾ ಭೂರ್ಯಾ ಚರೇದುಪ ತ್ಮನ್ ದೋಷಾವಸ್ತರ್ದೀದಿವಾಂಸಮನು ದ್ಯೂನ್ ।**
**ಕ್ರೀಳಂತಸ್ತ್ವಾ ಸುಮನಸಃ ಸಪೇಮಾ-ಭಿ ದ್ಯುಮ್ನಾ ತಸ್ಥಿವಾಂಸೋ ಜನಾನಾಮ್ ॥೯॥**

**ಪದಾರ್ಥ:-** **[ಇಹ]** ಈ ರಾಜಕಾರ್ಯದಲ್ಲಿ **[ತ್ಮನ್]** ಆತ್ಮನಲ್ಲಿ **[ಭೂರಿ]** ಬಹಳಷ್ಟು **[ಉಪ, ಆ, ಚರೇತ್]** ಶುಭಕರ್ಮಗಳನ್ನು ಮಾಡಬೇಕು. **[ಸುಮನಸಃ]** ಶ್ರೇಷ್ಠ ಮನಸ್ಸಿನವರು **[ತಸ್ಥಿವಾಂಸಃ]** ಸ್ಥಿರ ಸ್ವಭಾವದವರು **[ಅನು, ದ್ಯೂನ್]** ಪ್ರತಿದಿನವೂ **[ಕ್ರೀಳಂತಃ]** ಧನುರ್ವಿದ್ಯೆಯ ಅಭ್ಯಾಸವನ್ನು ಮಾಡುವವರು **[ಜನಾನಾಂ]** ರಾಜ ಪ್ರಜೆಗಳ ಮಧ್ಯದಲ್ಲಿ **[ದೀದಿವಾಂಸಂ]** ಪ್ರಕಾಶಮಾನರಾದವರು **[ದ್ಯುಮ್ನಾ]** ಯಶಸ್ಸಿನೊಂದಿಗೆ **[ತ್ವಾ]** ನಿನ್ನನ್ನು **[ಅಭಿ, ಸಪೇಮ]** ಎದುರಿಗೆ ನಿಂದಿಸುವೆವು.

**ಭಾವಾರ್ಥ:-** ರಾಜನು ದುರ್ವ್ಯಸನವನ್ನು ತ್ಯಜಿಸಿ ಧರ್ಮಕಾರ್ಯಗಳನ್ನು ಮಾಡಬೇಕು. ಅದರಿಂದ ಎಲ್ಲರೂ ರಾಜನಲ್ಲಿ ನಿರಂತರ ಭಕ್ತಿ ಇಡುವರು; ಅನ್ಯಾಯ ಮಾಡಿದರೆ ಅವನನ್ನು ನಿಂದಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ತ್ವಾ ಸ್ವಶ್ವಃ ಸುಹಿರಣ್ಯೋ ಅಗ್ನ ಉಪಯಾತಿ ವಸುಮತಾ ರಥೇನ ।**
**ತಸ್ಯ ತ್ರಾತಾ ಭವಸಿ ತಸ್ಯ ಸಖಾ ಯಸ್ತ ಆತಿಥ್ಯಮಾನುಷಗ್ಜುಜೋಷತ್ ॥೧೦॥**

**ಪದಾರ್ಥ:-** **[ಅಗ್ನೇ]** ರಾಜನೇ! **[ಯಃ]** ಯಾವನು **[ತೇ]** ನಿನಗೆ **[ಆನುಷಕ್]** ಅನುಕೂಲಕರನಾಗಿದ್ದು **[ಆತಿಥ್ಯಂ]** ಅತಿಥಿ ಸತ್ಕಾರವನ್ನು **[ಜುಜೋಷತ್]** ಸೇವಿಸುವನು. **[ಯಃ]** ಯಾವನು **[ಸುಹಿರಣ್ಯಃ]** ಉತ್ತಮ ಸುವರ್ಣಾದಿ ಧನವಿರುವವನು **[ಸ್ವಶ್ವಃ]** ಉತ್ತಮ ಅಶ್ವಗಳಿರುವವನು **[ವಸುಮತಾ]** ಬಹುಧನಸಂಪನ್ನನಾದ **[ರಥೇನ]** ರಮಣೀಯ ವಾಹನದಿಂದ **[ತ್ವಾ]** ನಿನ್ನನ್ನು **[ಉಪಯಾತಿ]** ಸಮೀಪಿಸುವನು. **[ತಸ್ಯ]** ಅವನ **[ಸಖಾ]** ಸ್ನೇಹಿತನಾಗು.

**ಭಾವಾರ್ಥ:-** ರಾಜನೇ! ನೀನು ರಾಜ್ಯದ ಉಪಕಾರಕನೂ ಸತ್ಕರಿಸುವವನೂ ಆಗಿರುವೆ. ಆದ್ದರಿಂದ ಎಲ್ಲರ ಸ್ನೇಹಿತನಾಗಿ ಚಕ್ರವರ್ತಿಯಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹೋ ರುಜಾಮಿ ಬಂಧುತಾ ವಚೋಭಿ-ಸ್ತನ್ಮಾ ಪಿತುರ್ಗೋತಮಾದನ್ವಿಯಾಯ ।**
**ತ್ವಂ ನೋ ಅಸ್ಯ ವಚಸಶ್ಚಿಕಿದ್ಧಿ ಹೋತರ್ಯವಿಷ್ಠ ಸುಕ್ರತೋ ದಮೂನಾಃ ॥೧೧॥**

**ಪದಾರ್ಥ:-** **[ಗೋತಮಾತ್]** ವಿದ್ಯೆಯ ಸ್ತುತಿ ಮಾಡುವವನ **[ಪಿತುಃ]** ತಂದೆಯಿಂದ ವಿದ್ಯೆಯನ್ನು ಪಡೆದಿರುವ **[ರುಜಾಮಿ]** ಶತ್ರುವನ್ನು ಭಂಗಗೊಳಿಸುವೆನು. **[ತತ್]** **[ಮಹಃ]** ಆ ಮಹತ್ತರವಾದ **[ವಚೋಭಿಃ]** ವಚನಗಳಿಂದ **[ಬಂಧುತಾ]** ಬಾಂಧವ್ಯವು **[ಮಾ]** ನನಗೆ **[ಅನು, ಇಯಾಯ]** ಪ್ರಾಪ್ತವಾಗಲಿ. **[ಹೋತಃ]** ದಾನ ಮಾಡುವವನು **[ಯವಿಷ್ಠ]** ಯುವಕನು **[ಸುಕ್ರತೋ]** ಬುದ್ಧಿವಂತನು **[ದಮೂನಾಃ]** ದಾನಶೂರ ಜಿತೇಂದ್ರಿಯನು **[ತ್ವಂ]** ನೀನು **[ಅಸ್ಯ]** ಇವನ **[ವಚಸಃ]** ಮಾತಿನ ಉತ್ತೇಜನದಿಂದ **[ನಃ]** ನಮ್ಮನ್ನು **[ಚಿಕಿದ್ಧಿ]** ತಿಳಿದುಕೋ.

**ಭಾವಾರ್ಥ:-** ಕುಮಾರ-ಕುಮಾರಿಯರೇ! ನಾವು ಹೇಗೆ ಆಚಾರ್ಯರಿಂದ ತಂದೆ-ತಾಯಿಯರಿಂದ ಶಿಕ್ಷಣ ಪಡೆದು ಆನಂದಿತರಾಗಿರುವೆವೋ ಹಾಗೇ ನೀವು ಆಗಿರಿ.

ಪ್ರಜೆಗಳ ರಕ್ಷಣೆಯ ವಿಚಾರವಿಲ್ಲಿದೆ.

**ಅಸ್ವಪ್ನಜಸ್ತರಣಯಃ ಸುಶೇವಾ ಅತಂದ್ರಾಸೋಽವೃಕಾ ಅಶ್ರಮಿಷ್ಠಾಃ ।**
**ತೇ ಪಾಯವಃ ಸಧ್ರ್ಯಂಚೋ ನಿಷದ್ಯಾ-ಗ್ನೇ ತವ ನಃ ಪಾಂತ್ವಮೂರ ॥೧೨॥**

**ಪದಾರ್ಥ:-** **[ಅಮೂರ]** ಮೂರ್ಖತಾದಿ ದೋಷರಹಿತ **[ಅಗ್ನೇ]** ಅಗ್ನಿಯಂತಿರುವ ತೇಜಸ್ವೀ ರಾಜನೇ! **[ತವ]** ನಿನ್ನ **[ಅಸ್ವಪ್ನಜಃ]** ಎಚ್ಚರವಾಗಿರುವ **[ತರಣಯಃ]** ತಾರುಣ್ಯವನ್ನು ಪಡೆದ **[ಅತಂದ್ರಾಸಃ]** ಆಲಸ್ಯವನ್ನು ತೊರೆದ **[ಅವೃಕಾಃ]** ದೋಚುವವರಲ್ಲದ **[ಅಶ್ರಮಿಷ್ಠಾಃ]** ಶ್ರಮರಹಿತರಾದ **[ಸುಶೇವಾಃ]** ಸುಖಮಯ **[ಸಧ್ರ್ಯಂಚಃ]** ಜೊತೆಗೆ ಚಲಿಸುವ **[ಪಾಯವಃ]** ಪಾಲನೆ ಮಾಡುವ ನೌಕರರೋ **[ತೇ]** ಅವರು **[ನಿಷದ್ಯ]** ಸ್ಥಿರವಾಗಿದ್ದು **[ನಃ]** ನಮ್ಮನ್ನು **[ಪಾಂತು]** ರಕ್ಷಣೆಮಾಡು.

**ಭಾವಾರ್ಥ:-** ಪ್ರಜೆಗಳು ಯಾವಾಗಲೂ, ರಾಜನಿಗೆ ಉಪದೇಶಿಸಬೇಕು. ರಾಜನೇ! ನೀನು ನಮ್ಮ ರಕ್ಷಣಾದಿ ಕಾರ್ಯಗಳಲ್ಲಿ ಜನರನ್ನು ನೇಮಕ ಮಾಡುವಾಗ ಧಾರ್ಮಿಕರೂ ಆಲಸ್ಯರಹಿತರೂ ಪುರುಷಾರ್ಥ ಸಾಧಕರೂ ಆದವರನ್ನು ನೇಮಕಮಾಡು.

ರಾಜನ ವಿಷಯವಿಲ್ಲಿ ಹೇಳಿದೆ.

**ಯೇ ಪಾಯವೋ ಮಾಮತೇಯಂ ತೇ ಅಗ್ನೇ ಪಶ್ಯಂತೋ ಅಂಧಂ ದುರಿತಾದರಕ್ಷನ್ ।**
**ರರಕ್ಷ ತಾನ್ತ್ಸುಕೃತೋ ವಿಶ್ವವೇದಾ ದಿಪ್ಸಂತ ಇದ್ರಿಪವೋ ನಾಹ ದೇಭುಃ ॥೧೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತಿರುವ ರಾಜನೇ! **[ಯೇ]** ಯಾರು **[ಪಾಯವಃ]** ರಕ್ಷಕರು **[ತೇ]** ನಿನ್ನ **[ಮಾಮತೇಯಂ]** ನನಗೆ ಸಂಬಂಧಿಸಿದ ಕಾರ್ಯವನ್ನು **[ಪಶ್ಯಂತಃ]** ನೋಡುವವರಾಗಿ **[ದುರಿತಾತ್]** ದುಷ್ಟಾಚರಣೆಯಿಂದ **[ಅಂಧಂ]** ಕುರುಡನಂತೆ **[ಅರಕ್ಷನ್]** ರಕ್ಷಿಸುವರು. **[ತಾನ್]** ಅವರನ್ನು **[ಸುಕೃತಃ]** ಪುಣ್ಯವಂತರ **[ವಿಶ್ವವೇದಾಃ]**

ಸಂಪೂರ್ಣ ವಿಷಯ ತಿಳಿದಿರುವವನು ನೀನು **[ರಕ್ಷ]** ರಕ್ಷಣೆ ಮಾಡು. **[ಇತ್]** ಇದರಿಂದ **[ದಿಪ್ಸಂತಃ]** ಪಾಖಂಡರನ್ನು ಬಯಸುವವನಾಗಿ **[ರಿಪವಃ]** ಶತ್ರುಗಳು **[ನ, ಅಹ]** **[ದೇಭುಃ]** ನಿಗ್ರಹಿಸುವುದರಲ್ಲಿ ದಂಭ ಮಾಡುವುದು ಬೇಡ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ತನ್ನಂತೆ ಪರರನ್ನು ತನ್ನ ಪದಾರ್ಥಗಳಂತೆ ಅನ್ಯರ ಪದಾರ್ಥಗಳನ್ನೂ ಭಾವಿಸಿಕೊಳ್ಳುವರೋ ಅದರಂತೆ ಎಲ್ಲರನ್ನೂ ಎಲ್ಲಾ ವಸ್ತುಗಳನ್ನು ರಕ್ಷಿಸುವರೋ ಅವರೇ ನಿನ್ನ ಸೇವಕರಾಗಲು ಅರ್ಹರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಯಾ ವಯಂ ಸಧನ್ಯ (ಅ) ೧ ಸ್ತ್ವೋತಾ-ಸ್ತವ ಪ್ರಣೀತ್ಯಶ್ಯಾಮ ವಾಜಾನ್ ।**
**ಉಭಾ ಶಂಸಾ ಸೂದಯ ಸತ್ಯತಾತೇಽನುಷ್ಠುಯಾ ಕೃಣುಹ್ಯಹ್ರಯಾಣ ॥೧೪॥**

**ಪದಾರ್ಥ:-** **[ಅಹ್ರಯಾಣ]** ಲಜ್ಜಾರಹಿತನಾದ **[ಸತ್ಯತಾತೇ]** ಸತ್ಯಾಚರಣ ಮಾಡುವ ರಾಜನೇ! ನೀನು **[ಅನುಷ್ಠುಯಾ]** ಅನುಕೂಲಕರ ರೀತಿಯಿಂದ **[ಉಭಾ]** ಇಬ್ಬರೂ **[ಶಂಸಾ]** ಪ್ರಶಂಸೆಗಳನ್ನು **[ಕೃಣುಹಿ]** ಮಾಡಿರಿ ಮತ್ತು **[ಸೂದಯ]** ದೋಷಗಳನ್ನು ನಾಶ ಮಾಡಿರಿ. **[ತ್ವಯಾ]** ನಿನ್ನೊಂದಿಗೆ **[ತ್ವೋತಾಃ]** ನಿನ್ನಿಂದ ಪಾಲನೆ ಮಾಡಲಾದ **[ಸಧನ್ಯಃ]** ಸಮಾನ ಧನಿಕರಾದ **[ವಯಂ]** ನಾವು **[ತವ]** ನಿನ್ನ **[ಪ್ರಣೀತೀ]** ಉತ್ತಮ ನೀತಿಯಿಂದ **[ವಾಜಾನ್]** ವಿಜ್ಞಾನ-ಧನಾದಿ ಪದಾರ್ಥಗಳನ್ನು **[ಅಶ್ಯಾಮ]** ಪಡೆದುಕೊಳ್ಳುತ್ತೇವೆ.

**ಭಾವಾರ್ಥ:-** ಎಲ್ಲಾ ನೌಕರರು ರಾಜನೊಂದಿಗೆ ರಾಜನು ಎಲ್ಲಾ ನೌಕರರೊಂದಿಗೆ ಸ್ನೇಹಭಾವದಿಂದ ತಂದೆ-ಮಕ್ಕಳ ರೀತಿಯಲ್ಲಿ ವರ್ತಿಸಬೇಕು. ಪರಸ್ಪರರು ತಮ್ಮ ದೋಷಗಳನ್ನು ನಾಶ ಮಾಡುತ್ತ ಪ್ರಶಂಸೆಯನ್ನು ಮಾಡಬೇಕು. ಸತ್ಯದ ಪ್ರಚಾರ ಮಾಡಬೇಕು. ಯಾವುದರಿಂದ ಲಜ್ಜಾಸ್ಪದವಾಗುವುದೋ ಅಂತಹ ಕರ್ಮಗಳನ್ನು ತ್ಯಜಿಸಬೇಕು. ಎಲ್ಲರೂ ಚಕ್ರವರ್ತಿ ರಾಜ್ಯದ ಸುಖವನ್ನನುಭವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಯಾ ತೇ ಅಗ್ನೇ ಸಮಿಧಾ ವಿಧೇಮ ಪ್ರತಿ ಸ್ತೋಮಂ ಶಸ್ಯಮಾನಂ ಗೃಭಾಯ । ದಹಾಶಸೋ**
**ರಕ್ಷಸಃ ಪಾಹ್ಯ (ಅ) ೧ ಸ್ಮಾನ್ ದ್ರುಹೋ ನಿದೋ ಮಿತ್ರಮಹೋ ಅವದ್ಯಾತ್ ॥೧೫॥**

**ಪದಾರ್ಥ:-** **[ಅಗ್ನೇ]** ರಾಜನೇ! **[ತೇ]** ನಿನ್ನ **[ಅಯಾ]** ಈ **[ಸಮಿಧಾ]** ಪ್ರದೀಪ್ತ ನೀತಿಯೊಂದಿಗೆ **[ಶಸ್ಯಮಾನಂ]** ಪ್ರಶಂಸಾಕರ್ಮವನ್ನು **[ಸ್ತೋಮಂ]** ಪ್ರಶಂಸನೀಯವಾಗಿ **[ವಿಧೇಮ]** ಮಾಡುವೆವು. **[ಪ್ರತಿ, ಗೃಭಾಯ]** ನೀನದನ್ನು ಗ್ರಹಣ ಮಾಡು. **[ಅಶಸಃ]** ನಿಂದಕರಾದ **[ರಕ್ಷಸಃ]** ದುಷ್ಟರನ್ನು **[ದಹ]** ದಹಿಸು. **[ದ್ರುಹಃ]** ದ್ರೋಹದಿಂದ **[ನಿದಃ]** ನಿಂದಿಸುವವರನ್ನು **[ಅವದ್ಯಾತ್]** ಅಧರ್ಮಾಚರಣೆಯಿಂದ **[ಮಿತ್ರಮಹಃ]** ಮಿತ್ರರನ್ನು ಗೌರವಿಸುವ **[ಅಸ್ಮಾನ್]** ನಮ್ಮನ್ನು **[ಪಾಹಿ]** ರಕ್ಷಿಸು.

**ಭಾವಾರ್ಥ:-** ಯಾರು ರಾಜ-ಮಂತ್ರಿಗಳು ಪರಸ್ಪರ ಸಹಮತದಿಂದ ರಾಜ್ಯದ ಶಾಸನ ಮಾಡುವರೋ ಅವರು ದ್ವೇಷ-ನಿಂದೆ - ಅಧರ್ಮಾಚರಣೆ ರಹಿತರಾಗಿ ಉತ್ತಮ ಶಿಷ್ಟಾಚಾರ ಮಾಡುತ್ತ ಹತ್ತು ದಿಕ್ಕುಗಳಲ್ಲೂ ಕೀರ್ತಿವಂತರಾಗುವರು.

ಈ ಸೂಕ್ತದಲ್ಲಿ ರಾಜ-ಪ್ರಜಾ ಜನರ ಕರ್ತವ್ಯ ವರ್ಣನೆಯಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ನಾಲ್ಕನೆಯ ಸೂಕ್ತ ಸಮಾಪ್ತ

## ॥ ಇತಿ ಚತುರ್ಥೋಽಧ್ಯಾಯಃ ॥

# ಪಂಚಮೋಽಧ್ಯಾಯಃ

### ಸೂಕ್ತ ೫

ಮಂತ್ರಸಂಖ್ಯೆ ೧೫ । ವಾಮದೇವ ಋಷಿಃ । ವೈಶ್ವಾನರೋ ದೇವತಾ । ೧ ವಿರಾಟ್ತ್ರಿಷ್ಟುಪ್, ೨, ೫ ೮, ೧೧ ನಿಚೃತ್ತ್ರಿಷ್ಟುಪ್, ೩, ೪, ೬, ೧೨, ೧೩, ೧೫ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೧೪ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ದೃಷ್ಟಾಂತದಿಂದ ರಾಜನ ವಿಷಯ ಹೇಳಿದೆ.

**ವೈಶ್ವಾನರಾಯ ಮೀಳ್ಹುಷೇ ಸಜೋಷಾಃ ಕಥಾ ದಾಶೇಮಾಗ್ನಯೇ ಬೃಹದ್ಭಾಃ ।**
**ಅನೂನೇನ ಬೃಹತಾ ವಕ್ಷಥೇನೋ-ಪಸ್ತಭಾಯದುಪಮಿನ್ನ ರೋಧಃ ॥೧॥**

**ಪದಾರ್ಥ:-** **[ಬೃಹತ್]** ದೊಡ್ಡದಾದ **[ಭಾಃ]** ಅಳತೆ ಮಾಡುವಂತಹ **[ರೋಧಃ]** ತಡೆಯಲು **[ಉಪಮಿತ್]** ಬೇರ್ಪಡಿಸುವವನ **[ನ]** ಸಮನಾದ **[ಅನೂನೇನ]** ಕಡಿಮೆಯಿಲ್ಲದ **[ಬೃಹತಾ]** ದೊಡ್ಡರಾದ **[ವಕ್ಷಥೇನ]** ಕೋಪದಿಂದ ರಾಜ್ಯವನ್ನು **[ಉಪ, ಸ್ತಭಾಯತ್]** ತಡೆಯಬೇಕು. **[ವೈಶ್ವಾನರಾಯ]** ಎಲ್ಲರಿಗೂ ನಾಯಕನಾದ **[ಮೀಳ್ಹುಷೇ]** ಆಸೇಚನ ಮಾಡುವ **[ಅಗ್ನಯೇ]** ಅಗ್ನಿಯಂತಿರುವ ರಾಜನಿಗೆ **[ಸಜೋಷಾಃ]** ಸಮಾನ ಪ್ರೀತಿಯ ನಾವು **[ಕಥಾ]** ಯಾವ ರೀತಿಯಿಂದ **[ದಾಶೇಮ]** ಸುಖಕೊಡೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸೂರ್ಯನಂತೆ, ಮಿಂಚಿನಂತೆ ಉತ್ತಮಗುಣಗಳ ಪ್ರಕಾಶಗೊಳಿಸಲು ಮತ್ತು ನೀರಿನ ತಡೆಗೆ ಕಾರಣವಾದ ಪದಾರ್ಥಗಳ ಸದೃಶ ದುಷ್ಟರನ್ನು ತಡೆಯುವ, ದುಃಖದ ಹಾನಿ ಸುಖ ಲಾಭಗಳ ಬಗ್ಗೆ ತಿಳಿದು ರಾಜ್ಯವಾಳುವರೋ ಅವರು ದಂಡನೀತಿಯನ್ನು ನ್ಯಾಯವನ್ನೂ ತನ್ನ ರಾಜ್ಯದಲ್ಲಿ ಚಲಾಯಿಸಬಲ್ಲರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾ ನಿಂದತ ಯ ಇಮಾಂ ಮಹ್ಯಂ ರಾತಿಂ ದೇವೋ ದದೌ ಮರ್ತ್ಯಾಯ ಸ್ವಧಾವಾನ್ ।**
**ಪಾಕಾಯ ಗೃತ್ಸೋ ಅಮೃತೋ ವಿಚೇತಾ ವೈಶ್ವಾನರೋ ನೃತಮೋ ಯಹ್ವೋ ಅಗ್ನಿಃ ॥೨॥**

**ಪದಾರ್ಥ:-** **[ಯಃ]** ಯಾವನು **[ಸ್ವಧಾವಾನ್]** ಅನ್ನಾದಿ ಐಶ್ವರ್ಯಗಳಿರುವವನು **[ಅಮೃತಃ]** ಮೃತ್ಯುರಹಿತನು **[ವಿಚೇತಾಃ]** ಉತ್ತಮ ಜ್ಞಾನವಂತನು **[ವೈಶ್ವಾನರಃ]** ಮನುಷ್ಯರಲ್ಲೇ ಪ್ರಕಾಶಮಾನನಾದ **[ನೃತಮಃ]** ನಾಯಕನ ಶ್ರೇಷ್ಠ ಗುಣಗಳಿರುವ **[ಯಹ್ವಃ]** ದೊಡ್ಡವನಾದ **[ಗೃತ್ಸಃ]** ಉಪದೇಶಕನು **[ಅಗ್ನಿಃ]** ಸೂರ್ಯನಿಗೆ ಸಮನಾದ

**[ದೇವಃ]** ದಾನಶೀಲ ಪುರುಷನು **[ಪಾಕಾಯ]** ಪರಿಪಕ್ವ ವ್ಯವಹಾರಕ್ಕೆ **[ಮರ್ತ್ಯಾಯ]** ಮನುಷ್ಯನಿಗೆ **[ಮಹ್ಯಂ]** ನನಗೆ **[ಇಮಾಂ]** ಈ **[ರಾತಿಂ]** ದಾನವನ್ನು **[ದದೌ]** ಕೊಡುವನು. **[ಮಾ]** **[ನಿಂದತ]** ಅವನ ನಿಂದೆ ಮಾಡಬೇಡ.

**ಭಾವಾರ್ಥ:-** ರಾಜ ಹಾಗೂ ಪ್ರಜಾಜನರೇ! ಯಾರು ಅಗ್ನ್ಯಾದಿಗಳ ಗುಣಗಳನ್ನು ಪಡೆದು ಎಲ್ಲರಿಗೂ ಸುಖದಾಯಕರ್ನೋ, ಉತ್ತಮ ಗುಣವಂತನೋ ಅಂತಹ ರಾಜನ ನಿಂದೆ ಮಾಡಬಾರದು ಹಾಗೂ ದುಷ್ಟರ ಪ್ರಶಂಸೆಯನ್ನೂ ಎಂದೂ ಮಾಡಬಾರದು.

ಮೇಧಾವಿಗಳ ಕರ್ತವ್ಯವನ್ನಿಲ್ಲಿ ಹೇಳಿದೆ.

**ಸಾಮ ದ್ವಿಬರ್ಹಾ ಮಹಿ ತಿಗ್ಮಭೃಷ್ಟಿಃ ಸಹಸ್ರರೇತಾ ವೃಷಭಸ್ತುವಿಷ್ಮಾನ್ ।**
**ಪದಂ ನ ಗೋರಪಗೂಳ್ಹಂ ವಿವಿದ್ವಾ-ನಗ್ನಿರ್ಮಹ್ಯಂ ಪ್ರೇದು ವೋಚನ್ಮನೀಷಾಮ್ ॥೩॥**

**ಪದಾರ್ಥ:-** **[ದ್ವಿಬರ್ಹಾಃ]** ವಿದ್ಯಾ-ವಿನಯಗಳೆರಡರಿಂದಲೂ ಹಿರಿಯರೆನಿಸಿಕೊಂಡ **[ತಿಗ್ಮಭೃಷ್ಟಿಃ]** ಪರಿಪಕ್ವವಾದ **[ಸಹಸ್ರರೇತಾಃ]** ಅತಿಶಯ ಪರಾಕ್ರಮಿ **[ವೃಷಭಃ]** ಬಲಿಷ್ಠನಾದ **[ತುವಿಷ್ಮಾನ್]** ಪರಾಕ್ರಮೀ **[ಅಗ್ನಿಃ]** ತೇಜಸ್ವೀ **[ವಿವಿದ್ವಾನ್]** ವಿಶೇಷ ರೀತಿಯ ಪಂಡಿತನು **[ಗೋಃ]** ಗೋವಿನ **[ಅಪಗೂಳ್ಹಂ]** ಗೌಪ್ಯವಾದ **[ಪದಂ]** **[ನ]** ಪಾದ ಚಿಹ್ನೆಯಂತೆ **[ಮಹ್ಯಂ]** ನನಗೆ **[ಮನೀಷಾಂ]** ಬುದ್ಧಿಯನ್ನು **[ಮಹಿ]** ಅತಿಶಯ **[ಸಾಮ]** ಸೈದ್ಧಾಂತಿಕ ಕರ್ಮಗಳನ್ನು **[ಪ್ರ, ವೋಚತ್]** ಹೇಳಲಿ/ತಿಳಿಸಲಿ. **[ಇತ್, ಉ]** ಆದರಿಂದ ಎಲ್ಲರ ಸತ್ಕಾರ ಯೋಗ್ಯನಾಗುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಎಲ್ಲರಿಗೂ ಯಥಾರ್ಥ ಜ್ಞಾನವನ್ನು ಬೋಧಿಸುವನೋ ಅವನೇ ಶ್ರೇಷ್ಠ ವಿದ್ವಾಂಸನೆನಿಸಿಕೊಳ್ಳುವನು. ಗೋವಿನ ಕಾಲು/ ಹೆಜ್ಜೆ ಗುರುತಿನಿಂದ ಗೋವನ್ನು ಪತ್ತೆ ಹಚ್ಚುವಂತೆ ಪದಾರ್ಥ ವಿಜ್ಞಾನವು ಅನ್ವೇಷಣಾರ್ಹವಾಗಿರುತ್ತದೆ.

ಎಲ್ಲರಿಗೂ ಸುಖದಾಯಕ ರಾಜನ ವಿಷಯವಿಲ್ಲಿದೆ.

**ಪ್ರ ತಾಁ ಅಗ್ನಿರ್ಬಭಸತ್ತಿಗ್ಮಜಂಭ-ಸ್ತಪಿಷ್ಠೇನ ಶೋಚಿಷಾ ಯಃ ಸುರಾಧಾಃ ।**
**ಪ್ರ ಯೇ ಮಿನಂತಿ ವರುಣಸ್ಯ ಧಾಮ ಪ್ರಿಯಾ ಮಿತ್ರಸ್ಯ ಚೇತತೋ ಧ್ರುವಾಣಿ ॥೪॥**

**ಪದಾರ್ಥ:-** **[ಯಃ]** ಯಾವನು **[ಅಗ್ನಿಃ]** ಅಗ್ನಿಯಂತೆ **[ತಿಗ್ಮಜಂಭಃ]** ತೀಕ್ಷ್ಣ ಆಕಳಿಕೆಯುಳ್ಳವನು **[ತಪಿಷ್ಠೇನ]** ಅತಿಶಯ ತಾಪದಿಂದ **[ಶೋಚಿಷಾ]** ತೇಜಸ್ಸಿನಿಂದ **[ಸುರಾಧಾಃ]** ಹಣವಂತನಾಗುತ್ತ **[ಯೇ]** ಯಾರು **[ಚೇತತಃ]** ಚೈತನ್ಯ ಪಡೆಯುವರೋ, **[ವರುಣಸ್ಯ]** ಶ್ರೇಷ್ಠನಾದ **[ಮಿತ್ರಸ್ಯ]** ಸ್ನೇಹಿತನ **[ಪ್ರಿಯಾ]** ಸುಂದರ **[ಧ್ರುವಾಣಿ]** ದೃಢವಾದ **[ಧಾಮ]** ಸ್ಥಾನವನ್ನು **[ಪ್ರ, ಮಿನಂತಿ]** ನಾಶಮಾಡುವರೋ **[ತಾನ್]** ಅವರನ್ನು **[ಪ್ರ, ಬಭಸತ್]** ತಿರಸ್ಕರಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ದಹನಶೀಲ ಅಗ್ನಿಯು ಹೇಗೆ ಒಣಗಿದ ಹಾಗೂ ಹಸಿಯಾದ ಎಲ್ಲಾ ಪದಾರ್ಥಗಳನ್ನು ಸುಟ್ಟು ಹಾಕುತ್ತದೆಯೋ ಹಾಗೇ ಯಾವನು ತನ್ನ ಪ್ರಯೋಜನ ಸಾಧಕ ಸ್ವಾರ್ಥೀ ಹಾಗೂ ಅನ್ಯ ಪುರುಷರ ಸುಖ ನಾಶಕರು ಅಂತಹವರನ್ನು ನಾಶ ಮಾಡುವರೋ ಅವರು ಪ್ರಶಂಸಿತರಾಗುವರು.

ರಾಜನು ಹಾಗೂ ದಂಡಿಸುವ ವಿಚಾರವಿಲ್ಲಿ ಹೇಳಿದೆ.

**ಅಭ್ರಾತರೋ ನ ಯೋಷಣೋ ವ್ಯಂತಃ ಪತಿರಿಪೋ ನ ಜನಯೋ ದುರೇವಾಃ ।**
**ಪಾಪಾಸಃ ಸಂತೋ ಅನೃತಾ ಅಸತ್ಯಾ ಇದಂ ಪದಮಜನತಾ ಗಭೀರಮ್ ॥೫॥**

**ಪದಾರ್ಥ:-** [ಅನೃತಾ] ಸುಳ್ಳು ಹೇಳುವವರು [ಅಸತ್ಯಾಃ] ಮಿಥ್ಯಾಚರಣೆ ಮಾಡುವವರು [ದುರೇವಾಃ] ದುರ್ವ್ಯಸನಿಗಳೂ [ಪಾಪಾಸಃ] ಪಾಪಕರ್ಮ ಮಾಡುವವರೂ [ಸಂತಃ] ಆದವರು [ಅಭ್ರಾತರಃ] ಬಂಧು ಜನರ ಹಿತರು [ನ] ಹೇಗೋ ಹಾಗೆ [ಯೋಷಣಃ] ಸ್ತ್ರೀಯರು [ಪತಿರಿಪಃ] [ನ] ಪತಿಯ ಭೂಮಿಯಂತೆ [ವ್ಯಂತಃ] ಪಡೆದುಕೊಂಡಿರುವ [ಜನಯಃ] ಸ್ತ್ರೀಯರು [ಇದಂ] ಈ [ಗಭೀರಂ] ಗಂಭೀರ [ಪದಂ] ಸ್ಥಾನವನ್ನು [ಅಜನತ್] ಉತ್ಪಾದಿಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಯಾವ ಸ್ತ್ರೀಯು ಸೋದರನಿಗೆ ಸದೃಶವಾಗಿ ಅನುಕೂಲಕರಳಲ್ಲವೋ ಮತ್ತು ಅನುಕೂಲಳಾಗುವನೋ ಹಾಗಿದ್ದರೆ ಶತ್ರುವಿನಂತೆ ವಿರೋಧಿಸುವವಳಾಗುವಳೋ ಮತ್ತು ಘೋರ ಪಾಪಿಗಳಾಗಿ ಎಲ್ಲರನ್ನೂ ಪೀಡಿಸುವರೋ ಅವರನ್ನು ದೂರದಿಂದಲೇ ತ್ಯಜಿಸಬೇಕು.

ಅಧ್ಯಾಪಕರ ವಿಷಯವಿಲ್ಲಿ ತಿಳಿಸಿದೆ.

**ಇದಂ ಮೇ ಅಗ್ನೇ ಕಿಯತೇ ಪಾವಕಾ-ಮಿನತೇ ಗುರುಂ ಭಾರಂ ನ ಮನ್ಮ ।**
**ಬೃಹದ್ದಧಾಥ ಧೃಷತಾ ಗಭೀರಂ ಯಹ್ವಂ ಪೃಷ್ಠಂ ಪ್ರಯಸಾ ಸಪ್ತಧಾತು ॥೬॥**

**ಪದಾರ್ಥ:-** [ಪಾವಕ] ಪವಿತ್ರಗೊಳಿಸುವ [ಅಗ್ನೇ] ಅಗ್ನಿಯಂತಿರುವ ನೀನು [ಕಿಯತೇ] ಅಲ್ಪ ಸಾಮರ್ಥ್ಯದಿಂದ [ಅಮಿನತೇ] ಅಹಿಂಸಾತ್ಮಕ [ಮೇ] ನನಗೆ [ದುರಂ] ದೊಡ್ಡದಾದ [ಭಾರಂ] [ನ] ಭಾರಕ್ಕೆ ಸಮನಾದ [ಮನ್ಮ] ವಿಜ್ಞಾನವನ್ನು [ಧೃಷತಾ] ಪ್ರಗಲ್ಭತೆಯೊಂದಿಗೆ [ಪ್ರಯಸಾ] ಪ್ರಸನ್ನತೆಯೊಂದಿಗೆ [ಇದಂ] ಈ [ಬೃಹತ್] ಬೆಳೆಯುತ್ತಿರುವ [ಗಭೀರಂ] ಗಂಭೀರವಾದ [ಪೃಷ್ಠ] ಪ್ರಶ್ನಿಸಲು ಯೋಗ್ಯವಾದ ಸಪ್ತಧಾತು, ಸುವರ್ಣಾದಿ ಏಳು ಧಾತುಗಳಿರುವ ಸಂಪತ್ತನ್ನು [ದಧಾಥ] ಧಾರಣಮಾಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು, ಅಲ್ಪಜ್ಞರಾದ ವಿದ್ಯಾರ್ಥಿಗಳು ಜ್ಞಾನೀ ವಿದ್ವಾಂಸರಿಂದ ವಿಜ್ಞಾನ ಧನವನ್ನು ಸಾಧಿಸಿಕೊಳ್ಳಲು ಯಾಚನೆ ಮಾಡುವರೋ ಅವರು ವಿದ್ಯಾವಂತರಾಗುವರು.

ವಿವಾಹ ಪರತ್ವ ಉಪದೇಶವಿಲ್ಲಿದೆ.

**ತಮಿನ್ನ್ವೇ (ಏ) ೩ ವ ಸಮನಾ ಸಮಾನ-ಮಭಿ ಕ್ರತ್ವಾ ಪುನತೀ ಧೀತಿರಶ್ಯಾಃ ।**
**ಸಸಸ್ಯ ಚರ್ಮನ್ನಧಿ ಚಾರು ಪೃಶ್ನೇ-ರಗ್ರೇ ರುಪ ಆರುಪಿತಂ ಜಬಾರು ॥೭॥**

**ಪದಾರ್ಥ:-** [ಸಸಸ್ಯ] ಶಯನ ಮಾಡುತ್ತ [ಚರ್ಮನ್] ಚರ್ಮದಲ್ಲಿ [ಚಾರು] ಸುಂದರ [ಜಬಾರು] ವೇಗಗೊಳಿಸುತ್ತ [ಆರುಪಿತಂ] ಆರೋಪಣ ಮಾಡಲಾಗಿರುವ [ಪೃಶ್ನೇಃ] ಅಂತರಿಕ್ಷದ [ಅಭಿ] ಎಲ್ಲ ಕಡೆಗಳಲ್ಲೂ ಇರುವ [ಅಗ್ನೇ] ಎದುರಿನಲ್ಲಿ [ಅಧಿ, ರೂಪ] ಅಧಿರೋಪಣಗೊಳಿಸುವುದರ [ಕ್ರತ್ವಾ] ಬುದ್ಧಿಯಿಂದ [ಪುನತೀ]

ತಂದೆಯ ಸಂಬಂಧದಿಂದ ಪವಿತ್ರಗೊಳಿಸುತ್ತ [ಧೀತಿಃ] ಉತ್ತಮ ಗುಣಗಳನ್ನು ಧಾರಣ ಮಾಡುವವಳು [ಸಮನಾ] ತುಲ್ಯಳಾಗಿ [ತಂ] [ಇತ್] ಅದನ್ನು [ಸಮಾನಂ] ಸಮಾನನಾದ ಪತಿಯನ್ನು [ನು, ಏವ] ಶೀಘ್ರವಾಗಿ [ಅಶ್ಯಾಃ] ಪಡೆಯುವಳು.

**ಭಾವಾರ್ಥ:-** ಕನ್ಯೆಯು ತನಗೆ ಸಮನಾದ ವರನನ್ನೂ ಮತ್ತು ವರನು ತನಗೆ ಸಮನಾದ ವಧುವನ್ನೂ ವಿವಾಹವಾದರೆ ಅಂತರಿಕ್ಷದಲ್ಲಿ ಪರಮಾತ್ಮನು ನೆಲೆಗೊಳಿಸಿದ ಸೂರ್ಯ ಚಂದ್ರರಂತೆ ಆ ದಂಪತಿಗಳು ಸುಶೋಭಿತರಾಗುವರು.

ಈ ಮಂತ್ರದಲ್ಲಿ ಪೃಚ್ಛಕನ ವಿಷಯ ಹೇಳಿದೆ.

**ಪ್ರವಾಚ್ಯಂ ವಚಸಃ ಕಿಂ ಮೇ ಅಸ್ಯ ಗುಹಾ ಹಿತಮುಪ ನಿಣಿಗ್ವದಂತಿ । ಯದುಸ್ರಿಯಾಣಾಮಪ**
**ವಾರಿವ ವ್ರನ್ ಪಾತಿ ಪ್ರಿಯಂ ರುಪೋ ಅಗ್ರಂ ಪದಂ ವೇಃ ॥೮॥**

**ಪದಾರ್ಥ:-** [ಮೇ] ನನ್ನ [ಅಸ್ಯ] ಇವನ [ವಚಸಃ] ವಚನಗಳ ಸಂಬಂಧದಲ್ಲಿ [ಗುಹಾ] ಬುದ್ಧಿಯಲ್ಲಿ [ಹಿತಂ] ಸ್ಥಿತ [ಪ್ರವಾಚ್ಯಂ] ಹೇಳಲು ಯೋಗ್ಯ [ನಿಣಿಕ್] ಶುದ್ಧೀಕರಿಸುವವನನ್ನು [ಕಿಂ] ಏನು [ಉಪ, ವದಂತಿ] ಸಮೀಪದಲ್ಲಿ ಹೇಳುವನೋ? [ಯತ್] ಯಾವ [ಉಸ್ರಿಯಾಣಾಂ] ಗೋವುಗಳ [ವಾರಿವ] ಜಲದಂತೆ [ವೇಃ] ಪಕ್ಷಿಗಳ [ಅಗ್ರಂ] ಎತ್ತರ [ಪದಂ] ಸ್ಥಾನದಂತೆ [ರೂಪಃ] ಭೂಮಿಯ [ಪ್ರಿಯಂ] ಸುಂದರ ಭಾಗವನ್ನು [ಅಪ, ವ್ರನ್] ಸುತ್ತುವರಿಯುವರು. [ಪಾತಿ] ಯಾರು ಇವರಿಬ್ಬರನ್ನು ಪಾಲನೆ ಮಾಡುವರು?

**ಭಾವಾರ್ಥ:-** ವಿದ್ಯಾವಂತರೇ! ನನ್ನ ಮತ್ತು ಇವನ ಬುದ್ಧಿಯಲ್ಲಿ ವರ್ತಮಾನವಾದ ಚೇತನವು ಹೇಗಿದೆ? ಅದು ಪಶುಗಳನ್ನು ಪಾಲನೆ ಮಾಡುವ ನೀರಿನಂತಿದೆಯೋ? ಅದು ರಕ್ಷಣೆ ಮಾಡುವುದಾಗಿದೆಯೋ, ಪ್ರಿಯವಾಗಿ ಕಂಡು ಬರುತ್ತಿದೆ. ಆಕಾಶದಲ್ಲಿನ ಪಕ್ಷಿಯ ಹೆಜ್ಜೆಯಂತೆ ಅದೃಶ್ಯ ವಿಜ್ಞಾನಕ್ಕಾಗಿದೆಯೋ? ನೀವು ಆ ಬಗ್ಗೆ ಏನು ಹೇಳುತ್ತೀರಿ?

ಮೇಲಿನ ಪ್ರಶ್ನೆಗೆ ಉತ್ತರವಿಲ್ಲದೆ.

**ಇದಮು ತ್ಯನ್ಮಹಿ ಮಹಾಮನೀಕಂ ಯದುಸ್ರಿಯಾ ಸಚತ ಪೂರ್ವ್ಯಂ ಗೌಃ ।**
**ಋತಸ್ಯ ಪದೇ ಅಧಿ ದೀದ್ಯಾನಂ ಗುಹಾ ರಘುಷ್ಯದ್ರಘುಯದ್ವಿವೇದ ॥೯॥**

**ಪದಾರ್ಥ:-** [ಯತ್] ಯಾವುದು [ಮಹಾಂ] ದೊಡ್ಡವರ [ಅನೀಕಂ] ಸೇನೆಯಂತೆ [ಮಹೀ] ಹಿರಿಯದಾದ [ಋತಸ್ಯ] ಸತ್ಯದ [ಪದೇ] ಸ್ಥಾನದಲ್ಲಿ [ದೀದ್ಯಾನಂ] ದೇದೀಪ್ಯಮಾನವಾಗಿರುವ [ಗುಹಾ] ಬುದ್ಧಿಯಲ್ಲಿ [ರಘುಷ್ಯತ್] ಶೀಘ್ರ ಚಲಿಸುವವನಂತೆ [ಪೂರ್ವ್ಯಂ] ಹಿಂದಿನವರು ಉತ್ಪಾದಿಸಿರುವ ರೀತಿಯಲ್ಲಿ [ರಘುಯತ್] ಶೀಘ್ರ ಚಲಿಸುವುದಾಗಿ [ವಿವೇದ] ತಿಳಿಯಿರಿ. [ತ್ಯತ್, ಇದಂ, ಉ] ಅದೇ ಇದು [ಉಸ್ರಿಯಾ] ಹಾಲುಕೊಡುವ [ಗೌಃ] ಹಸುವಿನಂತೆ [ಅಧಿ] ಹೆಚ್ಚು ಜನರು [ಸಚತೇ] ಪಡೆದುಕೊಳ್ಳಿರಿ.

**ಭಾವಾರ್ಥ:-** ಶ್ರೋತೃಗಳೇ! ಯಾವುದು ಬುದ್ಧಿಗೆ ಪ್ರೇರಣೆ ನೀಡುವ ಶೀಘ್ರ ಅಥವಾ ಮಂದಗತಿಯ ಸತ್ಯ ಸ್ವರೂಪ ಪರಮೇಶ್ವರನ ಮಧ್ಯದಲ್ಲಿ ಪ್ರಕಾಶಮಾನನೂ ಬಲಿಷ್ಠನೂ ವಾದಕ್ಕಿಯಂತೆ ಪರಾಕ್ರಮಿಯೂ ಮರಿಗಳಿಗೆ ಸುಖದಾಯಕವೂ ಆದ ಗೋವಿನಂತೆ ಸುಖದಾಯಕ ವಸ್ತುವೋ ಅದೇ ನಿಮ್ಮೆಲ್ಲರಿಗೆ ಸುಖದಾಯಕವಾಗಿದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಧ ದ್ಯುತಾನಃ ಪಿತ್ರೋಃ ಸಚಾಸಾ-ಮನುತ ಗುಹ್ಯಂ ಚಾರು ಪೃಶ್ನೇಃ ।**
**ಮಾತುಷ್ಪದೇ ಪರಮೇ ಅಂತಿ ಷದ್ಗೋ-ರ್ವೃಷ್ಣಃ ಶೋಚಿಷಃ ಪ್ರಯತಸ್ಯ ಜಿಹ್ವಾ ॥೧೦॥**

**ಪದಾರ್ಥ:-** [**ಅಧ**] ಅನಂತರ [**ಪಿತ್ರೋಃ**] ಜನನೀ-ಜನಕರ ಉತ್ತೇಜನದಿಂದ [**ದ್ಯುತಾನಃ**] ಪ್ರಕಾಶಮಾನ [**ಸಚಾ**] ಸತ್ಯನುಡಿಯುವ [**ಆಸಾ**] ಮುಖದಿಂದ [**ಪರಮೇ**] ಉತ ಷ್ಟವಾದ [**ಮಾತುಃ**] ತಾಯಿಯಂತಿರುವ [**ಪದೇ**] ಯೋಗ್ಯಸ್ಥಾನದಲ್ಲಿ [**ಅಂತಿ**] ಸಮೀಪ [**ಸತ್**] ಇರುವ [**ಗೋಃ**] ಧೇನು ಮತ್ತು [**ವೃಷ್ಣಃ**] ವೃಷ್ಟಿಗರೆಯುವವನು [**ಶೋಚಿಷಃ**] ಪ್ರಕಾಶಮಾನ [**ಪ್ರಯತಸ್ಯ**] ಪ್ರಸನ್ನಗೊಳಿಸುವವನ [**ಜಿಹ್ವಾ**] ವಾಣಿಯಂತೆ [**ಪೃಶ್ನೇಃ**] ಅಂತರಿಕ್ಷದಲ್ಲಿ [**ಚಾರು**] ಸುಂದರ [**ಗುಹ್ಯಂ**] ಗುಪ್ತವಾಗಿರುವ ಜೀವಸ್ವರೂಪವನ್ನು [**ಅನುತ**] ಅರಿತುಕೋ.

**ಭಾವಾರ್ಥ:-** ಭೂಮ್ಯಂತರಿಕ್ಷಗಳ ಮಧ್ಯದಲ್ಲಿರುವ ಸೂರ್ಯನು ಹೇಗೆ ಸುಶೋಭಿತನಾಗಿರುವನೋ ವಿದ್ವಾಂಸರ ವಚನವು ಹೇಗೆ ಬೆಳಕನ್ನು ನೀಡುವುದಾಗಿರುತ್ತದೆಯೋಸ ಅಂತರಿಕ್ಷವು ಹೇಗೆ ಯಾರಿಗೂ ದೂರವಾಗಿಲ್ಲವೋ ಹಾಗೆ ತನ್ನ ಆತ್ಮರೂಪದ ಪರಮಾತ್ಮನು ಸಮೀಪವರ್ತಿಯಾಗಿರುವನೆಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋತಂ ವೋಚೇ ನಮಸಾ ಪೃಚ್ಛ್ಯಮಾನ-ಸ್ತವಾಶಸಾ ಜಾತವೇದೋ ಯದೀದಮ್ ।**
**ತ್ವಮಸ್ಯ ಕ್ಷಯಸಿ ಯದ್ಧ ವಿಶ್ವಂ ದಿವಿ ಯದು ದ್ರವಿಣಂ ಯತ್ ಪೃಥಿವ್ಯಾಮ್ ॥೧೧॥**

**ಪದಾರ್ಥ:-** [**ಜಾತವೇದಃ**] ಜ್ಞಾನಸಂಪನ್ನನೇ! [**ಯದಿ**] ಒಂದು ವೇಳೆ ನೀನು [**ಹ**] ನಿಶ್ಚಯವಾಗಿಯೂ [**ದಿವಿ**] ಪ್ರಕಾಶಮಾನ ಸೂರ್ಯನಲ್ಲಿ [**ವಿಶ್ವಂ**] ಸಮಗ್ರ [**ದ್ರವಿಣಂ**] ದ್ರವ್ಯವನ್ನು [**ಯತ್**] ಯಾವುದು [**ಪೃಥಿವ್ಯಾಂ**] ಭೂಮಿಯಲ್ಲಿ [**ಯತ್**] ಯಾವುದು [**ಉ**] ವಾಯ್ವಾದಿಗಳಲ್ಲಿ ವರ್ತಮಾನವಿದೆಯೋ ಅವುಗಳಲ್ಲಿ [**ತ್ವಂ**] ನೀನು [**ಕ್ಷಯಸಿ**] ವಾಸಿಸಿರುವೆ. [**ಅಸ್ಯ**] ಈ [**ತವ**] ನಿನ್ನ [**ಆಶಸಾ**] ಪ್ರಶಂಸಿತ [**ನಮಸಾ**] ಸತ್ಕಾರದಿಂದ [**ಪೃಚ್ಛ್ಯಮಾನಃ**] ಕೇಳಲಾದ [**ಇದಂ**] ಈ [**ಋತಂ**] ಸತ್ಯವನ್ನು [**ವೋಚೇ**] ಹೇಳುವೆನು.

**ಭಾವಾರ್ಥ:-** ಮನುಷ್ಯರೇ! ಬ್ರಹ್ಮನು ಎಲ್ಲಾ ಸ್ಥಳಗಳಲ್ಲೂ ವ್ಯಾಪ್ತನಾಗಿರುವನು ಮತ್ತು ಯಾವನಲ್ಲಿ ಸಂಪೂರ್ಣ ಪದಾರ್ಥಗಳು ನೆಲೆಗೊಂಡಿವೆಯೋ ಆ ಸತ್ಯವನ್ನೀಗ ನಿಮಗೆ ತಿಳಿಸುತ್ತಿದ್ದೇನೆ. ನೀವೆಲ್ಲರೂ ಅವನ ಉಪಾಸನೆಯನ್ನೇ ಮಾಡಿರಿ.

ಮತ್ತಿಲ್ಲಿ ಪೃಚ್ಛಕನ ವಿಷಯ ಹೇಳಿದೆ.

**ಕಿಂ ನೋ ಅಸ್ಯ ದ್ರವಿಣಂ ಕದ್ಧ ರತ್ನಂ ವಿ ನೋ ವೋಚೋ ಜಾತವೇದಶ್ಚಿಕಿತ್ವಾನ್ ।**
**ಗುಹಾಧ್ವನಃ ಪರಮಂ ಯನ್ನೋ ಅಸ್ಯ ರೇಕು ಪದಂ ನ ನಿದಾನಾ ಅಗನ್ಮ ॥೧೨॥**

**ಪದಾರ್ಥ:-** [**ಜಾತವೇದ**] ವಿದ್ಯಾವಂತ [**ಚಿಕಿತ್ವಾನ್**] ವಿಚಾರಶೀಲನೇ! ನೀನು [**ಅಸ್ಯ**] ಈ ಸಂಸಾರದಲ್ಲಿ [**ನಃ**] ನಮ್ಮ [**ಕಿಂ**] [**ದ್ರವಿಣಂ**] ಯಾವುದು ಯಶಸ್ಸು? [**ಕಿಂ**] [**ರತ್ನಂ**] ಯಾವುದು ಧನ? [**ನಃ**] ನಮ್ಮನ್ನು

**[ಕತ್, ಹ]** ಯಾವಾಗಲಾದರೂ **[ವಿ, ವೋಚಃ]** ಉಪದೇಶ ಮಾಡುವೆಯೋ? **[ಯತ್]** ಯಾವುದು **[ಗುಹಾ]** ಬುದ್ಧಿಯ **[ಅಧ್ವನಃ]** ದಾರಿಯ **[ಪಾರಂ]** ಪಡೆಯಲರ್ಹ/ಪ್ರಾಪ್ತಿವಾದದ್ದು? **[ನಃ]** ನಮ್ಮನ್ನು **[ರೇಕುಃ]** ಸಂಶಯಾತ್ಮಕ **[ಪದಂ]** **[ನ]** ಪಡೆಯಲರ್ಹ ಸ್ಥಾನಕ್ಕೆ ಸಮಾನವಾದದ್ದು? **[ನಃ]** ನಮ್ಮೆಲ್ಲರ **[ನಿದಾನಾಃ]** ನಿಂದಿಸುವ **[ಅಸ್ಯ]** ಈ ಜಗತ್ತಿನಲ್ಲಿ ಅದರ ತ್ಯಾಗದಿಂದ **[ಅಗನ್ಮ]** ಪಡೆಯಬಹುದಾದುದು ಯಾವುದು?

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ವಿದ್ವಾಂಸರೇ! ನಮ್ಮಲ್ಲಿ ಯಶಸ್ಸು ಯಾವುದು? ಸುಂದರ ವಸ್ತು ಯಾವುದು? ಯಾರು ನಮ್ಮನ್ನು ನಿಂದಿಸುವವರು? ಮತ್ತು ಸಂಶಯ ಪಡುವ ವಸ್ತು ಯಾವುದು? ಯಾವುದು ಪಡೆಯಲರ್ಹ ಸ್ಥಾನ? ಈ ಪ್ರಶ್ನೆಗಳಿಗೆ ಉತ್ತರ ಹೇಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಾ ಮರ್ಯಾದಾ ವಯುನಾ ಕದ್ಧ ವಾಮ-ಮಚ್ಛಾ ಗಮೇಮ ರಘವೋ ನ ವಾಜಮ್ ।**
**ಕದಾ ನೋ ದೇವೀರಮೃತಸ್ಯ ಪತ್ನೀಃ ಸೂರೋ ವರ್ಣೇನ ತತನನ್ನುಷಾಸಃ ॥೧೩॥**

**ಪದಾರ್ಥ:-** **[ನಃ]** ನಮ್ಮ **[ಮರ್ಯಾದಾ]** **[ಕಾ]** ಪ್ರತಿಷ್ಠೆ ಯಾವುದು? **[ವಾಯುನಾ]** ಕರ್ಮದಿಂದ **[ರಘವಃ]** ಶೀಘ್ರ ಮಾಡುವವನ **[ವಾಜಂ]** ವಿಜ್ಞಾನವು **[ವಾಮಂ]** ಉತ್ತಮ ವಸ್ತುವನ್ನು **[ಕತ್]** **[ಹ]** ಯಾವಾಗಲಾದರೂ **[ಅಚ್ಛ]** ಉತ್ತಮ ರೀತಿಯಲ್ಲಿ **[ಗಮೇಮ]** ಪಡೆಯುವೆವೋ? **[ಕದಾ]** ಯಾವಾಗ **[ಸೂರಃ]** ಸೂರ್ಯನು **[ಅಮೃತಸ್ಯ]** ನಾಶರಹಿತವಾದ ಕಾಲದ **[ದೇವೀಃ]** ಪ್ರಕಾಶಮಾನ **[ಪತ್ನೀಃ]** ಸ್ತ್ರೀಯರಂತಿರುವ **[ಉಷಾಸಃ]** **[ನ]** ಪ್ರಭಾತಕಾಲದಂತಿರುವ ನೀನು **[ವರ್ಣೇನ]** ತೇಜಸ್ಸಿನಿಂದ **[ತತನನ್]** ವಿಸ್ತಾರಗೊಳಿಸುವೆ? ಹೇಳು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಯಥಾರ್ಥವಾದಿ ವಿದ್ವಾಂಸರಿಂದ ಕೇಳಿ ಉತ್ತರ ಪಡೆಯಬೇಕಾದದ್ದೇನೆಂದರೆ ಮನುಷ್ಯರು ಮಾಡಲು ಯೋಗ್ಯ ಕರ್ಮಗಳಾವುವು? ಪ್ರಾಪ್ತಯೋಗ್ಯ ಸ್ಥಾನ ಯಾವುದು? ನೀನು ಪ್ರಾತಃಕಾಲದಲ್ಲಿ ಸೂರ್ಯನಂತೆ ನಮ್ಮೆಲ್ಲರನ್ನು ಬೆಳಗಿಸುವೆಯಾ?

ಮೇಲಿನ ಪ್ರಶ್ನೆಗಳಿಗೆ ಸಮಾಧಾನವಿಲ್ಲಿ ತಿಳಿಸಿದೆ.

**ಅನಿರೇಣ ವಚಸಾ ಫಲ್ಗ್ವೇನ ಪ್ರತೀತ್ಯೇನ ಕೃಧುನಾತೃಪಾಸಃ ।**
**ಅಧಾ ತೇ ಅಗ್ನೇ ಕಿಮಿಹಾ ವದಂ-ತ್ಯನಾಯುಧಾಸ ಆಸತಾ ಸಚಂತಾಮ್ ॥೧೪॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಅನಿರೇಣ]** ರಮಣಯೋಗ್ಯವಲ್ಲದ **[ಪ್ರತೀತ್ಯೇನ]** ಪ್ರತೀತಿಯಲ್ಲಿ ಪ್ರಸಿದ್ಧವಾದ **[ಫಲ್ಗ್ವೇನ]** ಬೃಹತ್ತಾದ **[ಕೃಧುನಾ]** ಲಘುವಾದ **[ವಚಸಾ]** ಮಾತಿನಿಂದ **[ಅತೃಪಾಸಃ]** ಅತೃಪ್ತನಾಗುತ್ತ **[ಅಸತಾ]** ಇಲ್ಲದ ಬಲದಿಂದ **[ಅನಾಯುಧಾಸಃ]** ಶಸ್ತ್ರಾಸ್ತ್ರ ರಹಿತನಂತೆ **[ಇಹ]** ಈ ಜನ್ಮದಲ್ಲಿ **[ಕಿಂ]** **[ವದಂತಿ]** ಏನು ಹೇಳುವರೋ **[ಅಥ]** ಅನಂತರ **[ತೇ]** ನಿನಗಾಗಿ **[ಸಚಂತಾಂ]** ಪಡೆಯಬಹುದು ಹೇಳು.

**ಭಾವಾರ್ಥ:-** ಯಾವ ಶ್ರೋತೃಗಳು ಉತ್ತರ ಪಡೆದು ಸಂತುಷ್ಟರಾಗುವುದಿಲ್ಲವೋ ಅವರಿಗೆ ಮರುಪ್ರಶ್ನೆ ಕೇಳಿ ಸಮಾಧಾನ ಪಡಿಸಬೇಕು. ನಂತರ ಕಾರ್ಯವನ್ನು ಪ್ರಾರಂಭಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಯ ಶ್ರಿಯೇ ಸಮಿಧಾನಸ್ಯ ವೃಷ್ಣೋ ವಸೋರನೀಕಂ ದಮ ಆ ರುರೋಚ ।**
**ರುಶದ್ವಸಾನಃ ಸುದೃಶೀಕರೂಪಃ, ಕ್ಷಿತಿರ್ನ ರಾಯಾ ಪುರುವಾರೋ ಅದ್ಯೌತ್ ॥೧೫॥**

**ಪದಾರ್ಥ:-** **[ರುಶತ್]** ಸುಂದರರೂಪವನ್ನು **[ವಸಾನಃ]** ಪಡೆದವರು **[ಸುದೃಶೀಕರೂಪಃ]** ಉತ್ತಮ ರೀತಿಯ ನೋಡಲರ್ಹ ರೂಪವಂತರು **[ಪುರುವಾರಃ]** ಎಲ್ಲರೂ ಸ್ವೀಕರಿಸುವಂತಹ ರೂಪದಿಂದ ಶೋಭಿಸುತ್ತಲಿರುವವರು **[ರಾಯಾ]** ಧನದಿಂದ **[ಕ್ಷಿತಿಃ]** **[ನ]** ಭೂಮಿಗೆ ಸಮಾನರು **[ಅದ್ಯೌತ್]** ಆಗಿ ಪ್ರಕಾಶಿಸುವರೋ **[ಸಮಿಧಾನಸ್ಯ]** ಪ್ರಕಾಶಮಾನವಾದ **[ವೃಷ್ಣಃ]** ಬಲಿಷ್ಠನಾಗಿ **[ವಸೋಃ]** ವಾಸವಾಗಿರುವ ರಾಜನ **[ದಮೇ]** ಮನೆಯಲ್ಲಿ **[ಶ್ರಿಯೇ]** ಸಂಪತ್ತಿನ ಶೋಭೆಗೆ **[ಅನೀಕಂ]** ಸೇನೆಯನ್ನು **[ಆ, ರುರೋಚ]** ಎಲ್ಲರೀತಿಯಿಂದ ಸಜ್ಜಾದ ಸೇನೆಯ **[ಅಸ್ಯ]** ಈ ರಾಜನ ಸಾಧನವು ಎಲ್ಲಾ ಪ್ರಶ್ನೆಗಳಿಗೆ ಉತ್ತರವಾಗಿದೆ. ಸುಖಕರವೂ ಆಗಿದೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವನು ಉತ್ತಮ ರೂಪವಂತನು, ಭೂಮಿಯಂತೆ ಕ್ಷಮಾಶೀಲನು ಶ್ರೇಷ್ಠಗುಣವಂತನು ಪ್ರತಿಷ್ಠೆ ಪಡೆದ ಚಕ್ರವರ್ತಿ ರಾಜರ ಲಕ್ಷ್ಮಿಯಿಂದ ಶೋಭಿತರು ಉತ್ತಮ ಸುಶಿಕ್ಷಿತ ಸೇನೆ. ಬಲಿಷ್ಠ ಸೇನೆಯನ್ನು ವೃದ್ಧಿಪಡಿಸುವವರು ಅಂತಹವರಿಗೆ ಚಕ್ರವರ್ತಿ ರಾಜನು ಪ್ರಾಪ್ತನಾಗುವನು, ಬೇರೆಯವರಿಗಲ್ಲ.

ಈ ಸೂಕ್ತದಲ್ಲಿ ಬುದ್ಧಿವಂತರ, ರಾಜನ, ಅಧ್ಯಾಪಕೋಪದೇಶಕರ, ಪೃಚ್ಛಕನ ಹಾಗೂ ಸಮಾಧಾನ ಹೇಳುವವನ ಗುಣವರ್ಣನೆಗಳಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐದನೆಯ ಸೂಕ್ತ ಸಮಾಪ್ತ**

## ಸೂಕ್ತ ೬

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ೧, ೩, ೪, ೮, ೧೧ ವಿರಾಟ್ತ್ರಿಷ್ಟುಪ್, ೭ ನಿಚೃತ್ತ್ರಿಷ್ಟುಪ್, ೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೪, ೯ ಭುರಿಕ್ ಪಂಕ್ತಿಃ, ೬ ಸ್ವರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ವಿದ್ವಾಂಸರ ವಿಷಯ ಹೇಳಲಾಗಿದೆ.

**ಊರ್ಧ್ವ ಊ ಷು ಣೋ ಅಧ್ವರಸ್ಯ ಹೋತ-ರಗ್ನೇ ತಿಷ್ಠ ದೇವತಾತಾ ಯಜೀಯಾನ್ ।**
**ತ್ವಂ ಹಿ ವಿಶ್ವಮಭ್ಯಸಿ ಮನ್ಮ ಪ್ರ ವೇಧಸಶ್ಚಿತ್ತಿರಸಿ ಮನೀಷಾಮ್ ॥೧॥**

**ಪದಾರ್ಥ:-** **[ಹೋತಃ]** ದಾನಶೀಲನಾದ **[ಅಗ್ನೇ]** ಅಗ್ನಿಯಂತಿರುವ ವಿದ್ಯಾವಂತನೇ! **[ಹಿ]** ಯಾವುದರಿಂದ **[ತ್ವಂ]** ನೀನು **[ದೇವತಾತಾ]** ವಿದ್ವಾಂಸರ ಸಾಲಿನಲ್ಲಿ **[ಯಜೀಯಾನ್]** ಅತಿಶಯ ಯಜ್ಞ ಮಾಡುವವನು **[ನಃ]** ನಮಗೆ **[ಅಧ್ವರಸ್ಯ]** ಧಾರ್ಮಿಕ ವ್ಯವಹಾರದ **[ಊರ್ಧ್ವಃ]** ಅಧಿಷ್ಠಾತೃವು **[ವೇಧಸಃ]** ಬುದ್ಧಿವಂತರ ಸಂಬಂಧದಲ್ಲಿ **[ವಿಶ್ವಂ]** ಸಮಗ್ರ ಜಗತ್ತನ್ನು ಮತ್ತು **[ಮನ್ಮ]** ವಿಜ್ಞಾನದ **[ಅಭಿ]** ಸಮ್ಮುಖ **[ಅಸಿ]** ಆಗುವರೋ ಮತ್ತು **[ಮನೀಷಾಂ ಚಿತ್]** ಉತ್ತಮ ಬುದ್ಧಿಯ **[ತಿರಸಿ]** ಕೊನೆ ತಲುಪುತ್ತ **[ಉ]** **[ಸು]** **[ಪ್ರ, ತಿಷ್ಠ]** ಉತ್ತಮ ಪ್ರಕಾಶದಿಂದ ಸುಸ್ಥಿತನಾಗು.

**ಭಾವಾರ್ಥ:-** ಮನುಷ್ಯರೇ! ಯಾರು ವಿದ್ವಾಂಸರಿಂದ ವಿದ್ಯೆಯನ್ನು ಪಡೆದು ಎಲ್ಲರ ರಕ್ಷಣೆ ಮಾಡುವರೋ ಎಲ್ಲರಿಗೂ ಬುದ್ಧಿ ಹೇಳುವರೋ ಅವರ ಪ್ರತಿಷ್ಠೆಯು ವೃದ್ಧಿಯಾಗುತ್ತದೆ.

ವಿದ್ಯಾವಂತರ ಕರ್ತವ್ಯವಿಲ್ಲಿ ತಿಳಿಸಿದೆ.

**ಅಮೂರೋ ಹೋತಾ ನ್ಯಸಾದಿ ವಿಕ್ಷ್ವ (ಅ) ೧- ಗ್ನಿರ್ಮಂದ್ರೋ ವಿದಥೇಷು ಪ್ರಚೇತಾಃ ।**

**ಊರ್ಧ್ವಂ ಭಾನುಂ ಸವಿತೇವಾಶ್ರೇ-ನ್ಮೇತೇವ ಧೂಮಂ ಸ್ತಭಾಯದುಪದ್ಯಾಮ್ ॥೨॥**

**ಪದಾರ್ಥ:-** **[ಅಮೂರಃ]** ಮೂರ್ಖತನ ರಹಿತನಾಗಿ **[ಹೋತಾ]** ಗ್ರಹಣ ಮಾಡುವವನು **[ವಿಕ್ಷು]** ಪ್ರಜೆಗಳಲ್ಲಿ **[ವಿದಥೇಷು]** ಸಂಗ್ರಾಮಗಳಲ್ಲಿ **[ಅಗ್ನಿಃ]** ಅಗ್ನಿಯಂತೆ **[ಮಂದ್ರಃ]** ಆನಂದದಾಯಕನು **[ಪ್ರಚೇತಾಃ]** ಬುದ್ಧಿವಂತಿಕೆಯು **[ದ್ಯಾಂ]** ಬೆಳಕನ್ನು **[ಊರ್ಧ್ವಂ]** ಮೇಲುಗಡೆಯಲ್ಲಿರುವ **[ಭಾನುಂ]** ಕಿರಣವನ್ನು **[ಸವಿತೇವ]** ರವಿಯಂತೆ **[ಧೂಮಂ]** ಹೊಗೆಯಂತೆ **[ಮೇತೇವ]** ಯಥಾರ್ಥ ಜ್ಞಾನಿಯಂತೆ **[ಸ್ತಭಾಯತ್]** ತಡೆಯುತ್ತಾನೆ. **[ಅಶ್ರೇತ್]** ನ್ಯಾಯವನ್ನಾಶ್ರಯಿಸುತ್ತಾನೆ. ಅವನೇ ರಾಜ್ಯದ ಕೆಲಸದಲ್ಲಿ **[ಉಪ, ನಿ, ಅಸಾದಿ]** ಉದ್ಯುಕ್ತನಾಗಿ ನೆಲೆಸಿದರೆ ಬಹಳ ಸುಖ ಲಭಿಸುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವನು ಸೂರ್ಯನಂತೆ ಪ್ರತಾಪಿಯೋ, ಅಗ್ನಿಯಂತೆ ದುಷ್ಟರ ದಾಹಕನೋ ನ್ಯಾಯ ಮತ್ತು ನಮ್ರತೆಗಳಿಂದ ಪ್ರಜೆಗಳಲ್ಲಿ ಚಂದ್ರನಂತಿರುವನೋ, ಯುದ್ಧಗಳಲ್ಲಿ ಜಯಗಳಿಸುವ ರಾಜನೋ, ಅಂತಹ ರಾಜನನ್ನೇ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ರಾಜನನ್ನಾಗಿ ಮಾಡಿದರೆ ಆ ರಾಜ್ಯದಲ್ಲಿ ಯಾವಾಗಲೂ ದುಃಖ ಉಂಟಾಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯತಾ ಸುಜೂರ್ಣೀ ರಾತಿನೀ ಘೃತಾಚೀ ಪ್ರದಕ್ಷಿಣಿದ್ದೇವತಾತಿಮುರಾಣಃ ।**

**ಉದು ಸ್ವರುರ್ನವಜಾ ನಾಕ್ರಃ ಪಶ್ವೋ ಅನಕ್ತಿ ಸುಧಿತಃ ಸುಮೇಕಃ ॥೩॥**

**ಪದಾರ್ಥ:-** **[ಸಜೂರ್ಣಿಃ]** ವೇಗಗತಿಯವರು **[ಯಾತಾ]** ಪ್ರಾಪ್ತವಾದ **[ರಾತಿನೀ]** ಬಹುವಾಗಿ ದಾನ ಮಾಡುವಂತಹ **[ಪ್ರದಕ್ಷಿಣಿತ್]** ಬಲಭಾಗದಲ್ಲಿ ಪ್ರಾಪ್ತವಾಗುವ **[ಘೃತಾಚೀ]** ರಾತ್ರಿಯ **[ದೇವತಾತಿಂ]** ಶ್ರೇಷ್ಠಗುಣಗಳಿರುವ ಸಮಯವನ್ನು **[ಉತ್, ಅನಕ್ತಿ]** ಸುಶೋಭಿತಗೊಳಿಸುತ್ತದೆ. **[ಉರಾಣಃ]** ಬಹು ಜನರನ್ನು ಬದುಕಿಸುವ **[ಸುಧಿತಃ]** ಧಾರಣ ಮಾಡಿರುವ **[ಸುಮೇಕಃ]** ಅತಿಶಯ ಪ್ರಕಾಶಮಾನವಾದ **[ಅಕ್ರಃ]** ಮಂದಗತಿಯಲ್ಲದ **[ನವಜಾಃ]** ಹೊಸತನದಿಂದ ಉತ್ಪನ್ನನಾದ ಸೂರ್ಯನು **[ಸ್ವರುಃ]** **[ನ]** ಉಪದೇಶಕನಿಗೆ ಸಮನಾಗಿ ಶೋಭಿಸುವ **[ಉ]** ಮತ್ತು **[ಪಶ್ವಃ]** ಪಶುಗಳನ್ನು ಹಿಂಸಿಸದವನು ಆಗಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಉಪದೇಶಕರು ಹಗಲೂ-ರಾತ್ರಿ ಸಭೆಗಳನ್ನು ನಡೆಸಲು ಯೋಗ್ಯವಾದ ಉಪದೇಶಮಾಡಬೇಕು. ಯಾವುದರಿಂದ ಶಯನ-ಜಾಗರಣಾದಿಗಳಿಂದ ಯುಕ್ತರಾಗಿ ಆಹಾರ-ವಿಹಾರಗಳನ್ನು ಮಾಡುತ್ತ ತಮ್ಮ ಹಿತ ಸಾಧಕರಾಗಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ತೀರ್ಣೇ ಬರ್ಹಿಷಿ ಸಮಿಧಾನೇ ಅಗ್ನಾ ಊರ್ಧ್ವೋ ಅಧ್ವರ್ಯುರ್ಜುಜುಷಾಣೋ ಅಸ್ಥಾತ್ ।**

**ಪರ್ಯಗ್ನಿಃ ಪಶುಪಾ ನ ಹೋತಾ ತ್ರಿವಿಷ್ಟ್ಯೇತಿ ಪ್ರದಿವ ಉರಾಣಃ ॥೪॥**

**ಪದಾರ್ಥ:-** [ಸಮಿಧಾನೇ] ಪ್ರಜ್ವಲಿಸುವ [ಬರ್ಹಿಷಿ] ಅಂತರಿಕ್ಷದಲ್ಲಿ [ಸ್ತೀರ್ಣೆ] ಆಚ್ಛಾದಿತ [ಅಗ್ನೌ] ಸೂರ್ಯರೂಪಾಗ್ನಿಯಲ್ಲಿ [ಉರಾಣಃ] ಬಹುಕಾರ್ಯ ಮಾಡುವ [ಊರ್ಧ್ವಃ] ಉನ್ನತ [ಅಗ್ನಿಃ] ಸೂರ್ಯ ರೂಪಾಗ್ನಿಯು [ಪರಿ] [ಅಸ್ಥಾತ್] ಎಲ್ಲ ಕಡೆಗಳಿಂದಲೂ ಸ್ಥಿರನಾಗಿರುವನು. [ತ್ರಿವಿಷ್ಟಿ] ಆಕಾಶದಲ್ಲಿ [ಪ್ರ, ದಿವಃ] ಉತ್ತಮ ಬೆಳಕನ್ನು [ಏತಿ] ಪಡೆಯುವನು. [ಪಶುಪಾಃ] ಪಶುಪಾಲಕನ [ನ] ಸದೃಶ [ಹೋತಾ] ಯಜ್ಞಮಾಡುವವನು [ಜುಜುಷಾಣಃ] ಹಾಗೆಯೇ ಸೇವೆ ಮಾಡುವವನಾಗಿ [ಅಧ್ವರ್ಯುಃ] ಅಹಿಂಸಾತ್ಮಕ ವ್ಯವಹಾರ ಮಾಡಲು ಇಚ್ಛಿಸಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಯಾರು ಅಹಿಂಸಾತ್ಮಕ ಕರ್ಮಗಳನ್ನು ಮಾಡುತ್ತ ಪರೋಪಕಾರಿಗಳಾಗುವರೋ ಅವರು ಅಂತರಿಕ್ಷದಲ್ಲಿ ಸೂರ್ಯನು ಬೆಳಗುವ ರೀತಿಯಲ್ಲಿ ಭೂಮಿಯಲ್ಲಿ ಬೆಳಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪರಿ ತ್ಮನಾ ಮಿತದ್ರುರೇತಿ ಹೋತಾ-ಗ್ನಿರ್ಮಂದ್ರೋ ಮಧುವಚಾ ಋತಾವಾ ।**
**ದ್ರವಂತ್ಯಸ್ಯ ವಾಜಿನೋ ನ ಶೋಕಾ ಭಯಂತೇ ವಿಶ್ವಾ ಭುವನಾ ಯದಭ್ರಾಟ್ ॥೫॥**

**ಪದಾರ್ಥ:-** [ಅಸ್ಯ] ಈ ಸೂರ್ಯನ [ವಾಜಿನಃ] [ನ] ಕುದುರೆಗೆ ಸಮನಾಗಿ [ಶೋಕಾಃ] ಪ್ರಕಾಶವು [ದ್ರವಂತಿ] ಓಡುತ್ತವೆ. [ಅಭ್ರಾಟ್] ಬೆಳಗುತ್ತದೆ. [ಯತ್] ಯಾವುದರಿಂದ [ವಿಶ್ವಾ] ಸಂಪೂರ್ಣ [ಭುವನಾ] ಲೋಕ ಲೋಕಾಂತರಗಳು [ಭಯಂತೇ] ಕಂಪಿಸುತ್ತವೆ. [ಋತಾವಾ] ಸತ್ಯವನ್ನು ವಿಭಾಗ ಮಾಡುವ ಪುರುಷನು [ಮಧುವಚಾ] ಮಧುರ ವಾಣಿಯಿಂದ [ಅಗ್ನಿಃ] ಅಗ್ನಿಯಂತೆ [ಹೋತಾ] ಯಜ್ಞ ಮಾಡುವವನು [ಮಂದ್ರಃ] ಆನಂದದಾಯಕನು/ ಆನಂದಿತನು [ಮಿತದ್ರುಃ] ಪರಿಮಾಣಪೂರ್ವಕವಾಗಿ [ತ್ಮನಾ] ತನ್ನಿಂದ [ಪರಿ, ಏತಿ] ಪ್ರಾಪ್ತನಾಗುವನು. ಅವನು ಸಮಗ್ರ ಸುಖವನ್ನು ಪಡೆಯುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಪರಮಾತ್ಮನ ಪ್ರಕಾಶವು ಎಲ್ಲಾ ಕಡೆಗಳಲ್ಲೂ ಇರುತ್ತದೆಯೋ, ಯಾವ ಪರಮಾತ್ಮನಿಗೆ ಎಲ್ಲರೂ ಹೆದರುತ್ತಾರೆಯೋ ಅವನ ತಿಳುವಳಿಕೆಗಾಗಿ ಎಲ್ಲರೂ ಸತ್ಯಾಚರಣೆ ಮತ್ತು ಯೋಗಾಭ್ಯಾಸವನ್ನು ಮಾಡಬೇಕು.

ಈ ಮಂತ್ರದಲ್ಲಿ ಈಶ್ವರನ ಮೂಲಕ ರಾಜನ ಗುಣ ಹೇಳಿದೆ.

**ಭದ್ರಾ ತೇ ಅಗ್ನೇ ಸ್ವನೀಕ ಸಂದೃ-ಗ್ಘೋರಸ್ಯ ಸತೋ ವಿಷುಣಸ್ಯ ಚಾರುಃ ।**
**ನ ಯತ್ತೇ ಶೋಚಿಸ್ತಮಸಾ ವರಂತ ನ ಧ್ವಸ್ಮಾನಸ್ತನ್ವೀ (ಈ) ೩ ರೇಪ ಆ ಧುಃ ॥೬॥**

**ಪದಾರ್ಥ:-** [ಸ್ವನೀಕ] ಉತ್ತಮ ಸೇನೆ ಇರುವ [ಅಗ್ನೇ] ಮಿಂಚಿಗೆ ಸದೃಶನಾದ [ತೇ] ನಿನ್ನ [ಘೋರಸ್ಯ] ದುಷ್ಟನ [ಸತಃ] ಶ್ರೇಷ್ಠ ಪುರುಷನ ಹಾಗೂ [ವಿಷುಣಸ್ಯ] ವಿಷಮದ [ಚಾರುಃ] ಸುಂದರತೆಯು [ಭದ್ರಾ] ಕಲ್ಯಾಣಕಾರಕ [ಸಂದೃಕ] ಸಮಾನದೃಷ್ಟಿಯು [ಯತ್] ಯಾವುದು [ತೇ] ನಿನ್ನ [ಶೋಚಿಃ] ಬೆಳಕು [ತಮಸಾ] ರಾತ್ರಿಯಿಂದ [ಧ್ವಸ್ಮಾನಃ] ನಾಶವಾಗುವ ಶತ್ರುವು [ನ] [ವರಂತ] ನಿವಾರಣೆಯಾಗುವುದಿಲ್ಲವೋ ಅದು ನಿನ್ನ [ತನ್ವೀ] ವಿಸ್ತೀರ್ಣ ನೀತಿಯಿಂದ [ರೇಪಃ] ಅಪರಾಧವನ್ನು [ನ] [ಆ, ಧುಃ] ಎಲ್ಲಾ ರೀತಿಯಿಂದ ಧಾರಣ ಮಾಡಲಾರದು. ಅಂತಹ ನೀನು ರಾಜನಾಗು.

**ಭಾವಾರ್ಥ:-** ಯಾವ ರಾಜನ ಪ್ರವೃತ್ತಿಯು ಪಕ್ಷಪಾತ ರಹಿತವಾಗಿರುತ್ತದೆಯೋ ಮತ್ತು ಯಾವನ ವಿಸ್ತೀರ್ಣ ನೀತಿಯು ಅವಿಚ್ಛಿನ್ನವಾಗಿರುತ್ತದೆಯೋ ಅವನ ರಾಜ್ಯದಲ್ಲಿ ಯಾರೂ ಅಪರಾಧವೆಸಗುವುದಿಲ್ಲ.

ಈಶ್ವರ ಭಾವದಲ್ಲಿ ತಂದೆ-ತಾಯಿಯರ ಸೇವಾಧರ್ಮವಿಲ್ಲಿ ಹೇಳಲಾಗಿದೆ.

**ನ ಯಸ್ಯ ಸಾತುರ್ಜನಿತೋರವಾರಿ ನ ಮಾತರಾಪಿತರಾ ನೂ ಚಿದಿಷ್ಟೌ । ಅಧಾ**
**ಮಿತ್ರೋ ನ ಸುಧಿತಃ ಪಾವಕೋ(ಽ) ಽ ಗ್ನಿರ್ದೀದಾಯ ಮಾನುಷೀಷು ವಿಕ್ಷು ॥೭॥**

**ಪದಾರ್ಥ:-** **[ಯಸ್ಯ]** ಯಾವನ **[ಸಾತುಃ]** ಸತ್ಯಾಸತ್ಯ ವಿಭಾಜಕನ **[ಜನಿತೋಃ]** ತಂದೆ-ತಾಯಿಯರ ಪ್ರೀತಿಯು **[ನ]** **[ಅವಾರಿ]** ಸ್ವೀಕರಿಸಲಾಗುವುದಿಲ್ಲವೋ ಮತ್ತು **[ಚಿತ್]** ಯಾರ **[ಮಾತಾ ಪಿತರಾ]** ತಂದೆ ತಾಯಿಯರು **[ಇಷ್ಟೌ]** ಪೂಜೆಗೆ ಯೋಗ್ಯರು **[ನ]** ಸ್ವೀಕಾರ ಮಾಡುವುದಿಲ್ಲವೋ ಅವರು ದುಃಖಿಗಳಾಗುವರು **[ಅಧಾ]** ಆ ಮೇಲೆ ತಂದೆ-ತಾಯಿಯರು ಸತ ತರಾಗುವರೋ **[ಸುಧಿತಃ]** ಅವರು ಉತ್ತಮ ಹಿತಕಾರೀ **[ಮಿತ್ರಃ]** ಮಿತ್ರನ **[ನ]** ಮತ್ತು **[ಅಗ್ನಿಃ]** ಅಗ್ನಿಯಂತೆ **[ಪಾವಕಃ]** ಪವಿತ್ರನು **[ಮಾನುಷೀಷು]** ಮನುಷ್ಯ ಸಂಬಂಧೀ **[ವಿಕ್ಷು]** ಪ್ರಜೆಗಳಲ್ಲಿ **[ನು, ದೀಧಾಯ]** ಶೀಘ್ರಪ್ರಕಾಶಮಾನನಾಗುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಎಂತಹ ಪುತ್ರನಿರುವಾಗ ತಂದೆ-ತಾಯಿಯರು ದುಃಖ ತಪ್ತರಾಗುವರೋ ಗೌರವಿಸಲ್ಪಡುವುದಿಲ್ಲವೋ ಅವನು ಭಾಗ್ಯಹೀನನಾಗಿ ಪೀಡಿತನಾಗುವನು ಮತ್ತು ಯಾವ ಮಗನ ಸೇವೆಯಿಂದ ತಂದೆ ತಾಯಿಯರು ಪ್ರಸನ್ನರಾಗುವರೋ ಅವನಿಗೆ ಪ್ರಜೆಗಳಲ್ಲಿ ಪ್ರಜೆ ಮತ್ತು ಸುಖ ಲಭಿಸುತ್ತದೆ.

ಈ ಮಂತ್ರದಲ್ಲಿ ವಿದ್ಯಾವಂತರ ವಿಷಯ ಹೇಳಿದೆ.

**ದ್ವಿರ್ಯಂ ಪಂಚ ಜೀಜನನ್ ತ್ಸಂವಸಾನಾಃ ಸ್ವಸಾರೋ ಅಗ್ನಿಂ ಮಾನುಷೀಷು ವಿಕ್ಷು ।**
**ಉಷರ್ಬುಧಮಥರ್ಯೋ (ಽ) ಽ ನ ದಂತಂ ಶುಕ್ರಂ ಸ್ವಾಸಂ ಪರಶುಂ ನ ತಿಗ್ಮಮ್ ॥೮॥**

**ಪದಾರ್ಥ:-** **[ಮಾನೂಷೀಷು]** ಮನುಷ್ಯ ಸಂಬಂಧೀ **[ವಿಕ್ಷು]** ಪ್ರಜೆಗಳಲ್ಲಿ **[ಅಗ್ನಿಂ]** ಅಗ್ನಿಯನ್ನು **[ಸಂವಸಾನಃ]** ಉತ್ತಮರೀತಿಯಲ್ಲಿ ಆಚ್ಛಾದನೆಗೊಳಿಸುವ **[ಪಂಚ]** ಐದು **[ಸ್ವಸಾರಃ]** ಬೆರಳುಗಳು **[ಅಥರ್ಯಃ]** ಅಹಿಂಸಿತ ಸ್ತ್ರೀಯರು **[ಶುಕ್ರಂ]** ಶುದ್ಧ **[ದಂತಂ]** ಹಲ್ಲನ್ನು **[ಸ್ವಾಸಂ]** ಸುಂದರ ಮುಖವನ್ನು **[ನ]** ಹೇಗೋ ಹಾಗೇ **[ತಿಗ್ಮಂ]** ತೀಕ್ಷ್ಣವಾದ **[ಪರಶುಂ]** ಕೊಡಲಿ ಆಯುಧವನ್ನು **[ನ]** ಹೇಗೋ ಹಾಗೆ **[ಯಂ]** ಯಾವ **[ಉಷರ್ಬುಧಂ]** ಬೆಳಗಿನ ಸಮಯದಲ್ಲಿ ತಿಳಿದುಕೊಳ್ಳುವವನನ್ನು **[ದ್ವಿಃ]** ಎರಡಾವರ್ತಿ **[ಜೀಜನನ್]** ಉತ್ಪಾದಿಸುವರು. ಅವರು ಎಲ್ಲಾ ಕಾರ್ಯಗಳನ್ನು ಸಿದ್ಧಪಡಿಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಬೆರಳುಗಳಿಂದ ಹೇಗೆ ಎಲ್ಲಾ ಕಾರ್ಯಗಳು ಸಿದ್ಧವಾಗುತ್ತವೆಯೋ ಹಾಗೆ ರಾತ್ರಿಯ ಕೊನೆಯ ಜಾವದಲ್ಲಿ ಎದ್ದು ಪ್ರಜೆಗಳ ಹಿತವನ್ನು ಸಾಧಿಸಿರಿ. ಹರಿತವಾದ ಪರಶುವಿನಂತೆ ದುಃಖವನ್ನು ಕತ್ತರಿಸಿ ಯೌವ್ವನಾವಸ್ಥೆಯಲ್ಲಿರುವ ಸ್ತ್ರೀಯರು ಹಲ್ಲು ಮತ್ತು ಮುಖವನ್ನು ಶುದ್ಧಗೊಳಿಸುವರೋ ಅವರಂತೇ ಪ್ರಜೆಗಳನ್ನು ಶುದ್ಧಗೊಳಿಸಿ ಸುಖನೀಡಿ ವಿಪ್ರರನ್ನು ವಿದ್ಯಾಜನ್ಮ ನೀಡಿ ಪವಿತ್ರಗೊಳಿಸಿರಿ.

ಈ ಮಂತ್ರದಲ್ಲಿ ಪ್ರಜೆಯಲ್ಲಿ ದೇವತಾತ್ವವನ್ನು ಹೇಳಲಾಗಿದೆ.

**ತವ ತ್ಯೇ ಅಗ್ನೇ ಹರಿತೋ ಘೃತಸ್ನಾ ರೋಹಿತಾಸ ಋಜ್ವಂಚಃ ಸ್ವಂಚಃ ।**
**ಅರುಷಾಸೋ ವೃಷಣ ಋಜುಮುಷ್ಕಾ ಆ ದೇವತಾತಿಮಹ್ವಂತ ದಸ್ಮಾಃ ॥೯॥**

**ಪದಾರ್ಥ:-** **[ಅಗ್ನೇ]** ರಾಜನೇ! **[ತವ]** ನಿನ್ನ **[ರೋಹಿತಾಸಃ]** ಬೆಳೆಯುತ್ತಲಿರುವ **[ಘೃತಸ್ನಾಃ]** ಯಾವುದರಿಂದ ಘೃತ ಅಥವಾ ಜಲವು **[ಯುಚ್ಛಂ ಚಃ]** ಸರಳರೀತಿಯಲ್ಲಿ ಸತ್ಕರಿಸುವ/ ಚಲಿಸುವ / ಪ್ರಾಪ್ತವಾಗುವ ಅವನು **[ಹರಿತಃ]** ಅಂಗುಲಿಗಳು **[ವೃಷಣಃ]** ಬಲಿಷ್ಠರಾದ **[ಋಜುಮುಷ್ಕಾಃ]** ಸರಳ ಮಾರ್ಗದಲ್ಲಿ **[ದಸ್ಮಾಃ]** ದುಃಖ ನಾಶಕನು **[ಅರುಷಾಸಃ]** ಸುಶಿಕ್ಷಿತ ಕುದುರೆಯಂತೆ **[ದೇವತಾತಿಂ]** ವಿದ್ಯಾವಂತರನ್ನು **[ಆ, ಅಹ್ವಂತ]** ಆಹ್ವಾನಿಸುವರು ಮತ್ತು ಕರ್ಮಮಾಡಲು ತಿಳಿದಿರುವರು. **[ತ್ಯ]** ಅಂತಹ ಮನುಷ್ಯರು ನಿಮ್ಮೊಡನೆ ಸಂಯುಕ್ತರಾಗಲು ಯೋಗ್ಯರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಕುದುರೆಯಂತಿರುವ ತನ್ನ ಬೆರಳುಗಳಿಂದ ಕಾರ್ಯವನ್ನು ಸಾಧಿಸಿಕೊಳ್ಳುವರೋ ಅವರು ಸಂಪದಭಿವೃದ್ಧಿ ಮಾಡಿಕೊಂಡು ಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೇ ಹ ತ್ಯೇ ತೇ ಸಹಮಾನಾ ಅಯಾಸ-ಸ್ತ್ವೇಷಾಸೋ ಅಗ್ನೇ ಅರ್ಚಯಶ್ಚರಂತಿ ।**
**ಶ್ಯೇನಾಸೋ ನ ದುವಸನಾಸೋ ಅರ್ಥಂ ತುವಿಷ್ವಣಸೋ ಮಾರುತಂ ನ ಶರ್ಧಃ ॥೧೦॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತಿರುವವನೇ! **[ಯೇ]** ಯಾರು **[ತೇ]** ನಿನ್ನ **[ಸಹಮಾನಃ]** ಸುಖದುಃಖಾದಿಗಳನ್ನು ಸಹಿಸಿಕೊಳ್ಳುವ **[ಆಯಾಸಃ]** ವಿದ್ವಾಂಸರು **[ತ್ವೇಷಾಸಃ]** ಪ್ರಕಾಶಮಾನರು **[ಶ್ಯೇನಾಸಃ]** ವಾಜಪಕ್ಷಿಯ ಸದೃಶ ಶೀಘ್ರ ಚಲಿಸುವವರು **[ನ]** ಕುದುರೆಗೆ ಸದೃಶ **[ದುವಸನಾಸಃ]** ತೆಗೆದುಕೊಂಡು ಹೋಗುವವರು **[ತುವಿಷ್ವಣಾಸಃ]** ಬಲವನ್ನು ಕೇಳುವವರು **[ಮಾರುತಂ]** ಗಾಳಿಗೆ ಸಂಬಂಧಿಸಿದ **[ಶರ್ಧಃ]** **[ನ]** ಬಲವನ್ನು ಹೇಗೋ ಹಾಗೆ **[ಅರ್ಚಯಃ]** ಉತ್ತಮ ಕ್ರಿಯೆಗಳಂತೆ **[ಅರ್ಥಃ]** ದ್ರವ್ಯವನ್ನು **[ಚರಂತಿ]** ಪಡೆಯುವರು. **[ತ್ಯೇ]** ಅವರು **[ಹ]** ಅನ್ಯರಿಂದ ಸತ್ಕಾರಾರ್ಹರಾಗುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಯಾರು ಕ್ಷಮಾಶೀಲರೋ ಧರ್ಮ ಕ್ರಿಯಾಚರಣೆ ಮಾಡುವವರೋ, ಯಶಸ್ಸಿನಿಂದ ಬೆಳಗುವವರೋ ಕುದುರೆಯಂತೆ ವೇಗಗತಿಯಲ್ಲಿ ಕಾರ್ಯ ಮಾಡುವವರೋ, ಬಲಿಷ್ಠರೋ ಅವರು ಸತ್ಕಾರಾರ್ಹರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಕಾರಿ ಬ್ರಹ್ಮ ಸಮಿಧಾನ ತುಭ್ಯಂ ಶಂಸಾತ್ಯುಕ್ಥಂ ಯಜತೇ ವ್ಯೂ ಧಾಃ ।**
**ಹೋತಾರಮಗ್ನಿಂ ಮನುಷೋ ನಿ ಷೇದು-ರ್ನಮಸ್ಯಂತ ಉಶಿಜಃ ಶಂಸಮಾಯೋಃ ॥೧೧॥**

**ಪದಾರ್ಥ:-** **[ಸಮಿಧಾನ]** ಪ್ರಕಾಶಮಾನನೇ! ನೀನು **[ನಮಸ್ಯತಃ]** ನಮ್ರತೆಯೊಂದಿಗೆ **[ಉಶಿಜಃ]** ಇಚ್ಛಿಸುವವನಾಗಿ **[ಮನುಷಃ]** ಮನುಷ್ಯನ **[ಆಯೋಃ]** ಜೀವನವನ್ನು **[ಶಂಸಂ]** ಪ್ರಶಂಸೆಯನ್ನು ಮತ್ತು **[ಹೋತಾರಂ]** ದಾನಿಯನ್ನು

**[ಅಗ್ನಿಂ]** ಅಗ್ನಿಯಂತೆ **[ನಿ, ಸೇದುಃ]** ಪ್ರಾಪ್ತವಾಗುವೆ. **[ತುಭ್ಯಂ]** ನಿನಗೆ **[ಉಕ್ಥಂ]** ಸ್ತುತಿಯನ್ನು **[ಬ್ರಹ್ಮ]** ಧನದ **[ಶಂಸಾತಿ]** ಪ್ರಶಂಸಿಸುವರು. **[ಯಜತೇ]** ಯಾಗ ಮಾಡುವವನಿಗೆ **[ಅಕಾರಿ]** ಐಶ್ವರ್ಯವಂತನನ್ನಾಗಿ ಮಾಡುವೆ. **[ವಿ, ಉ, ಧಾಃ]** ನೀನೂ ಧಾರಣ ಮಾಡು.

**ಭಾವಾರ್ಥ:-** ರಾಜನೇ! ನಿನಗಾಗಿ ಸಂಪತ್ತನ್ನು ಬಯಸುತ್ತ ಪರಮೇಶ್ವರನನ್ನು ಮತ್ತು ವಿದ್ವಾಂಸರನ್ನು ನಮಿಸುವರೋ ಅವರು ನಿರಂತರ ಪ್ರಶಂಸೆಗೊಳಗಾಗುವರು.

ಈ ಸೂಕ್ತದಲ್ಲಿ ವಿದ್ಯಾವಂತರ ಮತ್ತು ಈಶ್ವರನ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಆರನೆಯ ಸೂಕ್ತ ಸಮಾಪ್ತ**

## ಸೂಕ್ತ ೭

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಅಗ್ನಿರ್ದೇವತಾ । ೧ ಭರಿಕ್ ತ್ರಿಷ್ಟುಪ್, ೩, ೧೦, ೧೧ ತ್ರಿಷ್ಟುಪ್, ೮, ೯ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಸ್ವರಾಡುಷ್ಣಿಕ್ ಛಂದಃ । ಋಷಭಃ ಸ್ವರಃ । ೩ ನಿಚೃದನುಷ್ಟುಪ್, ೪ ಅನುಷ್ಟುಪ್, ೫ ವಿರಾಡನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ಈ ಮಂತ್ರದಲ್ಲಿ ಸರ್ವಾಂತರ್ಯಾಮಿ ಅಗ್ನಿ ಶಬ್ದ ವಾಚ್ಯ ಈಶ್ವರನ ವಿಷಯ ಹೇಳಿದೆ.

**ಅಯಮಿಹ ಪ್ರಥಮೋ ಧಾಯಿ ಧಾತೃಭಿ-ರ್ಹೋತಾ ಯಜಿಷ್ಠೋ ಅಧ್ವರೇಷ್ವೀಡ್ಯಃ ।**
**ಯಮಪ್ನವಾನೋ ಭೃಗವೋ ವಿರುರುಚು-ರ್ವನೇಷು ಚಿತ್ರಂ ವಿಭ್ವಂ ವಿಶೇವಿಶೇ ॥೧॥**

**ಪದಾರ್ಥ:-** **[ಇಹ]** ಈ ಪ್ರಪಂಚದಲ್ಲಿ **[ಧಾತೃಭಿಃ]** ಧಾರಣ ಮಾಡುವವರಿಂದ **[ಅಯಂ]** ಇವನು **[ಪ್ರಥಮಃ]** ಮೊದಲು **[ಹೋತಾ]** ದಾನಿಯು **[ಯಜಿಷ್ಠಃ]** ಸಂಗತಿಗೊಳಿಸುವವನು **[ಅಧ್ವರೇಷು]** ಯಜ್ಞಗಳಲ್ಲಿ **[ಈಡ್ಯಃ]** ಸ್ತುತ್ಯರ್ಹ **[ಧಾಯಿ]** ಧಾರಣ ಮಾಡಲಾದವನನ್ನು **[ವಿಶೇವಿಶೇ]** ಪ್ರತಿ ಪ್ರಜೆಗೆ **[ಯಂ]** ಯಾವುದನ್ನು **[ಚಿತ್ರಂ]** ಅದ್ಭುತವಾದ **[ವಿಭ್ವಂ]** ವ್ಯಾಪಕನಾದ ಪರಮಾತ್ಮನನ್ನು **[ಅಪ್ನವಾನಃ]** ಪುತ್ರ-ಪೌತ್ರಾದಿಗಳೊಂದಿಗೆ **[ಭೃಗವಃ]** ಜ್ಞಾನವಂತರು **[ವನೇಷು]** ಕಾಡುಗಳಲ್ಲಿ **[ವಿರುರುಚುಃ]** ತಮ್ಮ ಚಿತ್ತದಲ್ಲಿ ಪರಮಾತ್ಮನನ್ನು ರಮಿಸುವರು.

**ಭಾವಾರ್ಥ:-** ಮನುಷ್ಯರೇ! ಈ ಪ್ರಪಂಚದಲ್ಲಿ ನೀವೆಲ್ಲರೂ ಆ ಪರಮಾತ್ಮನನ್ನೇ ಧ್ಯಾನಿಸಬೇಕು. ಯಾರ ಉಪಾಸನೆ ಮಾಡುವುದರಿಂದ ಸಾಂಸಾರಿಕ ಸುಖ ಮತ್ತು ಪಾರಮಾರ್ಥಿಕ ಸುಖ ಲಭಿಸುತ್ತದೆಯೋ ಅವನೇ ಈಶ್ವರನು. ಅವನೇ ಈ ಜಗತ್ತಿನಲ್ಲಿ ಉಪಾಸನಾ ಯೋಗ್ಯನು.

ಅಗ್ನಿ ಪದ ವಾಚ್ಯ ಈಶ್ವರನ ವಿಷಯವಿಲ್ಲಿದೆ.

**ಅಗ್ನೇ ಕದಾ ತ ಆನುಷ-ಗ್ಭುವದ್ದೇವಸ್ಯ ಚೇತನಮ್ ।**
**ಅಧಾ ಹಿ ತ್ವಾ ಜಗೃಭ್ರಿರೇ ಮರ್ತಾಸೋ ವಿಕ್ಷ್ವೀಡ್ಯಮ್ ॥೨॥**

**ಪದಾರ್ಥ:-** **[ಅಗ್ನೇ]** ಪರಮಾತ್ಮನೇ! **[ದೇವಸ್ಯ]** ಸುಖದಾಯಕನಾದ **[ತೇ]** ನಿನ್ನ **[ಕದಾ]** ಯಾವ ಕಾಲದಲ್ಲಿ **[ಆನುಷಕ್]** ಅನುಕೂಲಕರನು **[ಭುವತ್]** ಆಗುವೆ. **[ಅಧ]** ಅನಂತರ **[ಮರ್ತಾಸಃ]** ಮನುಷ್ಯರು **[ಹಿ]**

ನಿಶ್ಚಯವಾಗಿ [ವಿಕ್ಷು] ಪ್ರಜೆಗಳಲ್ಲಿ [ಈಡ್ಯಂ] ಸ್ತುತ್ಯರ್ಹ [ಚೇತನಂ] ಚೇತನರೂಪಿಯಾದ [ತ್ವಾ] ನಿನ್ನನ್ನು [ಜಗೃಭ್ರಿರೇ] ಗ್ರಹಣ ಮಾಡಲು ಇಚ್ಛಿಸಬೇಕು.

**ಭಾವಾರ್ಥ:-** ಪರಮೇಶ್ವರನೇ! ನಾವು ನಿನ್ನ ಪ್ರಾರ್ಥನೆಯನ್ನು ನಿರಂತರ ಮಾಡುವೆವು. ನಿನ್ನ ದಯೆಯಿಂದಲೇ ನಾವೆಲ್ಲರೂ ನಿನ್ನ ಭಕ್ತರು. ನಿನ್ನ ಆಜ್ಞಾಧಾರಕರು. ನಿನಗನುಕೂಲವಾಗಿ ವರ್ತಿಸುವವರು ಮತ್ತು ನಿನ್ನ ಉಪಾಸಕರು ಯಾವಾಗ ಆಗುವೆವು? ಸರ್ವಾಂತರ್ಯಾಮಿಯೇ! ಕರುಣಾಮಯಿಯೇ! ಬಹುಬೇಗನೇ ನಮ್ಮೆಲ್ಲರನ್ನೂ ನಿನಗೆ ಪ್ರೀತಿಪಾತ್ರರನ್ನಾಗಿ ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋತಾವಾನಂ ವಿಚೇತಸಂ ಪಶ್ಯಂತೋ ದ್ಯಾಮಿವ ಸ್ತೃಭಿಃ ।**
**ವಿಶ್ವೇಷಾಮಧ್ವರಾಣಾಂ ಹಸ್ಕರ್ತಾರಂ ದಮೇದಮೇ ॥೩॥**

**ಪದಾರ್ಥ:-** [ಋತಾವಾನಂ] ಸತ್ಯವಂತನನ್ನು [ವಿಚೇತಸಂ] ವಿಶಿಷ್ಟ ಜ್ಞಾನಿಯನ್ನು [ಪಶ್ಯಂತಃ] ನೋಡುತ್ತ [ದ್ಯಾಮಿವ] ಸೂರ್ಯನಂತೆ [ಸ್ತೃಭಿಃ] ನಕ್ಷತ್ರಗಳಿಂದ [ವಿಶ್ವೇಷಾಂ] ಎಲ್ಲರ [ಅಧ್ವರಾಣಾಂ] ಅಹಿಂಸಾತ್ಮಕ ಯಜ್ಞಗಳ [ಹಸ್ಕರ್ತಾರಂ] ಪ್ರಕಾಶಕಾರಕನನ್ನು [ದಮೇದಮೇ] ಮನೆ-ಮನೆಯಲ್ಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಚೇತನರಹಿತನಾದ ಕಾರಣರೂಪನಾದ ಪ್ರತಿಮನೆಯನ್ನು ಬೆಳಗಿಸುವವನಾದ ಈಶ್ವರನನ್ನು ತಿಳಿದಿರುವರೋ ಅವರು ಸೂರ್ಯನ ಬೆಳಕಿನಲ್ಲಿ ಚಂದ್ರಾದಿಗಳಂತೆ ಜಗತ್ತಿನಲ್ಲಿ ಪ್ರಕಾಶಮಾನರಾಗುವರು.

ಅಗ್ನಿ ವಿಷಯವಿಲ್ಲಿ ಹೇಳಿದೆ.

**ಆಶುಂ ದೂತಂ ವಿವಸ್ವತೋ ವಿಶ್ವಾ ಯಶ್ಚರ್ಷಣೀರಭಿ ।**
**ಆ ಜಭ್ರುಃ ಕೇತುಮಾಯವೋ ಭೃಗವಾಣಂ ವಿಶೇವಿಶೇ ॥೪॥**

**ಪದಾರ್ಥ:-** [ಯಃ] ಯಾವನು [ವಿವಸ್ವತಃ] ಸೂರ್ಯನ ದೆಸೆಯಿಂದ [ದೂತಂ] ದೂತನಂತೆ [ಆಶುಂ] ಶೀಘ್ರಗಾಮಿಯನ್ನು [ವಿಶೇವಿಶೇ] ಪ್ರಜೆಗಳಿಗೆ [ಭೃಗವಾಣಂ] ಪರಿಪಕ್ವಗೊಳಿಸುವವನನ್ನು [ಆಯವಃ] ಜ್ಞಾನವಂತರ [ವಿಶ್ವಾ] ಸಮಗ್ರ [ಚರ್ಷಣೀಃ] ಬೆಳಕನ್ನು [ಕೇತುಂ] ಜ್ಞಾನವನ್ನು [ಅಭಿ, ಆ, ಜಭ್ರುಃ] ಧಾರಣ ಮಾಡುವನೋ ಅವನು ಸರ್ವಾನಂದಿತನಾಗುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಸೂರ್ಯಾದಿಗಳಿಂದ ವಿದ್ಯುದಾದಿ ಪದಾರ್ಥಗಳನ್ನು ಗ್ರಹಣ ಮಾಡುವರೋ ಅವರು ಪ್ರಜೆಗಳಿಗೆ ಸುಖದಾಯಕರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಮೀಂ ಹೋತಾರಮಾನುಷಕ್ ಚಿಕಿತ್ವಾಂಸಂ ನಿ ಷೇದಿರೇ ।**
**ರಣ್ವಂ ಪಾವಕಶೋಚಿಷಂ ಯಜಿಷ್ಠಂ ಸಪ್ತ ಧಾಮಭಿಃ ॥೫॥**

**ಪದಾರ್ಥ:-** **[ತಂ]** ಅವನನ್ನು ಅಗ್ನಿಯಂತೆ **[ಆನುಷಕ್]** ಅನುಕೂಲ ರೀತಿಯಿಂದ **[ಹೋತಾರಂ]** ಸ್ವೀಕರಿಸುವವನು **[ಚಿಕಿತ್ವಾಂಸಂ]** ವಿದ್ಯಾವಂತನಾದ **[ರಣ್ವಂ]** ಸುಂದರನಾದ **[ಸಪ್ತ]** ಏಳು ಪ್ರಾಣಾದಿಗಳ **[ಧಾಮಭಿಃ]** ಸ್ಥಾನಗಳಿಂದ **[ಪಾವಕಶೋಚಿಷಂ]** ಅಗ್ನಿಯ ತೇಜಸ್ಸಿನಂತೆ ತೇಜೋಮಯನಾದವನನ್ನು **[ಯಜಿಷ್ಠಂ]** ಸಂಗತಿಕರಣಗೊಳಿಸುವವನನ್ನು **[ಈಮ್]** ಎಲ್ಲ ರೀತಿಯಿಂದ **[ನೀ ಷೇದಿರೇ]** ಸೇರಿಕೊಳ್ಳುವರು. ಅಂತಹವರು ರಾಜ್ಯ ಮತ್ತು ಐಶ್ವರ್ಯವನ್ನು ಪಡೆದುಕೊಳ್ಳುತ್ತಾರೆ.

**ಭಾವಾರ್ಥ:-** ಯಾರು ವಿದ್ಯುದ್ರೂಪ ಇಂಧನವನ್ನು ಎಲ್ಲ ಪದಾರ್ಥಗಳಿಂದ ಉತ್ಪಾದನೆ ಮಾಡುವ ಕಲೆಯನ್ನು ತಿಳಿದುಕೊಂಡಿರುವವರೋ ಅವರು ಅತ್ಯಂತ ಸುಖಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಂ ಶಶ್ವತೀಷು ಮಾತೃಷು ವನ ಆ ವೀತಮಶ್ರಿತಮ್ ।**
**ಚಿತ್ರಂ ಸಂತಂ ಗುಹಾ ಹಿತಂ ಸುವೇದಂ ಕೂಚಿದರ್ಥಿನಮ್ ॥೬॥**

**ಪದಾರ್ಥ:-** **[ಶಶ್ವತೀಷು]** ಅನಾದಿಕಾಲದಿಂದ ಇರುವ **[ಮಾತೃಷು]** ಆಕಾಶಾದಿ ಪದಾರ್ಥಗಳಲ್ಲಿ **[ವನೇ]** ಮತ್ತು ಕಿರಣದಲ್ಲಿ **[ಸಂತಮ್]** ಇರುವಂತಹ **[ಗುಹಾ]** ಬುದ್ಧಿಯಲ್ಲಿ **[ಹಿತಂ]** ಇರುವ **[ಸುವೇದಂ]** ಉತ್ತಮ ಜ್ಞಾನದ **[ಕೂಚಿದರ್ಥಿನಂ]** ಬಹು ಅರ್ಥಗಳಿರುವ **[ಅಶ್ರಿತಂ]** ಯಾರೂ ಸೇವನೆ ಮಾಡದಿರುವ **[ಆ, ವೀತಂ]** ಸರ್ವತ್ರ ವ್ಯಾಪ್ತನಾದ **[ತಂ]** **[ಚಿತ್ರಂ]** ಆ ಅದ್ಭುತ ಗುಣ ಕರ್ಮ ಸ್ವಭಾವದ ವಿದ್ಯುನ್ನಾಮಕ ಅಗ್ನಿಯನ್ನು ಸಿದ್ಧಗೊಳಿಸಿರಿ.

**ಭಾವಾರ್ಥ:-** ಯಾವ ಮನುಷ್ಯರು ಎಲ್ಲ ಪದಾರ್ಥಗಳಲ್ಲೂ ಪ್ರತ್ಯೇಕ ಪ್ರತ್ಯೇಕವಾಗಿರುವ ಅಗ್ನಿತತ್ತ್ವವನ್ನು ತಿಳಿದುಕೊಂಡಿರುವವರೋ ಅವರು ಎಲ್ಲಾ ಕಾರ್ಯಗಳನ್ನು ಮಾಡಲು ಸಮರ್ಥರಾಗುತ್ತಾರೆ.

ಈ ಮಂತ್ರದಲ್ಲಿ ಅಗ್ನಿ ವಿಷಯವನ್ನು ತಿಳಿಸಲಾಗಿದೆ.

**ಸಸಸ್ಯ ಯದ್ವಿಯುತಾ ಸಸ್ಮಿನ್ನೂಧನ್ನೃತಸ್ಯ ಧಾಮನ್ರಣಯಂತ ದೇವಾಃ ।**
**ಮಹಾ ಅಗ್ನಿರ್ನಮಸಾ ರಾತಹವ್ಯೋ ವೇರಧ್ವರಾಯ ಸದಮಿದೃತಾವಾ ॥೭॥**

**ಪದಾರ್ಥ:-** **[ದೇವಾಃ]** ವಿದ್ವಾಂಸರೇ! **[ನಮಸಾ]** ಅನ್ನಾದಿ ಪದಾರ್ಥಗಳೊಂದಿಗಿರುವ **[ರಾತಹವ್ಯಃ]** ಗ್ರಹಣ ಯೋಗ್ಯವಾದುದನ್ನು ಯಾರು ಕೊಟ್ಟಿರುವನೋ ಅವನು **[ಋತಾವಾ]** ಜಲದ ವಿಭಾಜಕನಾದ **[ಮಹಾನ್]** ಶ್ರೇಷ್ಠನಾದ **[ಅಗ್ನಿಃ]** ವಿದ್ಯುತ್ ರೂಪಾಗ್ನಿಯು **[ವೇಃ]** ಪಕ್ಷಿಯಂತೆ **[ಸದಂ]** ಪಡೆಯಲರ್ಹವಾದ **[ಯತ್]** ಯಾವ ಅಗ್ನಿಯಲ್ಲಿ **[ಸಸ್ಮಿನ್]** **[ಊಧನ್]** ಎಲ್ಲಾ ಅವಯವಗಳಲ್ಲಿ **[ಋತಸ್ಯ]** **[ಧಾಮನ್]** ಸತ್ಯದ ಸ್ಥಾನದಲ್ಲಿ **[ಸಸಸ್ಯ]** ಕನಸಿನ ಸಂಬಂಧದಿಂದ **[ವಿಯುತ]** ರಹಿತರಾಗಿ **[ರಣಯಂತಃ]** ಧ್ವನಿಗೈಯುವನೋ ಅವನನ್ನು **[ಅಧ್ವರಾಯ]** ಅಹಿಂಸಾತ್ಮಕ ವ್ಯವಹಾರಗಳಿಗೆ **[ಇತ್]** ಬಳಸಿಕೊಳ್ಳಲು ತಿಳಿದಿರುವವರೋ ಅವರು ಸತ್ಯವನ್ನು ತಿಳಿದವರಾಗುತ್ತಾರೆ.

**ಭಾವಾರ್ಥ:-** ಬುದ್ಧಿವಂತರೇ! ಯಾವ ಅಗ್ನಿಯು ಶರೀರಾದಿ ಪದಾರ್ಥಗಳಲ್ಲಿ ಮತ್ತು ನಿದ್ದೆಯಲ್ಲಿ ಪ್ರಸಿದ್ಧನಾಗುವನೋ ಅಂತಹ ಅಗ್ನಿಯು ಮಹತ್ತತ್ತ್ವವನ್ನು ಪಡೆದು ಸರ್ವತ್ರ ವ್ಯಾಪಕನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವೇರಧ್ವರಸ್ಯ ದೂತ್ಯಾನಿ ವಿದ್ವಾ-ನುಭೇ ಅಂತಾ ರೋದಸೀ ಸಂಚಿಕಿತ್ವಾನ್ ।**
**ದೂತ ಈಯಸೇ ಪ್ರದಿವ ಉರಾಣೋ ವಿದುಷ್ಟರೋ ದಿವ ಆರೋಧನಾನಿ ॥೮॥**

**ಪದಾರ್ಥಃ-** **[ಸಂಚಿಕಿತ್ವಾನ್]** ಉತ್ತಮ ಕೆಲಸಗಳನ್ನು ಮಾಡಲು ಬಯಸುವವನೇ! **[ವಿದ್ವಾನ್]** ವಿದ್ಯಾವಂತನೇ! **[ವಿದುಷ್ಟರಃ]** ಅತ್ಯಂತ ಜ್ಞಾನಿಯಾದ ನೀನು **[ವೇಃ]** ಸರ್ವತ್ರ ವ್ಯಾಪ್ತವಾದ **[ಅಧ್ವರಸ್ಯ]** ಅವಿನಾಶಕ ವ್ಯವಹಾರಗಳ **[ದೂತ್ಯಾನಿ]** ಸಂದೇಶವಾಹಕನಂತೆ ಕರ್ಮಗಳನ್ನು **[ಅಂತಃ]** ಮಧ್ಯದಲ್ಲಿ **[ಉಭೇ]** **[ರೋದಸೀ]** ಭೂಮ್ಯಂತರಿಕ್ಷಗಳೆರಡನ್ನು **[ದೂತಃ]** ಸಂದೇಶವಾಹಕನು **[ಪ್ರದಿವಃ]** ಪ್ರಾಚೀನವಾದ **[ಪುರಾಣಃ]** ಬಹುಕಾರ್ಯಮಾಡುತ್ತಾ ಚಲಿಸುವವನು **[ದಿವಃ]** ಬೆಳಕನ್ನು **[ಆರೋಧನಾನಿ]** ಎಲ್ಲ ರೀತಿಯಿಂದ ಗ್ರಹಣ ಮಾಡಲು **[ಈಯಸೇ]** ಪ್ರಾಪ್ತನಾಗುವೆ. ಆದ್ದರಿಂದ ಸುಖವು ಲಭಿಸುತ್ತದೆ.

**ಭಾವಾರ್ಥಃ-** ಮನುಷ್ಯರೇ! ವಿದ್ಯುದ್ರೂಪಾಗ್ನಿಯು ಸಮಗ್ರ ಶಿಲ್ಪಿ ಜನರ ದೂತನಂತಿರುವನು. ಎಲ್ಲರಿಗೂ ಪ್ರೇರಣಾದಾಯಕನು. ಅನಾದಿಕಾಲದಿಂದ ಸಿದ್ಧವಾದ ಎಲ್ಲ ಪದಾರ್ಥಗಳಲ್ಲೂ ವ್ಯಾಪಿಸಿಕೊಂಡಿರುವನು. ಆ ಅಗ್ನಿಯನ್ನು ಉತ್ಪಾದಿಸಿ ಸಂಗ್ರಹಿಸಿಡುವುದರಿಂದ ಎಲ್ಲ ಕಾರ್ಯಗಳನ್ನೂ ಸಾಧಿಸಿಕೊಳ್ಳುತ್ತಾ ಐಶ್ವರ್ಯವಂತರಾಗಬಹುದು.

ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಿದೆ.

**ಕೃಷ್ಣಂ ತ ಏಮ ರುಶತಃ ಪುರೋ ಭಾಶ್ಚರಿಷ್ಣ್ವ (ಅ) ೧ ರ್ಚಿರ್ವಪುಷಾಮಿದೇಕಮ್ ।**
**ಯದಪ್ರವೀತಾ ದಧತೇ ಹ ಗರ್ಭಂ ಸದ್ಯಶ್ಚಿಜ್ಜಾತೋ ಭವಸೀದು ದೂತಃ ॥೯॥**

**ಪದಾರ್ಥಃ-** **[ರುಶತ]** ಶ್ರೇಷ್ಠರೂಪವನ್ನು ಪ್ರಕಟಗೊಳಿಸುವ **[ತೇ]** ನಿನ್ನ **[ಯತ್]** ಯಾವ **[ಕೃಷ್ಣಂ]** ಎಳ್ಳರನ್ನೂ ಸೆಳೆಯುವ **[ಪುರಃ]** **[ಭಾಃ]** ಮೊದಲನೆಯ ಬೆಳಕು **[ಚರಿಷ್ಣು]** ಚಲನಶೀಲನು **[ವಪುಷಾಂ]** ಸುಂದರ ಶರೀರದ **[ಏಕಂ]** **[ಅರ್ಚಿಃ]** ಅದ್ವಿತೀಯ ತೇಜಸ್ಸು **[ಇತ್]** ಇದೆಯೋ ಅದನ್ನು **[ಏಮ]** ನಾವು ಪಡೆಯುವೆವು. **[ಅಪ್ರವೀತಾ]** ಚಲಿಸದಿರುವವಳು **[ಗರ್ಭಂ]** ಅಂತಃಸ್ವರೂಪವನ್ನು **[ದಧತೇ]** ಹೇಗೆ ಧಾರಣ ಮಾಡುವಳೋ ಹಾಗೆ **[ಹ]** ನಿಶ್ಚಯವಾಗಿ **[ಸದ್ಯಃ]** **[ಚಿತ್]** ಬಹು ಬೇಗನೆ **[ಜಾತಃ]** ಪ್ರಕಟನಾಗುವ **[ದೂತಃ]** **[ಇತ್]** ದೂತನಂತೆ **[ಊ]** **[ಭವಸಿ]** ಇರುವವನಾಗುವೆ.

**ಭಾವಾರ್ಥಃ-** ಕರುಣಾಳು ಅಧ್ಯಾಪಕನೇ! ನೀನು ಮಿಂಚಿನ ಶಕ್ತಿಯ ವಿದ್ಯೆಯನ್ನು ನಮ್ಮೆಲ್ಲರಿಗೆ ಬೋಧಿಸು. ಅದರಿಂದ ವೇಗದೂತನಂತೆ ಕಾರ್ಯಮಾಡಲು/ ಮಾಡಿಸಲು ನಾವು ಸಮರ್ಥರಾಗುವೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸದ್ಯೋ ಜಾತಸ್ಯ ದದೃಶಾನಮೋಜೋ ಯದಸ್ಯ ವಾತೋ ಅನುವಾತಿ ಶೋಚಿಃ ।**
**ವೃಣಕ್ತಿ ತಿಗ್ಮಾಮತಸೇಷು ಜಿಹ್ವಾಂ ಸ್ಥಿರಾ ಚಿದನ್ನಾ ದಯತೇ ವಿ ಜಂಭೈಃ ॥೧೦॥**

**ಪದಾರ್ಥಃ-** **[ಅಸ್ಯ]** ಈ **[ಸದ್ಯಃ]** **[ಜಾತಸ್ಯ]** ಈಗಷ್ಟೇ ಜನಿಸಿರುವ ವಿದ್ಯುದ್ರೂಪ ಶಕ್ತಿಯ **[ಯತ್]** ಯಾವ **[ದದೃಶಂ]** ನೋಡಲು ಯೋಗ್ಯವಾದ **[ಓಜಃ]** ಬಲಿಷ್ಠ ಶಕ್ತಿಯು **[ವಾತಃ]** ಗಾಳಿಯನ್ನು **[ಅನುವಾತಿ]** ಅನುಸರಿಸಿ

ಚಲಿಸುತ್ತದೆಯೋ ಅಂತಹ [ಶೋಚಿಃ] ಪ್ರಜ್ವಲಿಸುವ ಅಗ್ನಿ ಜ್ವಾಲೆಯನ್ನು [ಅತಸೇಷು] ವೃಕ್ಷಾದಿಗಳಲ್ಲಿ [ತಿಗ್ಮಾಂ] ತೀವ್ರಗತಿಯಲ್ಲಿ ಮತ್ತು [ಜಿಹ್ವಾಂ] ವಾಣಿಯನ್ನು [ಪೃಣಕ್ತಿ] ಸಂಗತಿಗೊಳಿಸುತ್ತಾನೆ. [ವಿ, ಜಂಭೈಃ] ಗತ್ಯಾಕ್ಷೇಪಗಳಿಂದ [ಚಿತ್] ಹಾಗೂ [ಸ್ಥಿರಾ] ದೃಢವಾದ [ಅನ್ನಾ] ಭೋಜನಯೋಗ್ಯ ಪದಾರ್ಥಗಳನ್ನು [ದಯತೇ] ಕೊಡುವನು. ಅಂತಹ ವಿದ್ಯುತ್ತನ್ನು ಜನರು ಕಾರ್ಯಗತಗೊಳಿಸಿಕೊಳ್ಳಬೇಕು.

**ಭಾವಾರ್ಥ:-** ಶಿಲ್ಪಿಗಳು ಪದಾರ್ಥಗಳಿಂದ ವಿದ್ಯುತ್ ಶಕ್ತಿಯನ್ನು ಉತ್ಪಾದಿಸಿಕೊಳ್ಳುವರೋ ಅವರು ಅದರ ನೋಡಲರ್ಹವಾದ ಓಜಸ್ಸನ್ನು ಮತ್ತು ವೇಗಗತಿಯನ್ನೂ ತೋರಿಸುವವರಾಗಿ ಬಹುವಿಧ ಸಂಪನ್ಮೂಲಗಳನ್ನು ಪ್ರಕಟಿಸಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೃಷು ಯದನ್ನಾ ತೃಷುಣಾ ವವಕ್ಷ ತೃಷುಂ ದೂತಂ ಕೃಣುತೇ ಯಹ್ವೋ ಅಗ್ನಿಃ ।**
**ವಾತಸ್ಯ ಮೇಳಿಂ ಸಚತೇ ನಿಜೂರ್ವ-ನ್ನಾಸುಂ ನ ವಾಜಯತೇ ಹಿನ್ವೇ ಅರ್ವಾ ॥೧೧॥**

**ಪದಾರ್ಥ:-** [ಯತ್] ಯಾವನು [ಯಹ್ವಃ] ಬಲಶಾಲಿಯಾದ [ಅರ್ವಾ] ಕುದುರೆಗೆ ಸಮನಾಗಿ [ನಿಜೂರ್ವನ್] ನಿರಂತರ ಚಲನಶೀಲವಾದ [ಅಗ್ನಿಃ] ಮಿಂಚು [ತೃಷುಣಾ] ವೇಗಗತಿಯಿಂದ [ಅನ್ನಾ] ಅನ್ನಾದಿ ಪದಾರ್ಥಗಳನ್ನು [ತೃಷು] [ವವಕ್ಷ] ಬೇಗ ಪ್ರಾಪ್ತಿಗೊಳಿಸುತ್ತದೆ. [ತೃಷುಂ] ಶೀಘ್ರಕಾರ್ಯಕಾರಿ [ದೂತಂ] ಸಂದೇಶವಾಹಕನಂತೆ ತನ್ನ ಪ್ರತಾಪವನ್ನು [ಕೃಣುತೇ] ಮಾಡುತ್ತದೆ. ಮತ್ತು [ವಾತಸ್ಯ] ಗಾಳಿಯ [ಮೇಳಿಂ] ಸಂಗತಗೊಳಿಸುವ ಕೆಲಸವನ್ನು [ಸಚತೇ] ಮಾಡುತ್ತದೆ. ವಿದ್ಯಾವಂತನು [ಆಶುಂ] [ನ] ವೇಗಗತಿಯ ಕುದುರೆಗೆ ಸಮನಾಗಿ [ವಾಜಯತೇ] ಚಲಿಸುವನು [ಹಿನ್ವೇ] ಮತ್ತು ಚಾಲನೆಗೊಳಿಸುವನು.

**ಭಾವಾರ್ಥ:-** ಯಾವನು ಮಿಂಚು ಮತ್ತು ಗಾಳಿಯನ್ನು ಸಂಯೋಜನಗೊಳಿಸುವ ವಿದ್ಯೆಯನ್ನು ತಿಳಿದುಕೊಳ್ಳುವನೋ ಅವನು ದೂತನಂತೆ ಅಥವಾ ಕುದುರೆಯಂತೆ ಅತಿಶಯ ವೇಗಗತಿಯಿಂದ ಸಮಾಚಾರವನ್ನು ತಿಳಿಸಬಲ್ಲನು.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಏಳನೆಯ ಸೂಕ್ತ ಸಮಾಪ್ತ

## ಸೂಕ್ತ ೮

ಮಂತ್ರಸಂಖ್ಯೆ ೮ । ವಾಮದೇವ ಋಷಿಃ । ಅಗ್ನಿರ್ದೇವತಾ । ೧, ೪, ೫, ೭ ನಿಚೃದ್ಗಾಯತ್ರೀ ಛಂದಃ । ೨, ೩, ೭ ಗಾಯತ್ರೀ ಛಂದಃ । ೮ ಭುರಿಗ್ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ವಿಷಯ ಹೇಳಲಾಗಿದೆ.

**ದೂತಂ ವೋ ವಿಶ್ವವೇದಸಂ ಹವ್ಯವಾಹಮಮರ್ತ್ಯಮ್ । ಯಜಿಷ್ಠಮೃಂಜಸೇ ಗಿರಾ ॥೧॥**

**ಪದಾರ್ಥ:-** [ವಃ] ನಿಮ್ಮ ಮಧ್ಯದಲ್ಲಿ [ದೂತಂ] ದೂತನಂತಿರುವ [ಅಮರ್ತ್ಯಂ] ನಾಶರಹಿತ [ವಿಶ್ವವೇದಸಂ] ಎಲ್ಲಾ ಪದಾರ್ಥಗಳಲ್ಲಿರುವ [ಯಜಿಷ್ಠಂ] ಸಂಗತಿಗೊಳಿಸುವ [ಹವ್ಯವಾಹಂ] ಹವಿಸ್ಸನ್ನು ಕೊಂಡೊಯ್ಯುವ ಅಗ್ನಿಯನ್ನು [ಗಿರಾ] ವಾಣಿಯಿಂದ ನಾವು ಅರಿತಿರುವೆವು. [ಋಂಜಸೇ] ಯಾವುದರಿಂದ ನೀನು ಕಾರ್ಯಸಿದ್ಧಿಗೊಳಿಸಿಕೊಳ್ಳುವೆ.

**ಭಾವಾರ್ಥ:-** ಮನುಷ್ಯರೇ! ಈ ಮಿಂಚಿನ ರೂಪಾಗ್ನಿಯೇ ದೂತನಂತೆ ಎಲ್ಲಾ ಕಾರ್ಯಗಳನ್ನು ಸಾಧಿಸುವವನಾಗಿರುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಹಿ ವೇದಾ ವಸುಧಿತಿಂ ಮಹಾಁ ಆರೋಧನಂ ದಿವಃ । ಸ ದೇವಾಁ ಏಹ ವಕ್ಷತಿ ॥೨॥**

**ಪದಾರ್ಥ:-** [**ದಿವಃ**] ಬೆಳಕಿನ [**ಆರೋಧನಂ**] ತಡೆಯುವ ಮತ್ತು [**ವಸುಧಿತಿಂ**] ದ್ರವ್ಯಗಳನ್ನು ಧಾರಣ ಮಾಡುವವನನ್ನು [**ವೇದ**] ಯಾರು ತಿಳಿದಿರುವರೋ [**ಸಃ**] ಅವನು [**ಹಿ**] ಯಾವ ಕಾರಣದಿಂದ [**ಮಹಾನ್**] ಮಹಿಮಾನ್ವಿತನೋ [**ಸಃ**] ಅವನು [**ಇಹ**] ಈ ಜಗತ್ತಿನಲ್ಲಿ [**ದೇವಾನ್**] ಶ್ರೇಷ್ಠಗುಣ ಭೋಗಗಳನ್ನು [**ಆ, ವಕ್ಷತಿ**] ಪ್ರಾಪ್ತಿಗೊಳಿಸುವನು.

**ಭಾವಾರ್ಥ:-** ಮನುಷ್ಯರೇ! ಮಿಂಚಿನ ರೂಪದ ಅಗ್ನಿಯು ಶ್ರೇಷ್ಠ ಭೋಗದಾಯಕ ಹಾಗೂ ಗುಣ ದಾಯಕನಾಗಿರುವನು. ಸೂರ್ಯನಿಗೂ ಸೂರ್ಯನಂತಿರುವನು. ಎಲ್ಲವನ್ನೂ ಧಾರಣ ಮಾಡುವವನೂ ಸವತ್ರ ವ್ಯಾಪ್ತನೂ ಆಗಿರುವನು. ಅವನನ್ನು ನಿಮ್ಮ ಕಾರ್ಯದಲ್ಲುಪಯೋಗಿಸಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ವೇದ ದೇವ ಆನಮಂ ದೇವಾಁ ಋತಾಯತೇ ದಮೇ । ದಾತಿ ಪ್ರಿಯಾಣಿ ಚಿದ್ವಸು ॥೩॥**

**ಪದಾರ್ಥ:-** [**ದೇವಃ**] ಕಾಮನೆ ಮಾಡುವವನು [**ವೇದ**] ತಿಳಿದಿರುವನು [**ಸಃ**] ಅವನು [**ದೇವಾನ್**] ಪೃಥಿವ್ಯಾದಿ ಪದಾರ್ಥಗಳ [**ಆನಮಂ**] ಸತ್ಕರಿಸಲು [**ಋತಾಯತೇ**] ಸತ್ಯಾಚರಣೆ ಮತ್ತು [**ದಮೇ**] ಮನೆಯಲ್ಲಿ [**ಚಿತ್**] ಹಾಗೂ [**ಪ್ರಿಯಾಣಿ**] ಪ್ರಿಯವಾದ [**ವಸು**] ದ್ರವ್ಯಗಳನ್ನು [**ದಾತಿ**] ಕೊಡುವನು.

**ಭಾವಾರ್ಥ:-** ಮನುಷ್ಯರೇ! ಪೃಥಿವ್ಯಾದಿ ಶ್ರೇಷ್ಠ ಪದಾರ್ಥಗಳಲ್ಲಿ ಅಗ್ನಿಯು ನೆಲೆಸಿರುವನು. ಆದ್ದರಿಂದವನು ಎಲ್ಲಾ ಬಗೆಯ ಸಂಪತ್ತ್ರದಾಯಕ ಶ್ರೇಷ್ಠ ದೇವನಾಗಿರುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಹೋತಾ ಸೇದು ದೂತ್ಯಂ ಚಿಕಿತ್ವಾಁ ಅಂತರೀಯತೇ । ವಿದ್ವಾ ಆರೋಧನಂ ದಿವಃ ॥೪॥**

**ಪದಾರ್ಥ:-** [**ಸಃ**] ಆ ಅಗ್ನಿಯು [**ಹೋತಾ**] ಪದಾರ್ಥಗಳ ಭಕ್ಷಕನು [**ಸಃ**] [**ಉ**] ಅವನೇ [**ಅಂತಃ**] ಮಧ್ಯದಲ್ಲಿರುವವನು [**ದೂತ್ಯಂ**] ದೂತನ ಕಾರ್ಯವನ್ನು [**ಈಯತೇ**] ಮಾಡುವನು [**ದಿವಃ**] ಬೆಳಕಿನ [**ಆರೋಧನಂ**] ಬೆಳಕನ್ನು ತಡೆಯುವವನು [**ಚಿಕಿತ್ವಾನ್**] ಜ್ಞಾನವಂತನು [**ವಿದ್ವಾನ್**] ಉತ್ತಮ ಪ್ರಯೋಗ ಮಾಡುವವನು [**ಇತ್**] ಅವನನ್ನು ತಿಳಿಯಿರಿ.

**ಭಾವಾರ್ಥ:-** ಮನುಷ್ಯರೇ! ಯಾವನು ಸಂಪೂರ್ಣ ಪದಾರ್ಥಗಳಲ್ಲಿ ಇರುವವನು ದೂತನಂತೆ ಕಾರ್ಯ ಮಾಡುವವನು ಸೂರ್ಯಾದಿಗಳನ್ನು ಪ್ರಕಾಶಗೊಳಿಸುವವನು ಅವನನ್ನು ನೀವೆಲ್ಲರೂ ಅವಶ್ಯ ತಿಳಿದುಕೊಳ್ಳಬೇಕು.

ಈ ಮಂತ್ರದಲ್ಲಿ ಅಗ್ನಿ ವಿದ್ಯೆಯನ್ನರಿತವರ ವಿಷಯ ಹೇಳಿದೆ.

**ತೇ ಸ್ಯಾಮ ಯೇ ಅಗ್ನಯೇ ದದಾಶುರ್ಹವ್ಯದಾತಿಭಿಃ । ಯ ಈಂ ಪುಷ್ಯಂತ ಇಂಧತೇ ॥೫॥**

**ಪದಾರ್ಥ:-** [ಯೇ] ಯಾರು [ಹವ್ಯದಾತಿಭಿಃ] ದಾನಯೋಗ್ಯ ವಸ್ತುಗಳ ದಾನದಿಂದ [ಅಗ್ನಯೇ] ಅಗ್ನಿ ವಿದ್ಯೆಯ ಪ್ರಾಪ್ತಿಗಾಗಿ [ದದಾಶುಃ] ದ್ರವ್ಯಾದಿಗಳನ್ನು ಕೊಡುವರೋ [ಯೇ] ಯಾರು [ಈಂ] ಜಲವನ್ನು [ಪುಷ್ಯಂತಃ] ಪುಷ್ಟಿಗೊಳಿಸುತ್ತ [ಇಂಧತೇ] ಪ್ರಕಾಶಮಾನರಾಗುವರೋ [ತೇ] ಅವರು ಸುಖಿಗಳಾಗುವರು. [ಸ್ಯಾಮ] ಅವರೊಂದಿಗೆ ನಾವೂ ಸಹ ಸುಖಿಗಳಾಗೋಣ.

**ಭಾವಾರ್ಥ:-** ಯಾರು ಅಗ್ನಿವಿದ್ಯೆ ಪ್ರಾಪ್ತಿಗಾಗಿ ಬಹುವ್ಯಯ ಮಾಡುವರೋ ಅವರು ಎಲ್ಲರಿಂದ ಎಲ್ಲಾ ರೀತಿಯಿಂದ ಎಲ್ಲ ಬಗೆಯ ಸುಖ ಪಡೆದು ಪುಷ್ಟರಾಗಿ ಆನಂದಪಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೇ ರಾಯಾ ತೇ ಸುವೀರ್ಯೈಃ ಸಸವಾಂಸೋ ವಿ ಶೃಣ್ವಿರೇ । ಯೇ ಅಗ್ನಾ ದಧಿರೇ ದುವಃ ॥೬॥**

**ಪದಾರ್ಥ:-** [ಯೇ] ಯಾರು [ಅಗ್ನಾ] ಮಿಂಚಿನ ರೂಪದ ಅಗ್ನಿಯಲ್ಲಿ [ದುವಃ] ಪರಿಚರ್ಯೆಯನ್ನು [ದಧಿರೇ] ಸ್ವೀಕರಿಸುವರೋ [ವಿ, ಶೃಣ್ವಿರೇ] ಗುಣವನ್ನು ಕೇಳಿಸಿಕೊಳ್ಳುವರೋ [ತೇ] ಅವರು [ರಾಯಾ] ಧನದೊಂದಿಗೆ [ತೇ] ಅವರು [ಸುವೀರ್ಯೈಃ] ಉತ್ತಮ ಬಲವಂತರೊಂದಿಗೆ [ಸಸವಾಂಸಃ] ಶಯನ ಮಾಡುತ್ತಿದ್ದೇವೆಯೋ ಎಂಬಂತೆ ಆನಂದಿಸುವರು.

**ಭಾವಾರ್ಥ:-** ಮನುಷ್ಯರು ಎಲ್ಲಿಯವರೆಗೆ ಅಗ್ನ್ಯಾದಿ ವಿದ್ಯೆಗಳ ಗ್ರಹಣ ಶ್ರವಣ ಮಾಡುವುದಿಲ್ಲವೋ, ಅದರ ಸೇವನೆ ಮಾಡುವುದಿಲ್ಲವೋ ಅಲ್ಲಿಯವರೆಗೆ ಧನಾಢ್ಯರೂ, ಬಲಿಷ್ಠರೂ ಆಗಲಾರರು. ಹೇಗೆ ಸುಖಶಯನ ಮಾಡಿ ಆನಂದವನ್ನನುಭವಿಸುವರೋ ಬಳಲಿಕೆಯನ್ನು ನಾಶ ಮಾಡಿಕೊಳ್ಳುವರೋ ಅದೇ ರೀತಿ ಅಗ್ನ್ಯಾದಿವಿದ್ಯೆಯ ಗ್ರಹಣ ಮಾಡಿದವರು ಧನಾದಿಗಳನ್ನು ಪಡೆದು ಆನಂದವನ್ನನುಭವಿಸುವರು; ದಾರಿದ್ರ್ಯವನ್ನು ನಾಶಗೊಳಿಸಿಕೊಳ್ಳುವರು.

ಈ ಮಂತ್ರದಲ್ಲಿ ವಿದ್ಯತ್ತಿನ ಪುರುಷಾರ್ಥ ತಿಳಿಸಲಾಗಿದೆ.

**ಅಸ್ಮೇ ರಾಯೋ ದಿವೇದಿವೇ ಸಂ ಚರಂತು ಪುರುಸ್ಪೃಹಃ । ಅಸ್ಮೇ ವಾಜಾಸ ಈರತಾಮ್ ॥೭॥**

**ಪದಾರ್ಥ:-** [ದಿವೇದಿವೇ] ಪ್ರತಿದಿನವೂ [ಅಸ್ಮೇ] ನಮ್ಮವರಲ್ಲಿ [ಪುರುಸ್ಪೃಹಃ] ಬಹು ಜನರು ಬಯಸುವಂತಹ [ರಾಯಃ] ಶ್ರೇಷ್ಠ ಸಂಪತ್ತನ್ನು [ಸಂ, ಚರಂತು] ಪಡೆದು ಆನಂದಿಸಲಿ. [ವಾಜಾಸಃ] ಅನ್ನಾದಿಗಳ ಯೋಗದಿಂದ [ಅಸ್ಮೇ] ನಮ್ಮನ್ನು [ಈರತಾಂ] ಪ್ರಾಪ್ತವಾಗಲಿ ಎಂದು ಅಭಿಲಾಶಿಸೋಣ.

**ಭಾವಾರ್ಥ:-** ಮನುಷ್ಯರು ಯಾವಾಗಲೂ ಪುರುಷಾರ್ಥವನ್ನು ಬಯಸಬೇಕು. ಅದರಿಂದಲೇ ಧನ, ಅನ್ನ, ರಾಜ್ಯ, ಪ್ರತಿಷ್ಠೆಗಳೆಲ್ಲವೂ ಲಭಿಸುತ್ತವೆ. ಧರ್ಮ, ಅರ್ಥ, ಕಾಮ, ಮೋಕ್ಷಗಳು ಪುರುಷಾರ್ಥಗಳೆನಿಕೊಳ್ಳುತ್ತವೆ. ಅರ್ಥ ಕಾಮಗಳನ್ನು ಧರ್ಮಕ್ಕೆ ಅವಿರೋಧವಾಗದಂತೆ ಆಚರಿಸಿದರೆ ಮೋಕ್ಷವು ತಾನೇ ಲಭಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ವಿಪ್ರಶ್ಚರ್ಷಣೀನಾಂ ಶವಸಾ ಮಾನುಷಾಣಾಮ್ । ಅತಿ ಕ್ಷಿಪ್ರೇವ ವಿಧ್ಯತಿ ॥೮॥**

**ಪದಾರ್ಥ:-** [**ವಿಪ್ರಃ**] ಬುದ್ಧಿವಂತನು [**ಶವಸಾ**] ಬಲದಿಂದ [**ಚರ್ಷಣೀನಾಂ**] ಸಂಪತ್ತಿನಿಂದ ಪ್ರಕಾಶಮಾನರಾದ [**ಮಾನುಷಾಣಾಂ**] ಮನುಷ್ಯರ ಮಧ್ಯದಲ್ಲಿ [**ಕ್ಷಿಪ್ರೇವ**] ಪ್ರೇರಣೆ ಪಡೆದವನಂತೆ [**ಅತಿ**] [**ವಿಧ್ಯತಿ**] ದುಃಖಗಳನ್ನು ಅತಿಶಯವಾಗಿ ನಾಶಗೊಳಿಸಿಕೊಳ್ಳುತ್ತಾನೆ. [**ಸಃ**] ಅವನು ಪ್ರಶಂಸಾರ್ಹನಾಗುವನು.

**ಭಾವಾರ್ಥ:-** ವಿದ್ಯಾವಂತರು ಅಗ್ನಿವಿದ್ಯೆಯನ್ನು ಉಪಯೋಗಿಸಿ ಮನುಷ್ಯರಲ್ಲಿನ ದಾರಿದ್ರ್ಯವನ್ನು ನಾಶಗೊಳಿಸಿ ಸಂಪತ್ತಿನ ಯೋಗವನ್ನು ತಂದುಕೊಡುತ್ತಾರೆ. ಆದ್ದರಿಂದ ಅಂತಹ ಅಗ್ನಿವಿದ್ಯೆ ಬಲ್ಲವರು ಸತ್ಕಾರಾರ್ಹರೂ, ಭಾಗ್ಯಶಾಲಿಗಳೂ ಆಗುವರು.

ಈ ಸೂಕ್ತದಲ್ಲಿ ಅಗ್ನಿವಿದ್ಯೆಯನ್ನರಿತ ವಿದ್ಯಾವಂತರ ಗುಣ ಸ್ವಭಾವಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಎಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೯

ಮಂತ್ರಸಂಖ್ಯೆ ೮ । ವಾಮದೇವ ಋಷಿಃ । ಅಗ್ನಿರ್ದೇವತಾ । ೧, ೩, ೪, ಗಾಯತ್ರೀ, ೨, ೬ ವಿರಾಟ್ ಗಾಯತ್ರೀ, ೫ ತ್ರಿಪಾದ್ ಗಾಯತ್ರೀ, ೭, ೮ ನಿಚೃದ್ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಸದೃಶರಾದ ವಿದ್ಯಾವಂತರನ್ನು ಗೌರವಿಸುವ ವಿಷಯ ಹೇಳಿದೆ.

**ಅಗ್ನೇ ಮೃಳ ಮಹಾँ ಅಸಿ ಯ ಈಮಾ ದೇವಯುಂ ಜನಮ್ । ಇಯೇಥ ಬರ್ಹಿರಾಸದಮ್ ॥೧॥**

**ಪದಾರ್ಥ:-** [**ಅಗ್ನೇ**] ಅಗ್ನಿಯಂತೆ ಪ್ರಕಾಶಮಾನನಾದವನೇ! [**ಯಃ**] ಯಾವ ನೀನು [**ಬರ್ಹಿಃ**] ಉತ್ತಮ ಆಸನವನ್ನು [**ಆಸದಂ**] ಪಡೆದು ಆಸೀನನಾಗಿರುವೆ. [**ದೇವಯುಂ**] ತನಗೆ ವಿದ್ಯಾವಂತರನ್ನು ಬಯಸುತ್ತಾ [**ಜನಂ**] ಅಂತಹ ಜನರನ್ನು [**ಈಮ್**] ಸರ್ವಥಾ [**ಆ, ಇಯೇಥ**] ಪಡೆದುಕೊಳ್ಳುವವನಾಗು. [**ಮಹಾನ್**] ನೀನು ಮಹಾಮಹಿಮನು [**ಅಸಿ**] ಆಗಿರುವೆ. [**ಮೃಳ**] ಆದ್ದರಿಂದ ಸುಖವಾಗಿ ಜೀವಿಸು.

**ಭಾವಾರ್ಥ:-** ಯಾವ ಮನುಷ್ಯನು ವಿದ್ಯಾವಂತರಿಂದ ವಿದ್ಯೆಯನ್ನು ಪಡೆಯಲು ಬಯಸಿ ಅದನ್ನು ಪಡೆದುಕೊಂಡು ಮನುಷ್ಯರಾದಿಯಾಗಿ ಎಲ್ಲಾ ಜೀವಿಗಳಿಗೂ ಸುಖ ನೀಡುತ್ತಾನೋ, ಅವನು ಆಸನಾದಿಗಳನ್ನು ಕೊಟ್ಟು ಗೌರವಿಸಲು ಯೋಗ್ಯನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಮಾನುಷೀಷು ದೂಳಭೋ ವಿಕ್ಷು ಪ್ರಾವೀರಮರ್ತ್ಯಃ । ದೂತೋ ವಿಶ್ವೇಷಾಂ ಭುವತ್ ॥೨॥**

**ಪದಾರ್ಥ:-** [**ಮಾನುಷೀಷು**] ಮನುಷ್ಯರಿಗೆ ಸಂಬಂಧಿಸಿದ [**ದಿಕ್ಷು**] ಪ್ರಜೆಗಳಲ್ಲಿ [**ವಿಶ್ವೇಷಾಂ**] ಎಲ್ಲರಲ್ಲಿ [**ಪ್ರಾವೀಃ**] ವಿದ್ಯೆಯ ರೂಪದಲ್ಲಿ ವ್ಯಾಪ್ತನಾಗಿ [**ಅಮರ್ತ್ಯಃ**] ಮನುಷ್ಯ ಸ್ವಭಾವರಹಿತನಾಗಿ [**ದೂತಃ**] ಸಮಗ್ರ ವಿದ್ಯೆಯ ದೂತನು [**ಭುವತ್**] ಆಗುವನು. [**ಸಃ**] ಅಂತಹವನು [**ದೂಳಭಃ**] ಪ್ರಪಂಚದಲ್ಲಿ ದುರ್ಲಭನಾಗಿರುವನು.

**ಭಾವಾರ್ಥ:-** ವಿದ್ಯಾವಂತರು ಎಲ್ಲಾ ಜನರಿಗೆ ಸುಖಸಾಧಕವಾದ ವಿದ್ಯೆಯ ದಾನವನ್ನು ಮಾಡಬೇಕು ಮತ್ತು ಮನುಷ್ಯರಲ್ಲಿ ಧರ್ಮಾಚರಣೆಯ ಪ್ರವೃತ್ತಿಯನ್ನು ಬೆಳೆಸಬೇಕು. ತಾನೂ ಧಾರ್ಮಿಕನಾಗಬೇಕು. ಆದರೆ ಅಂತಹ ವಿದ್ಯಾವಂತರು ಅತಿ ವಿರಳರಾಗಿರುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಸದ್ಮ ಪರಿ ಣೀಯತೇ ಹೋತಾ ಮಂದ್ರೋ ದಿವಿಷ್ಟಿಷು । ಉತ ಪೋತಾ ನಿ ಷೀದತಿ ॥೩॥**

**ಪದಾರ್ಥ:-** **[ಮಂದ್ರಃ]** ಆನಂದದಾಯಕನು **[ಹೋತಾ]** ದಾನಶೀಲನು **[ಉತ]** ಮತ್ತು **[ಪೋತಾ]** ಎಲ್ಲರನ್ನೂ ಪವಿತ್ರಗೊಳಿಸುವವನು **[ದಿವಿಷ್ಟಿಷು]** ದಿವ್ಯಗುಣಗಳ ವ್ಯವಹಾರದಲ್ಲಿ ತೊಡಗಿರುವ **[ಸದ್ಮ]** ಮನೆಯಲ್ಲಿ **[ನಿ, ಷೀದತಿ]** ವಾಸವಾಗಿರುವನು. **[ಸಃ]** ಅವನು **[ಪರಿ]** **[ನೀಯತೇ]** ವಿದ್ಯಾವಂತರಿಗೆ ಎಲ್ಲ ರೀತಿಯಿಂದಲೂ ಪ್ರಾಪ್ತನಾಗುವನು.

**ಭಾವಾರ್ಥ:-** ಯಾವ ಮನೆಯಲ್ಲಿ ವಿದ್ಯಾದಾನ ಮಾಡುವವರೂ, ಆನಂದದಾಯಕರೂ ವಾಸಿಸುವರೋ ಅಲ್ಲಿ ವಿನಯಾದಿ ಸಮಗ್ರ ಉತ್ತಮಗುಣಗಳು ಲಭಿಸುತ್ತವೆ.

ವಿದ್ಯಾವಂತರ ಗುಣವನ್ನಿಲ್ಲಿ ಹೇಳಿದೆ.

**ಉತ ಗ್ನಾ ಅಗ್ನಿರಧ್ವರ ಉತೋ ಗೃಹಪತಿರ್ದಮೇ । ಉತ ಬ್ರಹ್ಮಾ ನಿಷೀದತಿ ॥೪॥**

**ಪದಾರ್ಥ:-** **[ಗೃಹಪತಿಃ]** ಮನೆಯ ಸ್ವಾಮಿಯು **[ಅಗ್ನಿಃ]** ಅಗ್ನಿಗೆ ಸದೃಶನಾಗಿ **[ಗ್ನಾಃ]** ಸುಶಿಕ್ಷಿತ ವಾಣಿಯನ್ನು **[ನಿ. ಸೀದತಿ]** ಪಡೆದುಕೊಳ್ಳಬೇಕು **[ಉತ]** ಮತ್ತು **[ಬ್ರಹ್ಮ]** ನಾಲ್ಕು ವೇದಗಳನ್ನೂ ಪಡೆದಿರಬೇಕು. **[ಅಧ್ವರೇ]** ಅಹಿಂಸಾತ್ಮಕ ಸಂಯಮರೂಪ **[ದಮೇ]** ಮನೆಯಲ್ಲಿ ನೆಲೆಸಬೇಕು. **[ಉತೋ]** ಕರ್ಮಗಳನ್ನು ಮಾಡುತ್ತಾ **[ಉತ]** ಎಲ್ಲರಿಗೂ ಬೋಧನೆ ಮಾಡುತ್ತಾ ಗೌರವಾರ್ಹನಾಗಬೇಕು.

**ಭಾವಾರ್ಥ:-** ಯಾವ ಮನುಷ್ಯರು ಅಗ್ನಿಯಂತೆ ಪವಿತ್ರರಾಗಿ ವಿದ್ಯಾವಂತರಾಗಿರುವರೋ ಸಮಗ್ರ ವೇದವನ್ನು ತಿಳಿದುಕೊಂಡಿರುವರೋ ಮತ್ತು ಉತ್ತಮ ಕರ್ಮಾಚರಣೆ ಮಾಡುವವರೋ ಅವರೇ ಗೃಹಸ್ವಾಮಿಗಳು ಆಗಬೇಕು. ಅಂತಹವರೇ ಶ್ರೇಷ್ಠ ಅಧಿಕಾರ ಸ್ಥಾನವನ್ನು ಅಲಂಕರಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವೇಷಿ ಹ್ಯಧ್ವರೀಯತಾ-ಮುಪವಕ್ತಾ ಜನಾನಾಮ್ । ಹವ್ಯಾ ಚ ಮಾನುಷಾಣಾಮ್ ॥೫॥**

**ಪದಾರ್ಥ:-** **[ಅಧ್ವರೀಯತಾಂ]** ತಾನು ಯಜನಶೀಲನಾಗಿ **[ಮಾನುಷಾಣಾಂ]** ಮನುಷ್ಯ ಯೋನಿಯಲ್ಲಿ ಜನಿಸಿದ **[ಜನಾನಾಂ]** ಪ್ರಸಿದ್ಧ ಪುರುಷರನ್ನು **[ಉಪವಕ್ತಾ]** ಉಪದೇಶಿಸುವವನಾಗಿ **[ಹಿ]** ಆದರಿಂದ **[ಹವ್ಯ]** ಹವನೀಯ ವಸ್ತುಗಳನ್ನು **[ಚ]** ವಿಶೇಷವಾಗಿ **[ವೇಷಿ]** ಪಡೆದುಕೊಳ್ಳಬೇಕು.

**ಭಾವಾರ್ಥ:-** ಉಪದೇಶ ಮಾಡುವವರು ತಮ್ಮಂತಹ ಧರ್ಮೋಪದೇಶಕರನ್ನು ಸೃಷ್ಟಿಸಬೇಕು ಮತ್ತು ಅವರನ್ನು ಉತ್ತಮ ಶಿಕ್ಷಣ ನೀಡಲು ಹಾಗೂ ಉಪದೇಶ ಮಾಡಲು ಪ್ರವೃತ್ತರಾಗುವಂತೆ ಮಾಡಬೇಕು. ಅಂತಹ ಜನರೇ ಪ್ರಪಂಚದಲ್ಲಿ ಕಲ್ಯಾಣಕಾರಕರಾಗುವರು.

(ಮಂಡಲ ೪, ಸೂಕ್ತ ೯, ಮಂತ್ರ ೬)

ರಾಜನ ವಿಷಯವನ್ನಿಲ್ಲಿ ಹೇಳಲಾಗಿದೆ.

**ವೇಷೀದ್ವಸ್ಯ ದೂತ್ಯ (ಅಂ) ಗ ಯಸ್ಯ ಜುಜೋಷೋ ಅಧ್ವರಮ್ । ಹವ್ಯಂ ಮರ್ತ್ಯಸ್ಯ ವೋಳ್ಹವೇ ॥೬॥**

**ಪದಾರ್ಥ:-** [ಯಸ್ಯ] [ಮರ್ತ್ಯಸ್ಯ] ಯಾವ ಮನುಷ್ಯನ [ದೂತ್ಯಂ] ದೂತನ ಕರ್ಮವನ್ನು [ವೇಷಿ] ಪಡೆದುಕೊಳ್ಳುತ್ತೀರೋ [ವೋಳ್ಹವೇ] ಅದನ್ನು ಪಡೆಯಲು [ಹವ್ಯಂ] ಗ್ರಹಣ ಯೋಗ್ಯವಾದ [ಅಧ್ವರಂ] ಹಿಂಸಾರಹಿತ ವ್ಯವಹಾರದ [ಉ] [ಜುಜೋಷಃ] ಸೇವನೆ ಮಾಡಿರಿ. [ಇತ್] ಅಂತಹ ನೀವು [ಅಸ್ಯ] ಇವನ ದೂತನಾಗಲು ಅರ್ಹರು.

**ಭಾವಾರ್ಥ:-** ರಾಜ ಜನರೇ! ಯಾರು ಪರಿಪೂರ್ಣ ವಿದ್ಯಾವಂತರೂ, ಉತ್ತಮ ವಾಗ್ಮಿಗಳೂ, ಸ್ನೇಹ ಸ್ವಭಾವದವರೂ, ಧಾರ್ಮಿಕರೂ ಆಗಿರುವರೋ ಅವರನ್ನೇ ರಾಜ್ಯದ ವ್ಯವಹಾರ ಮಾಡಲು ಅಧಿಕಾರ ಸ್ಥಾನದಲ್ಲಿ ನೇಮಿಸಿಕೊಳ್ಳಬೇಕು. ಅಂತಹ ಶೂರ, ವೀರ, ಸ್ನೇಹಿತರನ್ನು ಸಂದೇಶವಾಹಕರನ್ನಾಗಿ ಮಾಡಿಕೊಂಡು ರಾಜ್ಯದ ಎಲ್ಲ ಕಡೆಗಳ ಸಮಾಚಾರವನ್ನು ತಿಳಿದುಕೊಂಡು ವಿಶೇಷ ರೀತಿಯಲ್ಲಿ ವ್ಯವಸ್ಥೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾಕಂ ಜೋಷ್ಯಧ್ವರ-ಮಸ್ಮಾಕಂ ಯಜ್ಞಮಂಗಿರಃ । ಅಸ್ಮಾಕಂ ಶೃಣುಧೀ ಹವಮ್ ॥೭॥**

**ಪದಾರ್ಥ:-** [ಅಂಗಿರಃ] ಪ್ರಾಣಪ್ರಿಯನಾದ ರಾಜನೇ! ನೀನು [ಅಸ್ಮಾಕಂ] ನಮ್ಮೆಲ್ಲರ [ಅಧ್ವರಂ] ನ್ಯಾಯಪೂರ್ವಕ ವ್ಯವಹಾರವನ್ನು [ಯಜ್ಞಂ] ವಿದ್ವಾಂಸರ ಸತ್ಕಾರಾದಿ ಕ್ರಿಯೆಯನ್ನು [ಜೋಷಿ] ಸೇವನ ಮಾಡುವೆ. ಅದರಿಂದ [ಅಸ್ಮಾಕಂ] ನಮ್ಮ [ಹವಂ] ಶಬ್ದಾರ್ಥ ಸಂಬಂಧ ವ್ಯವಹಾರವನ್ನು [ಶೃಣುಧೀ] ಶ್ರವಣ ಮಾಡು.

**ಭಾವಾರ್ಥ:-** ರಾಜನೇ! ನೀನು ನಮ್ಮೆಲ್ಲರ ರಕ್ಷಕನಾಗಿರುವೆ. ಆದ್ದರಿಂದ ಪ್ರಿಯನೂ ಆಗಿರುವೆ. ಅರ್ಥಿ-ಪ್ರತ್ಯರ್ಥಿಗಳ ಮಾತುಗಳನ್ನು ಕೇಳಿಸಿಕೊಂಡು ಸತತವಾಗಿ ನ್ಯಾಯವಿಧಾನ ಮಾಡು.

ಪ್ರಜೆಗಳ ವಿಷಯವಿಲ್ಲಿದೆ.

**ಪರಿ ತೇ ದೂಳಭೋ ರಥೋಽಸ್ಮಾँ ಅಶ್ನೋತು ವಿಶ್ವತಃ । ಯೇನ ರಕ್ಷಸಿ ದಾಶುಷಃ ॥೮॥**

**ಪದಾರ್ಥ:-** [ಯೇನ] ಯಾವ ಕಾರಣದಿಂದ ನೀನು [ದಾಶುಷಃ] ವಿದ್ಯಾದಿ ದಾನ ಮಾಡುವವರ [ಪರಿ] [ರಕ್ಷಸಿ] ರಕ್ಷಣೆಯನ್ನು ಎಲ್ಲ ರೀತಿಯಲ್ಲೂ ಮಾಡುವೆ. [ತೇ] ಅಂತಹ ನಿನ್ನ [ದೂಳಭಃ] ದುಃಖ ನಾಶಕ [ರಥಃ] ಯೋಗ್ಯವಾಹನವನ್ನು [ಅಸ್ಮಾನ್] ನಮ್ಮೆಲ್ಲರಿಗೆ [ವಿಶ್ವತಃ] [ಅಶ್ನೋತು] ಎಲ್ಲ ರೀತಿಯಲ್ಲೂ ಕೊಡಿಸುವವನಾಗು.

**ಭಾವಾರ್ಥ:-** ರಾಜನೇ! ನೀನು ಯಾವ ಸಾಧನಗಳಿಂದ ಅಂದರೆ ರಾಜ್ಯ ಸೇನಾ ಅಂಗಗಳಿಂದ ಸಮಗ್ರ ಪ್ರಜೆಗಳ ರಕ್ಷಣೆ ಮಾಡುತ್ತಲಿರುವೆಯೋ, ಅದರಿಂದ ನಮ್ಮೆಲ್ಲರಿಂದಲೂ ನೀನು ಪಡೆಯಲರ್ಹನಾಗಿರುವೆ.

ಈ ಸೂಕ್ತದಲ್ಲಿ ಅಗ್ನಿ, ರಾಜ, ಪ್ರಜೆ, ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗುತ್ತದೆ.

**ಒಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೧೦

ಮಂತ್ರಸಂಖ್ಯೆ ೮ । ವಾಮದೇವ ಋಷಿಃ । ಅಗ್ನಿರ್ದೇವತಾ । ೧ ಗಾಯತ್ರೀ, ೨, ೩, ೪, ೭ ಭುರಿಕ್ ಗಾಯತ್ರೀ ಛಂದಃ । ಷಡ್ಜಃ ಸ್ವರಃ । ೪, ೮ ಸ್ವರಾಡುಷ್ಣಿಕ್ ಛಂದಃ । ೬ ವಿರಾಡುಷ್ಣಿಕ್ ಛಂದಃ । ಋಷಭಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಶಬ್ದಾರ್ಥಕ ವಿದ್ವತ್ ವಿಷಯವನ್ನು ಹೇಳಲಾಗಿದೆ.

**ಅಗ್ನೇ ತಮದ್ಯಾ-ಶ್ವಂ ನ ಸ್ತೋಮೈಃ ಕ್ರತುಂ ನ ಭದ್ರಂ ಹೃದಿಸ್ಪೃಶಮ್ ।**
**ಋಧ್ಯಾಮಾ ತ ಓಹೈಃ ॥೧॥**

**ಪದಾರ್ಥ:-** [ಅಗ್ನೇ] ವಿದ್ಯಾವಂತನೇ! [ಓಹೈಃ] ನಮ್ರಗುಣಯುಕ್ತ ಕರ್ಮಗಳಿಂದ ಮತ್ತು [ಸ್ತೋಮೈಃ] ಸ್ತವನಗಳಿಂದ [ತೇ] ನಿನ್ನನ್ನು [ಅದ್ಯ] ಈ ದಿನ [ಅಶ್ವಂ] [ನ] ಕುದುರೆಗೆ ಸಮನಾಗಿ [ಕ್ರತುಂ] [ನ] ಬುದ್ಧಿಗೆ ಸದೃಶವಾದ [ಹೃದಿ ಸ್ಪೃಶಂ] ಮನಮುಟ್ಟುವ [ಭದ್ರಂ] ಕಲ್ಯಾಣಕಾರರನ್ನು [ಋಧ್ಯಾಮ] ಸಮೃದ್ಧಿಪಡಿಸೋಣ. [ತಂ] ನೀನು ಅಂತಹವರನ್ನು ನಮಗೂ ಸಮೃದ್ಧವಾಗಿ ದೊರಕಿಸಿಕೊಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಕುದುರೆ ಸವಾರಿ ಮಾಡುವುದರಿಂದ ಹೇಗೆ ಶೀಘ್ರವಾಗಿ ಗುರಿ ತಲುಪುವರೋ, ಹಾಗೆಯೇ ಉತ ಷ್ಟ ಬುದ್ಧಿಯನ್ನು ಆಕ್ರಮಿಸುವುದರಿಂದ ಮೋಕ್ಷ ಮಾರ್ಗವನ್ನು ಸುಗಮಗೊಳಿಸಿಕೊಳ್ಳಬಹುದು.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ಅಧಾ ಹ್ಯಗ್ನೇ ಕ್ರತೋರ್ಭದ್ರಸ್ಯ ದಕ್ಷಸ್ಯ ಸಾಧೋಃ ।**
**ರಥೀರ್‌ಋತಸ್ಯ ಬೃಹತೋ ಬಭೂಥ ॥೨॥**

**ಪದಾರ್ಥ:-** [ಅಗ್ನೇ] [ಹಿ] ಅಗ್ನಿಯಂತಿರುವ ರಾಜನೇ! [ರಥೀಃ] ನೀನು ಬಹುವಾಹನಗಳನ್ನು ಪಡೆದಿರುವೆ. [ಭದ್ರಸ್ಯ] ಕಲ್ಯಾಣಕಾರಕ [ದಕ್ಷಸ್ಯ] ಹಾಗೂ ಬಲಿಷ್ಠ [ಕ್ರತೋಃ] ಬೌದ್ಧಿಕ [ಸಾಧೋಃ] ಉತ್ತಮಮಾರ್ಗದಲ್ಲಿರುವ [ಋತಸ್ಯ] ಸತ್ಯ ನ್ಯಾಯರೂಪ [ಬೃಹತಃ] ವಿಸ್ತೃತ ವ್ಯವಹಾರಗಳ ರಕ್ಷಕನು [ಬಭೂಥ] ಆಗು. [ಅಧ] ಅನಂತರ ಲೋಕಕ್ಕೆ ರಾಜನಾಗು.

**ಭಾವಾರ್ಥ:-** ರಾಜನು ಸಂಪೂರ್ಣ ಬಲದಿಂದ ಮತ್ತು ವಿಜ್ಞಾನದಿಂದ ಸಜ್ಜನರ ರಕ್ಷಣೆ, ದುರ್ಜನರ ವಿನಾಶ ಹಾಗೂ ಸತ್ಯ ನ್ಯಾಯಗಳ ಉನ್ನತಿಯನ್ನು ನಿರಂತರವಾಗಿ ಮಾಡಲಿ.

ಪ್ರಜೆಗಳ ವಿಷಯವನ್ನಿಲ್ಲಿ ಹೇಳಿದೆ.

**ಏಭಿರ್ನೋ ಅರ್ಕೈ-ರ್ಭವಾ ನೋ ಅರ್ವಾಙ್ ಸ್ವ (ಅ) ೧ ರ್ಣ ಜ್ಯೋತಿಃ ।**
**ಅಗ್ನೇ ವಿಶ್ವೇಭಿಃ ಸುಮನಾ ಅನೀಕೈಃ ॥೩॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ತೇಜಸ್ವಿಯೇ! ನೀನು **[ಅರ್ಕೈಃ]** **[ಏಭಿಃ]** ಗೌರವ ಬುದ್ಧಿಬಲಗಳಿರುವ ಸಜ್ಜನರೊಂದಿಗೆ **[ನಃ]** ನಮ್ಮೆಲ್ಲರ ರಕ್ಷಕನು **[ಭವ]** ಆಗು. **[ಅರ್ವಾಂ]** ಅನ್ಯ ವ್ಯವಹಾರಗಳಲ್ಲಿರುವ **[ಸ್ವಃ]** **[ನ]** ಸೂರ್ಯನಿಗೆ ಸದೃಶನಾಗಿ ಸುಖಕಾರಕನೂ **[ನಃ]** ನಮ್ಮೆಲ್ಲರ ಮೇಲಿದ್ದು **[ಜ್ಯೋತಿಃ]** ಪ್ರಕಾಶಕಾರಕನೂ ಆಗು. **[ಸುಮನಾಃ]** ಉತ್ತಮ ಬುದ್ಧಿಯುಳ್ಳವನಾಗಿ **[ವಿಶ್ವೇಭಿಃ]** ಸಮಗ್ರವಾದ **[ಅನೀಕೈಃ]** ಸಮರ್ಥ ಸೇನೆಗಳಿಂದ ನಮ್ಮ ರಕ್ಷಕನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜನು ಶಕ್ತಿ-ಬುದ್ಧಿ-ಬಲಗಳಿಂದ ಸಜ್ಜನರ ಸಂಗ, ಶಿಷ್ಟರ ರಕ್ಷಣೆ, ಎಲ್ಲರಿಗೂ ಶಿಕ್ಷಣ ಇವೆಲ್ಲವನ್ನೂ ಮಾಡುತ್ತಾ ಪ್ರಜೆಗಳ ಪಾಲನೆ ಮಾಡಿದರೆ ಅಂತಹ ರಾಜರು ಸೂರ್ಯನಂತೆ ಪ್ರಕಾಶಮಾನರೂ, ಕೀರ್ತಿವಂತರೂ ಆಗಿ ಆನಂದಿತರಾಗುವರು.

ಮಂತ್ರಿಗಳ ವಿಷಯವಿಲ್ಲಿ ಹೇಳಿದೆ.

**ಆಭಿಷ್ಟೇ ಅದ್ಯ ಗೀರ್ಭಿರ್ಗೃಣಂತೋಽಗ್ನೇ ದಾಶೇಮ ।**
**ಪ್ರ ತೇ ದಿವೋ ನ ಸ್ತನಯಂತಿ ಶುಷ್ಮಾಃ ॥೪॥**

**ಪದಾರ್ಥ:-** **[ಅಗ್ನೇ]** ತೇಜಸ್ವಿ ರಾಜನೇ! **[ಅದ್ಯ]** ಈ ದಿನ **[ಆಭಿಃ]** **[ಗೀರ್ಭಿಃ]** ಈ ಸುಶಿಕ್ಷಿತ ವಾಣಿಗಳಿಂದ **[ತೇ]** ನಿನಗಾಗಿ **[ಸ್ತುವಂತಃ]** ಪ್ರಶಂಸೆ ಮಾಡುವವರಾಗಿ **[ದಾಶೇಮ]** ತೆರಿಗೆಯನ್ನು ಕೊಡುವೆವು. **[ತೇ]** ನಿನಗೆ **[ದಿವಃ]** **[ನ]** ಮಿಂಚಿನಂತೆ **[ಶುಷ್ಮಾಃ]** ಬಲ ಪರಾಕ್ರಮಿಗಳು **[ಪ್ರ, ಸ್ತನಯಂತಿ]** ಧ್ವನಿಗೈಯುವರು.

**ಭಾವಾರ್ಥ:-** ರಾಜನೇ! ನೀನು ಮಿಂಚಿನಂತೆ ಕಾರ್ಯ ಮಾಡುವ ಮಂತ್ರಿಗಳನ್ನು ನಿಯಮಿಸಿಕೊಂಡು ರಕ್ಷಣಾದಿ ಕಾರ್ಯಗಳನ್ನು ಮಾಡು. ನಿನ್ನ ಪ್ರಜೆಗಳಾದ ನಾವೆಲ್ಲರೂ ನಿರಂತರ ನಿನ್ನ ಪ್ರಶಂಸೆಯನ್ನು ಮಾಡುತ್ತಾ ತೆರಿಗೆಯ ಮೂಲಕ ಧನಾದಿ ಸಂಪತ್ತುಗಳನ್ನು ಕೊಡುವೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತವ ಸ್ವಾದಿಷ್ಠಾ-ಗ್ನೇ ಸಂದೃಷ್ಟಿ-ರಿದಾ ಚಿದಹ್ನ ಇದಾ ಚಿದಕ್ತೋಃ ।**
**ಶ್ರಿಯೇ ರುಕ್ಮೋ ನ ರೋಚತ ಉಪಾಕೇ ॥೫॥**

**ಪದಾರ್ಥ:-** **[ಅಗ್ನೇ]** ಪ್ರಕಾಶಮಾನ ರಾಜನೇ! **[ಸ್ವಾದಿಷ್ಟ]** ಮಧುರವಾದ **[ಸಂದೃಷ್ಟಿಃ]** ಉತ್ತಮ ದೃಷ್ಟಿಯು **[ತವ]** ನಿನ್ನ **[ಉಪಾಕೇ]** ಸಮೀಪದಲ್ಲಿ **[ಅಹ್ನಃ]** ಹಗಲು **[ಚಿತ್]** ಮತ್ತು **[ಅಕ್ತೋಃ]** ರಾತ್ರಿಗಳ ಮಧ್ಯದಲ್ಲಿ **[ಋುಕ್ಮಃ]** **[ನ]** ಪ್ರಕಾಶಮಾನ ಸೂರ್ಯನಿಗೆ ಸಮನಾಗಿ **[ಶ್ರಿಯೇ]** ಧನ ಪ್ರಾಪ್ತಿಗಾಗಿ **[ರೋಚತೇ]** ಪ್ರಕಟನಾಗುವೆ. **[ಇದಾ]** ಆದ್ದರಿಂದಲೇ ನೀವು ರಕ್ಷಣಾರ್ಹನಾಗಿರುವೆ. **[ಚಿತ್ ಇದಾ]** ಆದ್ದರಿಂದಲೇ ಸರ್ವಗುಣ ಸಂಪನ್ನನಾದ ನೀನು ರಾಜ್ಯ ರಕ್ಷಣೆ ಮಾಡಲು, ಶತ್ರುಗಳನ್ನು ತಡೆಯಲು ಸಮರ್ಥನಾಗಿರುವೆ.

**ಭಾವಾರ್ಥ:-** ರಾಜನೇ! ನಿನ್ನಲ್ಲಿ ಹಗಲು ರಾತ್ರಿ ಎಲ್ಲ ಸಮಯದಲ್ಲೂ ನ್ಯಾಯಪಾಲನೆ ಮಾಡುವ ಅನ್ಯಾಯವನ್ನು ವಿರೋಧಿಸುವ ಸನ್ಮಾರ್ಗದಲ್ಲಿ ಪ್ರವೃತ್ತಿಗೊಳಿಸುವ ದೂತರಂತಿರುವ ಮಂತ್ರಿಗಳಿರಬೇಕು. ಅಂದರೆ ನೀನು ಸತ್ಕಾರಾರ್ಹನೂ, ರಕ್ಷಣಾರ್ಹನೂ ಆಗುವೆ.

ಪ್ರಜೆಗಳ ವಿಷಯವನ್ನಿಲ್ಲಿ ಹೇಳಲಾಗಿದೆ.

**ಘೃತಂ ನ ಪೂತಂ ತನೂರರೇಪಾಃ ಶುಚಿ ಹಿರಣ್ಯಮ್ ।**
**ತತ್ತೇ ರುಕ್ಮೋ ನ ರೋಚತ ಸ್ವಧಾವಃ ॥೬॥**

**ಪದಾರ್ಥ:-** **[ಸ್ವಧಾವಾನ್]** ಬಹ್ವನ್ನಸಂಪನ್ನ ರಾಜನೇ! **[ಅರೇಪಾಃ]** ಪಾಪಾಚರಣರಹಿತನೇ! **[ತೇ]** ನಿನ್ನ ರಾಜ್ಯದಲ್ಲಿ **[ರುಕ್ಮ]** **[ನ]** ದೇದೀಪ್ಯಮಾನನಿಗೆ ಸದೃಶನಾಗಿ **[ರೋಚತ]** ಶೋಭಿತನಾಗು ಮತ್ತು **[ಶುಚಿ]** ಪವಿತ್ರವಾದ **[ಹಿರಣ್ಯಂ]** ಜ್ಯೋತಿಯಂತೆ ಇರುವ ಸುವರ್ಣವನ್ನು ಪ್ರಾಪ್ತಿಗೊಳಿಸುವೆವು. **[ತತ್]** ಅದನ್ನು ಪಡೆದು **[ತನೂಃ]** ದೇಹವನ್ನು **[ಪೂತಂ]** ಪವಿತ್ರಗೊಳಿಸಿಕೊಂಡು **[ಘೃತಂ]** **[ನ]** ನೀರಿನಂತೆ ಚಿರಸ್ಥಾಯಿಯಾಗು.

**ಭಾವಾರ್ಥ:-** ರಾಜನೇ! ನೀನು ಸೂರ್ಯನಂತೆ ತೇಜಸ್ವಿ, ಧನಸಂಪನ್ನ, ಕುಲೀನ, ಪವಿತ್ರ, ಪ್ರಶಂಸಾರ್ಹ, ಅಪರಾಧರಹಿತನಾಗಿ ಶ್ರೇಷ್ಠ ಶರೀರವನ್ನು ಪಡೆದುಕೊಂಡು ವಿದ್ಯೆಯಲ್ಲೂ ವಯಸ್ಸಿನಲ್ಲೂ ಹಿರಿಯನೆನಿಸಿಕೊಂಡಿರುವೆ. ಆದ್ದರಿಂದ ನೀನು ನಿನ್ನ ರಾಜ್ಯವು ಆ ರಾಜ್ಯದ ರಕ್ಷಕರು ಈ ಎಲ್ಲರಿಗೂ ಬೇಕಾದವನಾಗಿ ಬಹುಕಾಲ ಬಾಳು.

ರಾಜನ ವಿಷಯವಿಲ್ಲಿ ಹೇಳಿದೆ.

**ಕೃತಂ ಚಿದ್ಧಿ ಷ್ಮಾ ಸನೇಮಿ ದ್ವೇಷೋಽಗ್ನ ಇನೋಷಿ ಮರ್ತಾತ್ ।**
**ಇತ್ಥಾ ಯಜಮಾನಾದೃತಾವಃ ॥೭॥**

**ಪದಾರ್ಥ:-** **[ಋತಾವಃ]** ಸತ್ಯ ಸಂಪನ್ನನೇ! **[ಅಗ್ನೇ]** ಅಗ್ನಿಯಂತೆ ತೇಜಸ್ವಿಯೇ! ನೀನು **[ಹಿ]** ಯಾವ ಕಾರಣದಿಂದ **[ಚಿತ್]** ನಿಶ್ಚಿತವಾಗಿ **[ದ್ವೇಷಃ]** ದ್ವೇಷಿಸುವ **[ಮರ್ತಾನ್]** ಮನುಷ್ಯರನ್ನು **[ಇತ್ಥ]** ಈ ರೀತಿ **[ಯಜಮಾನಾನ್]** ಧರ್ಮ ಸಂಗತಿಗೊಳಿಸುವ ಮನುಷ್ಯರನ್ನು **[ಸನೇಮಿ]** ಅನಾದಿ ಕಾಲದಿಂದಲೂ ಇರುವ **[ಕೃತಂ]** ಉತ್ಪಾದಕನನ್ನು **[ಇನೋಷಿ]** ವಿಶೇಷ ರೀತಿಯಿಂದ ಪಡೆದುಕೊಂಡಿರುವೆ. **[ಸ್ಮ]** ಆದ್ದರಿಂದಲೇ ನೀನು ರಾಜ್ಯ ಶಾಸನ ಮಾಡಲು ಅರ್ಹನು.

**ಭಾವಾರ್ಥ:-** ರಾಜ ಮತ್ತು ರಾಜಪುರುಷರು ಶತ್ರುಗಳಿಂದಲೂ ಮಿತ್ರರಿಂದಲೂ ಉತ್ತಮವಾದ ಗುಣಗಳನ್ನು ಸಂಗ್ರಹಿಸಿ ಸುಖವನ್ನು ಪಡೆದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶಿವಾ ನಃ ಸಖ್ಯಾ ಸಂತು ಭ್ರಾತ್ರಾಗ್ನೇ ದೇವೇಷು ಯುಷ್ಮೇ ।**
**ಸಾ ನೋ ನಾಭಿಃ ಸದನೇ ಸಸ್ಮಿನ್ನೂಧನ್ ॥೮॥**

**ಪದಾರ್ಥ:-** **[ಅಗ್ನೇ]** ಅಗ್ನಿಯಂತೆ ಪವಿತ್ರನಾದವನೇ! **[ನಾಭಿಃ]** ಮಧ್ಯ ಅವಯವದಂತೆ **[ಶಿವಾ]** ಮಂಗಳಕಾರಿ ನೀತಿಯು **[ಸಸ್ಮಿನ್]** **[ಊಧನ್]** ಸಮಸ್ತ ಧನಾಢ್ಯರಲ್ಲಿ **[ಸದನೇ]** ಮತ್ತು ರಾಜ್ಯದಲ್ಲಿ ವಿರಾಜಮಾನವಾಗಲಿ. **[ಸಾ]** ಅದು **[ನಃ]** ನಮ್ಮೆಲ್ಲರಿಗೂ **[ದೇವೇಷು]** ಉತ್ತಮ ಗುಣಗಳಲ್ಲಿ **[ಯುಷ್ಮೇ]** ನಿಮ್ಮೆಲ್ಲರಿಗೂ ಪ್ರವೃತ್ತಿಗೊಳಿಸಲಿ. **[ಸಖ್ಯ]** ಸ್ನೇಹಭಾವದಿಂದ **[ಭ್ರಾತೃ]** ಸೋದರಭಾವದಿಂದ **[ನಃ]** ನಮ್ಮೆಲ್ಲರ **[ಸಂತು]** ರಕ್ಷಣೆ ಮಾಡುವವರಾಗಲಿ.

**ಭಾವಾರ್ಥ:-** ರಾಜಪುರುಷರು ಪರಸ್ಪರ ಸ್ನೇಹಭಾವದಿಂದಿರುವವರಾಗಿ ಪ್ರಜೆಗಳನ್ನು ತಂದೆಗೆ ಸಮನಾಗಿ ನೋಡಿಕೊಳ್ಳುತ್ತಾ ಎಲ್ಲರಿಂದೊಡಗೂಡಿ ರಾಜನೀತಿಯ ಪ್ರಸಾರ ಮಾಡಬೇಕು. ಅಂದರೆ ಅವರು ರಾಜ್ಯ ಸುಖವನ್ನನುಭವಿಸಲು ಯೋಗ್ಯರಾಗುವರು.

ಈ ಸೂಕ್ತದಲ್ಲಿ ಅಗ್ನಿ, ರಾಜ, ಮಂತ್ರಿ, ಪ್ರಜೆಗಳ ಕಾರ್ಯಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥರೊಂದಿಗೆ ಸಂಗತವಾಗಿದೆ.

**ಹತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೧೧

ಮಂತ್ರಸಂಖ್ಯೆ ೬ । ವಾಮದೇವ ಋಷಿಃ । ಅಗ್ನಿರ್ದೇವತಾ । ೧, ೨, ೫, ೬ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಸ್ವರಾಡ್ ಬೃಹತೀ ಛಂದಃ । ಋಷಭಃ ಸ್ವರಃ । ೪ ಭುರಿಕ್ ಪಂಕ್ತಿಶ್ಛಂದಃ । ಪಂಚಮಃ ಸ್ವರಃ.

ಅಗ್ನಿ ಸಾದೃಶ್ಯದಿಂದ ರಾಜನ ಗುಣವನ್ನಿಲ್ಲಿ ಹೇಳಲಾಗಿದೆ.

**ಭದ್ರಂ ತೇ ಅಗ್ನೇ ಸಹಸಿನ್ನನೀಕ-ಮುಪಾಕ ಆ ರೋಚತೇ ಸೂರ್ಯಸ್ಯ ।**
**ರುಶದ್ದೃಶೇ ದದೃಶೇ ನಕ್ತಯಾ ಚಿ-ದರೂಕ್ಷಿತಂ ದೃಶ ಆ ರೂಪೇ ಅನ್ನಮ್ ॥೧॥**

**ಪದಾರ್ಥ:-** **[ಸಹಸಿನ್]** ಬಹುಬಲಯುಕ್ತವಾದ **[ಅಗ್ನೇ]** ಅಗ್ನಿಸದೃಶವಾಗಿರುವ **[ತೇ]** ನಿನ್ನ **[ಉಪಾಕೇ]** ಸಮೀಪದಲ್ಲಿ **[ಭದ್ರಮ್]** ಕಲ್ಯಾಣಕಾರಕವಾದ **[ರುಶತ್]** ಉತ್ತಮ ಸ್ವರೂಪವಾದ **[ಅನೀಕಮ್]** ಸೈನ್ಯವು **[ಸೂರ್ಯಸ್ಯ]** ಸೂರ್ಯಕಿರಣಗಳಿಗೆ ಸದೃಶವಾದ **[ಆ]** **[ರೋಚತೇ]** ಪ್ರಕಾಶವನ್ನು ಹೊಂದಿರುವುದೋ ಮತ್ತು **[ನಕ್ತಯಾ]** ರಾತ್ರಿಯಲ್ಲಿ ಚಂದ್ರನೊಡಗೂಡಿರುವಂತೆ **[ದದೃಶೇ]** ತೋರಿಬರುವುದೋ **[ಚಿತ್]** ಮತ್ತು ಸುಖವನ್ನು **[ದೃಶೇ]** ನೋಡುವುದರಲ್ಲಿ **[ಅರೂಕ್ಷಿತಮ್]** ರೂಕ್ಷತೆಯಿಲ್ಲದಂತೆ **[ಅನ್ನಮ್]** ಭೋಜನಯೋಗ್ಯ ಪದಾರ್ಥಗಳನ್ನು ನೋಡುವುದರಲ್ಲಿ **[ರೂಪೇ]** ಯೋಗ್ಯರೂಪವನ್ನು ಹೊಂದಿರುವುದೋ, ಅಂತಹ ಸೈನ್ಯದಿಂದ ನಿನಗೆ ಸರ್ವತ್ರ ವಿಜಯವೇ ದೊರಕುವುದು ನಿಶ್ಚಯ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಸುಶಿಕ್ಷಿತವಾದ ಸೈನ್ಯದಿಂದಲೂ, ಉತ್ತಮ ಗುಣದಿಂದಲೂ ಮತ್ತು ಐಶ್ವರ್ಯದಿಂದಲೂ ಕೂಡಿದವನಾಗಿ ಪ್ರಜೆಗಳನ್ನು ಪಾಲಿಸುತ್ತಾನೋ ಮತ್ತು ದುಷ್ಟರನ್ನು ದಂಡಿಸುತ್ತಾನೋ ಆತನು ಸೂರ್ಯ ಮತ್ತು ಚಂದ್ರನಂತೆ ಎಲ್ಲೆಡೆಯೂ ಪ್ರಕಾಶಿತನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿ ಷಾಹ್ಯಗ್ನೇ ಗೃಣತೇ ಮನೀಷಾಂ ಖಂ ವೇಪಸಾ ತುವಿಜಾತ ಸ್ತವಾನಃ ।**
**ವಿಶ್ವೇಭಿರ್ಯದ್ವಾವನಃ ಶುಕ್ರ ದೇವೈ-ಸ್ತನ್ನೋ ರಾಸ್ವ ಸುಮಹೋ ಭೂರಿ ಮನ್ಮ ॥೨॥**

**ಪದಾರ್ಥ:-** **[ತುವಿಜಾತ]** ಅನೇಕ ವಿಷಯಗಳಲ್ಲಿ ಪ್ರಸಿದ್ಧನೂ **[ಅಗ್ನೇ]** ಅಗ್ನಿಸದೃಶ ವಿದ್ಯೆಯಲ್ಲಿ ಪ್ರಕಾಶಿತನೂ **[ಸ್ತವಾನಃ]** ಸ್ತುತಿಮಾಡುವವನೂ ಆದ ನೀನು **[ವೇಪಸಾ]** ರಾಜ್ಯಪಾಲನಾದಿ ಕರ್ಮಗಳಿಂದ **[ಮನೀಷಾಮ್]** ಪ್ರಜ್ಞೆಯನ್ನೂ ಮತ್ತು **[ಖಮ್]** ಆಕಾಶವನ್ನು **[ಗೃಣತೇ]** ಸ್ತುತಿ ಮಾಡುವವನಾಗಿ **[ವಿ]** ವಿಶೇಷವಾಗಿ **[ಸಾಹಿ]** ಕರ್ಮ

ಸಮಾಪ್ತಿಯನ್ನು ಮಾಡು. **[ಶುಕ್ರ]** ಶೀಘ್ರವಾಗಿ ಕೆಲಸ ಮಾಡುವವನು **[ವಿಶ್ವೇಭಿಃ]** ಸಮಸ್ತ **[ದೇವೈಃ]** ವಿದ್ವಜ್ಜನರೊಡನೆ ನೀನು **[ಯತ್]** ಯಾವ ರೀತಿಯ **[ವಾವನಃ]** ಉತ್ತಮ ಪ್ರಕಾರವನ್ನು ಸೇವಿಸುತ್ತೀಯೋ **[ತತ್]** ಅಂತಹ **[ಸುಮಹಃ]** ವಿಸ್ತಾರವಾದ ಮತ್ತು **[ಭೂರಿ]** ಬೃಹತ್ತಾದ **[ಮನ್ಮ]** ವಿಜ್ಞಾನವನ್ನು **[ನಃ]** ನಮಗಾಗಿ **[ರಾಸ್ವ]** ದಯಪಾಲಿಸು.

**ಭಾವಾರ್ಥ:-** ಹೇ ರಾಜನೇ! ನೀನು ಜಿತೇಂದ್ರಿಯನಾಗಿ ಮತ್ತು ವಿಶೇಷ ಬುದ್ಧಿಯಿಂದೊಡಗೂಡಿ ಕರ್ಮಗಳನ್ನಾಚರಿಸು ಮತ್ತು ಅವುಗಳನ್ನು ಮುಕ್ತಾಯಗೊಳಿಸು. ಸಮಸ್ತ ವಿದ್ವಾಂಸರೊಡಗೂಡಿ ಪರಿಪೂರ್ಣ ವಿಜ್ಞಾನವನ್ನು ಪ್ರಜೆಗಳಾದ ನಮಗೆ ನೀಡುವವನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವದಗ್ನೇ ಕಾವ್ಯಾ ತ್ವನ್ಮನೀಷಾ-ಸ್ತ್ವದುಕ್ಥಾ ಜಾಯಂತೇ ರಾಧ್ಯಾನಿ ।**
**ತ್ವದೇತಿ ದ್ರವಿಣಂ ವೀರಪೇಶಾ ಇತ್ಥಾಧಿಯೇ ದಾಶುಷೇ ಮರ್ತ್ಯಾಯ ॥೩॥**

**ಪದಾರ್ಥ:-** **[ಅಗ್ನೇ]** ಹೇ ಅಗ್ನಿಸದೃಶನಾದ ರಾಜನೇ! **[ವೀರಪೇಶಾಃ]** ವೀರಪುರುಷರಿಗೆ ಸದೃಶವಾದ ರೂಪವುಳ್ಳ ನಾವು **[ಇತ್ಥಾಧಿಯೇ]** ಈ ರೀತಿಯಾಗಿ **[ತ್ವತ್]** ನಿನ್ನಿಂದ **[ದಾಶುಷೇ]** ದಾನ ಮಾಡುವಂತಹ **[ಮರ್ತ್ಯಾಯ]** ಮನುಷ್ಯನಿಗಾಗಿ **[ಕಾವ್ಯಾ]** ಕವಿಗಳೂ ವಿದ್ವಾಂಸರೂ ರಚಿಸಿದಂತಹ ಕಾವ್ಯಗಳನ್ನು ಓದಿ **[ತ್ವತ್]** ನಿನ್ನಿಂದ **[ಮನೀಷಾಃ]** ಯಥಾರ್ಥ ಜ್ಞಾನ ಮತ್ತು **[ತ್ವತ್]** ನಿನ್ನ ಸಮೀಪದಿಂದ **[ಉಕ್ಥಾ]** ಪ್ರಶಂಸಪೂರ್ವಕವಾದ ನುಡಿಗಳನ್ನೂ **[ರಾಧ್ಯಾನಿ]** ಮತ್ತು ಯೋಗ್ಯ ದ್ರವ್ಯವನ್ನೂ ಪಡೆದು **[ಜಾಯತೇ]** ಪ್ರಸಿದ್ಧರಾಗುವೆವು. **[ತ್ವತ್]** ನಿನ್ನ ಸಮೀಪದಿಂದಲೇ **[ದ್ರವಿಣಮ್]** ಧನವೂ **[ಏತಿ]** ಪ್ರಾಪ್ತವಾಗುತ್ತದೆ. ಆದ್ದರಿಂದ ನಾವು ನಿನ್ನ ಸೇವೆಯನ್ನು ಮಾಡುತ್ತೇವೆ.

**ಭಾವಾರ್ಥ:-** ಎಲೈ ರಾಜನೇ! ನೀನು ವಿದ್ವಾಂಸನೂ, ಜಿತೇಂದ್ರಿಯನೂ ಮತ್ತು ನ್ಯಾಯವಂತನೂ ಆಗಿರುವೆ. ನಿನ್ನನ್ನು ಅನುಸರಿಸುತ್ತಾ ಎಲ್ಲ ಮನುಷ್ಯರೂ ಸತ್ಯಾಚರಣೆಯಲ್ಲಿ ಪ್ರವೃತ್ತರಾಗಿ, ಐಶ್ವರ್ಯವನ್ನು ಪಡೆದು ಪ್ರಜೆಗಳ ಹಿತವನ್ನು ಸಾಧಿಸುವಂತಹವರಾಗುತ್ತಾರೆ.

ಅಗ್ನಿ ಸಂಬಂಧವಾದ ವಿದ್ವದ್ಗುಣವನ್ನಿಲ್ಲಿ ಹೇಳಿದೆ.

**ತ್ವದ್ವಾಜೀ ವಾಜಂಭರೋ ವಿಹಾಯಾ ಅಭಿಷ್ಟಿಕೃಜ್ಜಾಯತೇ ಸತ್ಯಶುಷ್ಮಃ ।**
**ತ್ವದ್ರಯಿರ್ದೇವಜೂತೋ ಮಯೋಭು-ಸ್ತ್ವದಾಶುರ್ಜೂಜುವಾँ ಅಗ್ನೇ ಅರ್ವಾ ॥೪॥**

**ಪದಾರ್ಥ:-** **[ಅಗ್ನೇ]** ಹೇ ವಿದ್ವಾಂಸನೇ! **[ತ್ವತ್]** ನಿನ್ನಿಂದ ಪ್ರೇರಣೆಯನ್ನು ಹೊಂದಿ **[ವಿಹಾಯಾಃ]** ಎಲ್ಲಕ್ಕಿಂತಲೂ ದೊಡ್ಡದಾದ ಮತ್ತು ವೇಗವಾಗಿ ಚಲಿಸುವ **[ವಾಜಂಭರಃ]** ಹೆಚ್ಚು ಭಾರವನ್ನು ಹೊರುವಂತಹ **[ಸತ್ಯಶುಷ್ಮಃ]** ಸತ್ಯ ಬಲಯುಕ್ತವಾದ **[ಅಭಿಷ್ಟಿಕೃತ್]** ಅಪೇಕ್ಷಿಸಿದ ಕೆಲಸಗಳನ್ನು ಮಾಡುವಂತಹ **[ವಾಜಿ]** **[ಜಾಯತೇ]** ವೇಗವಾಗಿ ಚಲಿಸುವ ಕುದುರೆಯಿರುವುದೋ **[ತ್ವತ್]** ನಿನ್ನ ಬಳಿಯಿಂದ **[ರಯಿಃ]** ಹಣವನ್ನು **[ದೇವಜೂತಃ]** ವಿದ್ವಾಂಸರು ತಿಳಿಯಲ್ಪಡುವ ಮತ್ತು ನಡೆಸಬಲ್ಲಂತಹ **[ಮಯೋಭುಃ]** ಸುಖಭಾವನೆಯನ್ನುಂಟುಮಾಡುವಂತಹ ಕುದುರೆಯನ್ನು **[ತ್ವತ್]** ನಿನ್ನ ಬಳಿಯಿಂದ **[ಜೂಜುವಾನ್]** ಶೀಘ್ರವಾಗಿ ಪಡೆದು **[ಅರ್ವಾ]** ಶೀಘ್ರವಾಗಿ ಚಲಿಸುವಂತಹ **[ಆಶುಃ]** ಶೀಘ್ರಗಾಮಿ **[ಜಾಯತೇ]** ಕುದುರೆಯನ್ನು ನಮಗಾಗಿಯೂ ಸೃಷ್ಟಿಸುವುದು ಯುಕ್ತವಾದುದು.

**ಭಾವಾರ್ಥ:-** ಹೇ ಮಾನವರೇ! ವಿದ್ಯುತ್ ಸ್ವರೂಪ ಅಗ್ನಿವಿದ್ಯೆಯಿಂದ ನಿಮ್ಮ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಬೇಕಾದರೆ ಬಹುಭಾರವನ್ನು ಹೊರಲು ಸಮರ್ಥವಾದ ಶೀಘ್ರವಾಗಿ ಚಲಿಸುವಂತಹ ಸುಖ ಸಾಧನವಾದಂತಹ ಧನಪ್ರಾಪ್ತಿಯಾಗುವಂತಹ ವಾಹನದಲ್ಲಿ ಶೀಘ್ರವಾಗಿ ಚಲಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಾಮಗ್ನೇ ಪ್ರಥಮಂ ದೇವಯಂತೋ ದೇವಂ ಮರ್ತಾ ಅಮೃತ ಮಂದ್ರಜಿಹ್ವಮ್।**

**ದ್ವೇಷೋಯುತಮಾ ವಿವಾಸಂತಿ ಧೀಭಿ-ರ್ದಮೂನಸಂ ಗೃಹಪತಿಮಮೂರಮ್ ॥೫॥**

**ಪದಾರ್ಥ:-** **[ಅಮೃತ]** ನಾಶರಹಿತ ಅಮೃತಸ್ವರೂಪನಾದ **[ಅಗ್ನೇ]** ವಿದ್ವಾಂಸನಾದ ಅಗ್ನಿಯೇ! ಯಾವ ಲೋಕವು **[ಧೀಭಿಃ]** ಕರ್ಮ ಹಾಗೂ ಬುದ್ಧಿಯುಕ್ತವಾಗಿ **[ದಮೂನಸಮ್]** ಇಂದ್ರಿಯಗಳನ್ನು ನಿಗ್ರಹಿಸಿ **[ಅಮೂರಮ್]** ಮೂರ್ಖತನ ಮೊದಲಾದ ದೋಷರಹಿತರಾಗಿ **[ಪ್ರಥಮಮ್]** ಆದಿಯಾದ **[ದೇವಮ್]** ಸುಂದರನಾದ **[ಗೃಹಪತಿಮ್]** ಗೃಹಸ್ವಾಮಿಯನ್ನು **[ತ್ವಾಮ್]** ತಮ್ಮ **[ದೇವಯಂತಃ]** ಕಾಮನೆಗಳನ್ನು ಪೂರೈಸಿಕೊಳ್ಳಲು **[ಮರ್ತ್ಯಾಃ]** ಮನುಷ್ಯರು **[ಆ, ವಿವಾಸಂತಿ]** ಸೇವೆಮಾಡುತ್ತಾರೋ, ಅಂತಹವರನ್ನು ನೀನೂ ಸಹ ಸೇವಿಸು.

**ಭಾವಾರ್ಥ:-** ಯಾರು ವಿದ್ವಾಂಸರಾಗಿ ಗೃಹಸ್ಥರಿಗೆ ಬೋಧನೆಯನ್ನು ಮಾಡುತ್ತಾ ಸಮಸ್ತ ಜನರನ್ನು ಬ್ರಹ್ಮಚರ್ಯ ಮೊದಲಾದ ಉತ್ತಮ ವಿದ್ಯೆಯ ಮೂಲಕ ಸುಶಿಕ್ಷಿತಗೊಳಿಸುತ್ತಾರೋ, ಅವಿದ್ಯಾದಿ ದೋಷಗಳಿಂದ ದೂರವಾಗುವಂತೆ ಮಾಡಿ ಶಮದಮಾದಿ ಗುಣಗಳಿಂದ ಯುಕ್ತರಾಗುವಂತೆ ಮಾಡುವರೋ, ಅವರೇ ಈ ಜಗತ್ತಿನಲ್ಲಿ ಸುಂದರ ಸ್ವರೂಪರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರೇ ಅಸ್ಮದಮತಿಮಾರೇ ಅಂಹ ಅರೇ ವಿಶ್ವಾಂ ದುರ್ಮತಿಂ ಯನ್ನಿಪಾಸಿ ।**

**ದೋಷಾ ಶಿವಃ ಸಹಸಃ ಸೂನೋ ಅಗ್ನೇ ಯಂ ದೇವ ಆ ಚಿತ್ಸಚಸೇ ಸ್ವಸ್ತಿ ॥೬॥**

**ಪದಾರ್ಥ:-** **[ಸಹಸಃ]** ಬಲಿಷ್ಠರ **[ಸೂನೋ]** ಪುತ್ರನೇ ಮತ್ತು **[ಅಗ್ನೇ]** ಅತ್ಯಂತ ವಿದ್ವಾಂಸನೇ! **[ಯತ್]** ಯಾವ ಕಾರಣದಿಂದ ನೀನು **[ದೇವಃ]** ಪರಮಾತ್ಮನಿಗೆ ಸದೃಶನಾಗಿ **[ಅಸ್ಮತ್]** ನಮ್ಮಿಂದ **[ಆರೇ]** ದೂರದಲ್ಲಿ **[ಅಮತಿಮ್]** ಮೂರ್ಖಜನರಿಂದಲೂ ದೂರದಲ್ಲಿ **[ಅಂಹಃ]** ಪಾಪಾಚರಣೆ ಮಾಡುವವರಿಂದಲೂ ದೂರದಲ್ಲಿದ್ದು **[ವಿಶ್ವಮ್]** ಸಮಗ್ರ ಜಗತ್ತನ್ನು **[ದುರ್ಮತಿಮ್]** ದುಷ್ಟಬುದ್ಧಿಯಿಂದ ಬೇರ್ಪಡೆ ಮಾಡುತ್ತಾ **[ಯಮ್]** ಯಾರಿಗೆ **[ನಿಪಾಸಿ]** ಅತ್ಯಂತ ರಕ್ಷಣೆಯನ್ನು ಒದಗಿಸುತ್ತಿರುವ ಮತ್ತು ಅವರಿಗೆ **[ಶಿವಃ]** ಮಂಗಳಕರನಾಗಿರುವೆ. **[ದೋಷಾ]** **[ಚಿತ್]** ರಾತ್ರಿ ಮತ್ತು ಹಗಲಿನಲ್ಲಿಯೂ ಸಹ **[ಸ್ವಸ್ತಿ]** ಸುಖವನ್ನು **[ಆ, ಸಚಸೇ]** ಉಂಟುಮಾಡುತ್ತಿರುವೆ. ಆದ್ದರಿಂದ ನಮ್ಮಿಂದ ಪೂಜೆಗೊಳ್ಳಲು ಅರ್ಹನಾಗಿರುವೆ.

**ಭಾವಾರ್ಥ:-** ಯಾವ ಮನುಷ್ಯರು ಇತರ ವ್ಯಕ್ತಿಗಳನ್ನು ಅಧರ್ಮ ಮತ್ತು ದುಷ್ಟಾಚಾರ, ದುರ್ಬುದ್ಧಿಗಳಿಂದ ದೂರವಾಗಿರಿಸುತ್ತಾರೋ, ಅಂತಹವರೇ ರಾತ್ರಿ ಹಗಲು ಎಲ್ಲರ ಸತ್ಕಾರಕ್ಕೆ ಅರ್ಹರಾಗುತ್ತಾರೆ ಎಂಬ ವಿಷಯವು ಇಲ್ಲಿ ನಿಶ್ಚಯವಾಗುತ್ತದೆ.

ಈ ಸೂಕ್ತದಲ್ಲಿ ರಾಜ, ಅಗ್ನಿ, ವಿದ್ವಾಂಸನ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಹತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೧೨

ಮಂತ್ರಸಂಖ್ಯೆ ೬ । ವಾಮದೇವ ಋಷಿಃ । ಅಗ್ನಿರ್ದೇವತಾ । ೧, ೫ ನಿಚೃತ್ರಿಷ್ಟುಪ್, ೨ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ।

೩, ೪, ಭುರಿಕ್ ಪಂಕ್ತಿಃ, ೬ ಪಂಕ್ತಿಚ್ಛಂದಃ । ಪಂಚಮಃ ಸ್ವರಃ.

ಅಗ್ನಿಸಾದೃಶ್ಯದಿಂದ ವಿದ್ವದ್ಗುಣವನ್ನಿಲ್ಲಿ ಹೇಳಿದೆ.

**ಯಸ್ತ್ವಾಮಗ್ನ ಇನಧತೇ ಯತಸ್ರುಕ್ ತ್ರಿಸ್ತೇ ಅನ್ನಂ ಕೃಣವತ್ಸಸ್ಮಿನ್ನಹನ್ ।**
**ಸ ಸು ದ್ಯುಮ್ನೈರಭ್ಯಸ್ತು ಪ್ರಸಕ್ಷ-ತ್ತವ ಕ್ರತ್ವಾ ಜಾತವೇದಶ್ಚಿಕಿತ್ವಾನ್ ॥೧॥**

**ಪದಾರ್ಥ:-** **[ಅಗ್ನೇ]** ವಿದ್ವಾಂಸನೇ! **[ಯತಃ ಸ್ರುಕ್]** ವಿದ್ಯುಕ್ತವಾಗಿರುವ ಹವನಕ್ಕಾಗಿ ವಿಶೇಷವಾದ ಸ್ರುವದಂತಿರುವ ಪುರುಷನು **[ಸಸ್ಮಿನ್]** ಎಲ್ಲ ರೀತಿಯ **[ಅಹನ್]** ದಿನಗಳಲ್ಲಿ **[ತ್ವಾಮ್]** ನಿನ್ನನ್ನು **[ಇನಧತೇ]** ಈಶ್ವರನೊಡನೆ ಸೇರಿಸುವನೋ ಮತ್ತು **[ತೇ]** ನಿನಗಾಗಿ **[ಅನ್ನಮ್]** ಭೋಜನ ಪದಾರ್ಥವನ್ನು **[ಕೃಣವತ್]** ಸಿದ್ಧಪಡಿಸುವನೋ **[ಜಾತವೇದಃ]** ಶ್ರೇಷ್ಠ ಜ್ಞಾನಯುಕ್ತನಾದ **[ಯಃ]** ಯಾವ **[ತವ]** ನಿನ್ನ **[ಕ್ರತ್ವಾ]** ಬುದ್ಧಿ ಅಥವಾ ಕರ್ಮದಿಂದ **[ಚಿಕಿತ್ವಾನ್]** ಸತ್ಯಾರ್ಥವನ್ನು ತಿಳಿಯಲು ಸಮರ್ಥವಾಗುವ **[ಅಭಿ]** **[ಪ್ರಸಕ್ಷತ್]** ಪ್ರಸಂಗವನ್ನುಂಟು ಮಾಡುವನೋ **[ಸಃ]** ಅಂತಹ ಪುರುಷನು **[ಸು]** **[ದ್ಯುಮ್ನೈಃ]** ಉತ್ತಮ ಯಶಸ್ಸು ಮತ್ತು ಧನವನ್ನು **[ತ್ರಿಃ]** **[ಅಸ್ತು]** ಮೂರುಪಟ್ಟು ಪಡೆಯುವನು.

**ಭಾವಾರ್ಥ:-** ಹೇ ವಿದ್ವಾಂಸನೇ! ಯಾವ ಜನರು ನಿನಗಾಗಿ ಈಶ್ವರಜ್ಞಾನವನ್ನು, ಉತ್ತಮ ವಿದ್ಯೆಯನ್ನು ಮತ್ತು ಉತ್ತಮ ಬುದ್ಧಿಯನ್ನು ಎಲ್ಲ ಕಾಲದಲ್ಲೂ ಕೊಡುವರೋ ಅಂತಹವರನ್ನು ಯಶಸ್ಸು ಮತ್ತು ಧನಯುಕ್ತವಾಗುವಂತೆ ಮಾಡಲರ್ಹನಾಗಿರುವೆ.

ಅಗ್ನಿಸಾದೃಶ್ಯದಿಂದ ರಾಜನ ಗುಣವನ್ನಿಲ್ಲಿ ಹೇಳಿದೆ.

**ಇಧ್ಮಂ ಯಸ್ತೇ ಜಭರಚ್ಛಶ್ರಮಾಣೋ ಮಹೋ ಅಗ್ನೇ ಅನೀಕಮಾ ಸಪರ್ಯನ್ ।**
**ಸ ಇಧಾನಃ ಪ್ರತಿ ದೋಷಾಮುಷಾಸಂ ಪುಷ್ಯನ್ ರಯಿಂ ಸಚತೇ ಘ್ನನ್ನಮಿತ್ರಾನ್ ॥೨॥**

**ಪದಾರ್ಥ:-** **[ಅಗ್ನೇ]** ಹೇ ರಾಜನೇ! **[ಯಃ]** ಯಾವ **[ಶಶ್ರಮಾಣಃ]** ಅತ್ಯಂತ ಪರಿಶ್ರಮವನ್ನು ಹೊಂದುವ ಸೈನ್ಯದ ಸ್ವಾಮಿಯಾದ **[ತೇ]** ನಿನ್ನ **[ಮಹಃ]** ಬೃಹತ್ತಾದ **[ಇಧ್ಮಮ್]** ಪ್ರಕಾಶಯುಕ್ತವಾದ **[ಅನೀಕಮ್]** ವಿಜಯವನ್ನು ತಂದುಕೊಡುವಂತಹ ಸೈನ್ಯವನ್ನು **[ಆ]** ಸರ್ವಪ್ರಕಾರವಾಗಿ **[ಸಪರ್ಯನ್]** ಸೇವೆಮಾಡುವುದರಿಂದ **[ಜಭರತ್]** ಶತ್ರು ಸೈನ್ಯವನ್ನು ನಾಶಗೊಳಿಸಿ ನೀನು ಪುಷ್ಟಿಹೊಂದುವೆ. **[ಸಃ]** ಅಂತಹ **[ಇಧಾನಃ]** ಪ್ರಕಾಶಮಾನವಾದ **[ಪ್ರತಿ, ದೋಷಾಮ್]** ಪ್ರತ್ಯೇಕ ರಾತ್ರಿಗಳಲ್ಲಿಯೂ **[ಉಷಾಸಮ್]** ಪ್ರತ್ಯೇಕ ಹಗಲುಗಳಲ್ಲಿಯೂ **[ಪುಷ್ಯನ್]** ಪುಷ್ಟಿಗೊಳಿಸುತ್ತಾ **[ಅಮಿತ್ರಾನ್]** ಧರ್ಮದ್ವೇಷಿಗಳಾದ ಶತ್ರುಗಳನ್ನು **[ಘ್ನನ್]** ಸಂಹರಿಸುತ್ತಾ **[ರಯಿಂ]** ರಾಜ್ಯಲಕ್ಷ್ಮಿಯನ್ನು **[ಸಚತೇ]** ಹೊಂದುವೆ.

**ಭಾವಾರ್ಥ:-** ಹೇ ರಾಜನೇ! ಯಾವ ನಿನ್ನ ಸೇನಾಧ್ಯಕ್ಷರು ಹಾಗೂ ನ್ಯಾಯಾಧೀಶರು ವಿದ್ಯೆ, ವಿನಯ, ಧರ್ಮ ಮೊದಲಾದವುಗಳಿಂದ ಪ್ರಕಾಶಮಾನರಾಗಿ ನಿನ್ನ ಪ್ರಜೆಗಳ ಪಾಲನೆಯನ್ನು ಮಾಡುವರೋ ಮತ್ತು ದುಷ್ಟ ಶತ್ರುಗಳ ನಾಶವನ್ನು ಮಾಡಿ ವಿಜಯವನ್ನು ತಂದುಕೊಡುವರೋ ಅಂತಹವರಿಗೆ ನೀನು ಗೌರವ ಮತ್ತು ಧನವನ್ನು ನೀಡಿ ಹಗಲೂ ರಾತ್ರಿಯೂ ಧರ್ಮ, ಅರ್ಥ, ಕಾಮ, ಮೋಕ್ಷಗಳ ಉನ್ನತಿಯನ್ನುಂಟುಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿರೀಶೇ ಬೃಹತಃ, ಕ್ಷತ್ರಿಯಸ್ಯಾ-ಗ್ನಿರ್ವಾಜಸ್ಯ ಪರಮಸ್ಯ ರಾಯಃ ।**
**ದಧಾತಿ ರತ್ನಂ ವಿಧತೇ ಯವಿಷ್ಠೋ ವ್ಯಾನುಷಜ್ಮರ್ತ್ಯಾಯ ಸ್ವಧಾವಾನ್ ॥೩॥**

**ಪದಾರ್ಥ:-** [**ಅಗ್ನಿಃ**] ಅಗ್ನಿಸದೃಶವಾದ [**ಕ್ಷತ್ರಿಯಸ್ಯ**] ಕ್ಷಾತ್ರ ಧರ್ಮಯುಕ್ತವಾದ [**ಬೃಹತಃ**] ಬೃಹತ್ತಾದ [**ವಾಜಸ್ಯ**] ವೇಗ ವಿಜ್ಞಾನಯುಕ್ತವಾದ ಮತ್ತು [**ಪರಮಸ್ಯ**] ಅತ್ಯಂತ ಶ್ರೇಷ್ಠವಾದ [**ರಾಯಃ**] ಧನಾದಿಗಳ ಮಧ್ಯದಲ್ಲಿ [**ಈಶೇ**] ಐಶ್ವರ್ಯವನ್ನುಂಟುಮಾಡುವ [**ಯವಿಷ್ಠಃ**] ಶರೀರ ಮತ್ತು ಆತ್ಮ ಬಲಯುಕ್ತವಾದ [**ಸ್ವಧಾವಾನ್**] ಯಥೇಚ್ಛ ಆಹಾರದಿಂದ ಕೂಡಿದವನಾಗಿ [**ಆನುಷಕ್**] ಅನುಕೂಲಯುಕ್ತವಾಗುವಂತೆ [**ವಿಧತೇ**] ರೂಪಿಸಲಾಗುತ್ತದೆಯೋ [**ಮರ್ತ್ಯಾಯ**] ಮರಣವನ್ನು ಧರ್ಮವನ್ನಾಗಿ ಉಳ್ಳ ಮನುಷ್ಯರಿಗಾಗಿ [**ಅಗ್ನಿಃ**] ಮಿಂಚಿನಂತಿರುವ [**ರತ್ನಮ್**] ರಮಣೀಯವಾದ ಧನವನ್ನು [**ವಿ, ದಧಾತಿ**] ಯಾವನು ಉಂಟುಮಾಡುತ್ತಾನೋ, ಅಂತಹವನು ಸಮಸ್ತ ಜನರ ಸತ್ಕಾರವನ್ನು ಪಡೆಯಲು ಅರ್ಹನಾಗುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ಸೂರ್ಯ ಮತ್ತು ಮಿಂಚಿಗೆ ಸದೃಶವಾದ ರಾಜ್ಯ ಮತ್ತು ಐಶ್ವರ್ಯವನ್ನು ಉನ್ನತಿಗೊಳಿಸುತ್ತಾನೋ ಮತ್ತು ಯಶಸ್ಸನ್ನು ವಿಸ್ತಾರಗೊಳಿಸುತ್ತಾನೋ ಅಂತಹವನೇ ಸರ್ವಪ್ರಕಾರವಾದ ಸತ್ಕಾರವನ್ನು ಹೊಂದಲರ್ಹನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಚ್ಚಿದ್ಧಿ ತೇ ಪುರುಷತ್ರಾ ಯವಿಷ್ಠಾ-ಚಿತ್ತಿಭಿಶ್ಚಕೃಮಾ ಕಚ್ಚಿದಾಗಃ।**
**ಕೃಧೀ ಷ್ವ (ಅ) ೧ ಸ್ಮಾ ಅದಿತೇರನಾಗಾನ್ ವ್ಯೇನಾಂಸಿ ಶಿಶ್ರಥೋ ವಿಷ್ವಗಗ್ನೇ ॥೪॥**

**ಪದಾರ್ಥ:-** [**ಯವಿಷ್ಠ**] ಅತ್ಯಂತ ಯೌವನಾವಸ್ಥೆಯನ್ನು ಹೊಂದಿರುವ [**ಅಗ್ನೇ**] ವಿದ್ಯೆ ಮತ್ತು ವಿನಯದಿಂದ ಕೂಡಿರುವ ರಾಜನೇ! [**ಯತ್**] ಯಾವ ಈ ನಾವು [**ಅಚಿತ್ತಿಭಿಃ**] ಅಚೇತನವಾದ ವಸ್ತುಗಳಲ್ಲಿ ಅಥವಾ [**ತೇ**] ನಿನ್ನ [**ಪುರುಷತ್ರಾ**] ಪುರುಷರಲ್ಲಿ [**ಚಿತ್**] ಯಾವುದೇ ರೀತಿಯ [**ಆಗಃ**] ಅಪರಾಧವನ್ನು [**ಚಕೃಮಾ**] ಮಾಡಿದ್ದೇ ಆದರೆ [**ಅಸ್ಮಾನ್**] ನಮ್ಮನ್ನು [**ಕತ್, ಚಿತ್**] ಯಾವಾಗಲೂ [**ಅನಾಗಾನ್**] ಅಪರಾಧರಹಿತರಾಗುವಂತೆ [**ಕೃಧಿ**] ಮಾಡು. ಯಾವ ಯಾವ ಜೀವಿಗಳಿಗೆ ನಮ್ಮಿಂದ [**ಏನಾಂಸಿ**] ಪಾಪಕೃತ್ಯಗಳುಂಟಾಗಿವೆಯೋ ಅವೆಲ್ಲವುಗಳನ್ನೂ [**ಹಿ**] ನಿಶ್ಚಯವಾಗಿ [**ವಿಷ್ವಕ್**] ಸರ್ವ ಪ್ರಕಾರದಿಂದಲೂ [**ವಿ, ಶಿಶ್ರಥಃ**] ಶಿಥಿಲವಾಗುವಂತೆ ಮಾಡು ಮತ್ತು [**ಅಧಿತೇಃ**] ಪೃಥ್ವಿಯನ್ನು [**ಸು**] ಉತ್ತಮ ಅಧಿಕಾರಯುಕ್ತವನ್ನಾಗಿ ಮಾಡು.

**ಭಾವಾರ್ಥ:-** ಹೇ ರಾಜನೇ! ಅಜ್ಞಾನದಿಂದಾಗಲೀ, ಪ್ರಮಾದದಿಂದಾಗಲೀ ನಾವು ಅಪರಾಧವನ್ನೇನಾದರೂ ಮಾಡಿದ್ದರೆ ಅವುಗಳನ್ನು ದಂಡನೆಯಿಲ್ಲದೆ ಕ್ಷಮಿಸಬೇಡ ಮತ್ತು ನಮಗೆ ಉತ್ತಮ ಶಿಕ್ಷಣವನ್ನು ನೀಡುವುದರ ಮೂಲಕ ಧಾರ್ಮಿಕರಾಗುವಂತೆಯೂ ಪೃಥ್ವಿಯ ರಾಜ್ಯಾಧಿಕಾರಿಯಾಗುವಂತೆಯೂ ಸಿದ್ಧಗೊಳಿಸು.

ಪುನಃ ವಿದ್ವದ್ಗುಣವನ್ನಿಲ್ಲಿ ಹೇಳಿದೆ.

**ಮಹಶ್ಚಿದಗ್ನ ಏನಸೋ ಅಭೀಕ ಊರ್ವಾದ್ದೇವಾನಾಮುತ ಮರ್ತ್ಯಾನಾಮ್ । ಮಾ ತೇ ಸಖಾಯಃ ಸದಮಿದ್ರಿಷಾಮ ಯಚ್ಛಾ ತೋಕಾಯ ತನಯಾಯ ಶಂ ಯೋಃ ॥೫॥**

**ಪದಾರ್ಥ:-** **[ಅಗ್ನೇ]** ವಿದ್ವಾಂಸನೇ! **[ದೇವಾನಾಮ್]** ವಿದ್ಯಾವಂತರ **[ಉತ]** ಮತ್ತು **[ಮರ್ತ್ಯಾನಾಮ್]** ಅವಿದ್ಯಾವಂತರ **[ಅಭೀಕೇ]** ಸಮೀಪದಲ್ಲಿ **[ಮಹಃ]** ದೊಡ್ಡದಾದ **[ಚಿತ್]** ಮತ್ತು **[ಏನಸಃ]** ಯಾವುದೇ ಅಪರಾಧವನ್ನು **[ಊರ್ವಾತ್]** ನಾವು ಮಾಡದಂತೆ ಆ ಕರ್ಮಗಳನ್ನು ನಾಶಗೊಳಿಸು. **[ತೇ]** ನಿನ್ನ **[ಸಖಾಯಃ]** ಮಿತ್ರರಾಗಿರುವಂತಹ **[ಸದಮ್]** ಸ್ಥಾನವನ್ನು **[ಮಾ]** **[ರಿಷಾಮ]** ನಾಶಗೊಳಿಸಬೇಡ ಮತ್ತು ನೀನು **[ತೋಕಾಯ]** ಈಗಷ್ಟೇ ಜನಿಸಿರುವ ಐದು ವರ್ಷದ ಮತ್ತು **[ತನಯಾಯ]** ಹತ್ತು ಮತ್ತು ಹದಿನಾರು ವರ್ಷದವರಾದ ಮಕ್ಕಳಿಗೆ **[ಶಮ್]** ಸುಖವನ್ನು **[ಯೋ]** ಉತ್ತಮ ಕರ್ಮಗಳಿಂದುಂಟಾಗುವಂತೆ **[ಇತ್]** **[ಯಚ್ಛ]** ಅನುಗ್ರಹಿಸು.

**ಭಾವಾರ್ಥ:-** ಹೇ ಮನುಷ್ಯರೇ! ಹೇಗೆ ನಾವು ವಿದ್ವಜ್ಜನರ ಸಮೀಪದಲ್ಲಿದ್ದು ಶಿಕ್ಷಣವನ್ನು ಪಡೆದು, ಪಾಪ ಸ್ವರೂಪ ಕರ್ಮಗಳನ್ನು ತ್ಯಜಿಸುತ್ತೇವೆಯೋ, ಬೇರೆಯವರೂ ಅಂತಹ ಪಾಪಾಚರಣೆಯಿಂದ ದೂರವಾಗುವಂತೆ ಮಾಡುತ್ತೇವೆಯೋ, ಎಲ್ಲರ ಮಿತ್ರರಾಗಿದ್ದು ಮಕ್ಕಳಿಗೆ ಯೋಗ್ಯ ಶಿಕ್ಷಣವನ್ನು ನೀಡಿ ಉತ್ತಮ ವಿದ್ಯಾವಂತರಾಗುವಂತೆ ಮಾಡಿ, ಸುಖಯುಕ್ತರಾಗಿರುವಂತೆ ಮಾಡುತ್ತೇವೆಯೋ, ಹಾಗೆಯೇ ನೀವೆಲ್ಲರೂ ಆಚರಿಸಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಥಾ ಹ ತ್ಯದ್ವಸವೋ ಗೌರ್ಯಂ ಚಿತ್ ಪದಿ ಷಿತಾಮಮುಂಚತಾ ಯಜತ್ರಾಃ । ಏವೋ ಷ್ವ (ಅ) ೧ ಸ್ಮನ್ಮುಂಚತಾ ವ್ಯಂಹಃ ಪ್ರ ತಾರ್ಯಗ್ನೇ ಪ್ರತರಂ ನ ಆಯುಃ ॥೬॥**

**ಪದಾರ್ಥ:-** **[ಅಗ್ನೇ]** ವಿದ್ವಾಂಸನೇ! **[ಯಥಾ]** ಹೇಗೆ ನಿನ್ನಿಂದ **[ನಃ]** ನಾವು **[ಪ್ರ ತಾರಿ]** ಪಾರುಗೊಳಿಸುವಂತಹ **[ಅಂಹಃ]** ಪಾಪಗಳಿಂದ ಮುಕ್ತಿಗೊಳ್ಳಬಹುದೋ **[ಯಜತ್ರಾಃ]** ವಿದ್ವಾಂಸರನ್ನು ಯೋಗ್ಯರೀತಿಯಿಂದ ಸತ್ಕಾರ ಮಾಡುವಂತಹ **[ವಸವಃ]** ವಾಸ ಮಾಡುತ್ತಿರುವಂತಹ ಜನರೇ! ಹೇಗೆ ನೀವು **[ತ್ಯತ್]** ಪಾಪಗಳನ್ನು **[ಹ]** ನಿಶ್ಚಯವಾಗಿ **[ಅಮುಚ್ಯತ]** ತ್ಯಜಿಸಿ **[ಪದಿ]** **[ಚಿತ್]** ಪ್ರಾಪ್ತವಾದಂತಹ ಯೋಗ್ಯ ವಿಜ್ಞಾನವು **[ಸಿತಾಮ್]** ಶಬ್ದಾರ್ಥ ವಿಜ್ಞಾನ ಸಂಬಂಧವಾದಂತಹವು **[ಗೌರ್ಯಮ್]** ಶುದ್ಧ ವಾಣಿಯಿಂದ ಹೇಗೆ ಪ್ರಾಪ್ತವಾಗುತ್ತದೋ **[ಏವೋ]** ಹಾಗೆ **[ಅಸ್ಮತ್]** ನಮ್ಮನ್ನು ಪಾಪಗಳಿಂದ **[ಸು, ವಿ, ಮುಂಚತ]** ಸರಿಯಾದ ರೀತಿಯಲ್ಲಿ ವಿಶೇಷವಾಗಿ ದೂರಮಾಡು. ಹಾಗೆಯೇ ನಾವೂ ಸಹ ನಮ್ಮ ಪಾಪಗಳನ್ನು ತ್ಯಜಿಸಿ ಉತ್ತಮ ಪ್ರಕಾರವಾದ ಯೋಗ್ಯ ವಾಣಿಯನ್ನು ಪಡೆಯುತ್ತೇವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇ ಮನುಷ್ಯರೇ! ಹೇಗೆ ಧಾರ್ಮಿಕರೂ, ಸತ್ಯವಂತರೂ ಆದ ವಿದ್ವಜ್ಜನರು ಪಾಪಾಚರಣೆಗಳನ್ನು ತ್ಯಜಿಸಿ, ಸನ್ನಡತೆಗಳ ಮೂಲಕ ಇತರರನ್ನೂ ತಮ್ಮಂತೆ ನಡೆಯುವಂತೆ ಪ್ರೇರೇಪಿಸುತ್ತಾರೋ ಅದರಂತೆಯೇ ನೀವೂ ಸಹ ಆಚರಿಸುವಂತಹವರಾಗಿ.

ಈ ಸೂಕ್ತದಲ್ಲಿ ಅಗ್ನಿ, ರಾಜ ಮತ್ತು ವಿದ್ವಾಂಸನ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗುತ್ತದೆ.

**ಹನ್ನೆರಡನೆಯ ಸೂಕ್ತ ಸಮಾಪ್ತ**

### ಸೂಕ್ತ ೧೩

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ಅಗ್ನಿರ್ದೇವತಾಃ । ೧, ೨, ೪, ೫ ವಿರಾಟ್ ತ್ರಿಷ್ಟುಪ್, ೩ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಸೂರ್ಯ ಸಾದೃಶ್ಯದಿಂದ ರಾಜಗುಣವನ್ನಿಲ್ಲಿ ಹೇಳಿದೆ.

**ಪ್ರತ್ಯಗ್ನಿರುಷಸಾಮಗ್ರಮಖ್ಯ-ದ್ವಿಭಾತೀನಾಂ ಸುಮನಾ ರತ್ನಧೇಯಮ್ ।**
**ಯಾತಮಶ್ವಿನಾ ಸುಕೃತೋ ದುರೋಣ-ಮುತ್ಸೂರ್ಯೋ ಜ್ಯೋತಿಷಾ ದೇವ ಏತಿ ॥೧॥**

**ಪದಾರ್ಥ:-** [**ವಿಭಾತೀನಾಮ್**] ಪ್ರಕಾಶಮಾನವಾಗಿರುವ [**ಉಷಸಾಮ್**] ಪ್ರಾತಃಕಾಲದ [**ಅಗ್ರಮ್**] ಮೇಲಿರುವಂತಹ [**ಅಗ್ನಿಃ**] ಅಗ್ನಿಯಂತೆ [**ಪ್ರತಿ, ಅಖ್ಯತ್**] ಪ್ರಕಟವಾಗುವ ಮತ್ತು [**ಸುಮನಾಃ**] ಪ್ರಸನ್ನ ಚಿತ್ತವುಳ್ಳ [**ಅಶ್ವಿನಾ**] ವಾಯು ಮತ್ತು ಮಿಂಚಿನಂತೆ [**ಯಾತಮ್**] ಪ್ರಾಪ್ತವಾಗುವಂತಹ [**ಜ್ಯೋತಿಷಾ**] ಪ್ರಕಾಶದಿಂದ [**ದೇವಃ**] ಸುಖವನ್ನು ನೀಡುವಂತಹ [**ಸೂರ್ಯಃ**] ಸೂರ್ಯನು [**ಉತ್**] [**ಏತಿ**] ಹೇಗೆ ಉದಯವಾಗುವನೋ ಹಾಗೆ [**ಸುಕೃತಃ**] ಉತ್ತಮ ಕರ್ಮಗಳನ್ನಾಚರಿಸುವ ಧರ್ಮಾತ್ಮನು [**ರತ್ನಧೇಯಮ್**] ರತ್ನಕೋಶವನ್ನೂ [**ದುರೋಣಮ್**] ಗೃಹವನ್ನೂ ಪಡೆದು ಸುಖವನ್ನು ಹೊಂದುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯನು ವಾಯು, ಮಿಂಚು ಮತ್ತು ಸೂರ್ಯನಂತೆ ಗುಣಶಾಲಿಯಾಗಿ ಪ್ರಜೆಗಳ ಪಾಲನೆಯನ್ನು ಮಾಡುವನೋ ಅವನು ತನ್ನ ಸತ್ಯನ್ಯಾಯದಿಂದಾಗಿ ಅನೇಕ ರತ್ನಗಳ ಕೋಶವನ್ನೇ ಪಡೆಯುವನು.

ಸೂರ್ಯಲೋಕಾದಿಗಳ ನಿಮಿತ್ತ ಕಾರಣವನ್ನಿಲ್ಲಿ ಹೇಳಿದೆ.

**ಊರ್ಧ್ವಂ ಭಾನುಂ ಸವಿತಾ ದೇವೋ ಅಶ್ರೇ-ದ್ದ್ರಪ್ಸಂ ದವಿಧ್ವದ್ಗವಿಷೋ ನ ಸತ್ವಾ ।**
**ಅನು ವ್ರತಂ ವರುಣೋ ಯಂತಿ ಮಿತ್ರೋ ಯತ್ಸೂರ್ಯಂ ದಿವ್ಯಾರೋಹಯಂತಿ ॥೨॥**

**ಪದಾರ್ಥ:-** ಹೇ ಮನುಷ್ಯರೇ! ಯಾರು [**ಸವಿತಾ**] ಸೂರ್ಯಮಂಡಲವನ್ನು [**ದೇವಃ**] ಪ್ರಕಾಶಮಾನವಾಗುವಂತೆ [**ಸತ್ವಾ**] ಚಲಿಸುವಂತೆ [**ಗವಿಷಃ**] ಗೋವುಗಳನ್ನು ಹೊಂದುವಂತಹ ಇಚ್ಛೆಯುಂಟಾಗುವಂತೆ [**ನ**] ಸದೃಶವಾದ [**ಅನು, ವ್ರತಮ್**] ಅನುಕೂಲಕರವಾದ ಕರ್ಮಗಳಿಂದ ಮತ್ತು [**ವರುಣಃ**] ನೀರು ಮತ್ತು [**ಮಿತ್ರಃ**] ವಾಯುವನ್ನು [**ಯಂತಿ**] ಪಡೆಯುವನೋ [**ಯತ್**] ಯಾವ [**ಸೂರ್ಯಮ್**] ಸೂರ್ಯಲೋಕವನ್ನು [**ದಿವಿ**] ಅಂತರಿಕ್ಷದಲ್ಲಿ [**ಆರೋಹಯಂತಿ**] ಮೇಲೇರುವಂತೆ ಮಾಡುವನೋ [**ದ್ರಪ್ಸಮ್**] ಪೃಥಿವೀ ಸಂಬಂಧವಾದ ಭೂಲೋಕವನ್ನು [**ದವಿಧ್ವತ್**] ಕಂಪಿಸುವಂತೆ ಮಾಡುವನೋ [**ಊರ್ಧ್ವಮ್**] ಮೇಲಿರುವಂತಹ [**ಭಾನುಮ್**] ಕಿರಣಗಳನ್ನು [**ಅಶ್ರೇತ್**] ಆಶ್ರಯಿಸಿರುವನೋ ಅವನನ್ನು ಎಲ್ಲರೂ ತಿಳಿಯಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಈ ಸೃಷ್ಟಿಯಲ್ಲಿ ಪರಮಾತ್ಮನು ಯಾವ ರೀತಿಯಿಂದ ಸೂರ್ಯನ ಉತ್ಪತ್ತಿ ಮೂಲಕವಾಗಿ ಜಲ, ಅಗ್ನಿ ಮತ್ತು ವಾಯುವನ್ನು ಸೃಷ್ಟಿಸಿರುವನೋ, ಅದೇ ರೀತಿ ಪೃಥಿವೀ ಮುಂತಾದವುಗಳಿಗೂ ನಿಮಿತ್ತಕಾರಣವನ್ನು ರಚಿಸಿರುವನು ಎಂಬ ವಿಷಯವನ್ನು ಎಲ್ಲರೂ ಅರಿಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಂ ಸೀಮಕೃಣ್ವನ್ ತಮಸೇ ವಿಪೃಚೇ ಧ್ರುವಕ್ಷೇಮಾ ಅನವಸ್ಯಂತೋ ಅರ್ಥಮ್ ।**
**ತಂ ಸೂರ್ಯಂ ಹರಿತಃ ಸಪ್ತ ಯಹ್ವೀಃ ಸ್ಪಶಂ ವಿಶ್ವಸ್ಯ ಜಗತೋ ವಹಂತಿ ॥೩॥**

**ಪದಾರ್ಥ:-** ಹೇ ಮನುಷ್ಯರೇ! **[ಯಮ್]** ಯಾವ **[ಅರ್ಥಮ್]** ದ್ರವ್ಯರೂಪ ಸೂರ್ಯವನ್ನು **[ಅನವಸ್ಯಂತಃ]** ಸೇವಿಸುವುದಿಲ್ಲವೋ **[ಧ್ರುವಕ್ಷೇಮಾಃ]** ನಿಶ್ಚಯವಾಗಿ ರಕ್ಷಣೆ ಮಾಡುವಂತಹ ಜನರನ್ನು **[ತಮಸೇ]** ಅಂಧಕಾರದಿಂದ **[ವಿಪೃಚೇ]** ದೂರ ಮಾಡುವುದಕ್ಕಾಗಿ **[ಸೀಮ್]** ಎಲ್ಲ ರೀತಿಯಿಂದಲೂ **[ಅಕೃಣ್ವನ್]** ನಿಶ್ಚಯ ಮಾಡುವನೋ **[ತಮ್]** ಅಂತಹ **[ವಿಶ್ವಸ್ಯ]** ಸಮಸ್ತ **[ಜಗತಃ]** ಜಗತ್ತನ್ನು **[ಸ್ಪಶಂ]** ಬಂಧಿಸುವಂತಹ **[ಸೂರ್ಯಮ್]** ಸೂರ್ಯನನ್ನು **[ಸಪ್ತ]** ಏಳು **[ಯಹ್ವೀಃ]** ಬೃಹತ್ತಾದ **[ಹರಿತಃ]** ದಿಕ್ಕುಗಳಿಂದಲೂ **[ವಹಂತಿ]** ಪ್ರಾಪ್ತಗೊಳಿಸುತ್ತಾರೋ ಹಾಗೆ ಉತ್ತಮ ಗುಣವನ್ನು ಪ್ರಾಪ್ತಗೊಳಿಸಿಕೊಳ್ಳಬೇಕು.

**ಭಾವಾರ್ಥ:-** ಹೇ ಮನುಷ್ಯರೇ! ಹೇಗೆ ಸೂರ್ಯನು ಅಂಧಕಾರವನ್ನು ದೂರ ಮಾಡುವುದಕ್ಕಾಗಿ ಕಿರಣಗಳನ್ನು ಧರಿಸಿರುವನೋ, ಹಾಗೆಯೇ ಸಂಪೂರ್ಣ ಜಗತ್ತಿನ ಅವಿದ್ಯೆಯನ್ನು ದೂರ ಮಾಡುವುದಕ್ಕಾಗಿ ಮತ್ತು ವಿದ್ಯೆಯನ್ನು ರಕ್ಷಿಸುವುದಕ್ಕಾಗಿ ಎಲ್ಲ ರೀತಿಯಿಂದಲೂ ಸತ್ಯದ ಉಪದೇಶವನ್ನು ಮಾಡಿರಿ.

ಸೂರ್ಯ ದೃಷ್ಟಾಂತದಿಂದ ವಿದ್ವದ್ಗುಣವನ್ನಿಲ್ಲಿ ಹೇಳಿದೆ.

**ವಹಿಷ್ಠೇಭಿರ್ವಿ ಹರನ್ಯಾಸಿ ತಂತು-ಮವವ್ಯಯನ್ನಸಿತಂ ದೇವ ವಸ್ಮ । ದವಿಧ್ವತೋ**
**ರಶ್ಮಯಃ ಸೂರ್ಯಸ್ಯ ಚರ್ಮೇವಾವಾಧುಸ್ತಮೋ ಅಪ್ಸ್ವ (ಅ) ೧ ನ್ತಃ ॥೪॥**

**ಪದಾರ್ಥ:-** **[ದೇವ]** ಪ್ರಕಾಶಮಾನವಾದ ವಿದ್ವಾಂಸನೇ! ಹೇಗೆ ನೀನು **[ವಹಿಷ್ಠೇಭಿಃ]** ಅತ್ಯಂತ ಪ್ರಾಪ್ತಗೊಳಿಸುವವರಿಗಾಗಿ ಸೂರ್ಯನು **[ತಂತುಮ್]** ಕಾರಣವನ್ನು **[ವಿಹರನ್]** ಪ್ರಾಪ್ತಗೊಳಿಸುವನೋ ಮತ್ತು **[ಅಸಿತಮ್]** ಕೃಷ್ಣವರ್ಣದ ಅಂಧಕಾರವನ್ನು **[ಅವವ್ಯಯನ್]** ದೂರ ಮಾಡಿ ಚಲಿಸುವಂತೆ ಮಾಡುವನೋ ಹಾಗೆ **[ವಸ್ಮ]** ನಿವಾಸಸ್ಥಾನವನ್ನು **[ಅವ, ಯಾಸಿ]** ಪ್ರಾಪ್ತಗೊಳಿಸುವನೋ ಹಾಗೆ **[ದವಿಧ್ವತಃ]** ಕಂಪಿಸುವನೋ **[ಸೂರ್ಯಸ್ಯ]** ಸೂರ್ಯನ **[ರಶ್ಮಯಃ]** ಕಿರಣಗಳು **[ಅಪ್ಸು]** ಅಂತರಿಕ್ಷದ **[ಅಂತಃ]** ಮಧ್ಯೆ **[ತಮಃ]** ಅಂಧಕಾರವನ್ನು **[ಚರ್ಮೇವ]** ಚರ್ಮದ ಶರೀರವು ಹೇಗೆ ನಾಶವಾಗುವುದೋ ಹಾಗೆ **[ಅಧುಃ]** ನಾಶಗೊಳಿಸುವನೋ ಹಾಗೆಯೇ ನೀನೂ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇ ಉಪದೇಶಕನೇ! ಹೇಗೆ ಸೂರ್ಯನು ತನ್ನ ಪ್ರಾಪ್ತವಾದಂತಹ, ಆಕರ್ಷಕವಾದಂತಹ ಕಿರಣಗಳಿಂದ ತನ್ನ ಪ್ರಕಾಶವನ್ನು ವಿಸ್ತಾರಗೊಳಿಸುವನೋ, ಚರ್ಮದ ಶರೀರವು ನಾಶಹೊಂದುವಂತೆ ಅಂತರಿಕ್ಷದ ಮಧ್ಯದಲ್ಲಿ ಸಂಚರಿಸುತ್ತಾ ಅಂಧಕಾರವನ್ನು ನಾಶಗೊಳಿಸುವನೋ ಹಾಗೆಯೇ ನೀನೂ ಅವಿದ್ಯೆಯನ್ನು ನಾಶಗೊಳಿಸುತ್ತಾ, ವಿದ್ಯೆಯನ್ನು ಪ್ರಕಾಶಗೊಳಿಸುತ್ತಾ ಈ ಜಗತ್ತಿನಲ್ಲಿ ವಿಹರಿಸು.

ಸೂರ್ಯಮಂಡಲ ಪ್ರಶ್ನೋತ್ತರ ಪೂರ್ವಕವಾದ ವಿದ್ವಾಂಸನ ಗುಣವನ್ನಿಲ್ಲಿ ಹೇಳಿದೆ.

**ಅನಾಯತೋ ಅನಿಬದ್ಧಃ ಕಥಾಯಂ ನ್ಯಙ್ಙುತ್ತಾನೋಽವ ಪದ್ಯತೇ ನ ।**
**ಕಯಾ ಯಾತಿ ಸ್ವಧಯಾ ಕೋ ದದರ್ಶ ದಿವಃ ಸ್ಕಂಭಃ ಸಮೃತಃ ಪಾತಿ ನಾಕಮ್ ॥೫॥**

**ಪದಾರ್ಥ:-** ಹೇ ವಿದ್ವಾಂಸನೇ! **[ಅಯಮ್]** ಯಾವ **[ಅನಾಯತಃ]** ಅಲ್ಲಿ ಇಲ್ಲಿ **[ನ]** ಹೋಗುವಂತಹ ಮತ್ತು ಸಮೀಪದಲ್ಲಿರುವಂತಹ **[ಅನಿಬದ್ಧಃ]** ಯಾವ ಆಕರ್ಷಣೆಗೂ ಒಳಗಾಗದಂತಹ **[ನ್ಯಜ್]** ಕೆಳಗೂ ಇರುವಂತಹ **[ಉತ್ತಾನಃ]** ಮೇಲೂ ಇರುವಂತಹ **[ಕಥಾ]** ಯಾವ ಪ್ರಕಾರದಿಂದಲೂ **[ನ]** **[ಅವ, ಪದ್ಯತೇ]** ಕೆಳಗೆ ಬೀಳುವುದಿಲ್ಲವೋ ಮತ್ತು **[ಕಯಾ]** ಯಾವ **[ಸ್ವಧಯಾ]** ಅನ್ನಾದಿ ಪದಾರ್ಥಗಳಿಂದ ಯುಕ್ತವಾದ ಪೃಥಿವಿಯೊಡನೆ **[ಯಾತಿ]** ಚಲಿಸುವನೋ **[ದಿವಃ]** ಪ್ರಕಾಶವನ್ನು **[ಸ್ಕಂಭಃ]** ಸ್ತಂಭದಂತೆ ಧರಿಸಿರುವನೋ **[ಸಮೃತಃ]** ಉತ್ತಮ ಪ್ರಕಾರವಾದ ಸತ್ಯಸ್ವರೂಪವನ್ನೂ **[ನಾಕಮ್]** ದುಃಖರಹಿತ ವ್ಯವಹಾರವನ್ನೂ **[ಪಾತಿ]** ರಕ್ಷಿಸುವನೋ ಅವನನ್ನು **[ಕಃ]** ಯಾರು ತಾನೇ **[ದದರ್ಶ]** ನೋಡುವರು.

**ಭಾವಾರ್ಥ:-** ಹೇ ವಿದ್ವಾಂಸನೇ! ಯಾವ ಸೂರ್ಯನು ಅಂತರಿಕ್ಷದ ಮಧ್ಯದಲ್ಲಿದ್ದು, ಕೆಳಗೆ ಬೀಳುವುದಿಲ್ಲವೋ, ಯಾರಿಂದ ಚಲಿಸುವನೋ ಮತ್ತು ಹೇಗೆ ಪ್ರಕಾಶವನ್ನು ಧರಿಸಿರುವನು ಮತ್ತು ಸುಖಕಾರಕನಾಗಿರುವನು? ಈ ಪ್ರಶ್ನೆಗೆ ಉತ್ತರ ಪರಮೇಶ್ವರನಿಂದ ಸ್ಥಾಪಿಸಲ್ಪಟ್ಟು ಮತ್ತು ಧರಿಸಿರುವುದರಿಂದ ಕೆಳಗೆ ಬೀಳುವುದಿಲ್ಲ. ತನ್ನ ಸಮೀಪದಲ್ಲಿರುವ ಭೂಗೋಳದ ಜೊತೆಯಲ್ಲಿ ತನ್ನ ಕಕ್ಷೆಯಲ್ಲಿ ಚಲಿಸುತ್ತಿರುವನು ಮತ್ತು ಅತ್ಯಂತ ಸಮೀಪದಲ್ಲಿರುವ ಪದಾರ್ಥಗಳನ್ನು ಆಕರ್ಷಣ ಬಲದಿಂದ ಧರಿಸಿರುವನು ಮತ್ತು ಪರಮೇಶ್ವರನ ವ್ಯವಸ್ಥೆಯಂತೆ ಸುಖಕಾರಕನೂ ಆಗಿರುವನು ಎಂಬುದನ್ನು ತಿಳಿಯಬೇಕು.

ಈ ಸೂಕ್ತದಲ್ಲಿ ಸೂರ್ಯ ಮತ್ತು ವಿದ್ವಾಂಸನ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗುತ್ತದೆ.

**ಹದಿಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೧೪

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ಅಗ್ನಿಃ ಲಿಂಗೋಕ್ತಾವಾ ದೇವತಾ । ೧ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ। ೨, ೪ ನಿಚೃತ್ತ್ರಿಷ್ಟುಪ್, ೫ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಸಾದೃಶ್ಯದಿಂದ ವಿದ್ವದ್ಗುಣ ಹೇಳಲಾಗಿದೆ.

**ಪ್ರತ್ಯಗ್ನಿರುಷಸೋ ಜಾತವೇದಾ ಅಖ್ಯದ್ದೇವೋ ರೋಚಮಾನಾ ಮಹೋಭಿಃ ।**
**ಆ ನಾಸತ್ಯೋರುಗಾಯಾ ರಥೇನೇ-ಮಂ ಯಜ್ಞಮುಪ ನೋ ಯಾತಮಚ್ಛ ॥೧॥**

**ಪದಾರ್ಥ:-** **[ನಾಸತ್ಯಾ]** ಅಸತ್ಯಾಚರಣರಹಿತ **[ಉರುಗಾಯಾ]** ಬಹು ಪ್ರಶಂಸಿತ ಅಧ್ಯಾಪಕೋಪದೇಶಕರೇ! ನೀವಿಬ್ಬರು **[ಮಹೇಭಿಃ]** ಹಿರಿಯರೊಂದಿಗೆ **[ರಥೇನ]** ವಾಹನದಿಂದ **[ನಃ]** ನಮ್ಮ ವ್ಯವಹಾರದಲ್ಲಿ **[ಇಮಂ]** ಇರುವ ಈ **[ಯಜ್ಞಂ]** ಯಜ್ಞವನ್ನು **[ಜಾತವೇದಃ]** ಉತ್ಪನ್ನ ಪದಾರ್ಥಗಳಲ್ಲಿರುವ **[ದೇವಃ]** ಪ್ರಕಾಶಮಾನನಾದ **[ಅಗ್ನಿಃ]** ಅಗ್ನಿಯು **[ರೋಚಮಾನಾಃ]** ಪ್ರಕಾಶಮಾನ **[ಉಷಸಃ]** ದಿನಾರಂಭದ **[ಪ್ರತಿ]** ಬಗ್ಗೆ **[ಅಖ್ಯತ್]** ಪ್ರಕಾಶಿತನಾಗುವನು. **[ಅಚ್ಛ]** ಉತ್ತಮ ರೀತಿಯಿಂದ **[ಉಪ]** ಸಮೀಪಕ್ಕೆ **[ಆ, ಯಾತಂ]** ಬರುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಬೆಳಗಿನ ಸಮಯದಲ್ಲಿ ಸೂರ್ಯನು ಶೋಭಿತನಾಗುವನೋ ಹಾಗೆ ರಥದಿಂದ ಮಾರ್ಗ ಪಡೆಯುವ ರೀತಿಯಲ್ಲಿ ಸತ್ಯೋಪದೇಶದಿಂದ ವಿದ್ಯೆಯ ಸುಖ ಪಡೆಯುವವರು ಪ್ರಪಂಚದಲ್ಲಿ ಕಲ್ಯಾಣಕಾರಕರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಊರ್ಧ್ವಂ ಕೇತುಂ ಸವಿತಾ ದೇವೋ ಅಶ್ರೇ-ಜ್ಜ್ಯೋತಿರ್ವಿಶ್ವಸ್ಮೈ ಭುವನಾಯ ಕೃಣ್ವನ್ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ವಿ ಸೂರ್ಯೋ ರಶ್ಮಿಭಿಶ್ಚೇಕಿತಾನಃ ॥೨॥**

**ಪದಾರ್ಥ:-** [**ದೇವಃ**] ವಿದ್ಯಾವಂತನು [**ಸವಿತಾ**] ಸೂರ್ಯನಂತೆ [**ರಶ್ಮಿಭಿಃ**] ಕಿರಣಗಳಿಂದ [**ಚೇಕಿತಾನಃ**] ತಿಳಿಯುವವನಾಗಿ [**ಸೂರ್ಯಃ**] ಪ್ರಕಾಶಮಾನ [**ವಿಶ್ವಸ್ಮೈ**] ಸಮಗ್ರ [**ಭುವನಾಯ**] ಲೋಕಗಳಿಗೆ [**ಜ್ಯೋತಿಃ**] ಬೆಳಕನ್ನು [**ಕೃಣ್ವನ್**] ಮಾಡುವನು. [**ದ್ಯಾವಾ ಪೃಥಿವೀ**] ಬೆಳಕು, ಭೂಮಿ [**ಅಂತರಿಕ್ಷಂ**] ಆಕಾಶಗಳನ್ನು [**ವಿ, ಆ, ಅಪ್ರಾಃ**] ವ್ಯಾಪ್ತನಾಗುವನು. [**ಊರ್ಧ್ವಂ**] ಶ್ರೇಷ್ಠವಾದ [**ಕೇತುಂ**] ಬುದ್ಧಿಯನ್ನು [**ಅಶ್ರೇತ್**] ಆಶ್ರಯಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ವಿದ್ಯಾವಂತರು ಬ್ರಹ್ಮಚರ್ಯಾಶ್ರಮದಲ್ಲಿ ಸಂಪೂರ್ಣ ವಿದ್ಯೆಯನ್ನೋದಿ ಜ್ಞಾನವನ್ನು ಪಡೆಯುವರೋ ಅವರು ಸೂರ್ಯನಕಿರಣಗಳಿಂದ ಹೇಗೋ ಹಾಗೆ ಉಪದೇಶಗಳಿಂದ ಅಂತಃಕರಣಗಳನ್ನು ಉಜ್ವಲಗೊಳಿಸುವರೋ ಅವರು ಸತ್ಕಾರಾರ್ಹರಾಗಿರುವರು.

ವಿದುಷಿಯರ ಗುಣವನ್ನಿಲ್ಲಿ ಹೇಳಿದೆ.

**ಆವಹಂತ್ಯರುಣೀರ್ಜ್ಯೋತಿಷಾಗಾ-ನ್ಮಹೀ ಚಿತ್ರಾ ರಶ್ಮಿಭಿಶ್ಚೇಕಿತಾನಾ । ಪ್ರಬೋಧಯಂತೀ**
**ಸುವಿತಾಯ ದೇವ್ಯು (ಉ) ೧ ಷಾ ಈಯತೇ ಸುಯುಜಾ ರಥೇನ ॥೩॥**

**ಪದಾರ್ಥ:-** [**ಸುಯುಜಾ**] ಉತ್ತಮ ರೀತಿಯಿಂದ ಸಂಯೋಜಿಸಲಾದ [**ರಥೇನ**] ವಾಹನದಂತೆ [**ರಶ್ಮಿಭಿಃ**] ಕಿರಣಗಳಿಂದ [**ಚೇಕಿತಾನಾ**] ಪ್ರಾಣಿಗಳಿಗೆ ಚೇತನ ನೀಡುತ್ತ [**ಸುವಿತಾಯ**] ಸಂಪತ್ತಿಗಾಗಿ [**ಪ್ರಬೋಧಯಂತೀ**] ಎಚ್ಚರಗೊಳಿಸುತ್ತ [**ಜ್ಯೋತಿಷಾ**] ಬೆಳಕಿನಿಂದ [**ಚಿತ್ರಾ**] ಅದ್ಭುತ ಸ್ವರದವಳು [**ಅರುಣೀಃ**] ಕೆಂಪುಬಣ್ಣದ ಕಾಂತಿಯನ್ನು [**ಆವಹಂತೀ**] ಸರ್ವತ್ರ ಪ್ರಸರಿಸುವವಳಾಗಿ [**ಮಹೀ**] ಮಹತ್ತರವಾದ [**ದೇವೀ**] ಪ್ರಕಾಶಮಾನಳಾದ [**ಉಷಾಃ**] ಪ್ರಾತಃಕಾಲವು [**ಈಯತೇ**] ಬರುತ್ತದೆ. [**ಆ, ಅಗಾತ್**] ಹೋಗುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಸುಂದರ ಸ್ತ್ರೀಯು ಲಕ್ಷಣವತಿ, ರೂಪವತಿಯಾಗಿ ಪಾತಿವ್ರತ್ಯ ಧರ್ಮಕ್ಕಾಗಿ ಪತಿಯನ್ನು ಪಡೆಯುವಳೋ ಅವಳು ಉಷೆಯಂತೆ ಕುಲವನ್ನು ಬೆಳಗುವಳು. ಸಂತಾನಗಳಿಗೆ ಉತ್ತಮ ಶಿಕ್ಷಣ ನೀಡುವಳು ಮತ್ತು ಎಲ್ಲರಿಗೂ ಆನಂದದಾತ್ರಿಯಾಗುವಳು.

ಸ್ತ್ರೀ ಪುರುಷರ ಗುಣವಿಲ್ಲಿ ಹೇಳಲಾಗಿದೆ.

**ಆ ವಾಂ ವಹಿಷ್ಠಾ ಇಹ ತೇ ವಹಂತು ರಥಾ ಅಶ್ವಾಸ ಉಷಸೋ ವ್ಯುಷ್ಟೌ । ಇಮೇ ಹಿ**
**ವಾಂ ಮಧುಪೇಯಾಯ ಸೋಮಾ ಅಸ್ಮಿನ್ ಯಜ್ಞೇ ವೃಷಣಾ ಮಾದಯೇಥಾಮ್ ॥೪॥**

**ಪದಾರ್ಥ:-** [**ವಾಂ**] ನೀವಿಬ್ಬರು [**ವಹಿಷ್ಠಾಃ**] ಧಾರಣ ಮಾಡುವವರು [**ರಥಾಃ**] ವಾಹನಗಳು [**ಅಶ್ವಾಸಃ**] ಬೇಗ ಚಲಿಸುವ [**ಉಷಸಃ**] ಪ್ರಾತಃಕಾಲದ [**ವ್ಯುಷ್ಟೌ**] ವಿಶಿಷ್ಟ ಪ್ರಭಾವದಲ್ಲಿ [**ತೇ**] ನಿಮ್ಮಿಬ್ಬರನ್ನು [**ಇಹ**] ಈ ಪ್ರಪಂಚದಲ್ಲಿ [**ಆ, ವಹಂತು**] ಇಚ್ಛಿಸಿದ ಸ್ಥಳಕ್ಕೆ ತಲುಪಿಸಲಿ. [**ಇಮೇ**] ಈ ಇಬ್ಬರು [**ಹಿ**] ಯಾವ ಕಾರಣದಿಂದ

**[ವಾಂ]** ನಿಮ್ಮಿಬ್ಬರ **[ಸೋಮಾಃ]** ಐಶ್ವರ್ಯ ಪದಾರ್ಥಗಳು **[ಅಸ್ಮಿನ್]** ಈ **[ಯಜ್ಞೇ]** ಸಂಗತವಾಗುವ ಆಶ್ರಮದಲ್ಲಿ **[ಮಧುಪೇಯಾಯ]** ಮಧುರ ರಸದ ಪಾನಕ್ಕಾಗಿ **[ವೃಷಣಾ]** ಪರಾಕ್ರಮದಿಂದ **[ಮಾದಯೇಥಾಂ]** ಆನಂದಿಸಿರಿ.

**ಭಾವಾರ್ಥ:-** ಗೃಹಸ್ಥಾಶ್ರಮದಲ್ಲಿರುವ ದಂಪತಿಗಳೇ! ನೀವು ನಸುಕಿನಲ್ಲೇ ಎದ್ದು ಅಗತ್ಯ ಕೃತ್ಯಗಳನ್ನು ಮಾಡಿ ವಾಹನಗಳಿಂದಲೋ ಪಾದಚಾರಿಗಳಾಗಿಯೋ ಪರಿಶುದ್ಧ ಸ್ಥಳದಲ್ಲಿ ಸಂಚಾರ ಮಾಡಿರಿ. ಅದರಿಂದ ನಿಮಗೆ ರೋಗವು ಎಂದೂ ಬರಲಾರದು. ಬಲಿಷ್ಠರಾಗಿ ಗೃಹಸ್ಥಾಶ್ರಮದ ಅತಿಶಯಾನಂದವನ್ನನುಭವಿಸುವಿರಿ.

ವಿದ್ಯಾವಂತರ ವಿಷಯವಿಲ್ಲಿದೆ.

**ಅನಾಯತೋ ಅನಿಬದ್ಧಃ ಕಥಾಯಂ ನ್ಯಙ್ಙುತ್ತಾನೋಽವ ಪದ್ಯತೇ ನ ।**

**ಕಯಾ ಯಾತಿ ಸ್ವಧಯಾ ಕೋ ದದರ್ಶ ದಿವಃ ಸ್ಕಂಭಃ ಸಮೃತಃ ಪಾತಿ ನಾಕಮ್ ॥೫॥**

**ಪದಾರ್ಥ:-** **[ಅನಾಯತಃ]** ಸಮೀಪದಲ್ಲಿರುವ **[ಅನಿಬದ್ಧಃ]** ಒಂದೆಡೆ ನೆಲೆಸದ **[ಅಯಂ]** ಇವನು **[ನ್ಯಙ್]** ಪ್ರತಿದಿನವೂ ಪ್ರಾಪ್ತನಾಗುವ **[ಉತ್ತಾನಃ]** ಮೇಲ್ಭಾಗದಲ್ಲಿರುವವನು **[ಕಥಾ]** ಹೇಗೆ **[ನ, ಅವಪದ್ಯತೇ]** ಕೆಳಕ್ಕೆ ಬರುವುದಿಲ್ಲವೋ **[ಕಯಾ]** **[ಸ್ವಧಯಾ]** ಯಾವ ತನ್ನ ಗತಿಯಿಂದ **[ಯಾತಿ]** ಚಲಿಸುವನೋ **[ಅಮೃತಃ]** ಸತ್ಯಸ್ವರೂಪನಾದ **[ದಿವಃ]** ದಿವ್ಯಸುಖದ **[ಸ್ಕಂಭಃ]** ಕೊಳುಕಂಬದಂತೆ ಮಧ್ಯದಲ್ಲಿದ್ದು **[ನಾಕಂ]** ಸುಖದ **[ಪಾತಿ]** ಪಾಲನೆ ಮಾಡುವವನು. ಅವನನ್ನು **[ಕಃ]** ಯಾವನು **[ದದರ್ಶ]** ನೋಡುವವನು.

**ಭಾವಾರ್ಥ:-** ವಿದ್ವಾಂಸರೇ! ಯಾವನು ನೀಚಗತಿಯನ್ನು ಹೊಂದುವುದಿಲ್ಲವೋ, ಯಾರು ಅವಿದ್ಯಾಬಂಧನದಿಂದ ಮುಕ್ತನಾಗುವನೋ ಸುಖ ಪ್ರಾಪ್ತಿಯಾಗುವಂತಹ ಧರ್ಮ ಕರ್ಮವನ್ನೇ ಮಾಡುವನೋ ಅವನು ತನ್ನ ಕಾಮನೆಗಳನ್ನು ಪರಿಪೂರ್ಣಗೊಳಿಸಿ ಪರಮಾತ್ಮನನ್ನು ಕಾಣುವನು.

ಈ ಸೂಕ್ತದಲ್ಲಿ ಅಗ್ನಿ, ವಿದ್ಯಾವಂತರು, ಸ್ತ್ರೀ-ಪುರುಷರು ಇವರ ಕಾರ್ಯಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಹದಿನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೧೫

ಮಂತ್ರಸಂಖ್ಯೆ ೧೦ । ವಾಮದೇವ ಋಷಿಃ । ೧-೬ ಅಗ್ನಿಃ, ೭, ೮ ಸೋಮಕಃ ಸಾಹ ದೇವ್ಯಃ, ೯, ೧೦ ಅಶ್ವಿನಾ ದೇವತೇ । ೧, ೪ ಗಾಯತ್ರೀ, ೨, ೫, ೬ ವಿರಾಡ್ಗಾಯತ್ರೀ, ೩, ೭-೧೦ ನಿಚೃದ್ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿಯ ವಿಷಯ ಹೇಳಲಾಗಿದೆ.

**ಅಗ್ನಿರ್ಹೋತಾ ನೋ ಅಧ್ವರೇ ವಾಜೀ ಸನ್ ಪರಿಣೀಯತೇ । ದೇವೋ ದೇವೇಷು ಯಜ್ಞಿಯಃ ॥೧॥**

**ಪದಾರ್ಥ:-** **[ನಃ]** ನಮ್ಮ **[ಅಧ್ವರೇ]** ವ್ಯವಹಾರದಲ್ಲಿ **[ಅಗ್ನಿಃ]** ಅಗ್ನಿಯಂತೆ ಪ್ರಕಾಶಮಾನನಾದ **[ಹೋತಾ]** ಧಾರಕನು **[ದೇವೇಷು]** ಪ್ರಕಾಶಮಾನರಾದವರಲ್ಲಿ **[ದೇವಃ]** ದಿವ್ಯಗುಣಗಳಿಂದ ಕೂಡಿರುವ **[ಯಜ್ಞಿಯಃ]** ಯಜ್ಞ ಕರ್ಮಗಳಿಗೆ ಯೋಗ್ಯವಾದ **[ವಾಜೀ]** **[ಸನ್]** ಬಲಿಷ್ಠ ಅಶ್ವಕ್ಕೆ ಸಮಾನವಾಗಿ ಅಗ್ನಿಯು **[ಪರಿಣೀಯತೇ]** ಪಡೆದುಕೊಳ್ಳಲ್ಪಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನಿಯು ತೇಜೋಮಯನಾಗಿ ಹೇಗೆ ಎಲ್ಲಾ ವ್ಯವಹಾರಗಳನ್ನು ನಡೆಸುವನೋ ಅದೇ ರೀತಿ ವಿದ್ಯಾವಂತರು ಜ್ಞಾನಮಯರಾಗಿ ಎಲ್ಲಾ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪರಿ ತ್ರಿವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರಿವ । ಆ ದೇವೇಷು ಪ್ರಯೋ ದಧತ್ ॥೨॥**

**ಪದಾರ್ಥ:-** [**ಅಗ್ನಿಃ**] ಅಗ್ನಿಯು [**ರಥೀರಿವ**] ಸೇನಾಪತಿಯಂತೆ [**ದೇವೇಷು**] ದಿವ್ಯಗುಣ ಸಂಪನ್ನರಲ್ಲಿ [**ಪ್ರಯಃ**] ಧನವನ್ನು [**ದಧತ್**] ಧಾರಣ ಮಾಡಿಸುವನು. [**ತ್ರಿವಿಷ್ಟಿ**] ಮೂರು ವಿಧ ಸುಖಗಳಲ್ಲಿ ಪ್ರವೇಶಿಸಲು [**ಅಧ್ವರಂ**] ಯೋಗ್ಯ ವ್ಯವಹಾರಗಳನ್ನು [**ಪರಿ, ಆಯಾತಿ**] ಎಲ್ಲ ರೀತಿಯಿಂದಲೂ ಸಾಧಿಸಿಕೊಡುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಉತ್ತಮ ಸೇನಾಪತಿಯು ಹೇಗೆ ಮೂರು ರೀತಿಯ ಅಂದರೆ ಆಧ್ಯಾತ್ಮಿಕ, ಆಧಿ ದೈವಿಕ, ಆಧಿ ಭೌತಿಕ ಸುಖವನ್ನು ಪಡೆಯುವನೋ ಅದೇ ರೀತಿ ಅಗ್ನಿ ವಿದ್ಯೆಯನ್ನು ತಿಳಿದವರು ಶರೀರ, ಆತ್ಮ, ಇಂದ್ರಿಯಗಳೆಂಬ ಮೂರು ವಿಧ ಸುಖಗಳನ್ನು ಪಡೆದುಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪರಿ ವಾಜಪತಿಃ ಕವಿ-ರಗ್ನಿರ್ಹವ್ಯಾನ್ಯಕ್ರಮೀತ್ । ದಧದ್ರತ್ನಾನಿ ದಾಶುಷೇ ॥೩॥**

. **ಪದಾರ್ಥ:-** [**ವಾಜಪತಿಃ**] ಅನ್ನಾದಿ ಪದಾರ್ಥಗಳ ಒಡೆಯ [**ಕವಿಃ**] ವಿದ್ಯಾವಂತನಾದ [**ಅಗ್ನಿಃ**] ವಿದ್ಯುತ್ ರೂಪಾಗ್ನಿಯು [**ದಾಶುಷೇ**] ಕೊಡುವವನಿಗಾಗಿ [**ರತ್ನಾನಿ**] ರಮಣೀಯ ಧನವನ್ನು [**ದಧತ್**] ಕೊಡುವವನಾಗಿ [**ಹವ್ಯಾನಿ**] ದಾನಯೋಗ್ಯ ಪದಾರ್ಥಗಳನ್ನು [**ಪರಿಅಕ್ರಮೀತ್**] ಸಮೀಪಗೊಳಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ದಾನ ಮಾಡುವವನು ಹೇಗೆ ಅನ್ಯರಿಗೆ ಉತ್ತಮ ವಸ್ತುಗಳನ್ನು ಕೊಡುವನೋ ಅದೇ ರೀತಿ ಅಗ್ನಿಯು ಎಲ್ಲರಿಗೂ ಸುಖವನ್ನು ಕೊಡುವವನು. ಅದೇ ಅವನ ಸ್ವಭಾವವಾಗಿದೆ.

ರಾಜನ ವಿಷಯವಿಲ್ಲಿ ಹೇಳಿದೆ.

**ಅಯಂ ಯಃ ಸೃಂಜಯೇ ಪುರೋ ದೈವವಾತೇ ಸಮಿಧ್ಯತೇ । ದ್ಯುಮಾ ಅಮಿತ್ರದಂಭನಃ ॥೪॥**

**ಪದಾರ್ಥ:-** [**ಯಃ**] ಯಾವನು [**ಅಯಂ**] ಈ [**ದ್ಯುಮಾನ್**] ವಿದ್ಯೆಯಿಂದ ಬೆಳಗುತ್ತಲಿರುವ [**ಅಮಿತ್ರದಂಭನಃ**] ಶತ್ರುನಾಶಕನು [**ಪುರಃ**] ಮೊದಲು [**ದೈವವಾತೇ**] ಪ್ರಾಪ್ತವಾದ ಸುಖದಲ್ಲಿ [**ಸೃಂಜಯೇ**] ಸುಖಕ್ಕೆ ತೊಡಕಾದ ಶತ್ರುಗಳನ್ನು ಗೆಲ್ಲುವ ಸಂಗ್ರಾಮದಲ್ಲಿ [**ಸಮಿಧ್ಯತೇ**] ಮಿಂಚುವವನಾಗುತ್ತಾನೆ.

**ಭಾವಾರ್ಥ:-** ರಾಜನೇ! ಯಾರು ಸಂಗ್ರಾಮದಲ್ಲಿ ತೇಜಸ್ವಿಯಾಗಿ ಮುನ್ನಡೆಯುವನೋ, ಶತ್ರುಗಳನ್ನು ನಾಶ ಮಾಡುವನೋ ಅವನನ್ನು ನೀನು ಪುತ್ರನಂತೆ ಪಾಲನೆ ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಯ ಘಾ ವೀರ ಈವತೋಽಗ್ನೇರೀಶೀತ ಮರ್ತ್ಯಃ । ತಿಗ್ಮಜಂಭಸ್ಯ ಮೀಳ್ಹುಷಃ ॥೫॥**

**ಪದಾರ್ಥ:-** [**ವೀರಃ**] ಶೂರನಾದ [**ಮರ್ತ್ಯಃ**] ಮನುಷ್ಯನು [**ಅಗ್ನೇಃ**] ಅಗ್ನಿಯಂತೆ [**ಅಸ್ಯ**] ಇದರಲ್ಲಿ [**ಈವತಃ**] ಮುನ್ನುಗ್ಗುವವನು [**ತಿಗ್ಮಜಂಭಸ್ಯ**] ತೇಜಸ್ಸಿನಿಂದ ಮಿಂಚುವ ಮುಖದವನು ಆದ [**ಮೀಳ್ಹುಷಃ**] ಪರಾಕ್ರಮಿ ಸೇನಾಪತಿಯು [**ಈಶೀತ**] ಶತ್ರುಸೇನೆಯಲ್ಲಿ ಸಮರ್ಥನಾಗಲಿ. [**ಘ**] ಅವನು ವಿಜಯಶೀಲನಾಗಲಿ.

**ಭಾವಾರ್ಥ:-** ಸೇನಾಪತಿಯು ವೀರ ಯೋಧರನ್ನೇ ಸೇನೆಯಲ್ಲಿ ಭರ್ತಿ ಮಾಡಿಕೊಳ್ಳಬೇಕು. ಅಂದರೆ ಅವರು ಶತ್ರುಗಳನ್ನು ಜಯಿಸಲು ಸಮರ್ಥರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಮರ್ವಂತಂ ನ ಸಾನಸಿ-ಮರುಷಂ ನ ದಿವಃ ಶಿಶುಮ್ । ಮರ್ಮೃಜ್ಯಂತೇ ದಿವೇದಿವೇ ॥೬॥**

**ಪದಾರ್ಥ:-** [ದಿವಃ] ಬೆಳಕಿನಿಂದ [ಶಿಶುಂ] ಮಗುವನ್ನು [ಅರ್ವಂತಂ] [ನ] ಶೀಘ್ರಚಲಿಸುವ ಅಶ್ವದಂತೆ [ಅರುಷಂ] [ನ] ರಕ್ತಗುಣ ವಿಶಿಷ್ಟವಾದ [ಸಾನಸಿಂ] ವಿಭಜನೆಗೆ ಯೋಗ್ಯವಾದ ಪದಾರ್ಥವನ್ನು [ದಿವೇ ದಿವೇ] ಪ್ರತಿದಿನವೂ [ಮರ್ಮೃಜಂತೆ] ಶುದ್ಧಗೊಳಿಸುವರು. [ತಂ] ಅದನ್ನು ನೀನು ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಮನುಷ್ಯನು ಕುದುರೆಗೆ ಹೇಗೋ ಹಾಗೆ ತನ್ನ ಸಂತಾನವನ್ನು ಶಿಕ್ಷಣಾದಿಗಳನ್ನು ನೀಡಿ ಬೆಳಸುವರೋ ಅವರು ತಮ್ಮ ಸುಖವನ್ನು ಹೆಚ್ಚಿಸಿಕೊಳ್ಳುತ್ತಾರೆ.

ಅಧ್ಯಾಪಕರ ವಿಷಯವನ್ನಿಲ್ಲಿ ಹೇಳಲಾಗಿದೆ.

**ಬೋಧದ್ಯನ್ಮಾ ಹರಿಭ್ಯಾಂ ಕುಮಾರಃ ಸಾಹದೇವ್ಯಃ । ಅಚ್ಛಾ ನ ಹೂತ ಉದರಮ್ ॥೭॥**

**ಪದಾರ್ಥ:-** [ಯತ್] ಯಾವನು [ಸಾಹದೇವ್ಯಃ] ವಿದ್ಯಾವಂತರಲ್ಲಿ ಶ್ರೇಷ್ಠನು [ಕುಮಾರಃ] ಕುಮಾರಾವಸ್ಥೆಯಲ್ಲೇ [ಹೂತಃ] ಪ್ರಶಂಸಿತನಾಗಿ [ಅರಂ] ಎಲ್ಲವನ್ನೂ [ನ] ತಿಳಿದಿಲ್ಲವೆನ್ನುವ [ಮಾ] ನನಗೆ [ಹರಿಭ್ಯಾಂ] ಅಶ್ವಸದೃಶ [ಅಚ್ಛ, ಉತ, ಬೋಧತ್] ಉತ್ತಮ ರೀತಿಯಿಂದ ಶ್ರೇಷ್ಠಬೋಧನೆಯನ್ನು ಮಾಡು.

**ಭಾವಾರ್ಥ:-** ಕುಮಾರ-ಕುಮಾರಿಯರು ತಂದೆ-ತಾಯಿಯರಿಂದ ಉತ್ತಮ ವಿದ್ಯೆ-ಸಂಸ್ಕಾರ ಪಡೆದು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಹೋಗಿ ಅಲ್ಲಿ ಉತ್ತಮ ನಡೆನುಡಿ ವಿನಯಗಳಿಂದ ವಿದ್ಯೆಯನ್ನು ಕೇಳಿ ಪಡೆದರೆ ಅವನು ಉತ್ತಮ ಕುದುರೆಗಳಿಂದ ಮಾರ್ಗಕ್ರಮಿಸುವ ರೀತಿಯಲ್ಲಿ ವಿದ್ಯೆಯ ಪಾರವನ್ನು ಕ್ರಮಿಸುವನು.

ವಿದ್ಯಾರ್ಥಿಯ ವಿಷಯವಿಲ್ಲಿ ಹೇಳಿದೆ.

**ಉತ ತ್ಯಾ ಯಜತಾ ಹರೀ ಕುಮಾರಾತ್ ಸಾಹದೇವ್ಯಾತ್ । ಪ್ರಯತಾ ಸದ್ಯ ಆ ದದೇ ॥೮॥**

**ಪದಾರ್ಥ:-** [ತ್ಯಾ] ಅವರಿಬ್ಬರೂ [ಯಜತಾ] ದಾನ ಮಾಡಲು [ಹರೀ] ಅವಿದ್ಯೆಯ ಹರಣ ಮಾಡಲು [ಪ್ರಯತಾ] ಪ್ರಯತ್ನಿಸುವವರಾಗಿ [ಸಾಹದೇವ್ಯಾತ್] ವಿದ್ಯಾವಂತರೊಂದಿಗಿರುವವರಲ್ಲಿ ಶ್ರೇಷ್ಠನಾದ [ಕುಮಾರಾತ್] ಬ್ರಹ್ಮಚಾರಿಯ ದೆಸೆಯಿಂದ [ಉತ] ವಿದ್ಯೆಯನ್ನು [ಸದ್ಯಃ] ಶೀಘ್ರವಾಗಿ [ಆ, ದದೇ] ಗ್ರಹಣ ಮಾಡುವನು.

**ಭಾವಾರ್ಥ:-** ವಿದ್ಯಾರ್ಥಿ - ವಿದ್ಯಾರ್ಥಿನಿಯರು ಗುರುಕುಲ ಪ್ರವೇಶಿಸುತ್ತಿದ್ದಂತೆ "ನಾವು ವಿದ್ಯಾವ್ರತವನ್ನು ಭಂಗ ಮಾಡದೇ ಗುರುಗಳಿಗನುಕೂಲವಾಗುವಂತೆ ವರ್ತಿಸುತ್ತ ವಿದ್ಯಾ ಗ್ರಹಣ ಮಾಡುತ್ತೇವೆ." "ಅಧ್ಯಾಪಕರೂ ಸಹ ನಾವೂ ನಿಷ್ಕಪಟವಾಗಿ ವಿದ್ಯೆಯನ್ನು ಬೋಧಿಸುತ್ತೇವೆ" ಎಂದು ಪ್ರತಿಜ್ಞೆ ಮಾಡಬೇಕು.

ಅಧ್ಯಾಪಕೋಪದೇಶಕರ ವಿಷಯವಿಲ್ಲಿ ಹೇಳಿದೆ.

**ಏಷ ವಾಂ ದೇವಾವಶ್ವಿನಾ ಕುಮಾರಃ ಸಾಹದೇವ್ಯಃ । ದೀರ್ಘಾಯುರಸ್ತು ಸೋಮಕಃ ॥೯॥**

**ಪದಾರ್ಥ:-** [**ಏಷಃ**] ಇವನು [**ವಾಂ**] ನಿಮ್ಮಿಬ್ಬರನ್ನು [**ದೇವೌ**] ವಿದ್ವಾಂಸರಾದ ಅಧ್ಯಾಪಕೋಪದೇಶಕರ [**ಅಶ್ವಿನಾ**] ಸರ್ವವಿದ್ಯಾವ್ಯಾಪಕರನ್ನು [**ಸಾಹದೇವ್ಯಃ**] ವಿದ್ಯಾವಂತರೊಂದಿಗಿರುವ [**ಸೋಮಕಃ**] ಚಂದ್ರನಂತೆ ಶೀತಲ ಸ್ವಭಾವದ [**ಕುಮಾರಃ**] ಬ್ರಹ್ಮಚಾರಿಯು [**ದೀರ್ಘಾಯುಃ**] ಬಹುಕಾಲ ಬದುಕುವವನು [**ಅಸ್ತು**] ಆಗಲಿ.

**ಭಾವಾರ್ಥ:-** ಧಾರ್ಮಿಕರು, ವಿದ್ಯಾರ್ಥಿಗಳು ಬಹುಕಾಲ ಬದುಕುವಂತೆ ಅಧ್ಯಾಪಕೋಪದೇಶಕರು ಪ್ರಯತ್ನ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಂ ಯುವಂ ದೇವಾವಶ್ವಿನಾ ಕುಮಾರಂ ಸಾಹದೇವ್ಯಮ್ । ದೀರ್ಘಾಯುಷಂ ಕೃಣೋತನ ॥೧೦॥**

**ಪದಾರ್ಥ:-** [**ದೇವೌ**] ವಿದ್ಯಾದಾತೃಗಳು [**ಅಶ್ವಿನಾ**] ಶ್ರೇಷ್ಠಗುಣಗಳಿಂದ ವ್ಯಾಪಕರಾದವರು [**ಯುವಂ**] ನೀವಿಬ್ಬರೂ [**ತಂ**] ಆ [**ಸಾಹದೇವ್ಯಂ**] ವಿದ್ಯಾವಂತರ ಉತ್ತಮ ಜೊತೆಗಾರನಾದ [**ಕುಮಾರಂ**] ಬ್ರಹ್ಮಚಾರಿಯನ್ನು [**ದೀರ್ಘಾಯುಷಂ**] ಅಧಿಕಕಾಲ ಜೀವಿಸುವಂತೆ [**ಕೃಣೋತ**] ಮಾಡಿರಿ.

**ಭಾವಾರ್ಥ:-** ವಿದ್ಯಾವಂತರೇ! ವಿದುಷಿಯರೇ! ನೀವು ವಿದ್ಯೆ ಕಲಿಯಲು ಪ್ರವೃತ್ತರಾಗಿರಿ. ಉತ್ತಮ ಶಿಕ್ಷಣ ಪಡೆದು ವಿದ್ಯೆಯಿಂದ ಸಂಪಾದನೆ ಮಾಡಿರಿ. ಎಲ್ಲ ಶ್ರೇಷ್ಠಪುರುಷರು ಬಹುಕಾಲ ಬದುಕುವಂತೆ ಮಾಡಿರಿ.

ಈ ಸೂಕ್ತದಲ್ಲಿ ರಾಜ, ಅಧ್ಯಾಪಕ ವಿದ್ಯಾರ್ಥಿಗಳ ಗುಣ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಹದಿನೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೧೬

ಮಂತ್ರಸಂಖ್ಯೆ ೨೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೪, ೬, ೮, ೯, ೧೨, ೧೯ ನಿಚೃತ್ತ್ರಿಷ್ಟುಪ್, ೩ ತ್ರಿಷ್ಟುಪ್, ೭, ೧೬, ೧೭ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೨೧ ನಿಚೃತ್ಪಂಕ್ತಿಃ, ೫, ೧೩-೧೫ ಸ್ವರಾಟ್ ಪಂಕ್ತಿಃ, ೧೦, ೧೧, ೧೮, ೨೦ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಇಂದ್ರ ಪದವಾಚ್ಯರಾಜನ ವಿಷಯ ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಆ ಸತ್ಯೋ ಯಾತು ಮಘವಾँ ಋಜೀಷೀ ದ್ರವಂತ್ವಸ್ಯ ಹರಯ ಉಪ ನಃ ।**
**ತಸ್ಮಾ ಇದಂಧಃ ಸುಷುಮಾ ಸುದಕ್ಷ-ಮಿಹಾಭಿಪಿತ್ವಂ ಕರತೇ ಗೃಣಾನಃ ॥೧॥**

**ಪದಾರ್ಥ:-** [**ಇಹ**] ಈ ರಾಜ್ಯದಲ್ಲಿ [**ಗೃಣಾನಃ**] ಪ್ರಶಂಸೆ ಮಾಡುವವನಾಗಿ [**ಅಭಿಪಿತ್ವಂ**] ಪ್ರಾಪ್ತವಾದ [**ಸುದಕ್ಷಂ**] ಶ್ರೇಷ್ಠಬಲವನ್ನು [**ಕರತೇ**] ಮಾಡಿಕೊಳ್ಳಬೇಕು. [**ತಸ್ಮೈ**] ಅವನಿಗೆ [**ಇತ್**] ನಾವು [**ಅಂಧಃ**] ಅನ್ನಾದಿಗಳನ್ನು [**ಸುಷುಮ**] ಉತ್ಪಾದಿಸುವೆವು. [**ಅಸ್ಯ**] ಈ ರಾಜನ [**ಹರಯಃ**] ಮನುಷ್ಯರು [**ದ್ರವಂತು**] ಹೊರಟು ಹೋಗದಿರಲಿ. [**ಋಜೀಷೀ**] ಸರಳ ನೀತಿಯ ಆ ರಾಜನು [**ಸತ್ಯಃ**] ಶ್ರೇಷ್ಠರಲ್ಲಿ ಸಾಧುವಾಗಿ [**ಮಘವನ್**] ಬಹುಧನ ಯುಕ್ತನಾಗಿ [**ನಃ**] ನಮ್ಮ [**ಉಪ**] ಸಮೀಪಕ್ಕೆ [**ಆ, ಯಾತು**] ಬರುವವನಾಗಲಿ.

**ಭಾವಾರ್ಥ:-** ಮನುಷ್ಯರೇ! ರಾಜನು ನಮ್ಮೆಲ್ಲರ ಬಲವನ್ನು ಹೆಚ್ಚಿಸಲಿ. ನೀತಿಯುಕ್ತನಾಗಿ ಪ್ರಜಾಪಾಲನ ಮಾಡಲಿ. ಅವನ ಅಧಿಕಾರಿ ವರ್ಗದವರೂ ಧಾರ್ಮಿಕರಾಗಿ ಪ್ರಜಾಪಾಲನೆಯಲ್ಲಿ ಪ್ರಿಯರೆನಿಸಿಕೊಳ್ಳಲಿ. ನಮ್ಮೆಲ್ಲರ ಪ್ರೀತಿಗೆ ಪಾತ್ರರಾಗಲಿ. ಅವನ ಸಂಪತ್ತನ್ನು ನಾವೂ ವೃದ್ಧಿಮಾಡೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅವ ಸ್ಯ ಶೂರಾಧ್ವನೋ ನಾಂತೇಽಸ್ಮಿನ್ನೋ ಅದ್ಯ ಸವನೇ ಮಂದಧ್ಯೈ ।**
**ಶಂಸಾತ್ಯುಕ್ಥಮುಶನೇವ ವೇಧಾ-ಶ್ಚಿಕಿತುಷೇ ಅಸುರ್ಯಾಯ ಮನ್ಮ ॥೨॥**

**ಪದಾರ್ಥ:-** **[ಶೂರ]** ಶತ್ರುನಾಶಕನೇ! **[ಅಸ್ಮಿನ್]** ಈ **[ಸವನೇ]** ಕ್ರಿಯಾ ವಿಶೇಷ ಯಜ್ಞದಲ್ಲಿ **[ಅದ್ಯ]** ಈ ದಿನ **[ಮಂದಧ್ಯೈ]** ಆನಂದವನ್ನು **[ನಃ]** ನಮಗೆ **[ಉಶನೇವ]** ಬಯಸುವವನಾಗಿ **[ವೇಧಾಃ]** ಬುದ್ಧಿವಂತರು **[ಅಸುರ್ಯಾಯ]** ಅವಿದ್ಯಾವಂತರಲ್ಲಿನ ವಿದ್ಯಾವಂತನಿಗೆ **[ಚಿಕಿತುಷೇ]** ತಿಳುವಳಿಕೆಗಾಗಿ **[ಅಂತೇ]** ಯಜ್ಞಾಂತದಲ್ಲಿ ಪ್ರಶಂಸೆ ಮಾಡಲಿ. **[ಅಧ್ವನಃ]** ಮಾರ್ಗೋಪಾಯವನ್ನು ತಿಳಿದವನಿಗೆ **[ನ]** **[ಅವ]** ವಿರೋಧವಾಗದಂತೆ **[ಸ್ಯ]** ಅಂತಗೊಳಿಸು.

**ಭಾವಾರ್ಥ:-** ರಾಜನೇ! ಬುದ್ಧಿವಂತನು ಎಲ್ಲರಿಗೂ ವಿದ್ಯೆಯನ್ನು ಬಯಸುವವರಾಗಿ ಉಪದೇಶ ಮಾಡಲಿ. ಅವರ ರಕ್ಷಣೆಯನ್ನು ನಿರಂತರ ಮಾಡು.

ವಿದ್ಯಾವಂತರ ವಿಷಯವಿಲ್ಲಿದೆ.

**ಕವಿರ್ನ ನಿಣ್ಯಂ ವಿದಥಾನಿ ಸಾಧನ್ ವೃಷಾ ಯತ್ ಸೇಕಂ ವಿಪಿಪಾನೋ ಅರ್ಚಾತ್ ।**
**ದಿವ ಇತ್ಥಾ ಜೀಜನತ್ ಸಪ್ತ ಕಾರೂ-ನಹ್ನಾ ಚಿಚ್ಚಕ್ರುರ್ವಯುನಾ ಗೃಣಂತಃ ॥೩॥**

**ಪದಾರ್ಥ:-** **[ಗೃಣಂತಃ]** ಸ್ತುತಿ ಮತ್ತು ಉಪದೇಶಗಳನ್ನು ಮಾಡುತ್ತ **[ಅಹ್ನಾ]** ಹಗಲಿನಿಂದ **[ವಯುನಾ]** ಪ್ರಜ್ಞೆಯನ್ನು **[ಚಕ್ರುಃ]** ಮಾಡುವರು. **[ಸಪ್ತ]** ಏಳು ಜನ **[ಕಾರೂನ್]** ಕುಶಲ ಕಾರ್ಮಿಕರನ್ನು **[ಚಿತ್]** ಉತ್ಪಾದಿಸುವರು. **[ಇತ್ಥಾ]** ಈ ರೀತಿ **[ಯತ್]** ಯಾವನು **[ವೃಷಾ]** ಬಲಿಷ್ಠ **[ಸೇಕಂ]** ಸೇಚನ ಕರ್ಮದ **[ವಿಪಿಪಾನಃ]** ವಿಶೇಷ ರೀತಿಯ ರಕ್ಷಣೆ ಮತ್ತು **[ವಿದಥಾನಿ]** ಜ್ಞಾನಯೋಗ್ಯವನ್ನು **[ಸಾಧನ್]** ಸಾಧಿಸುತ್ತ **[ದಿವಃ]** ಬೆಳಕಿನ **[ಅರ್ಚಾತ್]** ಸತ್ಕಾರ ಮಾಡುವರು. **[ನಿಣ್ಯಂ]** ನಿಶ್ಚಿತ ಪ್ರಕಾಶವನ್ನು **[ಕವಿಃ]** **[ನ]** ವಿದ್ಯಾವಂತರಿಗೆ ಸದೃಶವಾಗಿ **[ಜೀಜನತ್]** ಉತ್ಪಾದನೆ ಮಾಡುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ವಿದ್ಯೆಯನ್ನು ವೃದ್ಧಿಪಡಿಸಿಕೊಳ್ಳುವರೋ ಅವರು ಏಳು ರೀತಿಯ ಕುಶಲಕರ್ಮಿಗಳನ್ನು ಸಿದ್ಧಪಡಿಸಿಕೊಂಡು ಎಲ್ಲಾ ಕಾರ್ಯಗಳನ್ನು ಸಾಧಿಸಿ ಇಷ್ಟಾರ್ಥಗಳನ್ನು ಪಡೆದುಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ವ (ಅ) ೯ ರ್ಯದ್ವೇದಿ ಸುದೃಶೀಕಮರ್ಕೈ-ರ್ಮಹಿ ಜ್ಯೋತೀ ರುರುಚುರ್ಯದ್ಧ ವಸ್ತೋಃ ।**
**ಅಂಧಾ ತಮಾಂಸಿ ದುಧಿತಾ ವಿಚಕ್ಷೇ ನೃಭ್ಯಶ್ಚಕಾರ ನೃತಮೋ ಅಭಿಷ್ಟೌ ॥೪॥**

**ಪದಾರ್ಥ:-** **[ಯತ್]** ಯಾವ **[ಸುದೃಶೀಕಂ]** ದರ್ಶನ ಯೋಗ್ಯ **[ಮಹೀ]** ಮಹತ್ತರ **[ಜ್ಯೋತಿಃ]** ಪ್ರಕಾಶಮಯ **[ಸ್ವಃ]** ಸುಖವನ್ನು **[ವೇದಿ]** ತಿಳಿಯಲ್ಪಡುತ್ತದೆಯೋ **[ಯತ್]** ಯಾವನು **[ಹ]** ನಿಶ್ಚಯವಾಗಿ **[ವಸ್ತೋಃ]** ಹಗಲಿನ ಕಿರಣಗಳು **[ರುರುಚುಃ]** ಪ್ರಕಾಶಮಯಗೊಳಿಸುತ್ತವೆ. **[ಅಂಧಾ]** ಹೇಗೆ ಸೂರ್ಯನ ಅಂಧಕಾರರೂಪ **[ತಮಾಂಸಿ]** ರಾತ್ರಿಗಳನ್ನು **[ದುಧಿತಾ]** ದೂರಗೊಳಿಸಲಾದ **[ವಿಚಕ್ಷೇ]** ಬೆಳಕಿನಿಂದ **[ನೃತಮಃ]** ನಾಯಕನು. **[ಅಭೀಷ್ಟೌ]** ನಾಲ್ಕು ದಿಕ್ಕುಗಳಿಂದಲೂ ಸಂಗತವಾದ ಕರ್ಮಗಳಲ್ಲಿ **[ಅರ್ಕೈ]** ವಿಚಾರಗಳಿಂದ **[ನೃಭ್ಯಃ]** ಮನುಷ್ಯರಿಗೆ **[ಚಕಾರ]** ಸುಖ ಮಾಡುವನು.

**ಭಾವಾರ್ಥ:-** ನೀತಿ ಮಾರ್ಗದಿಂದ ವೀರತನದಿಂದ ಪ್ರತಿದಿನವೂ ಬೆಳೆಯುತ್ತಿರುವ ರಾಜ್ಯದ ಕಾರ್ಯಗಳಲ್ಲಿ ರಾಜನು ಮತ್ತು ಪ್ರಜೆಗಳು ಸೂರ್ಯಪ್ರಕಾಶದಂತೆ, ಸುಖವನ್ನೂ ಹೆಚ್ಚಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವವಕ್ಷ ಇಂದ್ರೋ ಅಮಿತಮೃಜೀಷ್ಯು (ಉ) ೧ ಭೇ ಆ ಪಪ್ರೌ ರೋದಸೀ ಮಹಿತ್ವಾ ।**
**ಅತಶ್ಚಿದಸ್ಯ ಮಹಿಮಾ ವಿ ರೇ-ಚ್ಯಭಿ ಯೋ ವಿಶ್ವಾ ಭುವನಾ ಬಭೂವ ॥೫॥**

**ಪದಾರ್ಥ:-** **[ಯಃ]** ಯಾವ ಪರಮೇಶ್ವರನು **[ಇಂದ್ರಃ]** ಸೂರ್ಯಸದೃಶ ರಾಜನು **[ಅಭಿ, ಬಭೂವ]** ಅಭಿಮುಖನಾಗುವನೋ **[ಚಿತ್]** ಯಾವುದರಿಂದ **[ಅಸ್ಯ]** ಇವನ **[ಮಹಿಮಾ]** ಹಿರಿತನವು **[ವಿ, ರೇಚಿ]** ವಿಶೇಷರೀತಿಯಲ್ಲಿ ಶೋಭಾಯಮಾನವಾಗುತ್ತದೆಯೋ **[ವಿಶ್ವಾ]** ಸಮಗ್ರ **[ಭುವನಾ]** ಲೋಕವನ್ನು ಧಾರಣ ಮಾಡುವನು. **[ಅತಃ]** ಆದ್ದರಿಂದ **[ಉಭೇ]** ಎರಡೂ **[ರೋದಸೀ]** ಭೂಮ್ಯಂತರಿಕ್ಷಗಳು **[ಮಹಿತ್ವಾ]** ಮಹಿಮೆಯಿಂದ **[ಆ, ಪಪ್ರೌ]** ವ್ಯಾಪ್ತಗೊಳಿಸುವನು. **[ಋಜೀಷೀ]** ಸರಳವಾದ **[ಅಮಿತಂ]** ಮಿತಿಯೇ ಇಲ್ಲದ ಪದಾರ್ಥವು **[ವವಕ್ಷೇ]** ಪ್ರಾಪ್ತವಾಗುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಪರಮೇಶ್ವರನ ಮಹಿಮೆಯನ್ನು ತಿಳಿದುಕೊಳ್ಳುವನೋ ಅವನು ಈ ಜಗತ್ತಿನಲ್ಲಿ ಪ್ರತಿಷ್ಠೆ ಪಡೆಯುವನು.

ರಾಜನ ವಿಷಯವಿಲ್ಲಿ ಹೇಳಿದೆ.

**ವಿಶ್ವಾನಿ ಶಕ್ರೋ ನರ್ಯಾಣಿ ವಿದ್ವಾ-ನಪೋ ರಿರೇಚ ಸಖಿಭಿರ್ನಿಕಾಮೈಃ ।**
**ಅಶ್ಮಾನಂ ಚಿದ್ಯೇ ಬಿಭಿದುರ್ವಚೋಭಿ-ರ್ವ್ರಜಂ ಗೋಮಂತಮುಶಿಜೋ ವಿ ವವ್ರುಃ ॥೬॥**

**ಪದಾರ್ಥ:-** **[ಯೇ]** ಯಾವ ಮಾರುತಗಳು **[ಅಶ್ಮಾನಂ]** ಮೇಘವನ್ನು **[ಚಿತ್]** ಆ ರೀತಿಯಲ್ಲಿ **[ಬಿಭಿದುಃ]** ಭೇದಿಸುವವು. **[ಗೋಮಂತಂ]** ಗೋವುಗಳಿಂದೊಡಗೂಡಿರುವ **[ವ್ರಜಂ]** ಗೋಶಾಲೆಯ **[ಉಶಿಜಃ]** ಕಾಮನೆ ಮಾಡುವವರ ರೀತಿಯಲ್ಲಿ **[ವಿ, ವವ್ರುಃ]** ನ್ಯಾಯವನ್ನು ಸ್ವೀಕರಿಸುವರು. **[ನಿಕಾಮೈಃ]** ನಿತ್ಯಕಾಮನೆ ಮಾಡುವ **[ಸಖಿಭಿಃ]** ಸ್ನೇಹಿತರೊಂದಿಗೆ **[ಶಕ್ರಃ]** ಸಮರ್ಥನಾದ **[ವಿದ್ವಾನ್]** ವಿದ್ಯಾವಂತನು **[ವಿಶ್ವಾನಿ]** ಎಲ್ಲಾ **[ನರ್ಯಾಣಿ]** ನರರಲ್ಲಿ ಶ್ರೇಷ್ಠವಾದ **[ಅಪಃ]** ಕರ್ಮಗಳನ್ನು **[ವಚೋಭಿಃ]** ವಚನಗಳಿಂದ **[ರಿರೇಚ]** ಪ್ರತ್ಯೇಕಗೊಳಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಮೇಘವನ್ನು ಭೇದಿಸುವ ರೀತಿಯಲ್ಲಿ ದುಷ್ಟರನ್ನು ಭೇದಿಸುವವನು, ಗೋಪಾಲಕರು ಗೋಶಾಲೆಯಿಂದ ಗೋವುಗಳನ್ನು ವಿಮೋಚನೆ ಮಾಡಿದಂತೆ

ನ್ಯಾಯವನ್ನು ಅನ್ಯಾಯದಿಂದ ವಿಮೋಚನೆಗೊಳಿಸುವವರು, ಎಲ್ಲರೊಂದಿಗೂ ಸ್ನೇಹಭಾವದಿಂದ ವರ್ತಿಸುವವರು ರಾಜನಾಗಲು ಯೋಗ್ಯರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಪೋ ವೃತ್ರಂ ವವ್ರಿವಾಂಸಂ ಪರಾಹನ್ ಪ್ರಾವತ್ತೇ ವಜ್ರಂ ಪೃಥಿವೀ ಸಚೇತಾಃ ।**
**ಪ್ರಾರ್ಣಾಂಸಿ ಸಮುದ್ರಿಯಾಣ್ಯೈರ್ನೋಃ ಪತಿರ್ಭವಞ್ಛವಸಾ ಶೂರ ಧೃಷ್ಣೋ ॥೭॥**

**ಪದಾರ್ಥ:-** **[ಧೃಷ್ಣೋ]** ಬಲಿಷ್ಠಾತ್ಮವಿರುವವನು **[ಸಚೇತಾಃ]** ಚಿತ್ತಸಹಿತನಾಗಿ **[ಶವಸಾ]** ಬಲದಿಂದ **[ಪತಿಃ]** ಸ್ವಾಮಿಯು **[ಭವನ್]** ಆಗುವನು. **[ವಜ್ರಂ]** ಕಿರಣಗಳನ್ನು ಅಪ್ಪಳಿಸುತ್ತ **[ಅಪಃ]** ಜಲವನ್ನು ಪ್ರಕಟಿಸುವನು. **[ವೃತ್ರಂ]** ಮೇಘವನ್ನು **[ವವ್ರಿವಾಸಂ]** ಬಿತ್ತರಿಸಿ **[ಪರಾ, ಅಹನ್]** ಬಡಿಯುವನು. **[ಸಮುದ್ರಿಯಾಣಿ]** ಸಮುದ್ರಕ್ಕೆ ಯೋಗ್ಯವಾದ **[ಅರ್ಣಾಂಸಿ]** ಜಲಗಳನ್ನು **[ಪೃಥಿವೀ]** ಭೂಮಿಗೆ ಸದೃಶ **[ಪ್ರ, ಆವತ್]** ರಕ್ಷಣೆ ಮಾಡುವನು. **[ತೇ]** ನಿನ್ನ ಪ್ರಜೆಗಳನ್ನು ರಕ್ಷಿಸುವನು **[ಪ್ರ, ಏನೋಃ]** ಅವನಿಗೆ ನೀನು ಪ್ರೇರಣೆ ನೀಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸೂರ್ಯನಂತೆ ಪ್ರಜೆಗಳಿಗೆ ಸುಖ ನೀಡುವರೋ ಅವರೇ ರಾಜಕರ್ಮಗಳಿಗೆ ಪ್ರೇರಣೆ ನೀಡಲು ಯೋಗ್ಯರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಪೋ ಯದದ್ರಿಂ ಪುರುಹೂತ ದರ್ದ-ರಾವಿರ್ಭುವತ್ ಸರಮಾ ಪೂರ್ವ್ಯಂ ತೇ ।**
**ಸ ನೋ ನೇತಾ ವಾಜಮಾ ದರ್ಷಿಭೂರಿಂ ಗೋತ್ರಾ ರುಜನ್ನಂಗಿರೋಭಿರ್ಗೃಣಾನಃ ॥೮॥**

**ಪದಾರ್ಥ:-** **[ಪುರುಹೂತ]** ಬಹುಪ್ರಶಂಸಿತನೇ! **[ತೇ]** ನಿನ್ನ **[ಸರಮಾ]** ಸರಳ ನೀತಿಯು **[ಆವಿಃ]** **[ಭುವತ್]** ಪ್ರಕಟವಾಗುತ್ತದೆ. **[ದರ್ದಃ]** ಅದರಿಂದ ನೀನು ದುಷ್ಟರನ್ನು ದಮನಿಸು. **[ಯತ್]** ಯಾವನು **[ನಃ]** ನಮ್ಮ **[ನೇತಾ]** ನಾಯಕನಾಗುವನೋ **[ಪೂರ್ವ್ಯಂ]** ಪ್ರಥಮವಾಗಿ **[ವಾಜಂ]** ವೇಗದ **[ಆ, ದರ್ಷಿ]** ನಾಶಕನಾಗುವೆ. **[ಅಂಗಿರೋಭಿಃ]** ಗಾಳಿಗಳಿಂದ ಸೂರ್ಯನಂತೆ **[ಅಪಃ]** ನೀರಿನ ಹಾಗೆ **[ಗೃಣಾನಃ]** ಸ್ತುತಿ ಮಾಡುತ್ತ **[ಗೋತ್ರಾ]** ಮೇಘಗಳ ಅವಯವಗಳನ್ನು **[ಭೂರಿಂ]** ಬಹಳಷ್ಟು **[ಅದ್ರಿಂ]** ಮೇಘಗಳನ್ನು **[ರುಜನ್]** ಭೇದಿಸುತ್ತಲಿರುವೆ. **[ಸಃ]** ಅವನು ನಿನಗೆ ಸೇನಾಪತಿಯಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ಶುದ್ಧ ನೀತಿವಂತರು ಪ್ರಸಿದ್ಧರಾಗಲಿ, ನೀನವರನ್ನು ರಕ್ಷಿಸುತ್ತ ಪ್ರಜಾಪಾಲನೆ ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಚ್ಛಾ ಕವಿಂ ನೃಮಣೋ ಗಾ ಅಭಿಷ್ಟೌ ಸ್ವರ್ಷಾತಾ ಮಘವನ್ನಾಧಮಾನಮ್ ।**
**ಊತಿಭಿಸ್ತಮಿಷಣೋ ದ್ಯುಮ್ನಹೂತೌ ನಿ ಮಾಯಾವಾನಬ್ರಹ್ಮಾ ದಸ್ಯುರರ್ತ ॥೯॥**

**ಪದಾರ್ಥ:-** [ನೃಮಣಃ] ಜನರಲ್ಲಿ ಮನಸ್ಸಿರಿಸುವವನು [ಮಘವನ್] ಅತ್ಯೈಶ್ವರ್ಯವಂತನಾದವನೇ! [ಸ್ವರ್ಷಾತಾ] ಸುಖಾಂತವನ್ನು ಪಡೆದ ನೀನು [ಊತಿಭಿಃ] ರಕ್ಷಣಾದಿಗಳಿಂದ [ಅಭಿಷ್ಟೌ] ಅಭೀಷ್ಟ ಸಿದ್ಧಿಗೆ [ದ್ಯುಮ್ನಹೂತಾ] ಧನ-ಯಶ ದೊರಕುವಂತಹ [ಗಾಃ] ಮಾತುಗಳನ್ನು [ನಾಧಮಾನಂ] ಈಶ್ವರೀಯ ಭಾವವನ್ನು ತಲುಪುತ್ತ [ಕವಿಂ] ವಿದ್ವಾಂಸರನ್ನು [ಅಚ್ಛ] ಉತ್ತಮ ಕಾರ್ಯಕ್ಕೆ ಪ್ರೇರಣೆ ನೀಡು. [ಮಾಯಾವಾನ್] ನಿಕೃಷ್ಟ ಬುದ್ಧಿಯ [ಅಬ್ರಹ್ಮಾ] ವೇದಾಧ್ಯಯನ ಮಾಡದ [ದಸ್ಯುಃ] ದುಷ್ಟಮನುಷ್ಯನು [ಅರ್ತ] ನಾಶವಾಗಲಿ. [ತಂ] ಅವನನ್ನು [ನಿ, ಇಷಣಃ] ಹೊರಹಾಕು.

**ಭಾವಾರ್ಥ:-** ರಾಜನೇ! ನೀನು ಕಪಟಿ, ಮೂರ್ಖ ಮತ್ತು ದುಷ್ಟರನ್ನು ನಾಶಗೊಳಿಸಿ ಧಾರ್ಮಿಕರೂ ವಿದ್ವಾಂಸರೂ ಆದವರನ್ನು ಸತ್ಕರಿಸಿ ಪ್ರಶಂಸಿತನಾಗು. ಅಂತಹ ನೀನು ರಾಜನಾಗಲು ಅರ್ಹನು.

ರಾಜನಿಗೆ ಸಂಬಂಧಿಸಿದ ಪ್ರಜೆಗಳ ವಿಷಯವಿಲ್ಲಿ ಹೇಳಲಾಗಿದೆ.

**ಆ ದಸ್ಯುಘ್ನಾ ಮನಸಾ ಯಾಹ್ಯಸ್ತಂ ಭುವತ್ತೇ ಕುತ್ಸಃ ಸಖ್ಯೇ ನಿಕಾಮಃ ।**
**ಸ್ವೇ ಯೋನೌ ನಿ ಷದತಂ ಸರೂಪಾ ವಿ ವಾಂ ಚಿಕಿತ್ಸದೃತಚಿದ್ಧ ನಾರೀ ॥೧೦॥**

**ಪದಾರ್ಥ:-** [ಮನಸಾ] ಅಂತಃಕರಣದಿಂದ [ದಸ್ಯುಘ್ನಾ] ದುಷ್ಟರನ್ನು ದಮನಿಸುತ್ತ [ಸರೂಪಾ] ಉತ್ತಮ ರೂಪವತಿಯು [ಋತಚಿತ್] ಸತ್ಯವನ್ನು ಒಂದುಗೂಡಿಸುವವಳಾದ [ನಾರೀ] ಮಾನುಷಿಯು [ಭುವತ್] ಆಗುವಳು. [ಆ, ಯಾಹಿ] ಅವಳನ್ನು ನೀನು ಪಡೆದುಕೊ. [ತೇ] ನಿನ್ನ [ಸಖ್ಯೇ] ಸ್ನೇಹಿತನಿಗೆ [ಕುತ್ಸಃ] ನಿಂದಿತ [ನಿಕಾಮಃ] ಕುತ್ಸಿತ ಬಯಕೆಯುಳ್ಳವನನ್ನು [ಅಸ್ತಂ] ಮುಳುಗಿಸು/ನಾಶಗೊಳಿಸು. [ಸ್ವೇ] [ಯೋನೌ] ನಿನ್ನ ಮನೆಯಲ್ಲಿ [ವಿ, ಚಿಕಿತ್ಸತ್] ವಿಶೇಷ ಚಿಕಿತ್ಸೆ ಮಾಡುವವನು ಅವನನ್ನು [ಹ] ನಿಶ್ಚಯವಾಗಿ [ವಾಂ] ನಿಮ್ಮಿಬ್ಬರ ಮನೆಯಲ್ಲಿ [ನಿ, ಅಸದತ್] ಉಳಿಸಿಕೋ.

**ಭಾವಾರ್ಥ:-** ರಾಜನೇ! ನೀನು ನಿಂದಿತ ಸ್ತ್ರೀಯನ್ನು ತ್ಯಾಗ ಮಾಡು. ಉತ್ತಮ ರೂಪವತಿಯೂ ದೋಷನಾಶಕಳೂ ಆದವಳನ್ನು ಪಡೆದುಕೋ ಮತ್ತು ಇಬ್ಬರೂ ಸೇರಿ ಪ್ರೀತಿಯಿಂದ ಗೃಹಸ್ಥಾಶ್ರಮವನ್ನು ನಡೆಸಿರಿ.

ರಾಜನ ವಿಷಯವಿಲ್ಲಿ ಹೇಳಿದೆ.

**ಯಾಸಿ ಕುತ್ಸೇನ ಸರಥಮವಸ್ಯು-ಸ್ತೋದೋ ವಾತಸ್ಯ ಹರ್ಯೋರೀಶಾನಃ । ಋಜ್ರಾ**
**ವಾಜಂ ನ ಗಧ್ಯಂ ಯುಯೂಷನ್ ಕವಿರ್ಯದಹನ್ ಪಾರ್ಯಾಯ ಭೂಷಾತ್ ॥೧೧॥**

**ಪದಾರ್ಥ:-** [ಅವಸ್ಯುಃ] ತನ್ನ ರಕ್ಷಣೆಯನ್ನು ಬಯಸುತ್ತ [ತೋದಃ] ಶತ್ರುನಾಶಕನು [ವಾತಸ್ಯ] ಗಾಳಿಯ [ಹರ್ಯೋಃ] ಕುದುರೆಗಳ [ಈಶಾನಃ] ಸ್ವಾಮಿಯಾಗಿ [ಸರಥಂ] ರಥಾದಿಗಳೊಂದಿಗೆ [ಯಾಸಿ] ಪ್ರಾಪ್ತನಾಗುವೆ. [ಋಜ್ರಾ] ಸರಳಗತಿಯನ್ನು [ಗಧ್ಯಂ] ಗ್ರಹಣಯೋಗ್ಯ [ವಾಜಂ] ವೇಗದ [ನ] ಸಮನಾಗಿ [ಯುಯೂಷನ್] ಭೇಟಿ ಮಾಡುವ ಇಚ್ಛೆಯಿಂದ [ಕವಿಃ] ಬುದ್ಧಿವಂತನು [ಕುತ್ಸೇನ] ಕುತ್ಸಿತ ಕರ್ಮ ಮಾಡುವವನನ್ನು [ಅಹನ್] ನಾಶಗೊಳಿಸುತ್ತ [ಯತ್] ಯಾವುದು [ಪಾರ್ಯಾಯ] ದಾಟುವುದಕ್ಕಾಗಿ [ಭೂಷಾತ್] ಶೋಭಿತಗೊಳಿಸು.

**ಭಾವಾರ್ಥ:-** ಯಾರು ನಿಂದಿತ ಕರ್ಮ ಹಾಗೂ ನಿಂದಿತರ ಸಂಗವನ್ನು ತ್ಯಜಿಸಿ ಸತ್ಯ-ನ್ಯಾಯಗಳಿಂದ ಪ್ರಜಾಪಾಲನ ಮಾಡುವವರೋ, ಅವರು ಪುರುಷಾರ್ಥವನ್ನು ಸಾಧಿಸುವವರಾಗಿ ಸುಶೋಭಿತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕುತ್ಸಾಯ ಶುಷ್ಣಮಶುಷಂ ನಿ ಬರ್ಹೀಃ ಪ್ರಪಿತ್ವೇ ಅಹ್ನಃ ಕುಯವಂ ಸಹಸ್ರಾ ।**
**ಸದ್ಯೋ ದಸ್ಯೂನ್ ಪ್ರ ಮೃಣ ಕುತ್ಸ್ಯೇನ ಪ್ರ ಸೂರಶ್ಚಕ್ರಂ ವೃಹತಾದಭೀಕೇ ॥೧೨॥**

**ಪದಾರ್ಥ:-** **[ಅಹ್ನಃ]** ಹಗಲಿನ **[ಪ್ರಪಿತ್ವೇ]** ಪ್ರಾಪ್ತಿಯಾದ ಮೇಲೆ **[ಕುತ್ಸಾಯಃ]** ನಿಂದಿತ ವ್ಯವಹಾರಕ್ಕಾಗಿ **[ಕುಯವಂ]** ನಿಕೃಷ್ಟ ಧಾನ್ಯವನ್ನು **[ಶುಷ್ಣಂ]** ರಸರಹಿತವಾದುದನ್ನು **[ಅಶುಷಂ]** ದುಃಖವನ್ನು **[ನಿ, ಬರ್ಹೀಃ]** ಬೇರೆ ಮಾಡು. **[ಸೂರಃ]** ಸೂರ್ಯನು **[ಚಕ್ರಂ]** ಚಕ್ರದಂತಿರುವ ಬ್ರಹ್ಮಾಂಡವನ್ನು **[ಕುತ್ಸೇನ]** ವಜ್ರಾಯುಧದ ವೇಗದಂತೆ **[ಸಹಸ್ರಾ]** ಸಾವಿರಾರು **[ದಸ್ಯೂನ್]** ದೋಚಕರನ್ನು **[ಸದ್ಯಃ]** ಶೀಘ್ರವಾಗಿ **[ಪ್ರ, ಮೃಣ]** ನಾಶಗೊಳಿಸು. **[ಅಭೀರೇ]** ಸಮೀಪದಲ್ಲಿ **[ಪ್ರ, ಬೃಹತಾತ್]** ಭೇದನಗೊಳಿಸು.

**ಭಾವಾರ್ಥ:-** ರಾಜನೇ! ನೀನು ವಜ್ರಾಯುಧದಂತಹ ಆಯುಧಗಳಿಂದ ದುಷ್ಟರನ್ನು ನಾಶಗೊಳಿಸಿ ಪ್ರತಾಪಿಯಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಂ ಪಿಪ್ರುಂ ಮೃಗಯಂ ಶೂಶುವಾಂಸ-ಮೃಜಿಶ್ವನೇ ವೈದಥಿನಾಯ ರಂಧೀಃ ।**
**ಪಂಚಾಶತ್ ಕೃಷ್ಣಾ ನಿ ವಪಃ ಸಹಸ್ರಾ-ತ್ಕಂ ನ ಪುರೋ ಜರಿಮಾ ವಿ ದರ್ದಃ ॥೧೩॥**

**ಪದಾರ್ಥ:-** **[ತ್ವಂ]** ನೀನು **[ವೈದಥಿನಾಯ]** ವಿದ್ಯಾವಂತನ ಸುತನಿಗಾಗಿ **[ಋಜಿಶ್ವನೇ]** ಸರಳ ಸ್ವಭಾವದಿಂದ ವೃದ್ಧಿ ಹೊಂದಿದವನಿಗಾಗಿ **[ಪಿಪ್ರುಂ]** ವ್ಯಾಪಕ **[ಶೂಶುವಾಂಸಂ]** ಬಲಿಷ್ಠವಾದ **[ಮೃಗಯಂ]** ಮೃಗವನ್ನು ಹುಡುಕುವವನಿಗೆ **[ನ]** ಸಮನಾಗಿ **[ರಂಧಿಃ]** ನಾಶಗೊಳಿಸು **[ಅತ್ಕಂ]** ವ್ಯಾಪ್ತನಾಗುವ ವಾಯುವನ್ನು **[ಜರಿಮಾ]** **[ನ]** ವೃದ್ಧಾವಸ್ಥೆಯಲ್ಲಿರುವವನಂತೆ **[ಪುರಃ]** ಮುಂದೆ **[ಪಂಚಾಶತ್]** ಐವತ್ತು **[ಸಹಸ್ರಾ]** ಸಾವಿರಾರು **[ಕೃಷ್ಣಾ]** ಕೃಷ್ಣ ವರ್ಣೀಯ ಸೈನಿಕರ **[ನಿ, ವಪ]** ವಿಸ್ತಾರ ಮಾಡು. **[ವಿ, ದರ್ದ]** ವಿಶೇಷರೀತಿಯಲ್ಲಿ ದುಷ್ಟರ ದಮನಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜ ಮತ್ತು ರಾಜಪುರುಷರು ಸೇನೆಯಲ್ಲಿ ಸಾವಿರಾರು ಸೈನಿಕರನ್ನು ನಿಯುಕ್ತಿ ಮಾಡಿಕೊಂಡು ಮುಪ್ಪು ವೈದ್ಯರ ಹರಣಮಾಡುವಂತೆ ಶತ್ರುಗಳ ಬಲವನ್ನು ಹರಣಮಾಡಿ ರಾಜನೀತಿಯ ಪ್ರಚಾರ ಮಾಡು.

ರಾಜನ ವಿಷಯದಲ್ಲಿ ಸೈನಿಕರ ಕರ್ತವ್ಯ, ಅದರ ಫಲವಿಲ್ಲಿ ಹೇಳಿದೆ.

**ಸೂರ ಉಪಾಕೇ ತನ್ವ (ಅಂ) ೧ ಂ ದಧಾನೋ ವಿ ಯತ್ತೇ ಚೇತ್ಯಮೃತಸ್ಯ ವರ್ಪಃ ।**
**ಮೃಗೋ ನ ಹಸ್ತೀ ತವಿಷೀಮುಷಾಣಃ ಸಿಂಹೋ ನ ಭೀಮ ಆಯುಧಾನಿ ಬಿಭ್ರತ್ ॥೧೪॥**

**ಪದಾರ್ಥ:-** **[ಯತ್]** ಯಾವನು **[ಉಪಾಕೇ]** ಸಮೀಪದಲ್ಲಿ **[ಸೂರಃ]** ಸೂರ್ಯನಿಗೆ ಸದೃಶನಾದ **[ತನ್ವಂ]** ತೇಜಸ್ವೀ ಶರೀರವನ್ನು **[ದಧಾನಃ]** ಧಾರಣ ಮಾಡಿರುವ **[ತೇ]** ನಿನ್ನ **[ಅಮೃತಸ್ಯ]** ನಿತ್ಯ ವಸ್ತುವಿನ **[ವರ್ಪಃ]** ವರ್ಚಸ್ಸು ಮತ್ತು **[ಮೃಗಃ]** **[ನ]** ಜಿಂಕೆಗೆ ಸಮನಾದ ವೇಗವುಳ್ಳ, **[ಹಸ್ತೀ]** ಆನೆಗೆ ಸದೃಶ ಬಲವಿರುವ **[ಸಿಂಹಃ]** **[ನ]** ಸಿಂಹ ಸದೃಶ **[ಭೀಮಃ]** ಪರಾಕ್ರಮವಿರುವ **[ಆಯುಧಾನಿ]** ಖಡ್ಗ-ಕಠಾರಿ, ಭಲ್ಲೆ ಮುಂತಾದ ಆಯುಧಗಳನ್ನು **[ಬಿಭ್ರತ್]** ಧಾರಣ ಮಾಡಿ **[ತವಿಷೀಂ]** ಬಲಿಷ್ಠ ಸೇನೆಯ **[ಉಷಾಣಃ]** ದಹನ ಮಾಡುತ್ತ **[ವಿ, ಚೇತಿ]** ಜ್ಞಾಪಿಸಲ್ಪಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಸೂರ್ಯನಂತೆ ತೇಜಸ್ವಿಗಳೂ, ಜಿಂಕೆಯಂತೆ ರೂಪವಂತರೂ, ವೇಗವಂತರೂ, ಸಿಂಹದಂತೆ ಪರಾಕ್ರಮಿಗಳೂ, ಆನೆಯಂತೆ ಬಲಿಷ್ಠರೂ ಆಗಿದ್ದು ಧನುರ್ವೇದವನ್ನು ತಿಳಿದಿರುವ ಯೋಧರಿರುವ ಸೇನೆಯನ್ನು ಬೆಳೆಸಿಕೊಂಡು ಯುದ್ಧವನ್ನು ಜಯಿಸಿ ಎಲ್ಲೆಲ್ಲೂ ಉತ್ತಮ ಕೀರ್ತಿಗಳಿಸುವರೋ ಅವರಲ್ಲಿ ನೀನು ಪ್ರಸಿದ್ಧನಾಗು.

ರಾಜನ ವಿಷಯದಲ್ಲಿ ಸೇನೆ ಅಮಾತ್ಯಾದಿ ಜನರ ಕರ್ತವ್ಯವಿಲ್ಲಿ ಹೇಳಿದೆ.

**ಇಂದ್ರಂ ಕಾಮಾ ವಸೂಯಂತೋ ಅಗ್ಮನ್ ತ್ಸ್ವರ್ಮೀಳ್ಹೇ ನ ಸವನೇ ಚಕಾನಾಃ ।**
**ಶ್ರವಸ್ಯವಃ ಶಶಮಾನಾಸ ಉಕ್ಥೈ-ರೋಕೋ ನ ರಣ್ವಾ ಸುದೃಶೀವ ಪುಷ್ಟಿಃ ॥೧೫॥**

**ಪದಾರ್ಥ:-** [ವಸೂಯಂತೇ] ತನಗೆ ಧನ ಬಯಸುವವರು [ಕಾಮಾಃ] ಅದನ್ನು ಇಚ್ಛಿಸುತ್ತ [ಸವನೇ] ಪ್ರೇರಣೆ ಮಾಡುವುದರಲ್ಲಿ [ಚಕಾನಾಃ] ಪ್ರಕಾಶಮಾನ [ಶ್ರವಸ್ಯವಃ] ಅನ್ನವನ್ನು ಬಯಸುವವರು [ಶಶಮಾನಾಸಃ] ಶತ್ರುಬಲವನ್ನು ಮೀರಿಸುವವರು [ಉಕ್ಥೈಃ] ಶ್ರೇಷ್ಠಗುಣಗಳಿಂದ [ಓಕಃ] [ನ] ಗೃಹಗಳಿಗೆ ಸಮನಾಗಿ [ಸ್ವರ್ಮೀಳ್ವ] ಸುಖಮಯ ಸಂಗ್ರಾಮದಲ್ಲಿ [ನ] ಹೇಗೋ ಹಾಗೆ [ಸುದೃಶೀವ] ದರ್ಶನ ಯೋಗ್ಯವಾದ [ರಣ್ವಾ] ಉತ ಷ್ಠ [ಪುಷ್ಟಿಃ] ಪುಷ್ಟಿಯನ್ನು [ಅಗ್ಮನ್] ಪಡೆಯುವನು. [ಇಂದ್ರಂ] ಐಶ್ವರ್ಯವಂತನನ್ನು ಸೇನೆಗೆ ಸೇರಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಧನವನ್ನು ಬಯಸುವರೋ ಅವರು ಶರೀರಬಲ ಆತ್ಮಬಲವನ್ನು ಹೆಚ್ಚಿಸಿಕೊಂಡು ಯುದ್ಧ ಸಾಮಗ್ರಿಗಳ ಸಂಗ್ರಹ ಮಾಡಬೇಕು.

ರಾಜ ಪ್ರಜೆಗಳು ಐಕಮತ್ಯದಿಂದಿರಬೇಕೆಂದು ಇಲ್ಲಿ ಹೇಳಿದೆ.

**ತಮಿದ್ವ ಇಂದ್ರಂ ಸುಹವಂ ಹುವೇಮ ಯಸ್ತಾ ಚಕಾರ ನರ್ಯಾ ಪುರೂಣಿ ।**
**ಯೋ ಮಾವತೇ ಜರಿತ್ರೇ ಗಧ್ಯಂ ಚಿ-ನ್ಮಕ್ಷೂ ವಾಜಂ ಭರತಿ ಸ್ಪಾರ್ಹರಾಧಾಃ ॥೧೬॥**

**ಪದಾರ್ಥ:-** [ಯಃ] ಯಾವನು [ಸ್ಪಾರ್ಹರಾಧಾಃ] ಬಯಸಿದ ಧನವನ್ನು ಪಡೆದುಕೊಂಡವನು [ಮಾವತೇ] ನನ್ನಂತೆ [ಜರಿತ್ರೇ] ವಿದ್ಯೆಯಸ್ತವನ ಮಾಡುವವನಿಗೆ [ಗಧ್ಯಂ] ಗ್ರಹಣ ಯೋಗ್ಯವಾದ [ವಾಜಂ] ಅನ್ನಾದಿಗಳನ್ನು [ಮಕ್ಷೂ] ಶೀಘ್ರವಾಗಿ [ಭರತಿ] ಪೂರ್ಣಗೊಳಿಸುವನು. [ಯಃ] [ಚಿತ್] ಯಾವನು ಮತ್ತೆ [ತಾ] ಆ [ಪುರೂಣೀ] ಬಹಳಷ್ಟು [ನರ್ಯಾ] ಮನುಷ್ಯರಿಗಾಗಿ [ಚಕಾರ] ಕರ್ಮ ಮಾಡುವನೋ [ತಂ] ಅವನನ್ನು [ಸುಹವಂ] ಉತ್ತಮ ಪ್ರಶಂಸೆಗೊಳಗಾದ [ಇಂದ್ರಂ] ಐಶ್ವರ್ಯವಂತನನ್ನಾಗಿ [ಇತ್] ಮಾಡುವನು [ವಃ] ನಿಮಗೆ [ಹುವೇಮ] ಹವನ ಮಾಡುವೆವು.

**ಭಾವಾರ್ಥ:-** ರಾಜ ಮತ್ತು ಪ್ರಜೆಗಳು ಒಮ್ಮತದಿಂದ ಉತ್ತಮ ಗುಣ ಕರ್ಮ ಸ್ವಭಾವದ ಮನುಷ್ಯನನ್ನು ರಾಜನನ್ನಾಗಿಸಿಕೊಂಡರೆ ಸಮಗ್ರ ರಾಜ್ಯವು ಸುಖಮಯವಾಗುತ್ತದೆ.

ಈ ಮಂತ್ರದಲ್ಲಿ ಯುದ್ಧ ಪ್ರವೃತ್ತಿಯಿಂದ ಜಯಶೀಲನಾಗುವ ವಿಚಾರವನ್ನು ತಿಳಿಸಲಾಗಿದೆ.

**ತಿಗ್ಮಾ ಯದಂತರಶನಿಃ ಪತಾತಿ ಕಸ್ಮಿಂಚಿಚ್ಛೂರ ಮುಹುಕೇ ಜನಾನಾಮ್ ।**
**ಘೋರಾ ಯದರ್ಯ ಸಮೃತಿರ್ಭವಾ-ತ್ಯಧ ಸ್ಮಾ ನಸ್ತನ್ವೋ ಬೋಧಿ ಗೋಪಾಃ ॥೧೭॥**

**ಪದಾರ್ಥ:-** **[ಶೂರ]** ಪರಾಕ್ರಮಿಯೇ! **[ಅರ್ಯ]** ಪ್ರಶಂಸಿತವಾದ **[ಯತ್ ಘೋರಾ]** ಯಾವುದು ಭಯಂಕರವಾದ **[ಸಮೃತಿಃ]** **[ಭವತಿ]** ಯುದ್ಧವು ನಡೆಯುತ್ತಿದೆಯೋ **[ಅಧ]** ಅನಂತರ **[ಯತ್]** **[ತಿಗ್ಮಾ]** ಯಾವುದು ತೀಕ್ಷ್ಣವಾದ **[ಅಶನಿಃ]** ಸಿಡಿಲು **[ಜನಾನಾಂ]** ಮನುಷ್ಯರ **[ಕಸ್ಮಿನ್‌ಚಿತ್]** ಯಾವುದಾದರೊಂದು **[ಮುಹುಕೇ]** ಮೋಹಗೊಳಿಸುವಂತಹ ಯುದ್ಧರಂಗದ **[ಅಂತಃ ಪತಾತಿ]** ಮಧ್ಯದಲ್ಲಿ ಬೀಳುತ್ತದೆಯೋ **[ಸ್ಮಾ]** ಆದರಿಂದ **[ಗೋಪಾಃ]** ರಕ್ಷಣೆ ಮಾಡುವವನು **[ನಃ]** ನಮ್ಮೆಲ್ಲರ **[ತನ್ವಃ]** ಶರೀರಗಳನ್ನು **[ಬೋಧಿ]** ಗುರುತಿಸುವನು/ ತಿಳಿದುಕೊಳ್ಳುವನು.

**ಭಾವಾರ್ಥ:-** ವೀರ ಪುರುಷರೇ! ಯಾವಾಗ ಶಸ್ತ್ರಾಸ್ತ್ರಗಳ ಸಂಘರ್ಷ ರೂಪವಾದ ಯುದ್ಧವು ನಡೆಯುತ್ತದೆಯೋ ಆಗ ತನಗೆ ಮತ್ತು ತನಗೆ ಸಂಬಂಧಿಸಿದವರ ಶರೀರ ರಕ್ಷಣೆಯನ್ನು ಮಾಡುತ್ತ ಶತ್ರುಗಳ ನಾಶ ಮಾಡಲು ಪ್ರವೃತ್ತನಾದರೆ ವಿಜಯವು ಖಂಡಿತ.

ಯಾರು ರಾಜನಾಗಬೇಕು ಎಂಬ ವಿಚಾರವನ್ನಿಲ್ಲಿ ಹೇಳಲಾಗಿದೆ.

**ಭುವೋಽವಿತಾ ವಾಮದೇವಸ್ಯ ಧೀನಾಂ ಭುವಃ ಸಖಾವೃಕೋ ವಾಜಸಾತೌ ।**
**ತ್ವಾಮನು ಪ್ರಮತಿಮಾ ಜಗನ್ಮೋ-ರುಶಂಸೋ ಜರಿತ್ರೇ ವಿಶ್ವಧ ಸ್ಯಾಃ ॥೧೮॥**

**ಪದಾರ್ಥ:-** **[ವಿಶ್ವಧ]** ಪ್ರಾಪಂಚಿಕ ರಾಜ್ಯವನ್ನು ಪಡೆದುಕೊಂಡಿರುವ ರಾಜನೇ! ನೀನು **[ವಾಜಸಾತೌ]** ಯುದ್ಧ ಭೂಮಿಯಲ್ಲಿ **[ವಾಮದೇವಸ್ಯ]** ಯುದ್ಧ ವಿದ್ಯಾಕುಶಲನ **[ಧೀನಾಂ]** ಬುದ್ಧಿವಂತಿಕೆಯ **[ಅವಿತಾ]** **[ಭುವಃ]** ರಕ್ಷಕನಾಗು. **[ಅವೃಕಃ]** ಕಳ್ಳನಲ್ಲದ **[ಸಖಾಃ]** **[ಭುವಃ]** ಸ್ನೇಹಿತನಾಗು. **[ಉರುಶಂಸಃ]** ಪ್ರಶಂಸೆಗೊಳಗಾದವನಾಗಿ **[ಜರಿತ್ರೇ]** ಪ್ರಶಂಸೆ ಮಾಡುವವರಿಗೆ **[ಸ್ಯಾಃ]** ಸುಖದಾಯಕನಾಗು. **[ತ್ವಾಂ]** ನಿನ್ನನ್ನು **[ಅನುಪ್ರಮತಿಂ]** ಅನುಸರಿಸಿ ಬುದ್ಧಿಯನ್ನು **[ಅಜಗನ್ಮ]** ನಾವು ಪಡೆದುಕೊಳ್ಳುವೆವು.

**ಭಾವಾರ್ಥ:-** ಯಾವನು ಎಲ್ಲರಿಗೂ ಸ್ವಾಮಿ ಆಗುವಂತಹ ಗುಣವಿರುವವನೋ, ಪರಾಕ್ರಮಿಯೋ ಯುದ್ಧವಿದ್ಯೆಯಲ್ಲಿ ಕುಶಲನೋ, ಚಾಕಚಕ್ಯತೆಯಿಂದ ಸೈನಿಕರಿಗೆ ಉಪದೇಶ ಮಾಡುವನೋ, ಯುದ್ಧ ಕುಶಲಿಗಳ ರಕ್ಷಣೆ ಮಾಡುವನೋ, ಅವನೇ ರಾಜನಾಗಲು ಅರ್ಹನು.

ರಾಜನ ಕರ್ತವ್ಯವನ್ನಿಲ್ಲಿ ಹೇಳಿದೆ.

**ಏಭಿರ್ನೃಭಿರಿಂದ್ರ ತ್ವಾಯುಭಿಷ್ಟ್ವಾ ಮಘವದ್ಭಿರ್ಮಘವನ್ ವಿಶ್ವ ಆಜೌ । ದ್ಯಾವೋ ನ**
**ದ್ಯುಮ್ನೈರಭಿ ಸಂತೋ ಅರ್ಯಃ, ಕ್ಷಪೋ ಮದೇಮ ಶರದಶ್ಚ ಪೂರ್ವೀಃ ॥೧೯॥**

**ಪದಾರ್ಥ:-** **[ಮಘವನ್]** ಐಶ್ವರ್ಯವಂತನಾದ **[ಇಂದ್ರ]** ಶತ್ರುನಾಶಕ ರಾಜನೇ! **[ಏಭಿಃ]** ಈ ಹಿಂದೆ ತಿಳಿಸಿದಂತಹ **[ತ್ವಾಯುಭಿಃ]** ನಿನ್ನನ್ನು ಪಡೆಯಲು ಬಯಸುತ್ತಾ **[ಮಘವದ್ಭಿಃ]** ಶ್ರೀಮಂತರಾದ **[ನೃಭಿಃ]** ನಾಯಕ ಜನರೊಂದಿಗೆ **[ವಿಶ್ವೇ]** **[ಆಜೌ]** ಸಮಗ್ರ ಸಂಗ್ರಾಮದಲ್ಲಿ **[ದ್ಯಾವಃ]** **[ನ]** ಕಿರಣಗಳಿಗೆ ಸದೃಶವಾಗಿ **[ದ್ಯುಮ್ನೈಃ]** ಯಶೋರೂಪ ಧನಗಳಿಂದ **[ತ್ವಾ]** ನಿನ್ನ ಆಶ್ರಯದಲ್ಲಿ **[ಸಂತಃ]** ಇರುವವರಾಗಿ **[ಅರ್ಯಃ]** ಸ್ವಾಮಿಗೆ ಸಮನಾಗಿ **[ಪೂರ್ವೀಃ]** **[ಕ್ಷಪಃ]** ಕಳೆದ ರಾತ್ರಿಗಳನ್ನು **[ಶರದಃ]** ಋತುಗಳನ್ನು **[ಚ]** ಸ್ಮರಿಸಿಕೊಳ್ಳುತ್ತಾ **[ಅಭಿವದೇಮ]** ಸಮಗ್ರ ಆನಂದವನ್ನು ಅನುಭವಿಸುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವನು ಧಾರ್ಮಿಕನಾಗಿದ್ದು ಶರೀರಬಲ ಮತ್ತು ಆತ್ಮಬಲ ಪಡೆದುಕೊಂಡು ವಿಜಯವನ್ನು ಬಯಸುವವನಾಗಿ ತನ್ನ ರಾಜ್ಯದಲ್ಲಿರುವ ಶ್ರೀಮಂತರಿಂದೊಡಗೂಡಿ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ವಿಸ್ತರಿಸುವನೋ, ಅವನು ಪ್ರಕಾಶಮಾನ ಸೂರ್ಯನಂತೆ ಕೀರ್ತಿಯಿಂದ ಬೆಳಗುವವನಾಗಿ ಶ್ರೀಮಂತನಾಗಿ ಎಲ್ಲರೂ ಸಂತೋಷದಲ್ಲಿರುವಂತೆ ಮಾಡುವನು.

ಅಮಾತ್ಯಾದಿ ಕರ್ಮಚಾರಿಗಳ ವಿಷಯವನ್ನಿಲ್ಲಿ ಹೇಳಿದೆ.

**ಏವೇದಿಂದ್ರಾಯ ವೃಷಭಾಯ ವೃಷ್ಣೇ ಬ್ರಹ್ಮಾಕರ್ಮ ಭೃಗವೋ ನ ರಥಮ್ ।**

**ನೂ ಚಿದ್ಯಥಾ ನಃ ಸಖ್ಯಾ ವಿಯೋಷದಸನ್ನ ಉಗ್ರೋऽವಿತಾ ತನೂಪಾಃ ॥೨೦॥**

**ಪದಾರ್ಥ:-** **[ಯಥಾ]** ಹೇಗೆ ರಾಜನು **[ನಃ]** ನಮ್ಮ **[ಸಖ್ಯಾ]** ಮಿತ್ರರೊಂದಿಗೆ **[ವಿಯೋಷತ್]** ಧಾರಣ ಮಾಡುವನೋ **[ಉಗ್ರಃ]** ತೇಜಸ್ವಿಯಾದ **[ತನೂಪಾಃ]** ಶರೀರಪಾಲನೆ ಮಾಡುವವನು **[ನಃ]** ನಮ್ಮನ್ನು **[ನು]** ಬೇಗನೇ **[ಅವಿತಾ]** ರಕ್ಷಣೆ **[ಅಸತ್]** ಮಾಡುವನೋ **[ಇತ್, ಏವ]** ಅವನೇ **[ವೃಷಭಾಯ]** ಬಲಿಷ್ಠನಾದ **[ವೃಷ್ಣೇ]** ಪರಾಕ್ರಮಿಯಾದ **[ಇಂದ್ರಾಯ]** ಐಶ್ವರ್ಯದಾತೃವಿಗಾಗಿ **[ಭೃಗವಃ]** ಪ್ರಕಾಶಮಾನವಾದ **[ರಥಂ]** **[ನ]** ವಾಹನಕ್ಕೆ ಸದೃಶವಾದ / ವಾಹನವನ್ನು **[ಬ್ರಹ್ಮಚಿತ್]** ಅತಿಶಯ ಧನವನ್ನು **[ಅಕರ್ಮ]** ನಾವು ಸಿದ್ಧಗೊಳಿಸುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಶಿಲ್ಪ ಜನರು ಶಿಲ್ಪ ವಿದ್ಯೆಯಿಂದ ವಿಮಾನಾದಿ ರಥಗಳನ್ನು ತಯಾರಿಸಿ ಧನವಂತರಾಗುವರೋ, ಮಿತ್ರರನ್ನು ಗೌರವಿಸುವರೋ, ಅದೇ ರೀತಿ ರಾಜನಿಂದ ಸತ್ಕರಿಸಲ್ಪಟ್ಟ ನಾವೆಲ್ಲರೂ ಧನಸಮೃದ್ಧಿಯನ್ನು ಪಡೆದು ರಾಜ ಹಾಗೂ ರಾಜಪುರುಷರನ್ನು ಗೌರವಿಸೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಒ) ೩ ನ ಪೀಪೇಃ ।**

**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೨೧॥**

**ಪದಾರ್ಥ:-** **[ಹರಿವಃ]** ಅಶ್ವವಂತನಾದ **[ಇಂದ್ರ]** ಐಶ್ವರ್ಯವಂತ ರಾಜನೇ! ನೀನು **[ಗೃಣಾನಃ]** ಪ್ರಶಂಸೆ ಮಾಡುವವನಾಗಿ **[ಜರಿತ್ರೇ]** ಸ್ತುತಿ ಮಾಡುವವನಿಗೆ **[ನದ್ಯಃ]** **[ನ]** ನದಿಗೆ ಸಮವಾಗಿ **[ಇಷಂ]** ಅನ್ನಾದಿ ಪದಾರ್ಥಗಳನ್ನು **[ನು]** ಶೀಘ್ರವಾಗಿ **[ಪೀಪೇಃ]** ವೃದ್ಧಿಗೊಳಿಸುವೆ. **[ನು]** ಮತ್ತು **[ಸ್ತುತಃ]** ಎಲ್ಲರಿಂದ ಪ್ರಶಂಸೆ **[ಅಕಾರಿ]** ಮಾಡಲ್ಪಟ್ಟವನಾಗಿ **[ತೇ]** ನಿನಗೋಸ್ಕರ **[ನವ್ಯಂ]** ಹೊಸ ಹೊಸ **[ಬ್ರಹ್ಮ]** ಅಸಂಖ್ಯಾತ ಧನವನ್ನು **[ಸದಾಸಾಃ]** ಸೇವಕರಿಂದೊಡಗೂಡಿ **[ಧಿಯಾ]** ಬೌದ್ಧಿಕ ಕರ್ಮದಿಂದ **[ರಥ್ಯಃ]** ವಾಹನಗಳಿಗಾಗಿ ಮಾರ್ಗವು ಹೇಗೋ ಹಾಗೆ **[ಸ್ಯಾಮ]** ತೆರಿಗೆ ಕೊಡುವವರಾಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಪ್ರಶಂಸಿತನಾಗಿ ನದಿಯಂತೆ ಪ್ರಜೆಗಳನ್ನು ಸಂತೃಪ್ತಿಗೊಳಿಸುವವನಾಗಿ ಕುದುರೆಗೆ ಸಮನಾಗಿ ಸ್ಥಳದಿಂದ ಸ್ಥಳಕ್ಕೆ ತಲುಪುವವನಾಗಿ ಎಲ್ಲರಿಗೂ ಸ್ವಾಮಿ ಎನಿಸಿಕೊಂಡು ತನ್ನ ಅಧಿಕಾರಿ ನೌಕರರೊಂದಿಗೆ ರಾಜ್ಯವಾಳುವನೋ, ನಾವು ಅವನಿಗೆ ಅನುಕೂಲಕರವಾಗಿ ವರ್ತಿಸುವವರಾಗಿ ಸಕಾಲದಲ್ಲಿ ತೆರಿಗೆಗಳನ್ನು ಕೊಟ್ಟು ಎಲ್ಲರೂ ನಿರಂತರ ಸುಖಿಗಳಾಗೋಣ.

ಈ ಸೂಕ್ತದಲ್ಲಿ ಇಂದ್ರ, ರಾಜ, ಮಂತ್ರಿ ಹಾಗೂ ವಿದ್ವಾಂಸರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಹದಿನಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೧೭

ಮಂತ್ರಸಂಖ್ಯೆ ೨೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧ ಪಂಕ್ತಿಃ, ೭, ೯ ಭುರಿಕ್ಪಂಕ್ತಿಃ, ೧೪, ೧೬ ಸ್ವರಾಟ್ಪಂಕ್ತಿಃ, ೧೫ ಯಾಜುಷೀ ಪಂಕ್ತಿಃ, ೨೧ ನಿಚೃತ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೧೨, ೧೩, ೧೭, ೧೮, ೧೯ ನಿಚೃತ್ತ್ರಿಷ್ಟುಪ್, ೩, ೫, ೬, ೮, ೧೦, ೧೧ ತ್ರಿಷ್ಟುಪ್, ೪, ೨೦ ವಿರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಇಂದ್ರ ಪದವಾಚ್ಯ ರಾಜನ ಗುಣವಿಲ್ಲಿ ಹೇಳಿದೆ.

**ತ್ವಂ ಮಹಾँ ಇಂದ್ರ ತುಭ್ಯಂ ಹ ಕ್ಷಾ ಅನು ಕ್ಷತ್ರಂ ಮಂಹನಾ ಮನ್ಯತ ದ್ಯೌಃ ।**
**ತ್ವಂ ವೃತ್ರಂ ಶವಸಾ ಜಘನ್ವಾ-ನ್ತ್ಸೃಜಃ ಸಿಂಧೂँರಹಿನಾ ಜಗ್ರಸಾನಾನ್ ॥೧॥**

**ಪದಾರ್ಥ:-** [**ಇಂದ್ರ**] ರಾಜನೇ! [**ತ್ವಂ**] ನೀನು [**ಮಹಾನ್**] ದೊಡ್ಡದಾದ [**ಕ್ಷಾಃ**] ಭೂಮಿಯನ್ನು [**ಕ್ಷತ್ರಂ**] ರಾಜ್ಯವನ್ನೂ [**ಮಂಹನಾ**] ಮಹತ್ತಾದ [**ದ್ಯೌಃ**] ಸೂರ್ಯನಂತೆ [**ಅನು, ಮನ್ಯತ**] ಗೌರವಿಸುತ್ತೀಯೆ. [**ಹ**] ಅದನ್ನೇ [**ತುಭ್ಯಂ**] ನಿನಗೆ ನಾವೂ ಮಾಡುವೆವು. [**ವೃತ್ರಂ**] ಮೇಘದಂತಿರುವ ಶತ್ರುವನ್ನು [**ಜಘನ್ವಾನ್**] ನಾಶ ಮಾಡುವವನು. [**ಅಹಿನಾ**] ಮೇಘದಂತೆ ವೃದ್ಧಿ ಹೊಂದಿರುವ ಸಂಪತ್ತಿನಿಂದ [**ಸಿಂಧೂನ್**] ನದಿಗಳನ್ನು [**ಸೃಜಃ**] ಸೃಷ್ಟಿಮಾಡು. [**ತ್ವಂ**] ನೀನು [**ಶವಸಾ**] ಬಲದಿಂದ [**ಜಗ್ರಸಾನಾನ್**] ಉತ್ತಮ ಜನರ ಸೃಷ್ಟಿ ಮಾಡು.

**ಭಾವಾರ್ಥ:-** ರಾಜನಿಗೆ ಸಂಬಂಧಿಸಿದ ಜನರೇ! ಸೂರ್ಯನು ಮಳೆಗರೆದು ಹೇಗೆ ನದಿಗಳನ್ನು ತುಂಬಿಸುವನೋ ಹಾಗೆಯೇ ಧನ, ಸಂಪತ್ತುಗಳಿಂದ ರಾಜ್ಯವನ್ನು ಸುಶೋಭಿತವನ್ನಾಗಿಸಿರಿ. ರಾಜ್ಯದ ಧನವನ್ನು ರಾಜಾಜ್ಞೆಗೆ ಅನುಕೂಲವಾಗಿ ವರ್ತಿಸುವವರಾಗಿ ವೃದ್ಧಿಪಡಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತವ ತ್ವಿಷೋ ಜನಿಮನ್ರೇಜತ ದ್ಯೌ ರೇಜದ್ಭೂಮಿರ್ಭಿಯಸಾ ಸ್ವಸ್ಯ ಮನ್ಯೋಃ ।**
**ಋಘಾಯಂತ ಸುಭ್ವ (ಅಃ) ೧ ಃ ಪರ್ವತಾಸ ಆರ್ದನ್ ಧನ್ವಾನಿ ಸರಯಂತ ಆಪಃ ॥೨॥**

**ಪದಾರ್ಥ:-** [**ಜನಿಮನ್**] ಜನ್ಮವಂತ ರಾಜನೇ! [**ತ್ವಿಷಃ**] ಜಗದೀಶ್ವರನ ಪ್ರತಾಪದಿಂದ [**ಭಿಯಸಾ**] ಭಯದಿಂದ [**ದ್ಯೌಃ**] ಅಂತರಿಕ್ಷವು [**ರೇಜತ**] ಕಂಪಿಸುತ್ತದೆ. [**ಭೂಮಿಃ ರೇಜತ**] ಭೂಮಿಯೂ ಕಂಪಿಸುತ್ತದೆ. [**ತವ**] ನಿನ್ನ [**ಸ್ವಸ್ಯ**] ಸ್ವಂತ [**ಮನ್ಯೋಃ**] ಕೋಪದಿಂದ ಶತ್ರುಗಳು ಹೇಗೊ ಹಾಗೆ [**ಸುಭ್ವಃ**] ವೃಷ್ಟಿಯಾಗುವ ರೀತಿಯಲ್ಲಿ [**ಪರ್ವತಾಸಃ**] ಪರ್ವತದಂತಿರುವ ಮೇಘಗಳು [**ಋಘಾಯಂತ**] ಬಾಧಿಸಲ್ಪಡುತ್ತದೆ. [**ಆರ್ದನ್**] ನಾಶಪಡಿಸುತ್ತವೆ. [**ಆಪಃ**] ನೀರು [**ಧನ್ವಾನಿ**] ಶುಷ್ಕ ಭೂಮಿಗಳು [**ಸರಯಂತೇ**] ಗಮನ ಮಾಡುತ್ತವೆ.

**ಭಾವಾರ್ಥ:-** ರಾಜನೇ! ನೀನು ಪಕ್ಷಪಾತರಹಿತನಾಗಿ ತಂದೆಯಂತೆ ಮನುಷ್ಯರೊಂದಿಗೆ ವ್ಯವಹರಿಸುತ್ತ ಜಗದೀಶ್ವರನ ಭಯದಿಂದ ಸಮಗ್ರ ಜಗತ್ತು ಹೇಗೆ ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸುತ್ತದೆಯೋ ಹಾಗೇ ನಿನ್ನ ದಂಡನೀತಿಯ ಭಯದಿಂದ ಸಮಗ್ರ ವಸ್ತುಜಾತವು ಭೋಗರೂಪವಾಗಲಿ. ಸೂರ್ಯನು ಹೇಗೆ ಮೇಘವನ್ನು ಭೇದಿಸಿ ಮಳೆಗರೆದು ಎಲ್ಲರನ್ನೂ ಸಂತೃಪ್ತಿಪಡಿಸುವನೋ ಹಾಗೆ ದುಷ್ಟರನ್ನು ಸಂಹರಿಸಿ ಶಿಷ್ಟರಿಗೆ ಸಂತೋಷ ನೀಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭಿನದ್ಗಿರಿಂ ಶವಸಾ ವಜ್ರಮಿಷ್ಣ-ನ್ನಾವಿಷ್ಕೃಣ್ವಾನಃ ಸಹಸಾನ ಓಜಃ ।**
**ವಧೀದ್ವೃತ್ರಂ ವಜ್ರೇಣ ಮಂದಸಾನಃ ಸರನ್ನಾಪೋ ಜವಸಾ ಹತವೃಷ್ಣೀಃ ॥೩॥**

**ಪದಾರ್ಥ:-** [**ಗಿರಿಂ**] ಪರ್ವತದಂತಿರುವ ಮೇಘವನ್ನು [**ಭಿನತ್**] ಭೇದಿಸಿ [**ವಜ್ರೇಣ**] ಕಿರಣದಿಂದ [**ವೃತ್ರಂ**] ಮೇಘವನ್ನು [**ವಧೀತ್**] ನಾಶಮಾಡುವವನು. [**ಹತವೃಷ್ಣೀಃ**] ನಾಶಗೊಳಿಸಲಾದ ಮೇಘವು [**ಆಪಃ**] ನೀರನ್ನು [**ಜವಸಾ**] ವೇಗದಿಂದ [**ಸರನ್**] ಸುರಿಸುತ್ತ [**ಮಂದಸಾನಃ**] ಆನಂದದಾಯಕನಾಗುವನು. [**ಸಹಸಾನಃ**] ಸಹನಶೀಲನಾಗಿ [**ಇಷ್ಣನ್**] ಪ್ರಾಪ್ತನಾಗಿ [**ಶವಸಾ**] ಬಲದಿಂದ ಶತ್ರುಗಳನ್ನು ನಾಶಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸೂರ್ಯನಂತೆ ತೇಜಸ್ವಿಯೂ ಬಲಿಷ್ಠನೂ, ದುಷ್ಟನಾಶಕನೂ ಶ್ರೇಷ್ಠರಕ್ಷಕನೂ ಎಲ್ಲರಿಗೂ ಆನಂದದಾಯಕನೂ ಆಗಿರುವರೋ ಅವರು ಪ್ರಪಂಚದಲ್ಲಿ ಕೀರ್ತಿವಂತರಾಗಿ ಇಹಪರಗಳೆರಡರಲ್ಲೂ ಸುಖಿಗಳಾಗುವರು.

ರಾಜ ಸಂತಾನ ವಿಷಯ ವಿಚಾರವನ್ನಿಲ್ಲಿ ಹೇಳಿದೆ.

**ಸುವೀರಸ್ತೇ ಜನಿತಾ ಮನ್ಯತ ದ್ಯೌ-ರಿಂದ್ರಸ್ಯ ಕರ್ತಾ ಸ್ವಪಸ್ತಮೋ ಭೂತ್ ।**
**ಯ ಈಂ ಜಜಾನ ಸ್ವರ್ಯಂ ಸುವಜ್ರ-ಮನಪಚ್ಯುತಂ ಸದಸೋ ನ ಭೂಮ ॥೪॥**

**ಪದಾರ್ಥ:-** [**ಇಂದ್ರಸ್ಯ**] ಐಶ್ವರ್ಯವಂತನಾದ [**ತೇ**] ನಿನ್ನ [**ದ್ಯೌಃ**] ಮಿಂಚಿನಂತಿರುವ [**ಸುವೀರಃ**] ಶ್ರೇಷ್ಠವೀರನು [**ಜನಿತಾ**] ಉತ್ಪಾದಕನು [**ಮನ್ಯತ**] ಒಪ್ಪಿಕೊಳ್ಳುವನು. [**ಸ್ವಪಸ್ತಮಃ**] ಉತ್ತಮ ಕರ್ಮಗಳನ್ನು [**ಕರ್ತಾ**] ಮಾಡುವವನು [**ಭೂತ್**] ಆಗುವೆ. [**ಯಃ**] ಯಾವನು [**ಈಂ**] ಮಹತ್ತಾದ [**ಸ್ವರ್ಯಂ**] ಸುಖಕ್ಕೆ ಹಿತವಾದ [**ಅನಪಚ್ಯುತಂ**] ನಾಶರಹಿತ [**ಸುವಜ್ರಂ**] ಆಯುಧವಂತನನ್ನು [**ಜಜಾನ**] ಉತ್ಪಾದಿಸುವನು. [**ಸದಸಃ**] [**ನ**] ಸಭಾಸದರಂತೆ [**ಭೂಮ**] ನಾವಾಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಶ್ರೇಷ್ಠ ಜನರು ಅತ್ಯುತ್ತಮ ರಾಜನನ್ನು ಪಡೆದು ನ್ಯಾಯಪ್ರಚಾರ ಮಾಡುತ್ತ ಸುಖಿಗಳಾಗುವರು. ಅದೇ ರೀತಿ ನೀವು ಧಾರ್ಮಿಕ ವಿಧಾನದಿಂದ ಗೃಹಸ್ಥಾಶ್ರಮ ಸ್ವೀಕರಿಸಿ ತನ್ನ ಮಡದಿಯಲ್ಲಿ ಪುತ್ರನನ್ನು ಪಡೆದು ತೃಪ್ತರಾಗುವರೋ ಅವರೇ ಕೀರ್ತಿವಂತರಾಗುವರು.

ರಾಜನ ವಿಷಯವಿಲ್ಲಿದೆ.

**ಯ ಏಕ ಇಚ್ಛ್ಯಾವಯತಿ ಪ್ರ ಭೂಮಾ ರಾಜಾ ಕೃಷ್ಟೀನಾಂ ಪುರುಹೂತ ಇಂದ್ರಃ ।**
**ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ ॥೫॥**

**ಪದಾರ್ಥ:-** [**ಯಃ**] ಯಾವನು [**ಪುರುಹೂತಃ**] ಬಹು ಜನರಿಂದ ಆಹ್ವಾನಿತನು / ಪ್ರಶಂಸಿತನು [**ಇಂದ್ರಃ**] ಐಶ್ವರ್ಯವಂತನು [**ಕೃಷ್ಟೀನಾಂ**] ಕೃಷೀವಲಾದಿ ಪ್ರಜೆಗಳ [**ರಾಜಾ**] ರಾಜನು [**ಏಕಃ**] ಒಬ್ಬನು [**ಇತ್**] ಶತ್ರುಗಳನ್ನು [**ಪ್ರ, ಚ್ಯಾವಯತಿ**] ನಡುಗಿಸುವನೋ ಅವನಿಗೆ [**ಮಘೋನಃ**] ಬಹುಜನರ ಮಧ್ಯದಲ್ಲಿ [**ಗೃಣಂತಃ**] ಸ್ತುತಿ

ಮಾಡುತ್ತ [ಜೀವಸ್ಯ] ದಿವ್ಯಗುಣಸಂಪನ್ನರೊಂದಿಗಿರುವ [ಸತ್ಯಂ] ಶ್ರೇಷ್ಠನಾದ [ರಾತಿಂ] ದಾನಿಯನ್ನು [ವಿಶ್ವೇ] ಎಲ್ಲಾ ಸಭಾಸದರು [ಅನು, ಮದಂತಿ] ಅನುಮೋದಿಸುವರು. [ಏನಂ] ಇವನನ್ನು [ಭೂಮ] ರಾಜನಾಗಿ ಮಾಡೋಣ, ಸುಖಿಗಳಾಗೋಣ.

**ಭಾವಾರ್ಥ:-** ಯಾವನು ಒಬ್ಬನೇ ಬಹುಜನ ಶತ್ರುಗಳನ್ನು ಸಂಹರಿಸಬಲ್ಲನೋ, ಯುದ್ಧಗಳಲ್ಲಿ ಸದಾ ವಿಜಯಗಳಿಸುವನೋ, ಶ್ರೇಷ್ಠ ಪುರುಷರೊಂದಿಗೆ ಸಂಪರ್ಕವಿಟ್ಟುಕೊಂಡಿರುವನೋ, ಅವರ ಉಪದೇಶ ಕೇಳುವವನೋ, ಧರ್ಮ-ನ್ಯಾಯವನ್ನು ನಿಷ್ಪಕ್ಷಪಾತವಾಗಿ ಮಾಡುವನೋ ಅವನೇ ರಾಜನಾಗಲರ್ಹನು.

ಭೂಪತಿ ವಿಷಯವಿಲ್ಲಿ ಹೇಳಿದೆ.

**ಸತ್ರಾ ಸೋಮಾ ಅಭವನ್ನಸ್ಯ ವಿಶ್ವೇ ಸತ್ರಾ ಮದಾಸೋ ಬೃಹತೋ ಮದಿಷ್ಠಾಃ ।**
**ಸತ್ರಾಭವೋ ವಸುಪತಿರ್ವಸೂನಾಂ ದತ್ರೇ ವಿಶ್ವಾ ಅಧಿಥಾ ಇಂದ್ರ ಕೃಷ್ಟೀಃ ॥೬॥**

**ಪದಾರ್ಥ:-** [ಇಂದ್ರ] ಐಶ್ವರ್ಯದಾಯಕನೇ! ನೀನು [ವಸೂನಾಂ] ಧನಾಢ್ಯ ಪುರುಷರ [ವಸುಪತಿಃ] ಧನ ಸ್ವಾಮಿಯೂ, [ಸತ್ರಾ] ಸತ್ಯವಂತನೂ [ಅಭವಃ] ಆಗಿರುವೆ. [ದತ್ರೇ] ದಾನಯೋಗ್ಯ ಸುವರ್ಣಾದಿಧನಗಳಿರುವುದರಿಂದ [ವಿಶ್ವಾ] ಸಂಪೂರ್ಣ [ಕೃಷ್ಟೀಃ] ಪ್ರಜೆಗಳನ್ನು [ಅಧಿಥಾ] ಧಾರಣ ಮಾಡಿದರೆ [ಅಸ್ಯ] ಈ ರಾಜ್ಯದ [ಸತ್ರಾ] ಸತ್ಯರೂಪ [ವಿಶ್ವೇ] ಎಲ್ಲಾ [ಸೋಮಾಃ] ಶಾಂತಿಗುಣಸಂಪನ್ನ ಸಭ್ಯರು [ಸತ್ರಾ] ಸತ್ಯರೂಪ [ಮದಾಸಃ] ಆನಂದ ಮತ್ತು [ಬೃಹತಃ] ಅತಿಶಯ [ಮದಿಷ್ಠಾಃ] ಆನಂದವಂತರು [ಅಭವನ್] ಆಗುವರು.

**ಭಾವಾರ್ಥ:-** ರಾಜನು ತನಗೆ ಪ್ರಿಯವಾದವರನ್ನು ಬಯಸಬೇಕು ಮತ್ತು ಪ್ರಜೆಗಳಿಗೆ ಸುಖವನ್ನೂ ಬಯಸಬೇಕು. ಅದರಿಂದ ಉತ್ತಮ ಸಭಾಸದರನ್ನೂ ಸಂಪತ್ತನ್ನೂ ವೃದ್ಧಿಪಡಿಸಿಕೊಳ್ಳಬೇಕು.

ರಾಜನು ಪ್ರಜಾಪಾಲನೆ ಮಾಡುವ ವಿಧಾನವನ್ನಿಲ್ಲಿ ಹೇಳಿದೆ.

**ತ್ವಮಧ ಪ್ರಥಮಂ ಜಾಯಮಾನೋಽಮೇ ವಿಶ್ವಾ ಅಧಿಥಾ ಇಂದ್ರ ಕೃಷ್ಟೀಃ ।**
**ತ್ವಂ ಪ್ರತಿ ಪ್ರವತ ಆಶಯಾನ-ಮಹಿಂ ವಜ್ರೇಣ ಮಘವನ್ ವಿ ವೃಶ್ಚಃ ॥೭॥**

**ಪದಾರ್ಥ:-** [ಮಘವನ್] ಧನವಂತ [ಇಂದ್ರ] ರಾಜನು [ಅಮೇ] ಮನೆಯಲ್ಲಿ [ಜಾಯಮಾನಃ] ಉಂಟಾಗುವ [ತ್ವಂ] ನೀನು [ವಿಶ್ವಾಃ] ಸಮಗ್ರ [ಕೃಷ್ಟೀಃ] ಪ್ರಜೆಗಳನ್ನು [ಪ್ರಥಮಂ] ಮೊದಲು [ಅಧಿಥಾಃ] ಧಾರಣಮಾಡು [ಅಧ] ಅನಂತರ [ತ್ವಂ] ನೀನು [ಪ್ರವತಃ] [ಪ್ರತಿ] ಅಧೋಭಾಗಕ್ಕೆ/ದಲ್ಲಿ [ಆಶಾಯಾನಂ] ಮಲಗಿರುವವನಂತೆ [ಅಹಿಂ] ಮೇಘವನ್ನು [ವಜ್ರೇಣ] ಆಯುಧದಿಂದ ನಾಶಗೊಳಿಸುವ ರೀತಿಯಲ್ಲಿ [ವಿ, ವೃಶ್ಚಃ] ಶತ್ರುಗಳನ್ನು ನಾಶಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾವನು ಬ್ರಹ್ಮಚರ್ಯಾಶ್ರಮದಲ್ಲೇ ವಿದ್ಯಾ-ವಿನಯ ಹಾಗೂ ಸುಶೀಲನಾಗುವನೋ, ಎಲ್ಲರಲ್ಲೂ ಶ್ರೇಷ್ಠನಾಗುವನೋ ಮತ್ತು ರಾಜ್ಯಪಾಲನೆ ಮಾಡಲು, ಯುದ್ಧ ಮಾಡಲು ತಿಳಿದಿರುವನೋ ಅವನನ್ನೇ ರಾಜನನ್ನಾಗಿಸಿ ಸುಖಪಡೆಯಬೇಕು.

ಪ್ರಜಾಜನರು ರಾಜನನ್ನು ಸ್ವೀಕರಿಸುವ ವಿಧಾನವಿಲ್ಲಿದೆ.

**ಸತ್ರಾಹಣಂ ದಾಧೃಷಿಂ ತುಮ್ರಮಿಂದ್ರಂ ಮಹಾಮಪಾರಂ ವೃಷಭಂ ಸುವಜ್ರಮ್ ।**
**ಹಂತಾ ಯೋ ವೃತ್ರಂ ಸನಿತೋತ ವಾಜಂ ದಾತಾ ಮಘಾನಿ ಮಘವಾ ಸುರಾಧಾಃ ॥೮॥**

**ಪದಾರ್ಥ:-** [**ಯಃ**] ಯಾವನು [**ವೃತ್ರಂ**] ಮೇಘವನ್ನು ಸೂರ್ಯನು ಹೇಗೋ ಹಾಗೆ [**ಹಂತಾ**] ಶತ್ರುಗಳನ್ನು ಹನನ ಮಾಡುವವನು [**ವಾಜಂ**] ಅನ್ನಾದಿ ಸಂಪತ್ತನ್ನು [**ಸನಿತಾ**] ವಿಭಾಗಿಸುವವನು [**ಉತ್**] ಮತ್ತು [**ಮಘವಾ**] ಬಹುಧನ ಸಂಪನ್ನನು [**ಸುರಾಧಾಃ**] ಧರ್ಮಮಾರ್ಗದಿಂದ ಗಳಿಸುವವನು. [**ಮಘಾನಿ**] ಧನಗಳನ್ನು [**ದಾತಾ**] ದಾನ ಮಾಡುವವನು [**ಸತ್ರಾಹಣಂ**] ಸತ್ಯದಿಂದ ಅಸತ್ಯದ ನಾಶಮಾಡುವವನು [**ದಾಧೃಷಿಂ**] ಪ್ರಗಲ್ಭನಾದವವನನ್ನು [**ಮಹಾಂ**] ಅತಿಶಯ [**ಅಪಾರಂ**] ಮಿತಿಯಿಲ್ಲದ ವಿದ್ಯೆ ಪಡೆದವನು [**ತುಮ್ರಂ**] ಪ್ರೇರಣೆ ನೀಡುವವನು [**ವೃಷಭಂ**] ಬಲಿಷ್ಠನಾದವನನ್ನು [**ಸುವಜ್ರಂ**] ಶಸ್ತ್ರಾಸ್ತ್ರಗಳ ಪ್ರಯೋಗ ಮಾಡುವವನನ್ನೂ [**ಇಂದ್ರಂ**] ರಾಜನನ್ನಾಗಿ ಸ್ವೀಕರಿಸಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನಲ್ಲಿ ಪರಿಪೂರ್ಣವಿದ್ಯೆ, ಸತ್ಯನುಡಿ, ಪ್ರೌಢಿಮತೆ, ಸಾಮರ್ಥ್ಯ, ಶಸ್ತ್ರಾಸ್ತ್ರಗಳ ಪರಿಜ್ಞಾನ, ಎಲ್ಲರಿಗೂ ಅಭಯದಾನ ಮಾಡುವಂತಹ ಸಾಮರ್ಥ್ಯ ಇವುಗಳೆಲ್ಲವೂ ಇರುತ್ತದೆಯೋ ಅವನನ್ನೇ ಪ್ರಜೆಗಳು ತಮ್ಮ ರಾಜನನ್ನಾಗಿ ನೇಮಿಸಿಕೊಳ್ಳಬೇಕು.

ಈ ಮಂತ್ರದಲ್ಲಿ ರಾಜನು ಎಂತಹ ಅಮಾತ್ಯಾದಿ ಸೇವಕರನ್ನು ಸಂಗ್ರಹಿಸಿಕೊಳ್ಳಬೇಕೆಂಬ ವಿಚಾರವನ್ನು ತಿಳಿಸಲಾಗಿದೆ.

**ಅಯಂ ವೃತಶ್ಚಾತಯತೇ ಸಮೀಚೀ-ರ್ಯ ಆಜಿಷು ಮಘವಾ ಶೃಣ್ವ ಏಕಃ ।**
**ಅಯಂ ವಾಜಂ ಭರತಿ ಯಂ ಸನೋ-ತ್ಯಸ್ಯ ಪ್ರಿಯಾಸಃ ಸಖ್ಯೇ ಸ್ಯಾಮ ॥೯॥**

**ಪದಾರ್ಥ:-** [**ಯಃ**] ಯಾವನು [**ಅಯಂ**] ಈ ರಾಜನು [**ವೃತಃ**] ಸ್ವೀಕರಿಸಿದವನಾಗಿ [**ಚಾತಯತೇ**] ಎಲ್ಲರಿಗೂ ಚೈತನ್ಯ ತುಂಬುವನೋ [**ಮಘವಾ**] ಧನಸಂಪನ್ನನೋ [**ಏಕಃ**] ಒಬ್ಬನೇ [**ಆಜಿಷು**] ಯುದ್ಧಗಳಲ್ಲಿ [**ಸಮೀಚೀಃ**] ಸೇನೆಗಳನ್ನು [**ಭರತಿ**] ಪೋಷಣೆ ಮಾಡುವನೋ [**ಅಯಂ**] ಇವನು [**ವಾಜಂ**] ಜ್ಞಾನದ ಪುಷ್ಟಿಗೊಳಿಸುವನೋ [**ಯಂ**] ಯಾರನ್ನು ಯಥಾರ್ಥವಾದಿಯು [**ಸನೋತಿ**] ಸಂಪನ್ನಗೊಳಿಸುವನೋ [**ಶೃಣ್ವೇ**] ಅದೆಲ್ಲವನ್ನು ನಾನು ಕೇಳಿಸಿಕೊಳ್ಳುವೆನೋ [**ಅಸ್ಯ**] ಇವನ [**ಸಖ್ಯೇ**] ಮಿತ್ರಕರ್ಮದಲ್ಲಿ [**ಪ್ರಿಯಾಸಃ**] ನಾವು ಪ್ರಿಯರು [**ಸ್ಯಾಮ**] ಆಗೋಣ.

**ಭಾವಾರ್ಥ:-** ಯಾವನು ಸೇನೆಗಳಿಗೆ ಶಿಕ್ಷಣ ನೀಡುವನೋ, ಯುದ್ಧ ಸಮಯದಲ್ಲಿ ಉತ್ತಮ ರೀತಿಯಲ್ಲಿ ಸೇನಾಜನರನ್ನು ಹುರಿದುಂಬಿಸುವನೋ, ಯಾವನು ದೋಷಗಳನ್ನು ಎದುರಿನಲ್ಲೇ ಹೇಳುವನೋ ಅವನಿಂದ ಶಿಕ್ಷಣ ಪಡೆದು ಅವನಂತಹವರ ಸ್ನೇಹಮಾಡಿಕೊಂಡು ನಿನ್ನ ಸಮಗ್ರ ರಾಜಕಾರ್ಯವನ್ನು ಸಾಧಿಸು.

ರಾಜನು ರಾಜಶಾಸನ ಮಾಡುವ ವಿಧಾನವಿಲ್ಲಿ ಹೇಳಿದೆ.

**ಅಯಂ ಶೃಣ್ವೇ ಅಧ ಜಯನ್ನುತ ಘ್ನನ್ನ-ಯಮುತ ಪ್ರ ಕೃಣುತೇ ಯುಧಾ ಗಾಃ ।**
**ಯದಾ ಸತ್ಯಂ ಕೃಣುತೇ ಮನ್ಯುಮಿಂದ್ರೋ ವಿಶ್ವಂ ದೃಳ್ಹಂ ಭಯತ ಏಜದಸ್ಮಾತ್ ॥೧೦॥**

**ಪದಾರ್ಥ:-** [**ಅಯಂ**] ಈ ರಾಜನು [**ಘ್ನನ್**] ದುಷ್ಟರನ್ನು ಸಂಹರಿಸಬೇಕು [**ಉತ**] ಮತ್ತು [**ಯುಧಾ**] ಯುದ್ಧದಿಂದ [**ಜಯನ್**] ಶತ್ರುಗಳನ್ನು ಜಯಿಸಬೇಕು. [**ಗಾಃ**] ಭೂಮಿಯನ್ನು [**ಪ್ರ, ಕೃಣುತೇ**] ಉತ ಪುಷ್ಟಗೊಳಿಸಬೇಕು [**ಉತ**] ಮತ್ತು [**ಶೃಣ್ವ**] ರಾಜ್ಯವಾಳುವುದನ್ನು ನಾನು ಕೇಳಿಸಿಕೊಳ್ಳುವೆನು. [**ಯದಾ**] ಯಾವಾಗ [**ಅಯಂ**] ಇವನು [**ಸತ್ಯಂ**] ಸತ್ಯವ್ಯವಹಾರವನ್ನೇ [**ಕೃಣುತೇ**] ಮಾಡುತ್ತಾನೆ ಎಂದು ಆಗ [**ವಿಶ್ವಂ**] ಸಮಗ್ರ ರಾಜ್ಯವು [**ದೃಳ್ಹಂ**] ಧೃಡವಾಗಿ ನಿಲ್ಲುತ್ತದೆ. [**ಇಂದ್ರಃ**] ರಾಜನು [**ಮನ್ಯುಂ**] ಕೋಪ ಮಾಡುವನೋ [**ಅಧ**] ಅನಂತರ [**ಅಸ್ಮಾತ್**] ಈ ರಾಜನಿಂದ ಸ್ಥಿರ ರಾಜ್ಯವೂ [**ಕಂಪತೇ**] ಕಂಪಿಸುತ್ತದೆ; [**ಭಯತೇ**] ಹೆದರುತ್ತದೆ.

**ಭಾವಾರ್ಥ:-** ಯಾವನ ಉತ್ತಮ ಕೀರ್ತಿಯನ್ನು ನೀವೆಲ್ಲ ಕೇಳಿಸಿಕೊಳ್ಳುವಿರೋ, ಯಾವನು ರಾಜ್ಯಪಾಲನೆ ಮತ್ತು ಯುದ್ಧದಲ್ಲಿ ಚತುರನೂ ಸತ್ಯಾಚರಣೆಗೊಳಪಟ್ಟವನೂ, ಶಾಂತಿ ಪಾಲಕನೂ, ಸಜ್ಜನ ರಕ್ಷಕನೂ, ದುರ್ಜನ ನಾಶಕನೂ ಮುಂತಾಗಿ, ಆಗ ಯಾರೂ ಧರ್ಮಮಾರ್ಗ ತ್ಯಜಿಸಿ ಬೇರೆ ವ್ಯವಹಾರಗಳನ್ನು ಮಾಡಲಾರರು.

ರಾಜನು ಹೇಗೆ ವಿಜಯಾನಂದಗಳನ್ನು ಪಡೆಯುವನು ಎಂಬುದಿಲ್ಲಿ ಹೇಳಿದೆ.

**ಸಮಿಂದ್ರೋ ಗಾ ಅಜಯತ್ಸಂ ಹಿರಣ್ಯಾ ಸಮಶ್ವಿಯಾ ಮಘವಾ ಯೋ ಹ ಪೂರ್ವೀಃ ।**
**ಏಭಿರ್ನೃಭಿರ್ನೃತಮೋ ಅಸ್ಯ ಶಾಕೈ ರಾಯೋ ವಿಭಕ್ತಾ ಸಂಭರಶ್ಚ ವಸ್ವಃ ॥೧೧॥**

**ಪದಾರ್ಥ:-** [**ಯಃ**] ಯಾವನು [**ಮಘವಾ**] ಧನವಂತನು [**ಇಂದ್ರ**] ಶತ್ರುನಾಶಕನು [**ಏಭಿಃ**] ಇಂತಹ [**ನೃಭಿಃ**] ನಾಯಕರೊಂದಿಗೆ [**ನೃತಮಃ**] ಶ್ರೇಷ್ಠನಾಯಕನಾಗಿ [**ಗಾಃ**] ಭೂಮಿ ರಾಜ್ಯಗಳನ್ನು [**ಸಂ, ಅಜಯತ್**] ಉತ್ತಮ ರೀತಿಯಿಂದ ಜಯಿಸುವನು. [**ಅಶ್ವಿಯಾ**] ಅಶ್ವಾದಿ ಸೇನೆಯನ್ನು [**ಹಿರಣ್ಯಾ**] ಸುವರ್ಣಾದಿ ಧನಗಳನ್ನೂ [**ಸಂ**] ಉತ್ತಮವಾಗಿ ಗೆಲ್ಲುವನು. [**ಹ**] ಸುನಿಶ್ಚಯ [**ಪೂರ್ವೀಃ**] ಪ್ರಾಚೀನ ಪ್ರಜೆಗಳನ್ನು [**ಸಂ**] ಉತ್ತಮ ರೀತಿಯಲ್ಲಿ ಗೆಲ್ಲುವನು. [**ಅಸ್ಯ**] ಈ ಸೇನೆಯ [**ಶಾಕೈಃ**] ಶಕ್ತಿಯಿಂದ [**ರಾಯಃ**] ಧನದ [**ವಿಭಕ್ತಾ**] ವಿಭಾಗಿಸುವವನಾಗಿ [**ವಸ್ವಃ**] ಧನಸಂಪತ್ತನ್ನು [**ಚ**] ಇನ್ನಷ್ಟು [**ಸಂಭರಃ**] ಸಂಗ್ರಹಿಸುವನು.

**ಭಾವಾರ್ಥ:-** ಯಾರು ಉತ್ತಮ ಸಹಾಯಕರನ್ನು, ಉತ್ತಮ ಧನವನ್ನು ಪಡೆದಿರುವನೋ ಹಾಗೂ ಶತ್ರುಗಳನ್ನು ಜಯಿಸುವ ಮತ್ತು ರಾಜ್ಯದ ಸಂಪತ್ತನ್ನು ಯಥಾಯೋಗ್ಯ ವಿಭಜಿಸಿಕೊಡುವ ಕೌಶಲವನ್ನು ಅರಿತಿರುವನೋ ಅವನು ಸರ್ವತ್ರ ವಿಜಯಿಯಾಗಿ ಆನಂದಿಸುವನು.

ಪ್ರಜೆಗಳಲ್ಲಿ ಯಾರಿಗೆ ರಾಜ್ಯದ ಯೋಗ್ಯತೆ ಎಂದಿಲ್ಲಿ ಹೇಳಿದೆ.

**ಕಿಯತ್ಸ್ವಿದಿಂದ್ರೋ ಅಧ್ಯೇತಿ ಮಾತುಃ ಕಿಯತ್ಪಿತುರ್ಜನಿತುರ್ಯೋ ಜಜಾನ ।**
**ಯೋ ಅಸ್ಯ ಶುಷ್ಮಂ ಮುಹುಕೈರಿಯರ್ತಿ ವಾತೋ ನ ಜೂತಃ ಸ್ತನಯದ್ಭಿರಭ್ರೈಃ ॥೧೨॥**

**ಪದಾರ್ಥ:-** [**ಯಃ**] ಯಾವನು [**ಮುಹುಕೈಃ**] ಮತ್ತೆ ಮತ್ತೆ ಕಾರ್ಯ ಮಾಡುವವರಿಂದ [**ಅಸ್ಯ**] ಇದರ [**ಶುಷ್ಮಂ**] ಬಲವನ್ನು [**ಸ್ತನಯದ್ಭಿಃ**] ಶಬ್ದಮಾಡುತ್ತ [**ಅಭ್ರೈಃ**] ಮೇಘಗಳೊಂದಿಗೆ [**ಜೂತಃ**] ವೇಗ ಪಡೆದು [**ವಾತಃ**] [**ನ**] ಗಾಳಿಗೆ ಸಮಾನಾಗಿ [**ಇಯರ್ತಿ**] ಪ್ರಾಪ್ತನಾಗುವನು ಹಾಗೂ [**ಯಃ, ಸ್ವಿತ್**] ಯಾವನಾದರೂ [**ಇಂದ್ರಃ**] ತೇಜಸ್ವೀ [**ಮಾತುಃ**] ತಾಯಿಯ [**ಕಿಯತ್**] ಎಷ್ಟು [**ಜನಿತುಃ**] ಜನಕನಾದ [**ಪಿತುಃ**] ತಂದೆಯ [**ಕಿಯತ್**] ಎಷ್ಟು [**ಅದಿ, ಏತಿ**] ಉಪಕಾರ ಸ್ಮರಣೆ ಮಾಡುವನೋ [**ಜಜಾನ**] ಅವನೇ ರಾಜನಾಗುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ತಂದೆ ತಾಯಿಯರು ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು ಪ್ರತ್ಯುಪಕಾರ ಮಾಡುವವನೋ ಮತ್ತು ಮೋಡ-ವಾಯುಗಳಿಂದ ಪ್ರೇರಿತ ಮಿಂಚಿನಂತೆ ಬಲಪಡೆದು ಶತ್ರುಗಳನ್ನು ಜಯಿಸಿ ಕೀರ್ತಿ ಪಡೆದಿರುವನೋ ಅವನು ರಾಜನಾಗುವ ಯೋಗ್ಯತೆಯನ್ನು ಹೊಂದಿರುವನು.

ರಾಜನು ಉತ್ತಮಾನುತ್ತಮರಿಗೆ ಸತ್ಕಾರದಂಡವನ್ನು ಕೊಡುವ ವಿಚಾರವಿಲ್ಲಿ ಹೇಳಿದೆ.

**ಕ್ಷಿಯಂತಂ ತ್ವಮಕ್ಷಿಯಂತಂ ಕೃಣೋತೀ-ಯರ್ತಿ ರೇಣುಂ ಮಘವಾ ಸಮೋಹಮ್ ।**
**ವಿಭಂಜನುರಶನಿಮಾँ ಇವ ದ್ಯೌ-ರುತ ಸ್ತೋತಾರಂ ಮಘವಾ ವಸೌ ಧಾತ್ ॥೧೩॥**

**ಪದಾರ್ಥ:-** **[ಮಘವಾ]** ಧನವಂತನು **[ಸ್ತೋತಾರಂ]** ಸ್ತವನ ಮಾಡುವವನನ್ನು **[ವಸೌ]** ಧನದಲ್ಲಿ **[ಧಾತ್]** ಧಾರಣ ಮಾಡುವನು. ಹಾಗೆಯೇ **[ದ್ಯೌಃ]** ಬೆಳಕಿಗೆ ಸಮನಾಗಿ **[ಉತ್]** ಮತ್ತು **[ಅಶನಿಮಾನಿವ]** ಶಸ್ತ್ರಾಸ್ತ್ರಗಳಿರುವವನಂತೆ **[ವಿಭಂಜನುಃ]** ಶತ್ರುಗಳನ್ನು ಸಂಹರಿಸುವವನಾಗಿ **[ಮಘವಾ]** ಧನಸಂಪನ್ನನಾಗಿ **[ಕ್ಷಿಯಂತಂ]** ವಾಸಿಸುವವನಾಗಿ **[ಅಕ್ಷಿಯಂತಂ]** ವಾಸ ಮಾಡದವನಾಗಿರುವವನಿಗೆ **[ಕೃಣೋತಿ]** ಸ್ವೀಕರಿಸುವನೋ **[ಸಮೋಹಂ]** ಅಡಗಿಕೊಂಡಿರುವ **[ರೇಣುಂ]** ಅಪರಾಧವನ್ನು **[ಇಯರ್ತಿ]** ಪ್ರಾಪ್ತಗೊಳಿಸುವವನಿಗೆ **[ತ್ವಂ]** ನೀನು ಶಿಕ್ಷೆ ವಿಧಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಪರಾಧಿಗಳನ್ನು ದಂಡಿಸದೆ ಬೀಡಬೇಡ. ನೀನು ಯಜಮಾನನು ಹೇಗೆ ವಿದ್ವಾಂಸರನ್ನು ಯಜ್ಞದಲ್ಲಿ ವರಣ ಮಾಡಿ ಧನವನ್ನು ಕೊಟ್ಟು ಸುಖೀಗೊಳಿಸುವನೋ, ಹಾಗೆ ಶ್ರೇಷ್ಠರಾದ ಸಭಾಸದರನ್ನು ವರಣ ಮಾಡಿ ಸಂಪತ್ತನ್ನು ಕೊಟ್ಟು ಎಲ್ಲರನ್ನೂ ಸಂತೋಷಗೊಳಿಸು.

ರಾಜನು ವೇಗಗತಿಯ ಯಂತ್ರನಿರ್ಮಿಸಿ ದುಷಾನ್ವೇಷಣೆ ಮಾಡಬೇಕೆಂದಿಲ್ಲಿ ಹೇಳಿದೆ.

**ಅಯಂ ಚಕ್ರಮಿಷಣತ್ಸೂರ್ಯಸ್ಯ ನ್ಯೇತಶಂ ರೀರಮತ್ಸಸೃಮಾಣಮ್ । ಆ ಕೃಷ್ಣ ಈಂ**
**ಜುಹುರಾಣೋ ಜಿಘರ್ತಿ ತ್ವಚೋ ಬುಧ್ನೇ ರಜಸೋ ಅಸ್ಯ ಯೋನೌ ॥೧೪॥**

**ಪದಾರ್ಥ:-** **[ಅಯಂ]** ಇವನು **[ಸೂರ್ಯಸ್ಯ]** ಸೂರ್ಯಮಂಡಲದಂತೆ **[ಚಕ್ರಂ]** ಚಕ್ರವನ್ನು **[ಇಷಣಾತ್]** ಪಡೆಯುವನು **[ಸಸೃಮಾಣಂ]** ನಿರಂತರ ಪಡೆದುಕೊಳ್ಳುತ್ತ **[ಏತಶಂ]** ಕುದುರೆಯನ್ನು **[ನಿ, ರೀರಮತ್]** ರಮಿಸುವನು. **[ಕೃಷ್ಣಃ]** ಸೆಳೆಯುವವನು **[ಜುಹುರಾಣಃ]** ಕುಟಿಲಗತಿಯವನಿಗೆ ಸದೃಶವಾಗಿ **[ಈಂ]** ಜಲವನ್ನು **[ಆ, ಜಿಘರ್ತಿ]** ನಷ್ಟಗೊಳಿಸುವನು. **[ತ್ವಚಃ]** ವಾಣಿಯ ಸಂಬಂಧದಲ್ಲಿ **[ರಜಸಃ]** ಲೋಕ ಸಮೂಹ ಮತ್ತು **[ಅಸ್ಯ]** ಇದರ **[ಬುಧ್ನೇ]** ಅಂತರಿಕ್ಷ ಹಾಗೂ **[ಯೋನೌ]** ಮನೆಯಲ್ಲಿ ರಮಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಕಲಾ-ಕುಶಲತೆಯಿಂದ ಚಕ್ರಯಂತ್ರಗಳನ್ನು ನಿರ್ಮಿಸಿಕೊಂಡು ವೇಗಗತಿಯ ವಾಹನಗಳನ್ನು ಪಡೆದು ರಮಿಸುವರೋ ಅವರು ಕುಟಿಲತೆಯನ್ನು ತ್ಯಜಿಸಿ ಸಂಪತ್ಪಡೆದು ಸುಖಿಗಳಾಗುವರು.

ರಾಜ ದಂಡದ ಪ್ರಕರ್ಷತೆಯನ್ನಿಲ್ಲಿ ಹೇಳಿದೆ.

**ಅಸಿಕ್ನ್ಯಾಂ ಯಜಮಾನೋ ನ ಹೋತಾ ॥೧೫॥**

**ಪದಾರ್ಥ:-** **[ಯಜಮಾನಃ]** **[ನ]** ಸಂಗತಿಕರಣ ಮಾಡುವವನಿಗೆ ಸದೃಶನಾಗಿ **[ಅಸಿಕ್ನ್ಯಾಂ]** ರಾತ್ರಿಯಲ್ಲಿ ಭಯರಹಿತನಾಗಿ **[ಹೋತಾ]** ಸುಖದಾಯಕನಾಗಬೇಕು ಅಂದರೆ ನಿರಂತರ ಆನಂದಕರನಾಗುವನು.

**ಭಾವಾರ್ಥ:-** ಯಾವ ರಾಜನ ಪ್ರಜೆಗಳಲ್ಲಿ ಅಥವಾ ಪ್ರಾಣಿಗಳಲ್ಲಿ ಮಲಗಿದಾಗ ನಿದ್ರಿಸುವಾಗ ದಂಡದ ಭಯವು ಎಚ್ಚೆತ್ತುಕೊಳ್ಳುತ್ತದೆಯೋ ಆಗ ಯಾವನು ಅಭಯದಾಯಕನೋ ಅವನು ಎಲ್ಲಿಂದಲೂ ಭಯಭೀತನಾಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗವ್ಯಂತ ಇಂದ್ರಂ ಸಖ್ಯಾಯ ವಿಪ್ರಾ ಅಶ್ವಾಯಂತೋ ವೃಷಣಂ ವಾಜಯಂತಃ ।**
**ಜನೀಯಂತೋ ಜನಿದಾಮಕ್ಷಿತೋತಿ-ಮಾ ಚ್ಯಾವಯಾಮೋऽವತೇ ನ ಕೋಶಮ್ ॥೧೬॥**

**ಪದಾರ್ಥ:-** **[ಗವ್ಯಂತಃ]** ಗೋವುಗಳನ್ನು ಇಚ್ಛಿಸುವವನು **[ಅಶ್ವಾಯಂತಃ]** ಕುದುರೆಗಳನ್ನು ಇಚ್ಛಿಸುವವನು **[ವಿಪ್ರಾಃ]** ಬುದ್ಧಿವಂತರು **[ಸಖ್ಯಾಯ]** ಸ್ನೇಹ ಕರ್ಮಗಳಿಗೆ **[ವೃಷಣಂ]** ಸುಖ ವರ್ಷಕನು **[ಜನಿದಾಂ]** ಜನ್ಮದಾಯಕಳು **[ಅಕ್ಷಿತೋತಿಂ]** ಯಾರ ರಕ್ಷಣೆಯು ಕ್ಷೀಣಿಸುವುದಿಲ್ಲವೋ ಅವನನ್ನು **[ಅವತೇ]** ಕೂಪದಲ್ಲಿ **[ಕೋಶಂ]** **[ನ]** ಮೇಘದಂತೆ **[ಇಂದ್ರಂ]** ಸೂರ್ಯನಂತೆ ಪ್ರಕಾಶಮಾನ ರಾಜನನ್ನು **[ಆ, ಚ್ಯಾವಯಾಮಃ]** ಪ್ರಾಪ್ತಿಗೊಳಿಸಿಕೊಳ್ಳಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಯಾರಿಗೆ ಸುಖ-ಸಂಪತ್ತು ಪಡೆಯುವ ಇಚ್ಛೆಯಾಗುವುದೋ ಅವರು ಮೇಘದಂತೆ, ಧನದ ಮಳೆಗರೆಯುವ ರಾಜನ ಸ್ನೇಹಮಾಡಿ ಮೈತ್ರಿಯನ್ನು ಗ್ರಹಣ ಮಾಡಬೇಕು.

ಈಶ್ವರೋಪಾಸನೆಯ ವಿಷಯವಿಲ್ಲಿ ಹೇಳಿದೆ.

**ತ್ರಾತಾ ನೋ ಬೋಧಿ ದದೃಶಾನ ಆಪಿ-ರಭಿಖ್ಯಾತಾ ಮರ್ಡಿತಾ ಸೋಮ್ಯಾನಾಮ್ ।**
**ಸಖಾ ಪಿತಾ ಪಿತೃತಮಃ ಪಿತೃ್ಣಾಂ ಕರ್ತೇಮು ಲೋಕಮುಶತೇ ವಯೋಧಾಃ ॥೧೭॥**

**ಪದಾರ್ಥ:-** **[ನಃ]** ನಮ್ಮ **[ತ್ರಾತಾ]** ರಕ್ಷಕನು **[ದದೃಶಾನಃ]** ನೋಡಿಕೊಳ್ಳುವವನು **[ಆಪಿಃ]** ವ್ಯಾಪ್ತನಾಗಿ **[ಅಭಿಖ್ಯಾತಾ]** ಪ್ರಖ್ಯಾತನು **[ಮರ್ಡಿತಾ]** ಸುಖದಾಯಕನು **[ಸಖಾ]** ಮಿತ್ರನು **[ಪಿತಾ]** ಜನಕನು **[ಸೋಮ್ಯಾನಾಂ]** ಶಾಂತ್ಯಾದಿ ಗುಣವಿರುವವನು **[ಪಿತೃಣಾಂ]** ಪಾಲನೆ ಮಾಡುವವರಲ್ಲಿ **[ಪಿತೃತಮಃ]** ಅತಿಶಯ ಪಾಲಕನು **[ಕರ್ತಾ]** ಕರ್ತೃಪುರುಷನು **[ಲೋಕಂ]** ಲೋಕವನ್ನು **[ಉಷತೇ]** ಬಯಸುವವನಿಗೆ **[ಈಂ]** ಎಲ್ಲವನ್ನೂ **[ಉ]** **[ವಯೋಧಾಃ]** ಪ್ರಾಪ್ತಿಗೊಳಿಸುವವನು ಈಶ್ವರನು **[ಬೋಧಿ]** ಎಂದು ತಿಳಿಯಿರಿ.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಎಲ್ಲರಿಗೂ ದುಃಖನಾಶಕನೂ, ಸುಖಕಾರಕನೂ, ಸತ್ಯೋಪದೇಶಕನೂ ಉತ್ಪಾದಕರಿಗೂ ಉತ್ಪಾದಕನೂ, ಪಾಲಕರ ಪಾಲಕನೂ, ಸರ್ವಕರ್ಮ ವೀಕ್ಷಕನೂ, ನ್ಯಾಯಧೀಶನೂ ಆಗಿದ್ದು ಸರ್ವಜೀವ ಶರೀರ ಹಾಗೂ ಪದಾರ್ಥಗಳಲ್ಲಿ ವ್ಯಾಪ್ತನಾಗಿರುವನು. ಅದನ್ನರಿತು ಎಲ್ಲರೂ ಅವನ ಉಪಾಸನೆ ಮಾಡಬೇಕು.

ರಾಜ್ಯ ವೃದ್ಧಿ ಪಡಿಸುವ ಬಗ್ಗೆಯನ್ನಿಲ್ಲಿ ಹೇಳಿದೆ.

**ಸಖೀಯತಾಮವಿತಾ ಬೋಧಿ ಸಖಾ ಗೃಣಾನ ಇಂದ್ರ ಸ್ತುವತೇ ವಯೋ ಧಾಃ ।**
**ವಯಂ ಹ್ಯಾ ತೇ ಚಕೃಮಾ ಸಬಾಧ ಆಭಿಃ ಶಮೀಭಿರ್ಮಹಯಂತ ಇಂದ್ರ ॥೧೮॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾಯಕನೇ! **[ಸಖೀಯತಾಂ]** ಸ್ನೇಹಿತನಂತೆ ಆಚರಿಸುತ್ತ **[ಸಖಾ]** ಸ್ನೇಹಿತನೂ **[ಅವಿತಾ]** ರಕ್ಷಕನೂ **[ಗೃಣಾನಃ]** ಸ್ತಾವಕನೂ **[ಸ್ತುವತೇ]** ಸ್ತುತಿ ಮಾಡುವವನಿಗೆ **[ವಯಃ]** ಧನವನ್ನು **[ಧಾಃ]** ಧಾರಣ ಮಾಡಿಸುವವನೂ **[ಹಿ]** ಹಾಗೂ **[ತೇ]** ನಿನಗೆ **[ಆಭಿಃ]** ಈ **[ಶಮೀಭಿಃ]** ಕ್ರಿಯೆಗಳಿಂದ **[ಮಹಯಂತಃ]** ಹಿರಿಯರಂತೆ ಆಚರಿಸುತ್ತ **[ವಯಃ]** ಧನವನ್ನು **[ಚಕೃಮಾ]** ಮಾಡುವನೋ **[ಸಭಾಧಃ]** ಮಥಿಸುವವನಂತಿದ್ದು **[ಆ, ಬೋಧಿ]** ಚೆನ್ನಾಗಿ ತಿಳಿದುಕೋ.

**ಭಾವಾರ್ಥ:-** ರಾಜನೇ! ನೀನು ರಾಜ್ಯವನ್ನು ವಿಸ್ತರಿಸಲು ಬಯಸುತ್ತಿದರೆ ಪಕ್ಷಪಾತರಹಿತನಾಗಿ ಎಲ್ಲರೊಂದಿಗೆ ಸ್ನೇಹಭಾವದಿಂದ ವರ್ತಿಸು. ಶ್ರೇಷ್ಠಪುರುಷರ ರಕ್ಷಣೆ ಮಾಡಿ ದುಷ್ಟಪುರುಷರ ಸಂಹಾರ ಮಾಡು. ನಿನ್ನ ತೇಜಸ್ಸಿನ ಪ್ರಭಾವ ಬೆಳೆಸು.

ರಾಜನು ಎಂತಹವರನ್ನು ಪದಾಧಿಕಾರಿಗಳನ್ನಾಗಿ ನೇಮಿಸಿಕೊಳ್ಳಬೇಕು ಎಂಬ ವಿಚಾರವನ್ನಿಲ್ಲಿ ತಿಳಿಸಲಾಗಿದೆ.

**ಸ್ತುತ ಇಂದ್ರೋ ಮಘವಾ ಯದ್ಧ ವೃತ್ರಾ ಭೂರಿ ಣ್ಯೇಕೋ ಅಪ್ರತೀನಿ ಹಂತಿ ।**
**ಅಸ್ಯ ಪ್ರಿಯೋ ಜರಿತಾ ಯಸ್ಯ ಶರ್ಮ-ನ್ನಕಿರ್ದೇವಾ ವಾರಯಂತೇ ನ ಮರ್ತಾಃ ॥೧೯॥**

**ಪದಾರ್ಥ:-** [ಯಸ್ಯ] ಯಾವನ [ಶರ್ಮನ್] ಮನೆಯಲ್ಲಿ [ಪ್ರಿಯಃ] ಮನೋಹರವಾದ [ಜರಿತಾ] ಸ್ಥಾವಕನು [ಸ್ತುತಃ] ಸ್ತವನ ಮಾಡುತ್ತ [ಮಘವಾ] ಬಹು ಐಶ್ವರ್ಯಸಂಪನ್ನ [ಇಂದ್ರಃ] ಸೂರ್ಯನಂತೆ ಪ್ರತಾಪೀ ರಾಜನು [ಅಪ್ರತೀನಿ] ಗೋಚರವಾಗದ [ಭೂರೀಣಿ] ಬಹಳಷ್ಟು [ವೃತ್ರಾ] ಮೇಘಾವಯವಗಳನ್ನು [ಏಕಃ] ಒಬ್ಬನೇ [ಹಂತಿ] ಕತ್ತರಿಸುವನೋ ಹಾಗೆ, [ಯತ್] ಯಾವ ಅಸಹಾಯಕನು [ಅಸ್ಯ] ಈ ಸೇನೆಯಲ್ಲಿ [ಹ] ನಿಶ್ಚಯವಾಗಿ ಬಹುಜನ ಶತ್ರುಗಳನ್ನು ನಾಶಗೊಳಿಸುವನು [ದೇವಾಃ] ವಿದ್ಯಾವಂತರು [ನಕಿಃ] [ವಾರಯಂತೇ] ಅದನ್ನು ತಡೆಯುವುದಿಲ್ಲ. [ನ] [ಮರ್ತಾಃ] ಸಾಮಾನ್ಯ ಜನರೂ ಅದನ್ನು ತಡೆಯುವುದಿಲ್ಲ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನು ಸತ್ಯವಂತರೂ ಪ್ರಿಯಕಾರಕರೂ ಆದ ವಿದ್ಯಾವಂತರನ್ನು ರಾಜಕಾರ್ಯದಲ್ಲಿ ತೊಡಗಿಸಿಕೊಳ್ಳುವನೋ ಅವನನ್ನು ಎದುರಿಸಲು ಯಾರಿಂದಲೂ ಸಾಧ್ಯವಿಲ್ಲ.

ಪದಾಧಿಕಾರಿಗಳ ಸಹಯೋಗದಿಂದ ರಾಜನು ನ್ಯಾಯಮಾರ್ಗದಲ್ಲಿ ಪ್ರವೃತ್ತಿಗೊಳಿಸುವವನಾಗಬೇಕೆಂಬುದನ್ನಿಲ್ಲಿ ಹೇಳಿದೆ.

**ಏವಾ ನ ಇಂದ್ರೋ ಮಘವಾ ವಿರಪ್ಶೀ ಕರತ್ಸತ್ಯಾ ಚರ್ಷಣೀಧೃದನರ್ವಾ ।**
**ತ್ವಂ ರಾಜಾ ಜನುಷಾಂ ಧೇಹ್ಯಸ್ಮೇ ಅಧಿ ಶ್ರವೋ ಮಾಹಿನಂ ಯಜ್ಜರಿತ್ರೇ ॥೨೦॥**

**ಪದಾರ್ಥ:-** [ಯತ್] ಯಾವನು [ನಃ] ನಮಗಾಗಿ [ರಾಜಾ] ಪ್ರಕಾಶಮಾನನಾಗಿ [ಮಘವಾ] ಧನದಾಯಕನಾಗಿ [ವಿರಪ್ಶೀ] ಜ್ಯೇಷ್ಠರಾದ [ಚರ್ಷಣೀಧೃತ್] ಶ್ರೇಷ್ಠ ಮನುಷ್ಯರನ್ನು ಸ್ವೀಕರಿಸುವವನೋ, [ಅನರ್ವಾ] ಅಶ್ವರಹಿತನಾದ [ಇಂದ್ರಃ] ರಾಜನಾದ [ತ್ವಂ] ನೀನು [ಸತ್ಯಾ] ಅವಿನಾಶಕ ಕಾರ್ಯಗಳನ್ನು [ಕರತ್] ಮಾಡು. [ಏವಾ] ಅಂತಹ ನೀನು [ಜನುಷಾಂ] ಜನ್ಮ ತಳೆದಿರುವ [ಅಸ್ಮೇ] ನಮಗೆ [ಮಾಹಿನಂ] ಶ್ರೇಷ್ಠವಾದ [ಶ್ರವಃ] ಅನ್ನವನ್ನು [ಅಧಿ, ಧೇಹಿ] ಅತಿಶಯವಾಗಿ ಕೊಡಿಸು. [ಜರಿತ್ರೇ] ಸ್ತುತಿ ಮಾಡುವವನಿಗೂ ಕೊಡಿಸು.

**ಭಾವಾರ್ಥ:-** ಮನುಷ್ಯರೇ! ಯಾರು ಅನ್ಯಾಯ ಮಾರ್ಗದಲ್ಲಿ ತೊಡಗಿರುವ ರಾಜನನ್ನು ಯಾರು ತಡೆಯುವರೋ ಅವರೇ ಸತ್ಯಪ್ರಚಾರಕರಾಗುವರು, ಅತಿಶಯ ಸುಖಿಗಳಾಗುವರು.

ಅಮಾತ್ಯಾದಿಗಳ ಕಾರ್ಯ ಪ್ರವೃತ್ತಿಯನ್ನಿಲ್ಲಿ ಹೇಳಿದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಽ) ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೨೧॥**

**ಪದಾರ್ಥ:-** [ಹರಿವಃ] ಅಶ್ವವಂತನಾದ [ಇಂದ್ರ] ಐಶ್ವರ್ಯವಂತ ರಾಜನೇ! ನೀನು [ಗೃಣಾನಃ] ಪ್ರಶಂಸೆ ಮಾಡುವವನಾಗಿ [ಜರಿತ್ರೇ] ಸ್ತುತಿಮಾಡುವವನಿಗೆ [ನದ್ಯಃ] [ನ] ನದಿಗೆ ಸಮವಾಗಿ [ಇಷಂ] ಅನ್ನಾದಿ ಪದಾರ್ಥಗಳನ್ನು

[ನು] ಶೀಘ್ರವಾಗಿ [ಪೀಪೇಃ] ವೃದ್ಧಿಗೊಳಿಸುವೆ. [ನು] ಮತ್ತು [ಸ್ತುತಃ] ಎಲ್ಲರಿಂದ ಪ್ರಶಂಸೆ [ಅಕಾರಿ] ಮಾಡಲ್ಪಟ್ಟವನಾಗಿ [ತೇ] ನಿನಗೋಸ್ಕರ [ನವ್ಯಂ] ಹೊಸ ಹೊಸ [ಬ್ರಹ್ಮ] ಅಸಂಖ್ಯಾತ ಧನವನ್ನು [ಸದಾಸಾಃ] ಸೇವಕರಿಂದೊಡಗೂಡಿ [ಧಿಯಾ] ಬೌದ್ಧಿಕ ಕರ್ಮದಿಂದ [ರಥ್ಯಃ] ವಾಹನಗಳಿಗಾಗಿ ಮಾರ್ಗವು ಹೇಗೋ ಹಾಗೆ [ಸ್ಯಾಮ] ತೆರಿಗೆ ಕೊಡುವವರಾಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಪ್ರಶಂಸಿತನಾಗಿ ನದಿಯಂತೆ ಪ್ರಜೆಗಳನ್ನು ಸಂತೃಪ್ತಿಗೊಳಿಸುವವನಾಗಿ ಕುದುರೆಗೆ ಸಮನಾಗಿ ಸ್ಥಳದಿಂದ ಸ್ಥಳಕ್ಕೆ ತಲುಪುವವನಾಗಿ ಎಲ್ಲರಿಗೂ ಸ್ವಾಮಿ ಎನಿಸಿಕೊಂಡು ತನ್ನ ಅಧಿಕಾರಿ ನೌಕರರೊಂದಿಗೆ ರಾಜ್ಯವಾಳುವನೋ, ನಾವು ಅವನಿಗೆ ಅನುಕೂಲಕರವಾಗಿ ವರ್ತಿಸುವವರಾಗಿ ಸಕಾಲದಲ್ಲಿ ತೆರಿಗೆಗಳನ್ನು ಕೊಟ್ಟು ಎಲ್ಲರೂ ನಿರಂತರ ಸುಖಿಗಳಾಗೋಣ.

ಈ ಸೂಕ್ತದಲ್ಲಿ ಇಂದ್ರ, ರಾಜ, ಪ್ರಜೆ, ಭೃತ್ಯ ಇವರೆಲ್ಲರ ಗುಣಗಳನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಹದಿನೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೧೮

ಮಂತ್ರಸಂಖ್ಯೆ ೧೩ । ವಾಮದೇವ ಋಷಿಃ । ಇಂದ್ರಾದಿತೀ ದೇವತೆ । ೧, ೮, ೧೨ ತ್ರಿಷ್ಟುಪ್, ೫-೭, ೯-೧೧ ನಿಚೃತ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಪಂಕ್ತಿಃ, ೩, ೪ ಭುರಿಕ್ ಪಂಕ್ತಿಃ, ೧೩ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಶ್ರೇಷ್ಠ ಮನುಷ್ಯರಿಗೆ ಸನ್ಮಾರ್ಗೋಪದೇಶವನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಅಯಂ ಪಂಥಾ ಅನುವಿತ್ತಃ ಪುರಾಣೋ ಯತೋ ದೇವಾ ಉದಜಾಯಂತ ವಿಶ್ವೇ ।**
**ಅತಶ್ಚಿದಾ ಜನಿಷೀಷ್ಟ ಪ್ರವೃದ್ಧೋ ಮಾ ಮಾತರಮಮುಯಾ ಪತ್ತವೇ ಕಃ ॥೧॥**

**ಪದಾರ್ಥ:-** [ಯತಃ] ಯಾವನಿಂದ/ಯಾವುದರಿಂದ [ವಿಶ್ವೇ] ಸಮಗ್ರ [ದೇವಾಃ] ವಿದ್ಯಾವಂತರು [ಉದಜಾಯಂತ] ಉತ್ತಮರೇ ಆಗಿರುವರೋ [ಅಯಂ] ಅಂತಹ ಈ [ಅನುವಿತ್ತಃ] ಅನುಕೂಲತೆಯನ್ನು ಪಡೆದಿರುವ [ಪುರಾಣಃ] ಪ್ರಾಚೀನ ಕಾಲದಿಂದಲೂ ಸಿದ್ಧವಾದ [ಪಂಥಾಃ] ಮಾರ್ಗವಿದೆಯೋ ಅದರಲ್ಲಿ [ಪ್ರವೃದ್ಧಃ] ಬೆಳೆದ [ಜನಿಷೀಷ್ಟ] ಉತ್ಪನ್ನನಾಗುವನೋ [ಅತಃ] ಆ ಕಾರಣದಿಂದಲೇ [ಚಿತ್] ನೀನು [ಅಮುಯಾ] ಈ ಉತ್ಪತ್ತಿಯಿಂದಲೇ [ಮಾತರಂ] ಜನನಿಯನ್ನು [ಪತ್ತವೇ] ಪಡೆದುಕೊಳ್ಳುವುದನ್ನು [ಮಾ] [ಆ, ಕಃ] ಸಾಧ್ಯವೆಂಬುದನ್ನು ಮರೆಯದಿರು.

**ಭಾವಾರ್ಥ:-** ಮನುಷ್ಯರೇ! ಯಥಾರ್ಥ ನುಡಿಯುವ ಮನುಷ್ಯರು ಯಾವ ದಾರಿಯನ್ನವಲಂಬಿಸುವರೋ ನೀವೂ ಅದನ್ನೇ ಅವಲಂಬಿಸಿ ನಡೆಯಿರಿ. ಎಷ್ಟೇ ದೊಡ್ಡವರಾಗಿ ಬೆಳೆದರೂ ತಾಯಿಯನ್ನವಲಂಬಿಸಿ ಬೆಳೆದಿರುವೆವೆಂಬುದನ್ನು ಮರೆಯದಿರಿ. ಎಂದೂ ಜನನಿಯನ್ನು ಅವಮಾನಿಸದಿರಿ.

ಬೇರೆ ದೃಷ್ಟಾಂತದಿಂದ ಅದೇ ವಿಷಯವನ್ನಿಲ್ಲಿ ಹೇಳಿದೆ.

**ನಾಹಮತೋ ನಿರಯಾ ದುರ್ಗಹೈತ-ತ್ತಿರಶ್ಚತಾ ಪಾರ್ಶ್ವಾನ್ನಿರ್ಗಮಾಣಿ ।**
**ಬಹೂನಿ ಮೇ ಅಕೃತಾ ಕರ್ತ್ವಾನಿ ಯುಧ್ಯೈ ತ್ವೇನ ಸಂ ತ್ವೇನ ಪೃಚ್ಛೈ ॥೨॥**

**ಪದಾರ್ಥ:-** [**ಅಹಂ**] ನಾನು [**ದುರ್ಗಃ**] ದುಃಖದಿಂದುಂಟಾಗುವ ಎಲ್ಲವನ್ನೂ ನಾಶಗೊಳಿಸುವವನು [**ನ**] ಆಗಲಾರೆನು [**ಪಾರ್ಶ್ವಾತ್**] ಪಾಶದಿಂದ [**ನಿಃ ಗಮಾನಿ**] ಹೊರಟು ಹೋಗುವೆನು. [**ಮೇ**] ನನ್ನ [**ಬಹೂನಿ**] ಬಹಳಷ್ಟು [**ಅಕೃತಾ**] ಮಾಡದೇ ಇರುವ [**ಕರ್ತ್ವಾನಿ**] ಮಾಡಲೇಬೇಕಾದ ಕರ್ಮವನ್ನು [**ತಿರಶ್ಚತಾ**] ತಿರುಚಿ ಹಾಕುವುದರಿಂದ [**ತ್ವೇನ**] ಯಾವುದರಿಂದ [**ಯುಧ್ಯೈ**] ಯುದ್ಧ ಮಾಡಲಿ, [**ತ್ವೇನ**] ಮತ್ತಾವುದರಿಂದ [**ಸಂ, ಪೃಚ್ಛೈ**] ಪ್ರಶ್ನಿಸಲಿ. [**ಅತಃ**] ಆದ್ದರಿಂದ [**ಏತತ್**] ಹಿಂದೆ ಹೇಳಿದ್ದೆಲ್ಲವನ್ನೂ [**ನಿಹಿ**] [**ಅಯ**] ಅತಿಶಯವಾಗಿ ಪ್ರಾಪ್ತವಾಗಲಿದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಹೇಗೆ ನಾನು ಕರ್ಮಗಳನ್ನು ಮಾಡುವುದಿಲ್ಲವೋ, ಮಾಡಬಾರದ್ದನ್ನು ಮಾಡಿ ಉಳಿಸಿಕೊಳ್ಳುವುದಿಲ್ಲವೋ, ನನ್ನೊಂದಿಗೆ ಯುದ್ಧಮಾಡಲು ಇಚ್ಛಿಸುವವನೊಂದಿಗೆ ಯುದ್ಧರಂಗದಲ್ಲಿ ಕೇಳಬೇಕಾದ್ದನ್ನು ಕೇಳುವೆನೋ ಅದೆಲ್ಲವನ್ನು ನೀನೂ ಮಾಡು.

ರಾಜನಿಗೆ ಸೇನೆ ಸಂರಕ್ಷಣೆಯ ವಿಷಯವನ್ನಿಲ್ಲಿ ಹೇಳಿದೆ.

**ಪರಾಯತೀಂ ಮಾತರಮನ್ವಚಷ್ಟ ನ ನಾನು ಗಾನ್ಯನು ನೂ ಗಮಾನಿ ।**
**ತ್ವಷ್ಟುರ್ಗೃಹೇ ಅಪಿಬತ್ ಸೋಮಮಿಂದ್ರಃ ಶತಧನ್ಯಂ ಚಮ್ವೋಃ ಸುತಸ್ಯ ॥೩॥**

**ಪದಾರ್ಥ:-** [**ಇಂದ್ರಃ**] ಸೇನೇಶನು [**ತ್ವಷ್ಟುಃ**] ಬೆಳಕಿನ [**ಗೃಹೇ**] ಸ್ಥಾನದಲ್ಲಿ [**ಸುತಸ್ಯ**] ಸಂಪತ್ತಿನಿಂದ ಯುಕ್ತವಾದ [**ಶತಧನ್ಯಂ**] ಅಸಂಖ್ಯಾತ ಧನವನ್ನು [**ಸೋಮಂ**] ಓಷಧಿ ರಸವನ್ನು [**ಚಮ್ವೋಃ**] ಸೇನೆಗಳ ಮಧ್ಯದಲ್ಲಿ [**ಅಪಿಬತ್**] ಕುಡಿಯುವನು. [**ಪರಾಯತೀಂ**] ಸಾಯಿಸುವವಳಾದ [**ಮಾತರಂ**] ಮಾತೆಯನ್ನು [**ನ**] [**ಅನು, ಅಚಷ್ಟ**] ಹೇಗೆ ಪ್ರಕಟಿಸಲಾಗುವುದಿಲ್ಲವೋ ಹಾಗೆ ಮಾಡುವೆನು. [**ನು**] ಶೀಘ್ರವಾಗಿ [**ಅನು, ಗಾನಿ**] ಹಿಂದಿರುಗುವೆನು. [**ನ**] [**ಅನು, ಗಮಾನಿ**] ಹಿಂದಿರುಗುವುದೂ ಇಲ್ಲ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಸೇನಾನಾಯಕನು ರಾಜ ಗೃಹದಲ್ಲಿ ಗೌರವವನ್ನು ಪಡೆದು ನಿಯಮಿತ ಆಹಾರ ವಿಹಾರಗಳಿಂದ ಪೂರ್ಣ ಬಲವನ್ನೂ ಪಡೆದುಕೊಂಡು ತನ್ನ ಮತ್ತು ಶತ್ರುಗಳ ಎರಡೂ ಸೇನೆಗಳ ಮಧ್ಯದಲ್ಲಿ ವಾದವಿವಾದಗಳನ್ನು ನಾಶಗೊಳಿಸಿ ಅಥವಾ ಯುದ್ಧ ಮಾಡಿ ಸದಾ ವಿಜಯಿಯಾಗುವನು. ರೋಗಗ್ರಸ್ತ ಮಾತೆಯನ್ನು ಅವಳ ಮಕ್ಕಳು ಸೇವೆ ಮಾಡುವ ರೀತಿಯಲ್ಲಿ ಸೇನೆಯ ಸೇವೆಯನ್ನು ಮಾಡುತ್ತ ನ್ಯಾಯವನ್ನನುಸರಿಸಿ ಮುನ್ನಡೆಯುವನು.

ರಾಜನಿಗೆ ಸನ್ಮಾರ್ಗೋಪದೇಶವನ್ನಿಲ್ಲಿ ಮಾಡಲಾಗಿದೆ.

**ಕಿಂ ಸ ಋಧಕ್ ಕೃಣವದ್ಯಂ ಸಹಸ್ರಂ ಮಾಸೋ ಜಭಾರ ಶರದಶ್ಚ ಪೂರ್ವೀಃ ।**
**ನಹೀ ನ್ವಸ್ಯ ಪ್ರತಿಮಾನಮಸ್ತ್ಯ-ಂತರ್ಜಾತೇಷೂತ ಯೇ ಜನಿತ್ವಾಃ ॥೪॥**

**ಪದಾರ್ಥ:-** [**ಯೇ**] ಯಾರು [**ಜನಿತ್ವಾಃ**] ಜನ್ಮ ಪಡೆದು [**ಅಂತಃ**] ಮಧ್ಯದಲ್ಲಿ [**ಜಾತೇಷು**] ಉತ್ಪನ್ನವಾದ ಪದಾರ್ಥಗಳಲ್ಲಿ [**ಪೂರ್ವೀಃ**] ಅನಾದಿಕಾಲದಿಂದ ಸಿದ್ಧವಾದ [**ಶರದಃ**] ಋತುಮಾನಗಳನ್ನು ತಿಳಿದಿರುವರೋ [**ಉತ**] ಮತ್ತು [**ಅಸ್ಯ**] ಇದರ [**ಪ್ರತಿಮಾನಂ**] ಪರಿಮಾಣವು [**ನಹಿ**] [**ಅಸ್ತಿ**] ಇರುವುದಿಲ್ಲವೋ [**ಮಾಸಃ**] ಚೈತ್ರಾದಿ ತಿಂಗಳುಗಳನ್ನು [**ಜಭಾರ**] ಪೋಷಣೆ ಮಾಡುವವನೋ [**ಯಂ**] ಯಾವುದನ್ನು [**ಸಹಸ್ರಂ**] ಸಾವಿರಾರು [**ಋಧಕ್**] ನೈಜತೆಯನ್ನು [**ಕೃಣವತ್**] ಪ್ರಕಟಿಸುವವನೋ [**ಸಃ**] ಅವನು [**ಚ**] ಮತ್ತು [**ಕಿಂ**] ಯಾವುದನ್ನು [**ನು**] ಪಡೆಯಲಾರನು?

**ಭಾವಾರ್ಥ:-** ಮನುಷ್ಯರೇ! ಕಾಲವು ಹೇಗೆ ಋತು, ಮಾಸಗಳೆಂಬ ಅವಯವಗಳಿಂದ ಕೂಡಿರುತ್ತದೆಯೋ, ಅದೇ ರೀತಿ ನೀನು ಅಂತವೇ ಇಲ್ಲದ ಪ್ರಪಂಚದಲ್ಲಿ ಉತ್ಪನ್ನರಾದವರನ್ನು ಭಾಗಶಃ ಅಳೆಯುವವರಾಗಿರುವಿರಿ. ಅದನ್ನರಿತು ಅಳೆಯುವವರಾಗಿರಿ.

ಗೌರವಿಸುವ ತಾಯಿಯು ಪಾಲನೆ ಮಾಡುವ ವಿಷಯವನ್ನು ಈ ಮಂತ್ರದಲ್ಲಿ ಹೇಳಿದೆ.

**ಅವದ್ಯಮಿವ ಮನ್ಯಮಾನಾ ಗುಹಾಕ-ರಿಂದ್ರಂ ಮಾತಾ ವೀರ್ಯೇಣಾ ನ್ಯೃಷ್ಟಮ್ ।**

**ಅಥೋದಸ್ಥಾತ್ ಸ್ವಯಮತ್ಕಂ ವಸಾನ ಆ ರೋದಸೀ ಅಪೃಣಾಜ್ಜಾಯಮಾನಃ ॥೫॥**

**ಪದಾರ್ಥ:-** [ಮನ್ಯಮಾನಾ] ಆದರಿಸಲ್ಪಟ್ಟ/ಗೌರವಿಸಲ್ಪಟ್ಟ [ಮಾತಾ] ಜನನಿಯು [ಗುಹಾ] ಬುದ್ಧಿಯಲ್ಲಿ [ವೀರ್ಯೇಣ] ಪರಾಕ್ರಮದಿಂದ [ನ್ಯೃಷ್ಟಂ] ಅತಿಯಾಗಿ ಪ್ರಾಪ್ತನಾದ [ಇಂದ್ರಂ] ರಾಜನನ್ನು [ಅವದ್ಯಮಿವ] ಅನಿಂದ್ಯನಿಗೆ ಸದೃಶನಾಗಿ [ಅಕಃ] ಮಾಡುವಳೋ ಹಾಗೆ [ಜಾಯಮಾನಃ] ಉತ್ಪನ್ನನಾದ ಸೂರ್ಯನು [ರೋದಸೀ] ಭೂಮ್ಯಂತರಿಕ್ಷಗಳ [ಆ, ಅಪೃಣಾತ್] ಪಾಲನೆ ಮಾಡುವಂತೆ [ಅತ್ಕಂ] ಕೂಪವನ್ನು [ವಸಾನಃ] ಆಚ್ಛಾದನ ಮಾಡುವವನು [ಸ್ವಯಂ] ತಾನೇ [ಉತ್, ಅಸ್ಥಾತ್] ಮೇಲಕ್ಕೆದ್ದು ಬರುವನು. [ಅಥ] ಆಮೇಲೆ ಎಲ್ಲವನ್ನೂ ರಕ್ಷಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಭೂಮ್ಯಂತರಿಕ್ಷಗಳಿಗೆ ಚೇತನ ನೀಡುವಂತೆ ತಾಯಿಯು ಸಂತಾನಗಳಿಗೆ ಚೇತನ ನೀಡುವಳು. ದುಷ್ಟಾಚರಣೆಗಳನ್ನು ದೂರ ಮಾಡಿ ದೋಷವೆಂಬ ಕೂಪವನ್ನು ಮುಚ್ಚುವಳು. ಅದರಿಂದ ಅವರು ಶ್ರೇಷ್ಠರಾಗುವರು.

ಮೋಡದ ಕಾರ್ಯವನ್ನಿಲ್ಲಿ ತಿಳಿಸಲಾಗಿದೆ.

**ಏತಾ ಅರ್ಷಂತ್ಯಲಲಾಭವಂತೀ-ರ್ಋತಾವರೀರಿವ ಸಂಕ್ರೋಶಮಾನಾಃ ।**

**ಏತಾ ವಿ ಪೃಚ್ಛ ಕಿಮಿದಂ ಭನಂತಿ ಕಮಾಪೋ ಅದ್ರಿಂ ಪರಿಧಿಂ ರುಜಂತಿ ॥೬॥**

**ಪದಾರ್ಥ:-** [ಏತಾಃ] ಈ ನದಿಗಳು [ಋತಾವರೀರಿವ] ಪ್ರಾತಃಕಾಲಗಳಿಗೆ ಸದೃಶ [ಸಂಕ್ರೋಶಮಾನಾಃ] ಗರ್ಜಿಸುವವುಗಳಾಗಿ [ಅಲಲಾಭವಂತೀಃ] ಅಲ್ಲೋಲ-ಕಲ್ಲೋಲಗೊಳ್ಳುತ್ತ [ಅರ್ಷಂತಿ] ಚಲಿಸುತ್ತವೆ. [ಏತಾಃ] ಇವುಗಳು [ಇದಂ] ಈ [ಭನಂತಿ] ಧ್ವನಿಗಯ್ಯುತ್ತ [ವಿ, ಪೃಚ್ಛ] ವಿಶೇಷ ರೀತಿಯಲ್ಲಿ ಪ್ರಶ್ನಿಸುತ್ತ [ಆಪಃ] ಜಲವನ್ನು [ಕಂ] ಯಾರನ್ನು [ಪರಿಧಿಂ] ಸುತ್ತುವರಿದು [ಅದ್ರಿಂ] ಮೇಘವನ್ನು [ಋಜಂತಿ] ಭಜಿಸುತ್ತವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ನದಿಗಳು ಮೇಘದ ಸುತೆಯರು. ಅವುಗಳು ನದಿತಟವನ್ನು ಸೇವಿಸುತ್ತವೆ. ಅವ್ಯಕ್ತ ಶಬ್ದಗಳನ್ನು ಮಾಡುತ್ತವೆ. ಉಷೆಯಂತೆ ಚಲಿಸುತ್ತವೆ. ಅದೇರೀತಿ ಸೇನೆಯೂ ಶತ್ರುಗಳ ಅಭಿಮುಖವಾಗಿ ಚಲಿಸಲಿ.

ಮತ್ತೆ ಮೋಕ್ಷ ವಿಷಯವನ್ನು ಇಲ್ಲಿ ಹೇಳಲಾಗಿದೆ.

**ಕಿಮು ಷ್ವಿದಸ್ಮೈ ನಿವಿದೋ ಭನಂತೇ-ಂದ್ರಸ್ಯಾವದ್ಯಂ ದಿಧಿಷಂತ ಆಪಃ ।**

**ಮಮೈತಾನ್ ಪುತ್ರೋ ಮಹತಾ ವಧೇನ ವೃತ್ರಂ ಜಘನ್ವಾ ಅಸೃಜದ್ವಿ ಸಿಂಧೂನ್ ॥೭॥**

**ಪದಾರ್ಥ:-** **[ಮಮ]** ನನ್ನ ಮಗನ **[ಇಂದ್ರಸ್ಯ]** ಸೂರ್ಯಸಂಬಂಧದ **[ನಿವಿದಃ]** ವಿದ್ಯಾಪೂರ್ಣ ವಾಣಿಯು **[ಅಸ್ಮೈ]** ಈ ಮೇಘಕ್ಕಾಗಿ **[ಕಿಂ]** ಏನು **[ಉ]** ಮತ್ತು **[ಸ್ವಿತ್]** ಏಕೆ **[ಭನಂತ]** ಶಬ್ದ ಮಾಡುತ್ತವೆ. **[ಆಪಃ]** ನೀರುಗಳು **[ಅವದ್ಯಂ]** ನಿಂದ್ಯವಾದ **[ದಿಧಿಷಂತೆ]** ಶಬ್ದಮಾಡುತ್ತವೆ. **[ಪುತ್ರಃ]** ನನ್ನ ಸಂತಾನವು **[ಮಹತಾ]** ಅತಿಶಯ **[ವಧೇನ]** ವಧೆಯಿಂದ **[ಏತಾನ್]** ಇವುಗಳನ್ನು **[ವೃತ್ರಂ]** ಮೇಘದ **[ಜಘನ್ವಾನ್]** ನಾಶಕ ಸೂರ್ಯನು **[ಸಿಂಧೂನ್]** ನದಿಗಳನ್ನು **[ವಿ, ಅಸೃಜತ್]** ಉತ್ಪನ್ನಗೊಳಿಸುವನು?

**ಭಾವಾರ್ಥ:-** ಈ ಮಂತ್ರದಲ್ಲಿ ಅದಿತಿ, ಸೂರ್ಯ ಮೇಘಗಳ ಉದಾಹರಣೆಯ ಮೂಲಕ ಸೇನೆ, ಸೇನಾಧ್ಯಕ್ಷ ಮತ್ತು ರಾಜನ ಕೆಲಸಗಳನ್ನು ವರ್ಣಿಸಲಾಗಿದೆ. ಅಂತರಿಕ್ಷದ ಮಗನಂತಿರುವ ಸೂರ್ಯನು ಮೇಘವನ್ನು ನಾಶಮಾಡಿ ನದಿಗಳನ್ನು ಹರಿಸುವನೋ ಹಾಗೆ ವಿದ್ಯಾವಂತನು ಶಿಕ್ಷಿತಪುತ್ರರಂತಿರುವ ಸೇನೆಯ ಅಧ್ಯಕ್ಷನು ಶತ್ರುಗಳನ್ನು ನಾಶಗೊಳಿಸಿ ಸಂಪತ್ತನ್ನು ಪ್ರಾಪ್ತಿಗೊಳಿಸುತ್ತಾನೆ.

ರಾಜನ ವಿಷಯವಿಲ್ಲಿ ಹೇಳಿದೆ.

**ಮಮಚ್ಚನ ತ್ವಾ ಯುವತಿಃ ಪರಾಸ ಮಮಚ್ಚನ ತ್ವಾ ಕುಷವಾ ಜಗಾರ ।**
**ಮಮಚ್ಚಿದಾಪಃ ಶಿಶವೇ ಮಮೃಡ್ಯು-ರ್ಮಮಚ್ಚಿದಿಂದ್ರಃ ಸಹಸೋದತಿಷ್ಠತ್ ॥೮॥**

**ಪದಾರ್ಥ:-** **[ಯುವತಿಃ]** ತುಂಬು ಯೌವನದ ಕನ್ಯೆಯು **[ತ್ವಾ]** ನಿನ್ನನ್ನು **[ಮಮತ್]** ಮದಯುಕ್ತಗೊಳಿಸುತ್ತ **[ಚನ]** ಹಾಗೂ **[ಪರಾಸ]** ಪರಾಙ್ಮುಖ ಮಾಡುವಳು. **[ಮಮತ್]** ಪ್ರಮಾದಯುಕ್ತಗೊಳಿಸುತ್ತ **[ಕುಷವಾ]** ನಿಕೃಷ್ಟ ಪ್ರೇರಣೆ ನೀಡುವವಳಾಗಿ **[ತ್ವಾ]** ನಿನ್ನನ್ನು **[ಚನ]** ಮತ್ತೂ **[ಜಗಾರ]** ನುಂಗಿಬಿಡುವಳು. ಅವಳ ಸಂಗತ್ಯಾಗ ಮಾಡು. **[ಮಮತ್]** ಮದೋನ್ಮತ್ತಗೊಳಿಸುತ್ತ **[ಆಪಃ]** ನೀರಿನಂತಿರುವ ತಾಯಿಯಿಂದ **[ಚಿತ್]** ಹೇಗೋ ಹಾಗೆ **[ಶಿಶವೇ]** ಮಗನಿಗಾಗಿ **[ಮಮೃಡ್ಯುಃ]** ಸುಖಕೊಡುವಳು **[ಮಮತ್]** ಸುಖಕೊಡುವನೋ **[ಚಿತ್]** ಎಂಬಂತೆ ಅವಳು **[ಇಂದ್ರಃ]** ಸೂರ್ಯನಿಗೆ ಸದೃಶವಾಗಿ **[ಸಹಸಾ]** ಬಲದಿಂದ **[ಉತ್, ಅತಿಷ್ಠತ್]** ಮೇಲೇಳುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಪ್ರಮತ್ತ ಸ್ತ್ರೀಯರಲ್ಲಿ ಪ್ರಮಾದವೆಸಗುವುದಿಲ್ಲವೋ ಅವರು ಬಲಿಷ್ಠರಾಗುವರು. ಯಾರು ಮಗನಂತೆ ಪ್ರಜಾಪಾಲನ ಮಾಡುವರೋ ಅವರು ಶ್ರೇಷ್ಠರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಮಚ್ಚನ ತೇ ಮಘವನ್ ವ್ಯಂಸೋ ನಿವಿವಿಧ್ವಾ ಅಪ ಹನೂ ಜಘಾನ ।**
**ಅಧಾ ನಿವಿದ್ಧ ಉತ್ತರೋ ಬಭೂವಾ-ಶ್ಛಿರೋ ದಾಸಸ್ಯ ಸಂ ಪಿಣಗ್ವಧೇನ ॥೯॥**

**ಪದಾರ್ಥ:-** **[ಮಘವನ್]** ಬಹುಧನವಂತನು **[ತೇ]** ನಿನ್ನ **[ದಾಸಸ್ಯ]** ದಾನಯೋಗ್ಯನ **[ವಧೇನ]** ತಾಡನದಿಂದ **[ಶಿರಃ]** ತಲೆಯನ್ನು **[ಸಂ, ಪಿಣಕ್]** ಹಿಸುಕಿ ಹಾಕುತ್ತಾನೆ. **[ವ್ಯಂಸಃ]** ತೋಳು ಹಿಡಿದು ಎಳೆಯುವ ರೀತಿಯಲ್ಲಿ **[ನಿವಿವಿಧ್ವಾನ್]** ಶತ್ರುಗಳನ್ನು ನಾಶಮಾಡುವವನು **[ಹನೂ]** ದವಡೆಯನ್ನು **[ಅಪ, ಜಘಾನ್]** ಚಚ್ಚಿ ಹಾಕುವನು. **[ಅಧಾ]** ಅನಂತರ **[ಮಮತ್]** ಸಂತುಷ್ಟನಾಗಿ **[ಚ]** ಅದನ್ನೇ **[ಉತ್ತರಃ]** ಮುಂದಾಗುವವನು **[ನಿವಿದ್ಧಃ]** ಬಾಣಗಳಿಂದ ಭೇದಿಸುವವನು **[ಬಭೂವಾನ್]** ಆಗುವನೋ ಅವನಿಗೆ ದಂಡವಿಧಿಸು.

**ಭಾವಾರ್ಥ:-** ರಾಜನೇ! ಸಲ್ಲದ ಕಾರ್ಯಗಳಿಂದ ಯಾವನು ಪ್ರಜೆಗಳೊಂದಿಗೆ ಚೆಲ್ಲಾಟವಾಡುವನೋ ಅವನನ್ನು ಶಸ್ತ್ರಾಸ್ತ್ರಗಳಿಂದ ಭೇದಿಸು. ಎಲ್ಲಾ ರೀತಿಯಿಂದಲೂ ಬಂಧಿಸಿಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗೃಷ್ಟಿಃ ಸಸೂವ ಸ್ಥವಿರಂ ತವಾಗಾ-ಮನಾಧೃಷ್ಯಂ ವೃಷಭಂ ತುಮ್ರಮಿಂದ್ರಮ್ ।**
**ಅರೀಳ್ಹಂ ವತ್ಸಂ ಚರಥಾಯ ಮಾತಾ ಸ್ವಯಂ ಗಾತುಂ ತನ್ವ ಇಚ್ಛಮಾನಮ್ ॥೧೦॥**

**ಪದಾರ್ಥ:-** **[ಗೃಷ್ಟಿಃ]** ಒಂದೇ ಬಾರಿ ಕರು ಹಾಕಿದ ಹಸುವು **[ಮಾತಾ]** ತಾಯಿಯು **[ಚರಥಾಯ]** ಮೇಯುವುದಕ್ಕಾಗಿ **[ವತ್ಸಂ]** ಕರುವಿಗೆ ಸದೃಶವಾಗಿ **[ಸ್ಥವಿರಂ]** ಸ್ಥೂಲವಾದ **[ತವಾಗಾಂ]** ಬಲಪಡೆದ **[ಅನಾಧೃಷ್ಯಂ]** ಪ್ರಗಲ್ಭವಾದ **[ತುಮ್ರಂ]** ಉತ್ತಮ ಕಾರ್ಯದಲ್ಲಿ ಪ್ರೇರಣೆ ನೀಡಲು **[ವೃಷಭಂ]** ಗೂಳಿಯಂತೆ ಬಲಿಷ್ಠ **[ಅರೀಳ್ಹಂ]** ಶತ್ರುಸಂಹಾರಕ **[ಸ್ವಯಂ]** ತಾನು **[ಗಾತುಂ]** ವಾಣಿಯನ್ನು **[ಇಂದ್ರಂ]** ಪರಮೈಶ್ವರ್ಯ ಸಂಪನ್ನ ಸುತನ **[ಇಚ್ಛಮಾನಂ]** ಬಯಸುವವನನ್ನು **[ಸಸೂವ]** ಉತ್ಪನ್ನಗೊಳಿಸುವಳು. ಅದೇ ರೀತಿ **[ತನ್ವೇ]** ರಾಜ್ಯವನ್ನು ವಿಸ್ತರಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ಉತ್ತಮ ರೀತಿಯಲ್ಲಿ ಸಂಸ್ಕರಿಸಲಾದ ಆಹಾರ ಸೇವನೆಯಿಂದ ಶರೀರವು ಪುಷ್ಟಿಗೊಂಡು ಬಲವು ಹೆಚ್ಚುತ್ತದೆಯೋ, ಅದು ಶತ್ರುಗಳ ವಿಜಯಕ್ಕೆ ಕಾರಣವಾಗುತ್ತದೆಯೋ ಅದರಿಂದ ರಾಜ್ಯವು ವಿಸ್ತರಿಸಲ್ಪಡುತ್ತದೆಯೋ, ಹಾಗೆ ನೀನು ನ್ಯಾಯಮಾರ್ಗದಿಂದ ಈ ಎಲ್ಲರನ್ನು ವೃದ್ಧಿಪಡಿಸು.

ಈ ಮಂತ್ರದಲ್ಲಿ ಮಕ್ಕಳ ಶಿಕ್ಷಣದಿಂದ ವಿದ್ಯೆಯ ವಿಷಯ ಹೇಳಿದೆ.

**ಉತ ಮಾತಾ ಮಹಿಷಮನ್ವವೇನ-ದಮೀ ತ್ವಾ ಜಹತಿ ಪುತ್ರ ದೇವಾಃ ।**
**ಅಥಾಬ್ರವೀದ್ವೃತ್ರಮಿಂದ್ರೋ ಹನಿಷ್ಯ-ನ್ತ್ಸಖೇ ವಿಷ್ಣೋ ವಿತರಂ ವಿ ಕ್ರಮಸ್ವ ॥೧೧॥**

**ಪದಾರ್ಥ:-** **[ಸಖೇ]** ಸ್ನೇಹಿತನೇ! **[ವಿಷ್ಣೋ]** ಸಮಗ್ರ ವಿದ್ಯೆಯಲ್ಲಿ ವ್ಯಾಪಕನೇ! **[ಪುತ್ರ]** ದುಃಖದಿಂದ ರಕ್ಷಿಸುವವನೇ! ನೀನು **[ಇಂದ್ರಃ]** ಧನಸಂಪನ್ನ ಸೂರ್ಯನಂತೆ ಪಾಲಕನು **[ವೃತ್ರಂ]** ಮೇಘದಂತಿರುವ ಅವಿದ್ಯೆಯ **[ಹನಿಷ್ಯನ್]** ನಾಶಕನು **[ವಿತರಂ]** ವಿವಿಧ ರೀತಿಯಿಂದ ತರಣ ಮಾಡುವವನಿಗೆ **[ವಿ, ಕ್ರಮಸ್ವ]** ಪುರುಷಾರ್ಥ ಸಾಧಕನಾಗು. **[ಅಥ]** ಆಮೇಲೆ **[ಮಾತಾ]** ಜನನಿಯು **[ತ್ವಾ]** ನಿನ್ನನ್ನು **[ಮಹಿಷಂ]** ಅತಿಶಯ **[ಅನೇನತ್]** ಪ್ರಾರ್ಥಿಸುವಳು. **[ಉತ್]** ಅದೇ ರೀತಿ **[ಪಿತಾ]** ತಂದೆಯಂತೆ **[ಅಬ್ರವೀತ್]** ಹೇಳುವನು. **[ಅಮೀ]** ಇವೆಲ್ಲವನ್ನು **[ದೇವಾಃ]** ವಿದ್ಯಾವಂತರು **[ಅನು, ಜಹಾತಿ]** ತ್ಯಾಗ ಮಾಡುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರು ಮಾತಾಪಿತೃಗಳಿಂದ ಹಾಗೂ ಗುರುಕುಲದಿಂದ ವಿದ್ಯೆಯನ್ನು ಗ್ರಹಣ ಮಾಡುವರು, ಸುಖವನ್ನು ಹೆಚ್ಚಿಸಿಕೊಳ್ಳುವರು. ಅನ್ಯರಿಗೂ ಉಪದೇಶ ಮಾಡುವರು. ಹಾಗೆ ಎಲ್ಲರೂ ಮಾಡಬೇಕು. ಉತ್ತಮ ಶೀಲವಂತ ವಿದ್ಯಾರ್ಥಿಗೆ ಅಧ್ಯಾಪಕರು ಯಥಾರ್ಥವನ್ನು ಅನುಗ್ರಹಿಸುವರು ಹಾಗೂ ದುರ್ವ್ಯಸನಿಗಳನ್ನು ತ್ಯಜಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಸ್ತೇ ಮಾತರಂ ವಿಧವಾಮಚಕ್ರ-ಚ್ಛಯುಂ ಕಸ್ತ್ವಾಮಜಿಘಾಂಸಚ್ಚರಂತಮ್ ।**
**ಕಸ್ತೇ ದೇವೋ ಅಧಿ ಮಾರ್ಡೀಕ ಆಸೀ-ದ್ಯತ್ ಪ್ರಾಕ್ಷಿಣಾಃ ಪಿತರಂ ಪಾದಗೃಹ್ಯ ॥೧೨॥**

**ಪದಾರ್ಥ:-** [**ತೇ**] ನಿನ್ನ [**ಮಾತರಂ**] ಜನನಿಯನ್ನು [**ವಿಧವಾಂ**] ಪತಿಹೀನಳನ್ನಾಗಿ [**ಕಃ**] ಯಾವನು [**ಅಚಕ್ರತ**] ಮಾಡುತ್ತಾನೆ. [**ಕಃ**] ಯಾವನು [**ಚರಂತಂ**] ವಿಹರಿಸುವವನನ್ನು, [**ಶಯುಂ**] ಮಲಗಿರುವ [**ತ್ವಾಂ**] ನಿನ್ನನ್ನು [**ಅಜಿಘಾಂಸತ್**] ಸಾಯಿಸಲು ಬಯಸುತ್ತಾನೆ. [**ಕಃ**] ಯಾವನು [**ತೇ**] ನಿನ್ನ [**ದೇವಃ**] ಶ್ರೇಷ್ಠ ಗುಣಗಳಿರುವವನು [**ಮಾರ್ಡೀಕೇ**] ಸುಖ ಸಾಧನಗಳಲ್ಲಿ [**ಅಧಿ**] [**ಆಸೀತ್**] ಸರ್ವೋಪರಿ ವಿರಾಜಮಾನನಾಗುವನು [**ಪಾದಗೃಹ್ಯ**] ಪಾದಗ್ರಹಣ ಮಾಡಲು ಯೋಗ್ಯನಾದ [**ಯತ್**] ನಿನ್ನ [**ಪಿತರಂ**] ಜನಕನನ್ನು [**ಪ್ರ, ಅಕ್ಷಿಣಾಃ**] ನಾಶಮಾಡುವನು.

**ಭಾವಾರ್ಥ:-** ಮಕ್ಕಳೇ! ಯಾರೇ ಆಗಲಿ, ನಿಮ್ಮ ಜನನೀ ಜನಕರನ್ನು ನಾಶಮಾಡಲು ಬಯಸುವರೋ ನಿಮ್ಮಲ್ಲಿರುವ ಉತ್ತಮ ಗುಣಗಳನ್ನು ನಾಶಮಾಡಲು ಬಯಸುವರೋ ಅಂತಹವರಲ್ಲಿ ನೀವು ಎಂದೂ ವಿಶ್ವಾಸವಿರಿಸಬೇಡಿ.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ಅವರ್ತ್ಯಾ ಶುನ ಆಂತ್ರಾಣಿ ಪೇಚೇ ನ ದೇವೇಷು ವಿವಿದೇ ಮರ್ಡಿತಾರಮ್ ।**
**ಅಪಶ್ಯಂ ಜಾಯಾಮಮಹೀಯಮಾನಾ-ಮಧಾ ಮೇ ಶ್ಯೇನೋ ಮಧ್ವಾ ಜಭಾರ ॥೧೩॥**

**ಪದಾರ್ಥ:-** [**ಮೇ**] ನನ್ನ [**ಅಮಹೀಯಮಾನಾಂ**] ಸತ್ಕಾರ ಮಾಡದವಳು [**ಜಾಯಾಂ**] ಅಂತಹ ಸ್ತ್ರೀಯನ್ನು [**ಶ್ಯೇನಃ**] ಗಿಡುಗ ಪಕ್ಷಿಯಂತೆ [**ಆಜಭಾರ**] ಅಪಹರಿಸುವನು. [**ಅಧಾ**] ಆಮೇಲೆ [**ಶುನಃ**] ಶ್ವಾನದಂತೆ [**ಅವರ್ತ್ಯಾ**] ವರ್ತಿಸಲು ಯೋಗ್ಯವಲ್ಲದ [**ಆಂತ್ರಾಣಿ**] ಎಲುಬು ನಾಡಿಗಳನ್ನು [**ಪೇಚೇ**] ಚರ್ವಣ ಮಾಡುವುದರಿಂದ [**ಮರ್ಡಿತಾರಂ**] ಸುಖದಾಯಕನಾದ ನಿನ್ನನ್ನು [**ಅಪಶ್ಯಂ**] ನೋಡುವೆನು. [**ದೇವೇಷು**] ವಿದ್ಯಾವಂತರಲ್ಲಿ [**ಮಧು**] ಮಧುರವಾದ ಜ್ಞಾನವನ್ನು [**ನ**] [**ವಿವಿದೇ**] ಪಡೆದುಕೊಳ್ಳುವುದಿಲ್ಲವೋ ಅವನನ್ನು ದಂಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ಯಾವ ಸ್ತ್ರೀ ಪುರುಷರು ಮಾಡಬಾರದ ವ್ಯವಹಾರಗಳನ್ನು ಮಾಡುವರೋ, ಅಂತಹವರನ್ನು ತೀವ್ರವಾಗಿ ದಂಡಿಸು, ನಾಶಗೊಳಿಸು.

ಈ ಸೂಕ್ತದಲ್ಲಿ ಇಂದ್ರ, ಮೇಘ, ರಾಜ ಮತ್ತು ವಿದ್ಯಾವಂತರ ಕೃತ್ಯಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಹದಿನೆಂಟನೆಯ ಸೂಕ್ತ ಸಮಾಪ್ತ

## ॥ ಇತಿ ಪಂಚಮೋಽಧ್ಯಾಯಃ ॥

# ಷಷ್ಠೋಽಧ್ಯಾಯಃ

## ಸೂಕ್ತ ೧೯

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧ ವಿರಾಟ್ ತ್ರಿಷ್ಟುಪ್, ೨, ೯ ನಿಚೃತ್ರಿಷ್ಟುಪ್, ೩, ೫, ೮ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪, ೬ ಭುರಿಕ್ಪಂಕ್ತಿಃ, ೭, ೧೦ ಪಂಕ್ತಿಃ, ೧೧ ನಿಚೃತ್ಪಂಕ್ತಿಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಇಂದ್ರ ಪದವಾಚ್ಯ ರಾಜನ ಗುಣ ಹೇಳಿದೆ.

**ಏವಾ ತ್ವಾಮಿಂದ್ರ ವಜ್ರಿನ್ನತ್ರ ವಿಶ್ವೇ ದೇವಾಸಃ ಸುಹವಾಸ ಊಮಾಃ ।**
**ಮಹಾಮುಭೇ ರೋದಸೀ ವೃದ್ಧಮೃಷ್ವಂ ನಿರೇಕಮಿದ್ವೃಣತೇ ವೃತ್ರಹತ್ಯೇ ॥೧॥**

**ಪದಾರ್ಥಃ-** **[ವಾಜಿನ್]** ಶಸ್ತ್ರಾಸ್ತ್ರ ಸಂಪನ್ನ **[ಇಂದ್ರ]** ಶತ್ರು ಸಂಹಾರಕನು **[ಅತ್ರ]** ಈ ಪ್ರಪಂಚದಲ್ಲಿ **[ಊಮಾಃ]** ರಕ್ಷಣೆ ಮಾಡುವವರು **[ಸುಹವಾಸಃ]** ಆಹ್ವಾನಿಸುವವರು. **[ವಿಶ್ವೇ]** ಎಲ್ಲಾ **[ದೇವಾಸಃ]** ವಿದ್ಯಾವಂತರು **[ಮಹಾಂ]** ದೊಡ್ಡದಾದ **[ವೃದ್ಧಂ]** ಎಲ್ಲಕ್ಕಿಂತ ವಿಸ್ತೀರ್ಣವಾದ **[ಋಷ್ವಂ]** ಶ್ರೇಷ್ಠ **[ಏಕಂ]** ಅದ್ವಿತೀಯ **[ತ್ವಾಂ]** ನಿನ್ನನ್ನು **[ಏವಾ]** ಮಾತ್ರ **[ವೃತ್ರ ಹತ್ಯೇ]** ಶತ್ರುನಾಶ ಮಾಡುವ ಯುದ್ಧದಲ್ಲಿ **[ಉಭೇ]** ಇಬ್ಬರು **[ರೋದಸೀ]** ಭೂಮ್ಯಾಕಾಶಗಳು **[ಇತ್]** ಮಾತ್ರ **[ನಿಃ, ವೃಣತೇ]** ಸ್ವೀಕರಿಸುವರು.

**ಭಾವಾರ್ಥಃ-** ವಿದ್ಯಾವಂತರು ಶ್ರೇಷ್ಠಗುಣ ಸಂಪನ್ನ ರಾಜನನ್ನು ಸ್ವೀಕರಿಸಿದರೆ ಸಂಪೂರ್ಣ ಸುಖ ಪಡೆಯುವರು.

ಮೇಘದ ಉದಾಹರಣೆಯಿಂದ ರಾಜನ ಗುಣವಿಲ್ಲಿ ಹೇಳಿದೆ.

**ಅವಾಸೃಜಂತ ಜಿವ್ರಯೋ ನ ದೇವಾ ಭುವಃ ಸಮ್ರಾಳಿಂದ್ರ ಸತ್ಯಯೋನಿಃ ।**
**ಅಹನ್ನಹಿಂ ಪರಿಶಯಾನಮರ್ಣಃ ಪ್ರ ವರ್ತನೀರರದೋ ವಿಶ್ವಧೇನಾಃ ॥೨॥**

**ಪದಾರ್ಥಃ-** **[ಇಂದ್ರ]** ಐಶ್ವರ್ಯ ಸಂಪನ್ನನೇ! ನೀನು **[ಭುವಃ]** ಭೂಮಿಯಲ್ಲಿ **[ಸಮ್ರಾಟ್]** ಚಕ್ರವರ್ತಿಯು **[ಸತ್ಯಯೋನಿಃ]** ವಿನಾಶವಾಗದ ಸೂರ್ಯನಂತೆ **[ಪರಿಶಯಾನಂ]** ಅಂತರಿಕ್ಷದಲ್ಲಿ ಶಯನ ಮಾಡುವವನು **[ಅಹಿಂ]** ಮೇಘವನ್ನು **[ಅಹನ್]** ಹನನ ಮಾಡುವವನಾಗಿ **[ಅರ್ಣಃ]** ಜಲವನ್ನು **[ಪ್ರ, ಅರದಃ]** ಸುರಿಸುವವನು **[ವಿಶ್ವಧೇನಾಃ]** ಸಮಗ್ರ ವಾಣೀವಂತನು **[ಜಿವ್ರಯಃ]** **[ನ]** ದೃಢ ಜೀವನಕ್ಕೆ ಸಮನಾಗಿ **[ದೇವಾಃ]** ದಿವ್ಯಪದಾರ್ಥಗಳಿಗೆ ಸದೃಶ **[ಅವ, ಸೃಜಂತ]** ಉತ್ಪಾದಕನು.

**ಭಾವಾರ್ಥಃ-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ನೀನು ಸತ್ಯಾಚರಣೆ ಮಾಡುವವನಾಗಿ ಯಥಾರ್ಥ ನುಡಿಯುವವರ ಸಹಾಯ ಪಡೆದು ಚಕ್ರವರ್ತಿ - ಸಾರ್ವಭೌಮನಾಗು. ಹೇಗೆ ಸೂರ್ಯನು ಮೇಘವನ್ನು ನಾಶಪಡಿಸಿ ಜಗತ್ತಿಗೆ ಸುಖವನ್ನು ನೀಡುವನೋ, ಹಾಗೆ ನೀನು ದುಷ್ಟರನ್ನು, ಕಳ್ಳರನ್ನು, ದರೋಡೆಕೋರರನ್ನು ನಾಶಪಡಿಸಿ ಪ್ರಜೆಗಳಿಗೆ ಆನಂದದಾಯಕನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅತೃಪ್ನುವಂತಂ ವಿಯುತಮಬುಧ್ಯ-ಮಬುಧ್ಯಮಾನಂ ಸುಷುಪಾಣಮಿಂದ್ರ ।**

**ಸಪ್ತ ಪ್ರತಿ ಪ್ರವತ ಆಶಯಾನ-ಮಹಿಂ ವಜ್ರೇಣ ವಿ ರಿಣಾ ಅಪರ್ವನ್ ॥೩॥**

**ಪದಾರ್ಥ:-** [ಇಂದ್ರ] ಐಶ್ವರ್ಯ ಸಂಪನ್ನ ನೀನು [**ವಜ್ರೇಣ**] ವಜ್ರಾಯುಧದಿಂದ [**ಆ, ಶಯಾನಂ**] ಸರ್ವತ್ರ ಮಲಗಿರುವಂತೆ ಪ್ರಸರಿಸಿರುವ [**ಅಹಿಂ**] ಮೇಘವನ್ನು ನಾಶಪಡಿಸಿ [**ಸಪ್ತ**] ಏಳು ವಿಧ [**ಪ್ರವತಃ**] ಕೆಲ ಮಾರ್ಗಗಳಲ್ಲಿ ಹರಿಸುತ್ತ [**ಅಪರ್ವನ್**] ಪರ್ವರಹಿತ ಸಮಯದಲ್ಲಿ [**ಅತೃಷ್ಣುವಂತಂ**] ಭೋಗದಲ್ಲಿ ತೃಪ್ತಿ ಹೊಂದದ [**ಸುಷುಪಾಣಂ**] ಶ್ರೇಷ್ಠ ಪಾನೀಯವನ್ನು [**ವಿಯಂತಂ**] ಇಂದ್ರಿಯಗಳನ್ನು ಗೆಲ್ಲದವನನ್ನು [**ಅಬುಧ್ಯಂ**] ಅಬುದ್ಧಿರಹಿತ [**ಅಬುಧ್ಯಮಾನಂ**] ಉಪದೇಶದಿಂದಲೂ ಅರಿಯದ ಅಧಾರ್ಮಿಕನನ್ನು [**ಪ್ರತಿ, ವಿ, ರಿಣಾಃ**] ದಂಡಕೊಡುವುದರ ಮೂಲಕ ಶಿಕ್ಷಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ಹೇಗೆ ಸೂರ್ಯನು ತನ್ನ ಏಳು ಕಿರಣಗಳಿಂದ ಮೇಘಗಳನ್ನು ಛೇದಿಸಿ ಭೂಮಿಗೆ ಮಳೆ ಸುರಿಸಿ ಹಲವು ಮಾರ್ಗಗಳಲ್ಲಿ ಪ್ರವಹಿಸುವಂತೆ ಮಾಡಿ ಸುಖನೀಡುವನೋ ಅದೇ ರೀತಿ ನೀನೂ ಅವಿದ್ಯೆಯನ್ನು ಛೇದಿಸಿ ವಿದ್ಯೆಯನ್ನು ನಾನಾ ಮಾರ್ಗದಲ್ಲಿ ಪ್ರವಹಿಸು. ಅಧಾರ್ಮಿಕರನ್ನು ದಂಡಿಸಿ ಕಾರಾಗೃಹದಲ್ಲಿ ತುಂಬಿಸು. ಬಹುವಿಧ ನೀತಿಯನ್ನು ಎಲ್ಲಾ ಕಡೆಗಳಲ್ಲೂ ಪ್ರಸಾರಮಾಡು.

ಮೇಘದ ಉದಾಹರಣೆಯ ಮೂಲಕ ಸೇನಾ ವಿಷಯವಿಲ್ಲಿ ಹೇಳಿದೆ.

**ಅಕ್ಷೋದಯಚ್ಛವಸಾ ಕ್ಷಾಮ ಬುಧ್ನಂ ವಾರ್ಣ ವಾತಸ್ತವಿಷೀಭಿರಿಂದ್ರಃ ।**

**ದೃಳ್ಹಾನ್ಯೌಭ್ನಾದುಶಮಾನ ಓಜೋಽವಾಭಿನತ್ ಕಕುಭಃ ಪರ್ವತಾನಾಮ್ ॥೪॥**

**ಪದಾರ್ಥ:-** [**ತವಿಷೀಭಿಃ**] ಬಲಿಷ್ಠ ಸೇನೆಯೊಂದಿಗೆ [**ಇಂದ್ರ**] ದುಷ್ಟನಾಶಕನಾದ ನೀನು [**ಶವಸಾ**] ಬಲದಿಂದ [**ವಾತಃ**] ಗಾಳಿಯನ್ನು [**ಕ್ಷಾಮ**] ಸಹನಯೋಗ್ಯ ಮಾಡಿ [**ಬುಧ್ನಂ**] ಅಂತರಿಕ್ಷವನ್ನು [**ವಾಃ**] ವಾರಿಯನ್ನು [**ನ**] ಹೇಗೋ ಹಾಗೆ [**ದೃಳ್ಹಾನಿ**] ಬಲಿಷ್ಠ ಶತ್ರುದಳವನ್ನು [**ಅಕ್ಷೋದಯತ್**] ಚೂರ್ಣೀಗೊಳಿಸು. [**ಓಜಃ**] ಪರಾಕ್ರಮದ [**ಉಷಮಾನಃ**] ಕಾಮನೆ ಮಾಡುವವನಾಗಿ [**ಔಭ್ನಾತ್**] ಮಾರ್ದವಗೊಳಿಸುತ್ತ [**ಪರ್ವತಾನಾಂ**] ಮೋಡಗಳ ಶಿಖರಗಳಂತೆ [**ಕಕುಭಃ**] ದಿಕ್ಕುಗಳನ್ನು ಮತ್ತು ಶತ್ರುಗಳನ್ನೂ [**ಅವ, ಅಭಿನತ್**] ಛೇದಿಸುವಂತೆ ನೀನೂ ಛೇದಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇಗೆ ಅಗ್ನಿ ವಾಯುಗಳು ಸೂಕ್ಷ್ಮರೂಪದ ಜಲವನ್ನು ಅಂತರಿಕ್ಷಕ್ಕೆ ತಲುಪಿಸಿ ಮಳೆಗರೆದು ಜಗತ್ತಿಗೇ ಆನಂದವನ್ನು ಕೊಡುತ್ತದೆಯೋ ಹಾಗೆಯೇ ಸಮಗ್ರ ವಿದ್ಯೆ, ಸೇನೆಗಳ ಸಹಿತ ರಾಜನು ದುಷ್ಟರನ್ನು ದಂಡಿಸಿ ನಾಶಪಡಿಸಿ ಅಥವಾ ಉಪದೇಶದಿಂದ ಸಜ್ಜನರನ್ನಾಗಿಸಿ ಪ್ರಜೆಗಳನ್ನು ನಿರಂತರ ಸುಖಪಡಿಸುತ್ತಾನೆ.

ಸೇನಾಪತಿ ಗುಣಗಳನ್ನಿಲ್ಲಿ ಹೇಳಲಾಗಿದೆ.

**ಅಭಿ ಪ್ರ ದದ್ರುರ್ಜನಯೋ ನ ಗರ್ಭಂ ರಥಾ ಇವ ಪ್ರ ಯಯುಃ ಸಾಕಮದ್ರಯಃ ।**

**ಅತರ್ಪಯೋ ವಿಸೃತ ಉಬ್ಜ ಊರ್ಮೀನ್ ತ್ವಂ ವೃತಾ ಅರಿಣಾ ಇಂದ್ರ ಸಿಂಧೂನ್ ॥೫॥**

**ಪದಾರ್ಥ:-** [**ಇಂದ್ರ**] ಶತ್ರುನಾಶಕ ಸೇನಾಪತಿಯೇ! [**ಅದ್ರಯಃ**] ಮೇಘಗಳು [**ಜನಯಃ**] [**ನ**] ಸ್ತ್ರೀಯರಿಗೆ ಸಮನಾಗಿ [**ಗರ್ಭಂ**] ಗರ್ಭವನ್ನು [**ಪ್ರ, ಅಭಿ, ದದ್ರುಃ**] ಎಲ್ಲಾ ಕಡೆಗಳಿಂದ ಪಡೆಯುತ್ತವೆ. [**ರಥಾ, ಇವ**] ವಾಹನಗಳಿಗೆ ಸದೃಶವಾಗಿ [**ಸಾಕಂ**] ಜೊತೆಯಾಗಿ [**ಪ್ರ, ಯಯುಃ**] ಶೀಘ್ರವಾಗಿ ಚಲಿಸುತ್ತವೆ. [**ವಿಸೃತಃ**] ಎಲ್ಲ ಕಡೆಗಳಲ್ಲೂ ಹರಡಿಕೊಳ್ಳುತ್ತವೆ. [**ಊರ್ಮಿನ್**] ಅಲೆಗಳ ಸಹಿತ [**ಸಿಂಧೂನ್**] ನದಿಗಳನ್ನು [**ಉಬ್ಜಃ**] ನಾಶಗೊಳಿಸುತ್ತವೆ. [**ಅರಿಣಾಃ**] ನಾಶಗೊಳಿಸುವ ರೀತಿಯಲ್ಲಿ [**ತ್ವಂ**] ನೀನು [**ವೃತಾನ್**] ಸ್ವೀಕರಿಸಿದವರನ್ನು [**ಅತರ್ಪಯಃ**] ತೃಪ್ತಿಪಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮೇಘಗಳು ಎತ್ತರದಲ್ಲಿ ಚಲಿಸಿ ಭೂಮಿಯಿಂದ ನೀರನ್ನು ಆವಿಯ ರೂಪದಲ್ಲಿ ಹೀರಿಕೊಂಡು ಮಳೆಗರೆದು ಹೇಗೆ ಎಲ್ಲರನ್ನೂ ಸಂತುಷ್ಟಿಗೊಳಿಸುತ್ತವೆಯೋ ಹಾಗೆ ರಾಜನು ರಥಾದಿ ವಾಹನಗಳಲ್ಲಿ ಸೇನೆಯೊಂದಿಗೆ ಚಲಿಸಿದರೆ ಸೂರ್ಯನಂತೆ ವಿಜಯಿಯಾಗುವನು.

ರಾಜನ ಗುಣವನ್ನಿಲ್ಲಿ ಹೇಳಲಾಗಿದೆ.

**ತ್ವಂ ಮಹೀಮವನಿಂ ವಿಶ್ವಧೇನಾಂ ತುರ್ವೀತಯೇ ವಯ್ಯಾಯ ಕ್ಷರಂತೀಮ್ ।**
**ಅರಮಯೋ ನಮಸೈಜದರ್ಣಃ ಸುತರಣಾಁ ಅಕೃಣೋರಿಂದ್ರ ಸಿಂಧೂನ್ ॥೬॥**

**ಪದಾರ್ಥ:-** [**ಇಂದ್ರ**] ರಾಜನೇ! [**ತ್ವಂ**] ನೀನು [**ತುರ್ವೀತಯೇ**] ಶತ್ರುನಾಶಕನಿಗೆ [**ವಯ್ಯಾಯ**] ಪಡೆಯಲರ್ಹ ಸುಖಕ್ಕಾಗಿ [**ವಿಶ್ವಧೇನಾಂ**] ಸಮಗ್ರ ವಿದ್ಯೆಯನ್ನು [**ಕ್ಷರಂತೀಂ**] ಪ್ರಾಪ್ತಗೊಳಿಸುವವಳಾಗಿ [**ಅವನಿಂ**] ರಕ್ಷಕಳಾದ [**ಮಹೀಂ**] ಭೂಮಿಯನ್ನು ಪಡೆದು [**ನಮನಾ**] ಅನ್ನಾದಿಗಳಿಂದ [**ಅರಮಯಃ**] ನಮ್ಮನ್ನು ರಮಿಸುವವನಾಗು. [**ಅರ್ಣಃ**] ಜಲರಾಶಿಯನ್ನು [**ಏಜತ್**] ಕಂಪಿಸುವವನು [**ಸಿಂಧೂನ್**] ನದಿಗಳನ್ನು [**ಸುತರಣಾನ್**] ಸುಗಮವಾಗಿ ದಾಟಲು ಸಾಧ್ಯವಾಗುವಂತೆ [**ಅಕೃಣೋಃ**] ಮಾಡು.

**ಭಾವಾರ್ಥ:-** ರಾಜನೇ! ನೀನು ರಾಜ್ಯವನ್ನು ಪಡೆದು ಆನಂದಿಸು. ನಮಗೂ ಆನಂದಗೊಳಿಸು. ನಿನ್ನ ಸಂತೋಷವು ಶೀಘ್ರನಾಶವಾಗಲಿ ಅಂದರೆ ನೀನು ಎಲ್ಲರ ಸುಖಕ್ಕಾಗಿ ನದೀತಡಾಗಗಳನ್ನು ದಾಟಿ ಹೋಗಲು ನೌಕೆಗಳನ್ನು ತಯಾರಿಸಿ ನಿರಂತರ ಸಂಚಾರ ಮಾಡುತ್ತ ಧನಾಢ್ಯನಾಗುವೆ.

ಪ್ರಜೆಗಳಿಗೆ ರಾಜೋಪದೇಶವನ್ನಿಲ್ಲಿ ಹೇಳಿದೆ.

**ಪ್ರಾಗ್ರುವೋ ನಭನ್ವೋ (ಓ) ೩ ನ ವಕ್ವಾ ಧ್ವಸ್ರಾ ಅಪಿನ್ವದ್ಯುವತೀರ್ಋತಜ್ಞಾಃ ।**
**ಧನ್ವಾನ್ಯಜ್ರಾ ಅಪೃಣಕ್ ತೃಷಾಣಾಁ ಅಧೋಗಿಂದ್ರಃ ಸ್ತರ್ಯೋ (ಓ) ೩ ದಂಸುಪತ್ನೀಃ ॥೭॥**

**ಪದಾರ್ಥ:-** [**ಇಂದ್ರಃ**] ರಾಜನು [**ವಕ್ರಾ**] ವಕ್ರವಾದ [**ಧ್ವಸ್ರಾ**] ವಿಧ್ವಂಸಕ ಸೇನೆಯನ್ನು [**ನಭನ್ವಃ**] ಶತ್ರು ನಾಶಕ ವೀರಪುರುಷನು [**ಅಗ್ರುವಃ**] [**ನ**] ಅಗ್ರಭಾಗದಲ್ಲಿ ಚಲಿಸುವ ನದಿಗಳಿಗೆ ಸದೃಶವಾಗಿ [**ಋತಜ್ಞಾಃ**] ಸತ್ಯವನ್ನರಿತ [**ಯುವತೀಃ**] ಯುವತಿ ಸ್ತ್ರೀಯರನ್ನು [**ಪ್ರ, ಅಪಿನ್ವತ್**] ಉತ್ತಮ ರೀತಿಯಿಂದ ಸೇವಿಸಲಿ, ಆಸೇಚನ ಮಾಡಲಿ. [**ಧನ್ವಾನಿ**] ಅಲ್ಲಲ್ಲಿ ಲಭಿಸುವ ಮಾರ್ಗಸ್ಥಾನಗಳನ್ನು [**ಅಜ್ರಾನ್**] ಹಾಗೂ ನಿತ್ಯ ಚಲಿಸುವ [**ತೃಷಾಣಾನ್**] ತೃಷಿತ ಜೀವಿಗಳನ್ನು [**ಅಪೃಣಕ್**] ಸಂತೃಪ್ತಿಪಡಿಸಲಿ. [**ಸ್ತರ್ಯಃ**] ಮರೆ ಮಾಡುವ [**ದಂಸುಪತ್ನೀಃ**] ಕೆಲಸ ಮಾಡುವಂತಹ ಸ್ತ್ರೀಯರಿಗೆ ಸದೃಶ [**ಅಧೋಕ್**] ಪರಿಪೂರ್ಣ ಸೇನೆಯನ್ನು ಧರಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನಿಗೆ ನದಿಯಂತೆ ಪ್ರವಹಿಸುವ, ಶತ್ರುಗಳನ್ನು ನಾಶಗೊಳಿಸುವ, ಅನ್ನ ಪಾನಾದಿಗಳಿಂದ ಸಂತೃಪ್ತಿಗೊಳಿಸುವ ತನ್ನ ವಿವರಗಳನ್ನು ಮರೆ ಮಾಡುವ ಪತಿವ್ರತಾ ಸ್ತ್ರೀಯಂತಿರುವ ರಾಜ ಭಕ್ತರಿಂದೊಡಗೂಡಿದ ಸೇನೆ ಇರುತ್ತದೆಯೋ ಅವನು ವಿಜಯವನ್ನು ಪಡೆಯುವನು.

ರಾಜ್ಯದ ವಿಷಯವಿಲ್ಲಿ ಹೇಳಿದೆ.

**ಪೂರ್ವೀರುಷಸಃ ಶರದಶ್ಚ ಗೂರ್ತಾ ವೃತ್ರಂ ಜಘನ್ವಾಁ ಅಸೃಜದ್ವಿ ಸಿಂಧೂನ್ ।**
**ಪರಿಷ್ಠಿತಾ ಅತೃಣದ್ಬದ್ಬಧಾನಾಃ ಸೀರಾ ಇಂದ್ರಃ ಸ್ರವಿತವೇ ಪೃಥಿವ್ಯಾ ॥೮॥**

**ಪದಾರ್ಥ:-** [**ಇಂದ್ರ**] ಸೂರ್ಯನು [**ಪೂರ್ವೀಃ**] ಪುರಾತನ [**ಗೂರ್ತಾಃ**] ಚಲಿಸುತ್ತಿರುವ ಹಿಂಸಕ [**ಉಷಸಃ**] ಪ್ರಾತಃಕಾಲವು [**ವೃತ್ರಂ**] ಮೇಘವನ್ನು [**ಶರದಃ**] ಶರದೃತುಗಳು [**ಚ**] ಮತ್ತು ಹೇಮಂತಾದಿ ಋತುಗಳನ್ನು [**ಜಘನ್ವಾನ್**] ನಾಶಗೊಳಿಸಲಾಗಿ [**ಸಿಂಧೂನ್**] ನದಿಗಳನ್ನು [ವಿ, **ಅಸೃಜತ್**] ವಿಶೇಷ ರೀತಿಯಲ್ಲಿ ಉತ್ಪಾದಿಸುವನೋ [**ಪರಿಷ್ಠಿತಾಃ**] ಸುತ್ತಲೂ ಇರುವ [**ಬದ್ಬಧಾನಾಃ**] ಪ್ರತಿ ಭಟಿಸುವ ದಡಗಳನ್ನು ನಾಶಗೊಳಿಸುತ್ತ [**ಸೀರಾಃ**] ಹರಿಯುತ್ತಲಿರುವ ನದಿಗಳು ಅವುಗಳನ್ನು [**ಸ್ರವಿತವೇ**] ಚಲಿಸುವುದಕ್ಕಾಗಿ [**ಪೃಥಿವ್ಯಾ**] ಪೃಥಿವಿಯೊಂದಿಗೆ [**ಅತೃಣತ್**] ನಾಶಗೊಳಿಸುವಂತೆ ಶತ್ರುಗಳ ನಾಶಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನು, ಬೆಳಗಿನ ಸಮಯದಂತೆ ಉತ್ತಮ ನೀತಿ, ನದಿಗಳಂತಿರುವ ಸೇನೆ, ಇವುಗಳನ್ನು ಪಡೆದು ಭೂಮಿ ರಾಜ್ಯವನ್ನು ಆಳಲು ಯೋಗ್ಯನಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಮ್ರೀಭಿಃ ಪುತ್ರಮಗ್ರುವೋ ಅದಾನಂ ನಿವೇಶನಾದ್ಧರಿವ ಆ ಜಭರ್ಥ ।**
**ವ್ಯ (ಅ) ೧ ಂಧೋ ಅಖ್ಯದಹಿಮಾದದಾನೋ ನಿರ್ಭೂರ್ದುಖಚ್ಛಿತ್ಸಮರಂತ ಪರ್ವ ॥೯॥**

**ಪದಾರ್ಥ:-** [**ಹರಿವಃ**] ಅಶ್ವದಳವಿರುವ ರಾಜನೇ! [**ನಿವೇಶನಾತ್**] ತನ್ನ ವಾಸಸ್ಥಳದಿಂದ [**ವಮ್ರೀಭಿಃ**] ವಮನ ಮಾಡುವ ಪರ್ವತಗಳಿಂದ [**ಅಗ್ರುವಃ**] ನದಿಗಳು ದಡವನ್ನು ಹರಣ ಮಾಡುವ ರೀತಿಯಲ್ಲಿ [**ಅದಾನಂ**] ದಾನಶೀಲನಲ್ಲದ [**ಪುತ್ರಂ**] ಮಗನನ್ನು [ಆ, **ಜಭರ್ಥ**] ಹರಣ ಮಾಡುವೆ. [**ಅಂಧಾಃ**] ಅಂಧರಿರಗೊಳಿಸುವ [**ಅಹಿಂ**] ಮೇಘವನ್ನು [**ಆದದಾನಃ**] ಗ್ರಹಣ ಮಾಡುವವನಾಗಿ [ವಿ, **ಅಖ್ಯತ್**] ಪ್ರಸಿದ್ಧಗೊಳಿಸುತ್ತ [**ಉಖಚಿತ್**] ಮಾರ್ಗಗಳನ್ನು ಛಿದ್ರಗೊಳಿಸುವವನು. [ನಿ, **ಭೂತ್**] ನಿರಂತರ ಇರುವನು. [**ಪರ್ವ**] ಪಾಲಕನು [**ಸಂ**] [**ಅರಂತ**] ಉತ್ತಮ ರೀತಿಯಲ್ಲಿ ರಮಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ನೀನು ಎಲ್ಲರೊಂದಿಗೂ ನ್ಯಾಯವಾಗಿಯೇ ವರ್ತಿಸಬೇಕು. ತನ್ನ ಮಗನೇ ಆಗಿದ್ದರೂ ದುರ್ಗುಣ ಸಂಪನ್ನನಾಗಿದ್ದರೆ ಅವನು ಅಧಿಕಾರ ಪಡೆಯಲು ಅನರ್ಹನೇ ಆಗುವನು. ಮಳೆಗಾಲದಲ್ಲಿ ಹೇಗೆ ಮಹಾಪೂರ ಬರುವುದೋ ಅದೇ ರೀತಿ ನೀನೂ ನಿನ್ನ ಸೇನೆಯನ್ನು ವೃದ್ಧಿಪಡಿಸು; ನಿನ್ನ ಪ್ರಜೆಗಳನ್ನು ಸನ್ಮಾರ್ಗದಲ್ಲಿ ವೃದ್ಧಿಪಡಿಸು.

ವಿದ್ಯಾವಂತರ ಗುಣವನ್ನಿಲ್ಲಿ ತಿಳಿಸಲಾಗಿದೆ.

**ಪ್ರ ತೇ ಪೂರ್ವಾಣಿ ಕರಣಾನಿ ವಿಪ್ರಾಽಽವಿದ್ವಾ ಆಹ ವಿದುಷೇ ಕರಾಂಸಿ ।**
**ಯಥಾಯಥಾ ವೃಷ್ಣ್ಯಾನಿ ಸ್ವಗೂರ್ತಾ-ಪಾಂಸಿ ರಾಜನ್ನರ್ಯಾವಿವೇಷೀಃ ॥೧೦॥**

**ಪದಾರ್ಥ:-** **[ವಿಪ್ರ]** ಬುದ್ಧಿವಂತನೇ! **[ರಾಜನ್]** ರಾಜನೇ! **[ವಿದುಷೇ]** ವಿದ್ಯಾವಂತನೇ! **[ಯಥಾ ಯಥಾ]** ಹೇಗೆ ಹೇಗೆ **[ಪೂರ್ವಾಣಿ]** ಪ್ರಾಚೀನಕಾಲದಿಂದಲೂ ಸಿದ್ಧವಾದ **[ಕರಣಾನಿ]** ಸಾಧನಗಳು **[ಕರಾಂಸಿ]** ಮಾಡಲರ್ಹ ಕರ್ಮಗಳು **[ವೃಷ್ಣ್ಯಾನಿ]** ಬಲಕಾರಕ **[ಸ್ವಗೂರ್ತಾಃ]** ತಾನು ಪಡೆದಿರುವ **[ನರ್ಯಾ]** ಮನುಷ್ಯರಲ್ಲಿ ಹಿತಕಾರಕರು **[ಅಪಾಂಸಿ]** ಕರ್ಮಗಳನ್ನು **[ಆವಿದ್ವಾನ್]** ಎಲ್ಲವನ್ನು ತಿಳಿದವನಾಗಿ **[ಪ್ರ, ಆಹ]** ವಿಶಿಷ್ಟರೀತಿಯಲ್ಲಿ ಹೇಳುವನೋ **[ಅವಿವೇಷೀಃ]** ಅವನನ್ನೇ ನೀನು ಪಡೆಯುವವನಾಗು.

**ಭಾವಾರ್ಥ:-** ರಾಜನೇ! ಶ್ರೇಷ್ಠ ಪುರುಷರಿಗೆ ಸದಾ ಶಿಕ್ಷಣ ನೀಡುವಲ್ಲಿ ನೀನು ಪ್ರವೃತ್ತನಾಗು ಮತ್ತು ಅವರು ನಿನಗೆ ಹೇಗೆ - ಹೇಗೆ ಉಪದೇಶ ಮಾಡುವರೋ ಅದೇ ರೀತಿ ನೀನು ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಽ) ೩ ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೧೧॥**

**ಪದಾರ್ಥ:-** **[ಹರಿವಃ]** ಉತ್ತಮ ಸೇನಾಪುರುಷರನ್ನು ಪಡೆದವನೇ! **[ಇಂದ್ರ]** ಪ್ರಶಂಸಾರ್ಹ ಕರ್ಮಗಳನ್ನು ಮಾಡುವವನೇ! **[ತೇ]** ನಿನ್ನ **[ನವ್ಯಂ]** ನೂತನವಾದ **[ಬ್ರಹ್ಮ]** ಬೃಹದ್ಧನವು **[ಅಕಾರಿ]** ಉತ್ಪಾದಿಸಲ್ಪಡುವುದು. **[ಜರಿತ್ರೇ]** ಸ್ತಾವಕನಿಗೆ **[ಸ್ತುತಃ]** ಪ್ರಶಂಸಾರ್ಹ ನೀನು. **[ನದ್ಯಃ]** **[ನ]** ನದಿಗಳಿಗೆ ಸದೃಶನಾಗಿ **[ನು]** **[ಪೀಪೇಃ]** ಶೀಘ್ರವಾಗಿ ವೃದ್ಧಿಪಡಿಸು. **[ಗೃಣಾನಃ]** ಸತ್ಯಪ್ರಶಂಸೆ ಮಾಡುತ್ತ **[ಇಷಂ]** ಅನ್ನ ವಿಜ್ಞಾನಾದಿಗಳನ್ನು **[ನು]** ಶೀಘ್ರ ಕೊಡು. **[ರಥ್ಯಃ]** ರಮಣಯೋಗ್ಯ ರಥಾದಿಗಳಿಂದೊಡಗೂಡಿ **[ಸದಾಸಾಃ]** ಸೇವಕರೊಂದಿಗೆ **[ಧಿಯಾ]** ಬುದ್ಧಿಕರ್ಮದೊಂದಿಗೆ **[ಸ್ಯಾಮ]** ನಾವೂ ಅನುಕೂಲಕರರಾಗುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜನೇ! ಯಾರು ಪ್ರಶಂಸಾರ್ಹ ಕರ್ಮಗಳನ್ನು ಮಾಡುವರೋ ಅವರನ್ನು ಗೌರವಿಸು ಮತ್ತು ಯಾರು ನಿನಗೆ ಅನುಕೂಲಕರರಾಗುವರೋ ಅವರನ್ನು ಗೌರವಿಸು. ನೀವೆಲ್ಲರೂ ಸೇರಿ ಧರ್ಮ-ಅರ್ಥ-ಕಾಮಗಳೆಂಬ ಪುರುಷಾರ್ಥ ಸಾಧಕರಾಗಿರಿ.

ಈ ಸೂಕ್ತದಲ್ಲಿ ಇಂದ್ರ, ಮೇಘ, ಸೂರ್ಯ, ಸೇನೆ, ಸೇನಾಪತಿ ರಾಜ, ವಿದ್ಯಾವಂತ ಇವರೆಲ್ಲರ ಗುಣಕರ್ಮ ಸ್ವಭಾವಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಹತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೨೦

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೩, ೬, ನಿಚೃತ್ರಿಷ್ಟುಪ್, ೪, ೫ ವಿರಾಟ್ ತ್ರಿಷ್ಟುಪ್, ೮, ೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಪಂಕ್ತಿಃ ಛಂದಃ, ೭, ೯ ಸ್ವರಾಟ್ ಪಂಕ್ತಿಃ, ೧೧ ನಿಚೃತ್ಪಂಕ್ತಿಃ ಛಂದಃ । ಪಂಚಮಃ ಸ್ವರಃ ।

ಈ ಮಂತ್ರದಲ್ಲಿ ಇಂದ್ರ ಪದ ವಾಚ್ಯ ರಾಜನ ಗುಣ ಹೇಳಿದೆ.

**ಆ ನ ಇಂದ್ರೋ ದೂರಾದಾ ನ ಆಸಾ-ದಭಿಷ್ಟಿಕೃದವಸೇ ಯಾಸದುಗ್ರಃ ।**
**ಓಜಿಷ್ಠೇಭಿರ್ನೃಪತಿರ್ವಜ್ರಬಾಹುಃ ಸಂಗೇ ಸಮತ್ಸು ತುರ್ವಣಿಃ ಪೃತನ್ಯೂನ್ ॥೧॥**

**ಪದಾರ್ಥ:-** [ಅಭಿಷ್ಟಿಕೃತ್] ಅಪೇಕ್ಷಿತ ಸುಖದಾಯಕ [ವಜ್ರಬಾಹುಃ] ವಜ್ರಾಯುಧವನ್ನು ಕೈಯಲ್ಲಿ ಧರಿಸಿರುವ [ಉಗ್ರಃ] ಭಯಂಕರನಾದ [ನೃಪತಿಃ] ರಾಜನು [ತುರ್ವಣಿಃ] ಶೀಘ್ರಕಾರಕನು [ಇಂದ್ರಃ] ಐಶ್ವರ್ಯವಂತನು [ಓಜಿಷ್ಠೇಭಿಃ] ಬಲಪರಾಕ್ರಮಗಳಿರುವ ಸೈನಿಕರೊಂದಿಗೆ [ನಃ] ನಮ್ಮ [ಅವಸೇ] ರಕ್ಷಣೆಗಾಗಿ [ದೂರಾತ್] [ದೂರಾತ್] ದೂರದಿಂದ [ಆಸಾತ್] ಸಮೀಪದಿಂದ [ಆ] [ಯಾಸತ್] ಪ್ರಾಪ್ತನಾಗುವನು. [ಸಮತ್ಸು] ಸಂಗ್ರಾಮಗಳಲ್ಲಿ [ಪೃತನ್ಯೂನ್] ತನ್ನ ಸೈನ್ಯದ ಇಚ್ಛೆ ಮಾಡುವವನಾಗಿ [ನಃ] ನಮ್ಮ [ಸಂಗೇ] ಜೊತೆಯಲ್ಲಿ [ಆ] ಪ್ರಾಪ್ತನಾಗಲಿ.

**ಭಾವಾರ್ಥ:-** ಮನುಷ್ಯರೇ! ನೀವು ಎಲ್ಲ ರೀತಿಯಲ್ಲೂ ನಿಮ್ಮನ್ನು ರಕ್ಷಿಸುವ, ಬಲಿಷ್ಠ, ವಿದ್ಯಾವಂತ, ಬಲಿಷ್ಠ ಸೇನೆ ಇರುವ, ಸಂಗ್ರಾಮಗಳನ್ನು ಜಯಿಸುವವನಾದ ರಾಜನನ್ನು ಸ್ವೀಕರಿಸಿ ಸದಾಸುಖಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನ ಇಂದ್ರೋ ಹರಿಭಿರ್ಯಾತ್ವಚ್ಛಾ-ರ್ವಾಚೀನೋಽವಸೇ ರಾಧಸೇ ಚ ।**
**ತಿಷ್ಠಾತಿ ವಜ್ರೀ ಮಘವಾ ವಿರಪ್ಶೀ-ಮಂ ಯಜ್ಞಮನು ನೋ ವಾಜಸಾತೌ ॥೨॥**

**ಪದಾರ್ಥ:-** [ಅರ್ವಾಚೀನಃ] ಇಂದಿನ ಕಾಲದ [ಮಘವಾ] ಗೌರವಾರ್ಹನಾದ [ವಜ್ರೀ] ಶಸ್ತ್ರಾಸ್ತ್ರ ವಿದ್ಯೆಯನ್ನು ಬಲ್ಲ [ವಿರಪ್ಶೀ] ವೀರನಾದ [ಇಂದ್ರಃ] ರಾಜನು [ಹರಿಭಿಃ] ಶ್ರೇಷ್ಠ ಜನರೊಂದಿಗೆ [ನಃ] ನಮ್ಮನ್ನು [ಅವಸೇ] ಅನ್ನಾದಿಗಳಿಗಾಗಿ [ರಾಧಸೇ, ಚ] ಧನಕ್ಕಾಗಿಯೂ [ಅಚ್ಛ] ಉತ್ತಮರೀತಿಯಿಂದ [ಆ] [ಯಂತು] ಪ್ರಾಪ್ತನಾಗಲಿ. [ಇಮಂ] ಈ [ಯಜ್ಞಂ] ಪ್ರಜಾಪಾಲನರೂಪ ಯಜ್ಞದ [ನಃ] ನಮ್ಮ [ವಾಜಾಸಾತೌ] ಸಂಗ್ರಾಮದಲ್ಲಿ [ಅನು, ತಿಷ್ಠಾತಿ] ಅನುಷ್ಠಾನ ಮಾಡಲಿ.

**ಭಾವಾರ್ಥ:-** ಯಾವನು ಸಭಾಸದರಿಂದ ಪ್ರಜಾಸುಖಕ್ಕಾಗಿ ಅನ್ನಾದಿಗಳನ್ನು ಬಹುವಾಗಿ ಸಂಗ್ರಹಿಸಿ ಸಂಗ್ರಾಮಗಳಲ್ಲಿ ವಿಜಯಗಳಿಸಿ ಬಹುಧನಗಳಿಸಿ ನ್ಯಾಯಾಧೀಶನಾಗುವನೋ ಅವನೇ ರಾಜನಾಗಲು ಯೋಗ್ಯನು.

ಅಮಾತ್ಯರ ಗುಣವನ್ನಿಲ್ಲ ಹೇಳಿದೆ.

**ಇಮಂ ಯಜ್ಞಂ ತ್ವಮಸ್ಮಾಕಮಿಂದ್ರ ಪುರೋ ದಧತ್ಸನಿಷ್ಯಸಿ ಕ್ರತುಂ ನಃ ।**
**ಶ್ವಘ್ನೀವ ವಜ್ರಿನ್ತ್ಸನಯೇ ಧನಾನಾಂ ತ್ವಯಾ ವಯಮರ್ಯ ಆಜಿಂ ಜಯೇಮ ॥೩॥**

**ಪದಾರ್ಥ:-** **[ವಜ್ರಿನ್]** ಶಸ್ತ್ರಾಸ್ತ್ರ ಪ್ರಯೋಗಾಭಿಜ್ಞ **[ಇಂದ್ರ]** ಸೇನಾಪತಿಯೇ! **[ಅರ್ಯಃ]** ಸ್ವಾಮಿಯು **[ತ್ವಂ]** ನೀನು **[ಅಸ್ಮಾಕಂ]** ನಮ್ಮ **[ಇಮಂ]** ಈ **[ಯಜ್ಞಂ]** ರಾಜಧರ್ಮ ನಿರ್ವಾಹಕ ಯಜ್ಞವನ್ನು **[ಪುರಃ]** ನಗರವನ್ನು **[ದಧತ್]** ಕಾರಣ ಮಾಡುತ್ತ **[ನಃ]** ನಮ್ಮ **[ಕ್ರತುಂ]** ಬುದ್ಧಿಯನ್ನು **[ತ್ವಯಾ]** ನಿನ್ನೊಂದಿಗೆ **[ವಯಂ]** ನಾವು **[ಧನಾನಾಂ]** ಧನಗಳ **[ಸನಯೇ]** ವಿಭಾಗ ಮಾಡುವುದಕ್ಕೆ **[ಶ್ವಘ್ನೀವ]** ತೋಳದಂತೆ **[ಆಜಿಂ]** ಸಂಗ್ರಾಮವನ್ನು **[ಜಯೇಮ]** ಜಯಿಸೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜನು ಅಮಾತ್ಯರನ್ನೂ ಅಮಾತ್ಯರು, ರಾಜನನ್ನೂ ಸಂತೋಷಗೊಳಿಸುತ್ತ ಅಧಿಕಾರ ಧನಾದಿಗಳನ್ನು ವಿಭಜಿಸಿ ಕೊಟ್ಟು ಪಡೆದು ಪ್ರೀತಿಯಿಂದ ವ್ಯವಹರಿಸುವರೋ ಬಲಿಷ್ಠರಾಗಿ ಸಂಪತ್ಪ್ರಾಪ್ತಿಗಾಗಿ ತೋಳವು ಕುರಿ ಮೇಕೆಗಳನ್ನು ಕೊಲ್ಲುವಂತೆ ಶತ್ರುಗಳನ್ನು ನಾಶಮಾಡಿ ವಿಜಯಶೀಲರಾಗುವರೋ ಅವರೇ ಸಂಪೂರ್ಣ ಸುಖಿಗಳಾಗುವರು.

ಅಮಾತ್ಯರ ಗುಣವನ್ನಿಲ್ಲಿ ಹೇಳಲಾಗಿದೆ.

**ಉಶನ್ನುಷು ಣಃ ಸುಮನಾ ಉಪಾಕೇ ಸೋಮಸ್ಯ ನು ಸುಷುತಸ್ಯ ಸ್ವಧಾವಃ ।**
**ಪಾ ಇಂದ್ರ ಪ್ರತಿಭೃತಸ್ಯ ಮಧ್ವಃ ಸಮಂಧಸಾ ಮಮದಃ ಪೃಷ್ಠ್ಯೇನ ॥೪॥**

**ಪದಾರ್ಥ:-** **[ಉಶನ್]** ಬಯಸುವವನಾಗಿ **[ಸ್ವಧಾವಃ]** ಅನ್ನಾದಿ ಐಶ್ವರ್ಯ ಸಂಪನ್ನನಾಗಿರುವ **[ಇಂದ್ರ]** ಐಶ್ವರ್ಯವಂತ ರಾಜನೇ! ನೀನು **[ಸುಮನಾಃ]** ಪ್ರಸನ್ನಚಿತ್ತನಾಗಿ **[ನಃ]** ನಮ್ಮ **[ಉಪಾಕೇ]** ಸಮೀಪದಲ್ಲಿ **[ಸುಷುತಸ್ಯ]** ವಿದ್ಯಾವಿನಯಗಳಿಂದ ಪ್ರಸಿದ್ಧವಾದ **[ಸೋಮಸ್ಯ]** ಸಂಪದ್ಭರಿತವಾದ **[ಪ್ರತಿಭೃತಸ್ಯ]** ಧಾರಣ ಮಾಡಿರುವವನ **[ನಿ]** ನಿಶ್ಚಯವಾಗಿ **[ಸು, ಪಾಃ]** ಉತ್ತಮರೀತಿಯಿಂದ ಪಾಲನೆ ಮಾಡು. **[ಮಧ್ವಃ]** ಮಾಧುರ್ಯಾದಿ ಗುಣಯುಕ್ತ **[ಅಂಧಸಾ]** ಅನ್ನಾದಿಗಳಿಂದ **[ಪೃಷ್ಠ್ಯೇನ, ಉ]** ಹಿಂದೆ ಅನುಭವಿಸಿದ ಸುಖದಿಂದ **[ಸಂ, ಮಮದಃ]** ಉತ್ತಮಾನಂದವನ್ನನುಭವಿಸು.

**ಭಾವಾರ್ಥ:-** ರಾಜನು ಪ್ರೀತಿಯಿಂದ ಭೃತ್ಯ ವರ್ಗದವರನ್ನು ಐಶ್ವರ್ಯ ಅನ್ನಾದಿಗಳಿಂದ ರಕ್ಷಣೆ ಮಾಡುವವನು ತನ್ನ ಇಷ್ಟಾರ್ಥವನ್ನು ಸಾಧಿಸಿಕೊಂಡು ನಿರಂತರ ಆನಂದವನ್ನನುಭವಿಸುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿ ಯೋ ರರಪ್ಶ ಋಷಿಭಿರ್ನವೇಭಿ-ರ್ವೃಕ್ಷೋ ನ ಪಕ್ವಃ ಸೃಣ್ಯೋ ನ ಜೇತಾ ।**
**ಮರ್ಯೋ ನ ಯೋಷಾಮಭಿ ಮನ್ಯಮಾನೋಽಚ್ಛಾ ವಿವಕ್ಮಿ ಪುರುಹೂತಮಿಂದ್ರಮ್ ॥೫॥**

**ಪದಾರ್ಥ:-** **[ಯಃ]** ಯಾವನು **[ನವೇಭಿಃ]** ಅರ್ವಾಚೀನರಾದ **[ಋಷಿಭಿಃ]** ವೇದಾಧ್ಯಯನ, ವೇದಾರ್ಥ ತಿಳಿದವರಿಂದ **[ವಿ, ರರಪ್ಶ]** ಸ್ತುತಿಗೊಳಗಾಗುವನೋ **[ವೃಕ್ಷಃ]** **[ನ]** ವೃಕ್ಷಕ್ಕೆ ಸದೃಶವಾಗಿ **[ಪಕ್ವಃ]** ಪಕ್ವವಾದ ಫಲಾದಿಗಳಿಂದ ಯುಕ್ತನಾಗಿ **[ಸೃಣ್ಯಃ]** **[ನ]** ಬಲಿಷ್ಠ ಸೇನೆಗೆ ಸದೃಶ **[ಜೇತಾ]** ಜಯಶೀಲ **[ಮರ್ಯಃ]** ಮನುಷ್ಯನು **[ಯೋಷಾಂ]** **[ನ]** ಸ್ತ್ರೀಗೆ ಸಮನಾಗಿ ಪ್ರಜೆಯನ್ನು **[ಅಭಿಮನ್ಯಮಾನಃ]** ಅಭಿಮುಖವಾಗಿ ತಿಳಿದುಕೊಂಡು **[ಪುರುಹೂತಂ]** ಬಹು ಜನರಿಂದ ಪ್ರಶಂಸೆಪಡೆದವನಾಗಿ **[ಇಂದ್ರಂ]** ಉತ ಷ್ಟ ಗುಣಗಳ ಧಾರಕನನ್ನು **[ಅಚ್ಛ]** ಉತ್ತಮರೀತಿಯಲ್ಲಿ **[ವಿವಕ್ಮಿ]** ಉಪದೇಶಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಯಾವನು ಯಥಾರ್ಥವಾದಿಗಳಿಂದ ಪ್ರಶಂಸೆಗೊಳಗಾಗುವನೋ ಅವನು ವೃಕ್ಷದಂತೆ ಫಲವಂತನಾಗಿ ಒಬ್ಬನೇ ಸೇನೆಗೆ ಸದೃಶನಾಗಿ ಜಯಶೀಲನಾಗುವನು. ಪತಿವ್ರತೆಯಂತೆ ಪ್ರಜಾಪಾಲನೆಯಲ್ಲಿ ಪ್ರೀತಿಪಾತ್ರನಾಗಿ ಪ್ರಶಂಸಾರ್ಹ ರಾಜನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಗಿರಿರ್ನ ಯಃ ಸ್ವತವಾ ಋಷ್ವ ಇಂದ್ರಃ ಸನಾದೇವ ಸಹಸೇ ಜಾತ ಉಗ್ರಃ ।**
**ಆದರ್ತಾ ವಜ್ರಂ ಸ್ಥವಿರಂ ನ ಭೀಮ ಉದ್ನೇವ ಕೋಶಂ ವಸುನಾ ನ್ಯೃಷ್ಟಮ್ ॥೬॥**

**ಪದಾರ್ಥ:-** **[ಯಃ]** ಯಾವನು **[ಗಿರಿಃ]** **[ನ]** ಮೇಘಕ್ಕೆ ಸದೃಶ **[ಸ್ವತವಾನ್]** ತನ್ನ ಗುಣಗಳಿಂದ ಬೆಳೆದವನು **[ಋಷ್ವಃ]** ಬೃಹತ್ **[ಸನಾತ್]** **[ಏವ]** ಎಲ್ಲಾ ಕಾಲದಲ್ಲೂ **[ಸಹಸೇ]** ಬಲಕ್ಕಾಗಿ **[ಜಾತಃ]** ಪ್ರಸಿದ್ಧನಾದ **[ಉಗ್ರಃ]** ತೀವ್ರ ಸ್ವಭಾವದ **[ಇಂದ್ರಃ]** ಸೂರ್ಯನಂತೆ ಪ್ರತಾಪಿಯು **[ಸ್ಥವಿರಂ]** ಸ್ಥೂಲವಾದ **[ವಜ್ರಂ]** **[ನ]** ಮಿಂಚಿನಂತೆ **[ಆದರ್ತಾ]** ಶತ್ರುಸಂಹಾರಕನು **[ಭೀಮಃ]** ಭಯಂಕರ **[ಕೋಶಂ]** ಮೇಘವನ್ನು **[ಉದ್ನೇವ]** ನೀರಿನಂತೆ **[ವಸುನಾ]** ಧನದಿಂದ **[ನ್ಯೃಷ್ಟಂ]** ಪ್ರಾಪ್ತಗೊಳಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಯಾವನು ಮೇಘದಂತೆ ವಿಸ್ತೃತನು, ಪ್ರಜೆಗಳಿಗೆ ಸುಖ ನೀಡುವವನು, ಸನಾತನ ಧರ್ಮಸೇವಕನೂ, ಮಿಂಚಿನಂತೆ ಭಯಂಕರನು, ನಾಶವಾಗದ ಧನವಿರುವವನು, ಶತ್ರುಸಂಹಾರಕನು ಆಗಿರುವನೋ ಅವನೇ ರಾಜನಾಗಲು ಅರ್ಹನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ಯಸ್ಯ ವರ್ತಾ ಜನುಷಾ ನ್ವಸ್ತಿ ನ ರಾಧಸ ಆಮರೀತಾ ಮಘಸ್ಯ ।**
**ಉದ್ವಾವೃಷಾಣಸ್ತವಿಷೀವ ಉಗ್ರಾ-ಸ್ಮಭ್ಯಂ ದದ್ಧಿ ಪುರುಹೂತ ರಾಯಃ ॥೭॥**

**ಪದಾರ್ಥ:-** **[ಪುರುಹೂತ]** ಬಹುಜನರನ್ನು ಆಹ್ವಾನಿಸುವ **[ಉಗ್ರ]** ಪ್ರತಾಪೀ ರಾಜನು **[ಯಸ್ಯ]** ಯಾರ **[ಜನುಷಾ]** ಜನ್ಮದಿಂದ **[ವರ್ತಾ]** **[ನ]** ನಿವಾರಣೆಗೊಳಿಸುವವನಂತೆ **[ಅಸ್ತಿ]** ಇರುವನು **[ಮಘಸ್ಯ]** ಧನದ **[ರಾಧಸಃ]** ಅನ್ನದ **[ಆಮರೀತ್]** ನಾಶಪಡಿಸುವವನು **[ನ]** **[ಉದ್ವಾ ವೃಷಾಣಃ]** ಅವಿದ್ಯಮಾನ ಅತಿಶಯ ಬಲಕಾರಕನು **[ತವಿಷೀವಃ]** ಜಯಸಾಧಕ ಬಲಿಷ್ಠಸೇನೆ ಇರುವವನು **[ಅಸ್ಮಭ್ಯಂ]** ನಮಗೆ **[ರಾಯಃ]** ಧನವನ್ನು **[ನು]** ನಿಶ್ಚಯವಾಗಿ **[ದದ್ಧಿ]** ಕೊಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಉತ್ತಮ ಕುಲದಲ್ಲಿ ಜನಿಸಿರುವನೋ ಯಾವನ ಕುಲದವರು ಪ್ರಶಂಸಾರ್ಹ ಕರ್ಮಗಳನ್ನೇ ಮಾಡುತ್ತ ಬಂದಿರುವರೋ, ಯಾವನು ವಿಚಾರಶೀಲತೆಯಲ್ಲಿ, ಸಂಗ್ರಾಮದಲ್ಲಿ ತಡೆಯಲು ಸಾಧ್ಯವಾಗದವನೋ, ಅವನೇ ಸುಖದಾಯಕ ರಾಜನು. ಅಂತಹ ರಾಜನನ್ನಾ ಎಲ್ಲರೂ ಬಯಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಈಕ್ಷೇ ರಾಯಃ, ಕ್ಷಯಸ್ಯ ಚರ್ಷಣೀನಾ-ಮುತ ವ್ರಜಮಪವರ್ತಾಸಿ ಗೋನಾಮ್ ।**
**ಶಿಕ್ಷಾನರಃ ಸಮಿಧೇಷು ಪ್ರಹಾವಾನ್ ವಸ್ವೋ ರಾಶಿಮಭಿನೇತಾಸಿ ಭೂರಿಮ್ ॥೮॥**

**ಪದಾರ್ಥ:-** **[ಶಿಕ್ಷಾನರಃ]** ವಿದ್ಯಾದಾನದಿಂದ ನಾಯಕನೆನಿಸಿಕೊಂಡ ನೀನು **[ಪ್ರಹಾವಾನ್]** ವಿಜಯವನ್ನು ಪಡೆದು **[ಸಮಿಥೇಷು]** ಸಂಗ್ರಾಮದಲ್ಲಿ **[ವಸ್ವಃ]** ಸಂಪತ್ತಿನ **[ಭೂರಿಂ]** ಬಹುಪ್ರಕಾರ **[ರಾಶಿಂ]** ಸಮೂಹವನ್ನು **[ಅಭಿನೇತಾ]** ಸಮ್ಮುಖ ಮಾಡಿಕೊಳ್ಳುವವನು **[ಅಸಿ]** ಆಗಿರುವೆ. **[ಚರ್ಷಣೀನಾಂ]** ಮನುಷ್ಯರ **[ರಾಯಃ]** ಧನದ **[ಕ್ಷಯಸ್ಯ]** ನಿವಾಸದ **[ಉತ]** ಹಾಗೂ **[ಗೋನಾಂ]** ಸ್ತುತಿ ಮಾಡುವವರಿಗೆ ಸಂಬಂಧಿಸಿದ **[ವೃಜಂ]** ಶಸ್ತ್ರಾಸ್ತ್ರಗಳನ್ನು/ಆಯುಧಗಳನ್ನು **[ಅಪವರ್ತಾ]** ನಿವಾರಕನು **[ಅಸಿ]** ಆಗಿರುವೆ. **[ಈಕ್ಷೇ]** ಅವನು ರಾಜನಾಗುವುದನ್ನು ನಾನು ನೋಡುವೆನು.

**ಭಾವಾರ್ಥ:-** ಯಾವನು ದಿಕ್ಕು ದಿಕ್ಕುಗಳಲ್ಲೂ ಕೀರ್ತಿವಂತನಾಗಿರುವನೋ, ತನ್ನ ಪ್ರಜೆಗಳಿಗೆ ವಿದ್ಯೆ, ಧನ ಮತ್ತು ಉತ್ತಮ ನಿವಾಸಗಳನ್ನು ಕಲ್ಪಿಸಿ ಕೊಡುವನೋ ಯುದ್ಧಗಳಲ್ಲಿ ಯಾವಾಗಲೂ ಜಯಶೀಲನಾಗುವನೋ ಮತ್ತು ತನ್ನವರ ರಕ್ಷಣೆ ಮಾಡುವನೋ ಅವನೇ ರಾಜನಾಗಲು ಅರ್ಹನು.

ವಿದ್ವದುಪದೇಶ ಗುಣವನ್ನಿಲ್ಲಿ ಹೇಳಿದೆ.

**ಕಯಾ ತಚ್ಛೃಣ್ವೇ ಶಚ್ಯಾ ಶಚಿಷ್ಠೋ ಯಯಾ ಕೃಣೋತಿ ಮುಹು ಕಾ ಚಿದೃಷ್ವಃ ।**
**ಪುರು ದಾಶುಷೇ ವಿಚಯಿಷ್ಠೋ ಅಂಹೋಽಥಾ ದಧಾತಿ ದ್ರವಿಣಂ ಜರಿತ್ರೇ ॥೯॥**

**ಪದಾರ್ಥ:-** **[ಶಚಿಷ್ಠಃ]** ಅತಿಶಯ ಬುದ್ಧಿವಂತ **[ವಿಚಯಿಷ್ಠಃ]** ಬುದ್ಧಿವಂತಿಕೆಯಿಂದ ಸಂಯೋಜನೆಗೊಳಿಸುವವನು **[ಋಷ್ವಃ]** ಶ್ರೇಷ್ಠ ವಿದ್ಯಾವಂತನು **[ಅಂಹಃ]** ಅಪರಾಧವನ್ನು ಬೇರ್ಪಡಿಸುವವನು **[ಅಥ]** ಅನಂತರ **[ಜರಿತ್ರೇ]** ಸ್ತುತಿ ಮಾಡಲು **[ದಾಶುಷೇ]** ಮತ್ತು ದಾನ ಮಾಡುವುದಕ್ಕಾಗಿ **[ಪುರು]** **[ದ್ರವಿಣಂ]** ವಿಪುಲ ಧನವನ್ನು **[ದಧಾತಿ]** ಧಾರಣ ಮಾಡಿರುವನೋ **[ಕಾ]** **[ಚಿತ್]** ಯಾವುದಾದರೂ ಉತ್ತಮ ಕರ್ಮಗಳನ್ನು **[ಯಯಾ]** **[ಕಯಾ]** ಯಾವುದಾದರೂ ರೀತಿಯ **[ಶಚ್ಯಾ]** ಬುದ್ಧಿಯಿಂದ ಅಥವಾ ಕ್ರಿಯೆಯಿಂದ **[ಮುಹುಃ]** ಮತ್ತೆ ಮತ್ತೆ **[ಕೃಣೋತಿ]** ಮಾಡುತ್ತಲೇ ಇರುವನೋ **[ತತ್]** **[ಶೃಣ್ವೇ]** ಅಂತಹವನನ್ನು/ಅಂತಹವನಿಂದ ನಾನು ಕೇಳಿಸಿಕೊಳ್ಳುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಥಾರ್ಥ ನುಡಿಯುವವನು ಪಾಪಕರ್ಮಗಳನ್ನು ತ್ಯಜಿಸಿ ಧರ್ಮಕರ್ಮಗಳನ್ನು ಸ್ವೀಕರಿಸುವವನು, ಯಥಾರ್ಥ ಜ್ಞಾನವನ್ನು ಗ್ರಹಣ ಮಾಡುವವನು, ಲೋಕ ಕಲ್ಯಾಣಕ್ಕಾಗಿ ಜ್ಞಾನವನ್ನು ವಿಸ್ತರಿಸುವವನು ಆಗಿರುವನೋ ಅವನೇ ಯೋಗ್ಯ ಮನುಷ್ಯನೆನಿಸಿಕೊಳ್ಳುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾ ನೋ ಮರ್ಧೀರಾ ಭರಾ ದದ್ಧಿ ತನ್ನಃ ಪ್ರ ದಾಶುಷೇ ದಾತವೇ ಭೂರಿ ಯತ್ತೇ ।**
**ನವ್ಯೇ ದೇಷ್ಣೇ ಶಸ್ತೇ ಅಸ್ಮಿನ್ತ ಉಕ್ಥೇ ಪ್ರ ಬ್ರವಾಮ ವಯಮಿಂದ್ರ ಸ್ತುವಂತಃ ॥೧೦॥**

**ಪದಾರ್ಥ:-** **[ಇಂದ್ರ]** ರಾಜನೇ! ನೀನು **[ನಃ]** ನಮ್ಮನ್ನು **[ಮಾ]** **[ಮರ್ಧೀಃ]** ನೊಂದವರನ್ನಾಗಿ ಮಾಡಬೇಡ. **[ತತ್]** ಆ ಧನವನ್ನು **[ಆ, ಭರ]** ಧಾರಣ ಮಾಡಿಸು. **[ಯತ್]** ಯಾವುದು **[ತೇ]** ನಿನ್ನ **[ಅಸ್ಮಿನ್]** **[ನವ್ಯೇ]** ಈ ನೂತನ **[ದೇಷ್ಣೇ]** ದಾನ ಯೋಗ್ಯವು. **[ತೇ]** ನಿನ್ನ **[ಶಸ್ತೇ]** ಪ್ರಶಂಸಿತ **[ಉಕ್ಥೇ]** ಕಥನ ಯೋಗ್ಯ ವ್ಯವಹಾರದಲ್ಲಿ **[ಭೂರಿ]** ಬಹಳಷ್ಟು ಧನವಿದೆಯೋ **[ದಾಶುಷೇ]** ದಾನಶೀಲನಿಗಾಗಿ **[ದಾತವೇ]** ಕೊಡಲು **[ಪ್ರ]** ಧಾರಣ ಮಾಡು.

**[ನಃ]** ನಮಗಾಗಿ **[ದದ್ಧಿ]** ಕೊಡುವವನಾಗು. **[ಸ್ತುವಂತಃ]** ಪ್ರಶಂಸೆಮಾಡುತ್ತ **[ವಯಂ]** ನಾವು **[ಪ್ರ, ಬ್ರವಾಮ]** ನಿನಗೆ ಇದನ್ನು ಉಪದೇಶಿಸುವೆವು.

**ಭಾವಾರ್ಥ:-** ರಾಜನೇ! ನಿನಗೆ ಮಾಡಲರ್ಹವಾದ ಯಾವ ಯಾವ ಕಾರ್ಯಗಳನ್ನು ಹೇಳುವೆವೋ ಅವುಗಳನ್ನು ಮಾಡು. ಪ್ರಜೆ, ಮಂತ್ರಿ ಮತ್ತು ರಾಜ್ಯಗಳ ಏಳಿಗೆಗಾಗಿ ವಿಪುಲ ಧನ, ಶ್ರೇಷ್ಠ ವಿದ್ಯೆ, ಯೋಗ್ಯ ನ್ಯಾಯ ಇವುಗಳನ್ನು ವಿಸ್ತರಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (೩) ೩ ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೧೧॥**

**ಪದಾರ್ಥ:-** **[ಇಂದ್ರ]** ರಾಜನೇ! **[ಸ್ತುತಃ]** ಪ್ರಶಂಸೆ ಪಡೆದ ನೀನು **[ಜರಿತ್ರೇ]** ಸತ್ಯ ನುಡಿಯುವವನಿಗೆ **[ನವ್ಯಂ]** **[ಬ್ರಹ್ಮ]** ನವೀನವಾದ ಧನ ಅಥವಾ ಅನ್ನವನ್ನು **[ನು]** ಶೀಘ್ರವಾಗಿ **[ನದ್ಯ]** **[ನ]** ನದಿಗಳಿಗೆ ಸದೃಶವಾಗಿ **[ಪಿಪೇಃ]** ವೃದ್ಧಿಪಡಿಸು. **[ಗೃಣಾನಃ]** ಪ್ರಶಂಸೆ ಮಾಡುತ್ತ **[ಇಷಂ]** ವಿಜ್ಞಾನವನ್ನು ಬೆಳೆಸು. **[ಹರಿವಃ]** ಬಹುವಿಧ ಸೇನಾಂಗಗಳನ್ನು ಸಂಯೋಜಿಸಿರುವ **[ತೇ]** ನಿನಗೆ **[ಧಿಯಾ]** ಬುದ್ಧಿ, ಕರ್ಮ, ಧನ, ಅನ್ನಗಳಿಂದ **[ಅಕಾರಿ]** ನಾವು ಸಹಕರಿಸುವೆವು. **[ಸದಾಸಾಃ]** ಸಮಾನ ಸಹಕರಿಸುವ ಸೇವಕರಾದ ನಾವು **[ರಥ್ಯಃ]** ವಾಹನಗಳಿಂದೊಡಗೂಡಿದವರು **[ನು]** **[ಸ್ಯಾಮ]** ಸಹಕರಿಸುವವರಾಗುವೆವು.

**ಭಾವಾರ್ಥ:-** ಮಂತ್ರಿ, ಸೇನೆ, ಸೇನಾಪತಿ, ಪ್ರಜೆಗಳಿಗೆ ಶ್ರೇಷ್ಠ ಕರ್ಮ ಮಾಡುವುದು ರಾಜನ ಸ್ತುತಿ ಮಾಡುವುದು ಹೇಗೆ ಕರ್ತವ್ಯವಾಗಿರುತ್ತದೆಯೋ, ಅದೇ ರೀತಿ ಅವರೆಲ್ಲರನ್ನು ಉತ್ತಮ ಕರ್ಮಗಳಲ್ಲಿ ತೊಡಗಿಸಿ ಅವರ ಪ್ರಶಂಸೆಮಾಡುವುದು ರಾಜನ ಕರ್ತವ್ಯವಾಗಿದೆ.

ಈ ಸೂಕ್ತದಲ್ಲಿ ಇಂದ್ರ, ರಾಜ, ಅಮಾತ್ಯ, ವಿದ್ಯಾವಂತರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಇಪ್ಪತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೨೧

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೨, ೭, ೧೦ ಭುರಿಕ್ಪಂಕ್ತಿಃ, ೩ ಸ್ವರಾಟ್ಪಂಕ್ತಿಃ, ೧೧ ನಿಚೃತ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೪, ೫ ನಿಚೃತ್ತ್ರಿಷ್ಟುಪ್, ೬, ೮ ವಿರಾಟ್ ತ್ರಿಷ್ಟುಪ್, ೯ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ಇಂದ್ರ ಪದ ವಾಚ್ಯ ರಾಜಗುಣ ಹೇಳಿದೆ.

**ಆ ಯಾತ್ವಿಂದ್ರೋಽವಸ ಉಪ ನ ಇಹ ಸ್ತುತಃ ಸಧಮಾದಸ್ತು ಶೂರಃ ।**
**ವಾವೃಧಾನಸ್ತವಿಷೀರ್ಯಸ್ಯ ಪೂರ್ವೀ-ರ್ದ್ಯೌರ್ನ ಕ್ಷತ್ರಮಭಿಭೂತಿ ಪುಷ್ಯಾತ್ ॥೧॥**

**ಪದಾರ್ಥ:-** **[ಯಸ್ಯ]** ಯಾವ ರಾಜನ **[ದ್ಯೌಃ]** **[ನ]** ಸೂರ್ಯನಿಗೆ ಸಮನಾದ **[ಪೂರ್ವೀಃ]** ಪ್ರಾಚೀನ **[ತವಿಷೀಃ]** ಬಲಿಷ್ಠ ಸೇನೆಯು **[ಅಭಿಭೂತಿ]** ಶತ್ರುಗಳ ಅಭಿಯೋಗ ನಿಮಿತ್ತ **[ಕ್ಷತ್ರಂ]** ರಾಜ್ಯವನ್ನು **[ಪುಷ್ಯಾತ್]** ಪುಷ್ಟಿಗೊಳ್ಳುತ್ತದೆ. **[ವಾವೃಧಾನಾಃ]** ವೃದ್ಧಿಹೊಂದಲು **[ಶೂರಃ]** ವೀರಪುರುಷನು **[ಸ್ತುತಃ]** ಹೊಗಳಿಕೆ ಪಡೆದು **[ಇಂದ್ರಃ]** **[ನ]** ಪ್ರಜಾರಕ್ಷಕನಂತೆ **[ಅವಸೇ]** ರಕ್ಷಣೆಗಾಗಿ **[ಇಹ]** ಈ ರಾಜ್ಯ, ಪ್ರಜೆಗಳ ವ್ಯವಹಾರದಲ್ಲಿ **[ಉಪ, ಆ, ಯಾತು]** ಸಮೀಪಕ್ಕೆ ಬರಲಿ. **[ಸಧಮಾತ್]** ಸಮೀಪ ಸ್ಥಾನದಲ್ಲಿ **[ಅಸ್ತು]** ಇರುವವನಾಗಲಿ.

**ಭಾವಾರ್ಥ:-** ಯಾವ ರಾಜನು ಮಿಂಚಿನಂತೆ ಬಲಿಷ್ಠನೂ ಸೂರ್ಯನಂತೆ ಪ್ರಕಾಶಮಾನನೂ ಆಗಿದ್ದು ಶೂರ-ವೀರ ಸೈನಿಕರಿರುವ ಸೇನೆಯನ್ನು ಸಂಗ್ರಹಿಸಿ ಪ್ರಜೆಗಳ ಹಿತಕ್ಕಾಗಿ ನಿಷ್ಕಂಟಕ ಅಂದರೆ ದುಷ್ಟಜನರಿಲ್ಲದಂತೆ ರಾಜ್ಯವನ್ನು ವೃದ್ಧಿಪಡಿಸುವನೋ, ಅವನೇ ಈ ಜಗತ್ತಿನಲ್ಲಿ ಸಮಗ್ರ ಸುಖ, ಪ್ರತಿಷ್ಠೆ ಪಡೆದು ಸುಖಿಯಾಗುವನು. ಶರೀರ ತ್ಯಾಗಾನಂತರ ಮೋಕ್ಷವನ್ನು ಪಡೆಯುವನು.

ಇಲ್ಲಿ ರಾಜ ಗುಣಗಳನ್ನು ಹೇಳಿದೆ.

**ತಸ್ಯೇದಿಹ ಸ್ತವಥ ವೃಷ್ಣ್ಯಾನಿ ತುವಿದ್ಯುಮ್ನಸ್ಯ ತುವಿರಾಧಸೋ ನೄನ್ ।**
**ಯಸ್ಯ ಕ್ರತುರ್ವಿದಥ್ಯೋ (ಓ)ಽ ನ ಸಮ್ರಾಟ್ ಸಾಹ್ವಾನ್ ತರುತ್ರೋ ಅಭ್ಯಸ್ತಿ ಕೃಷ್ಟೀಃ ॥೨॥**

**ಪದಾರ್ಥ:-** **[ಯಸ್ಯ]** ಯಾವ **[ತುವಿದ್ಯುಮ್ನಸ್ಯ]** ಕೀರ್ತಿವಂತನ **[ತುವಿರಾಧಸಃ]** ಬಹು ಧನವಂತ ರಾಜನ **[ಇಹ]** ಈ ರಾಜ್ಯದಲ್ಲಿ **[ವಿದಥ್ಯಃ]** ತಿಳಿಯಲರ್ಹವಾದ **[ಸಮ್ರಾಟ್]** **[ನ]** ಚೆನ್ನಾಗಿ ಶೋಭಿಸುತ್ತಿರುವ ಭೂಮಿಯ ಪ್ರಕಾಶಕ್ಕೆ ಸಮನಾದ **[ಸಾಹ್ವಾನ್]** ಸಹಿಸಲು **[ತರುತ್ರಃ]** ದುಃಖವನ್ನು ದಾಟಲು **[ಕ್ರತುಃ]** ಬುದ್ಧಿ ಮತ್ತು ಶಾಸನ ರೂಪ ಯಜ್ಞವು **[ಅಭಿ, ಅಸ್ತಿ]** ಸುತ್ತಮುತ್ತಲೂ ಇದೆಯೋ, **[ವೃಷ್ಣ್ಯಾನಿ]** ಶ್ರೇಷ್ಠ ಪರಾಕ್ರಮವಿದೆಯೋ, **[ತಸ್ಯ ಇತ್]** ಅದರ **[ನೄನ್]** ಪ್ರಮುಖ ನಾಯಕನಾದ **[ಕೃಷ್ಟೀಃ]** ಮನುಷ್ಯನನ್ನು **[ಸ್ತವಥ]** ಪ್ರಶಂಸೆ ಮಾಡಿರಿ.

**ಭಾವಾರ್ಥ:-** ಮನುಷ್ಯರೇ! ಯಾವನಲ್ಲಿ ಬಲಿಷ್ಠ ಸೇನೆ, ವಿಸ್ತೃತ ಕೀರ್ತಿ, ಅಸಂಖ್ಯಾತ ಧನ, ಪರಿಪೂರ್ಣ ವಿದ್ಯೆ, ಉತ್ತಮ ಗುಣ, ಕರ್ಮ, ಸ್ವಭಾವವಿದೆಯೋ ಅವನೇ ಚಕ್ರವರ್ತಿ ರಾಜನಾಗಲು ಯೋಗ್ಯನು. ಅವನ ಪ್ರಶಂಸೆಯನ್ನು ನೀವೆಲ್ಲರೂ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ಯಾತ್ವಿಂದ್ರೋ ದಿವ ಆ ಪೃಥಿವ್ಯಾ ಮಕ್ಷೂ ಸಮುದ್ರಾದುತ ವಾ ಪುರೀಷಾತ್ ।**
**ಸ್ವರ್ಣರಾದವಸೇ ನೋ ಮರುತ್ವಾನ್ ಪರಾವತೋ ವಾ ಸದನಾದೃತಸ್ಯ ॥೩॥**

**ಪದಾರ್ಥ:-** **[ಆ, ದಿವಃ]** ಸೂರ್ಯನು ತನ್ನ ಬೆಳಕಿನಿಂದ **[ಪೃಥಿವ್ಯಾಃ]** ಭೂಮಿಯಿಂದ **[ಉತ್]** ಮತ್ತು **[ಸಮುದ್ರಾತ್]** ಅಂತರಿಕ್ಷದಿಂದ **[ಪುರೀಷಾತ್]** ಜಲದಿಂದ **[ಪರಾವತಃ]** ದೂರದೇಶದಿಂದ **[ಋತಸ್ಯ]** ಸತ್ಯದ **[ಸದನಾತ್]** ಸ್ಥಾನದಿಂದ **[ವಾ]** ನಮ್ಮ ರಕ್ಷಣಾದಿಗಳಿಗೆ **[ಮಕ್ಷೂ]** ಬೇಗನೇ ಪ್ರಾಪ್ತನಾಗುವನೋ ಹಾಗೆ **[ಪೂರ್ಣರಾತ್]** ಸೂರ್ಯ ಸದೃಶ ನಾಯಕನಿಂದ **[ನಃ]** ನಮ್ಮ ಅವನೇ ರಕ್ಷಣಾದಿಗಳಿಗೆ **[ಮರುತ್ವಾನ್]** ವಾಯ್ವಾದಿ ಪ್ರಸಿದ್ಧ ಪದಾರ್ಥಗಳೊಂದಿಗೆ **[ಇಂದ್ರಃ]** ಸೂರ್ಯ ಸದೃಶರಾಜನು **[ಆ, ಯಾತು]** ಪ್ರಾಪ್ತನಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ಸೂರ್ಯನು ಹೇಗೆ ಅಂತರಿಕ್ಷ, ಬೆಳಕು, ಭೂಮಿ, ಜಲ ಮತ್ತು ಕಾರ್ಯರೂಪ ಪ್ರಪಂಚ ಇವುಗಳಲ್ಲಿ ವ್ಯಾಪ್ತನಾಗಿ ನಮ್ಮೆಲ್ಲರ ರಕ್ಷಣೆ ಮಾಡುವನೋ ಹಾಗೆ ನೀನು ಪರಾಕ್ರಮೀ ಉತ್ತಮ ಸಹಾಯಕನಾಗಿ ನಮ್ಮೆಲ್ಲರನ್ನೂ ರಕ್ಷಣೆ ಮಾಡುತ್ತ ಪ್ರಕಾಶಮಾನನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ಥೂರಸ್ಯ ರಾಯೋ ಬೃಹತೋ ಯ ಈಶೇ ತಮು ಷ್ಟವಾಮ ವಿದಥೇಷ್ವಿಂದ್ರಮ್ ।**
**ಯೋ ವಾಯುನಾ ಜಯತಿ ಗೋಮತೀಷು ಪ್ರ ಧೃಷ್ಣುಯಾ ನಯತಿ ವಸ್ಯೋ ಅಚ್ಛ ॥೪॥**

**ಪದಾರ್ಥ:-** [ಯಃ] ಯಾವನು [ಬೃಹತಃ] ಮಹತ್ತಾದ [ಸ್ಥೂರಸ್ಯ] ಸ್ಥೂಲವಾದ [ರಾಯಃ] ಧನದ [ಈಶೇ] ಸ್ವಾಮಿಯಾಗುವನೋ [ವಿದಥೇಷು] ಸಂಗ್ರಾಮದಲ್ಲಿ [ಇಂದ್ರಂ] ಶತ್ರುನಾಶಕನನ್ನು [ಅಚ್ಛ] ಉತ್ತಮ ರೀತಿಯಲ್ಲಿ [ನಯತಿ] ನಡೆಸಿಕೊಳ್ಳುವನೋ [ಯಃ] ಯಾವನು [ಗೋಮತೀಷು] ಶ್ರೇಷ್ಠ ವಾಣಿಯ ಸೇನೆಗಳಲ್ಲಿ [ಧೃಷ್ಣುಯಾ] ಪ್ರಗಲ್ಭತೆಯಿಂದ [ವಾಯುನಾ] ಗಾಳಿಯೊಂದಿಗೆ [ಜಯತಿ] ವಿಜಯಿಯಾಗುವನೋ [ವಸ್ಯಃ] ಶ್ರೇಷ್ಠ ಧನವನ್ನು [ಪ್ರ] ಪಡೆಯಲಿಚ್ಛಿಸುವನೋ [ತಂ ಉ] ಅವನನ್ನು [ಸ್ತವಾಮ] ನಾವು ಪ್ರಶಂಸಿಸೋಣ.

**ಭಾವಾರ್ಥ:-** ಯಾವ ರಾಜನು ಯುದ್ಧಗಳಲ್ಲಿ ಸೇನೆಯೊಂದಿಗೆ ವಿಜಯಗಳಿಸುತ್ತಾನೆಯೋ, ಬಹು ಧನ ಪಡೆದು ಪ್ರತಿಷ್ಠಿತನಾಗುತ್ತಾನೆಯೋ ಅವನ ಪ್ರಶಂಸೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಪ ಯೋ ನಮೋ ನಮಸಿ ಸ್ತಭಾಯ-ನ್ನಿಯರ್ತಿ ವಾಚಂ ಜನಯನ್ ಯಜಧ್ಯೈ ।**
**ಋಂಜಸಾನಃ ಪುರುವಾರ ಉಕ್ಥೈ-ರೇಂದ್ರಂ ಕೃಣ್ವೀತ ಸದನೇಷು ಹೋತಾ ॥೫॥**

**ಪದಾರ್ಥ:-** [ಯಃ] ಯಾವನು [ಯಜಧ್ಯೈ] ಸಂಗತಿಕರಣಗೊಳಿಸಲು [ವಾಚಂ] ಸುಶಿಕ್ಷಿತ ನುಡಿಯನ್ನು [ಜನಯನ್] ಪ್ರಕಟಿಸುತ್ತ [ಉಕ್ಥೈಃ] ಪ್ರಶಂಸಿತ ಕರ್ಮಗಳಿಂದ [ಋಂಜಸಾನಃ] ಸಿದ್ಧಗೊಳಿಸುತ್ತ [ಪುರುವಾರಃ] ಬಹು ಜನರು ಸ್ವೀಕರಿಸಿರುವ ಹೋತಾ ನ್ಯಾಯದಾಯಕ [ಸದನೇಷು] ನ್ಯಾಯಾಲಯದಲ್ಲಿ [ನಮಸಿ] ಸತ್ಕಾರದ ನಿಮಿತ್ತ [ನಮಃ] ಅನ್ನವನ್ನು [ಉಪ, ಸ್ತಭಾಯನ್] ಸ್ತಂಭಿತವಾಗಿಸುತ್ತ [ಇಂದ್ರಂ] ಸಂಪತ್ತನ್ನು [ಆ, ಕೃಣ್ವೀತ] ಸಿದ್ಧಪಡಿಸುವನೋ ಅವನು [ಇಯರ್ತಿ] ಅನ್ನ, ಗೌರವಗಳನ್ನು ಪಡೆಯುವನು.

**ಭಾವಾರ್ಥ:-** ಯಾವ ರಾಜನು ಉತ್ತಮ ಶಿಕ್ಷಣ, ವಿದ್ಯೆಗಳಿಂದ ಕೂಡಿರುವ ನೀತಿಯನ್ನು ಪ್ರಕಟಿಸುವನೋ, ಸತ್ಕಾರಾರ್ಹರನ್ನು ಸತ್ಕರಿಸುವನೋ, ದುಷ್ಟರನ್ನು ದಂಡಿಸುವನೋ, ಪ್ರಯತ್ನಪೂರ್ವಕ ರಾಜ್ಯಪಾಲನೆ ಮಾಡುತ್ತ ರಾಜ್ಯದ ಸಂಪತ್ತನ್ನು ಅಭಿವೃದ್ಧಿಪಡಿಸುವನೋ ಅವನು ಎಲ್ಲೆಲ್ಲೂ ಗೌರವಕ್ಕೆ ಪಾತ್ರನಾಗುವನು.

ರಾಜನೊಂದಿಗೆ ಪ್ರಜೆಗಳ ಕರ್ತವ್ಯವಿಲ್ಲಿ ತಿಳಿಸಿದೆ.

**ಧಿಷಾ ಯದಿ ಧಿಷಣ್ಯಂತಃ ಸರಣ್ಯಾ-ನ್ತ್ಸದಂತೋ ಅದ್ರಿಮೌಶಿಜಸ್ಯ ಗೋಹೇ ।**
**ಆ ದುರೋಷಾಃ ಪಾಸ್ತ್ಯಸ್ಯ ಹೋತಾ ಯೋ ನೋ ಮಹಾನ್ತ್ಸಂವರಣೇಷು ವಹ್ನಿಃ ॥೬॥**

**ಪದಾರ್ಥ:-** **[ಯಃ]** ಯಾವನು **[ನಃ]** ನಮ್ಮ **[ಪಾಸ್ತ್ಯಸ್ಯ]** ಮನೆಯಲ್ಲಿ ಉತ್ಪನ್ನವಾದದ್ದನ್ನು **[ಸಂವರಣೇಷು]** ಗುಟ್ಟಾಗಿರಿಸುವಂತಹ ವ್ಯವಹಾರಗಳಲ್ಲಿ **[ವಹ್ನಿಃ]** ಹವ್ಯವಾಡಗ್ನಿಗೆ ಸಮನಾಗಿ **[ಮಹಾನ್]** ಅತಿಶಯ **[ದುರೋಷಾಃ]** ಕ್ರೋಧರಹಿತನಾದ **[ಹೋತಾ]** ದಾನಿಯಾಗಿರುವನೋ **[ಯದಿ]** ಅವನ **[ಅದ್ರಿಂ]** ಮೇಘದಂತೆ **[ಔಷಿಜಸ್ಯ]** ಸಂತಾನದ ಕಾಮನೆ ಮಾಡುವವನ **[ಗೋಹೇ]** ಗೌಪ್ಯವಾದ ಗೃಹದಲ್ಲಿ **[ಧಿಷಣ್ಯಂತಃ]** ಪ್ರಶಂಸೆ ಮಾಡುತ್ತ **[ಸರಗ್ಯಾನ್]** ಸನ್ಮಾರ್ಗವನ್ನರಿತವರಿಗೆ **[ಆ, ಸದಂತಃ]** ನಿವಾಸವನ್ನೊದಗಿಸುತ್ತ **[ಧಿಷಾ]** ಪ್ರಶಂಸೆಯೊಂದಿಗೆ ಗ್ರಹಣಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರಶಂಸಾರ್ಹ ಪುರುಷರ ಪ್ರಶಂಸೆಯನ್ನು ಮಾಡುವರೋ, ಮಾಡಿಸುವರೋ ಮತ್ತು ಅಂತಹ ಪುರುಷರ ರಕ್ಷಣೆ ಮಾಡುವರೋ, ಮಾಡಿಸುವರೋ ಅವರೇ ಶ್ರೇಷ್ಠ ಪುರುಷರೆನಿಸಿಕೊಳ್ಳುತ್ತಾರೆ.

ರಾಜನಿಗೆ ಸಂಬಂಧಿಸಿದ ಸೇವಕರ ವಿಷಯವನ್ನಿಲ್ಲಿ ಹೇಳಿದೆ.

**ಸತ್ರಾ ಯದೀಂ ಭಾರ್ವರಸ್ಯ ವೃಷ್ಣಃ ಸಿಷಕ್ತಿ ಶುಷ್ಮಃ ಸ್ತುವತೇ ಭರಾಯ ।**
**ಗುಹಾ ಯದೀಮೌಶಿಜಸ್ಯ ಗೋಹೇ ಪ್ರ ಯದ್ಧಿಯೇ ಪ್ರಾಯಸೇ ಮದಾಯ ॥೭॥**

**ಪದಾರ್ಥ:-** **[ಯತ್]** ಯಾವನು **[ಶುಷ್ಮಃ]** ಬಲಿಷ್ಠನು **[ಸತ್ರಾ]** ಸತ್ಯವಂತನು **[ಈಂ]** ಎಲ್ಲ ರೀತಿಯ **[ಭಾರ್ವರಸ್ಯ]** ಪ್ರಜೆಗಳ ಪಾಲನೆ ಮಾಡುವವನು ಅಂತಹ ರಾಜನ **[ವೃಷ್ಣಃ]** ಶಕ್ತಿವಂತನ **[ಸ್ತುವತೇ]** ಪ್ರಶಂಸೆ ಮಾಡುತ್ತ **[ಭರಾಯ]** ಧಾರಣ ಪೋಷಣೆಗಳಿಗಾಗಿ **[ಸಿಷಕ್ತಿ]** ಆಸೇಚನ ಕರ್ಮ ಮಾಡುವನು **[ಯತ್]** ಯಾವ **[ಗುಹಾ]** ಬುದ್ಧಿಯಲ್ಲಿ **[ಔಶಿಜಸ್ಯ]** ಚತುರನಾದವನ **[ಗೋಹೇ]** ಮನೆಯಲ್ಲಿ **[ಪ್ರ]** ಸತ್ಯಸೇಚನೆ ಮಾಡುವನು **[ಯತ್]** ಯಾವನು **[ಅಯಸೇ]** ಗಮನಕ್ಕೆ **[ಮದಾಯ]** ಆನಂದಕ್ಕೆ **[ಧಿಯೇ]** ಬುದ್ಧಿಗಾಗಿ **[ಈಂ]** ಅತಿಶಯ **[ಪ್ರ]** ಸೇಚನೆ ಮಾಡುವನೋ, ಅವನೇ ಸಮಗ್ರ ಲಾಭವನ್ನು ಪಡೆಯುವನು.

**ಭಾವಾರ್ಥ:-** ಯಾವ ರಾಜಸೇವಕರು ಧರ್ಮ ಮಾರ್ಗದಲ್ಲಿ ರಾಜ್ಯಶಾಸನ ಮಾಡುವ ರಾಜನ ರಾಜ್ಯದಲ್ಲಿ ಸತ್ಯ ನ್ಯಾಯಗಳೊಂದಿಗೆ ಪ್ರಜಾಪಾಲನೆ ಮಾಡುವರೋ ಅವರು ಅತ್ಯೈಶ್ವರ್ಯವಂತರಾಗುತ್ತಾರೆ.

ರಾಜನ ವಿಷಯವನ್ನಿಲ್ಲಿ ಹೇಳಿದೆ.

**ವಿ ಯದ್ವರಾಂಸಿ ಪರ್ವತಸ್ಯ ವೃಣ್ವೇ ಪಯೋಭಿರ್ಜಿನ್ವೇ ಅಪಾಂ ಜವಾಂಸಿ ।**
**ವಿದದ್ಗೌರಸ್ಯ ಗವಯಸ್ಯ ಗೋಹೇ ಯದೀ ವಾಜಾಯ ಸುಧ್ಯೋ (೭) ೩ ವಹಂತಿ ॥೮॥**

**ಪದಾರ್ಥ:-** **[ಯದಿ]** ಒಂದು ವೇಳೆ **[ಸುಧ್ಯಃ]** ಬುದ್ಧಿವಂತ ಜನರು **[ವಾಜಾಯ]** ವೇಗ ಪ್ರಾಪ್ತಿಗಾಗಿ **[ಗೌರಸ್ಯ]** ಗೋವಿನ **[ಗವಯಸ್ಯ]** ಗೋ ಸದೃಶವಾದ ಕಾಡು ಹಸುವಿನ **[ಗೋಹೇ]** ನಿವಾಸ ಸ್ಥಳದಲ್ಲಿ **[ವಿ, ವಹಂತಿ]** ವಿಶೇಷ ರೀತಿಯಲ್ಲಿ ಪ್ರಾಪ್ತಿಗೊಳಿಸುವರೋ **[ಯತ್]** ಯಾವ **[ಪರ್ವತಸ್ಯ]** ಮೇಘದ **[ಪಯೋಭಿಃ]** ನೀರಿಗೆ ಸದೃಶವಾದ ಪದಾರ್ಥಗಳೊಂದಿಗೆ **[ವರಾಂಸಿ]** ಧಾರ್ಮಿಕ ಕರ್ಮಗಳನ್ನು **[ವೃಣ್ವೇ]** ಸ್ವೀಕರಿಸುವೆನು. **[ಅಪಾಂ]** ನೀರಿನ **[ಜವಾಂಸಿ]** ವೇಗಕ್ಕೆ ಸದೃಶವಾದ ಕರ್ಮಗಳನ್ನು **[ವಿದತ್]** ಪಡೆದುಕೊಳ್ಳುವವನು **[ಜಿನ್ವೇ]** ಅವನನ್ನು ಸಂತೃಪ್ತಿಪಡಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಗೋವುಗಳು ಹೇಗೆ ಗೋಮೃಗದ ಸಾಧರ್ಮ್ಯವನ್ನು ಪಡೆದುಕೊಂಡಿರುತ್ತದೆಯೋ, ಅದೇ ರೀತಿ ಧಾರ್ಮಿಕ ಪುರುಷರ ಸಾಧರ್ಮ್ಯವನ್ನು ರಾಜನು ಪಡೆದುಕೊಳ್ಳಬೇಕು. ಹೇಗೆ ಮೇಘವು ಜಲದಾನದ ಮೂಲಕ ಎಲ್ಲರನ್ನೂ ಸಂತೃಪ್ತಿ ಪಡಿಸುತ್ತದೆಯೋ ಹಾಗೆಯೇ ರಾಜನು ಅಭಯದಾನದ ಮೂಲಕ ಎಲ್ಲರನ್ನೂ ಸಂತೃಪ್ತಿಗೊಳಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭದ್ರಾ ತೇ ಹಸ್ತಾ ಸುಕೃತೋತ ಪಾಣೀ ಪ್ರಯಂತಾರಾ ಸ್ತುವತೇ ರಾಧ ಇಂದ್ರ ।**
**ಕಾ ತೇ ನಿಷತ್ತಿಃ ಕಿಮು ನೋ ಮಮತ್ಸಿ ಕಿಂ ನೋದುದು ಹರ್ಷಸೇ ದಾತವಾ ಉ ॥೯॥**

**ಪದಾರ್ಥ:-** [**ಇಂದ್ರ**] ಸುಖದಾಯಕನೇ! [**ತೇ**] ನಿನ್ನ [**ಸುಕೃತಾ**] ಧರ್ಮ ಕರ್ಮಾದಿಗಳಿಂದ [**ಹಸ್ತಾ**] ಕೈಗಳ ಮೂಲಕ [**ಉತ**] ಮತ್ತು [**ಪ್ರಯಂತಾರಾ**] ದಾನ ಮಾಡಿದ ವಸ್ತುಗಳಿಂದ [**ಭದ್ರಾ**] ಕಲ್ಯಾಣಕರ ಕರ್ಮಗಳನ್ನು ಮಾಡುವವನು [**ಪಾಣೀ**] ಕೈಗಳ [**ಸ್ತುವತೇ**] ಸ್ತವನ ಮಾಡುವವನಿಗೆ [**ರಾಧಃ**] ಧನವನ್ನು ಕೊಡು. [**ತೇ**] ನಿನಗೆ [**ಕಾ**] ಯಾವ [**ನಿಷತ್ತಿಃ**] ಸ್ಥಿರವಾದ ನೀತಿಯಿದೆಯೋ [**ಉ**] ಮತ್ತು [**ಕಿಂ**] ಯಾವುದನ್ನು [**ನಃ**] ನಮ್ಮನ್ನು [**ಮಮತ್ಸಿ**] ಪ್ರಸನ್ನಗೊಳಿಸುವೆಯೋ [**ದಾತವೈ**] [**ಉ**] ದಾನಕ್ಕಾಗಿಯೇ [**ಕಿಂ**] ಏಕೆ [**ನ, ಉ, ಉದುತ್**] ಯಾವ ಕಾರಣದಿಂದ [**ಹರ್ಷಸೇ**] ಆನಂದಿತನಾಗುವುದಿಲ್ಲ.

**ಭಾವಾರ್ಥ:-** ರಾಜನೇ! ನೀನು ಯಾವ ಕಾರಣದಿಂದ ನಮ್ಮನ್ನು ಸಂತೃಪ್ತಗೊಳಿಸುತ್ತಿಯೋ, ಅದರಿಂದಲೇ ನೀನೂ ಸಂತೋಷಗೊಳ್ಳುವೆ. ಯಾವ ಕಾರಣದಿಂದ ನೀನು ಕೈಯಲ್ಲಿ ಸುವರ್ಣ ಧಾರಣೆಯನ್ನು ಮಾಡಿರುವೆಯೋ, ಅದರಿಂದಲೇ ಕೊಡುಗೈ ದಾನಿಯಾಗಿ ಯೋಗ್ಯರ ಸತ್ಕಾರವನ್ನು ಮಾಡುವೆ. ಆದ್ದರಿಂದ ನಿನ್ನದು ಎಲ್ಲರಿಗೂ ಕಲ್ಯಾಣಕಾರಕ ನೀತಿಯಾಗಿದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏವಾ ವಸ್ವ ಇಂದ್ರಃ ಸತ್ಯಃ ಸಮ್ರಾ-ಡ್ಢಂತಾ ವೃತ್ರಂ ವರಿವಃ ಪೂರವೇ ಕಃ ।**
**ಪುರುಷ್ಟುತ ಕ್ರತ್ವಾ ನಃ ಶಗ್ಧಿ ರಾಯೋ ಭಕ್ಷೀಯ ತೇಽವಸೋ ದೈವ್ಯಸ್ಯ ॥೧೦॥**

**ಪದಾರ್ಥ:-** [**ಏವಾ**] ನಿಶ್ಚಯವಾಗಿಯೂ [**ಪುರುಷ್ಟುತ**] ಬಹು ಪ್ರಶಂಸಿತನಾದ ನೀನು [**ಸತ್ಯಃ**] ಶ್ರೇಷ್ಠರಲ್ಲಿ ಶ್ರೇಷ್ಠನಾಗಿರುವೆ. [**ಇಂದ್ರಃ**] ದಾನಶೀಲನಾದ ನೀನು [**ವೃತ್ರಂ**] ಮೇಘವನ್ನು ಸೂರ್ಯನು ಹೇಗೋ ಹಾಗೆ [**ಹಂತಾ**] ಶತ್ರುಗಳನ್ನು ಹನನ ಮಾಡುವವನು. [**ವಸ್ವಃ**] ಸಂಪತ್ತಿನ [**ವರಿವಃ**] ಸೇವನೆ [**ಕಃ**] ಮಾಡು. [**ಕ್ರತ್ವಾ**] ಬೌದ್ಧಿಕ ಕರ್ಮಗಳಿಂದ [**ನಃ**] ನಮಗೆ [**ರಾಯಃ**] ಸಂಪತ್ತನ್ನು [**ಶಗ್ಧಿ**] ಕೊಡಿಸುವವನಾಗು. [**ತೇ**] ನಿನ್ನ [**ದೈವ್ಯಸ್ಯ**] ಸುಖದಾಯಕ [**ಅವಸಃ**] ಉತ್ತೇಜನಪೂರ್ವಕ ರಕ್ಷಣೆ ಪಡೆದ ನಾನು [**ಭಕ್ಷೀಯ**] ಸಂಪತ್ತಿನ ಸೇವನೆ ಮಾಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಸೂರ್ಯನಂತೆ ತೇಜಸ್ವಿಯೂ ನ್ಯಾಯವಂತ, ಅಭಯದಾತ, ಎಲ್ಲರನ್ನೂ ರಕ್ಷಿಸುವ ನಾಯಕನೋ ಅವನೇ ಚಕ್ರವರ್ತಿಯಾಗಲು ಯೋಗ್ಯನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಓ) ೩ ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೧೧॥**

**ಪದಾರ್ಥ:-** [ಇಂದ್ರ] ರಾಜನೇ! [ಸ್ತುತಃ] ಪ್ರಶಂಸೆ ಪಡೆದ ನೀನು [ಜರಿತ್ರೇ] ಸತ್ಯ ನುಡಿಯುವವನಿಗೆ [ನವ್ಯಂ] [ಬ್ರಹ್ಮ] ನವೀನವಾದ ಧನ ಅಥವಾ ಅನ್ನವನ್ನು [ನು] ಶೀಘ್ರವಾಗಿ [ನದ್ಯ] [ನ] ನದಿಗಳಿಗೆ ಸದೃಶವಾಗಿ [ಪೀಪೇಃ] ವೃದ್ಧಿಪಡಿಸು. [ಗೃಣಾನಃ] ಪ್ರಶಂಸೆ ಮಾಡುತ್ತ [ಇಷಂ] ವಿಜ್ಞಾನವನ್ನು ಬೆಳೆಸು. [ಹರಿವಃ] ಬಹುವಿಧ ಸೇನಾಂಗಗಳನ್ನು ಸಂಯೋಜಿಸಿರುವ [ತೇ] ನಿನಗೆ [ಧಿಯಾ] ಬುದ್ಧಿ, ಕರ್ಮ, ಧನ, ಅನ್ನಗಳಿಂದ [ಅಕಾರಿ] ನಾವು ಸಹಕರಿಸುವೆವು. [ಸದಾಸಾಃ] ಸಮಾನ ಸಹಕರಿಸುವ ಸೇವಕರಾದ ನಾವು [ರಥ್ಯಃ] ವಾಹನಗಳಿಂದೊಡಗೂಡಿದವರು [ನು] [ಸ್ಯಾಮ] ಸಹಕರಿಸುವವರಾಗುವೆವು.

**ಭಾವಾರ್ಥ:-** ಮಂತ್ರಿ, ಸೇನೆ, ಸೇನಾಪತಿ, ಪ್ರಜೆಗಳಿಗೆ ಶ್ರೇಷ್ಠ ಕರ್ಮ ಮಾಡುವುದು, ರಾಜನ ಸ್ತುತಿ ಮಾಡುವುದು ಹೇಗೆ ಕರ್ತವ್ಯವಾಗಿರುತ್ತದೆಯೋ ಅದೇ ರೀತಿ ಅವರೆಲ್ಲರನ್ನು ಉತ್ತಮ ಕರ್ಮಗಳಲ್ಲಿ ತೊಡಗಿಸಿ ಅವರ ಪ್ರಶಂಸೆ ಮಾಡುವುದು ರಾಜನ ಕರ್ತವ್ಯವಾಗಿದೆ.

ಈ ಸೂಕ್ತದಲ್ಲಿ ಇಂದ್ರ, ರಾಜ ಮುಂತಾದವರ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಇಪ್ಪತ್ತೊಂದನೆಯ ಸೂಕ್ತ ಸಮಾಪ್ತ**

## ತೃತೀಯೋಽನುವಾಕಃ (ಸೂಕ್ತ ೨೨-೩೨)

### ಸೂಕ್ತ ೨೨

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೨, ೫, ೧೦ ನಿಚೃತ್ರಿಷ್ಟುಪ್, ೩, ೪ ವಿರಾಟ್ ತ್ರಿಷ್ಟುಪ್, ೬, ೭ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೮ ಭುರಿಕ್ಪಂಕ್ತಿಃ, ೯ ಸ್ವರಾಟ್ ಪಂಕ್ತಿಃ, ೧೧ ನಿಚೃತ್ ಪಂಕ್ತಿಃ ಛಂದಃ ।

ಪಂಚಮಃ ಸ್ವರಃ.

ಇಂದ್ರನ ಗುಣವನ್ನಿಲ್ಲಿ ಹೇಳಿದೆ.

**ಯನ್ನ ಇಂದ್ರೋ ಜುಜುಷೇ ಯಚ್ಚ ವಷ್ಟಿ ತನ್ನೋ ಮಹಾನ್ ಕರತಿ ಶುಷ್ಮ್ಯಾ ಚಿತ್ ।**
**ಬ್ರಹ್ಮ ಸ್ತೋಮಂ ಮಘವಾ ಸೋಮಮುಕ್ಥಾ ಯೋ ಅಶ್ಮಾನಂ ಶವಸಾ ಬಿಭ್ರದೇತಿ ॥೧॥**

**ಪದಾರ್ಥ:-** [ಯತ್] ಯಾವ [ಇಂದ್ರಃ] ಸುಖದಾಯಕ ರಾಜನು [ನಃ] ನಮ್ಮ [ಜುಜುಷೇ] ಸೇವೆ ಮಾಡುವನು [ಯತ್] [ಚ] ಮತ್ತು [ಮಹಾನ್] ಮಹದೈಶ್ವರ್ಯವಂತನು [ಆ, ವಷ್ಟಿ] ಇಚ್ಛಿಸುವನು [ಯಃ] ಯಾವನು [ಶುಷ್ಮೀ] ಬಲಿಷ್ಠನು [ಮಘವಾ] ಧನವಂತ ರಾಜನು [ಅಶ್ಮಾನಂ] ಸೂರ್ಯನು ಮೇಘವನ್ನು ಹೇಗೋ ಹಾಗೆ [ಶವಸಾ] ಬಲದಿಂದ [ಬ್ರಹ್ಮ] ಬಹು ಅನ್ನಧನಗಳನ್ನು [ಸ್ತೋಮಂ] ಪ್ರಶಂಸಾರ್ಹ [ಸೋಮಂ] ಓಷಧಿರಸವನ್ನು

[ಉಕ್ಥಾ] ಸ್ತವನದೊಂದಿಗೆ [ಚಿತ್, ಬಿಭ್ರತ್] ಧಾರಣ ಮಾಡುವನು. [ಏತಿ] ಅದಕ್ಕಾಗಿ ಪ್ರಾಪ್ತನಾಗುವನು [ತತ] ಅವನು [ನಃ] ನಮಗೆ [ಕರತಿ] ಸುಖಿಗೊಳಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಸೂರ್ಯನು ಹೇಗೆ ಮೇಘವನ್ನು ಧಾರಣ ಮಾಡುವನೋ ಮತ್ತು ನಾಶಗೊಳಿಸುವನೋ ಹಾಗೆ ರಾಜನು ಶಿಷ್ಟರನ್ನು ಧಾರಣ ಮಾಡುವನು ಹಾಗೂ ದುಷ್ಟರನ್ನು ನಾಶಮಾಡುವನು. ಅದೇ ರೀತಿ ನಾವೂ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವೃಷಾ ವೃಷಂಧಿಂ ಚತುರಶ್ರಿಮಸ್ಯ-ನ್ನುಗ್ರೋ ಬಾಹುಭ್ಯಾಂ ನೃತಮಃ ಶಚೀವಾನ್ ।**
**ಶ್ರಿಯೇ ಪರುಷ್ಣೀಮುಷಮಾಣ ಊರ್ಣಾಂ ಯಸ್ಯಾಃ ಪರ್ವಾಣಿ ಸಖ್ಯಾಯ ವಿವ್ಯೇ ॥೨॥**

**ಪದಾರ್ಥ:-** [ವೃಷಾ] ಬಲಿಷ್ಠನು [ವೃಷಂಧಿಂ] ಬಲಿಷ್ಠರ ಧಾರಕನು [ಚತುರಶ್ರಿಂ] ಚತುರಶ್ರೀ ಸೇನೆಯನ್ನು ಪಡೆದವನನ್ನು [ಬಾಹುಭ್ಯಾಂ] ತೋಳುಗಳಿಂದ [ಅಸ್ಯನ್] ತಳ್ಳುತ್ತ [ಉಗ್ರಃ] ತೇಜಸ್ವೀ [ನೃತಮಃ] ನಾಯಕನು [ಶಚೀವಾನ್] ಬಹು ಪ್ರಜೆಗಳಿರುವವನು [ಯಸ್ಯಾಃ] ಯಾವುದರ [ಪರ್ವಾಣಿ] ಪಾಲನೆಯನ್ನು [ಶ್ರಿಯೇ] ಸಂಪತ್ತಿಗಾಗಿ [ಪರುಷ್ಣೀಂ] ವಿಭಾಗಿಸುವವಳಾಗಿ [ಊರ್ಣಾಂ] ಮರೆಮಾಡುವ ದುಷ್ಟಳನ್ನು [ಉಷಮಾಣಃ] ದಹಿಸುವವನಾಗಿ ಸಖ್ಯಾಯ ಮಿತ್ರನಿಗಾಗಿ [ವಿವ್ಯೇ] ಇಚ್ಛಿಸುವನೋ ಅವನೇ ರಾಜನಾಗಲು ಅರ್ಹನು.

**ಭಾವಾರ್ಥ:-** ಮನುಷ್ಯರೇ! ಯಾರು ಬಾಹುಬಲದಿಂದ ದುಷ್ಟರನ್ನು ನಿವಾರಿಸುವನೋ, ಮನುಷ್ಯರ ಉತ್ತಮ ಗುಣದಿಂದ ಉತ್ತಮನಾಗಿರುವನೋ ಮತ್ತು ಪ್ರಜೆಗಳನ್ನು ಮಿತ್ರರಂತೆ ಪಾಲನೆ ಮಾಡುವನೋ, ಅವನೇ ಲಕ್ಷ್ಮೀವಂತನೂ ಪ್ರಜಾವಂತನೂ ನ್ಯಾಯದಾಯಕನೂ ಆಗಿ ರಾಜನಾಗಲು ಅರ್ಹನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೋ ದೇವೋ ದೇವತಮೋ ಜಾಯಮಾನೋ ಮಹೋ ವಾಜೇಭಿರ್ಮಹದ್ಭಿಶ್ಚ ಶುಷ್ಮೈಃ ।**
**ದಧಾನೋ ವಜ್ರಂ ಬಾಹ್ವೋರುಶಂತಂ ದ್ಯಾಮಮೇನ ರೇಜಯತ್ ಪ್ರ ಭೂಮ ॥೩॥**

**ಪದಾರ್ಥ:-** [ಯಃ] ಯಾವನು [ಮಹದ್ಭಿಃ] ಮಹದ್ಗುಣ ವಿಶಿಷ್ಟನಾಗಿ [ವಾಜೇಭಿಃ] ವೇಗಯುಕ್ತ ಸೇನೆಗಳಿಂದ ಮತ್ತು [ಶುಷ್ಮೈಃ] ಬಲಗಳೊಂದಿಗೆ [ಮಹಃ] ಮಹತ್ತರ [ಜಾಯಮಾನಃ] ಉತ್ಪನ್ನನಾಗುತ್ತ [ದೇವಃ] ವಿದ್ಯಾವಂತ [ದೇವತಮಃ] ಶ್ರೇಷ್ಠ ರಾಜನು [ಬಾಹ್ವೋಃ] ಬಾಹುಗಳಿಂದ [ವಜ್ರಂ] ಆಯುಧ ಮತ್ತು ಅನ್ನವನ್ನು [ದಧಾನಾಃ] ಧಾರಣ ಮಾಡಿದವನಾಗಿ [ಅಮೇನ] ಬಲದಿಂದ [ದ್ಯಾಂ, ಭೂಮ, ಚ] ಆಕಾಶ ಮತ್ತು ಭೂಮಿಯನ್ನು ಸೂರ್ಯನು ಹೇಗೋ ಹಾಗೇ [ಪ್ರ, ರೇಜಯತ್] ನಡುಗಿಸುವನೋ ಹಾಗೆ [ಉಶಂತಂ] ಇಚ್ಛಿಸುವ ಶತ್ರುವನ್ನು ನಡುಗಿಸುವನೋ ಅಂತಹ ರಾಜನನ್ನು ಪಡೆಯಬೇಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಬೆಳಕಿನಿಂದ ಭೂಗೋಲವನ್ನು ನಡುಗಿಸುವನೋ ಹಾಗೆ ರಾಜನು ದಂಡವಿಧಿಸಿ. ಪ್ರಜೆಗಳನ್ನು ಧರ್ಮಾಚರಣೆಯಿಂದ ಕಂಪಿಸುವವನು. ಅವನೇ ರಾಜನಾಗಲರ್ಹನು.

ಪೃಥಿವೀ ಧಾರಣ ಭ್ರಮಣ ವಿಷಯವಿಲ್ಲಿ ಹೇಳಿದೆ.

**ವಿಶ್ವಾ ರೋಧಾಂಸಿ ಪ್ರವತಶ್ಚ ಪೂರ್ವೀ-ದ್ಯೌರ್‌ಋಷ್ವಾಜ್ಜನಿಮನ್ ರೇಜತ ಕ್ಷಾಃ ।**
**ಆ ಮಾತರಾ ಭರತಿ ಶುಷ್ಮ್ಯಾ ಗೋ-ರ್ನೃವತ್ ಪರಿಜ್ಮನ್ನೋನುವಂತ ವಾತಾಃ ॥೪॥**

**ಪದಾರ್ಥ:-** **[ಋಷ್ವಾತ್]** ಪ್ರಕೃತಿರೂಪ ಕಾರಣದಿಂದ **[ಜನಿಮನ್]** ಸೃಷ್ಟಿಯಲ್ಲಿ ಪ್ರಕಟವಾದ **[ಪೂರ್ವೀಃ]** ಪ್ರಾಚೀನ ಕ್ರಿಯೆಯನ್ನು **[ದ್ಯೌಃ]** ಮಿಂಚು **[ಕ್ಷಾಃ]** ಭೂಮಿ **[ಆ, ಭರತಿ]** ಧಾರಣೆ ಮಾಡುತ್ತದೆಯೋ **[ಪ್ರವತಃ ಚ]** ಮತ್ತು ಅಧೋಭಾಗದಲ್ಲಿರುವ **[ವಿಶ್ವಾ]** ಸಮಗ್ರ ಪದಾರ್ಥಗಳನ್ನು **[ರೋಧಾಂಸಿ]** ಪ್ರತಿಬಂಧಗಳನ್ನು **[ನೃವತ್]** ಮನುಷ್ಯರಂತೆ ಆಧಾರಣ ಮಾಡಿಸುತ್ತದೆ. **[ಶುಷ್ಮೀಃ]** ಅಗ್ನಿಯು **[ಗೋಃ]** ಭೂಮಿಯ **[ಮಾತರಾ]** ಜನನೀ ಜನಕರಂತೆ ರಾಜನು **[ರೇಜತ]** ಕಂಪನಗೊಳಿಸುವನು. **[ಪರಿಜ್ಮನ್]** ಸರ್ವತ್ರ ವ್ಯಾಪ್ತವಾದ **[ವಾತಾಃ]** ಮಾರುತಗಳು **[ನೋನುವಂತ]** ಶಬ್ದಾಯಮಾನವಾಗುತ್ತವೆ.

**ಭಾವಾರ್ಥ:-** ಮನುಷ್ಯರೇ! ಪ್ರಕೃತಿಯ ಕಾರಣದಿಂದ ಉತ್ಪನ್ನವಾದ ಅಗ್ನಿಯು ಸಮಗ್ರ ಭೂಮಂಡಲವನ್ನು ಆಕರ್ಷಿಸುವನು. ತಂದೆ-ತಾಯಿಯರಂತೆ ಎಲ್ಲಾ ಪದಾರ್ಥಗಳ ರಕ್ಷಣೆ ಮಾಡುವನು. ಅಂತರಿಕ್ಷದಲ್ಲಿ ಸಂಚರಿಸುವನು. ಅವನಿಂದ ನಿಮ್ಮ ಕಾರ್ಯ ಸಾಧಿಸಿರಿ.

ಭೂಗೋಲದ ಉದಾಹರಣೆಯಿಂದ ರಾಜನ ಗುಣವಿಲ್ಲಿ ಹೇಳಿದೆ.

**ತಾ ತೂ ತ ಇಂದ್ರ ಮಹತೋ ಮಹಾನಿ ವಿಶ್ವೇಷ್ವಿತ್ ಸವನೇಷು ಪ್ರವಾಚ್ಯಾ ।**
**ಯಚ್ಛೂರ ಧೃಷ್ಣೋ ಧೃಷತಾ ದಧೃಷ್ವಾ-ನಹಿಂ ವಜ್ರೇಣ ಶವಸಾವಿವೇಷೀಃ ॥೫॥**

**ಪದಾರ್ಥ:-** **[ಧೃಷ್ಣೋ]** ದೃಢವಾದ **[ಶೂರ]** ಭಯರಹಿತ **[ಇಂದ್ರ]** ರಾಜನೇ! **[ಯತ್]** ಯಾವ **[ವಿಶ್ವೇಷು]** ಸಮಗ್ರ **[ಸವನೇಷು]** ಲೋಕಗಳಲ್ಲಿ **[ಮಹತಃ]** ಗೌರವಾರ್ಹನಾದ **[ತೇ]** ನಿನ್ನ **[ಮಹಾನಿ]** ದೊಡ್ಡ-ದೊಡ್ಡ **[ಪ್ರವಾಚ್ಯಾ]** ಹೇಳುವಂತಹ ಕಾರ್ಯಗಳಿವೆಯೋ **[ತಾ, ಇತ್]** ಅವುಗಳನ್ನು **[ತೂ]** **[ದಧೃಷ್ವಾನ್]** ಧಾರಣ ಮಾಡುವವನಾಗಿ **[ಧೃಷತಾ]** ಬಲಿಷ್ಠವಾದ **[ಶವಸಾ]** ಶಕ್ತಿಯಿಂದ **[ವಜ್ರೇಣ]** ಕಿರಣದಿಂದ **[ಅಹಿಂ]** ಮೇಘವನ್ನು **[ಆವಿವೇಷೀಃ]** ಪಡೆಯುವವನಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಸೂರ್ಯನು ತನ್ನ ಕಿರಣಗಳಿಂದ ಸಮಗ್ರ ಭೂಮಂಡಲವನ್ನೇ ಆಕರ್ಷಿಸಿ ಧಾರಣ ಮಾಡಿರುವನೋ, ಹಾಗೆಯೇ ರಾಜನು ಸಜ್ಜನರಾದಿಯಾಗಿ ಎಲ್ಲಾ ಸಾಮಗ್ರಿಗಳನ್ನಾಕರ್ಷಿಸಿ ದ್ವೀಪ-ದ್ವೀಪಾಂತರಗಳ ರಾಜ್ಯವನ್ನಾಳಬೇಕು.

ವಿದ್ವಾಂಸರ ವಿಷಯವಿಲ್ಲಿ ಹೇಳಿದೆ.

**ತಾ ತೂ ತೇ ಸತ್ಯಾ ತುವಿನೃಮ್ಣ ವಿಶ್ವಾ ಪ್ರ ಧೇನವಃ ಸಿಸ್ರತೇ ವೃಷ್ಣ ಊಧ್ನಃ ।**
**ಅಧಾ ಹ ತ್ವದ್ವೃಷಮಣೋ ಭಿಯಾನಾಃ ಪ್ರ ಸಿಂಧವೋ ಜವಸಾ ಚಕ್ರಮಂತ ॥೬॥**

**ಪದಾರ್ಥ:-** **[ತುವಿನೃಮ್ಣ]** ಅತುಲೈಶ್ವರ್ಯವಂತ **[ವೃಷಮಣಃ]** ಬಲಿಷ್ಠ ಪುರುಷನ ಮನದಂತೆ ಮನವಿರುವ ರಾಜನೇ! **[ಸಿಂಧವಃ]** ನದಿಗಳು **[ಜವಸಾ]** ವೇಗದಿಂದ **[ಚಕ್ರಮಂತ]** ಚಲಿಸುವ ರೀತಿಯಲ್ಲಿ **[ತ್ವತ್]** ನಿನ್ನ ಸಮೀಪದಿಂದ **[ಭಿಯಾನಃ]** ಬೆದರಿದ ಶತ್ರುಗಳು ಪಲಾಯನ ಮಾಡುವರು. **[ಅಧಾ]** ಅನಂತರ **[ತೇ]** ನಿನ್ನ **[ವಿಶ್ವಾ]** ಸಮಗ್ರ **[ಸತ್ಯಾ]** ಉತ್ತಮಾಚರಣೆ **[ಧೇನವಃ]** ಮಾತುಗಳು **[ವೃಷಣಃ]** ಶಕ್ತಿ-ಸಾಮರ್ಥ್ಯ **[ಊಧ್ನಃ]** ವಿಸ್ತೃತ ಶಕ್ತಿವಂತರನ್ನು **[ಪ್ರ, ಸಿಸ್ರೇತೇ]** ಉತ್ತಮ ರೀತಿಯಲ್ಲಿ ಪ್ರಾಪ್ತವಾಗುತ್ತವೆ. **[ತಾ]** ಅವನ್ನು **[ತೂ]** ಮತ್ತೇ **[ಹ]** ನಿಶ್ಚಯದಿಂದ **[ಪ್ರ]** ಸಿದ್ಧಿಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ರಾಜನಿಗೆ ಸುಶಿಕ್ಷಿತ ವಾಣಿ, ಧರ್ಮಕರ್ಮಗಳು ಆಚರಣೆಯಲ್ಲಿರುತ್ತವೆಯೋ ಅವರು ಗೋವುಗಳು ಕರುಗಳನ್ನು ರಕ್ಷಣೆ ಮಾಡುವ ರೀತಿಯಲ್ಲಿ ಪ್ರಜೆಗಳನ್ನು ರಕ್ಷಿಸುವುದರ ಮೂಲಕ ತೃಪ್ತಿ ಪಡುವರು ಅದರಿಂದ ದುಷ್ಟರು ಪಲಾಯನ ಮಾಡುವರು. ಕೀರ್ತಿಯು ಬೆಳೆಯುವುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅತ್ರಾಹ ತೇ ಹರಿವಸ್ತಾ ಉ ದೇವೀ-ರವೋಭಿರಿಂದ್ರ ಸ್ತವಂತ ಸ್ವಸಾರಃ ।**
**ಯತ್ಸೀಮನು ಪ್ರ ಮುಚೋ ಬದ್ಬಧಾನಾ ದೀರ್ಘಾಮನು ಪ್ರಸಿತಿಂ ಸ್ಯಂದಯಧ್ಯೈ ॥೭॥**

**ಪದಾರ್ಥ:-** **[ಹರಿವಃ]** ಶ್ರೇಷ್ಠ ಪುರುಷರು **[ಇಂದ್ರಃ]** ಐಶ್ವರ್ಯಸಂಪನ್ನನು **[ಅತ್ರ]** ಈ ರಾಜ್ಯದಲ್ಲಿ **[ಅಹ]** ಗ್ರಹಣ ಮಾಡುವುದರಲ್ಲಿ **[ಯತ್]** ಯಾವ **[ತೇ]** ನಿನ್ನ **[ಬದ್ಬಧಾನಾಃ]** ಪ್ರಬಂಧಕರು **[ಸ್ವಸಾರಃ]** ಸೋದರಿಯರು **[ಸ್ಯಂದಯಧ್ಯೈ]** ಹರಿಯುವುದಕ್ಕಾಗಿ **[ದೀರ್ಘಂ]** ಉದ್ದವಾದ **[ಪ್ರಸಿತಿಂ]** ತಡೆಯನ್ನು **[ಅನು ಸ್ತವಂತಃ]** ಅನುಕೂಲಕರ ಸ್ತುತಿ ಮಾಡುತ್ತ **[ತಾಃ, ಉ]** ಅವುಗಳೇ **[ದೇವೀಃ]** ಪ್ರಕಾಶಿತ ಸ್ತ್ರೀಯರನ್ನು **[ಅವೋಭಿಃ]** ರಕ್ಷಣೆಗಳಿಂದ **[ಸೀಂ]** ಎಲ್ಲ ರೀತಿಯಿಂದ **[ಅನು, ಪ್ರ, ಮುಚ]** ಬಿಡುಗಡೆಗೊಳಿಸು.

**ಭಾವಾರ್ಥ:-** ರಾಜನಿಗೆ ಸಂಬಂಧಿಸಿದ ಮನುಷ್ಯರೇ! ನೀವು ವಿದ್ಯೆಯನ್ನೋದಿ ರಾಜ ನೀತಿಗನುಸಾರ ಶಾಸನ ಮಾಡುವಿರೋ, ಅದೇರೀತಿ ನಿಮ್ಮ ಸ್ತ್ರೀಯರೂ ಸ್ತ್ರೀಯರಿಗೆ ನ್ಯಾಯ ಮಾಡಲಿ. ಹೀಗೆ ಮಾಡುವುದರಿಂದ ರಾಜಧರ್ಮವು ದೃಢವಾಗುತ್ತದೆ ಎಂದು ಭಾವಿಸಬೇಕು.

ಈ ಮಂತ್ರದಲ್ಲಿ ರಾಜನೀತಿಯ ಅಧ್ಯಯನ ವಿಚಾರ ಹೇಳಿದೆ.

**ಪಿಪೀಳೇ ಅಂಶುರ್ಮದ್ಯೋ ನ ಸಿಂಧು-ರಾ ತ್ವಾ ಶಮೀ ಶಶಮಾನಸ್ಯ ಶಕ್ತಿಃ ।**
**ಅಸ್ಮದ್ರ್ಯಕ್ ಶುಶುಚಾನಸ್ಯ ಯಮ್ಯಾ ಆಶುರ್ನ ರಶ್ಮಿಂ ತುವ್ಯೋಜಸಂ ಗೋಃ ॥೮॥**

**ಪದಾರ್ಥ:-** **[ಮದ್ಯಃ]** ಮದಗೊಳಿಸುವವಳು **[ಸಿಂಧುಃ]** **[ನ]** ನದಿಯಂತೆ **[ಅಂಶುಃ]** ಸೋಮಲತಾ ಖಂಡವು **[ಆ, ಪಿಪೀಳೇ]** ಪೀಡಿಸಲಾಗುತ್ತದೆ. **[ಶಶಮಾನಸ್ಯ]** ಅಧರ್ಮದ ಉಲ್ಲಂಘನ ಮಾಡಲು **[ಶುಶುಚಾನಸ್ಯ]** ಶೋಧಿಸುವವನ **[ಗೋಃ]** ಸ್ತುತಿ ಮಾಡುವವನು **[ಆಶು]** ಶೀಘ್ರಗತಿಯ ಕುದುರೆಗೆ **[ನ]** ಸಮಾನವಾಗಿ **[ಯಮ್ಯಾಃ]** ರಾತ್ರಿಗಳು **[ರಶ್ಮಿಂ]** ಸೂರ್ಯನ ಬೆಳಕಿಗೆ ಸಮನಾಗಿ **[ಅಸ್ಮಧ್ರ್ಯಕ್]** ನಮಗೆ ಲಭಿಸುವ **[ಶಕ್ತಿಃ]** ಸಾಮರ್ಥ್ಯವು **[ಶಮೀ]** ಉತ್ತಮ ಕರ್ಮ **[ತುವ್ಯೋಜಸಂ]** ಬಲಿಷ್ಠನನ್ನು **[ತ್ವಾ]** ನಿನಗೆ ಪ್ರಾಪ್ತವಾಗುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರಜೆಗಳೇ! ಯಾರು ರಾಜನಿಗೆ ಪೀಡೆಕೊಡುವರೋ ಅವರು ನಿಮ್ಮಿಂದ ನಾಶಗೊಳಿಸಲು ಯೋಗ್ಯರಾಗುವರು. ರಾತ್ರಿಯು ಹೇಗೆ ಬೆಳಕನ್ನು ನಷ್ಟಗೊಳಿಸುತ್ತದೆಯೋ ಹಾಗೆ ಧಾರ್ಮಿಕ ರಾಜನ ಬಲವನ್ನು ದುಷ್ಟರು ನಾಶಗೊಳಿಸುತ್ತಾರೆ. ಅಂತಹ ಶತ್ರುಗಳನ್ನು ನೀವು ನಾಶಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮೇ ವರ್ಷಿಷ್ಠಾ ಕೃಣುಹಿ ಜ್ಯೇಷ್ಠಾ ನೃಮ್ಣಾನಿ ಸತ್ರಾ ಸಹುರೇ ಸಹಾಂಸಿ ।**
**ಅಸ್ಮಭ್ಯಂ ವೃತ್ರಾ ಸುಹನಾನಿ ರಂಧಿ ಜಹಿ ವಧರ್ವನುಷೋ ಮರ್ತ್ಯಸ್ಯ ॥೯॥**

**ಪದಾರ್ಥ:-** **[ಸಹುರೇ]** ಸಹನಶೀಲ ರಾಜನೇ! **[ಸತ್ರಾ]** ಸತ್ಯವಂತರು **[ವರ್ಷಿಷ್ಠಾ]** ಶ್ರೇಷ್ಠ ವೃದ್ಧರು **[ಜ್ಯೇಷ್ಠಾ]** ಹಿರಿಯರು **[ನೃಮ್ಣಾನಿ]** ಧನವನ್ನು **[ಸಹಾಂಸಿ]** ಸಹನಶೀಲರನ್ನು **[ಅಸ್ಮೇ]** ನಮ್ಮಲ್ಲಿ **[ಕೃಣುಹಿ]** ಕರುಣಿಸು. **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ವನುಷಃ]** ಸೇವೆ ಮಾಡುತ್ತ **[ಮರ್ತ್ಯಸ್ಯ]** ಮನುಷ್ಯನ **[ವಧಃ]** ವಧೆಗೆ ಸಾಧನವಾದದ್ದನ್ನು **[ಜಹಿ]** ದೂರಕ್ಕೆಸೆ. **[ಸುಹನಾನಿ]** ನಾಶಗೊಳಿಸಲು ಯೋಗ್ಯನಾದ **[ವೃತ್ರಾ]** ಮೇಘಗಳಿಗೆ ಸದೃಶವಾಗಿ **[ರಂಧಿ]** ನಾಶಗೊಳಿಸು.

**ಭಾವಾರ್ಥ:-** ರಾಜಾದಿಗಳೇ! ನೀವೆಲ್ಲ ಸೇರಿ ಪ್ರಜಾಪೀಡಕರ ನಾಶಮಾಡಿರಿ. ಯಾರು ನಿಮಗೆ ಹಿತ ಮಾಡುವರೋ ಅವರ ಧಾರಣ ಮಾಡಿರಿ.

ಉಪದೇಶಕನ ವಿಚಾರವನ್ನಿಲ್ಲಿ ಹೇಳಿದೆ.

**ಅಸ್ಮಾಕಮಿತ್ ಸು ಶೃಣುಹಿ ತ್ವಮಿಂದ್ರಾ-ಸ್ಮಭ್ಯಂ ಚಿತ್ರಾ ಉಪ ಮಾಹಿ ವಾಜಾನ್ ।**
**ಅಸ್ಮಭ್ಯಂ ವಿಶ್ವಾ ಇಷಣಃ ಪುರಂಧೀ-ರಸ್ಮಾಕಂ ಸು ಮಘವನ್ ಬೋಧಿ ಗೋದಾಃ ॥೧೦॥**

**ಪದಾರ್ಥ:-** **[ಮಘವನ್]** ಧನ ಸಂಪನ್ನ **[ಇಂದ್ರ]** ರಾಜನೇ! **[ತ್ವಂ]** ನೀನು **[ಅಸ್ಮಾಕಂ]** ನಮ್ಮೆಲ್ಲರಿಗೆ **[ಚಿತ್ರಾನ್]** ಅದ್ಭುತವಾದ **[ವಾಜಾನ್]** ಅನ್ನಾದಿ ಪದಾರ್ಥಗಳನ್ನು **[ಉಪ, ಮಾಹಿ]** ಉತ ಪ್ಪಗೊಳಿಸು. **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ವಿಶ್ವಾಃ]** ಸಮಗ್ರ **[ಪುರಂಧಿಃ]** ಜ್ಞಾನದಾಯಕ ಬುದ್ಧಿಯನ್ನು **[ಇತ್, ಇಷಣಾಃ]** ಪ್ರೇರೇಪಿಸು. **[ಅಸ್ಮಭ್ಯಂ]** ನಮ್ಮೆಲ್ಲರಿಗೂ **[ಗೋದಾಃ]** ಗೋಧನವನ್ನು ಕೊಡುತ್ತ **[ಸು, ಬೋಧಿ]** ಚೆನ್ನಾಗಿ ತಿಳಿದುಕೋ.

**ಭಾವಾರ್ಥ:-** ಮನುಷ್ಯರೇ! ಯಾರು ನಮ್ಮ ನೀತಿಗನುಗುಣವಾದ ಮಾತುಗಳನ್ನು ಕೇಳುವರೋ, ನಮ್ಮನ್ನು ವಿದ್ಯಾವಂತರನ್ನಾಗಿ ಮಾಡುವರೋ ಅವರ ಸೇವೆಯನ್ನು ನಾವು ನಿರಂತರ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಽ) ೩ ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೧೧॥**

**ಪದಾರ್ಥ:-** **[ಹರಿವಃ]** ಶ್ರೇಷ್ಠ ವಿದ್ಯಾರ್ಥಿಗಳೇ! **[ಇಂದ್ರ]** ಯಜ್ಞೈಶ್ವರ್ಯ ಸಂಪನ್ನನೇ! **[ಸ್ತುತಃ]** ಯಾವ ಕಾರಣದಿಂದ ನೀವು ಪ್ರಶಂಸಿತರಾಗಿರುವಿರೋ **[ಜರಿತ್ರೇ]** ವಿದ್ಯಾವಂತರಿಗೆ **[ಇಷಂ]** ಅನ್ನಕೊಟ್ಟು **[ನದ್ಯಃ]** **[ನ]** ನದಿಗಳಿಗೆ ಸದೃಶ **[ನು]** ವೇಗವಾಗಿ **[ಪೀಪೇಃ]** ವೃದ್ಧಿಪಡಿಸುವಿರೋ ಆ ಕಾರಣದಿಂದ **[ಗೃಣಾನಃ]** ನಾವು ನಿಮ್ಮ ಪ್ರಶಂಸೆ ಮಾಡುವವರಾಗಿ **[ನು]** ನಿಶ್ಚಯವಾಗಿಯೂ **[ಅಕಾರಿ]** ಮಾಡಲಾದ **[ತೇ]** ನಿನಗೆ **[ನವ್ಯಂ]** ಹೊಸ - ಹೊಸ **[ಬ್ರಹ್ಮ]** ಧನಕೊಡಲಾಗಿದೆಯೋ ಅದರಿಂದ **[ರಥ್ಯಃ]** ರಥಯುಕ್ತನಾಗಿ **[ಸದಾಸಾಃ]** ಸೇವಕರೊಂದಿಗಿರುವ ನಾವು **[ಧಿಯಾ]** ಬುದ್ಧಿವಂತಿಕೆಯಿಂದ **[ಸ್ಯಾಮ]** ನಿನ್ನ ಮಿತ್ರರಾಗುವೆವು.

**ಭಾವಾರ್ಥ:-** ವಿದ್ಯಾವಂತರೇ! ಯಾವ ಕಾರಣದಿಂದ ನೀವು ಎಲ್ಲರಿಗೂ ವಿದ್ಯಾದಾನ ಮಾಡುವಿರೋ ಆದ್ದರಿಂದ ನಿಮ್ಮೊಂದಿಗೆ ಸ್ನೇಹ ಭಾವ ಮಾಡಿಕೊಂಡು ನಿಮಗೆ ಬಹುಧನ ಅನ್ನಾದಿಗಳನ್ನು ಕೊಟ್ಟು ಗೌರವಿಸುತ್ತೇವೆ.

ಈ ಸೂಕ್ತದಲ್ಲಿ ಭೂಮಿಯ ಧಾರಣ, ಭ್ರಮಣ, ವಿದ್ಯಾವಂತ ಅಧ್ಯಾಪಕೋಪದೇಶಕರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಇಪ್ಪತ್ತೆರಡನೆಯ ಸೂಕ್ತ ಸಮಾಪ್ತ**

## ಸೂಕ್ತ ೨೩

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ೧-೭, ೧೧ ಇಂದ್ರೋ ದೇವತಾ । ೮-೧೦ ಇಂದ್ರ ಋತದೇವಾ ದೇವತಾಃ। ೧-೩, ೭-೯ ತ್ರಿಷ್ಟುಪ್, ೪, ೧೦ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೫, ೬ ಭುರಿಕ್ಪಂಕ್ತಿಃ, ೧೧ ನಿಚೃತ್ಪಂಕ್ತಿಃ ಛಂದಃ। ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಪ್ರಶ್ನೋತ್ತರಗಳಿವೆ.

**ಕಥಾ ಮಹಾಮವೃಧತ್ ಕಸ್ಯ ಹೋತು-ರ್ಯಜ್ಞಂ ಜುಷಾಣೋ ಅಭಿ ಸೋಮಮೂಧಃ ।**
**ಪಿಬನ್ನುಶಾನೋ ಜುಷಮಾಣೋ ಅಂಧೋ ವವಕ್ಷ ಋಷ್ವಃ ಶುಚತೇ ಧನಾಯ ॥೧॥**

**ಪದಾರ್ಥ:-** **[ಕಸ್ಯ]** ಯಾವ **[ಹೋತುಃ]** ನ್ಯಾಯಯುತ ಕರ್ಮಮಾಡುವ **[ಮಹಾಂ]** ಮಹತ್ತರ **[ಯಜ್ಞಂ]** ಸಂಗತಿಕರಣ ವ್ಯವಹಾರವನ್ನು **[ಜುಷಾಣಃ]** ಸೇವನ ಮಾಡುತ್ತ **[ಕಥಾ]** ಯಾವ ರೀತಿಯಿಂದ **[ಅಭಿವೃಧತ್]** ವೃದ್ಧಿಹೊಂದುವನು. **[ಊಧಃ]** ಉತ್ತಮ **[ಸೋಮಂ]** ಸೋಮಾದಿ ರಸವನ್ನು **[ಪಿಬನ್]** ಕುಡಿಯಲು **[ಉಶಾನಃ]** ಬಯಸುತ್ತ **[ಅಂಧಃ]** ಅನ್ನವನ್ನು **[ಜುಷಾಣಃ]** ಸೇವಿಸುವವನಾಗಿ **[ವವಕ್ಷೇ]** ಪದಾರ್ಥಗಳನ್ನು ಸಂಗತಗೊಳಿಸುವನು. **[ಋಷ್ವಃ]** ಶ್ರೇಷ್ಠನಾಗಿ **[ಧನಾಯ]** ಹಣಕ್ಕಾಗಿ **[ಶುಚತೇ]** ವಿಚಾರಮಾಡುವನು.

**ಭಾವಾರ್ಥ:-** ವಿದ್ವಾಂಸರೇ! ಯಾರಿಂದ ಅಧ್ಯಯನ ಮಾಡಿ ವಿದ್ಯಾರ್ಥಿಗಳು ಹೇಗೆ ಬೆಳೆಯಬೇಕು? ವಿದ್ಯೆಯನ್ನು ಸೇವಿಸಬೇಕು? ಬ್ರಹ್ಮಚರ್ಯದಿಂದ ವೀರ್ಯನಿಗ್ರಹ ಮಾಡಿ ಅಧ್ಯಯನ ಮಾಡಬೇಕು. ವಿದ್ಯೆಯನ್ನು ಬಯಸುವವನಾಗಿ ಆಚಾರ್ಯರಿಂದ ವಿದ್ಯಾಭ್ಯಾಸ ಮಾಡಿ ನಿಯತ ಆಹಾರ ವಿಹಾರಗಳನ್ನು ಮಾಡುತ್ತ ಬೆಳೆಯಬೇಕು. ಗುರುಸೇವೆ ಮಾಡುತ್ತ ಅವರ ಅನುಗ್ರಹಕ್ಕೆ ಪಾತ್ರರಾಗಿ ವಿದ್ವಾಂಸರಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೋ ಅಸ್ಯ ವೀರಃ ಸಧಮಾದಮಾಪ ಸಮಾನಂಶ ಸುಮತಿಭಿಃ ಕೋ ಅಸ್ಯ ।**
**ಕದಸ್ಯ ಚಿತ್ರಂ ಚಿಕಿತೇ ಕದೂತೀ ವೃಧೇ ಭುವಚ್ಛಶಮಾನಸ್ಯ ಯಜ್ಯೋಃ ॥೨॥**

**ಪದಾರ್ಥ:-** **[ಕಃ]** ಯಾವನು **[ವೀರಃ]** ಆತ್ಮಬಲಯುಕ್ತನು **[ಅಸ್ಯ]** ಈ ಅಧ್ಯಾಪಕನ **[ಸಧಮಾದಂ]** ಜೊತೆಯಲ್ಲಿ ಆನಂದವನ್ನು **[ಆಪ]** ಪಡೆಯುವನು. **[ಕಃ]** ಯಾವನು **[ಅಸ್ಯ]** ಇವನ **[ಸುಮತಿಭಿಃ]** ಉತ್ತಮ ಬುದ್ಧಿಗಳಿಂದ **[ಚಿತ್ರಾಂ]** ಅದ್ಭುತ ವಿಜ್ಞಾನವನ್ನು **[ಚಿಕಿತೇ]** ತಿಳಿದುಕೊಳ್ಳುವನು. **[ಕತ]** ಯಾವಾಗ **[ಅಸ್ಯ]** ಇವನ ವಿದ್ಯೆಯನ್ನು **[ಸಂ]** **[ಆನಂಶ]** ಪಡೆಯುವನು. **[ಊತೀ]** ರಕ್ಷಣಾದಿಗಳಿಂದ **[ಶಶಮಾನಸ್ಯ]** ಪ್ರಶಂಸಿತ **[ಯಜ್ಯೋಃ]** ಸಂಗ ಮಾಡಲು ಯೋಗ್ಯ ಸತ್ಯವ್ಯವಹಾರವನ್ನು **[ವೃಧೇ]** ವೃದ್ಧಿಹೊಂದಲು **[ಕತ್]** ಯಾವಾಗ **[ಭುವತ್]** ಆಗುವನು.

**ಭಾವಾರ್ಥ:-** ವಿದ್ವಾಂಸನೇ! ಯಾರು ಯಾರೊಂದಿಗೆ ಓದಬೇಕು? ಯಾರು ಯಾರೊಂದಿಗೆ ನ್ಯಾಯಯುತ ವ್ಯವಹಾರ ಮಾಡಬೇಕು? ಯಾರು ಇವರಲ್ಲಿ ಶ್ರೇಷ್ಠರು? ಈ ಪ್ರಶ್ನೆಗಳಿಗೆ ಉತ್ತರ ಹೀಗಿದೆ. ಯಾರು ಪ್ರಶಂಸಿತ ಕರ್ಮಮಾಡುವರೋ ಅವರು ಶ್ರೇಷ್ಠರು. ಅವರೊಂದಿಗೆ ವ್ಯವಹಾರ ಮಾಡಬೇಕು. ಅವರೊಂದಿಗೆ ಓದಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಥಾ ಶೃಣೋತಿ ಹೂಯಮಾನಮಿಂದ್ರಃ ಕಥಾ ಶೃಣ್ವನ್ನವಸಾಮಸ್ಯ ವೇದ ।**
**ಕಾ ಅಸ್ಯ ಪೂರ್ವೀರುಪಮಾತಯೋ ಹ ಕಥೈನಮಾಹುಃ ಪಪುರಿಂ ಜರಿತ್ರೇ ॥೩॥**

**ಪದಾರ್ಥ:-** **[ಇಂದ್ರ]** ಅಧ್ಯಾಪಕನು **[ಹೂಯಮಾನಂ]** ಸ್ಪರ್ಧಿಸುವನಿಗೆ **[ಕಥಾ]** ಹೇಗೆ **[ಶೃಣೋತಿ]** ಕೇಳಿಸಿಕೊಳ್ಳುವನು. **[ಶೃಣ್ವನ್]** ಕೇಳಿಸಿಕೊಳ್ಳುತ್ತ **[ಅಸ್ಯ]** ಇವನ **[ಅವಸಾಂ]** ರಕ್ಷಣಾದಿಗಳ ಸ್ಪರ್ಧೆಮಾಡುತ್ತ ಇರುವವನನ್ನು **[ಕಥಾ]** ಹೇಗೆ **[ವೇದ]** ತಿಳಿಯುವನು. **[ಅಸ್ಯ]** ಇವನ **[ಪೂರ್ವೀಃ]** ಪ್ರಾಚೀನ **[ಉಪಮಾತಯಃ]** **[ಹ]** ಉಪಮಾನಗಳೇ **[ಕಾಃ]** ಯಾರು **[ಏನಂ]** ಇವನನ್ನು **[ಜರಿತ್ರೇ]** ವಿದ್ಯಾವಂತನಿಗೆ **[ಪಪುರಿಂ]** ಪಾಲನೆ ಮಾಡುವವನು **[ರಥಾ]** ಹೇಗೆ **[ಆಹುಃ]** ಹೇಳುವರು?

**ಭಾವಾರ್ಥ:-** ಯಾವ ವಿದ್ಯಾರ್ಥಿಯು ಯಥಾರ್ಥ ಬೋಧಿಸುವವನ ಮಾತುಗಳನ್ನು ಶಾಸ್ತ್ರಗಳನ್ನು ಕೇಳಿಸಿಕೊಳ್ಳುವನೋ, ಗೌರವಿಸುವನೋ, ಸುನಿಶ್ಚಿತ ಕರ್ಮಗಳನ್ನು ಮತ್ತೆ ಆರಂಭಿಸುವನೋ, ಅವರೇ ತಿಳಿಯಲು ಯೋಗ್ಯವಾದ ಎಲ್ಲವನ್ನು ತಿಳಿಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಥಾ ಸಬಾಧಃ ಶಶಮಾನೋ ಅಸ್ಯ ನಶದಭಿ ದ್ರವಿಣಂ ದೀಧ್ಯಾನಃ ।**
**ದೇವೋ ಭುವನ್ನವೇದಾ ಮ ಋತಾನಾಂ ನಮೋ ಜಗೃಭ್ವಾ ಅಭಿ ಯಜ್ಜುಜೋಷತ್ ॥೪॥**

**ಪದಾರ್ಥ:-** **[ಅಸ್ಯ]** ಇವನ **[ಸಬಾಧಃ]** ಬಾಧೆ, ದುಃಖಸಹಿತವಾಗಿ **[ರಥಾ]** ಹೇಗೆ **[ನಶತ್]** ನಷ್ಟವಾಗುತ್ತದೆ **[ದ್ರವಿಣಂ]** ಧನವನ್ನು **[ಅಭಿ]** **[ದೀಧ್ಯಾನಃ]** ಎಲ್ಲಾ ಕಡೆಗಳಿಂದಲೂ ಬೆಳಕು ಮತ್ತು **[ಶಶಮಾನಃ]** ಪ್ರಶಂಸೆ ಮಾಡುತ್ತ **[ದೇವಃ]** ವಿದ್ಯಾವಂತನು **[ಭುವತ್]** ಆಗುವನು. **[ನವೇದಾಃ]** ತಿಳಿಯದವನು **[ಮೇ]** ನನ್ನ **[ಋತಾನಾಂ]** ಸತ್ಯ ವ್ಯವಹಾರಗಳ **[ನಮಃ]** ಅನ್ನವನ್ನು **[ಜಗೃಭ್ವಾನ್]** ಗ್ರಹಣ ಮಾಡಿದವನು **[ಯತ್]** ಯಾವನು **[ಅಭಿ]** **[ಜುಜೋಷತ್]** ಸೇವನೆ ಮಾಡುವನು.

**ಭಾವಾರ್ಥ:-** ಅಧ್ಯಾಪಕನೇ! ಯಾವ ರೀತಿಯಿಂದ ಈ ವಿದ್ಯೆಯ ಅಭಯವನ್ನು ಪಡೆಯಬಹುದು? ಮತ್ತು ಹೇಗೆ ವಿದ್ವಾಂಸನಾಗಬೇಕು? ಈ ಪ್ರಶ್ನೆಗಳಿಗುತ್ತರ - ಯಾರು ಗೌರವ ಪೂರ್ವಕ ಶ್ರೇಷ್ಠ ಪುರುಷರಿಂದ ವಿದ್ಯಾಗ್ರಹಣ ಮಾಡುವರೋ ಧರ್ಮ-ಕರ್ಮಗಳ ಸೇವನೆ ಮಾಡುವರೋ ಅವರೇ ಎಂಬುದುತ್ತರವಾಗಿದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಥಾ ಕದಸ್ಯಾ ಉಷಸೋ ವ್ಯುಷ್ಟೌ ದೇವೋ ಮರ್ತಸ್ಯ ಸಖ್ಯಂ ಜುಜೋಷ ।**
**ಕಥಾ ಕದಸ್ಯ ಸಖ್ಯಂ ಸಖಿಭ್ಯೋ ಯೇ ಅಸ್ಮಿನ್ ಕಾಮಂ ಸುಯುಜಂ ತತಸ್ರೇ ॥೫॥**

**ಪದಾರ್ಥ:-** [**ದೇವಃ**] ವಿದ್ಯಾವಂತನು [**ಅಸ್ಯಾಃ**] ಈ [**ಉಷಸಃ**] ಪ್ರಾತಃಕಾಲದ [**ವ್ಯುಷ್ಟೌ**] ಬೆಳಕಿನಲ್ಲಿ [**ಮರ್ತಸ್ಯ**] ಮನುಷ್ಯನ [**ಸಖ್ಯಂ**] ಸ್ನೇಹತನವನ್ನು [**ಕತ್**] ಯಾವಾಗ [**ಕಥಾ**] ಹೇಗೆ [**ಜುಜೋಷ**] ಸೇವಿಸುವನು. [**ಸಖಿಭ್ಯಃ**] ಸ್ನೇಹಿತರಿಗಾಗಿ [**ಅಸ್ಯ**] ಇವನ [**ಸಖ್ಯಂ**] ಸ್ನೇಹತನವನ್ನು [**ಕತ್**] ಯಾವಾಗ [**ಕಥಾ**] ಹೇಗೆ ಸಾಧ್ಯ. [**ಯೇ**] ಯಾರು [**ಅಸ್ಮಿನ್**] ಈ ಸೇಹಕರ್ಮದಲ್ಲಿ [**ಸುಯುಜಂ**] ಸಂಗತಿಗೆ ಯೋಗ್ಯ [**ಕಾಮಂ**] ಇಚ್ಛೆಯನ್ನು [**ತತಸ್ರ**] ವಿಸ್ತರಿಸುವರು.

**ಭಾವಾರ್ಥ:-** ವಿದ್ವಾಂಸರೇ! ಯಾರು ಯಾರೊಂದಿಗೆ ಸ್ನೇಹ ಮಾಡಬೇಕು? ಸ್ನೇಹತನವನ್ನು ನಿರ್ವಹಿಸಬೇಕು? ಮಿತ್ರರೊಂದಿಗೆ ಹೇಗೆ ವರ್ತಿಸಬೇಕು? ಈ ಪ್ರಶ್ನೆಗಳಿಗುತ್ತರ-ಯಾವಾಗ ಅವನ ಗುಣ ಧರ್ಮಗಳನ್ನು ಚೆನ್ನಾಗಿ ಪರೀಕ್ಷಿಸುವರೋ ಆಗ ಅವರೊಂದಿಗೆ ಸ್ನೇಹ ಮಾಡಬೇಕು. ಈ ಜಗತ್ತಿನಲ್ಲಿ ಯಾರು ಎಲ್ಲರೊಂದಿಗೂ ಸ್ನೇಹಭಾವದಿಂದ ವರ್ತಿಸುವರೋ ಅವರೊಂದಿಗೆ ಸ್ನೇಹತನವನ್ನು ನಿರ್ವಹಿಸಬೇಕು. ಅವರ ಸ್ನೇಹವನ್ನು ಸದಾಕಾಲ ರಕ್ಷಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಿಮಾದಮತ್ರಂ ಸಖ್ಯಂ ಸಖಿಭ್ಯಃ ಕದಾ ನು ತೇ ಭ್ರಾತ್ರಂ ಪ್ರ ಬ್ರವಾಮ ।**
**ಶ್ರಿಯೇ ಸುದೃಶೋ ವಪುರಸ್ಯ ಸರ್ಗಾಃ ಸ್ವ (ಅ) ೧ ರ್ಣ ಚಿತ್ರತಮಮಿಷ ಆ ಗೋಃ ॥೬॥**

**ಪದಾರ್ಥ:-** [**ತೇ**] ನಿನ್ನ [**ಸಖಿಭ್ಯಃ**] ಸ್ನೇಹಿತರಿಗೆ [**ಭ್ರಾತ್ರಂ**] ಭ್ರಾತೃಸಂಬಂಧ ಕರ್ಮವನ್ನು ಅನುಸರಿಸಿರುವ [**ಸಖ್ಯಂ**] ಗೆಳೆತನವನ್ನು [**ಕದಾ**] ಯಾವಾಗ [**ನು**] ಬೇಗನೇ [**ಪ್ರ, ಬ್ರವಾಮ**] ಉಪದೇಶಿಸೋಣ. [**ಆತ್**] ಆಮೇಲೆ [**ಕಿಂ**] ಏನನ್ನು [**ಅಮತ್ರಂ**] ಸುಪಾತ್ರನಿಗೆ ಉಪದೇಶ ಮಾಡೋಣ. [**ಸುದೃಶಃ**] ನೋಡಲರ್ಹ [**ಅಸ್ಯ**] ಇವನ [**ಶ್ರಿಯೇ**] ಸಂಪತ್ತಿಗೆ [**ಆ, ಗೋಃ**] ಭೂಮಿಯಿಂದ ಮೊದಲುಗೊಂಡು [**ಸರ್ಗಾಃ**] ಸೃಷ್ಟಿಗಳು [**ವಪುಃ**] ರೂಪವಂತ ಶರೀರದ [**ಇಷೇ**] ಇಚ್ಛೆಗಾಗಿ [**ಚಿತ್ರತಮಂ**] ಆಶ್ಚರ್ಯಕರ ವಿಜ್ಞಾನವನ್ನು [**ಸ್ವಃ**] [**ನ**] ಸುಖ ಸದೃಶ ಉಪದೇಶ ಮಾಡಬೇಕು.

**ಭಾವಾರ್ಥ:-** ಎಲ್ಲಾ ಮನುಷ್ಯರು ವಿದ್ವಾಂಸರೊಂದಿಗೆ ಗೆಳೆತನವನ್ನು ಸದಾ ಇರಿಸಬೇಕು. ಏಕೆಂದರೆ ಅವರು ಉತ್ತಮ ಉಪದೇಶದಿಂದ ಸೃಷ್ಟಿವಿದ್ಯೆ ತಿಳಿದುಕೊಳ್ಳುವಂತಹ ಧರ್ಮಾತ್ಮರನ್ನಾಗಿ ಮಾಡುವರು. ಉತ್ತಮ ಜ್ಞಾನಕೊಟ್ಟು ಸುಖಿಗಳನ್ನಾಗಿ ಮಾಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದ್ರುಹಂ ಜಿಘಾಂಸನ್ ಧ್ವರಸಮನಿಂದ್ರಾಂ ತೇತಿಕ್ತೇ ತಿಗ್ಮಾ ತುಜಸೇ ಅನೀಕಾ ।**
**ಋಣಾ ಚಿದ್ಯತ್ರ ಋಣಯಾ ನ ಉಗ್ರೋ ದೂರೇ ಅಜ್ಞಾತಾ ಉಷಸೋ ಬಬಾಧೇ ॥೭॥**

**ಪದಾರ್ಥ:-** **[ಯತ್ರ]** ಎಲ್ಲಿ **[ನಃ]** ನಮ್ಮ **[ಉಗ್ರಃ]** ತೀವ್ರ ಪ್ರತಾಪ **[ದೂರೇ]** ದೂರದಲ್ಲಿ **[ಅಜ್ಞಾತಾಃ]** ತಿಳಿಯದಿರುವ ಶತ್ರುಗಳು **[ಉಪಸಃ]** ಬೆಳಗಿನಿಂದ ರಾತ್ರಿಯು ಹೇಗೋ ಹಾಗೇ **[ಬಬಾಧೇ]** ಪ್ರತಿಬಂಧಿಸುತ್ತವೆ. **[ಋಣಯಾಃ]** ಪ್ರಾಪ್ತಸೇನೆಯಿಂದ **[ಚಿತ್]** ಅದನ್ನೇ **[ತುಜಸೇ]** ಶತ್ರುನಾಶಕ್ಕಾಗಿ **[ತಿಗ್ಮಾ]** ತೀವ್ರವಾದ **[ಋಣಾ]** ಪ್ರಾಪ್ತವಾದ **[ಅನೀಕಾ]** ಸೇನಾಸಮೂಹವನ್ನು **[ತೇತಿಕ್ತೇ]** ಅತಿ ತೀಕ್ಷ್ಣಗೊಳಿಸುವನು. **[ದುಹಂ]** ದ್ರೋಹಬಗೆಯಲು **[ಧ್ವರಸಂ]** ಹಿಂಸಿಸುವವನನ್ನು **[ಜಿಘಾಂಸನ್]** ನಾಶಗೊಳಿಸಲು ಬಯಸುತ್ತ **[ಅನಿಂದ್ರಾಂ]** ಈಶ್ವರ ಸಂಬಂಧ ರಹಿತ ಮಾರ್ಗವನ್ನು **[ಬಬಾಧೇ]** ಪಡೆಯುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು, ಉತ್ತಮ ಶಿಕ್ಷಣ ನೀಡಲಾದ ಶ್ರೇಷ್ಠ ಹಾಗೂ ಶತ್ರುಸಂಹಾರಕ ಸೇನೆಯನ್ನು ತಯಾರಿಸಿಕೊಂಡು ದೂರದಲ್ಲಿರುವ ಶತ್ರುವನ್ನೂ ಭಯಭೀತರನ್ನಾಗಿ ಮಾಡುವರೋ, ತನ್ನ ಪ್ರಜೆಗಳಿಗೆ ಬಡತನ-ಶತ್ರುಭಯರಹಿತರನ್ನಾಗಿ ಮಾಡುವರೋ, ಅವರನ್ನು ನೀವು ಸದಾ ಗೌರವಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀ-ರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।**
**ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ॥೮॥**

**ಪದಾರ್ಥ:-** **[ಋತಸ್ಯ]** ಸತ್ಯಾಚರಣೆಯ **[ಪೂರ್ವೀಃ]** ಪ್ರಾಚೀನಕಾಲದ **[ಶುರುಧಃ]** ವೇಗವಾಗಿ ಪಡೆಯುವ ತನ್ನ ಸೇನೆ **[ಸಂತಿ]** ಇವೆ. **[ಋತಸ್ಯ]** ಸತ್ಯದ **[ಧೀತಿಃ]** ಧಾರಣ ಮಾಡುವ ಬುದ್ಧಿಯು **[ವೃಜಿನಾನಿ]** ಬಲಪಡೆದು ಶತ್ರುಗಳನ್ನು **[ಹಂತಿ]** ನಾಶಮಾಡುತ್ತದೆ. ಅದರಿಂದ **[ಋತಸ್ಯ]** ಸತ್ಯದ **[ಶ್ಲೋಕಃ]** ನುಡಿಯು **[ಬಧಿರಾ]** ಕಿವುಡು **[ಕರ್ಣಾ]** ಕಿವಿಗಳು **[ತತರ್ದ]** ತೆರೆಯುವಂತೆ ಮಾಡುತ್ತದೆ. **[ಬುಧಾನಃ]** ಬೋಧಿಸುವ **[ಶುಚಮಾನಃ]** ಪವಿತ್ರಗೊಳಿಸುತ್ತ **[ಆಯೋಃ]** ಜೀವನದ ಉಪಾಯಗಳನ್ನು **[ಹಿ]** ಉಪದೇಶಿಸುವನು.

**ಭಾವಾರ್ಥ:-** ಅಧ್ಯಾಪಕರೇ! ಯಾವನು ಜಿತೇಂದ್ರಿಯನು ದುಷ್ಟಾಚರಣೆಯನ್ನು ತ್ಯಜಿಸಿದವನು ಸತ್ಯ ಪ್ರಚಾರಕನು ಸತ್ಯನುಡಿಯುವನು ಕಿವುಡನಂತೆ ಇರುವವನು ಯಜ್ಞ ಪುರುಷರ ಬೋಧನೆ ಮಾಡುತ್ತ ಬ್ರಹ್ಮಚರ್ಯಾದಿ ನಿಯಮಗಳಿಂದ ಆಯುಸ್ಸನ್ನು ಹೆಚ್ಚಿಸಿಕೊಂಡವನು ಶತ್ರುಗಳ ಸಂಹಾರಕನೂ ಆಗಿರುವನೋ ಅವನು ತನ್ನ ಆತ್ಮನಿಗೆ ಸಮನಾಗಿ ರಕ್ಷಣೆ ಮಾಡಬಲ್ಲನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋತಸ್ಯ ದೃಳ್ಹಾ ಧರುಣಾನಿ ಸಂತಿ ಪುರೂಣಿ ಚಂದ್ರಾ ವಪುಷೇ ವಪೂಂಷಿ ।**
**ಋತೇನ ದೀರ್ಘಮಿಷಣಂತ ಪೃಕ್ಷ ಋತೇನ ಗಾವ ಋತಮಾ ವಿವೇಶುಃ ॥೯॥**

**ಪದಾರ್ಥ:-** **[ಋತಸ್ಯ]** ಸತ್ಯಧರ್ಮಾಚರಣೆಯ **[ದೃಳ್ಹಾ]** ದೃಢವಾದ **[ಧರುಣಾನಿ]** ಜಲದಂತೆ **[ಶಾಂತಃ]** **[ಪುರೂಣಿ]** ಅತ್ಯಧಿಕ **[ಚಂದ್ರಾ]** ಆನಂದದಾಯಕ ಸುವರ್ಣಾದಿ **[ವಪುಷೇ]** ಸುಂದರ ಶರೀರಕ್ಕಾಗಿ **[ವಪೂಂಷಿ]** ರೂಪ ಪಡೆದವರು **[ಸಂತಿ]** ಇರುವರು **[ಋತೇನ]** ಸತ್ಯದಿಂದ **[ಪೃಕ್ಷಃ]** ಸ್ಪರ್ಶಾರ್ಹ ಅನ್ನಾದಿಗಳು **[ದೀರ್ಘಂ]** ಬಹುಕಾಲ ಬದುಕುವ ಆಯುಸ್ಸು ಇವುಗಳನ್ನು **[ಇಷಣಂತ]** ಪಡೆಯುವರು. **[ಋತೇನ]** ಸತ್ಯಾಚರಣೆಯಿಂದ **[ಗಾವಃ]** ಗೋವುಗಳು ಹೇಗೋ ಹಾಗೆ ಕರುಗಳನ್ನು **[ಋತಂ]** ಸತ್ಯಬ್ರಹ್ಮನನ್ನು **[ಆ, ವಿವೇಶುಃ]** ಪಡೆದುಕೊಳ್ಳುವರು.

**ಭಾವಾರ್ಥ:-** ಮನುಜರೇ! ನೀರಿನಿಂದ ಪ್ರಾಣಧಾರಣೆ ಅನ್ನಾದಿಗಳ ಉತ್ಪತ್ತಿ, ಸುಂದರ ಹಾಗೂ ಬಹುಕಾಲದ ಬದುಕು ಸಾಧ್ಯವಾಗುವ ರೀತಿಯಲ್ಲಿ ಸತ್ಯಾಚರಣೆಯಿಂದ ಸಂಪೂರ್ಣ ಐಶ್ವರ್ಯ, ವಿದ್ಯೆ, ದೀರ್ಘಜೀವನ ಸಾಧ್ಯವಾಗುತ್ತದೆ. ಆದ್ದರಿಂದ ನಿರಂತರ ಸತ್ಯಾಚರಣೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋತಂ ಯೇಮಾನ ಋತಮಿದ್ವನೋ-ತ್ಯೃತಸ್ಯ ಶುಷ್ಮಸ್ತುರಯಾ ಉ ಗವ್ಯುಃ ।**
**ಋತಾಯ ಪೃಥ್ವೀ ಬಹುಲೇ ಗಭೀರೇ ಋತಾಯ ಧೇನೂ ಪರಮೇ ದುಹಾತೇ ॥೧೦॥**

**ಪದಾರ್ಥ:-** **[ಋತಾಯ]** ಸತ್ಯಾಚರಣೆಗಾಗಿ **[ಬಹುಲೇ]** ಬಹು ಪದಾರ್ಥಗಳಿಂದ ಯುಕ್ತವಾದ **[ಗಭೀರೇ]** ಗಂಭೀರಾಶ್ರಯದಲ್ಲಿ **[ಪೃಥ್ವೀ]** ಭೂಮ್ಯಂತರಿಕ್ಷಗಳು **[ಋತಾಯ]** ನೀರಿಗಾಗಿ **[ಪರಮ]** ಶ್ರೇಷ್ಠ **[ಧೇನೂ]** ಗೋವುಗಳಂತಿರುವ **[ದುಹಾತೇ]** ಪ್ರಾತಃಕಾಲವು **[ಋತಂ]** ಸತ್ಯಾಚರಣೆಯನ್ನು **[ಯೇಮಾನಃ]** ನಿಯಮಗೊಳಿಸುತ್ತ **[ಋತಂ]** ಸತ್ಯದ **[ವನೋತಿ]** ಯಾಚನ ಮಾಡುವನು. **[ಋತಸ್ಯ]** ಸತ್ಯದ **[ಶುಷ್ಮಃ]** ಬಲವನ್ನು **[ತುರಯಾಃ]** ಶೀಘ್ರಗತಿ ಪಡೆದ **[ಉ, ಗವ್ಯುಃ]** ತನ್ನ ಭೂಮಿಯನ್ನು ಬಯಸುವವನು **[ಇತ್]** ಸಮಗ್ರ ಸುಖವನ್ನು ಪಡೆಯುವನು.

**ಭಾವಾರ್ಥ:-** ಮನುಷ್ಯರೇ! ಯಾರು ಮನುಷ್ಯ ಶರೀರ ಪಡೆದು ನಿಯಮವನ್ನನುಸರಿಸಿ ಸತ್ಯಾಚರಣೆ, ಸತ್ಯಯಾಚನೆ ಮಾಡುತ್ತ ಶೀಘ್ರಧಾರ್ಮಿಕರಾಗುವರೋ, ಅವರು ಭೂಮಿ ಸೂರ್ಯರಂತೆ ಎಲ್ಲ ಇಚ್ಛೆಯನ್ನು ಪೂರ್ಣಗೊಳಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಓ) ೩ ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೧೧॥**

**ಪದಾರ್ಥ:-** **[ಹರಿವಃ]** ಶ್ರೇಷ್ಠ ವಿದ್ಯಾರ್ಥಿಗಳೇ! **[ಇಂದ್ರ]** ಯಜ್ಞೈಶ್ವರ್ಯ ಸಂಪನ್ನನೇ! **[ಸ್ತುತಃ]** ಯಾವ ಕಾರಣದಿಂದ ನೀವು ಪ್ರಶಂಸಿತರಾಗಿರುವಿರೋ **[ಜರಿತ್ರೇ]** ವಿದ್ಯಾವಂತರಿಗೆ **[ಇಷಂ]** ಅನ್ನಕೊಟ್ಟು **[ನದ್ಯಃ]** **[ನ]** ನದಿಗಳಿಗೆ ಸದೃಶ **[ನು]** ವೇಗವಾಗಿ **[ಪೀಪೇಃ]** ವೃದ್ಧಿ ಪಡಿಸುವಿರೋ ಆ ಕಾರಣದಿಂದ **[ಗೃಣಾನಃ]** ನಾವು ನಿಮ್ಮ ಪ್ರಶಂಸೆ ಮಾಡುವವರಾಗಿ **[ನು]** ನಿಶ್ಚಯವಾಗಿಯೂ **[ಅಕಾರಿ]** ಮಾಡಲಾದ **[ತೇ]** ನಿನಗೆ **[ನವ್ಯಂ]** ಹೊಸ - ಹೊಸ **[ಬ್ರಹ್ಮ]** ಧನಕೊಡಲಾಗಿದೆಯೋ ಅದರಿಂದ **[ರಥ್ಯಃ]** ರಥಯುಕ್ತನಾಗಿ **[ಸದಾಸಾಃ]** ಸೇವಕರೊಂದಿಗಿರುವ ನಾವು **[ಧಿಯಾ]** ಬುದ್ಧಿವಂತಿಕೆಯಿಂದ **[ಸ್ಯಾಮ]** ನಿನ್ನ ಮಿತ್ರರಾಗುವೆವು.

**ಭಾವಾರ್ಥ:-** ವಿದ್ಯಾವಂತರೇ! ಯಾವ ಕಾರಣದಿಂದ ನೀವು ಎಲ್ಲರಿಗೂ ವಿದ್ಯಾದಾನ ಮಾಡುವಿರೋ ಆದ್ದರಿಂದ ನಿಮ್ಮೊಂದಿಗೆ ಸ್ನೇಹ ಭಾವ ಮಾಡಿಕೊಂಡು ನಿಮಗೆ ಬಹುಧನ ಅನ್ನಾದಿಗಳನ್ನು ಕೊಟ್ಟು ಗೌರವಿಸುತ್ತೇವೆ.

ಈ ಸೂಕ್ತದಲ್ಲಿ ಪ್ರಶ್ನೋತ್ತರಗಳು ಗೆಳೆತನ, ಶತ್ರು ನಿವಾರಣೆ, ಸತ್ಯಾಚಾರೋತ್ಕರ್ಷಾದಿ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಇಪ್ಪತ್ತಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೨೪

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೫, ೭ ತ್ರಿಷ್ಟುಪ್ ಛಂದಃ, ೩, ೯ ನಿಚೃತ್ರಿಷ್ಟುಪ್, ೪ ವಿರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೮ ಭುರಿಕ್ಪಂಕ್ತಿಃ, ೬ ಸ್ವರಾಡ್ಪಂಕ್ತಿಃ, ೧೧ ನಿಚೃತ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೧೦ ನಿಚೃದನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ಬ್ರಹ್ಮಚರ್ಯದ ವಿಷಯವನ್ನು ಇಲ್ಲಿ ಹೇಳಲಾಗಿದೆ.

**ಕಾ ಸುಷ್ಟುತಿಃ ಶವಸಃ ಸೂನುಮಿಂದ್ರ-ಮರ್ವಾಚೀನಂ ರಾಧಸ ಆ ವವರ್ತತ್ ।**

**ದದಿರ್ಹಿ ವೀರೋ ಗೃಣತೇ ವಸೂನಿ ಸ ಗೋಪತಿರ್ನಿಷ್ಷಿಧಾಂ ನೋ ಜನಾಸಃ ॥೧॥**

**ಪದಾರ್ಥ:-** [ಜನಾಸಃ] ವಿದ್ಯಾವಂತರೇ! [ವೀರಃ] ವಿದ್ಯಾಶೌರ್ಯಾದಿಗುಣವಿರುವವನು [ಗೃಣತೇ] ಪ್ರಶಂಸಿತ ಕರ್ಮಠನಿಗಾಗಿ [ವಸೂನಿ] ದ್ರವ್ಯಗಳನ್ನು [ದದಿಃ] ಕೊಡುತ್ತಾನೆ. [ಸಃ] ಅವನು [ಹಿ] ಯಾವ ಕಾರಣದಿಂದ [ನಿಷ್ಷಿಧಾಂ] ಮಂಗಲಾಚರಣೆ ಮಾಡುವವನಾಗಿ [ನಃ] ನಮ್ಮ [ಗೋಪತಿಃ] ರಾಜನಾಗಲಿ. [ಕಾ] ಯಾವಳು [ಸುಷ್ಟುತಿಃ] ಉತ್ತಮ ಪ್ರಶಂಸೆ ಮತ್ತು [ಶವಸಃ] ಬಲಿಷ್ಠ ಪುರುಷನ [ಸೂನುಂ] ಮಗನನ್ನು [ಅರ್ವಾಚೀನಂ] ನವ ಯೌವ್ವನಾವಸ್ಥೆಯಲ್ಲಿರುವವನನ್ನು [ಇಂದ್ರಂ] ಐಶ್ವರ್ಯದಾಯಕನನ್ನು [ಆ, ವವರ್ತತ್] ಉತ್ತಮ ವ್ಯವಹಾರದಲ್ಲಿ ತೊಡಗಿಸುವಳು [ರಾಧಸೇ] ಧರ್ನೆಶ್ವರ್ಯದ ಯೋಗದ ವರ್ತನೆ ಮಾಡಬೇಕು.

**ಭಾವಾರ್ಥ:-** ಮನುಷ್ಯರೇ! ಯಾರು ಬ್ರಹ್ಮಚರ್ಯಾಶ್ರಮವನ್ನು ಪರಿಪಾಲಿಸಿರುವನೋ ಅವನ ಪುತ್ರನು ಪೂರ್ಣ ಬ್ರಹ್ಮಚರ್ಯಾಶ್ರಮ ಮುಗಿಸಿ ವಿದ್ಯಾವಂತನಾಗಿ ಪ್ರಶಂಸಾರ್ಹ ಆಚರಣೆ ಮತ್ತು ಸುಖದಾಯಕನೋ ಅವನೇ ನಮ್ಮ ರಾಜನಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ವೃತ್ರಹತ್ಯೇ ಹವ್ಯಃ ಸ ಈಡ್ಯಃ ಸ ಸುಷ್ಟುತ ಇಂದ್ರಃ ಸತ್ಯರಾಧಾಃ ।**

**ಸ ಯಾಮನ್ನಾ ಮಘವಾ ಮರ್ತ್ಯಾಯ ಬ್ರಹ್ಮಣ್ಯತೇ ಸುಷ್ವಯೇ ವರಿವೋ ಧಾತ್ ॥೨॥**

**ಪದಾರ್ಥ:-** [ಮಘವಾ] ಶ್ರೇಷ್ಠ ರಾಜ್ಯವಿರುವ [ಸುಷ್ವಯೇ] ಧನ ಪ್ರಾಪ್ತಿಯ ಅನುಷ್ಠಾನ ಮಾಡುವ [ಬ್ರಹ್ಮಣ್ಯತೇ] ಧರ್ಮಮಾರ್ಗದಿಂದ ಧನಬಯಸುವವನಿಗೆ [ಮರ್ತ್ಯಾಯ] ಮನುಷ್ಯನಿಗೆ [ವರಿವಃ] ಸೇವನವನ್ನು [ಆ, ಧಾತ್] ಧಾರಣ ಮಾಡುವನು. [ಸಃ] ಅವನು [ಇಂದ್ರಃ] ಐಶ್ವರ್ಯವಂತನು [ಯಾಮನ್] ಮಾರ್ಗದಲ್ಲಿ [ಸಃ] ಅವನು [ಸತ್ಯರಾಧಾಃ] ನ್ಯಾಯದಿಂದ ಸಂಗ್ರಹಿಸಿದ ಧನವಂತನು [ಸಃ] ಅವನು [ವೃತ್ರಹತ್ಯೇ] ದೊಡ್ಡ ಯುದ್ಧದಲ್ಲಿ [ಸುಷ್ಟುತಃ] ಎಲ್ಲ ಕಡೆಗಳಲ್ಲೂ ಕೀರ್ತಿ ಪಡೆಯುವನು. [ಸಃ] ಅವನು [ಈಡ್ಯಃ] ಪ್ರಶಂಸಾರ್ಹನು [ಹವ್ಯಃ] ಆಹ್ವಾನಿಸಲು ಯೋಗ್ಯನಾಗಿರುವನು.

**ಭಾವಾರ್ಥ:-** ಮನುಷ್ಯನು ಬಾಲ್ಯಾವಸ್ಥೆಯಿಂದಲೇ ಉತ್ತಮ ಕಾರ್ಯ ಮಾಡುವಂತಹ ವಿದ್ಯಾವಂತರ ಸೇವೆ ಮಾಡುವನಾಗಬೇಕು. ಉತ್ತಮ ಶಿಕ್ಷಣ ಪಡೆದು ನ್ಯಾಯಮಾರ್ಗವನ್ನನುಸರಿಸಬೇಕು. ಧನುರ್ವೇದವನ್ನರಿಯಬೇಕು. ಚತುರನೂ ಹಾಗೂ ಯುದ್ಧ ವಿದ್ಯೆಯನ್ನರಿತವನೂ ಆಗಿರಬೇಕು. ಅಂತಹವನನ್ನೇ ರಾಜನಾಗಿ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಮಿನ್ನರೋ ವಿ ಹ್ವಯಂತೇ ಸಮೀಕೇ ರಿರಿಕ್ವಾಂಸಸ್ತನ್ವಃ ಕೃಣ್ವತ ತ್ರಾಮ್ ।**
**ಮಿಥೋ ಯತ್ತ್ಯಾಗಮುಭಯಾಸೋ ಅಗ್ಮ-ನ್ನರಸ್ತೋಕಸ್ಯ ತನಯಸ್ಯ ಸಾತೌ ॥೩॥**

**ಪದಾರ್ಥ:-** [**ರಿರಿಕ್ವಾಂಸಃ**] ರಕ್ಷಣೆ ಮಾಡುವ [**ನರಃ**] ನಾಯಕರು [**ಸಮೀಕ್**] ಸಂಗ್ರಾಮದಲ್ಲಿ [**ಯತ್**] ಯಾವನ [**ವಿ**] [**ಹ್ವಯಂತೇ**] ವಿಶೇಷ ಸ್ಪರ್ಧೆ ಮಾಡುವರೋ [**ತಂ**] ಅವನನ್ನು [**ಇತ್**] [**ತನ್ವಃ**] ಶರೀರದ [**ತ್ರಾಂ**] ರಕ್ಷಣೆಯನ್ನು [**ಕೃಣ್ವತ**] ಮಾಡಿರಿ. [**ನರಃ**] ನಾಯಕನು [**ತೋಕಸ್ಯ**] ಬೇಗ ಪ್ರಾಪ್ತವಾದ [**ತನಯಸ್ಯ**] ಬಾಲಕನ [**ಸಾತೌ**] ಉತ್ತಮ ವಿಭಾಗದಲ್ಲಿ [**ಉಭಯಾಸಃ**] ಉಭಯತ್ರವಿರುವ ದುಃಖವನ್ನು [**ತ್ಯಾಗಂ**] ತ್ಯಜಿಸಿ [**ಮಿಥಃ**] ಪರಸ್ಪರ ಶತ್ರುಗಳನ್ನು ನಾಶಗೊಳಿಸುತ್ತ [**ಅಗ್ಮನ್**] ಹೋಗುವರು.

**ಭಾವಾರ್ಥ:-** ಸೈನಿಕರೇ! ನೀವು ಸೇವಕರ ರಕ್ಷಕರೂ, ಉತ್ಸಾಹ ಸಂಪನ್ನರೂ, ಶೂರರೂ, ಪರಾಕ್ರಮಿಗಳೂ ಆಗಿರಿ. ಅವರ ಸತ್ಕಾರ ಮಾಡಿರಿ ಮತ್ತು ಯುದ್ಧರಂಗದಿಂದ ಪಲಾಯನ ಮಾಡುವವರನ್ನು ಗೌರವಿಸಬೇಡಿ. ಅವರನ್ನು ದಂಡಿಸಿ ವಿಜಯಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕ್ರತೂಯಂತಿ ಕ್ಷಿತಯೋ ಯೋಗ ಉಗ್ರಾऽऽಶುಷಾಣಾಸೋ ಮಿಥೋ ಅರ್ಣಸಾತೌ ।**
**ಸಂ ಯದ್ವಿಶೋऽವವೃತ್ರಂತ ಯುಧ್ಮಾ ಅದಿನ್ನೇಮ ಇಂದ್ರಯಂತೇ ಅಭೀಕೇ ॥೪॥**

**ಪದಾರ್ಥ:-** [**ಉಗ್ರ**] ತೀಕ್ಷ್ಣ ಸ್ವಭಾವದ ರಾಜನೇ! [**ಯತ್**] ಯಾವ [**ಕ್ಷಿತಯಃ**] ಮನುಷ್ಯರು [**ಯೋಗ**] ಯಮ ನಿಯಮಾದಿ ಅನುಷ್ಠಾನದಲ್ಲಿ [**ಆಶುಷಾಣಾಸಃ**] ಶೀಘ್ರ ಪ್ರವೃತ್ತಿಯವರು [**ಮಿಥಃ**] ಪರಸ್ಪರ ಪ್ರೀತಿ ಪಾತ್ರರಾಗಿ [**ಅರ್ಣಸಾತೌ**] ಪ್ರಾಪ್ತ ವಿಭಾಗದಲ್ಲಿ [**ಕ್ರತೂಯಂತಿ**] ಬೌದ್ಧಿಕ ಕರ್ಮಗಳನ್ನು ಬಯಸುವವರು. [**ವಿಶಃ**] ಪ್ರಜೆಗಳು. [**ಇಂದ್ರಯಂತೇ**] ಸ್ವಾಮಿಯನ್ನಾಗಿಸುವರು. [**ಯುಧ್ಮಾಃ**] ಯುದ್ಧ ಮಾಡುವುದರಲ್ಲಿ [**ನೇಮೇ**] ಮುಂದಾಳುಗಳು. [**ಅಭೀಕೇ**] ಸಮೀಪದಲ್ಲಿ [**ಸಂ ಅವವೃತ್ರಂತ**] ವಿರೋಧದಿಂದ ಧನ ಪಡೆಯುವರು. [**ಆತ್, ಇತ್**] ಅದೇ ಸಮಯದಲ್ಲಿ ನಿನ್ನ ಪರಿಚಾರಕರಾಗುವರು.

**ಭಾವಾರ್ಥ:-** ಯೋಗಾಭ್ಯಾಸ ಮಾಡದೆ ಬುದ್ಧಿ ಬೆಳೆಯುವುದಿಲ್ಲ. ಬುದ್ಧಿಯ ಹೊರತು ಧನವಿಲ್ಲ. ಆತ್ಮಜ್ಞಾನವಾಗುವುದಿಲ್ಲ ಹಾಗೂ ವಿದ್ಯಾ, ಪುರುಷಾರ್ಥ ನ್ಯಾಯಗಳ ಹೊರತಾಗಿ ಪ್ರಜಾಪಾಲನೆ ಮಾಡಲಾಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆದಿದ್ಧ ನೇಮ ಇಂದ್ರಿಯಂ ಯಜಂತ ಆದಿತ್ ಪಕ್ತಿಃ ಪುರೋಳಾಶಂ ರಿರಿಚ್ಯಾತ್ ।**
**ಆದಿತ್ ಸೋಮೋ ವಿ ಪಪೃಚ್ಯಾದಸುಷ್ವೀ-ನಾದಿಜ್ಜುಜೋಷ ವೃಷಭಂ ಯಜಧ್ಯೈ ॥೫॥**

**ಪದಾರ್ಥ:-** [**ಪುರೋಳಾಶಂ**] ಸಂಸ್ಕರಿಸಲಾದ ಅನ್ನವನ್ನು [**ಪಕ್ತಿ**] ಪಾಕವು [**ರಿರಿಚ್ಯಾತ್**] ವೃದ್ಧಿ ಪಡಿಸುತ್ತದೆ. [**ನೇಮೇ**] ಅನ್ಯರು [**ಆತ್**] [**ಇತ್**] ಅನಂತರವೇ [**ಸೋಮಃ**] ಸೋಮಲತೆಯನ್ನು [**ಅಸುಷ್ವೀನ್**] ಪ್ರಾಣದೊಂದಿಗೆ

**[ಉ, ಪಪೃಚ್ಯಾತ್]** ಸಂಯುಕ್ತಗೊಳಿಸುವರು. **[ಆತ್]** ಅನಂತರ **[ಇತ್]** ಅದನ್ನೇ **[ಯಜದ್ಯೈ]** ಸಂಗತಿಗೊಳಿಸಲು **[ವೃಷಭಂ]** ಬಲಿಷ್ಠನ **[ಜುಜೋಷ]** ಸೇವನ ಮಾಡುವರು. **[ಆತ]** ಅನಂತರ **[ಇತ್, ಹ]** ಎಲ್ಲವನ್ನು ಪಡೆಯಲರ್ಹರಾಗುವರು.

**ಭಾವಾರ್ಥ:-** ಯಾರು ಉತ್ತಮ ರೀತಿಯಲ್ಲಿ ಸಂಸ್ಕರಿಸಿದ ಅನ್ನವನ್ನೂ ಪಡೆದು ರುಚಿಕರ ಭೋಜನ ಮಾಡುವರೋ, ಅವರು ಬಲವನ್ನು ಪಡೆದು ರೋಗರಹಿತರಾಗುವರು. ಸಂಪತ್ತನ್ನು ಪಡೆದು ಧರ್ಮಾಚರಣೆ ಮಾಡುತ್ತ ಯಥಾರ್ಥವಾದಿಗಳ ಸೇವೆ ಮಾಡಬೇಕು.

ರಾಜ ಧರ್ಮದ ವಿಷಯವನ್ನು ಹೇಳಲಾಗುತ್ತದೆ.

**ಕೃಣೋತ್ಯಸ್ಮೈ ವರಿವೋ ಯ ಇತ್ಥೇ-ಂದ್ರಾಯ ಸೋಮಮುಶತೇ ಸುನೋತಿ ।**
**ಸಧ್ರೀಚೀನೇನ ಮನಸಾವಿವೇನಂ ತಮಿತ್ ಸಖಾಯಂ ಕೃಣುತೇ ಸಮತ್ಸು ॥೬॥**

**ಪದಾರ್ಥ:-** **[ಯಃ]** ಯಾವನು **[ಅಸ್ಮೈ]** ಇವನಿಗೆ **[ಸೋಮಂ]** ಐಶ್ವರ್ಯವನ್ನು **[ಉಶತೇ]** ಬಯಸುವವರಾಗಿ **[ಇಂದ್ರಾಯ]** ರಾಜನಿಗೆ **[ಇದ್ಧಾ]** ಈ ರೀತಿ **[ವರಿವಃ]** ಸೇವೆಯನ್ನು **[ಕೃಣೋತಿ]** ಮಾಡುತ್ತಾನೆ. **[ಸಧ್ರೀಚೀನೇನ]** ತಿಳುವಳಿಕೆ ಹೇಳುವವನಿಂದ **[ಮನಸಾ]** ಅಂತಃಕರಣಪೂರ್ವಕ **[ಅವಿವೇನನ್]** ಇಚ್ಛಾರಹಿತನಾಗಿ **[ಸುನೋತಿ]** ಸಂಪತ್ತನ್ನು ಗಳಿಸುತ್ತಾನೆ. **[ಸಮತ್ಸು]** ಸಂಗ್ರಾಮಗಳಲ್ಲಿ **[ಸಖಾಯಂ]** ಮೈತ್ರಿಯನ್ನು **[ಕೃಣುತೇ]** ಮಾಡುತ್ತಾನೆ. **[ತಂ]** ಅವನನ್ನು **[ಇತ್]** ರಾಜ ಅಥವಾ ಪ್ರಧಾನಿಯನ್ನಾಗಿ ಮಾಡಿರಿ.

**ಭಾವಾರ್ಥ:-** ರಾಜನೇ! ಮನುಷ್ಯರು ತನ್ನ ರಾಜ್ಯದ ಭಕ್ತರು, ಧರ್ಮಕರ್ಮಗಳನ್ನು ಆಚರಿಸುವವರೂ ಸಂಪತ್ತು ಬಯಸುವವರೂ ಅದಕ್ಕಾಗಿ ಅತಿ ಆಸೆ ಮಾಡದವರೂ ಯುದ್ಧಾದಿಗಳಲ್ಲಿ ಪರಸ್ಪರರೊಂದಿಗೆ ಸ್ನೇಹ ಮಾಡಿಕೊಳ್ಳುವವರೂ ಯಾರೋ ಅವರೇ ನಿಮ್ಮೆಲ್ಲರ ರಾಜ್ಯ ಶಾಸನ ಮಾಡಲು ಅರ್ಹರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯ ಇಂದ್ರಾಯ ಸುನವತ್ ಸೋಮಮದ್ಯ ಪಚಾತ್ ಪಕ್ತೀರುತ ಭೃಜ್ಜಾತಿ ಧಾನಾಃ ।**
**ಪ್ರತಿ ಮನಾಯೋರುಚಥಾನಿ ಹರ್ಯನ್ ತಸ್ಮಿನ್ ದಧದ್ವೃಷಣಂ ಶುಷ್ಮಮಿಂದ್ರಃ ॥೭॥**

**ಪದಾರ್ಥ:-** **[ಇಂದ್ರಃ]** ರಾಜನು **[ಅದ್ಯ]** ಈ ದಿನ **[ಇಂದ್ರಾಯ]** ಸುಖ ಸಾಧನಗಳನ್ನು ಪಡೆದವನಿಗೆ **[ಸೋಮಂ]** ಸಂಪತ್ತನ್ನು **[ಸುನವತ್]** ಉತ್ಪಾದಿಸಲಿ. **[ಪಕ್ತಿಃ]** ಪಾಕವನ್ನು **[ಪಚತ್]** ಬೇಯಿಸಲಿ. **[ಉತ್]** ಮತ್ತು **[ದಾನಾಃ]** ಯವಧಾನ್ಯವನ್ನು **[ಭೃಜ್ಜಾತಿ]** ಭೋಜನ ಮಾಡಲಿ. **[ಮನಾಯೋಃ]** ಪ್ರಶಂಸಾರ್ಹ ಇಚ್ಛೆ ಇರುವವನನ್ನು **[ಉಚಥಾನಿ]** ರುಚಿಕಾರಕನ **[ಹರ್ಯನ್]** ಬಯಸುವವನಾಗಿ **[ತಸ್ಮಿನ್]** ಅದರಲ್ಲಿ **[ವೃಷಣಂ]** ಬಲಿಷ್ಠನನ್ನು **[ಶುಷ್ಮಂ]** ಅತಿಬಲಿಷ್ಠ ಜನವನ್ನು **[ಪ್ರತಿ, ದಧತ್]** ಧಾರಣ ಮಾಡಬೇಕು.

**ಭಾವಾರ್ಥ:-** ರಾಜ ಪುರುಷರು ರಾಜ್ಯಕ್ಕಾಗಿ ಐಶ್ವರ್ಯವನ್ನೂ ಸೇನೆಗಾಗಿ, ಶಕ್ತಿಗಾಗಿ ಭೋಜನಾದಿ ಸಾಮಗ್ರಿಗಳನ್ನು ಪಡೆದು ಎಲ್ಲರೊಂದಿಗೆ ಪ್ರೀತಿ ಪೂರ್ವಕ ಸುಖಪಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದಾ ಸಮರ್ಯಂ ವ್ಯಚೇದೃಘಾವಾ ದೀರ್ಘಂ ಯದಾಜಿಮಭ್ಯಖ್ಯದರ್ಯಃ ।**
**ಅಚಿಕ್ರದದ್ವೃಷಣಂ ಪತ್ನ್ಯಚ್ಛಾ ದುರೋಣ ಆ ನಿಶಿತಂ ಸೋಮಸುದ್ಭಿಃ ॥೮॥**

**ಪದಾರ್ಥ:-** **[ಯದಾ]** ಯಾವಾಗ **[ಅರ್ಯಃ]** ಈಶ್ವರನು/ರಾಜನು **[ಸಮರ್ಯಂ]** ಸಂಗ್ರಾಮವನ್ನು **[ವಿ ಅಚೇತ್]** ಪ್ರೇರಣೆ ಮಾಡುವನೋ **[ಯತ್]** ಯಾವನು **[ಋಘಾವಾ]** ಶತ್ರುನಾಶಕನು **[ದೀರ್ಘಂ]** ಬಹುಕಾಲದವರೆಗೆ **[ಆಜಿಂ]** ಶಸ್ತ್ರಾಸ್ತ್ರವನ್ನು ಪ್ರಯೋಗಿಸುವನು. **[ಅಭಿ ಖ್ಯಾತ್]** ನಡೆಸುತ್ತಲೇ ಇರುವನು. **[ವೃಷಣಂ]** ಶಕ್ತಿಯನ್ನು ಕುರಿತು **[ಅಚಿಕ್ರದತ್]** ಅರಚುವನೋ, ಆಗ **[ದುರೋಣೇ]** ಮನೆಯಲ್ಲಿ **[ಪತ್ನೀ]** ಸ್ತ್ರೀ ಸದೃಶ **[ಸೋಮಸುದ್ಭಿಃ]** ಓಷಧಿರಸವನ್ನು ತಯಾರಿಸುವವರಿಂದ **[ಆ, ನಿಶಿತಂ]** ಅತ್ಯಂತ ತೀಕ್ಷ್ಣ **[ಅಚ್ಛಾ]** ಉತ್ತಮ ಶಬ್ಧಮಾಡಲಾಗುತ್ತದೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪತಿವ್ರತೆಯು ಸಮಗ್ರ ಔಷಧಿಗಳನ್ನು ತಯಾರಿಸಿ ಅದರ ರಕ್ಷಣೆ ಮಾಡಿ ಉನ್ನತಿ ಪಡಿಸಿ ಪತಿ, ಆದಿ ಜನರನ್ನು ಸಂತೋಷಪಡಿಸುವಳು. ಹಾಗೆಯೇ ವಿದ್ಯಾ-ವಿನಯ ಸಂಪನ್ನ ರಾಜನು ಪ್ರಜೆಗಳ ರಕ್ಷಣೆ ಮಾಡಿ ಸಂಪತ್ತಿನ ವೃದ್ಧಿಮಾಡುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭೂಯಸಾ ವಸ್ನಮಚರತ್ ಕನೀಯೋಽವಿಕ್ರೀತೋ ಅಕಾನಿಷಂ ಪುನರ್ಯನ್ ।**
**ಸ ಭೂಯಸಾ ಕನೀಯೋ ನಾರೀರೇಚೀ-ದ್ದೀನಾ ದಕ್ಷಾ ವಿ ದುಹಂತಿ ಪ್ರ ವಾಣಮ್ ॥೯॥**

**ಪದಾರ್ಥ:-** **[ಅವಿಕ್ರಿತಃ]** ಮಾರಾಟ ಮಾಡದ **[ಭೂಯಸಾ]** ಬಹುಪ್ರಕಾರದಿಂದ **[ಕನೀಯಃ]** ಅಲ್ಪವಾದ **[ವಸ್ನಂ]** ಮುಗ್ಗಟ್ಟಿನಲ್ಲಿ ಹಾಸುವಂತಹ **[ಅಚರತ್]** ಆಚರಣೆ ಮಾಡುವನು. **[ಸಃ]** ಅವನು **[ಪುನಃ]** ಮತ್ತೆ **[ಯನ್]** ಮುನ್ನಡೆಯುತ್ತ **[ಭೂಯಸಾ]** ಬಹುಭಾವದಿಂದ **[ಕನೀಯಃ]** ಅತ್ಯಲ್ಪ ಕರ್ಮವನ್ನು **[ನ]** **[ಅರೀರೇಚೀತ್]** ಬರಿದಾಗಿ ಮಾಡಲಾರನು. **[ದೀನಾಃ]** ಕ್ಷೀಣ **[ದಕ್ಷಾಃ]** ಚತುರರು **[ವಾರಣಂ]** ನುಡಿಯನ್ನು **[ವಿ, ಪ್ರ, ದುಹಂತಿ]** ಉತ್ತಮ ರೀತಿಯಿಂದ ಪೂರ್ಣಗೊಳಿಸುವರು. **[ಅಕಾನಿಷಂ]** ಅದನ್ನು ಪ್ರಸಿದ್ಧಗೊಳಿಸುವೆನು.

**ಭಾವಾರ್ಥ:-** ಮನುಷ್ಯರು ಬಹುವಿಧ ವ್ಯಾಪಾರ ಮಾಡುವವರು ಅಭಿಮಾನರಹಿತ ಬುದ್ಧಿವಂತರಾಗಿ ವಿದ್ಯಾಪೂರ್ಣ ನುಡಿಗಳನ್ನು ನುಡಿದರೆ ಅವರು ಅಲ್ಲಿ ಜನರ ಪಾಲನೆ ಮಾಡಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕ ಇಮಂ ದಶಭಿರ್ಮಮೇ-ಂದ್ರಂ ಕ್ರೀಣಾತಿ ಧೇನುಭಿಃ ।**
**ಯದಾ ವೃತ್ರಾಣಿ ಜಂಘನದಥೈನಂ ಮೇ ಪುನರ್ದದತ್ ॥೧೦॥**

**ಪದಾರ್ಥ:-** **[ಕಃ]** ಯಾವನು **[ದಶಭಿಃ]** ಹತ್ತು ಬೆರಳುಗಳಿಂದ **[ಧೇನುಭಿಃ]** ದೋಹನ ಮಾಡುವ ಹಸುವಿನಂತೆ ನುಡಿಗಟ್ಟುಗಳನ್ನು **[ಮಮ]** ನನ್ನ **[ಇಮಂ]** **[ಇಂದ್ರಂ]** ಈ ಸಂಪತ್ತನ್ನು **[ಕ್ರೀಣಾತಿ]** ಕೊಂಡುಕೊಳ್ಳುವನು. **[ಯದಾ]** ಯಾವಾಗ **[ವೃತ್ರಾಣಿ]** ಧನವನ್ನು **[ಜಂಘನತ್]** ಪಡೆದುಕೊಳ್ಳುವನೋ **[ಅಥ]** ಅನಂತರ **[ಏನಂ]** ಇದನ್ನು **[ಮೇ]** ನನಗಾಗಿ **[ಪುನಃ]** ಮತ್ತೆ **[ದದತ್]** ಕೊಡುವನೋ ಆಗಲೇ ಸಂಪತ್ತು ವೃದ್ಧಿಯಾಗುವುದು.

**ಭಾವಾರ್ಥ:-** ಯಾರು ಸಂಪತ್ತನ್ನಭಿವೃದ್ಧಿಗೊಳಿಸುವರು ಎಂಬ ಪ್ರಶ್ನೆಗುತ್ತರ ಯಾರು ಎಲ್ಲಾ ರೀತಿಯಿಂದ ಪುರುಷಾರ್ಥ ಸಾಧಕ ಸುಶಿಕ್ಷಿತವಾಣಿಯಿಂದ ವ್ಯವಹರಿಸುವರೋ ಅವರು. ಏಕೆಂದರೆ ಸಂಪತ್ತು ಪಡೆದವರೇ ಬೇರೆಯವರಿಗೂ ಕೊಡಲು ಸಮರ್ಥರು.

ವಿದ್ಯೆಯ ಪ್ರಶಂಸೆಯನ್ನು ಇಲ್ಲಿ ಮಾಡಲಾಗುತ್ತದೆ.

**ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ (ಓ) ೩ ನ ಪೀಪೇಃ ।**
**ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೧೦॥**

**ಪದಾರ್ಥ:-** [**ಹರಿವಃ**] ಶ್ರೇಷ್ಠ ವಿದ್ಯಾರ್ಥಿಗಳೇ! [**ಇಂದ್ರ**] ಯಜ್ಞೈಶ್ವರ್ಯ ಸಂಪನ್ನನೇ! [**ಸ್ತುತಃ**] ಯಾವ ಕಾರಣದಿಂದ ನೀವು ಪ್ರಶಂಸಿತರಾಗಿರುವಿರೋ [**ಜರಿತ್ರೇ**] ವಿದ್ಯಾವಂತರಿಗೆ [**ಇಷಂ**] ಅನ್ನಕೊಟ್ಟು [**ನದ್ಯಃ**] [**ನ**] ನದಿಗಳಿಗೆ ಸದೃಶ [**ನು**] ವೇಗವಾಗಿ [**ಪೀಪೇಃ**] ವೃದ್ಧಿ ಪಡಿಸುವಿರೋ, ಆ ಕಾರಣದಿಂದ [**ಗೃಣಾನಃ**] ನಾವು ನಿಮ್ಮ ಪ್ರಶಂಸೆ ಮಾಡುವವರಾಗಿ [**ನು**] ನಿಶ್ಚಯವಾಗಿಯೂ [**ಅಕಾರಿ**] ಮಾಡಲಾದ [**ತೇ**] ನಿನಗೆ [**ನವ್ಯಂ**] ಹೊಸ - ಹೊಸ [**ಬ್ರಹ್ಮ**] ಧನಕೊಡಲಾಗಿದೆಯೋ ಅದರಿಂದ [**ರಥ್ಯಃ**] ರಥಯುಕ್ತನಾಗಿ [**ಸದಾಸಾಃ**] ಸೇವಕರೊಂದಿಗಿರುವ ನಾವು [**ಧಿಯಾ**] ಬುದ್ಧಿವಂತಿಕೆಯಿಂದ [**ಸ್ಯಾಮ**] ನಿನ್ನ ಮಿತ್ರರಾಗುವೆವು.

**ಭಾವಾರ್ಥ:-** ವಿದ್ಯಾವಂತರೇ! ಯಾವ ಕಾರಣದಿಂದ ನೀವು ಎಲ್ಲರಿಗೂ ವಿದ್ಯಾದಾನ ಮಾಡುವಿರೋ ಆದ್ದರಿಂದ ನಿಮ್ಮೊಂದಿಗೆ ಸ್ನೇಹ ಭಾವ ಮಾಡಿಕೊಂಡು ನಿಮಗೆ ಬಹುಧನ ಅನ್ನಾದಿಗಳನ್ನು ಕೊಟ್ಟು ಗೌರವಿಸುತ್ತೇವೆ.

ಈ ಸೂಕ್ತದಲ್ಲಿ ಬ್ರಹ್ಮಚರ್ಯ, ಪುತ್ರ ಪ್ರಶಂಸೆ, ಅಧರ್ಮತ್ಯಾಗ, ಉತ್ತಮ ಕರ್ಮ, ಬುದ್ಧಿ, ಐಶ್ವರ್ಯಾಭಿವೃದ್ಧಿ, ನಿಯತಾಹಾರ ವಿಹಾರಾದಿ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಇಪ್ಪತ್ತ ನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೨೫

ಮಂತ್ರಸಂಖ್ಯೆ ೮ । ವಾಮದೇವ ಋಷಿಃ । ಇಂದ್ರೋ ದೇವತಾ । ೧ ನಿಚೃತ್ಪಂಕ್ತಿಃ, ೨, ೮ ಸ್ವರಾಟ್ಪಂಕ್ತಿಃ, ೪, ೬ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೩, ೪, ೭ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ವಿದ್ವಾಂಸರ ವಿಷಯವನ್ನು ಹೇಳಲಾಗುತ್ತದೆ.

**ಕೋ ಅದ್ಯ ನರ್ಯೋ ದೇವಕಾಮ ಉಶನ್ನಿಂದ್ರಸ್ಯ ಸಖ್ಯಂ ಜುಜೋಷ ।**
**ಕೋ ವಾ ಮಹೇಽವಸೇ ಪಾರ್ಯಾಯ ಸಮಿದ್ಧೇ ಅಗ್ನೌ ಸುತಸೋಮ ಈಟ್ಟೇ ॥೧॥**

**ಪದಾರ್ಥ:-** [**ಅಸ್ಯ**] ಈಗ [**ಕಃ**] ಯಾರು [**ದೇವಕಾಮಃ**] ವಿದ್ಯಾವಂತರನ್ನು ಬಯಸುವ [**ಇಂದ್ರಸ್ಯ**] ಐಶ್ವರ್ಯಸಂಪನ್ನನ [**ಸಖ್ಯಂ**] ಮಿತ್ರತ್ವದ [**ಉಶನ್**] ಬಯಸುತ್ತ [**ನರ್ಯಃ**] ಶ್ರೇಷ್ಠ ಮನುಷ್ಯನು [**ಜುಜೋಷ**] ಸೇವಿಸುವನು [**ಕಃ**] [**ವಾ**] ಯಾವನು ತಾನೇ [**ಮಹೇ**] ಮಹತ್ತರ [**ಪಾರ್ಯಾಯ**] ದುಃಖವನ್ನು ಪಾರು ಮಾಡುವ [**ಅವಸೇ**] ರಕ್ಷಣೆಗೆ [**ಸಮಿದ್ಧೇ**] ಪ್ರಜ್ವಲಿಸುವ [**ಅಗ್ನೌ**] ಅಗ್ನಿಯಲ್ಲಿ [**ಸುತಸೋಮಃ**] ಸೋಮರಸವನ್ನು [**ಈಟ್ಟೇ**] ಸಂಗತಿ ಮಾಡುವನು.

**ಭಾವಾರ್ಥ:-** ಯಾವನು ವಿದ್ಯೆ ಮತ್ತು ಗೆಳೆತನವನ್ನು ಬಯಸುತ್ತ ಸಮಗ್ರ ಪ್ರಪಂಚಕ್ಕೆ ಒಳಿತನ್ನು ಆಚರಿಸಲು ಬಯಸುವನೋ ಎಲ್ಲರ ರಕ್ಷಣೆ ಮಾಡುವನೋ ಅಗ್ನಿಯಲ್ಲಿ ಹೋಮ ಮಾಡಿ ಪ್ರಜೆಗಳಿಗೆ ಹಿತವನ್ನು ಮಾಡುವನೋ ಜಗತ್ತಿನ ಹಿತವನ್ನು ಇಚ್ಛಿಸುವನೋ ಅವನೆಂಬುದು ಉತ್ತರ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೋ ನಾನಾಮ ವಚಸಾ ಸೋಮ್ಯಾಯ ಮನಾಯುರ್ವಾ ಭವತಿ ವಸ್ತ ಉಸ್ರಾಃ ।**
**ಕ ಇಂದ್ರಸ್ಯ ಯುಜ್ಯಂ ಕಃ ಸಖಿತ್ವಂ ಕೋ ಭ್ರಾತ್ರಂ ವಷ್ಟಿ ಕವಯೇ ಕ ಊತೀ ॥೨॥**

**ಪದಾರ್ಥ:-** **[ಕಃ]** ಯಾವನು **[ವಚಸಾ]** ವಚನದಿಂದ **[ಸೋಮ್ಯಾಯ]** ಸೋಮರಸ ಸಿದ್ಧಿಗೊಳಿಸುವವನಿಗೆ **[ನಾನಾಮ]** ನಮ್ರನಾಗುವನು. **[ಕಃ]** **[ವಾ]** ಯಾವನು ತಾನೆ **[ಮನಾಯುಃ]** ಜ್ಞಾನವನ್ನು ಬಯಸುವವನು **[ಭವತಿ]** ಆಗುವನು. **[ಕಃ]** ಯಾವನು **[ಉಸ್ರಃ]** ಕಿರಣಗಳಂತಿರುವ ಗುಣಗಳಿಂದ **[ವಸ್ತೇ]** ಇಚ್ಛಿಸುವನು. **[ಕಃ]** ಯಾವನು **[ಇಂದ್ರಸ್ಯ]** ಧನವಂತನ **[ಯುಜ್ಯಂ]** ಸಂಯೋಗ ಯೋಗ್ಯ **[ಸಖಿತ್ವಂ]** ಸ್ನೇಹತನವನ್ನು **[ಕಃ]** ಯಾವನು **[ಕವಯೇ]** ಬುದ್ಧಿವಂತನಿಗೆ **[ಊತೀ]** ರಕ್ಷಣಾದಿಗಳಿಂದ **[ಭ್ರಾತ್ರಂ]** ಭ್ರಾತೃಭಾವವನ್ನು **[ವಷ್ಟಿ]** ಬಯಸುವನು? ಉತ್ತರ ಹೇಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನಸ್ಸು ಕರ್ಮ, ವಚನಗಳಿಂದ ನಮ್ರವಾಗುತ್ತದೆ. ಕಿರಣಗಳಿಗೆ ಸಮನಾಗಿ ಬೆಳಕು ಬೀರುವಂತಹ ವ್ಯವಹಾರ ಮಾಡುತ್ತ ಜಗದೀಶ್ವರನ ಗೆಳೆತನ ಮಾಡುವವನು ಸಮಗ್ರ ಇಷ್ಟಾರ್ಥವನ್ನು ಪಡೆದುಕೊಳ್ಳುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೋ ದೇವಾನಾಮವೋ ಅದ್ಯಾ ವೃಣೀತೇ ಕ ಆದಿತ್ಯಾँ ಅದಿತಿಂ ಜ್ಯೋತಿರೀಟ್ಟೇ ।**
**ಕಸ್ಯಾಶ್ವಿನಾವಿಂದ್ರೋ ಅಗ್ನಿಃ ಸುತಸ್ಯಾ-ಂಶೋಃ ಪಿಬಂತಿ ಮನಸಾವಿವೇನಮ್ ॥೩॥**

**ಪದಾರ್ಥ:-** **[ಕಃ]** ಯಾವನು **[ಅದ್ಯ]** ಇಂದು **[ದೇವಾನಾಂ]** ವಿದ್ವಾಂಸರ **[ಅವಃ]** ರಕ್ಷಣಾದಿಗಳಿಗೆ **[ವೃಣೀತೇ]** ಸ್ವೀಕರಿಸುವನು. **[ಕಃ]** ಯಾವನು **[ಆದಿತ್ಯಾನ್]** ಮಾಸಗಳಂತಿರುವ ವಿದ್ವಾಂಸರನ್ನು **[ಅದಿತಿಂ]** ಭೂಮಿಯನ್ನು **[ಜ್ಯೋತಿಂ]** ಬೆಳಕನ್ನು **[ಈಟ್ಟೇ]** ಇಚ್ಛಿಸುವನು? **[ಕಸ್ಯ]** ಯಾವುದರ **[ಸುತಸ್ಯ]** ಓಷಧಿ ರಸದ **[ಮನಸಾ]** ವಿಜ್ಞಾನದಿಂದ **[ಅವಿವೇನಂ]** ದುರಾಸೆ ರಹಿತನಾಗಿ **[ಅಶ್ವಿನೌ]** ಭೂಮ್ಯಂತರಿಕ್ಷಗಳನ್ನು **[ಇಂದ್ರಃ]** ಸೂರ್ಯನು **[ಅಗ್ನಿಃ]** ಅಗ್ನಿಯು ರಸವನ್ನು **[ಪಿಬಂತಿ]** ಪಾನ ಮಾಡುವರು?

**ಭಾವಾರ್ಥ:-** ವಿದ್ವಾಂಸರ ಸಂಗ ಮಾಡಿದರೆ ಸಂಪೂರ್ಣ ಕಾಮನೆಗಳನ್ನು ಪಡೆಯಬಹುದು. ಬಯಸಬಾರದ ವಸ್ತುಗಳನ್ನು ಬಯಸದವರು ತಮ್ಮ ಮನದಾಸೆಯನ್ನು ಸಿದ್ಧಪಡಿಸಿಕೊಳ್ಳುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸ-ಜ್ಜ್ಯೋಕ್ ಪಶ್ಯಾತ್ ಸೂರ್ಯಮುಚ್ಚರಂತಮ್ ।**
**ಯ ಇಂದ್ರಾಯ ಸುನವಾಮೇತ್ಯಾಹ ನರೇ ನರ್ಯಾಯ ನೃತಮಾಯ ನೃಣಾಮ್ ॥೪॥**

**ಪದಾರ್ಥ:-** **[ಯಃ]** ಯಾವನು **[ಅಗ್ನಿಃ]** ಅಗ್ನಿಯಂತಿರುವುದ್ದು **[ಭಾರತಃ]** ಧಾರಣ ಮಾಡುವವನು **[ಶರ್ಮ]** ಮನೆಯಂತೆ ಸುಖವನ್ನು **[ಯಂಸತ್]** ಪಡೆಯುವನೋ ಅವನು **[ಉಚ್ಚರಂತಂ]** ಉನ್ನತಮಟ್ಟದಲ್ಲಿ ಸಂಚರಿಸುತ್ತ **[ಸೂರ್ಯಂ]** ಸೂರ್ಯಮಂಡಲವನ್ನು **[ಜ್ಯೋಕ್]** ನಿರಂತರ **[ಪಶ್ಯಾತ್]** ನೋಡುವನು. **[ತಸ್ಮೈ]** ಅವನಿಗೆ **[ನೃಣಾಂ]** ಉತ್ತಮಗುಣ ವಿದ್ಯಾವಂತ ಮನುಷ್ಯರಿಗೆ **[ನೃತಮಾಯ]** ಮುಂದಾಳುವಿಗೆ **[ನರೇ]** ನಾಯಕನಿಗೆ **[ನರ್ಯಾಯ]** ಮನುಷ್ಯನಿಗೆ **[ಇಂದ್ರಾಯ]** ಐಶ್ವರ್ಯವಂತನಿಗೆ **[ಇತಿ]** ಈ ರೀತಿ **[ಆಹ]** ಹೇಳುತ್ತಾನೆ. **[ಸುನವಾಮ]** ಅದನ್ನು ನಾವು ತಯಾರಿಸೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಮನೆಯಲ್ಲಿ ವಾಸಿಸುವ ರೀತಿಯಲ್ಲಿ ವಿದ್ಯೆಯಲ್ಲಿ ವಾಸ ಮಾಡುತ್ತಾನೋ ಬ್ರಹ್ಮಚರ್ಯಾಶ್ರಮದಲ್ಲಿ ಖಗೋಳಾದಿ ವಿದ್ಯೆಯನ್ನು ಪಡೆದುಕೊಂಡು ಮನುಷ್ಯರಿಗೆ ಹಿತವಾದುದನ್ನು ಉಪದೇಶ ಮಾಡುತ್ತಾನೋ, ಅವನೇ ಉತ್ತಮನು. ನೂರು ವರ್ಷ ಜೀವಿಸುವವನಾಗಿ ಎಲ್ಲಾ ಬಗೆಯ ಸುಖವನ್ನು ಪಡೆಯುತ್ತಾನೆ.

ಶತ್ರು ವಿಜಯವನ್ನು ಇಲ್ಲಿ ಪ್ರತಿಪಾದಿಸಲಾಗುತ್ತದೆ.

**ನ ತಂ ಜಿನಂತಿ ಬಹವೋ ನ ದಭ್ರಾ ಉರ್ವಸ್ಮಾ ಅದಿತಿಃ ಶರ್ಮ ಯಂಸತ್ । ಪ್ರಿಯಃ**
**ಸುಕೃತ್ ಪ್ರಿಯ ಇಂದ್ರೇ ಮನಾಯುಃ ಪ್ರಿಯಃ ಸುಪ್ರಾವೀಃ ಪ್ರಿಯೋ ಅಸ್ಯ ಸೋಮೀ ॥೫॥**

**ಪದಾರ್ಥ:-** **[ಇಂದ್ರೋ]** ಧನ ಸಂಪಾದಿಸಿದ ನಂತರ **[ಪ್ರಿಯಃ]** ಬೇರೆಯವರಿಗೆ ಪ್ರಸನ್ನಗೊಳಿಸಲು **[ಸುಕೃತ್]** ಉತ್ತಮ ಕೆಲಸ ಮಾಡಲು **[ಪ್ರಿಯಃ]** ಜನರನ್ನು ಪ್ರೀತಿಸಲು **[ಮನಾಯುಃ]** ಪ್ರಿಯರೊಂದಿಗೆ ಮನಃಪೂರ್ವಕ ಆಚರಿಸಲು **[ಪ್ರಿಯಃ]** ಧರ್ಮ-ಕರ್ಮಗಳಿಂದ ಆನಂದಿಸಲು **[ಸುಪ್ರಾವೀಃ]** ವಿದ್ಯೆಯಲ್ಲಿ ಪ್ರವೀಣನು. **[ಪ್ರಿಯಃ]** ವಿದ್ಯಾವಂತರಲ್ಲಿ ಶ್ರೇಷ್ಠನು **[ಅಸ್ಯ]** ಈ ಜಗತ್ತಿನ **[ಸೋಮೀ]** ಧನಸಂಪನ್ನನು **[ತಂ]** ಅವನನ್ನು **[ನ]** **[ಜಿನಂತಿ]** ಶತ್ರುಗಳು ಜಯಿಸಲಾರರು. **[ಬಹವಃ]** ಬಹಳಷ್ಟು **[ದಭ್ರಾ]** ನಾಶಗೊಳಿಸುವವರು **[ನ]** ನಾಶಗೊಳಿಸುವುದಿಲ್ಲ. **[ಅಸ್ಮೈ]** ಇವನಿಗೆ **[ಅದಿತಿಃ]** ಜನನಿಯು **[ಉರು]** ಬಹಳಷ್ಟು **[ಶರ್ಮ]** ಸುಖವನ್ನು **[ಯಂಸತ್]** ಕೊಡುವಳು.

**ಭಾವಾರ್ಥ:-** ಶತ್ರುರಹಿತರು ಪರಮೇಶ್ವರನೋಪಾಸಕರು ಮತ್ತು ಎಲ್ಲರನ್ನೂ ಪ್ರೀತಿಸುವವರಾಗುವರು. ಎಲ್ಲರನ್ನು ಪ್ರೀತಿಸಿ ಹಿತಸಾಧಿಸುವವನನ್ನು ಯಾರೂ ಜಯಿಸಲಾರರು. ತಾಯಿಯು ಶ್ರೇಷ್ಠ ಮನೆಯಲ್ಲಿದ್ದು ಮನುಷ್ಯರಿಗೆ ಪ್ರಿಯವಾದದ್ದನ್ನಾಚರಿಸುವಳೋ ಹಾಗೆ ಎಲ್ಲರನ್ನು ಸುಖಿಗಳನ್ನಾಗಿಸಿ ನಿರಂತರ ಆನಂದವನ್ನನುಭವಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸುಪ್ರಾವ್ಯಃ ಪ್ರಾಶುಷಾಳೇಷ ವೀರಃ ಸುಷ್ವೇಃ ಪಕ್ತಿಂ ಕೃಣುತೇ ಕೇವಲೇಂದ್ರಃ ।**
**ನಾಸುಷ್ವೇರಾಪಿರ್ನ ಸಖಾ ನ ಜಾಮಿ-ರ್ದುಪ್ರಾವ್ಯೋಽವಹಂತೇದವಾಚಃ ॥೬॥**

**ಪದಾರ್ಥ:-** **[ಸುಪ್ರಾವ್ಯಃ]** ರಕ್ಷಣೆಗೆ ಯೋಗ್ಯ **[ಪ್ರಾಶುಷಾಟ್]** ಶತ್ರುಸಹನ ಸಮರ್ಥ **[ಏಷಃ]** ಈ **[ವೀರಃ]** ಶೂರ **[ಇಂದ್ರಃ]** ಧನವಂತನು **[ಸುಷ್ವೇಃ]** ತಯಾರಾದ ಅನ್ನದ **[ಕೇವಲಾ]** ಕೇವಲ **[ಪಕ್ತಿಂ]** ಪಾಕವನ್ನು **[ಕೃಣುತೇ]** ಮಾಡುವನು. **[ಅಸುಷ್ವೇಃ]** ಉತ್ಪನ್ನವಾಗದ ಸಂಬಂಧ **[ಆಪಿಃ]** ಸರ್ವರಿಗೂ ಪ್ರಾಪ್ತವಾಗುವವನ **[ನ]** ಸದೃಶ **[ಸಖಾ]** **[ನ]** ಮಿತ್ರನಂತೆ **[ಜಾಮಿಃ]** ಬಂಧು **[ದುಃಪ್ರಾವ್ಯಃ]** ದುಃಖದಿಂದ ರಕ್ಷಣಾರ್ಹ **[ಅವಾಚಃ]** ದುರ್ವಚನ ನುಡಿಯುವವನ **[ಅವಹಂತಾ]** ದುಷ್ಕರ್ಮವನ್ನು ನಾಶಗೊಳಿಸುವವನು **[ಇತ್]** ವಿರೋಧವನ್ನು **[ನ]** ಮಾಡುವುದಿಲ್ಲ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜಪುರುಷರು ಸಂಸ್ಕಾರ ಸಂಪನ್ನ ಅನ್ನವನ್ನು ಭೋಗಿಸುವರೋ ಹಾಗೂ ಮಿತ್ರನಂತೆ ಬಂಧುವಿನಂತೆ ವರ್ತಿಸುವರೋ, ದುಷ್ಟರನ್ನು ನಾಶಗೊಳಿಸಿ ಬಡತನ ಮತ್ತು ನಿವಾರಿಸುವರೋ ಅವರು ಎಂದೂ ಪರಾಜಯ ಹೊಂದುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ರೇವತಾ ಪಣಿನಾ ಸಖ್ಯಮಿಂದ್ರೋ ಽಸುನ್ವತಾ ಸುತಪಾಃ ಸಂ ಗೃಣೀತೇ ।**
**ಆಸ್ಯ ವೇದಃ ಖಿದತಿ ಹಂತಿ ನಗ್ನಂ ವಿ ಸುಷ್ವಯೇ ಪಕ್ತಯೇ ಕೇವಲೋ ಭೂತ್ ॥೭॥**

**ಪದಾರ್ಥ:-** **[ಸುತಪಾಃ]** ಧರ್ಮಾತ್ಮನೂ ರಾಗದ್ವೇಷ ರಹಿತನೂ ಆದ **[ಇಂದ್ರಃ]** ರಾಜನು **[ದೇವತಾ]** ಧನಯುಕ್ತ **[ಪಣಿನಾ]** ವ್ಯವಹಾರೀ ವೈಶ್ಯನು **[ಅಸುನ್ವತಾ]** ಪುರುಷಾರ್ಥಿಯೊಂದಿಗೆ **[ಸಖ್ಯಂ]** ಮಿತ್ರತ್ವವನ್ನು **[ನ]** **[ಸಂಗೃಣೀತೇ]** ಮಾಡದೇ ಉಪದೇಶ ಮಾಡುವನು. **[ಕೇವಲಃ]** ಸಹಾಯರಹಿತನಾಗಿ **[ಸುಷ್ವಯೇ]** ಉತ್ಪಾದಕನಿಗೆ **[ಪಕ್ತಯೇ]** ಪಾಕಕರ್ತೃವಿಗೆ **[ಭೂತ್]** ಆಗುವನು. **[ನಗ್ನಂ]** ನಿರ್ಲಜ್ಜನನ್ನು **[ವಿ, ಹಂತಿ]** ನಾಶಗೊಳಿಸುತ್ತಾನೆ. **[ಅಸ್ಯ]** ಈ ರಾಜನ **[ವೇದಃ]** ದ್ರವ್ಯವು **[ಆ, ಖಿದತಿ]** ಎಂದೂ ನಾಶವಾಗುವುದಿಲ್ಲ.

**ಭಾವಾರ್ಥ:-** ರಾಜನು ಧನಾದಿ ಲೋಭದಿಂದ ಧನಿಕರನ್ನು ಪ್ರಸನ್ನಗೊಳಿಸಿ ಬಡವರ ಮೇಲೆ ಅಪ್ರಸನ್ನನಾಗುವುದಿಲ್ಲ. ದುಷ್ಟರನ್ನು ದಂಡಿಸಿ ಶ್ರೇಷ್ಠರನ್ನು ನಿರಂತರ ರಕ್ಷಿಸುವನು. ಅಂತಹ ರಾಜ್ಯವು ಎಂದೂ ನೋಡಸಿಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಂ ಪರೇಽವರೇ ಮಧ್ಯಮಾಸ ಇಂದ್ರಂ ಯಾಂತೋಽವಸಿತಾಸ ಇಂದ್ರಮ್ । ಇಂದ್ರಂ**
**ಕ್ಷಿಯಂತ ಉತ ಯುಧ್ಯಮಾನಾ ಇಂದ್ರಂ ನರೋ ವಾಜಯಂತೋ ಹವಂತೇ ॥೮॥**

**ಪದಾರ್ಥ:-** **[ಪರೇ]** ಶ್ರೇಷ್ಠ **[ಅವರೇ]** ನಿಕೃಷ್ಟ ಮತ್ತು **[ಮಧ್ಯಮಾಸಃ]** ಪಕ್ಷಪಾತ ರಹಿತ **[ಇಂದ್ರಂ]** ಧನವಂತನನ್ನು **[ಯಾಂತಃ]** ಪಡೆಯುತ್ತ **[ಇಂದ್ರಂ]** ಸುಖಧಾರಕನನ್ನು **[ಅವಸಿತಾಸಃ]** ನಿಶ್ಚಯಗೊಳಿಸಿದ **[ಇಂದ್ರಂ]** ದುಷ್ಟನ ನಾಶ ಮಾಡುವವನನ್ನು **[ಕ್ಷಿಯಂತಃ]** ನೆಲೆಗೊಳಿಸುತ್ತ **[ಇಂದ್ರಂ]** ಸುಖದಾಯಕನನ್ನು **[ವಾಜಯಂತಃ]** ರಕ್ಷಿಸುತ್ತಾನೆ. **[ಉತ್]** ಮತ್ತು **[ಯುಧ್ಯಮಾನಾಃ]** ಯುದ್ಧ ಮಾಡುತ್ತ **[ನರಃ]** ನಾಯಕನು **[ಇಂದ್ರಂ]** ದುಷ್ಟನಾಶಕನನ್ನು **[ಹವಂತೇ]** ಸ್ತುತಿ ಮಾಡುವರು.

**ಭಾವಾರ್ಥ:-** ಯಾರ ರಾಜ್ಯದಲ್ಲಿ ಶ್ರೇಷ್ಠ-ಮಧ್ಯಮ-ಕನಿಷ್ಠರು ಇರುವರೋ, ಧರ್ಮಾತ್ಮರಾದ ವಿದ್ವಾಂಸರು ಅವಿದ್ಯಾವಂತರೂ ತನ್ನ ರಾಜ್ಯದಲ್ಲಿ ಪ್ರಿಯರೋ ಶತ್ರುನಾಶಕರು, ಧನವಂತರು, ರಾಜನ ಭಕ್ತರೋ ಅಲ್ಲಿ ರಾಜ್ಯವು ಸದಾ ವೃದ್ಧಿಗೊಳ್ಳುತ್ತದೆ ಎಂಬುದನ್ನು ತಿಳಿದುಕೊಳ್ಳಬೇಕು.

ಈ ಸೂಕ್ತದಲ್ಲಿ ಪ್ರಶ್ನೋತ್ತರ ಮಾಧ್ಯಮದಿಂದ ನಿಕೃಷ್ಟ ಮನುಷ್ಯರ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಇಪ್ಪತ್ತೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೨೬

ಮಂತ್ರಸಂಖ್ಯೆ ೭ । ವಾಮದೇವ ಋಷಿಃ । ಇಂದ್ರೋ ದೇವತಾ । ೧ ಪಂಕ್ತಿಃ, ೨ ಭುರಿಕ್ಪಂಕ್ತಿಃ, ೩, ೭ ಸ್ವರಾಟ್ಪಂಕ್ತಿಃ । ಪಂಚಮಃ ಸ್ವರಃ । ೪ ನಿಚೃತ್ತ್ರಿಷ್ಟುಪ್, ೫ ವಿರಾಟ್ತ್ರಿಷ್ಟುಪ್, ೬ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈಶ್ವರ ವರ್ಣನೆಯನ್ನು ಇಲ್ಲಿ ಮಾಡಲಾಗಿದೆ.

**ಅಹಂ ಮನುರಭವಂ ಸೂರ್ಯಶ್ಚಾ-ಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।**

**ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ॥೧॥**

**ಪದಾರ್ಥ:-** **[ಅಹಂ]** ನಾನು ಸೃಷ್ಟಿಕರ್ತನು **[ಮನುಃ]** ವಿಚಾರ ಮಾಡಲು ಮತ್ತು ಸಮಗ್ರ ವಿದ್ಯೆಯನ್ನು ತಿಳಿದವನು **[ಸೂರ್ಯಃ ಚ]** ಸೂರ್ಯನಂತೆ ಎಲ್ಲವನ್ನೂ ಪ್ರಕಾಶಗೊಳಿಸುವವನು **[ಅಭವಂ]** ಆಗಿರುವೆನು. **[ಅಹಂ]** ನಾನು **[ಕಕ್ಷೀವಾನ್]** ಸಮಗ್ರ ಸೃಷ್ಟಿಯ ರಕ್ಷಕನು, **[ಋಷಿಃ]** ಮಂತ್ರ ದ್ರಷ್ಟಾರರಂತೆ **[ವಿಪ್ರಃ]** ವಿದ್ಯಾವಂತರಂತೆ ಎಲ್ಲಾ ಪದಾರ್ಥಗಳನ್ನು ತಿಳಿದವನು **[ಅಸ್ಮಿ]** ಆಗಿರುವೆನು. **[ಅಹಂ]** ನಾನು **[ಆರ್ಜುನೇಯಂ]** ಸರಳ ಸ್ವಭಾವದವನು **[ಕುತ್ಸಂ]** ವಜ್ರವನ್ನು **[ನಿ, ಋಂಜೇ]** ಸಿದ್ಧಪಡಿಸುವೆನು. **[ಅಹಂ]** ನಾನು **[ಉಶನಾ]** ಹಿತ ಬಯಸುವ **[ಕವಿಃ]** ವಿದ್ಯಾವಂತನು **[ಮಾ]** ನನ್ನನ್ನು **[ಪಶ್ಯತ]** ನೋಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಜಗದೀಶ್ವರನು ವಿಚಾರ ಮಾಡುವವರಿಗೂ ವಿಚಾರ ಮಾಡುವವನು, ಬೆಳಗಿಸುವವರನ್ನೂ, ಬೆಳಗಿಸುವವನು ವಿದ್ವಾಂಸರಿಗೂ ವಿದ್ವಾಂಸನು, ಅಖಂಡಿತನೂ, ಸರ್ವಜ್ಞನೂ, ಸರ್ವೋಪಕಾರಿಯೂ ಆಗಿರುವನು. ಅವನನ್ನು ವಿದ್ಯೆ ಧರ್ಮಾಚರಣೆ ಮತ್ತು ಯೋಗಾಭ್ಯಾಸದಿಂದ ತಿಳಿಯಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಹಂ ಭೂಮಿಮದದಾಮಾರ್ಯಾಯಾ-ಹಂ ವೃಷ್ಟಿಂ ದಾಶುಷೇ ಮರ್ತ್ಯಾಯ ।**

**ಅಹಮಪೋ ಅನಯಂ ವಾವಶಾನಾ ಮಮ ದೇವಾಸೋ ಅನು ಕೇತಮಾಯನ್ ॥೨॥**

**ಪದಾರ್ಥ:-** **[ಅಹಂ]** ನಾನು **[ಆರ್ಯಾಯ]** ಧಾರ್ಮಿಕ ಗುಣಕರ್ಮ ಸ್ವಭಾವದವನಿಗೆ **[ಭೂಮಿಂ]** ಭೂಮಿಯನ್ನು **[ಅದದಾಂ]** ಕೊಡುವೆನು. **[ಅಹಂ]** ನಾನು **[ದಾಶುಷೇ]** ದಾನಶೀಲನಾದ **[ಮರ್ತ್ಯಾಯ]** ಮನುಷ್ಯನಿಗಾಗಿ **[ವೃಷ್ಟಿಂ]** ಮಳೆಯನ್ನು **[ಅನಯಂ]** ಪ್ರಾಪ್ತಿಗೊಳಿಸುವೆನು. **[ಅಹಂ]** ನಾನು **[ಅಪಃ]** ನೀರನ್ನೂ ಗಾಳಿಯನ್ನೂ ಪ್ರಾಪ್ತಿಗೊಳಿಸುವೆ. **[ಮಮ]** ನನ್ನನ್ನು **[ವಾವಶಾನಾಃ]** ಬಯಸುವ **[ದೇವಾಸಃ]** ವಿದ್ಯಾವಂತರು **[ಕೇತಂ]** ತಿಳಿದುಕೊಳ್ಳಲು **[ಅನು, ಆಯನ್]** ಅನುಕೂಲ ಪ್ರಯತ್ನಿಸುವರು.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಎಲ್ಲರಿಗೂ ನ್ಯಾಯ ಮಾಡುವ ಸ್ವಭಾವದವನು, ಭೂಮಿಯನ್ನು ಕೊಡುವವನು, ಎಲ್ಲರ ಸುಖಕ್ಕಾಗಿ ಮಳೆಗರೆಯುವವನು. ಎಲ್ಲರ ಬದುಕುವಿಕೆಗೆ ಗಾಳಿಗೆ ಪ್ರೇರಣೆ ನೀಡುವವನು. ಅವನ ಉಪದೇಶದಿಂದಲೇ ಎಲ್ಲರೂ ವಿದ್ಯಾವಂತರಾಗುವರು. ಎಲ್ಲರೂ ಅವನನ್ನೇ ಭಜಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಹಂ ಪುರೋ ಮಂದಸಾನೋ ವ್ಯೈರಂ ನವ ಸಾಕಂ ನವತೀಃ ಶಂಬರಸ್ಯ ।**

**ಶತತಮಂ ವೇಶ್ಯಂ ಸರ್ವತಾತಾ ದಿವೋದಾಸಮತಿಥಿಗ್ವಂ ಯದಾವಮ್ ॥೩॥**

**ಪದಾರ್ಥ:-** **[ಮಂದಸಾನಃ]** ಆನಂದ ಸ್ವರೂಪನು ಹಾಗೂ ಆನಂದದಾಯಕನು **[ಅಹಂ]** ನಾನೇ ಆಗಿರುವೆನು. **[ಪುರಃ]** ಮೊದಲು **[ಶಂಬರಸ್ಯ]** ಮೇಘದ **[ಶತತಮಂ]** ಅಸಂಖ್ಯಾತ **[ವೇಶ್ಯಂ]** ಉತ್ತಮ ವೇಷದಲ್ಲಿ ಅಂದರೆ ಪ್ರವೇಶ ಮಾಡುವುದರಲ್ಲಿ **[ನವ, ನವತೀಃ]** ತೊಂಬತ್ತೊಂಬತ್ತು ಪದಾರ್ಥಗಳನ್ನು **[ಸಾಕಂ]** ಜೊತೆಗೆ **[ವಿ, ಐರಂ]** ಪ್ರೇರಣೆ ಮಾಡುವೆನು. **[ಸರ್ವತಾತಾ]** ಎಲ್ಲರಲ್ಲೂ ಮಿಲನಯೋಗ್ಯ ಜಗತ್ತಿನಲ್ಲಿ **[ಯತ್]** ಯಾವ **[ದಿವೋದಾಸಂ]** ವಿಜ್ಞಾನದ ಬೆಳಕನ್ನು ಕೊಡುವವನು **[ಅತಿಥಿಗ್ವಂ]** ಅತಿಥಿಗಳನ್ನು ಪ್ರಾಪ್ತಿಗೊಳಿಸುವವನ **[ಆವಂ]** ರಕ್ಷಣೆ ಮಾಡುವವನು.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಜಗತ್ತಿನ ಸೃಷ್ಟಿಯ ಮೊದಲು ಚೇತನ ರೂಪಿಯಾಗಿರುವನೋ ಸಮಗ್ರ ಬ್ರಹ್ಮಾಂಡವನ್ನು ಸೃಷ್ಟಿಸಿ ಎಲ್ಲರೊಂದಿಗೆ ಸಂಬಂಧವನ್ನು ಪಡೆದು ಎಲ್ಲರ ಹಿತವನ್ನು ಮಾಡುವವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಸು ಷ ವಿಭ್ಯೋ ಮರುತೋ ವಿರಸ್ತು ಪ್ರ ಶ್ಯೇನಃ ಶ್ಯೇನೇಭ್ಯ ಆಶುಪತ್ವಾ ।**
**ಅಚಕ್ರಯಾ ಯತ್ ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಮ್ ॥೪॥**

**ಪದಾರ್ಥ:-** **[ಶ್ಯೇನಃ]** ಶ್ಯೇನವೆಂಬ/ ವಾಜವೆಂಬ **[ವಿಃ]** ಪಕ್ಷಿಯು **[ಶ್ಯೇನೇಭ್ಯಃ]** ವಾಜಗಳೆಂಬ **[ವಿಭ್ಯಃ]** ಪಕ್ಷಿಗಳಿಂದ **[ಅಚಕ್ರಯಾ]** ಅವಿದ್ಯಮಾನ ಚಕ್ರಾಕಾರ ಗತಿಯೊಂದಿಗೆ **[ಆಶುಪತ್ವಾ]** ಶೀಘ್ರ ಪತನವಾಗಿ ವೇಗವನ್ನು **[ಭರತ್]** ಧಾರಣ ಮಾಡುವೆನು. **[ಮರುತಃ]** ಮನುಷ್ಯರ ಸೇನೆಗೆ ವೇಗಾದಿ ಗುಣಗಳನ್ನು **[ಪ್ರ]** ವಿಶೇಷ ರೀತಿಯಲ್ಲಿ ಧಾರಣೆಗೊಳಿಸುವೆನು. **[ಯತ್]** ಯಾವ **[ಸುಪರ್ಣಃ]** ಪತನ ಗುಣವಿರುವ **[ಮನವೇ]** ಮನುಷ್ಯನಿಗೆ **[ಸ್ವಧಯಾ]** ಅನ್ನಾದಿಗಳಿಂದ **[ದೇವಜುಷ್ಟಂ]** ವಿದ್ವಾಂಸರಿಂದ ಸೇವಿತ **[ಹವ್ಯಂ]** ಗ್ರಹಣಯೋಗ್ಯ ವಸ್ತುವನ್ನು **[ಪ್ರ]** **[ಸು]** ಉತ ಷ್ಟವಾಗಿ ಸೃಷ್ಟಿ ಮಾಡುವೆನು. **[ಸಃ]** ಅಂತಹವನು **[ಅಸ್ತು]** ಎಲ್ಲೆಲ್ಲಿಯೂ ಇರಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಈ ಸೃಷ್ಟಿಯಲ್ಲಿ ಅಂತರಿಕ್ಷದಲ್ಲಿ ಹೇಗೆ ಪಕ್ಷಿಯು ಹೋಗಿ ಬರುತ್ತದೆಯೋ ಅದೇ ರೀತಿ ಲೋಕ ಲೋಕಾಂತರದಲ್ಲಿ ಸಂಚರಿಸುತ್ತ ಸೃಷ್ಟಿವಿದ್ಯೆಯನ್ನು ತಿಳಿದುಕೊಳ್ಳುವ ಮನುಷ್ಯನು ಎಲ್ಲರಿಗೂ ಸುಖಕಾರಕನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭರದ್ಯದಿ ವಿರತೋ ವೇವಿಜಾನಃ ಪಥೋರುಣಾ ಮನೋಜವಾ ಅಸರ್ಜಿ।**
**ತೂಯಂ ಯಯೌ ಮಧುನಾ ಸೋಮ್ಯೇನೋ-ತ ಶ್ರವೋ ವಿವಿದೇ ಶ್ಯೇನೋ ಅತ್ರ ॥೫॥**

**ಪದಾರ್ಥ:-** **[ಯದಿ]** ಒಂದುವೇಳೆ **[ಅತ್ರ]** ಈ ಪ್ರಪಂಚದಲ್ಲಿ **[ಮನೋಜವಾ]** ಮನೋವೇಗದ ಸೇನೆಯನ್ನು **[ಅಸರ್ಜಿ]** ಸೃಷ್ಟಿಸಿಕೊಂಡರೆ **[ಅತಃ]** ಈ ಸ್ಥಾನದಿಂದ **[ಶ್ಯೇನಃ]** ವೇಗಯುಕ್ತ **[ವಿಃ]** ಪಕ್ಷಿಯ **[ವೇವಿಜಾನಃ]** ಕಂಪಿಸುತ್ತ **[ಉರಣಾ]** ಬಹುವಿಧ **[ಪಥಾ]** ಮಾರ್ಗದಿಂದ **[ತೂಯಂ]** ವೇಗವಾಗಿ **[ಯಯೌ]** ಚಲಿಸುವನು. **[ಮಧುನಾ]** ಮಧುರವಾದ **[ಸೋಮ್ಯೇನ]** ಸೋಮರಸದಿಂದ **[ಶ್ರವಃ]** ಅನ್ನಾದಿಗಳನ್ನು **[ಉತ]** ಮತ್ತು ಸೇನೆಯನ್ನು **[ಭರತ್]** ಪುಷ್ಟೀಕರಿಸಿ **[ವಿವಿಧೇ]** ವಿಜಯಿಯಾಗುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಎಲ್ಲಿಯವರೆಗೆ ನೀವು ವಾಜಪಕ್ಷಿಯಂತೆ ವೇಗಯುಕ್ತ ಸೇನೆಯನ್ನು ತಯಾರಿಸಿಕೊಳ್ಳಲಾರಿರೋ ಅಲ್ಲಿಯವರೆಗೆ ವಿಜಯ ಸಾಧಿಸಲಾರಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋಜೀಪೀ ಶ್ಯೇನೋ ದದಮಾನೋ ಅಂಶುಂ ಪರಾವತಃ ಶಕುನೋ ಮಂದ್ರಂ ಮದಮ್ ।**
**ಸೋಮಂ ಭರದ್ದಾದೃಹಾಣೋ ದೇವಾವಾನ್ ದಿವೋ ಅಮುಷ್ಮಾದುತ್ತರಾದಾದಾಯ ॥೬॥**

**ಪದಾರ್ಥ:-** **[ಋಜೀಪೀ]** ಸರಳ ಚಲಿಸುವ **[ಶ್ಯೇನಃ]** ವೇಗ ಹೆಚ್ಚಿಸುವ **[ಶಕುನಃ]** ಪಕ್ಷಿಯು **[ಪರಾವತಃ]** ದೂರದೇಶದಿಂದ ಬಿದ್ದು ಅಪೇಕ್ಷಿತ ಪದಾರ್ಥವನ್ನು **[ಭರತ್]** ಧಾರಣ ಮಾಡಿದನು. ಹಾಗೇ ನೀನು **[ಅಂಶುಂ]** ವಿಜ್ಞಾನಾದಿ ಪದಾರ್ಥಗಳ **[ಮದಂ]** ಆನಂದಕಾರಕ **[ಮಂದ್ರಂ]** ಪ್ರಶಂಸಾಯೋಗ್ಯ **[ಸೋಮಂ]** ಐಶ್ವರ್ಯವನ್ನು **[ದದಮಾನಃ]** ಕೊಡುವವನಾಗಿ **[ದೇವಾವಾನ್]** ಬಹುಜನ ವಿದ್ವಾಂಸರೊಂದಿಗೆ **[ಅಮುಷ್ಮಾನ್]** ಪರೋಕ್ಷವಾಗಿ **[ಉತ್ತರಾತ್]** ಆಗಮಿಸುವ **[ದಿವಃ]** ಮಿಂಚಿನ ಪ್ರಕಾಶದಿಂದ ವಿದ್ಯೆಯನ್ನು **[ಆದಾಯ]** ಪಡೆದು **[ದಾದೃಹಾಣಃ]** ವೃದ್ಧಿಹೊಂದು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಪಕ್ಷಿಯು ಭೂಮಿಯಿಂದ ಹಾರಿ ಅಂತರಿಕ್ಷವನ್ನು ತಲುಪಿ ಮರಳಿ ಬಂದು ತನ್ನ ಪ್ರಯೋಜನವನ್ನು ಸಾಧಿಸಿಕೊಳ್ಳುತ್ತದೆಯೋ, ಹಾಗೆಯೇ ಮನುಷ್ಯರು ವಿಮಾನಾದಿಗಳಿಂದ ದೇಶಾಂತರ ತಲುಪಿ ತಮ್ಮ ಕಾರ್ಯಸಿದ್ಧಿಯನ್ನು ಮಾಡಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆದಾಯ ಶ್ಯೇನೋ ಅಭರತ್ ಸೋಮಂ ಸಹಸ್ರಂ ಸವಾँ ಅಯುತಂ ಚ ಸಾಕಮ್ ।**
**ಅತ್ರಾ ಪುರಂಧಿರಜಹಾದರಾತೀ-ರ್ಮದೇ ಸೋಮಸ್ಯ ಮೂರಾ ಅಮೂರಃ ॥೭॥**

**ಪದಾರ್ಥ:-** **[ಶ್ಯೇನಃ]** ವಾಜ ಪಕ್ಷಿಗೆ ಸದೃಶವಾಗಿ **[ಸಹಸ್ರಂ]** ಸಾವಿರಾರು **[ಸೋಮಂ]** ಓಷಧಿ ಪದಾರ್ಥಗಳನ್ನು **[ಅಯುತಂ ಚ]** ಅಸಂಖ್ಯಾತ **[ಸವಾನ್]** ಸೃಷ್ಟಿಯ ಪದಾರ್ಥಗಳನ್ನು **[ಆದಾಯ]** ಸ್ವೀಕರಿಸಿ **[ಆಭರತ್]** ಧಾರಣ ಮಾಡಿರಿ. **[ಅಮೂರಃ]** ಮೋಹರಹಿತರು **[ಅತ್ರ]** ಇದರಲ್ಲಿ **[ಪುರಂಧಿಃ]** ಪುರಧಾರಕರು **[ಸೋಮಸ್ಯ]** ಐಶ್ವರ್ಯ ಸಂಬಂಧೀ **[ಮದೇ]** ಆನಂದ ನಿಮಿತ್ತ **[ಮೂರಾಃ]** ಮೂಢರಾದ **[ಅರಾತೀಃ]** ಶತ್ರುಗಳನ್ನು **[ಅಜಹಾತ್]** ತ್ಯಾಗ ಮಾಡುವವನು **[ಸಾಕಂ]** ಜೊತೆಗೆ ವಿಜಯಿಯಾಗುವನು.

**ಭಾವಾರ್ಥ:-** ಯಾವನು ಶತ್ರುಬಲಕ್ಕಿಂತ ಅಧಿಕ ಬಲವನ್ನು, ಶತ್ರುಗಳಲ್ಲಿನ ಸಾಧನಗಳಿಗಿಂತ ಅಧಿಕ ಸಾಧನಗಳನ್ನು, ಉತ್ತಮ ಸುಶಿಕ್ಷಿತ ಸೇನೆಯನ್ನು, ವಿದ್ಯಾವಂತ ಸೇನಾಪತಿಯನ್ನು ಬಳಸಿಕೊಳ್ಳುವನೋ ಅವನು ವಿಜಯಿಯಾಗುವನು.

ಈ ಸೂಕ್ತದಲ್ಲಿ ಈಶ್ವರನ ಸ್ವಭಾವವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಇಪ್ಪತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೨೭

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೪ ನಿಚೃತ್ತ್ರಿಷ್ಟುಪ್, ೨ ವಿರಾಟ್ ತ್ರಿಷ್ಟುಪ್, ೩ ತ್ರಿಷ್ಟುಪ್, ೫ ನಿಚೃಚ್ಛಕ್ವರೀ ಛಂದಃ । ಧೈವತಃ ಸ್ವರಃ.

ಜೀವಾತ್ಮನ ವಿಷಯವನ್ನು ಇಲ್ಲಿ ಹೇಳಲಾಗಿದೆ.

**ಗರ್ಭೇ ನು ಸನ್ನನ್ವೇಷಾಮವೇದ-ಮಹಂ ದೇವಾನಾಂ ಜನಿಮಾನಿ ವಿಶ್ವಾ ।**
**ಶತಂ ಮಾ ಪುರ ಆಯಸೀರರಕ್ಷ-ನ್ನಧ ಶ್ಯೇನೋ ಜವಸಾ ನಿರದೀಯಮ್ ॥೧॥**

**ಪದಾರ್ಥ:-** **[ಅಹಂ]** ನಾನು **[ಗರ್ಭೇ]** ಗರ್ಭದಲ್ಲಿ **[ಸನ್]** ಇರುವವನಾಗಿ **[ಏಷಾಂ]** ಈ **[ದೇವಾನಾಂ]** ಶ್ರೇಷ್ಠ ಪೃಥಿವ್ಯಾದಿ ಪದಾರ್ಥಗಳ **[ವಿಶ್ವಾ]** ಸಂಪೂರ್ಣ **[ಜನಿಮಾನಿ]** ಜನ್ಮಗಳನ್ನು **[ಅನು, ಅವೇದಂ]** ಅನುಕೂಲಕರ ತಿಳಿದಿರುವೆನು. **[ಮಾ]** ನನಗೆ **[ಆಯಸೀಃ]** ಸುವರ್ಣ ಲೋಹವು **[ಶತಂ]** ನೂರು **[ಪುರಃ]** ನಗರ **[ಅರಕ್ಷನ್]** ರಕ್ಷಿಸುತ್ತವೆ. **[ಅಧ]** ಆಮೇಲೆ **[ಶ್ಯೇನಃ]** ವಾಜ ಪಕ್ಷಿಯಂತೆ ಶರೀರವು **[ಜವಸಾ]** ವೇಗದೊಂದಿಗೆ **[ನು]** ಶೀಘ್ರವಾಗಿ **[ನಿಃ, ಅದೀಯನ್]** ನಿರ್ಗಮಿಸುವೆನು.

**ಭಾವಾರ್ಥ:-** ಮನುಷ್ಯರು ಸದಾ ಸೃಷ್ಟಿವಿದ್ಯೆಯ ತಿಳುವಳಿಕೆ, ಜನ್ಮಮರಣದ ರಹಸ್ಯ, ಶರೀರ ಸಂಬಂಧದ ವಿದ್ಯೆ ಇವುಗಳನ್ನರಿತು ಯಾವಾಗಲೂ ನಿರ್ಭಯರಾಗಿರಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ಘಾ ಸ ಮಾಮಪ ಜೋಷಂ ಜಭಾರಾ-ಭೀಮಾಸ ತ್ವಕ್ಷಸಾ ವೀರ್ಯೇಣ ।**
**ಈರ್ಮಾ ಪುರಂಧಿರಜಹಾದರಾತೀ-ರುತ ವಾತಾঁ ಅತರಚ್ಛೂಶುವಾನಃ ॥೨॥**

**ಪದಾರ್ಥ:-** **[ಶೂಶುವಾನಃ]** ವೃದ್ಧಿ ಹೊಂದಲು **[ಪುರಂಧಿಃ]** ಬಹು ಪದಾರ್ಥಗಳ ಧಾರಣ ಮಾಡಲು **[ಈರ್ಮಾ]** ಪ್ರೇರಣೆ ಮಾಡುವವನು **[ತ್ವಕ್ಷಸಾ]** **[ವೀರ್ಯೇಣ]** ತೀವ್ರ ಬಲದಿಂದ ವೇಗಯುಕ್ತ ಪದಾರ್ಥಗಳಂತೆ **[ಅರಾತೀಃ]** ಶತ್ರುಗಳ **[ಅಜಹಾತ್]** ತ್ಯಾಗ ಮಾಡಬೇಕು. **[ಉತ್]** ಮತ್ತು ಶತ್ರುಬಲವನ್ನು **[ಅತರತ್]** ದಾಟಬೇಕು. **[ಸಃ]** **[ಘಾಃ]** ಅವನೇ **[ಮಾಂ]** ನನ್ನನ್ನು **[ಅಪ ಜೋಷಂ]** ವಿಪರೀತ ಸೇವನವನ್ನು **[ನ]** **[ಜಭಾರ]** ಮಾಡಲಾರನು. **[ಈಂ]** ಇದರಿಂದ ಸುಖಸಂಪನ್ನನಾಗಿ **[ಅಭಿ, ಆಸ]** ಎಲ್ಲೆಲ್ಲೂ ಇರುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ವಾಯುವಿನಂತೆ ಬಲಿಷ್ಠನೂ ಆಗಿ ಶತ್ರುಗಳನ್ನು ದಮನ ಮಾಡುವನೋ ಅವನು ದುಃಖವನ್ನು ದಾಟಿ ಕೆಟ್ಟಕೆಲಸ ಬಿಟ್ಟು ಸುಖಿಯಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅವ ಯಚ್ಛ್ಯೇನೋ ಅಸ್ವನೀದಧ ದ್ಯೋ-ರ್ವಿ ಯದ್ಯದಿ ವಾತ ಊಹುಃ ಪುರಂಧಿಮ್ ।**
**ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ॥೩॥**

**ಪದಾರ್ಥ:-** **[ಯತ್]** ಯಾವ **[ಶ್ಯೇನಃ]** ಶ್ಯೇನ ಪಕ್ಷಿಯಂತಿರುವ **[ಅವ, ಅಸ್ವನೀತ್]** ಶಬ್ದ ಮಾಡುತ್ತ ಉಪದೇಶ ಮಾಡುವನೋ **[ಅಧ]** ಆಮೇಲೆ **[ಯತ್]** ಯಾವನು **[ದ್ಯೋಃ]** ಪ್ರಕಾಶದಿಂದ **[ಪುರಂಧಿಂ]** ಬಹುಧಾರಕನನ್ನು **[ಸೃಜತ್]** ಸೃಷ್ಟಿಸುವನು. **[ಯತ್, ವಾ]** ಅಥವಾ ಶತ್ರುಬಲವನ್ನು ನಡುಗಿಸುವನು. **[ಅಸ್ಮೇ ಹ]** ಇವನಿಗಾಗಿಯೇ **[ಜ್ಯಾಂ]** ಧನುಸ್ಸಿನ ಹುರಿಯನ್ನು **[ಅವ, ಕ್ಷಿಪತ್]** ಪ್ರೇರೇಪಿಸುವನು. **[ಅತಃ]** ಆದ್ದರಿಂದ **[ಕೃಶಾನುಃ]** ಶತ್ರುಗಳನ್ನು ಸೆಳೆಯುವವನು **[ಮನಸಾ]** ಅಂತಃಕರಣದಿಂದ **[ಭುರಣ್ಯನ್]** ಪದಾರ್ಥಗಳ ಧಾರಣ-ಪೋಷಣ ಮಾಡುತ್ತ **[ಅಸ್ತಾ]** ಎಸೆಯುವವನು **[ವಿ]** ವಿಶೇಷರೀತಿಯಲ್ಲಿ ಎಸೆಯುತ್ತಾನೆ. **[ಯದಿ]** ಅದರಿಂದ ಭಿನ್ನವಾದವರು **[ಉಹುಃ]** ಅದನ್ನು ಮಾಡಿದರೆ ಎಲ್ಲಾ ಕಡೆಗಳಲ್ಲೂ ವಿಜಯಿಯಾಗುವರು.

**ಭಾವಾರ್ಥ:-** ಮನುಷ್ಯರು ಸತ್ಯೋಪದೇಶಕ ಸತ್ಯ-ನ್ಯಾಯ ಪಾಲಕ ಶತ್ರುನಾಶಕ ಪ್ರಜಾಪಾಲಕ ರಾಜನನ್ನು ಪಡೆದರೆ ಎಲ್ಲಾ ವಿಧದ ಸುಖ ಪಡೆಯಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋಜಿಪ್ಯ ಈಮಿಂದ್ರಾವತೋ ನ ಭುಜ್ಯುಂ ಶ್ಯೇನೋ ಜಭಾರ ಬೃಹತೋ ಅಧಿ ಷ್ಣೋಃ ।**
**ಅಂತಃ ಪತತ್ ಪತತ್ರ್ಯಸ್ಯ ಪರ್ಣ-ಮಧ ಯಾಮನಿ ಪ್ರಸಿತಸ್ಯ ತದ್ವೇಃ ॥೪॥**

**ಪದಾರ್ಥ:-** **[ಋಜಿಪ್ಯಃ]** ಸರಳ ಮಾರ್ಗವನ್ನನುಸರಿಸುವ ಶ್ರೇಷ್ಠ ಮನುಷ್ಯನು **[ಶ್ಯೇನಃ]** ಶ್ಯೇನ ಪಕ್ಷಿಯಂತೆ **[ಬೃಹತಃ]** ಅತಿಶಯ **[ಸ್ನೋಃ]** ಪ್ರಕಾಶಮಾನ ಪುರುಷಾರ್ಥದಿಂದ **[ಇಂದ್ರಾವತಃ]** ಧನ ಸಂಪನ್ನರನ್ನು **[ನ]** ಹೇಗೋ ಹಾಗೆ **[ಭುಜ್ಯುಂ]** ಭೋಗಿಸುವವನನ್ನು **[ಆಧಿ, ಜಭಾರ]** ಅತಿಶಯ ಧಾರಣ ಮಾಡುವನು. **[ಅಸ್ಯ]** ಇವನ **[ಪರ್ಣಂ]** ರೆಕ್ಕೆಯನ್ನು/ಮಾರ್ಗವನ್ನು **[ಪ್ರಸಿತಸ್ಯ]** ತಡೆಯುವ **[ವೇಃ]** ಪಕ್ಷಿಯ **[ಪತತ್ರಿ]** ಪತನವಾಗುವ ಗರಿಯು **[ಅಂತಃ]** ಮಧ್ಯೆ **[ಪತತ್]** ಬೀಳುತ್ತದೆ. **[ತತ್]** ಅದನ್ನು **[ಜಭಾರ]** ಧರಿಸುವನು. **[ಅಧ]** ಆಮೇಲೆ **[ಈಂ]** ಆನಂದತುಂದಿಲನಾಗುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಪಕ್ಷಿಗಳು ತನ್ನ ಪುರುಷಾರ್ಥದಿಂದ ಬಹುಭೋಗವನ್ನು ಹೇಗೆ ಪಡೆಯುತ್ತವೆಯೋ ಮತ್ತು ಶೀಘ್ರ ಚಲಿಸುತ್ತವೆಯೋ ಹಾಗೆ ಪುರುಷಾರ್ಥ ಸಾಧಕ ಜನರು ಬಹುಸುಖವನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಧ ಶ್ವೇತಂ ಕಲಶಂ ಗೋಭಿರಕ್ತ-ಮಾಪಿಪ್ಯಾನಂ ಮಘವಾ ಶುಕ್ರಮಂಧಃ । ಅಧ್ವರ್ಯುಭಿಃ**
**ಪ್ರಯತಂ ಮಧ್ವೋ ಅಗ್ರ-ಮಿಂದ್ರೋ ಮದಾಯ ಪ್ರತಿ ಧತ್ ಪಿಬಧ್ಯೈ ಶೂರೋ**
**ಮದಾಯ ಪ್ರತಿ ಧತ್ ಪಿಬಧ್ಯೈ ॥೫॥**

**ಪದಾರ್ಥ:-** **[ಮಘವಾ]** ಬಹುಧನ ಸಂಪನ್ನನು **[ಗೋಭಿಃ]** ಗೋವುಗಳಿಗೆ **[ಅಕ್ತಂ]** ಸಂಬಂಧಿಸಿದ **[ಆಪಿಪ್ಯಾನಂ]** ವಿಸ್ತರಿಸಿದ **[ಶ್ವೇತಂ]** ಬಿಳಿಬಣ್ಣದ **[ಕಲಶಂ]** ಕುಂಭವನ್ನು **[ಶುಕ್ರಂ]** ಜಲವನ್ನು **[ಅಂಧಃ]** ಅನ್ನವನ್ನು **[ಪಿಬಧ್ಯೈ]** ಪಾನ ಮಾಡಲು **[ಮದಾಯ]** ಆನಂದಕ್ಕಾಗಿ **[ಪ್ರತಿ, ಧತ್]** ಧಾರಣ ಮಾಡುವನು. **[ಅಧ]** ಅನಂತರ **[ಶೂರಃ]** ವೀರನು **[ಇಂದ್ರಃ]** ಐಶ್ವರ್ಯವಂತನು **[ಮದಾಯ]** ಆನಂದಕ್ಕಾಗಿ **[ಅಧ್ವರ್ಯುಭಿಃ]** ಅವಿನಾಶಕ ಇಚ್ಛೆ ಮಾಡುವವರಿಂದ

[ಮಧ್ವಃ] ಮಧುರಾದಿ ಗುಣಗಳನ್ನು [ಅಗ್ರಂ] ಮೊದಲು [ಪ್ರಯತಂ] ಪ್ರಯತ್ನ ಪೂರ್ವಕ ಆನಂದಕ್ಕಾಗಿ [ಪಿಬಧ್ಯೈ] ಕುಡಿಯಲು [ಪ್ರತಿ, ಧಾತ್] ಧರಿಸುವನು.

**ಭಾವಾರ್ಥ:-** ನಿಯತಾಹಾರ ವಿಹಾರ ಮಾಡುತ್ತ ಅಹಿಂಸಾಪ್ರವೃತ್ತಿಯ ಶೂರ-ವೀರರು ಸದಾ ವಿಜಯಿಗಳಾಗುವರು.

ಈ ಸೂಕ್ತದಲ್ಲಿ ಜೀವ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಇಪ್ಪತ್ತೇಳನೆಯ ಸೂಕ್ತ ಸಮಾಪ್ತ

## ಸೂಕ್ತ ೨೮

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ಇಂದ್ರಾ ಸೋಮೌ ದೇವತೇ । ೧ ನಿಚೃತ್ತ್ರಿಷ್ಟುಪ್, ೩ ವಿರಾಟ್ತ್ರಿಷ್ಟುಪ್, ೪ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಭುರಿಕ್ಪಂಕ್ತಿಃ, ೪ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ವಿದ್ಯಾವಂತರ ಲಕ್ಷಣಗಳನ್ನು ಇಲ್ಲಿ ಹೇಳಲಾಗುತ್ತದೆ.

**ತ್ವಾ ಯುಜಾ ತವ ತತ್ ಸೋಮ ಸಖ್ಯ ಇಂದ್ರೋ ಅಪೋ ಮನವೇ ಸಸ್ರುತಸ್ಕಃ ।**
**ಅಹನ್ನಹಿಮರಿಣಾತ್ ಸಪ್ತ ಸಿಂಧೂ-ನಪಾವೃಣೋದಪಿಹಿತೇವ ಖಾನಿ ॥೧॥**

**ಪದಾರ್ಥ:-** [ಸೋಮ] ಐಶ್ವರ್ಯಸಂಪನ್ನ [ತವ] ನಿನ್ನ [ಸಖ್ಯೇ] ಸ್ನೇಹಕ್ಕಾಗಿ [ಇಂದ್ರಃ] ರಾಜನು [ಮನವೇ] ಮನುಷ್ಯನಿಗೆ [ಸಸ್ರುತಃ] ಚಲಿಸುವವರನ್ನು [ಕಃ] ಮಾಡುತ್ತ [ಅಹಿಂ] ಮೇಘವನ್ನು [ಅಹನ್] ನಾಶಗೊಳಿಸುವನು. [ಸಪ್ತ] ಏಳು [ಸಿಂಧೂನ್] ನದಿಗಳನ್ನು [ಅರಿಣಾತ್] ಪ್ರೇರಿತಗೊಳಿಸಿದನು. [ಖಾನಿ] ಇಂದ್ರಿಯಗಳು [ಅಪಿಹಿತೇವ] ಮುಚ್ಚಿಕೊಂಡಿವೆಯೋ ಎಂಬಂತೆ [ಅಪಃ] ಜಲಗಳನ್ನು [ಅಪ, ಅವೃಣೋತ್] ಆವರಿಸುತ್ತವೆ. [ತತ್] ಅದು [ತ್ವಾ] ನಿನ್ನನ್ನು [ಯುಜಾ] ಸಂಗತಗೊಳಿಸಲು ಯೋಗ್ಯವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಸೂರ್ಯನು ಎಲ್ಲರ ಸುಖಕ್ಕಾಗಿ ಮಳೆ ಸುರಿಸಿ ಹೇಗೆ ಆನಂದಗೊಳಿಸುವನೋ ಹಾಗೆ ವಿದ್ಯಾವಂತರ ಸ್ನೇಹವು ಎಲ್ಲರಿಗೂ ಆನಂದ ದಾಯಕವಾಗಿರುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಾ ಯುಜಾ ನಿ ಖಿದತ್ ಸೂರ್ಯಸ್ಯೇ-ಂದ್ರಶ್ಚಕ್ರಂ ಸಹಸಾ ಸದ್ಯ ಇಂದೋ ।**
**ಅಧಿ ಷ್ಣುನಾ ಬೃಹತಾ ವರ್ತಮಾನಂ ಮಹೋ ದ್ರುಹೋ ಅಪ ವಿಶ್ವಾಯು ಧಾಯಿ ॥೨॥**

**ಪದಾರ್ಥ:-** [ಇಂದೋ] ಧನವಂತನೇ! [ತ್ವಾ] ನಿನಗೆ [ಯುಜಾ] ಯೋಗ್ಯಜನರಿಂದ [ದ್ರುಹಃ] ದ್ವೇಷಿಸುವವನ ಸಂಬಂಧ [ಅಪ, ಧಾಯಿ] ಧಾರಣ ಮಾಡಲಾಗುವುದಿಲ್ಲ. [ಮಹಃ] ದೊಡ್ಡ [ವರ್ತಮಾನಂ] ಈಗಿರುವ [ವಿಶ್ವಾಯು] ಸಂಪೂರ್ಣ ಆಯುಸ್ಸು [ಅಧಿ] ಅಧಿಕಧಾರಣ ಮಾಡಲಾಗುತ್ತದೆ. [ಬೃಹತಾ] ದೊಡ್ಡ [ಸ್ನುನಾ] ವ್ಯಾಪ್ತ

**[ಸಹಸಾ]** ಬಲದಿಂದ **[ಸದ್ಯಃ]** ಬೇಗನೇ **[ಸೂರ್ಯಸ್ಯ]** ಸೂರ್ಯನ **[ಇಂದ್ರಃ]** ಮಿಂಚಿಗೆ ಸದೃಶ **[ಚಕ್ರಂ]** ಚಕ್ರದ **[ನಿ, ಖಿದತ್]** ಯಾವ ದುಃಖವೋ ಅದು ಅಪೇಕ್ಷಿತ ಸುಖವಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ವಿದ್ಯಾವಂತ ರಾಜರು ವಿದ್ಯಾ ಧರ್ಮ-ಬ್ರಹ್ಮಚರ್ಯಾದಿಗಳಿಂದ ಪ್ರಜಾಪಾಲನ ಮಾಡಲಾಗುತ್ತದೆಯೋ, ಆ ಪ್ರಜೆಗಳು ಅತೀತಕಾಲದವರೆಗೂ ಜೀವಿಸುವವರಾಗಿ ಶತ್ರುಗಳನ್ನು ಜಯಿಸುವವರಾಗುವರು.

ರಾಜನ ಗುಣವನ್ನಿಲ್ಲಿ ಹೇಳಲಾಗಿದೆ.

**ಅಹನ್ನಿಂದ್ರೋ ಅದಹದಗ್ನಿರಿಂದೋ ಪುರಾ ದಸ್ಯೂನ್ ಮಧ್ಯಂದಿನಾದಭೀಕೇ ।**
**ದುರ್ಗೇ ದುರೋಣೇ ಕ್ರತ್ವಾ ನ ಯಾತಾಂ ಪುರೂ ಸಹಸ್ರಾ ಶರ್ವಾ ನಿ ಬರ್ಹೀತ್ ॥೩॥**

**ಪದಾರ್ಥ:-** **[ಇಂದೋ]** ಐಶ್ವರ್ಯಸಂಪನ್ನನೇ! **[ಇಂದ್ರಃ]** ಸೂರ್ಯನಿಗೆ ಸದೃಶ ರಾಜನು **[ಮಧ್ಯಂದಿನಾತ್]** ಮಧ್ಯಾಹ್ನದ ತಾಪದಿಂದ **[ದಸ್ಯೂನ್]** ಸಾಹಸಿಗರನ್ನು **[ಅಹನ್]** ನಾಶಗೊಳಿಸುವನು. **[ಅಗ್ನಿಃ]** ಅಗ್ನಿಗೆ ಸದೃಶ **[ಅಭೀಕೇ]** ಸಮೀಪದಲ್ಲಿ **[ಅದಹತ್]** ದುಷ್ಟರನ್ನು ದಹಿಸುವನು. **[ಪುರಾ]** ಮೊದಲಿನಿಂದಲೂ **[ದುರ್ಗ]** ಕೋಟೆಯಲ್ಲಿ **[ದುರೋಣೇ]** ಗೃಹದಲ್ಲಿ **[ಕ್ರತ್ವಾ]** **[ನ]** ಬೌದ್ಧಿಕ ಕರ್ಮಗಳಿಗೆ ಸದೃಶ **[ಪುರು]** ಬಹಳಷ್ಟು **[ಶರ್ವಾ]** ಸಮಗ್ರ ಹಿಂಸಾಕರ್ಮಗಳನ್ನು **[ಸಹಸ್ರಾ]** ಸಾವಿರಾರು ಹಿಂಸಾತ್ಮಕ ಕಾರ್ಯವನ್ನು **[ನಿ, ಬರ್ಹೀತ್]** ನಿಯಂತ್ರಿಸಿರುವನು. **[ಯಾತಾಂ]** ಇದರಿಂದ ನೀವು ಸುಖಿಗಳಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಸೂರ್ಯನು ಮಧ್ಯಾಹ್ನದಲ್ಲಿ ಎಲ್ಲರಿಗೂ ತಾಪದಾಯಕನಾಗಿರುವನೋ ಹಾಗೆ ನ್ಯಾಯಾಧೀಶ ರಾಜನು ಕಳ್ಳರಾದಿ ದುಷ್ಟರಿಗೆ ಕ್ಲೇಶದಾಯಕನಾಗುವನು. ಅಗ್ನಿಯಂತೆ ಅವರನ್ನೆಲ್ಲ ಸುಟ್ಟು ಭಸ್ಮಮಾಡಿ ಸಂಪೂರ್ಣ ದೂರ ಮಾಡುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿಶ್ವಸ್ಮಾತ್ ಸೀಮಧಮಾ ಇಂದ್ರ ದಸ್ಯೂನ್ ವಿಶೋ ದಾಸೀರಕೃಣೋರಪ್ರಶಸ್ತಾಃ ।**
**ಅಬಾಧೇಥಾಮಮೃಣತಂ ನಿ ಶತ್ರೂ-ನವಿಂದೇಥಾಮಪಚಿತಿಂ ವಧತ್ರೈಃ ॥೪॥**

**ಪದಾರ್ಥ:-** **[ಇಂದ್ರ]** ದುಷ್ಟನಾಶಕನೇ! ನೀನು **[ಸೀಂ]** ಸೂರ್ಯನಂತೆ **[ದಾಸೀಃ]** ದಾನ ಮಾಡುವವರಾದ **[ವಿಶಃ]** ಪ್ರಜೆಗಳನ್ನು **[ಅಪ್ರಶಸ್ತಾಃ]** ಸುಖರಹಿತರಾಗಿಸುತ್ತ **[ಅಧಮಾನ್]** ಪಾಪಿಗಳಾದ **[ದಸ್ಯೂನ್]** ದುಷ್ಟರನ್ನು **[ವಿಶ್ವಸ್ಮಾತ್]** ಎಲ್ಲಾ ರೀತಿಯ ಪೀಡಾಯುಕ್ತರನ್ನಾಗಿ **[ಅಕೃಣೋಃ]** ಮಾಡು. **[ವಧತ್ರೈಃ]** ವಧೆಮಾಡಿ **[ಶತ್ರೂನ್]** ಶತ್ರುಗಳನ್ನು **[ಅಬಾಧೇತಾಂ]** ತೊಂದರೆ ಪಡಿಸಿರಿ. **[ಅಮೃಣತಂ]** ಪ್ರಜೆಗಳನ್ನು ಸುಖಿಯಾಗಿಸು. **[ಅಪಚಿತಿಂ]** ಸತ್ಕಾರವನ್ನು **[ನಿ, ಅವಿಂಧೇಥಾಂ]** ಅತಿಶಯ ಪ್ರಾಪ್ತಿಗೊಳಿಸು.

**ಭಾವಾರ್ಥ:-** ರಾಜ, ರಾಜಪುರುಷರೇ! ಯಾರು ಸಾಹಸದ ಕರ್ಮ ಮಾಡಲು ದುಷ್ಟೋಪದೇಶದಿಂದ ಪ್ರಜೆಗಳನ್ನು ದೋಷಯುಕ್ತಗೊಳಿಸುವಂತಹ ಪ್ರವೃತ್ತಿಯಲ್ಲಿ ತೊಡಗುವರೋ, ಅಂತಹ ನೀಚರನ್ನು ನಿರಂತರ ತೊಂದರೆಗೊಳಪಡಿಸಿ ಶ್ರೇಷ್ಠರನ್ನು ಸತ್ಕರಿಸಿರಿ. ಈ ರೀತಿ ಮಾಡಿದರೆ ನೀವು ಪ್ರಜೆಗಳ ಗೌರವಕ್ಕೆ ಪಾತ್ರರಾಗುವಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏವಾ ಸತ್ಯಂ ಮಘವಾನಾ ಯುವಂ ತದಿಂದ್ರಶ್ಚ ಸೋಮೋರ್ವಮಶ್ವ್ಯಂ ಗೋಃ ।**
**ಆದರ್ದೃತಮಪಿಹಿತಾನ್ಯಶ್ನಾ ರಿರಿಚಥುಃ, ಕ್ಷಾಶ್ಚಿತ್ತತೃದಾನಾ ॥೫॥**

**ಪದಾರ್ಥ:-** [**ಸೋಮ**] ಶ್ರೇಷ್ಠಗುಣ ಸಂಪನ್ನ [**ಮಘವಾನ್**] ಐಶ್ವರ್ಯವಂತ ರಾಜನೇ! ಹಾಗೂ ಪ್ರಜೆಗಳೇ! [**ಯುವಂ**] ನೀವಿಬ್ಬರೂ [**ಸತ್ಯಂ**] ಸತ್ಯವಾದ [**ಗೋಃ**] ಭೂಮಿಯ [**ಊರ್ವಂ**] ಮರೆ ಮಾಚುವ [**ಅಶ್ವ್ಯಂ**] ಕುದುರೆಗಳೊಂದಿಗೆ/ಅಶ್ವಶಕ್ತಿಯೊಂದಿಗೆ ಪ್ರಾಪ್ತರಾಗಿ [**ಆ, ಅದೃತಂ**] ಶತ್ರುಗಳನ್ನು ನಿರಂತರ ನಾಶಗೊಳಿಸಿರಿ. [**ತತ್**] ಅದನ್ನು [**ಇಂದ್ರಃ**] ರಾಜನು ಗ್ರಹಣ ಮಾಡಿ ನಾಶಮಾಡಲಿ. [**ಅಪಿಹಿತಾನಿ**] ಆವರಿಸಿರುವ [**ಅಶ್ನಾ**] ಭೋಗಯೋಗ್ಯ ಪದಾರ್ಥಗಳನ್ನು [**ರಿರಿಚಥುಃ**] ತ್ಯಜಿಸಿರಿ. [**ಕ್ಷಾ, ಚ**] ಮತ್ತು ಪೃಥಿವಿಯನ್ನು [**ಚಿತ್**] ಬಿಟ್ಟು ಬಿಡಿ. [**ತತೃದಾನಾಃ**] ದುಃಖನಾಶಕರಾಗಿರಿ. [**ಏವ**] ಹೀಗೆ ಮಾಡುವವರಾಗಿರಿ.

**ಭಾವಾರ್ಥ:-** ರಾಜ, ಮಂತ್ರಿ, ಪ್ರಜೆಗಳು ಪರಸ್ಪರ ಪ್ರೀತಿಯಿಂದ ವರ್ತಿಸುತ್ತ ರಾಜ್ಯಶಾಸನ ಮಾಡಿದರೆ ಇವರಿಗೆ ಯಾವ ಶತ್ರುವೂ ಎದುರಾಗಿ ನಿಲ್ಲವುದಿಲ್ಲ.

ಈ ಸೂಕ್ತದಲ್ಲಿ ರಾಜ ಪ್ರಜಾದಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥ ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಇಪ್ಪತ್ತೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೨೯

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ಇಂದ್ರೋ ದೇವತಾ । ೧ ವಿರಾಟ್ ತ್ರಿಷ್ಟುಪ್, ೨ ನಿಚೃತ್ರಿಷ್ಟುಪ್, ೩, ೪ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೫ ಸ್ವರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಇಲ್ಲಿ ರಾಜನ ಗುಣವರ್ಣನೆಯನ್ನು ಮಾಡಲಾಗಿದೆ.

**ಆ ನಃ ಸ್ತುತ ಉಪ ವಾಜೇಭಿರೂತೀ ಇಂದ್ರ ಯಾಹಿ ಹರಿಭಿರ್ಮಂದಸಾನಃ ।**
**ತಿರಶ್ಚಿದರ್ಯಃ ಸವನಾ ಪುರೂಣ್ಯಾ-ಂಗೂಷೇಭಿರ್ಗೃಣಾನಃ ಸತ್ಯರಾಧಾಃ ॥೧॥**

**ಪದಾರ್ಥ:-** [**ಇಂದ್ರ**] ರಾಜನೇ! [**ಸ್ತುತಃ**] ಪ್ರಶಂಸಿತ [**ಮಂದಸಾನಃ**] ಆನಂದಕಾರಕ [**ಆಗೂಷೇಭಿಃ**] ಸ್ತಾವಕರಿಂದ [**ಗೃಣಾನಃ**] ಹೊಗಳಿಕೆಯನ್ನು ಪಡೆದು [**ಸತ್ಯರಾಧಾಃ**] ಸತ್ಯಮಾರ್ಗದಿಂದ ಧನಸಂಪನ್ನನಾಗಿ [**ಅರ್ಯಃ**] ಒಡೆಯನಾದ ನೀನು [**ಪುರೂಣಿ**] ಬಹಳಷ್ಟು [**ಸವನಾ**] ಸಂಪತ್ತನ್ನು ಪಡೆದುಕೋ. [**ತಿರಃ**] [**ಚಿತ್**] ವಕ್ರನೂ ಆಗಿ [**ಊತೀ**] ರಕ್ಷಣಾದಿಗಳಿಗೆ [**ವಾಜೇಭಿಃ**] ಅನ್ನಾದಿಗಳಿಂದ [**ಹರಿಭಿಃ**] ವೀರ ಪುರುಷರೊಂದಿಗೆ [**ನಃ**] ನಮ್ಮನ್ನು [**ಉಪ, ಆ, ಯಾಹಿ**] ಸಮೀಪಿಸು.

**ಭಾವಾರ್ಥ:-** ಮನುಷ್ಯರೇ! ಯಾವನು ಈ ರಾಜ್ಯದಲ್ಲಿ ಗುಣ-ಕರ್ಮ-ಸ್ವಭಾವದವನಾಗಿ ಆಪತ್ಕಾಲವನ್ನು ನಿವಾರಿಸುವವನೂ ಪ್ರಜೆಗಳ ರಕ್ಷಣೆಯಲ್ಲಿ ತತ್ಪರನೂ, ಉತ್ತಮ ಸೇನೆ ಹೊಂದಿದವನೂ, ಶ್ರೇಷ್ಠ ನ್ಯಾಯದಾತೃವೂ ಧರ್ಮ ಮಾರ್ಗದಿಂದ ಧನಸಂಗ್ರಹ ಮಾಡುವವನೂ, ಅಭಿಮಾನರಹಿತನೂ ಆಗಿರುವನೋ ಅವನನ್ನು ರಾಜನನ್ನಾಗಿ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ಹಿ ಷ್ಮಾ ಯಾತಿ ನರ್ಯಶ್ಚಿಕಿತ್ವಾನ್ ಹೂಯಮಾನಃ ಸೋತೃಭಿರುಪ ಯಜ್ಞಮ್ ।**
**ಸ್ವಶ್ವೋ ಯೋ ಅಭೀರುರ್ಮನ್ಯಮಾನಃ ಸುಷ್ವಾಣೇಭಿರ್ಮದತಿ ಸಂ ಹ ವೀರೈಃ ॥೨॥**

**ಪದಾರ್ಥಃ-** [ಯಃ] ಯಾವನು [ಅಭೀರುಃ] ಹೇಡಿಯಲ್ಲವೋ [ಮನ್ಯಮಾನಃ] ಸತ್ಯದ ಅಭಿಮಾನಿಯೂ [ಸ್ವಶ್ವಃ] ಅಶ್ವಸಂಪನ್ನನೂ [ಚಿಕಿತ್ವಾನ್] ಜ್ಞಾನವಂತನೂ [ಹೂಯಮಾನಃ] ಸ್ತುತಿಸಲ್ಪಟ್ಟವನೂ [ನರ್ಯಃ] ಶ್ರೇಷ್ಠ ಪುರುಷನೂ [ಹಿ] ಯಾವ ಕಾರಣದಿಂದ [ಸ್ತೋತೃಭಿಃ] ಸತ್ಯಾಚರಣೆಗಳೊಂದಿಗೆ [ಯಜ್ಞಂ] ರಾಜ್ಯದ ವ್ಯವಹಾರವನ್ನು [ಉಪ, ಆ, ಯಾತಿ, ಸ್ಮ] ಎಲ್ಲರ ಸಮೀಪಕ್ಕೆ ಬರುವವನೋ [ಸುಷ್ವಾಣೇಭಿಃ] ಉತ್ತಮ ಶಬ್ದಾಯಮಾನನಾಗಿ [ವೀರೈಃ] ಶೂರಪುರುಷರೊಂದಿಗೆ [ಸಂ] [ಮದತಿ ಹ] ಆನಂದಿಸುವನು.

**ಭಾವಾರ್ಥಃ-** ನಾಲ್ಕು ವೇದವನ್ನು ಅಧ್ಯಯನ ಮಾಡಿದವನು ವೇದವಿದ್ಯಾನಿಪುಣರೊಂದಿಗೆ ಯಜ್ಞಗಳನ್ನು ಮಾಡಿ ಹೊಗಳಿಕೆಯನ್ನು ಪಡೆಯುವನೋ ಹಾಗೆಯೇ ಶ್ರೇಷ್ಠಗುಣ ಸಂಪನ್ನ ಮಂತ್ರಿ ಸೇವಕರೊಂದಿಗೆ ರಾಜನು ಹೊಗಳಿಕೆಗೊಳಗಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶ್ರಾವಯೇದಸ್ಯ ಕರ್ಣಾ ವಾಜಯಧ್ಯೈ ಜುಷ್ಟಾಮನು ಪ್ರ ದಿಶಂ ಮಂದಯಧ್ಯೈ ।**
**ಉದ್ವಾವೃಷಾಣೋ ರಾಧಸೇ ತುವಿಷ್ಮಾನ್ ಕರನ್ನ ಇಂದ್ರಃ ಸುತೀರ್ಥಾಭಯಂ ಚ ॥೩॥**

**ಪದಾರ್ಥಃ-** [ಅಸ್ಯ] ಇವನ [ಕರ್ಣಾ] ಶ್ರೋತ್ರೇಂದ್ರಿಯಗಳನ್ನು [ವಾಜಯಧ್ಯೈ] ತಿಳಿಯುವುದಕ್ಕಾಗಿ [ಜುಷ್ಟಾಂ] ಶ್ರೇಷ್ಠ ರಾಜರು ಸೇವಿಸಿದಂತಹ ನೀತಿಯನ್ನು [ಅನುಶ್ರಾವಯ] ಅನುಕೂಲಕರವಾಗಿ ಶ್ರವಣ ಮಾಡಿಸಿರಿ. [ದಿಶಂ] ದಿಕ್ಕುಗಳನ್ನು [ಮಂದಯಧ್ಯೈ] ಪ್ರಸನ್ನಗೊಳಿಸಲು [ಉದ್ವಾವೃಷಾಣಃ] ಅತಿ ಬಲಿಷ್ಠ [ತುವಿಷ್ಮಾನ್] ಪರಾಕ್ರಮೀ [ಇಂದ್ರಃ] ಸತ್ಯ ನ್ಯಾಯಗಳ ಧಾರಕ [ರಾಧಸೇ] ಸಂಪತ್ತಿಗಾಗಿ [ನಃ] ನಮ್ಮ [ಸುತೀರ್ಥಾ] ಉತ ಷ್ಟ ಆದಾರ್ಯರನ್ನು [ಅಭಯಂ ಚ] ಭಯರಹಿತರನ್ನಾಗಿ [ಇತ್, ಪ್ರ, ರಂತ] ಮಾಡು.

**ಭಾವಾರ್ಥಃ-** ಯಾವ ರಾಜನಿಗೆ ಸತ್ಯ-ನ್ಯಾಯಗಳನ್ನು ಉಪದೇಶ ಮಾಡುವ ವಿದ್ಯಾವಂತರಿರುವರೋ, ಆ ರಾಜನು ವಿದ್ಯಾ ವಿನಯಾದಿ ಉತ್ತಮ ಗುಣಗಳೊಂದಿಗೆ ಎಲ್ಲರನ್ನು ಭಯರಹಿತರನ್ನಾಗಿಸಿ ನಿರಂತರ ತುಷ್ಟಿಗೊಳಿಸುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಚ್ಛಾ ಯೋ ಗಂತಾ ನಾಧಮಾನಮೂತೀ ಇತ್ಥಾ ವಿಪ್ರಂ ಹವಮಾನಂ ಗೃಣಂತಮ್ ।**
**ಉಪ ತ್ಮನಿ ದಧಾನೋ ಧುರ್ಯಾ (ಆ) ಶೂನ್ ತ್ಸಹಸ್ರಾಣಿ ಶತಾನಿ ವಜ್ರಬಾಹುಃ ॥೪॥**

**ಪದಾರ್ಥಃ-** [ಯಃ] ಯಾವನು [ಗಂತಾ] ಚಲನಶೀಲನು [ಊತಿ] ರಕ್ಷಣಾರ್ಥ [ಇತ್ಥಾ] ಈ ರೀತಿ [ನಾಧಮಾನಂ] ಹಣವಂತ [ಹವಮಾನಂ] ಈರ್ಷ್ಯೆ ಮಾಡುವವನು [ಗೃಣಂತಂ] ಸ್ತುತಿ ಮಾಡುವವನು ಅವನನ್ನು [ವಿಪ್ರಂ] ಬುದ್ಧಿವಂತನನ್ನು [ತ್ಮನಿ] ಆತ್ಮನಲ್ಲಿ [ಉಪ, ದಧಾನ] ಧಾರಣ ಮಾಡುತ್ತ [ಸಹಸ್ರಾಣಿ] ಸಾವಿರಾರು

[ಶತಾನಿ] ನೂರಾರು [ಅಶ್ವಾನ್] ಅಶ್ವಗಳನ್ನು [ಧುರಿ] ರಥಗಳನ್ನು ಧಾರಣ ಮಾಡುತ್ತ [ಅಚ್ಛ] ಉತ್ತಮ ರೀತಿಯಲ್ಲಿ [ವಜ್ರಬಾಹುಃ] ಶಸ್ತ್ರಧಾರೀ ರಾಜನು ಅವನೇ ಅಭಯಗೊಳಿಸಲು ಸಮರ್ಥನು.

**ಭಾವಾರ್ಥ:-** ಯಾವ ರಾಜನು ಯೋಗ್ಯ ಸೇನೆ ಪಡೆದಿರುವನೋ ಅವನೇ ರಾಜ್ಯ ವಿಸ್ತರಿಸಲು ಸಮರ್ಥನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವೋತಾಸೋ ಮಘವನ್ನಿಂದ್ರ ವಿಪ್ರಾ ವಯಂ ತೇ ಸ್ಯಾಮ ಸೂರಯೋ ಗೃಣಂತಃ ।**
**ಭೇಜಾನಾಸೋ ಬೃಹದ್ದಿವಸ್ಯ ರಾಯ ಆಕಾಯ್ಯಸ್ಯ ದಾವನೇ ಪುರುಕ್ಷೋಃ ॥೫॥**

**ಪದಾರ್ಥ:-** [ಮಘವನ್] ಧನವಂತ [ಇಂದ್ರ] ರಾಜನೇ! [ತ್ವೋತಾಸಃ] ನಿನ್ನಿಂದ ರಕ್ಷಣೆ ಪಡೆದ [ಭೇಜಾನಾಸಃ] ಸೇವನೆ ಮತ್ತು [ಗೃಣಂತಃ] ಸ್ತುತಿ ಮಾಡುತ್ತ [ವಿಪ್ರಾಃ] ಬುದ್ಧಿವಂತ [ಸೂರಯಃ] ವಿದ್ವಾಂಸರು [ವಯಂ] ನಾವು [ಬೃಹದ್ದಿವಸ್ಯ] ಪ್ರಕಾಶಮಾನ [ಆಕಾಯ್ಯಸ್ಯ] ಶರೀರದಲ್ಲಿ ಉತ್ಪನ್ನ [ಪುರುಷೋಃ] ಅನ್ನಾದಿಯುಕ್ತ [ತೇ] ನಿನ್ನ [ರಾಯಃ] ಸಂಪತ್ತಿನ [ದಾವನೇ] ದಾನಿಗಾಗಿ [ಸ್ಯಾಮ] ಸ್ಥಿರಗೊಳ್ಳುವೆವು.

**ಭಾವಾರ್ಥ:-** ರಾಜನೇ! ನೀನು ನಮ್ಮನ್ನು ಸಕಲ ವಿಧದಿಂದ ರಕ್ಷಿಸು. ನಾವು ಉನ್ನತಿಯ ಶಿಖರ ತಲುಪುವೆವು.

ಈ ಸೂಕ್ತದಲ್ಲಿ ರಾಜ-ಪ್ರಜೆಗಳ ಗುಣ ವರ್ಣನೆ ಇರುವದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಇಪ್ಪತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೩೦

ಮಂತ್ರಸಂಖ್ಯೆ ೨೪ । ವಾಮದೇವ ಋಷಿಃ । ೧-೮, ೧೨-೨೪ ಇಂದ್ರಃ, ೯-೧೧ ಇಂದ್ರ, ಉಷಾ ಚ ದೇವತೇ । ೧, ೩, ೫, ೯, ೧೧, ೧೨, ೧೬, ೧೮, ೧೯, ೨೩ ನಿಚೃದ್ಗಾಯತ್ರೀ, ೨, ೧೦, ೭, ೧೩-೧೫, ೧೭, ೨೧, ೨೨ ಗಾಯತ್ರೀ, ೪, ೬ ವಿರಾಡ್ಗಾಯತ್ರೀ, ೨೦ ಪಿಪೀಲಕಾ ಮಧ್ಯಾ ಗಾಯತ್ರೀ ಛಂದಃ । ಷಡ್ಜಃ ಸ್ವರಃ । ೮, ೨೪ ವಿರಾಡನುಷ್ಟುಪ್ ಛಂದಃ । ಋಷಭಃ ಸ್ವರಃ.

ರಾಜನ ಗುಣಲಕ್ಷಣಗಳನ್ನು ಇಲ್ಲಿ ತಿಳಿಸಲಾಗಿದೆ.

**ನಕಿರಿಂದ್ರ ತ್ವದುತ್ತರೋ ನ ಜ್ಯಾಯಾಁ ಅಸ್ತಿ ವೃತ್ರಹನ್ । ನಕಿರೇವಾ ಯಥಾ ತ್ವಮ್ ॥೧॥**

**ಪದಾರ್ಥ:-** [ವೃತ್ರಹನ್] ಮೇಘನಾಶಕ [ಇಂದ್ರ] ರಾಜನೇ! [ಯಥಾ] ಹೇಗೆ [ತ್ವಂ] ನೀನು [ತ್ವತ್] ನಿನ್ನ [ಉತ್ತರಃ] ಹಿಂದೆ [ನಕಿಃ] [ಅಸ್ತಿ] ಏನೂ ಇಲ್ಲ. [ನ] [ಜ್ಯಾಯಾನ್] ದೊಡ್ಡದೂ ಇಲ್ಲ. [ನಕಿಃ] [ಏವ] ಉತ್ತಮವೂ ಇಲ್ಲ.

**ಭಾವಾರ್ಥ:-** ಮನುಷ್ಯರೇ! ಯಾರು ಎಲ್ಲರಿಗಿಂತಲೂ ಶ್ರೇಷ್ಠನೋ ಅವನನ್ನೇ ರಾಜನಾಗಿ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸತ್ರಾ ತೇ ಅನು ಕೃಷ್ಟಯೋ ವಿಶ್ವಾ ಚಕ್ರೇವ ವಾವೃತುಃ । ಸತ್ರಾ ಮಹಾ ಅಸಿ ಶ್ರುತಃ ॥೨॥**

**ಪದಾರ್ಥ:-** [ಸತ್ರಾ] ಸತ್ಯಾಚರಣೆಯ [ಮಹಾನ್] ಮಹತ್ತಾದ [ಶ್ರುತಃ] ಶಾಸ್ತ್ರವನ್ನು ತಿಳಿದಿರುವವನು [ಅಸಿ] ಆಗಿರುವೆ. [ತೇ] ನಿನ್ನ [ಸತ್ರಾ] ಸತ್ಯಾಚರಣೆಯಿಂದ [ಕೃಷ್ಟಯಃ] ಮನುಷ್ಯರು [ವಿಶ್ವಾ] ಸಂಪೂರ್ಣ [ಚಕ್ರೇವ] ಚಕ್ರದಂತೆ [ಅನು, ವಾವೃತುಃ] ವರ್ತಿಸಲಿ.

**ಭಾವಾರ್ಥ:-** ರಾಜನೇ! ನೀನು ನ್ಯಾಯವಂತನಾದರೆ ಸಮಗ್ರ ಪ್ರಜೆಗಳು ನಿನಗೆ ಅನುಕೂಲವಾಗಿ ವರ್ತಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿಶ್ವೇ ಚನೇದನಾ ತ್ವಾ ದೇವಾಸ ಇಂದ್ರ ಯುಯುಧುಃ । ಯದಹಾ ನಕ್ತಮಾತಿರಃ ॥೩॥**

**ಪದಾರ್ಥ:-** [ಇಂದ್ರ] ಶತ್ರುನಾಶಕನೇ! [ಯತ್] ಯಾವ [ವಿಶ್ವೇ ಇತ್] ಎಲ್ಲರೂ [ದೇವಾಸಃ] ವಿದ್ವಾಂಸರು [ಅನಾ] ಪ್ರತಿಜ್ಞಾ ರೂಪ [ಅಹಾ] ಹಗಲು ಮತ್ತು [ನಕ್ತಂ] ರಾತ್ರಿಯನ್ನು [ತ್ವಾ] ನಿನ್ನನ್ನಾಶ್ರಯಿಸಿ [ಯುಯುಧುಃ] ಯುದ್ಧ ಮಾಡುವರು. [ಚನ] ಹಾಗೆಯೇ ನೀನೂ [ಆ, ಅತಿರಃ] ಶತ್ರುಗಳ ನಾಶಮಾಡು.

**ಭಾವಾರ್ಥ:-** ರಾಜನು ತನ್ನ ಸೇವಕರನ್ನು ಶಿಕ್ಷಣ ನೀಡಿ ಶ್ರೇಷ್ಠರಾಗಿಸಬೇಕು. ಅದರಿಂದ ಹಗಲೂ-ರಾತ್ರಿಗಳಲ್ಲಿ ಶತ್ರುಗಳು ಹಿಂದೆ ಉಳಿಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯತ್ರೋತ ಬಾಧಿತೇಭ್ಯಶ್ಚಕ್ರಂ ಕುತ್ಸಾಯ ಯುಧ್ಯತೇ । ಮುಷಾಯ ಇಂದ್ರ ಸೂರ್ಯಮ್ ॥೪॥**

**ಪದಾರ್ಥ:-** [ಇಂದ್ರ] ನ್ಯಾಯಾಧೀಶನೇ! [ಯತ್ರ] ಯಾವರಾಜ್ಯದಲ್ಲಿ [ಮುಷಾಯಃ] ಕಳ್ಳತನ ಮಾಡುವವರು [ಬಾಧಿತೇಭ್ಯಃ] ಪೀಡಿತರಾದವರಿಂದ [ಕುತ್ಸಾಯ] ಶಸ್ತ್ರಾಸ್ತ್ರಧಾರಿಗಳೊಂದಿಗೆ [ಯುಧ್ಯತೇ] ಯುದ್ಧ ಮಾಡುವವರಿಗೆ [ಸೂರ್ಯಂ] ಸೂರ್ಯನಿಗೆ ಸದೃಶ [ಚಕ್ರಂ] ಚಕ್ರವ್ಯೂಹವನ್ನು ರಚಿಸಿಕೊಳ್ಳುವರೋ [ಉತ್] ಅಲ್ಲೂ ಸುಖ ಲಭಿಸದು.

**ಭಾವಾರ್ಥ:-** ಯಾರು ರಾಜನಿಗೆ ಪೀಡಾನಿವಾರಣೆ ಮಾಡುವುದಿಲ್ಲವೋ, ಸೂರ್ಯನಂತೆ ಶ್ರೇಷ್ಠಗುಣಗಳಿಂದ ಪ್ರಕಾಶಮಾನರಾಗುವುದಿಲ್ಲವೋ ಪ್ರಜೆಗಳಿಂದ ತೆರಿಗೆ ವಸೂಲಿ ಮಾಡಲಾಗುವುದೋ ಅಲ್ಲಿ ಸುಖ ವೃದ್ಧಿಸುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯತ್ರ ದೇವಾ ಋಘಾಯತೋ ವಿಶ್ವಾ ಅಯುಧ್ಯ ಏಕ ಇತ್ ।**
**ತ್ವಮಿಂದ್ರ ವನೂರಹನ್ ॥೫॥**

**ಪದಾರ್ಥ:-** [ಇಂದ್ರ] ರಾಜನೇ! [ತ್ವಂ] ನೀನು [ಏಕಃ ಇತ್] ಒಬ್ಬನೇ! [ಯತ್ರ]ಯಲ್ಲಿ [ವಿಶ್ವಾನ್] ಸಮಗ್ರ [ದೇವಾನ್] ವಿದ್ವಾಂಸರನ್ನು [ಋಘಾಯತಃ] ತೊಂದರೆ ಕೊಡುವವರನ್ನು [ವನೂನ್] ಅಧರ್ಮಾಚರಣೆ ಮಾಡುವವರನ್ನೂ [ಅಹನ್] ನಾಶಗೊಳಿಸುವೆಯೋ ಅಲ್ಲಿ [ಅಯುಧ್ಯಃ] ಶತ್ರುಗಳು ಯುದ್ಧಮಾಡಲು ಅಸಮರ್ಥರಾಗುವರು.

**ಭಾವಾರ್ಥ:-** ದುಷ್ಟರು ಯಾವಾಗ ಶ್ರೇಷ್ಠರಿಗೆ ತೊಂದರೆ ಮಾಡುವರೋ ಆಗ ರಾಜನು ಸಮಗ್ರ ಅಧರ್ಮೀಯರನ್ನು ದಂಡಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯತ್ರೋತ ಮರ್ತ್ಯಾಯ ಕ-ಮರಿಣಾ ಇಂದ್ರ ಸೂರ್ಯಮ್ । ಪ್ರಾವಃ ಶಚೀಭಿರೇತಶಮ್ ॥೬॥**

**ಪದಾರ್ಥ:-** [ಇಂದ್ರ] ಸುಖದಾತೃ! ನೀನು [ಸೂರ್ಯಂ] ಸೂರ್ಯನನ್ನು [ಶಚೀಭಿಃ] ಬುದ್ಧಿ ಕರ್ಮದಿಂದ [ಏತಶಂ] ಅಶ್ವದಂತೆ [ಪ್ರ, ಆವಃ] ಉತ್ತಮವಾಗಿ ರಕ್ಷಣೆಮಾಡು. [ಯತ್ರ] ಎಲ್ಲಿ [ಮರ್ತ್ಯಾಯ] ಮನುಷ್ಯರಿಗೆ [ಕಂ] ಸುಖವನ್ನು [ಅರಿಣಾಃ] ಕೊಡು. [ಉತ] ಮತ್ತು ದುಷ್ಟರನ್ನು ದಂಡಿಸು.

**ಭಾವಾರ್ಥ:-** ಎಲ್ಲಿ ರಾಜನು ಶ್ರೇಷ್ಠರನ್ನು ರಕ್ಷಿಸಿ ದುಷ್ಟರನ್ನು ದಂಡಿಸುವನೋ ಆ ರಾಜ್ಯದಲ್ಲಿ ಎಲ್ಲಾ ಪ್ರಜೆಗಳು ಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಿಮಾದುತಾಸಿ ವೃತ್ರಹನ್ ಮಘವನ್ ಮನ್ಯುಮತ್ತಮಃ । ಅತ್ರಾಹ ದಾನುಮಾತಿರಃ ॥೭॥**

**ಪದಾರ್ಥ:-** [ಮಘವನ್] ಐಶ್ವರ್ಯಶಾಲೀ [ವೃತ್ರಹನ್] ಮೇಘನಾಶಕನು [ಮನ್ಯುಮತ್ತಮಃ] ಅತಿಶಯ ಕೋಪಿಷ್ಠ [ದಾನುಂ] ದಾತೃವಿನ [ಆ, ಅತಿರಃ] ನಾಶಪಡಿಸುವನು. [ಅತ್ರ] ಇಲ್ಲಿ [ಅಹ] ಏನಾಶ್ಚರ್ಯ [ಆತ್] ಇವನಿಂದಗಿಂತ [ಕಿಂ] [ಉತ] ಶ್ರೇಷ್ಠ ರಾಜನು ಬೇರೆ ಇರಬಹುದೇ? [ಅಸಿ] ಶ್ರೇಷ್ಠನಾಗಿರುವೆ.

**ಭಾವಾರ್ಥ:-** ಯಾವ ರಾಜನು ದುಷ್ಟರ ಮೇಲೆ ಅತಿಶಯ ಕೋಪ ತೋರಿಸಿ ಶ್ರೇಷ್ಠರನ್ನು ಶಾಂತಿಗೊಳಪಡಿಸುವನೋ ಅವನೇ ಶ್ರೇಷ್ಠ ರಾಜನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏತದ್ ಘೇದುತ ವೀರ್ಯ (ಅ) ೧ ಮಿಂದ್ರ ಚಕರ್ಥ ಪೌಂಸ್ಯಮ್ ।**
**ಸ್ತ್ರಿಯಂ ಯದ್ದುರ್ಹಣಾಯುವಂ ವಧೀರ್ದುಹಿತರಂ ದಿವಃ ॥೮॥**

**ಪದಾರ್ಥ:-** [ಇಂದ್ರ] ಸೂರ್ಯನು [ದುರ್ಹಣಾಯುವಂ] ದುಃಖನಾಶವನ್ನು ಇಚ್ಛಿಸುವ [ದಿವಃ] ಬೆಳಕಿನ [ದುಹಿತರಂ] ಮಗಳು ಉಷೆಯನ್ನು ನಾಶಮಾಡುವಂತೆ [ಏತತ್] ಈ ಕೆಲಸವು [ಪೌಂಸ್ಯಂ] ಪುರುಷರಿಗೆ [ವೀರ್ಯಂ] ಪರಾಕ್ರಮವನ್ನು [ಚಕರ್ಥ] ಮಾಡುತ್ತದೆ. [ಘ] ಶತ್ರುಗಳ [ಇತವಧೀ] ನಾಶಗೊಳಿಸು. [ಯತ್] ಯಾವ [ಸ್ತ್ರಿಯಂ] ವನಿತೆಯನ್ನು [ಉತ] ಮತ್ತು ಭೃತ್ಯರನ್ನು ರಕ್ಷಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ರಾತ್ರಿಯ ನಾಶಮಾಡಿ ದಿನದ ಉತ್ಪತ್ತಿ ಮಾಡುವನೋ, ಜೀವಿಗಳಿಗೆ ಸುಖ ಕೊಡುವನೋ, ಹಾಗೆ ರಾಜನು ದುಷ್ಟರನ್ನು ದಂಡಿಸಿ ಶಿಷ್ಟರನ್ನು ರಕ್ಷಿಸಿ ಸಮಗ್ರ ಪ್ರಜೆಗಳಿಗೆ ಸುಖನೀಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಿವಶ್ಚಿದ್ ಘಾ ದುಹಿತರಂ ಮಹಾನ್ ಮಹೀಯಮಾನಾಮ್ ।**
**ಉಷಾಸಮಿಂದ್ರ ಸಂ ಪಿಣಕ್ ॥೯॥**

**ಪದಾರ್ಥ:-** [**ಇಂದ್ರ**] ರಾಜನೇ! [**ಮಹಾನ್**] ಮಹಾನುಭಾವನಾರಾದರೂ [**ದಿವಃ, ದುಹಿತರಂ**] ಸೂರ್ಯನು, ಕನ್ಯೆಯಂತಿರುವ [**ಮಹೀಯಮಾನಾಂ**] ವಿಸ್ತೀರ್ಣವಾದ [**ಉಷಾಸಂ**] ಉಷಃಕಾಲವನ್ನು [**ಚಿತ್**] ಸದೃಶವಾಗಿ [**ಸಂ, ಪಿಣಕ್**] ಚೆನ್ನಾಗಿ ಮರ್ದಿಸುವನೋ [**ಘ**] ಹಾಗೆ ಶತ್ರುಗಳನ್ನು ಮರ್ದಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನು ಅನ್ಯಾಯವೆಂಬ ಅಂಧಕಾರವನ್ನು ನಿವಾರಿಸಿ ನ್ಯಾಯರೂಪ ಬೆಳಕನ್ನು ಸೃಷ್ಟಿಸುವನೋ ಅವನು ಸೂರ್ಯನಂತೆ ಪ್ರತಾಪಿಯಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಪೋಷಾ ಅನಸಃ ಸರತ್ ಸಂಪಿಷ್ಟಾದಹ ಬಿಭ್ಯುಷೀ ।**
**ನಿ ಯತ್ ಸೀಂ ಶಿಶ್ನಥದ್ವೃಷಾ ॥೧೦॥**

**ಪದಾರ್ಥ:-** [**ವೃಷಾ**] ಬಲಿಷ್ಠ ರಾಜನು [**ಬಿಭ್ಯುಷೀ**] ಭಯದಾತ್ರೀ [**ಉಷಾಃ**] ಪ್ರಾತಃಕಾಲವು [**ಅನಸಃ**] ಶಕಟದಂತೆ ಮುಂದೆ ಚಲಿಸುವವಳು [**ಸಂಪಿಷ್ಟಾತ್**] ಮರ್ದಿಸಲಾದ [**ಅಹ**] ಅಂಧಕಾರದಿಂದ [**ಅಪ, ಸರತ್**] ದೂರ ಸರಿಯುವುದು. [**ಯತ್**] ಯಾವ [**ಸೀಂ**] ಎಲ್ಲಾ ರೀತಿಯಿಂದ [**ನಿ, ಶಿಶ್ನಥತ್**] ಶಿಥಿಲಗೊಳಿಸುವುದು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಶ್ವಗಳು ರಥದ ಮುಂದೆ ಇರುತ್ತವೆಯೋ ಹಾಗೆ ಉಷೆಯು ಸೂರ್ಯನ ಮುಂದೆ ಇರುವಳು. ಸೂರ್ಯನು ಅಂಧಕಾರವನ್ನು ನಾಶಮಾಡುವನು. ಹಾಗೆಯೇ ರಾಜನು ಸೈನ್ಯವನ್ನು ಮುಂದೆ ಮಾಡಿಕೊಂಡು ಅನ್ಯಾಯವೆಂಬ ಅಂಧಕಾರವನ್ನು ನಾಶಮಾಡುವನು.

ಉಷಃಕಾಲದ ವರ್ಣನೆಯನ್ನಿಲ್ಲಿ ಮಾಡಲಾಗುತ್ತದೆ.

**ಏತದಸ್ಯಾ ಅನಃ ಶಯೇ ಸುಸಂಪಿಷ್ಟಂ ವಿಪಾಶ್ಯಾ । ಸಸಾರ ಸೀಂ ಪರಾವತಃ ॥೧೧॥**

**ಪದಾರ್ಥ:-** [**ಸೀಂ**] ಸೂರ್ಯನು [**ಅಸ್ಯಾಃ**] ಈ ಉಷೆಯ [**ಏತತ್**] ಈ [**ಸುಸಂಪಿಷ್ಟಂ**] ಚೆನ್ನಾಗಿ ಪೇಷಣ ಮಾಡಿದ ಅಂಧಕಾರವನ್ನು [**ಅನಃ**] ಗಾಡಿಯ ರೀತಿಯಲ್ಲಿ [**ವಿಪಾಃ**] ಮಾರ್ಗದಲ್ಲಿ [**ಪರಾವತಃ**] ದೂರಪ್ರದೇಶದಿಂದ [**ಆ, ಸಸಾರ**] ಎಲ್ಲಾಕಡೆಗೂ ಚಲಿಸುವನು. [**ಶಯೇ**] ಶಯನ ಮಾಡಿದರೀತಿಯಿಂದ ಅವನನ್ನು ತಿಳಿಯಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ಶ್ರೇಷ್ಠ ವಾಹನವು ದೂರ ಚಲಿಸುವುದೋ ಹಾಗೆ ಪ್ರಾತಃಕಾಲವೂ ದೂರಚಲಿಸುತ್ತದೆ.

ನೌಕಾನಾಯನದ ವಿಷಯವನ್ನಿಲ್ಲಿ ಹೇಳಲಾಗಿದೆ.

**ಉತ ಸಿಂಧುಂ ವಿಬಾಲ್ಯಂ ವಿತಸ್ಥಾನಾಮಧಿ ಕ್ಷಮಿ । ಪರಿ ಷ್ಠಾ ಇಂದ್ರ ಮಾಯಯಾ ॥೧೨॥**

**ಪದಾರ್ಥ:-** [ಇಂದ್ರ] ವಿದ್ಯೈಶ್ವರ್ಯ ಸಂಪನ್ನನೇ! ನೀನು [ಮಾಯಯಾ] ಬುದ್ಧಿವಂತಿಕೆಯಿಂದ [ಅಧಿ, ಕ್ಷಮಿ] ಭೂಮಿಯ ಮೇಲೆ [ವಿತಸ್ಥಾನಂ] ವಿಶೇಷ ರೀತಿಯಲ್ಲಿರುವ [ಉತ] ನದೀ ಹಾಗೂ [ವಿಬಾಲ್ಯಂ] ಬಾಲ್ಯಾವಸ್ಥೆರಹಿತ [ಸಿಂಧುಂ] ಮಹಾನದಿಯನ್ನು [ಪರಿ] ಸುತ್ತಲೂ [ಸ್ಥಾಃ] ನೆಲೆಸುವೆ.

**ಭಾವಾರ್ಥ:-** ಮನುಷ್ಯರೇ! ನದ-ನದೀ-ಸಮುದ್ರಗಳನ್ನು ದಾಟಲು ಬುದ್ಧಿವಂತಿಕೆಯಿಂದ ನೌಕೆ-ಹಡಗುಗಳನ್ನು ತಯಾರಿಸಿಕೊಂಡು ಆ ದಡ ಸೇರಿ ಸಂಪತ್ತನ್ನು ಗಳಿಸಿ.

ಸೇನೆಯ ಅಭಿವೃದ್ಧಿಯ ಬಗೆಗೆ ಹೇಳಲಾಗುತ್ತದೆ.

**ಉತ ಶುಷ್ಣಸ್ಯ ಧೃಷ್ಣುಯಾ ಪ್ರ ಮೃಕ್ಷೋ ಅಭಿ ವೇದನಮ್ ।**
**ಪುರೋ ಯದಸ್ಯ ಸಂಪಿಣಕ್ ॥೧೩॥**

**ಪದಾರ್ಥ:-** [ಯತ್] ಯಾವುದರಿಂದ [ಶುಷ್ಣಸ್ಯ] ಬಲಿಷ್ಠಸೇನೆಯ [ಧೃಷ್ಣುಯಾ] ನಿಷ್ಠೂರತೆಯಿಂದ [ಅಸ್ಯ] ಈ ಶತ್ರುಗಳ [ಪುರಂ] ನಗರವನ್ನು [ಪ್ರ, ಮೃಕ್ಷಃ] ಉತ್ತಮ ರೀತಿಯಲ್ಲಿ ಬೆಳಿಸಿರುವೆಯೋ ಆದ್ದರಿಂದಲೇ [ಸಂಪಿಣಕ್] ಚೆನ್ನಾಗಿ ಧ್ವಂಸಮಾಡು. [ಉತ] ಮತ್ತು [ಅಭಿ, ವೇದನಂ] ಜ್ಞಾನದ ಬೆಳಕುಚೆಲ್ಲು.

**ಭಾವಾರ್ಥ:-** ಸೇನೆಯನ್ನು ಅಭಿವೃದ್ಧಿಪಡಿಸಿ ಅನ್ಯಾಯವನ್ನು ದೂರಗೊಳಿಸಿ ಆಜ್ಞೆ ಮಾಡದೇ ಸ್ವತಃ ಉತ್ತಮನಾಗಬೇಕು.

ರಾಜನ ಕರ್ತವ್ಯವನ್ನು ಹೇಳಲಾಗುತ್ತದೆ.

**ಉತ ದಾಸಂ ಕೌಲಿತರಂ ಬೃಹತಃ ಪರ್ವತಾದಧಿ । ಅವಾಹನ್ನಿಂದ್ರ ಶಂಬರಮ್ ॥೧೪॥**

**ಪದಾರ್ಥ:-** [ಇಂದ್ರ] ರಾಜನೇ! [ಬೃಹತಃ] ದೊಡ್ಡ [ಪರ್ವತಾತ್] ಪರ್ವತದಿಂದ [ಅಧಿ] ಮೇಲುಗಡೆಯಲ್ಲಿ [ಶಂಬರಂ] ಸುಖಪಡೆಯುವ ಮೇಘವನ್ನು [ಅವ, ಅಹನ್] ನಾಶಗೊಳಿಸು [ಉತ] ಹಾಗೂ [ಕೌಲಿತರಂ] ಅತ್ಯಂತ ಕುಲೀನರನ್ನು [ದಾಸಂ] ಸೇವಕರನ್ನು ರಕ್ಷಿಸು.

**ಭಾವಾರ್ಥ:-** ಸೂರ್ಯನು ಹೇಗೆ ಮೋಡದಿಂದ ಮಳೆಯನ್ನು ಕೆಳಕ್ಕೆ ಬೀಳಿಸಿ ಎಲ್ಲರನ್ನು ಬದುಕುವಂತೆ ಮಾಡುವನೋ ಹಾಗೆಯೇ ರಾಜನು ಬೆಟ್ಟದ ತುದಿಯಲ್ಲಿದ್ದರೂ ದರೋಡೆಕೋರರನ್ನು ಭೂಮಿಗೆ ಬೀಳಿಸಿ ಪ್ರಜೆಗಳ ಪಾಲನೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ದಾಸಸ್ಯ ವರ್ಚಿನಃ ಸಹಸ್ರಾಣಿ ಶತಾವಧೀಃ । ಅಧಿ ಪಂಚ ಪ್ರಧೀರಿವ ॥೧೫॥**

**ಪದಾರ್ಥ:-** **[ಪ್ರಧೀನಿವ]** ಚಕ್ರದಲ್ಲಿರುವ ತೀಕ್ಷ್ಣ ಕೀಲುಗಳಂತೆ ಇರುವ ಸಂಸಾರ ಚಕ್ರದ ಕಂಟಕರಾದ ದುಷ್ಟರನ್ನು **[ಪಂಚ]** **[ಶತಾ]** ಐದು ನೂರು **[ಸಹಸ್ರಾಣಿ]** ಸಾವಿರಾರು ದುಷ್ಟರನ್ನು **[ಅಧಿ, ಅವಧೀಃ]** ಸಂಪೂರ್ಣ ನಾಶಮಾಡು. **[ಉತ]** ಮತ್ತೆ **[ವರ್ಚಿನಃ]** ದಾಸರನ್ನು **[ದಾಸಸ್ಯ]** ಸೇವೆ ಮಾಡುವ ಜನರನ್ನು ರಕ್ಷಿಸು.

**ಭಾವಾರ್ಥ:-** ಯಾವನು ತೇಜಸ್ವಿ ಸೇವಕರ ಮೂಲಕ ದುಷ್ಟರನ್ನು ನಿವಾರಿಸಿ ಶ್ರೇಷ್ಠರನ್ನು ರಕ್ಷಿಸುವನೋ, ಅವನೇ ರಾಜನು. ಸಮಗ್ರ ಪ್ರಪಂಚವೇ ಅವನಿಗೆ ಸೇವಕರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ತ್ಯಂ ಪುತ್ರಮಗ್ರುವಃ ಪರಾವೃಕ್ತಂ ಶತಕ್ರತುಃ । ಉಕ್ಥೇಷ್ವಿಂದ್ರ ಆಭಜತ್ ॥೧೬॥**

**ಪದಾರ್ಥ:-** **[ಶತಕ್ರತುಃ]** ನೂರು ಯಜ್ಞ ಮಾಡಿದ **[ಇಂದ್ರಃ]** ರಾಜನು **[ಉಕ್ಥೇಷು]** ಪ್ರಶಂಸಾರ್ಹ ಶಾಸ್ತ್ರಗಳಲ್ಲಿ **[ತ್ಯಂ]** ಆ **[ಪರಾವೃಕ್ತಂ]** ನಷ್ಟವಾಗದ ಪರಾಕ್ರಮವಿರುವ **[ಪುತ್ರಂ]** ಮಗನನ್ನು **[ಅಗ್ರುವಃ]** ಅಗ್ರಗಾಮಿಗೆ ಸದೃಶ **[ಆ, ಅಭಜತ್]** ಸೇವನೆ ಮಾಡುವನು **[ಉತ]** ಮತ್ತು ವಿದ್ಯಾಭ್ಯಾಸವನ್ನೂ ಮಾಡಿಸುವನು.

**ಭಾವಾರ್ಥ:-** ಯಾವ ರಾಜನು ಮಗನಂತೆ ಪ್ರಜಾಪಾಲನೆ ಮಾಡುವನೋ ಅವನನ್ನು ಪ್ರಜೆಗಳೂ ತಂದೆಗೆ ಸಮನಾಗಿ ನೋಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ । ಇಂದ್ರೋ ವಿದ್ವಾ ಅಪಾರಯತ್ ॥೧೭॥**

**ಪದಾರ್ಥ:-** **[ಶಚೀಪತಿಃ]** ಪ್ರಜೆಗಳ ಒಡೆಯನೂ **[ವಿದ್ವಾನ್]** ವಿದ್ಯಾವಂತನೂ ಆದ **[ಇಂದ್ರಃ]** ರಾಜನು **[ತುರ್ವಶಾಯದೂ]** ಶೀಘ್ರವಶಪಡಿಸಿಕೊಳ್ಳಲು ಯತ್ನಿಸುವವನು **[ಉತ]** ಮತ್ತು **[ಅಸ್ನಾತಾರಾ]** ಸ್ನಾನಕರ್ಮ ರಹಿತನನ್ನು **[ಅಪಾರಯತ್]** ದುಃಖದಿಂದ ಪಾರುಮಾಡುವನು. **[ತ್ಯಾ]** ಅವರಿಬ್ಬರೂ ಸುಖಿಗಳಾಗುವರು.

**ಭಾವಾರ್ಥ:-** ಯಾರು ಮನುಷ್ಯರಿಗೆ ಶಿಕ್ಷಣ ನೀಡುವರೋ ಅವರಿಬ್ಬರೂ ದುಃಖವನ್ನು ದಾಟಿ ಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ತ್ಯಾ ಸದ್ಯ ಆರ್ಯಾ ಸರಯೋರಿಂದ್ರ ಪಾರತಃ । ಅರ್ಣಾ ಚಿತ್ರರಥಾವಧೀಃ ॥೧೮॥**

**ಪದಾರ್ಥ:-** **[ಇಂದ್ರ]** ರಾಜನೇ! ನೀನು **[ಸದ್ಯಃ]** ಬೇಗನೇ **[ತ್ಯಾ]** ಅವರಿಬ್ಬರೂ **[ಸರಯೋಃ]** ಚಲಿಸುವವರನ್ನು **[ಪಾರತಃ]** ದಾಟಿ **[ಅರ್ಣಾಚಿತ್ರರಥಾ]** ತಲುಪುವ ಆಶ್ಚರ್ಯಕರ ರಥದ **[ಅವಧೀಃ]** ನಾಶಮಾಡು **[ಉತ]** ಮತ್ತು **[ಆರ್ಯಾ]** ಉತ್ತಮರ ಪಾಲನೆ ಮಾಡು.

**ಭಾವಾರ್ಥ:-** ರಾಜನೇ! ನೀನು ಸದಾ ದುಷ್ಟರನ್ನು ದಂಡಿಸಿ ಶಿಷ್ಟರನ್ನು ರಕ್ಷಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅನು ದ್ವಾ ಜಹಿತಾ ನಯೋಽಂಧಂ ಶ್ರೋಣಂ ಚ ವೃತ್ರಹನ್ । ನ ತತ್ತೇ ಸುಮ್ನಮಷ್ಟವೇ ॥೧೯॥**

**ಪದಾರ್ಥ:-** **[ವೃತ್ರಹನ್]** ಶತ್ರುನಾಶಕನು **[ನಯಃ]** ನಾಯಕನಾಗಿದ್ದು **[ಅಂಧಂ]** ಕುರುಡನನ್ನಾಗಿ **[ಶ್ರೋಣಂ, ಚ]** ಕುಂಟನನ್ನಾಗಿಯೂ **[ದ್ವಾ]** ಇಬ್ಬರನ್ನೂ **[ಜಹಿತಾ]** ತ್ಯಜಿಸುವವನ **[ಅನು]** ನಂತರ ಪಾಲನ ಮಾಡು. **[ತೇ]** ಅವರು ನಿನ್ನ **[ಸುಮ್ನಂ]** ಸುಖವನ್ನು **[ಅಷ್ಣವೇ]** ವ್ಯಾಪ್ತಗೊಳಿಸುವರು, **[ನ]** ಅಸಮರ್ಥರಾಗುವರು.

**ಭಾವಾರ್ಥ:-** ಯಾವ ರಾಜನು ಅನಾಥ. ಅಂಧ-ಪಂಗುಗಳ ರಕ್ಷಣೆಯನ್ನು ನಿರಂತರ ಮಾಡುವನೋ ಅವನ ರಾಜ್ಯವನ್ನಾಗಲೀ, ಸುಖವನ್ನಾಗಲೂ ಯಾರೂ ನಷ್ಟಗೊಳಿಸಲಾರರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶತಮಶ್ಮನ್ಮಯೀನಾಂ ಪುರಾಮಿಂದ್ರೋ ವ್ಯಾಸ್ಯತ್ । ದಿವೋದಾಸಾಯ ದಾಶುಷೇ ॥೨೦॥**

**ಪದಾರ್ಥ:-** **[ಇಂದ್ರ]** ಸೂರ್ಯನಿಗೆ ಸದೃಶ **[ದಿವೋದಾಸಾಯ]** ಪ್ರಕಾಶವನ್ನು ಸೇವಿಸುವ **[ದಾಶುಷೇ]** ದಾನಿಗಾಗಿ **[ಅಶ್ಮನ್ಮಯೀನಾಂ]** ಕಲ್ಲುಗಳಿಂದ ನಿರ್ಮಿಸಲಾದ **[ಪುರಾಂ]** ನಗರಗಳ **[ಶತಂ]** ನೂರಾರುಗಳನ್ನು **[ವಿ, ಆಸ್ಯತ್]** ಕತ್ತರಿಸಿ ಹಾಕು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ನೀನು ಬೃಹತ್ತಾದ ಮೇಘ ಸಮೂಹವನ್ನು ಸೂರ್ಯನು ಹೇಗೆ ಕತ್ತರಿಸುವನೋ ಹಾಗೆ ಶತ್ರುಗಳು ವ್ಯಾಪಕವಾಗಿರುವ ನಗರವನ್ನು ಜಯಿಸಿದರೆ ನಿನಗೆ ರಾಜ್ಯಲಕ್ಷ್ಮೀ ಹಾಗೂ ಯಶಸ್ಸು ಎರಡೂ ಲಭಿಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ವಾಪಯದ್ದಭೀತಯೇ ಸಹಸ್ರಾ ತ್ರಿಂಶತಂ ಹಥೈಃ । ದಾಸಾನಾಮಿಂದ್ರೋ ಮಾಯಯಾ ॥೨೧॥**

**ಪದಾರ್ಥ:-** **[ಇಂದ್ರಃ]** ರಾಜನು **[ಮಾಯಯಾ]** ಬುದ್ಧಿಯಿಂದ **[ದಾಸಾನಾಂ]** ಸೇವಕರನ್ನು **[ಹಥೈಃ]** ಶತ್ರು ಹನನ ಸಾಧನಗಳಿಂದ **[ದಭೀತಯೇ]** ಹಿಂಸನ ಕ್ರಿಯೆಗಾಗಿ **[ಸಹಸ್ರಾ]** ಅಸಂಖ್ಯ **[ತ್ರಿಶತಂ]** ಮೂರು ನೂರನ್ನು **[ಅಸ್ವಾಪಯತ್]** ನಿದ್ರೆಗೊಳಪಡಿಸು.

**ಭಾವಾರ್ಥ:-** ಯಾವ ರಾಜನು ಸೇನೆ- ಸೇನಾಪತಿಗಳನ್ನು ವೃದ್ಧಿಪಡಿಸಿ ಶತ್ರುಗಳ ನಾಶಮಾಡುವನೋ ಅವನು ಸದಾಸುಖಿಯಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಘೇದುತಾಸಿ ವೃತ್ರಹನ್ ತ್ಸಮಾನ ಇಂದ್ರ ಗೋಪತಿಃ । ಯಸ್ತಾ ವಿಶ್ವಾನಿ ಚಿಚ್ಯುಷೇ ॥೨೨॥**

**ಪದಾರ್ಥ:-** **[ವೃತ್ರಹನ್]** ಶತ್ರುನಾಶಕನೇ! **[ಇಂದ್ರ]** ಐಶ್ವರ್ಯದಾಯಕನೇ! **[ಯಃ]** ಯಾವ **[ಗೋಪತಿಃ]** ಭೂಮಿಯೊಡೆಯನು **[ಸಮಾನಃ]** ಸೂರ್ಯಸದೃಶ ನೀನು **[ತಾ]** ಆ **[ವಿಶ್ವಾನಿ]** ಎಲ್ಲರನ್ನು **[ಚಿಚ್ಯುಷೇ]** ವೃದ್ಧಿಗೊಳಿಸುತ್ತ **[ಘ]** ವೃದ್ಧಿಹೊಂದು. **[ಸ, ಇತ್]** ಆ ನೀನೆ ಬಲವಂತ **[ಉತ್]** ಮತ್ತು **[ಅಸಿ]** ಸುಖಿಯಾಗುವೆ.

**ಭಾವಾರ್ಥ:-** ಯಾವ ರಾಜನು ಸೂರ್ಯನಂತೆ ನ್ಯಾಯ ಪ್ರಕಾಶಕನಾಗಿ, ರಾಗದ್ವೇಷ ರಹಿತನಾಗುವನೋ ಅವನು ರಾಜ್ಯಶಾಸಕರ ಗಣನೆಯಲ್ಲಿ ಸೇರುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ನೂನಂ ಯದಿಂದ್ರಿಯಂ ಕರಿಷ್ಯಾ ಇಂದ್ರ ಪೌಂಸ್ಯಮ್ । ಅದ್ಯಾ ನಕಿಷ್ಟದಾ ಮಿನತ್ ॥೨೩॥**

**ಪದಾರ್ಥ:-** [ಇಂದ್ರ] ಸರ್ವರಕ್ಷಕನೇ! ನೀನು [ಅದ್ಯ] ಈ ದಿನ [ಯತ್] ಯಾವ [ನೂನಂ] ನಿಶ್ಚಿತ [ಇಂದ್ರಿಯಂ] ಇಂದ್ರಿಯಗಳನ್ನು [ಉತ] ಮತ್ತು [ಪೌಂಸ್ಯಂ] ಪೌರುಷ ಕರ್ಮವನ್ನು [ಕರಿಷ್ಯಾಃ] ಮಾಡುವೆಯೋ [ತತ್] ಅದನ್ನು [ನಕಿಃ] [ಆ, ಮಿನತ್] ಹಿಂಸಿಸಬೇಡ.

**ಭಾವಾರ್ಥ:-** ಯಾವ ರಾಜನ ವರ್ತಮಾನ ಸ್ಥಿತಿಯಲ್ಲಿ ತನ್ನ ಬಲವನ್ನು ವೃದ್ಧಿಪಡಿಸಿಕೊಳ್ಳುವನೋ, ಅವನು ಶತ್ರುಗಳಿಂದ ಅಜೇಯನಾಗಿ ನಿಶ್ಚಿತವಾಗಿ ವಿಜಯಿಯಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಾಮಂವಾಮಂ ತ ಆದುರೇ ದೇವೋ ದದಾತ್ವರ್ಯಮಾ ।**
**ವಾಮಂ ಪೂಷಾ ವಾಮಂ ಭಗೋ ವಾಮಂ ದೇವಃ ಕರೂಳತೀ ॥೨೪॥**

**ಪದಾರ್ಥ:-** [ಆದುರೇ] ಶತ್ರುನಾಶಕನೇ! [ಕರೂಳತೀ] ಕುಶಲಕರ್ಮಿಗಳನ್ನು ಬಯಸುವವನು [ದೇವಃ] ವಿಜಯವನ್ನು ಪಡೆಯುವ [ತೇ] ನಿನಗೆ [ವಾಮಂ, ವಾಮಂ] ಪ್ರತಿ, ಪ್ರಶಂಸಾರ್ಹರನ್ನು [ದದಾತು] ಕೊಡಲಿ. [ಅರ್ಯಮಾ] ನ್ಯಾಯಾಧೀಶನು [ವಾಮಂ] ಪ್ರಾಪ್ತಿಯೋಗ್ಯ ಪದಾರ್ಥವನ್ನು [ಪೂಷಾ] ಪುಷ್ಟಿಕರ್ತನು [ವಾಮಂ] ಸೇವನಯೋಗ್ಯ ಧನವನ್ನು ಕೊಡಲಿ. [ಭಗಃ] ಧನವಂತನು [ದೇವಃ] ಪ್ರಕಾಶಮಾನನು [ವಾಮಂ] ಶ್ರೇಷ್ಠ ವಿಜ್ಞಾನವನ್ನು ಕೊಡಲಿ.

**ಭಾವಾರ್ಥ:-** ರಾಜನೇ! ಯಾರು ನಿನಗೆ ಸತ್ಯೋಪದೇಶ, ಸತ್ಯವಿದ್ಯೆ, ಸತ್ಯ, ನ್ಯಾಯ - ಯಥಾರ್ಥ ನುಡಿ ಇವುಗಳನ್ನು ಬೋಧಿಸುವರೋ ಅವರೆಲ್ಲರ ಸತ್ಕಾರವನ್ನು ನೀನು ನಿರಂತರ ಮಾಡು.

ಈ ಸೂಕ್ತದಲ್ಲಿ ಸೂರ್ಯ, ಮೇಘ, ವಿದ್ಯಾವಂತ, ರಾಜ ಮುಂತಾದವರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮೂವತ್ತನೇ ಸೂಕ್ತ ಸಮಾಪ್ತ.**

## ಸೂಕ್ತ ೩೧

ಮಂತ್ರಸಂಖ್ಯೆ ೧೫ । ವಾಮದೇವ ಋಷಿಃ । ಇಂದ್ರೋ ದೇವತಾ । ೧, ೭-೧೦, ೧೪ ಗಾಯತ್ರೀ, ೨, ೬, ೧೨, ೧೫ ನಿಚೃದ್ಗಾಯತ್ರೀ, ೩ ತ್ರಿಪಾದ್ಗಾಯತ್ರೀ, ೪, ೫, ವಿರಾಡ್ಗಾಯತ್ರೀ, ೧೧ ಪಿಪೀಲಿಕಾ ಮಧ್ಯಾ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಇಲ್ಲಿ ರಾಜ-ಪ್ರಜೆಗಳ ಗುಣಧರ್ಮಗಳನ್ನು ಹೇಳಿದೆ.

**ಕಯಾ ನಶ್ಚಿತ್ರ ಆ ಭುವ-ದೂತೀ ಸದಾವೃಧಃ ಸಖಾ । ಕಯಾ ಶಚಿಷ್ಠಯಾ ವೃತಾ ॥೧॥**

**ಪದಾರ್ಥ:-** [ಸದಾವೃಧಃ] ಸರ್ವದಾ ವೃದ್ಧಿಪಡುತ್ತಲಿರುವ ನೀನು [ನಃ] ನಮ್ಮ [ಕಯಾ] ಯಾವ [ಊತೀ] ರಕ್ಷಣಾದಿ ಕ್ರಿಯೆಯೊಂದಿಗೆ [ಕಯಾ] ಯಾವ [ಶಚಿಷ್ಠಯಾ] ಶ್ರೇಷ್ಠ ಕರ್ಮದಿಂದ [ವೃತಾ] ಸಂಯುಕ್ತವಾದ [ಚಿತ್ರಃ] ಅದ್ಭುತ ಗುಣಕರ್ಮಸ್ವಭಾವದವನು [ಸಖಾ] ಮಿತ್ರನು [ಆ, ಭುವತ್] ಆಗು.

**ಭಾವಾರ್ಥ:-** ರಾಜನೇ! ನೀನು ನಮ್ಮೊಂದಿಗೆ ಪ್ರೀತಿಯಿಂದ ವರ್ತಿಸು. ಅದರಿಂದ ನಮಗೂ ನಿನ್ನ ಮೇಲಿನ ಪ್ರೀತಿಯು ಹೆಚ್ಚಾಗುವುದು.

ಯಥಾಯೋಗ್ಯ ಆಹಾರ ವಿಹಾರಗಳ ವಿಷಯವನ್ನಿಲ್ಲಿ ಹೇಳಿದೆ.

**ಕಸ್ತ್ವಾ ಸತ್ಯೋ ಮದಾನಾಂ ಮಂಹಿಷ್ಠೋ ಮತ್ಸದಂಧಸಃ । ದೃಳ್ಹಾ ಚಿದಾರುಜೇ ವಸು ॥೨॥**

**ಪದಾರ್ಥ:-** **[ಮದಾನಾಂ]** ಸಂತೋಷದ **[ಅಂಧಸಃ]** ಅನ್ನಾದಿ ಸಂಬಂಧದಲ್ಲಿ **[ಮಂಹಿಷ್ಠಃ]** ಅತಿದೊಡ್ಡ **[ಸತ್ಯಃ]** ಶ್ರೇಷ್ಠರಲ್ಲಿ ಶ್ರೇಷ್ಠ **[ತ್ವಾ]** ನಿನ್ನನ್ನು **[ಮತ್ಸತ್]** ಆನಂದಗೊಳಿಸಲಿ. **[ಆರುಜೇ]** ಎಲ್ಲ ಬಗೆಯ ರೋಗಗಳಿಗೆ **[ದೃಳ್ಹಾ]** ದೃಢವಾದ **[ವಸು]** **[ಚಿತ್]** ಧನರೂಪವೇ **[ಕಃ]** ಯಾರು ಆಗುವನು.

**ಭಾವಾರ್ಥ:-** ಮನುಷ್ಯನು ವರ್ಣಾಶ್ರಮ ಧರ್ಮದೊಂದಿಗೆ ಯಥಾಯೋಗ್ಯ ಆಹಾರ-ವಿಹಾರಗಳನ್ನು ಮಾಡಬೇಕು. ಅದರಿಂದ ಅವರಲ್ಲಿ ಎಂದೂ ರೋಗ ದಾರಿದ್ರ್ಯಗಳು ಉದ್ಭವವಾಗುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭೀ ಷು ಣಃ ಸಖೀನಾ-ಮವಿತಾ ಜರಿತೄಣಾಮ್ । ಶತಂ ಭವಾಸ್ಯೂತಿಭಿಃ ॥೩॥**

**ಪದಾರ್ಥ:-** **[ಊತಿಭಿಃ]** ರಕ್ಷಣಾದಿಗಳಿಂದ **[ಜರಿತೄಣಾಂ]** ಶ್ರೇಷ್ಠ ವಿದ್ಯಾವಂತರ **[ಸಖೀನಾಂ]** ಸ್ನೇಹಿತರು **[ನಃ]** ನಮಗೆ **[ಶತಂ]** ನೂರಾರು ಜನರು **[ಭವಾಸಿ]** ಇರುವರು. ಅದರಿಂದ **[ಅಭಿ]** ಎದುರಿನಲ್ಲಿ **[ಸು]** **[ಅವಿತಾ]** ಉತ್ತಮ ರಕ್ಷಕನಾಗು.

**ಭಾವಾರ್ಥ:-** ಯಾರು ತನ್ನಂತೆ ಪರರು ಎಂದು ಭಾವಿಸಿ, ಸುಖ, ದುಃಖ, ಹಾನಿ, ಲಾಭ, ಎಲ್ಲದರಲ್ಲೂ ಪ್ರೀತಿಯಿಂದ ವರ್ತಿಸುವವರೋ ಅವರೊಂದಿಗೆ ಬೇರೆಯವರೂ ಅದೇ ರೀತಿ ವರ್ತಿಸಬೇಕು.

ರಾಗಧರ್ಮವನ್ನಿಲ್ಲಿ ಹೇಳಿದೆ.

**ಅಭೀ ನ ಆ ವವೃತ್ಸ್ವ ಚಕ್ರಂ ನ ವೃತ್ತಮರ್ವತಃ । ನಿಯುದ್ಭಿಶ್ಚರ್ಷಣೀನಾಮ್ ॥೪॥**

**ಪದಾರ್ಥ:-** **[ನಃ]** ನಮ್ಮನ್ನು **[ವೃತ್ತಂ]** ದೃಢವಾದ **[ಚಕ್ರಂ]** **[ನ]** ಚಕ್ರದಂತೆ ಶ್ರೇಷ್ಠ ಕರ್ಮಗಳಲ್ಲಿ **[ಅಭಿ, ಆ, ವವೃತ್ಸ್ವ]** ಎಲ್ಲ ರೀತಿಯಲ್ಲೂ ಉತ್ತಮವಾಗಿ ವರ್ತಿಸು. **[ನಿಯುದ್ಭಿಃ]** ವಾಯು ವೇಗದೊಂದಿಗೆ **[ಚರ್ಷಣೀನಾಂ]** ಮನುಷ್ಯರ **[ಅರ್ವತಃ]** ಅಶ್ವಶಕ್ತಿಯಾಗಿ ವರ್ತಿಸು.

**ಭಾವಾರ್ಥ:-** ರಾಜನೇ! ಸ್ವತಃ ನೀನು ಉತ್ತಮವಾಗಿ ವರ್ತಿಸಿ ನಮ್ಮನ್ನೂ ಹಾಗೆ ವರ್ತಿಸುವಂತೆ ಮಾಡು.

ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಲಾಗಿದೆ.

**ಪ್ರವತಾ ಹಿ ಕ್ರತೂನಾ-ಮಾ ಹಾ ಪದೇವ ಗಚ್ಛಸಿ । ಅಭಕ್ಷಿ ಸೂರ್ಯೇ ಸಚಾ ॥೫॥**

**ಪದಾರ್ಥ:-** **[ಹಿ]** ಯಾವ ಕಾರಣದಿಂದ **[ಕ್ರತೂನಾಂ]** ಬೌದ್ಧಿಕ ಕರ್ಮಗಳ **[ಪ್ರವತಾ]** ಅಧೋಮಾರ್ಗದಿಂದ **[ಪದೇವ]** ಹೆಜ್ಜೆಗಳಂತೆ **[ಆ, ಗಚ್ಛಸಿ]** ಬರುವೆ. **[ಹ]** ನಿಶ್ಚಯವಾಗಿಯೂ **[ಸಚಾ]** ಸತ್ಯಾಚರಣೆಯೊಂದಿಗೆ **[ಸೂರ್ಯೇ]** ಸೂರ್ಯನ ಪ್ರಕಾಶದಂತೆ **[ಅಭಕ್ಷಿ]** ಧರ್ಮವನ್ನು ಸೇವಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ವಿದ್ಯಾವಂತರು ಪರಿಶುದ್ಧಮಾರ್ಗದಲ್ಲಿ ಚಲಿಸುತ್ತ ಪರಿಪೂರ್ಣ ವಿದ್ಯೆಯನ್ನು ಪಡೆಯುವರೋ ಹಾಗೆ ಬೇರೆಯವರೂ ವರ್ತಿಸುತ್ತ ಬುದ್ಧಿವಂತರಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಂ ಯತ್ತ ಇಂದ್ರ ಮನ್ಯವಃ ಸಂ ಚಕ್ರಾಣಿ ದಧನ್ವಿರೇ । ಅಧ ತ್ವೇ ಅಧ ಸೂರ್ಯೇ ॥೬॥**

**ಪದಾರ್ಥ:-** **[ಇಂದ್ರ]** ಜೀವನೇ! **[ತೇ]** ನಿನ್ನ **[ಯತ್]** ಯಾವ **[ಮನ್ಯವಃ]** ಕ್ರೋಧಾದಿ ವ್ಯವಹಾರಗಳು **[ಚಕ್ರಃ]** ಚಕ್ರದಂತಿರುವ ಕರ್ಮಗಳನ್ನು **[ಸಂ ದಧನ್ವಿರೇ]** ಧಾರಣ ಮಾಡಿರುತ್ತವೆ. **[ಅಧ]** ಅನಂತರ **[ತ್ವೇ]** ನಿನ್ನಿಂದ ಧನಧಾರಣ ಮಾಡುತ್ತ **[ಅಧ]** ಆ ಮೇಲೆ **[ಸೂರ್ಯ]** ಸೂರ್ಯಪ್ರಕಾಶದಂತೆ ಪ್ರತಾಪವನ್ನು **[ಸಂ]** ಧಾರಣ ಮಾಡುತ್ತವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಯಾವನು ದುಷ್ಟಾಚರಣೆ ಮಾಡುವವರ ಮೇಲೆ ಕೋಪವನ್ನು ಹಾಗೂ ಶಿಷ್ಟಾಚರಣೆ ಮಾಡುವವರ ಬಗೆಗೆ ಹರ್ಷವನ್ನೂ ಪ್ರಕಟಿಸುವರೋ ಅವರು ಸೂರ್ಯನಂತೆ ಪ್ರತಾಪಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮಾ ಹಿ ತ್ವಾಮಾಹುರಿ-ನ್ಮಘವಾನಂ ಶಚೀಪತೇ । ದಾತಾರಮವಿದೀಧಯುಮ್ ॥೭॥**

**ಪದಾರ್ಥ:-** **[ಶಚೀಪತೇ]** ಜ್ಞಾನ ಬುದ್ಧಿಗಳ ಪಾಲಕ ರಾಜನೇ! **[ಹಿ]** ಯಾವ ಕಾರಣದಿಂದ **[ತ್ವಾಂ]** ನಿನ್ನನ್ನು **[ಮಘವಾನಂ]** ಧನವಂತನನ್ನು **[ಅವಿದೀಧಯುಂ]** ದುರ್ವ್ಯಸನ ರಹಿತನನ್ನು **[ದಾತಾರಂ]** ದಾನಿಯನ್ನೂ **[ಸ್ಮ]** ಆಗಿ ಜನರು ಗುರುತಿಸಿ **[ಆಹುಃ]** ಹೇಳುವರೋ **[ಉತ]** ಹಾಗೂ ಸೇವೆಯನ್ನೂ ಮಾಡುವರೋ **[ಇತ್]** ಆದ್ದರಿಂದ ನಾವು ಸೇವೆ ಮಾಡುವೆವು.

**ಭಾವಾರ್ಥ:-** ವಿದ್ವಾಂಸರೇ ನೀವು ಸದಾ ಧರ್ಮಕರ್ಮಗಳನ್ನೇ ಮಾಡುತ್ತಿದ್ದರೆ ನಿಮ್ಮಲ್ಲಿ ಸಂಪತ್ತಾಗಲೀ ದಾನಕರ್ಮಗಳಾಗಲೀ ಎಂದೂ ಕ್ಷಯಿಸುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮಾ ಸದ್ಯ ಇತ್ ಪರಿ ಶಶಮಾನಾಯ ಸುನ್ವತೇ । ಪುರೂ ಚಿನ್ಮಂಹಸೇ ವಸು ॥೮॥**

**ಪದಾರ್ಥ:-** **[ಶಶಮಾನಾಯ]** ಪ್ರಶಂಸೆ ಪಡೆದವನಿಗೆ **[ಸುನ್ವತೇ]** ಸೋಮರಸ ತಯಾರಿಸುವವನಿಗೆ **[ಚಿತ್]** ಹಾಗೂ **[ಪುರೂ]** ವಿಫುಲ **[ವಸು]** ಸಂಪತ್ತನ್ನು **[ಪರಿ]** ಎಲ್ಲಾ ರೀತಿಯಿಂದ **[ಮಂಹಸೈ]** ನೀನು ವೃದ್ಧಿಪಡಿಸುವೆ. **[ಸದ್ಯಃ]** ಬೇಗನೆ **[ಉತ]** ಮತ್ತೆ **[ಸ್ಮ]** **[ಇತ್]** ನಿಶ್ಚಿತವಾಗಿಯೂ ಧನವನ್ನು ಪಡೆಯುವೆ.

**ಭಾವಾರ್ಥ:-** ಯಾರು ಯಥಾರ್ಥವಾದೀ ಪುರುಷಾರ್ಥ ಸಾಧಕನಾಗಿರುವನೋ ಅವರು ಬಹುಬೇಗನೆ ಧನಸಂಪನ್ನನಾಗುವನು.

ರಾಜನ ವಿಷಯವನ್ನಿಲ್ಲಿ ಹೇಳಲಾಗುತ್ತದೆ.

**ನಹಿ ಷ್ಮಾ ತೇ ಶತಂ ಚನ ರಾಧೋ ವರಂತ ಆಮುರಃ । ನ ಚ್ಯೌತ್ನಾನಿ ಕರಿಷ್ಯತಃ ॥೯॥**

**ಪದಾರ್ಥ:-** **[ಚ್ಯೌತ್ನಾನಿ]** ಶಕ್ತಿಯನ್ನು **[ಕರಿಷ್ಯತಃ]** ಗಳಿಸುತ್ತಲಿರುವ **[ತೇ]** ನಿನ್ನ **[ಶತಂ]** ಅಸಂಖ್ಯ **[ರಾಧಃ]** ಧನವನ್ನು **[ಚ]** **[ನ]** ಹಾಗೂ **[ಆಮುರಃ]** ರೋಗಕಾರಕಗಳು **[ನಹಿ]** **[ವರಂತೇ]** ಸ್ವೀಕರಿಸುವುದಿಲ್ಲ; **[ನ]** **[ಷ್ಮಾ]** ವಿಜಯವನ್ನೂ ಸಾಧಿಸುವುದಿಲ್ಲ.

**ಭಾವಾರ್ಥ:-** ರಾಜನೇ! ನೀನು ಎಲ್ಲರಿಗೂ ಯಥಾಯೋಗ್ಯ ನ್ಯಾಯ ದೊರಕಿಸುವವನಾದರೇ ನಿನ್ನ ಧನ-ಬಲ ಎಂದೂ ನಷ್ಟವಾಗಲಾರದು. ನೂರಾರು ಬಗೆಯಿಂದ ವೃದ್ಧಿಯಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾ ಅವಂತು ತೇ ಶತ-ಮಸ್ಮಾನ್ ತ್ಸಹಸ್ರಮೂತಯಃ । ಅಸ್ಮಾನ್ ವಿಶ್ವಾ ಅಭಿಷ್ಟಯಃ ॥೧೦॥**

**ಪದಾರ್ಥ:-** **[ತೇ]** ನಿನ್ನ **[ಸಹಸ್ರಂ]** ಬಹುವಿಧ **[ಊತಯಃ]** ರಕ್ಷಣೆಗಳು **[ಶತಂ]** ಅಸಂಖ್ಯಾತ **[ವಿಶ್ವಾ]** ಸಮಗ್ರ **[ಅಭೀಷ್ಟಯಃ]** ಇಚ್ಛೆಗಳು **[ಅಸ್ಮಾನ್]** ನಮ್ಮೆಲ್ಲರನ್ನೂ **[ಅವಂತು]** ರಕ್ಷಣೆ ಮಾಡಲಿ. **[ಅಸ್ಮಾನ್]** ನಮ್ಮನ್ನು ವೃದ್ಧಿಪಡಿಸಲಿ **[ಅಸ್ಮಾನ್]** ನಮ್ಮನ್ನು ನಲಿಸಲಿ.

**ಭಾವಾರ್ಥ:-** ರಾಜನೇ! ನೀನು ತನ್ನನ್ನು ಹಾಗೂ ತಂದೆಯ ರೀತಿಯಲ್ಲಿ ನಮ್ಮನ್ನು ಪಾಲನೆ ಮಾಡಿದರೆ ವೃದ್ಧಿಪಡಿಸಿ ನಲಿಸಿದರೆ, ಆಗಲೇ ನೀನು ನಿಜವಾಗಿಯೂ ರಾಜ ಶಬ್ದಕ್ಕೆ ಯೋಗ್ಯನಾಗುವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾ ಇಹಾ ವೃಣೀಷ್ವ ಸಖ್ಯಾಯ ಸ್ವಸ್ತಯೇ । ಮಹೋ ರಾಯೇ ದಿವಿತ್ಮತೇ ॥೧೧॥**

**ಪದಾರ್ಥ:-** **[ಇಹ]** ಈ ಪ್ರಪಂಚದಲ್ಲಿ **[ಅಸ್ಮಾನ್]** ನಮ್ಮನ್ನು **[ಸ್ವಸ್ತಯೇ]** ಸುಖಕ್ಕಾಗಿ **[ಮಹಃ]** ಅತಿಶಯ **[ದಿವಿತ್ಮತೇ]** ವಿದ್ಯಾ-ಧರ್ಮ-ನ್ಯಾಯಗಳಿಂದ ಪ್ರಕಾಶಮಾನ **[ಸಖ್ಯಸ್ಯ]** ಸ್ನೇಹಕ್ಕೆ **[ರಾಯೇ]** ಧನಕ್ಕೆ **[ವೃಣೀಷ್ವ]** ಸ್ವೀಕರಿಸು.

**ಭಾವಾರ್ಥ:-** ರಾಜನೇ! ನೀನು ನಮ್ಮಲ್ಲಿ ಹೇಗೆ ಸ್ನೇಹವಿರಿಸುವೆಯೋ ಹಾಗೆ ನಾವೂ ನಿನ್ನಲ್ಲಿ ಸ್ನೇಹವಿರಿಸುವೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾ ಅವಿಡ್ಢಿ ವಿಶ್ವಹೇ-ಂದ್ರ ರಾಯಾ ಪರೀಣಸಾ । ಅಸ್ಮಾನ್ ವಿಶ್ವಾಭಿರೂತಿಭಿಃ ॥೧೨॥**

**ಪದಾರ್ಥ:-** **[ಇಂದ್ರ]** ರಾಜನೇ! ನೀನು **[ವಿಶ್ವಹಾ]** ಸಮಗ್ರ ದಿನಗಳನ್ನು **[ಪರೀಣಸಾ]** ಬಹುವಿಧ **[ರಾಯಾ]** ಧನದೊಂದಿಗೆ **[ಅಸ್ಮಾನ್]** ನಮ್ಮನ್ನು **[ಅವಿಡ್ಢಿ]** ಸಂಯೋಜಿಸು. **[ವಿಶ್ವಾಭಿಃ]** ಸಮಗ್ರ **[ಊತಿಭಿಃ]** ರಕ್ಷಣಾದಿ ಕ್ರಿಯೆಗಳೊಂದಿಗೆ ಸಂಯೋಜಿಸು.

**ಭಾವಾರ್ಥ:-** ಯಾರು ಸಕಲ ರಕ್ಷಣೆಗಳೊಂದಿಗೆ ಪ್ರಜೆಗಳನ್ನು ಧನಾಢ್ಯರನ್ನಾಗಿ ಮಾಡುವನೋ ಅವನೇ ಉತ್ತಮ ರಾಜನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಭ್ಯಂ ತಾँ ಅಪಾ ವೃಧಿ ವ್ರಜಾँ ಅಸ್ತೇವ ಗೋಮತಃ । ನವಾಭಿರಿಂದ್ರೋತಿಭಿಃ ॥೧೩॥**

**ಪದಾರ್ಥ:-** **[ಇಂದ್ರ]** ಐಶ್ವರ್ಯದಾತೃವೇ! ನೀನು **[ನವಾಭಿಃ]** ಹೊಸತಾದ **[ಊತಿಭಿಃ]** ರಕ್ಷಣಾದಿಗಳಿಂದ **[ಅಸ್ಮಭ್ಯಂ]** ನಮಗೋಸ್ಕರ **[ಗೋಮತಃ]** ಗೋವುಗಳಿರುವ **[ವ್ರಜಾನ್]** ಗೋಷ್ಠಗಳನ್ನು **[ತಾನ್]** ಆ ಗೋಶಾಲೆಗಳನ್ನು **[ಅಸ್ತೇವ]** ಮನೆಯ ರೀತಿಯಲ್ಲಿ **[ಅಪಾವೃಧಿ]** ಅಭಿವೃದ್ಧಿಗೊಳಿಸು.

**ಭಾವಾರ್ಥ:-** ರಾಜನೇ! ಗೋಪಾಲಕರು ಗೋವುಗಳನ್ನು ಸಾಕಿ ಹೇಗೆ ದುಗ್ಧಾದಿಗಳಿಂದ ಆಢ್ಯರಾಗುವರೋ ಹಾಗೆ ನಮ್ಮನ್ನೂ ಆಢ್ಯರನ್ನಾಗಿ ಮಾಡಿ ನೀನೂ ಆನಂದಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾಕಂ ಧೃಷ್ಣುಯಾ ರಥೋ ದ್ಯುಮಾँ ಇಂದ್ರಾನಪಚ್ಯುತಃ । ಗವ್ಯುರಶ್ವಯುರೀಯತೇ ॥೧೪॥**

**ಪದಾರ್ಥ:-** **[ಇಂದ್ರ]** ರಾಜನೇ! **[ಅಸ್ಮಾಕಂ]** ನಮ್ಮೆಲ್ಲರನ್ನೂ **[ಧೃಷ್ಣುಯಾ]** ದೃಢರನ್ನಾಗಿಸಿ **[ದ್ಯುಮ್ನಾನ್]** ಬಹುವಿಧ ಯಂತ್ರಗಳಿಂದ ಪ್ರಕಾಶಿತ **[ಅನಪಚ್ಯುತ್]** ಚ್ಯುತಿಯಾಗದ **[ಗವ್ಯುಃ]** ಗೋವುಗಳನ್ನು **[ಅಶ್ವಯುಃ]** ಅಶ್ವಶಕ್ತಿಯನ್ನು ಸಂಯೋಜಿಸಿದ **[ರಥಃ]** ವಾಹನಗಳೊಂದಿಗೆ ಸಂಯೋಜಿಸಿ **[ಈಯತೇ]** ಶತ್ರುಗಳನ್ನು ಜಯಿಸು.

**ಭಾವಾರ್ಥ:-** ರಾಜನ ವಸ್ತುಗಳೆಲ್ಲವೂ ನಮಗಾಗಿ ಮತ್ತು ನಮ್ಮ ವಸ್ತುಗಳೆಲ್ಲವೂ ರಾಜನಿಗಾಗಿ ಎಂದು ಪ್ರಜೆಗಳು ಭಾವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾಕಮುತ್ತಮಂ ಕೃಧಿ ಶ್ರವೋ ದೇವೇಷು ಸೂರ್ಯ। ವರ್ಷಿಷ್ಠಂ ದ್ಯಾಮಿವೋಪರಿ ॥೧೫॥**

**ಪದಾರ್ಥ:-** **[ಸೂರ್ಯ]** ಸೂರ್ಯನಂತಿರುವ ರಾಜನೇ! ನೀನು **[ಉಪರಿ]** ಮೇಲುಭಾಗದಲ್ಲಿರುವ **[ದ್ಯಾಮಿವ]** ಆಕಾಶದಂತೆ **[ಅಸ್ಮಾಕಂ]** ನಮ್ಮೆಲ್ಲರ **[ಉತ್ತಮಂ]** ಶ್ರೇಷ್ಠ **[ವರ್ಷಿಷ್ಠಂ]** ಅತಿ ವಿಸ್ತೃತ **[ಶ್ರವಃ]** ಅನ್ನ ಹಾಗೂ ಶ್ರವಣೇಂದ್ರಿಯವನ್ನು **[ದೇವೇಷು]** ವಿದ್ವಾಂಸರಲ್ಲಿ **[ಕೃಧಿ]** ಸೇರುವಂತೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ಹೇಗೆ ಆಕಾಶದಲ್ಲಿ ಸೂರ್ಯನೇ ದೊಡ್ಡವನೋ ಹಾಗೇ ವಿದ್ಯಾ ವಿನಯ ಐಶ್ವರ್ಯಗಳಿಂದ ನಮ್ಮನ್ನೂ ದೊಡ್ಡವರನ್ನಾಗಿ ಮಾಡು.

ಈ ಸೂಕ್ತದಲ್ಲಿ ರಾಜ-ಪ್ರಜೆಗಳ ಗುಣ ಧರ್ಮಗಳ ವಿವರಣೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮೂವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೩೨

ಮಂತ್ರಸಂಖ್ಯೆ ೨೪ । ವಾಮದೇವ ಋಷಿಃ । ೧-೨೨ ಇಂದ್ರಃ, ೨೩, ೨೪ ಇಂದ್ರಾಶ್ವಾ ದೇವತೇ । ೧, ೮-೧೦, ೧೪, ೧೬-೧೮, ೨೨, ೨೩ ಗಾಯತ್ರೀ, ೨, ೪, ೭ ವಿರಾಡ್ಗಾಯತ್ರೀ, ೩, ೫, ೬, ೧೨, ೧೩, ೧೫, ೧೯-೨೧ ನಿಚೃದ್ಗಾಯತ್ರೀ, ೧೧ ಪಿಪೀಲಿಕಾ ಮಧ್ಯಾ ಗಾಯತ್ರೀ ಛಂದಃ । ೧೩ ಪಾದ ನಿಚೃದ್ಗಾಯತ್ರೀ, ೨೪ ಸ್ವರಾಡಾರ್ಚೀಗಾಯತ್ರೀ ಚ ಛಂದಃ । ಷಡ್ಜಃ ಸ್ವರಃ.

ರಾಜ-ಪ್ರಜೆಗಳ ಸಂಬಂಧವಿಲ್ಲಿ ಹೇಳಿದೆ.

**ಆ ತೂ ನ ಇಂದ್ರ ವೃತ್ರಹ-ನ್ನಸ್ಮಾಕಮರ್ಧಮಾ ಗಹಿ । ಮಹಾನ್ ಮಹೀಭಿರೂತಿಭಿಃ ॥೧॥**

**ಪದಾರ್ಥ:-** [**ವೃತ್ರಹನ್**] ಮೇಘಹಂತಕನೇ! [**ಇಂದ್ರ**] ರಾಜನೇ! ನೀನು [**ಅಸ್ಮಾಕಂ**] ನಮ್ಮೆಲ್ಲರ [**ಅರ್ಧಂ**] ವೃದ್ಧಿಯನ್ನು [**ಆ, ಗಹಿ**] ಪಡೆಯುವೆ. [**ಮಹೀಭಿಃ**] ಮಹತ್ತಾದ [**ಊತಿಭಿಃ**] ರಕ್ಷಣೆಗಳಿಂದೊಡಗೂಡಿ [**ಮಹಾನ್**] ವೃದ್ಧಿಹೊಂದಿದ [**ನಃ**] ನಮ್ಮೆಲ್ಲರಿಗೆ [**ಉ**] ಮತ್ತೆ [**ಆ**] ಪ್ರಾಪ್ತನಾಗು.

**ಭಾವಾರ್ಥ:-** ರಾಜನೇ! ನೀನು ನಮ್ಮೆಲ್ಲರನ್ನು ಅಭಿವೃದ್ಧಿಗೊಳಿಸಿದರೆ ನಾವೆಲ್ಲರೂ ನಿನ್ನನ್ನು ಅತಿಶಯ ವೃದ್ಧಿ ಪಡಿಸುವೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭೃಮಿಶ್ಚಿದ್ಘಾಸಿ ತೂತುಜಿ-ರಾ ಚಿತ್ರ ಚಿತ್ರಿಣೀಷ್ವಾ । ಚಿತ್ರಂ ಕೃಣೋಷ್ಯೂತಯೇ ॥೨॥**

**ಪದಾರ್ಥ:-** [**ಚಿತ್ರ**] ಆಶ್ಚರ್ಯಕರ ಗುಣವಿರುವ [**ತೂತುಜಃ**] ಶೀಘ್ರಕಾರಿ [**ಭೃಮಿಃ**] ಸಂಚರಿಸುವ ನೀನು [**ಊತಯೇ**] ರಕ್ಷಣಾದಿಗಳಿಗೆ [**ಚಿತ್ರಿಣೀಷು**] ಅದ್ಭುತಸೇನೆಗಳಲ್ಲಿ [**ಚಿತ್ರಂ**] ಆಶ್ಚರ್ಯಕರ ವ್ಯವಹಾರವನ್ನು [**ಆ, ಕೃಣೋಷಿ**] ಮಾಡುವೆ. [**ಚಿತ್**] ಮತ್ತು [**ಆ, ಘ, ಅಸಿ**] ಪ್ರಭಾವಕಾರಿಯೂ ಆಗಿರುವೆ.

**ಭಾವಾರ್ಥ:-** ರಾಜನೇ! ನೀನು ರಾಜ್ಯದಲ್ಲೆಲ್ಲ ಸಂಚರಿಸುತ್ತ ಬೇಗನೇ ಎಲ್ಲರಿಗೂ ನ್ಯಾಯ ದೊರಕಿಸಿ ರಕ್ಷಣೆ ಮಾಡಿದರೆ ಆಶ್ಚರ್ಯಜನಕ ರೀತಿಯಲ್ಲಿ ಪ್ರಜೆಗಳೆಲ್ಲರೂ ಅದ್ಭುತ ಸಂಪತ್ತಿನ ಅಭಿವೃದ್ಧಿಗೊಳಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಭ್ರೇಭಿಶ್ಚಿಚ್ಛಶೀಯಾಂಸಂ ಹಂಸಿ ವ್ರಾಧಂತಮೋಜಸಾ । ಸಖಿಭಿರ್ಯೇ ತ್ವೇ ಸಚಾ ॥೩॥**

**ಪದಾರ್ಥ:-** [**ದಭ್ರೇಭಿಃ**] ಅಲ್ಪ ಅಥವಾ ಚಿಕ್ಕ [**ಸಖಿಭಿಃ**] [**ಚಿತ್**] ಮಿತ್ರರಿಂದಲೇ [**ಓಜಸಾ**] ಬಲದಿಂದ [**ಅಶೀಯಾಂಸಂ**] ಧರ್ಮೋಲ್ಲಂಘನ ಮಾಡುವ [**ವ್ರಾಧಂತಂ**] ಬೇಡನಂತೆ ಪ್ರಜೆಗಳ ನಾಶಮಾಡುವವರನ್ನು [**ಹಂಸಿ**] ನಾಶಮಾಡುವೆ. [**ಯೇ**] ಯಾರು [**ತ್ವೇ**] ನಿನ್ನಲ್ಲಿ [**ಸಚಾ**] ಸಾಚಾ ಜನರೋ ಅವರ ರಕ್ಷಣೆ ಮಾಡುವೆ.

**ಭಾವಾರ್ಥ:-** ಧಾರ್ಮಿಕರು ಅಲ್ಪ ಸಂಖ್ಯೆಯಲ್ಲೇ ಇದ್ದರೂ ಎಲ್ಲರೂ ಒಂದಾಗಿ ಶತ್ರುಗಳೊಂದಿಗೆ ಹೋರಾಡಿದರೆ ಬಹುಸಂಖ್ಯೆಯ ಅಧರ್ಮಿಗಳನ್ನು ಜಯಿಸಬಲ್ಲರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಯಮಿಂದ್ರ ತ್ವೇ ಸಚಾ ವಯಂ ತ್ವಾಭಿ ನೋನುಮಃ । ಅಸ್ಮಾಁ ಅಸ್ಮಾಁ ಇದುದವ ॥೪॥**

**ಪದಾರ್ಥ:-** [ಇಂದ್ರ] ರಾಜನೇ! [ವಯಂ] ನಾವು [ತ್ವೇ] ನಿನ್ನವರಲ್ಲಿ [ಸಚಾ] ಸರಳ ರೀತಿಯಿಂದ ವರ್ತಿಸುವೆವು. [ವಯಂ] ನಾವೆಲ್ಲರೂ [ತ್ವಾ] ನಿನ್ನನ್ನು [ಅಭಿ, ನೋನುಮಃ] ಭಯ-ಭಕ್ತಿಗಳಿಂದ ನಮಿಸುವೆವು. [ಅಸ್ಮಾನಸ್ಮಾನ್] ನಮ್ಮೆಲ್ಲರನ್ನೂ [ಇತ್, ಉತ್] ನಿಶ್ಚಿತವಾಗಿ ನಿರಂತರವಾಗಿಯೂ [ಅವ] ರಕ್ಷಣೆ ಮಾಡು.

**ಭಾವಾರ್ಥ:-** ರಾಜನೇ! ನಾವೆಲ್ಲರೂ ನಿನ್ನೊಡನೆ ಸದಾಚಾರದಿಂದ ವರ್ತಿಸುತ್ತ ನಿನ್ನನ್ನು ಹೇಗೆ ಗೌರವಿಸುವವೋ ಹಾಗೆಯೇ ನೀನೂ ನಮ್ಮೆಲ್ಲರ ಅಭಿವೃದ್ಧಿಯನ್ನು ಮಾಡು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ನಶ್ಚಿತ್ರಾಭಿರದ್ರಿವೋಽನವದ್ಯಾಭಿರೂತಿಭಿಃ । ಅನಾಧೃಷ್ಟಾಭಿರಾ ಗಹಿ ॥೫॥**

**ಪದಾರ್ಥ:-** [ಅದ್ರಿವಃ] ಮೇಘಗಳೊಂದಿಗೆ ಸೂರ್ಯನಿರುವಂತಿರುವ ರಾಜನೇ! [ಸಃ] ಅಂತಹ ನೀನು [ಚಿತ್ರಾಭಿಃ] ಅದ್ಭುತವಾದ [ಅನವದ್ಯಾಭಿಃ] ಸೇವನೆಗೆ ಯೋಗ್ಯವಲ್ಲದ [ಅನಾಧೃಷ್ಟಾಭಿಃ] ಶತ್ರುಗಳಿಂದ ದಮನಿಸಲು ಸಾಧ್ಯವಾಗದಂತಹ [ಊತಿಭಿಃ] ರಕ್ಷಣಾ ಸಾಮಗ್ರಿಗಳೊಂದಿಗೆ [ನಃ] ನಮ್ಮನ್ನು [ಆ, ಗಹಿ] ಪ್ರಾಪ್ತನಾಗು.

**ಭಾವಾರ್ಥ:-** ಪ್ರಜೆಗಳೇ! ರಾಜನು ಹೇಗೆ ನಿಮ್ಮನ್ನು ಎಲ್ಲರೀತಿಯಿಂದಲೂ ರಕ್ಷಿಸುವನೋ ಹಾಗೆಯೇ ನೀವೂ ರಾಜನನ್ನು ಎಲ್ಲರೀತಿಯಿಂದಲೂ ರಕ್ಷಣೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭೂಯಾಮೋ ಷು ತ್ವಾವತಃ ಸಖಾಯ ಇಂದ್ರ ಗೋಮತಃ । ಯುಜೋ ವಾಜಾಯ ಘೃಷ್ವಯೇ ॥೬॥**

**ಪದಾರ್ಥ:-** [ಇಂದ್ರ] ರಾಜನೇ! [ತ್ವಾವತಃ] ನಿನ್ನಿಂದ ರಕ್ಷಿತರಾದ [ಸಖಾಯಃ] ಮಿತ್ರರು [ಘೃಷ್ವಯೇ] ಘರ್ಷಣೆಗೆ [ವಾಜಾಯ] ವಿಜ್ಞಾನಕ್ಕೆ, ಅನ್ನಕ್ಕೆ [ಗೋಮತಃ] ಗೋವುಗಳಿಂದ ಯುಕ್ತವಾದ [ಯುಜಃ] ಸಂಗತವಾದವರೊಂದಿಗೆ [ಸು, ಭೂಯಾಮಃ] ಶೋಭಿತರಾಗೋಣ.

**ಭಾವಾರ್ಥ:-** ರಾಜನೇ! ನೀನು ಪೃಥಿವ್ಯಾದಿಗಳನ್ನು ಪಡೆದಿರುವ ನಮಗೆ ಸಂಪತ್ತಿನೊಂದಿಗೆ ಸಂಯೋಜಿಸು. ನಾವೂ ನಿನ್ನೊಂದಿಗೆ ಸಂಗತರಾಗುವೆವು.

ವಿದ್ವಾಂಸನ ಕರ್ತವ್ಯವನ್ನಿಲ್ಲಿ ಹೇಳಲಾಗಿದೆ.

**ತ್ವಂ ಹ್ಯೇಕ ಈಶಿಷ ಇಂದ್ರ ವಾಜಸ್ಯ ಗೋಮತಃ । ಸ ನೋ ಯಂಧಿ ಮಹೀಮಿಷಮ್ ॥೭॥**

**ಪದಾರ್ಥ:-** [ಇಂದ್ರ] ವಿದ್ಯಾವಂತನೇ! [ಹಿ] ಯಾವುದರಿಂದ [ಏಕಃ] ಒಬ್ಬನೇ! [ತ್ವಂ] ನೀನು [ಗೋಮತಃ] ಬಹುವಿಧ ಭೂಮ್ಯಾದಿಗಳೊಂದಿಗೆ [ವಾಜಸ್ಯ] ವಿದ್ಯಾವಂತ ಜನ ಸಮೂಹದ [ಈಶಿಷೇ] ಒಡೆಯನಾಗಿರುವೆಯೋ [ಸಃ] ಅವನು [ನಃ] ನಮ್ಮೆಲ್ಲರಿಗೆ [ಮಹೀಂ] ಹಿರಿದಾದ [ಇಷಂ] ಅನ್ನವನ್ನು [ಯಂಧಿ] ಕೊಡು.

**ಭಾವಾರ್ಥ:-** ಯಾವ ವಿದ್ವಾಂಸನು ಪುರುಷಾರ್ಥದಿಂದ ಅತುಲೈಶ್ವರ್ಯವನ್ನು ಪಡೆಯುವನೋ ಅವನು ಅನ್ಯರಿಗೂ ಕೊಡುವವನಾಗಿ ಎಲ್ಲರಿಗೂ ಸ್ವಾಮಿಯಾಗುವನು.

ರಾಜನ ಕರ್ತವ್ಯವನ್ನಿಲ್ಲಿ ಹೇಳಲಾಗಿದೆ.

**ನ ತ್ವಾ ವರಂತೇ ಅನ್ಯಥಾ ಯದ್ದಿತ್ಸಸಿ ಸ್ತುತೋ ಮಘಮ್ । ಸ್ತೋತೃಭ್ಯ ಇಂದ್ರ ಗಿರ್ವಣಃ ॥೮॥**

**ಪದಾರ್ಥ:-** [ಗಿರ್ವಣಃ] ಉತ್ತಮ ಮಾತುಗಳಿಂದ ಗೌರವ ಪಡೆದ ಇಂದ್ರ, ರಾಜನೇ! [ಯತ್] ಯಾವ ನೀನು [ಸ್ತುತಃ] ಪ್ರಶಂಸೆ ಮಾಡಲ್ಪಟ್ಟು [ಸ್ತೋತೃಭ್ಯಃ] ಪ್ರಶಂಸೆ ಮಾಡುವವರಿಗೆ [ಮಘಂ] ಧನವನ್ನು [ದಿತ್ಸಸಿ] ಕೊಡಲು ಬಯಸುವೆಯೋ [ತ್ವಾ] ಅಂತಹ ನಿನಗೆ [ಅನ್ಯಥಾ] ಬೇರೆ ರೀತಿಯಿಂದ [ನ ವರಂತೇ] ವರಿಸುವುದಿಲ್ಲ.

**ಭಾವಾರ್ಥ:-** ಈ ಪ್ರಪಂಚದಲ್ಲಿ ಯಾರು ಕೊಡುಗೈ ದಾನಿಯೋ ಅವನೇ ಎಲ್ಲರಿಗೂ ಪ್ರಿಯನಾಗುವನು; ಯಾರೂ ಅವನನ್ನು ವಿರೋಧಿಸುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭಿ ತ್ವಾ ಗೋತಮಾ ಗಿರಾ-ನೂಷತ ಪ್ರ ದಾವನೇ । ಇಂದ್ರ ವಾಜಾಯ ಘೃಷ್ವಯೇ ॥೯॥**

**ಪದಾರ್ಥ:-** [ಇಂದ್ರ] [ಗೋತಮಾಃ] ರಾಜನೇ! ಶ್ರೇಷ್ಠನುಡಿಗಳಿರುವ ಜನರು [ಗಿರಾ] ಮಾತಿನಿಂದ [ತ್ವಾ] ನಿನ್ನನ್ನು [ಅಭಿ, ಅನೂಷತ್] ಎಲ್ಲರೀತಿಯಿಂದ ಸ್ತುತಿ ಮಾಡುವರು. [ವಾಜಾಯ] ವಿಜ್ಞಾನ, ಅನ್ನಾದಿಗಳಿಗೆ [ಘೃಷ್ವಯೇ] ಶುಚಿಗೊಳಿಸುವುದಕ್ಕಾಗಿ [ದಾನವೇ] ದಾತೃವಿಗೆ [ಪ್ರ] ಪ್ರಕೃಷ್ಟ ಸ್ತುತಿಮಾಡು.

**ಭಾವಾರ್ಥ:-** ವಿದ್ಯಾವಂತರು ಯಾರನ್ನು ಪ್ರಶಂಸಿಸುವರೋ ಅವರೇ ಪ್ರಶಂಸಾರ್ಹರೆಂದು ತಿಳಿಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ತೇ ವೋಚಾಮ ವೀರ್ಯಾ (ಆ) ೩ ಯಾ ಮಂದಸಾನ ಆರುಜಃ ।**
**ಪುರೋ ದಾಸೀರಭೀತ್ಯ ॥೧೦॥**

**ಪದಾರ್ಥ:-** [ಮಂದಸಾನಃ] ಬಯಸುವವನಾದ ನೀನು [ಯಾಃ] ಯಾರು [ದಾಸೀಃ] ಸೇವಕಿಯರಿಗೆ ಸದೃಶವಾಗಿ [ಆ, ಅರುಜಃ] ಎಲ್ಲಾ ರೀತಿಯಿಂದ ರೋಗಿಷ್ಠರಾಗಿ [ಪುರಃ] ನಗರಗಳನ್ನು [ಅಭೀತ್ಯ] ಆವರಿಸಿದವರಾಗುವರೋ ಅವರನ್ನು ಜಯಿಸುವ [ತೇ] ನಿನ್ನ [ವೀರ್ಯಾ] ಪರಾಕ್ರಮ ಕರ್ಮಗಳ [ಪ್ರ] [ವೋಚಾಮ] ಪ್ರಕರ್ಷತೆಯನ್ನು ನಾವು ಉಪದೇಶಿಸುವೆವು.

**ಭಾವಾರ್ಥ:-** ಯಾವ ರಾಜನು ಶತ್ರುಗಳನ್ನು ಪರಾಜಯಗೊಳಿಸುವನೋ ಅವನೇ ರಾಜ್ಯವಾಳಲು ಸಮರ್ಥನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಾ ತೇ ಗೃಣಂತಿ ವೇಧಸೋ ಯಾನಿ ಚಕರ್ಥ ಪೌಂಸ್ಯಾ । ಸುತೇಷ್ವಿಂದ್ರ ಗಿರ್ವಣಃ ॥೧೧॥**

**ಪದಾರ್ಥ:-** **[ಗಿರ್ವಣಃ]** ಉತ್ತಮ ನುಡಿಗಳಿಂದ ಸ್ತುತಿಸಲಾದ **[ಇಂದ್ರ]** ರಾಜನೇ! **[ಯಾನಿ]** ಯಾವವು **[ವೇಧಸಃ]** ಬುದ್ಧಿವಂತನಾದ **[ತೇ]** ನಿನ್ನ **[ಪೌಂಸ್ಯಾ]** ಪುರುಷಯೋಗ್ಯ ಬಲದಿಂದ **[ಗೃಣಂತಿ]** ಸ್ತುತಿಸುವರೋ **[ಸುತೇಷು]** ತಯಾರಿಸಿದ ಪದಾರ್ಥಗಳಲ್ಲಿ **[ಚಕರ್ಥ]** ಅವರನ್ನೂ ಒಂದುಗೂಡಿಸುವೆ. **[ತಾಃ]** ಅವರನ್ನೂ ಸ್ತುತಿಸುವೆವು.

**ಭಾವಾರ್ಥ:-** ನಿನ್ನಲ್ಲಿ ಯಾವ ಪ್ರಶಂಸಾರ್ಹ ಕರ್ಮಗಳಿರುವವೋ ಅವನ್ನು ನಾವೂ ಪ್ರಶಂಸಿಸುವೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅವೀವೃಧಂತ ಗೋತಮಾ ಇಂದ್ರ ತ್ವೇ ಸ್ತೋಮವಾಹಸಃ । ಐಷು ಧಾ ವೀರವದ್ಯಶಃ ॥೧೨॥**

**ಪದಾರ್ಥ:-** **[ಇಂದ್ರ]** ವಿದ್ಯಾವಂತನೇ! **[ಸ್ತೋಮವಾಹಸಃ]** ಪ್ರಶಂಸಾರ್ಹರನ್ನಾಗಿಸುವವರು **[ಗೋತಮಾಃ]** ವಿದ್ವಾಂಸರು **[ತ್ವೇ]** ನಿನ್ನಲ್ಲಿ **[ವೀರವತ್]** ವೀರಪುರುಷರಿರುವಂತಹ **[ಯಶಃ]** ಧನ-ಕೀರ್ತಿಗಳನ್ನು **[ಅವೀವೃಧಂತ]** ಅಭಿವೃದ್ಧಿಗೊಳಿಸುವರು. **[ಏಷು]** ಇವರಲ್ಲಿ ನೀನು **[ಆ, ದಾಃ]** ಅದನ್ನೇ ಪೂರ್ಣಗೊಳಿಸು.

**ಭಾವಾರ್ಥ:-** ರಾಜನೇ! ಯಾರು ಸದಾಚರಣೆಯಿಂದ ನಿನ್ನ ಕೀರ್ತಿಯನ್ನು ಅಭಿವೃದ್ಧಿಗೊಳಿಸುವರೋ ನೀನು ಅವರ ಕೀರ್ತಿಯನ್ನು ಅಭಿವೃದ್ಧಿಗೊಳಿಸು.

ಯಾವ ಈಶ್ವರನ ಉಪಾಸನೆ ಮಾಡಬೇಕೆಂಬ ವಿಷಯವನ್ನು ಹೇಳಿದೆ.

**ಯಚ್ಚಿದ್ಧಿ ಶಶ್ವತಾಮಸೀ-ಂದ್ರ ಸಾಧಾರಣಸ್ತ್ವಮ್ । ತಂ ತ್ವಾ ವಯಂ ಹವಾಮಹೇ ॥೧೩॥**

**ಪದಾರ್ಥ:-** **[ಇಂದ್ರ]** ಜಗದೀಶ್ವರನೇ! **[ಯತ್]** ಯಾವ **[ತ್ವಾ]** ನೀನು **[ಶಶ್ವತಾಂ]** ಶಾಶ್ವತವಾದ ಪೃಥಿವ್ಯಾದಿ ಪದಾರ್ಥಗಳಲ್ಲಿ **[ಸಾಧಾರಣಃ]** ಸಾಮಾನ್ಯವಾಗಿ **[ಅಸಿ]** ನೀನು ವ್ಯಾಪ್ತನಾಗಿರುವೆ. **[ತಂ, ಚಿತ್]** ಅವೆಲ್ಲವನ್ನೂ **[ತ್ವಾ]** ನಿನ್ನನ್ನು **[ಹಿ]** ನಿಶ್ಚಯವಾಗಿ **[ವಯಂ]** ನಾವು **[ಹವಾಮಹೇ]** ಆಶ್ರಯಿಸುವೆವು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು ಅನಾದಿಕಾಲದಿಂದಲೂ ಪ್ರಸಿದ್ಧವಾದ ಪ್ರಾಕೃತಿಕ ಪದಾರ್ಥಗಳಲ್ಲಿ ನೆಲೆಸಿರುವನು. ಅವನೇ ಅವುಗಳ ಸ್ವಾಮಿ, ಅವುಗಳ ಧಾರಕನು. ಕಾರ್ಯ-ಕಾರಣಗಳ ವ್ಯವಸ್ಥಾಪಕನು ಅಂತರ್ಯಾಮಿಯಾದ ಅವನ ಉಪಾಸನೆ ಮಾಡಿರಿ.

ಯಾರು ಸುಖವನ್ನು ವೃದ್ಧಿಪಡಿಸಿಕೊಳ್ಳುವರು ಎಂಬುದನ್ನು ಹೇಳಿದೆ.

**ಅರ್ವಾಚೀನೋ ವಸೋ ಭವಾ-ಸ್ಮೇ ಸು ಮತ್ಸ್ವಾಂಧಸಃ । ಸೋಮಾನಾಮಿಂದ್ರ ಸೋಮಪಾಃ ॥೧೪॥**

**ಪದಾರ್ಥ:-** **[ವಸೋ]** ಸರ್ವತ್ರ ನೆಲೆಸಿರುವವನೇ! **[ಇಂದ್ರ]** ಧನವಂತನೇ! **[ಅರ್ವಾಚೀನಃ]** ಇಂದಿನ ಕಾಲದಲ್ಲಿರುವ **[ಸೋಮಪಾಃ]** ಧನಸಂರಕ್ಷಕನಾದ ನೀನು **[ಅಸ್ಮೆ]** ನಮ್ಮೆಲ್ಲರಿಗೆ **[ಅಂಧಸಃ]** ಅನ್ನಾದಿಗಳನ್ನು ಮತ್ತು **[ಸೋಮಾನಾಂ]** ರಸಾದಿಗಳ **[ಭವ]** ರಕ್ಷಕನಾಗು. **[ಸು, ಮತ್ಸ್ವ]** ಆನಂದಿಸು.

**ಭಾವಾರ್ಥ:-** ಯಾರು ರಾಜ ಹಾಗೂ ಪ್ರಜೆಗಳ ಪದಾರ್ಥಗಳನ್ನು ಯೋಗ್ಯರೀತಿಯಲ್ಲಿ ರಕ್ಷಿಸುವರೋ ಅವರು ಮುಂದಿನ ದಿನಗಳಲ್ಲಿ ತಮ್ಮ ಸುಖವನ್ನೂ ಅಭಿವೃದ್ಧಿ ಪಡಿಸಿಕೊಳ್ಳುವರು.

ರಾಜನ ಯೋಗ್ಯತೆಯನ್ನು, ಕರ್ತವ್ಯವನ್ನು ಹೇಳಿದೆ.

**ಅಸ್ಮಾಕಂ ತ್ವಾ ಮತೀನಾ-ಮಾ ಸ್ತೋಮ ಇಂದ್ರ ಯಚ್ಛತು ।**
**ಅರ್ವಾಗಾ ವರ್ತಯಾ ಹರೀ ॥೧೫॥**

**ಪದಾರ್ಥ:-** [ಇಂದ್ರ] ರಾಜನೇ! [ಅಸ್ಮಾಕಂ] ನಮ್ಮ [ಮತೀನಾಂ] ವಿಚಾರಶೀಲ ಮನುಷ್ಯರ [ಸ್ತೋಮಃ] ಸ್ತುತಿಯು [ತ್ವಾ] ನಿನ್ನನ್ನು [ಆ, ಯಚ್ಛತು] ತಲುಪಲಿ. [ಅರ್ವಾಕ್] ಮತ್ತು [ಹರೀ] ಅಗ್ನಿ, ಜಲ, ಅಶ್ವ ಯಾವುದಾದರೂ ಒಂದು ಶಕ್ತಿಯನ್ನು [ಆ, ವರ್ತಯ] ಉತ್ತಮ ರೀತಿಯಲ್ಲಿ ಪ್ರವೃತ್ತವಾಗುವಂತೆ ಮಾಡು.

**ಭಾವಾರ್ಥ:-** ಯಾವ ರಾಜನು ವಿದ್ಯಾವಿನಯ ಸಂಪನ್ನರಿಂದ ಪ್ರಶಂಸೆಗೊಳಗಾಗುವನೋ ಅವನೇ ತನ್ನ ಪ್ರಜೆಗಳನ್ನು ನಿಯತಮಾರ್ಗಗಳಲ್ಲಿ ವರ್ತಿಸುವಂತೆ ಮಾಡುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುರೋಳಾಶಂ ಚ ನೋ ಘಸೋ ಜೋಷಯಾಸೇ ಗಿರಶ್ಚ ನಃ ।**
**ವಧೂಯುರಿವ ಯೋಷಣಾಮ್ ॥೧೬॥**

**ಪದಾರ್ಥ:-** [ನಃ] ನಮ್ಮೆಲ್ಲರಿಗೆ [ಘಸಃ] ಭೋಗ ಯೋಗ್ಯವಾದ [ಪುರೋಳಾಶಂ ಚ] ಸಂಸ್ಕರಿಸಲಾದ ಅನ್ನ ವಿಶೇಷವನ್ನು [ಜೋಷಯಾಸೇ] ಸೇವಿಸುವವರನ್ನಾಗಿ ಮಾಡು. [ಯೋಷಣಾಂ] ಅಬಲೆಯರನ್ನು [ವಧೂಯುರಿವ] ತನ್ನ ವಧುವನ್ನು ಬಯಸುವವನ ರೀತಿಯಲ್ಲಿ [ನಃ] ನಮ್ಮ [ಗಿರಃ] ಮಾತುಗಳನ್ನು [ಚ] ಸೇವಿಸು, ಸೇವಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ರಾಜನು ತನ್ನ ರಾಣಿಯನ್ನು ಬಯಸುವ ರೀತಿಯಲ್ಲೇ ಪ್ರಜೆಗಳ ವಾಣಿಯನ್ನೂ ಸ್ವೀಕರಿಸಬೇಕು. ಸಂಪದ್ಧಾರಕನಾಗಿ ಪ್ರಜಾಪಾಲಕನಾಗಬೇಕು. ಅಂದರೆ ಅವನ ರಾಜ್ಯವು ಗೌರವಾರ್ಹವಾಗುತ್ತದೆ.

ಐಶ್ವರ್ಯ ಪ್ರಾಪ್ತಿಯ ವಿಷಯವನ್ನಿಲ್ಲಿ ಹೇಳಲಾಗುತ್ತದೆ.

**ಸಹಸ್ರಂ ವ್ಯತೀನಾಂ ಯುಕ್ತಾನಾಮಿಂದ್ರಮೀಮಹೇ । ಶತಂ ಸೋಮಸ್ಯ ಖಾರ್ಯಃ ॥೧೭॥**

**ಪದಾರ್ಥ:-** [ವ್ಯತೀನಾಂ] ಗಮನ ಮಾಡುವ [ಯುಕ್ತಾನಾಂ] ಸಾವಧಾನಯುಕ್ತ ಮನುಷ್ಯರ [ಸಹಸ್ರಂ] ಸಾವಿರ [ಸೋಮಸ್ಯ] ಐಶ್ವರ್ಯದ [ಖಾರ್ಯಂ] [ಶತಂ] ಕಾರ್ಯಪರಿಮಾಣ ನೂರು ಬಾರಿ ಅಳೆದಷ್ಟು ಅನ್ನವನ್ನು [ಈ ಮಹೇ] ಯಾಚಿಸುವೆನು.

**ಭಾವಾರ್ಥ:-** ಯಾರು ಶ್ರೀಮಂತರ ಬಳಿಗೆ ಹೋಗಿ ಯಾಚನೆ ಮಾಡುವರೋ ಅವರು ಅಲ್ಪವನ್ನೇ ಪಡೆಯುವರು. ಯಾರು ಯಾಚನೆ ಮಾಡುವುದಿಲ್ಲವೋ ಅವರು ಅತಿಶಯ ದ್ರವ್ಯವನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಹಸ್ರಾ ತೇ ಶತಾ ವಯಂ ಗವಾಮಾ ಚ್ಯಾವಯಾಮಸಿ । ಅಸ್ಮತ್ರಾ ರಾಧ ಏತು ತೇ ॥೧೮॥**

**ಪದಾರ್ಥ:-** **[ತೇ]** ನಿನ್ನ **[ರಾಧಃ]** ಧನವು **[ಅಸ್ಮತ್ರಾ]** ನಮಗೆ **[ಏತು]** ಪ್ರಾಪ್ತವಾಗಲಿ. **[ತೇ]** ನಿನ್ನ **[ಗವಾಂ]** ಗೋವುಗಳ **[ಸಹಸ್ರಾ]** ಸಾವಿರಾರು **[ಶತಾ]** ನೂರಾರು ಸಮೂಹಗಳನ್ನು **[ವಯಂ]** ನಾವು **[ಆ]** **[ಚ್ಯಾವಯಾಮಸಿ]** ಪ್ರಾಪ್ತಗೊಳಿಸುವೆವು.

**ಭಾವಾರ್ಥ:-** ಧನಾಢ್ಯನೇ! ನಿನ್ನಿಂದ ನಾವು ಈ ಗೋಧನ ಹಾಗೂ ಅನ್ಯ ಪದಾರ್ಥಗಳನ್ನು ಪಡೆದು ಅನ್ಯರಿಗೂ ಅದನ್ನು ಕೊಡುತ್ತೇವೆ ಹಾಗೂ ನಮ್ಮ ಧನವನ್ನೂ ನಿನಗೆ ಕೊಡುತ್ತೇನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಶ ತೇ ಕಲಶಾನಾಂ ಹಿರಣ್ಯಾನಾಮಧೀಮಹಿ । ಭೂರಿದಾ ಅಸಿ ವೃತ್ರಹನ್ ॥೧೯॥**

**ಪದಾರ್ಥ:-** **[ವೃತ್ರಹನ್]** ಶತ್ರುನಾಶಕನೇ! ನೀನು **[ಭೂರಿದಾಃ]** ಬಹುಜನರಿಗೆ ಕೊಡುವವನು **[ಅಸಿ]** ಆಗಿರುವೆ. ಆದ್ದರಿಂದ **[ತೇ]** ನಿನ್ನ **[ಹಿರಣ್ಯಾನಾಂ]** ಸುವರ್ಣದ **[ಕಲಶಾನಾಂ]** ಕಲಶಗಳ **[ದಶ]** ಹತ್ತರ ಸಮೂಹವನ್ನು **[ಅಧೀಮಹಿ]** ನಾವು ಪಡೆಯುವೆವು.

**ಭಾವಾರ್ಥ:-** ಮನುಷ್ಯನು ದಾನಿಯಾದರೆ ಅವನಿಗೆ ಬಹುಜನ ಸ್ನೇಹಿತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭೂರಿದಾ ಭೂರಿ ದೇಹಿ ನೋ ಮಾ ದಭ್ರಂ ಭೂರ್ಯಾ ಭರ ।**
**ಭೂರಿ ಘೇದಿಂದ್ರ ದಿತ್ಸಸಿ ॥೨೦॥**

**ಪದಾರ್ಥ:-** **[ಇಂದ್ರ]** ದಾತೃವೇ! ನೀನು **[ನಃ]** ನಮ್ಮೆಲ್ಲರಿಗೆ **[ಭೂರಿ]** ಬಹಳಷ್ಟು **[ದಿತ್ಸಸಿ]** ಕೊಡಲು ಇಚ್ಛಿಸುವೆ. **[ಭೂರಿದಾಃ]** ಬಹುದ್ರವ್ಯ ದಾತೃವಾದ ನೀನು **[ಭೂರಿ]** **[ದೇಹಿ]** ನಮಗೆ ಬಹು ದ್ರವ್ಯವನ್ನು ಕೊಡು. **[ಭೂರೀ]** **[ಆ, ಭರ]** ನೀನೂ ಬಹು ದ್ರವ್ಯಧಾರಣ ಮಾಡು. **[ದಭ್ರಂ]** **[ಘ]** ಅಲ್ಪವನ್ನೇ **[ಮಾ]** ಕೊಡದಿರು **[ಇತ್]** ಮತ್ತು ಅಲ್ಪವನ್ನು ಧಾರಣ ಮಾಡಬೇಡ.

**ಭಾವಾರ್ಥ:-** ಯಾರು ಬಹು ದ್ರವ್ಯಗಳನ್ನು ಕೊಡುವನೋ ಅವನು ಎಲ್ಲೆಲ್ಲೂ ಕೀರ್ತಿ ಪಡೆಯುವನು. ಅಲ್ಪದ್ರವ್ಯದಾನಿಯು ಅವನಂತೆ ಕೀರ್ತಿ ಪಡೆಯಲಾರನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭೂರಿದಾ ಹ್ಯಸಿ ಶ್ರುತಃ ಪುರುತ್ರಾ ಶೂರ ವೃತ್ರಹನ್ । ಆ ನೋ ಭಜಸ್ವ ರಾಧಸಿ ॥೨೧॥**

**ಪದಾರ್ಥ:-** **[ಶೂರ]** ಪರಾಕ್ರಮಿಯೂ **[ವೃತ್ರಹನ್]** ದುಷ್ಟನಾಶಕನೂ ಆದ ರಾಜನೇ! **[ಹಿ]** ನೀನೇ **[ಭೂರಿದಾಃ]** ಬಹುದಾತೃ **[ಅಸಿ]** ಆಗಿರುವೆ. **[ಪುರುತ್ರಾ]** ಬಹುಜನರಿಂದ ಪ್ರತಿಷ್ಠೆ ಪಡೆದವನು **[ಶ್ರುತಃ]** ಎಲ್ಲೆಲ್ಲೂ ಕೀರ್ತಿ ಪಡೆದವನು **[ನಃ]** ನಮ್ಮನ್ನು **[ರಾಧಸಿ]** ಉತ್ತಮ ರೀತಿಯಲ್ಲಿ ನಡೆಸಿಕೊಳ್ಳುವೆ. ಆದ್ದರಿಂದಲೇ **[ಆ, ಭಜಸ್ವ]** ಚೆನ್ನಾಗಿ ನೋಡಿಕೋ.

**ಭಾವಾರ್ಥ:-** ಈ ಪ್ರಪಂಚದಲ್ಲಿ ಯಾರು ಬಹು ದಾನ ಮಾಡುವನೋ ಅವನೇ ಈ ಜಗತ್ತಿನಲ್ಲಿ ಕೀರ್ತಿವಂತನಾಗುವನು.

ಅಧ್ಯಪಕೋಪದೇಶಕರ ವಿಷಯವನ್ನು ಹೇಳಲಾಗುತ್ತದೆ.

**ಪ್ರ ತೇ ಬಭ್ರೂ ವಿಚಕ್ಷಣ ಶಂಸಾಮಿ ಗೋಷಣೋ ನಪಾತ್ ।**

**ಮಾ ಭ್ಯಾಂ ಗಾ ಅನು ಶಿಶ್ರಥಃ ॥೨೨॥**

**ಪದಾರ್ಥ:-** [ಗೋಷಣಃ] ಗೊವುಗಳನ್ನು ಯಾಚಿಸುವವನು [ವಿಚಕ್ಷಣಃ] ಚೆನ್ನಾಗಿ ಬಲ್ಲವನು [ಬಭ್ರೂ] ವಿದ್ಯಾವಂತ ಅಧ್ಯಾಪಕೋಪದೇಶಕರನ್ನು [ಪ್ರ, ಶಂಸಾಮಿ] ಪ್ರಶಂಸೆ ಮಾಡುವೆನು. [ತೇ] ನಿನ್ನ [ಆಭ್ಯಾಂ] ಇವರೊಂದಿಗೆ [ನಪಾತ್] ಪತನವಾಗದ [ಗಾಃ] ಪೃಥಿವಿಯನ್ನು [ಮಾ, ಅನು, ಶಿಶ್ರಥಃ] ಶಿಥಿಲಗೊಳಿಸದಿರು.

**ಭಾವಾರ್ಥ:-** ಜಿಜ್ಞಾಸುಗಳೇ! ನೀವು ಅಧ್ಯಾಪಕರನ್ನು ಸಮೀಪಿಸಿ, ವಿದ್ಯೋಪದೇಶಗಳನ್ನು ಶೀಘ್ರಗ್ರಹಣ ಮಾಡಿರಿ. ಆಲಸ್ಯತೋರಬೇಡಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕನೀನಕೇವ ವಿದ್ರಧೇ ನವೇ ದ್ರುಪದೇ ಅರ್ಭಕೇ । ಬಭ್ರೂ ಯಾಮೇಷು ಶೋಭೇತೇ ॥೨೩॥**

**ಪದಾರ್ಥ:-** [ಬಭ್ರೂ] ಅದ್ಯಾಪಕೋಪದೇಶಕರೇ! [ಯಾಮೇಷು] ಜಾವಗಳಲ್ಲಿ [ಕನೀನಕೇವ] ಸುಂದರತೆಗೆ ಸದೃಶ [ನವೇ] ನೂತನ [ವಿದ್ರಧೇ] ದೃಢವಾದ [ದ್ರುಪದೇ] ಧನ ಅಥವಾ ದೃಢ ಪ್ರದೇಶ [ಅರ್ಭಕೇ] ಚಿಕ್ಕ ಬಾಲಕನಿಗಾಗಿ [ಶೋಭತೇ] ಶೋಭಾಯಮಾನನಾಗುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ವಿದ್ವಾಂಸರು ಅಧಿಕ ಅಥವಾ ನ್ಯೂನ ವಿಜ್ಞಾನದಲ್ಲಿ ಸುಶೋಭಿತರೋ ಹಾಗೇ ಕಾಮನೆಯಲ್ಲೂ ಅವರೇ ಜಗತ್ತಿನಲ್ಲಿ ಕಲ್ಯಾಣಕರರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರಂ ಮ ಉಸ್ರಯಾಮ್ಣೇಽರಮನುಸ್ರಯಾಮ್ಣೇ । ಬಭ್ರೂ ಯಾಮೇಷ್ವಸ್ರಿಧಾ ॥೨೪॥**

**ಪದಾರ್ಥ:-** [ಅಸ್ರಿಧಾಃ] ಅಹಿಂಸಕನು [ಬಭ್ರೂಃ] ಸತ್ಯಧಾರಕನು [ಯಾಮೇಷು] ಜಾವಗಳಲ್ಲಿ [ಉಸ್ರಯಾಮ್ಣೇ] ಕಿರಣಗಳಂತೆ ವಾಹನದಿಂದ ಹೋಗುವವನು [ಮೇ] ನನಗೆ [ಅರಂ] ಸಮರ್ಥ [ಅನುಸ್ರಯಾಮ್ಣೇ] ಶೀತಪ್ರದೇಶಕ್ಕೆ ಹೋಗುವವನು [ಅರಂ] ಸಮರ್ಥನಾಗುವನು.

**ಭಾವಾರ್ಥ:-** ಯಾವ ಅಧ್ಯಾಪಕೋಪದೇಶಕರು ಶೀತೋಷ್ಣದೇಶ ನಿವಾಸಿಗಳು ನನಗೆ ವಿದ್ಯೆಯನ್ನು ಬೋಧಿಸುವರೋ ಅವರು ಸದಾ ನನ್ನಿಂದ ಸತ್ಕಾರಾರ್ಹರಾಗುವರು.

ಈ ಸೂಕ್ತದಲ್ಲಿ ಇಂದ್ರ, ರಾಜ, ಅಧ್ಯಾಪಕೋಪದೇಶಕರುಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಮುವತ್ತೆರಡನೆಯ ಸೂಕ್ತ ಸಮಾಪ್ತ

## ॥ ಇತಿ ಷಷ್ಠೋಽಧ್ಯಾಯಃ ॥

# ಸಪ್ತಮೋಽಧ್ಯಾಯಃ

## ಚತುರ್ಥೋಽನುವಾಕಃ (ಸೂಕ್ತ ೩೩-೪೫)

### ಸೂಕ್ತ ೩೩

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಋಭವೋ ದೇವತಾ । ೧ ಭುರಿಕ್ತ್ರಿಷ್ಟುಪ್, ೨, ೪, ೫, ೧೧ ಭುರಿಕ್ತ್ರಿಷ್ಟುಪ್, ೩, ೬, ೧೦ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೭, ೮ ಭುರಿಕ್ಪಂಕ್ತಿಃ, ೯ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ವಿದ್ಯಾವಂತರ ವಿಷಯವನ್ನಿಲ್ಲಿ ಹೇಳಿದೆ.

**ಪ್ರ ಋಭುಭ್ಯೋ ದೂತಮಿವ ವಾಚಮಿಷ್ಯ ಉಪಸ್ತಿರೇ ಶ್ವೈತರೀಂ ಧೇನುಮೀಳೇ ।**
**ಯೇ ವಾತಜೂತಾಸ್ತರಣಿಭಿರೇವೈಃ ಪರಿ ದ್ಯಾಂ ಸದ್ಯೋ ಅಪಸೋ ಬಭೂವುಃ ॥೧॥**

**ಪದಾರ್ಥಃ-** [ಯೇ] ಯಾರ [ವಾತಜೂತಾಃ] ಗಾಳಿಯಲ್ಲಿ ಹಾರಾಡುವ ತ್ರಸರೇಣ್ವಾದಿ ಪದಾರ್ಥಗಳು [ಏವೇಃ] ವೇಗಾದಿ ಗುಣಗಳಿಂದ [ತರಣೀಭಿಃ] ತೇಲುವ ಕ್ರಿಯೆಯಿಂದ [ಸದ್ಯಃ] ಶೀಘ್ರ [ದ್ಯಾಂ] ಆಕಾಶವನ್ನು ಮತ್ತು [ಅಪಸಃ] ಕಾರ್ಯಗಳನ್ನು [ಪರಿಬಭೂವುಃ] ರೂಪಾಂತರಗೊಳಿಸುತ್ತವೆಯೋ ಅವುಗಳಿಂದ [ಉಪಸ್ತರೇ] ವಿಸ್ತಾರಗೊಳಿಸಲು [ಋಭುಭ್ಯಃ] ಬುದ್ಧಿವಂತರಿಗೆ [ದೂತಮಿವ] ಸೇವಕನಂತೆ [ಶ್ವೇತರೀಂ] ಶುದ್ಧವಾದ [ಧೇನುಂ] ಧಾರಣ ಮಾಡುವ [ವಾಚಂ] ವಾಣಿಯನ್ನು [ಪ್ರ ಇಷ್ಯೇ] ಪಡೆಯುವೆನು. [ಈಳೇ] ಸ್ತುತಿ ಮಾಡುವೆನು.

**ಭಾವಾರ್ಥಃ-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ವಾಯುವು ತ್ರಸರೇಣುಗಳನ್ನು ಪಡೆಯುವಂತೆ ಯಾರು ವಿದ್ಯೆಯನ್ನು ಪಡೆದು ಪುರುಷಾರ್ಥ ಸಾಧಕರಾಗುವರೋ ಅವರು ವಿದ್ಯಾವಂತರಿಗೆ ಯೋಗ್ಯವಾದ ಶ್ರೇಷ್ಠ ವಾಣಿಯನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದಾರಮಕ್ರನ್ನೃಭವಃ ಪಿತೃಭ್ಯಾಂ ಪರಿವಿಷ್ಟೀ ವೇಷಣಾ ದಂಸನಾಭಿಃ ।**
**ಆದಿದ್ದೇವಾನಾಮುಪ ಸಖ್ಯಮಾಯನ್ ಧೀರಾಸಃ ಪುಷ್ಟಿಮವಹನ್ ಮನಾಯೈ ॥೨॥**

**ಪದಾರ್ಥಃ-** [ಋಭವಃ] ಬುದ್ಧಿವಂತರು [ಯದಾ] ಯಾವಾಗ [ಪಿತೃಭ್ಯಾಂ] ತಂದೆ ತಾಯಿಯರಿಂದ [ಪರಿವಿಷ್ಟೀ] ವಿದ್ಯಾಭ್ಯಾಸದ ಕ್ರಿಯೆ ಮತ್ತು [ವೇಷಣಾ] ಸರ್ವತ್ರ ವ್ಯಾಪ್ತ ಪದಾರ್ಥದಿಂದ [ದಂಸನಾಭಿಃ] ಉತ್ತಮ ಕರ್ಮಗಳಿಂದ [ದೇವಾನಾಂ] ವಿದ್ವಾಂಸರ [ಸಖ್ಯಂ] ಸ್ನೇಹವನ್ನು [ಅರಂ] ಸಮಗ್ರವಾಗಿ [ಅಕ್ರನ್] ಮಾಡುವರು. [ಆತ್, ಇತ್] ಆಗಲೇ [ಧೀರಾಸಃ] ಧ್ಯಾನವಂತರಾಗಿ [ಮನಾಯೈ] ಮಾನ್ಯ ಮಾಡುವಂತಹ ವಿದ್ಯೆಗಾಗಿ [ಉಪ] [ಆಯನ್] ಬುದ್ಧಿಯನ್ನು ಪಡೆಯುವರು. [ಪುಷ್ಟಿಂ] ದೇಹಪುಷ್ಟಿಯನ್ನು [ಅದಹನ್] ಪಡೆಯುವರು.

**ಭಾವಾರ್ಥಃ-** ಯಾರು ಬಾಲ್ಯಾವಸ್ಥೆಯಲ್ಲಿ ತಂದೆ-ತಾಯಿಯರಿಂದ ಶಿಕ್ಷಣವನ್ನು ಪಡೆದು ಕೌಮಾರಾವಸ್ಥೆಯಲ್ಲಿ ಆಚಾರ್ಯರಿಂದ ವಿದ್ಯಾಗ್ರಹಣ ಮಾಡುವರೋ ಅವರು ವಿದ್ಯಾವಂತರೂ, ಬುದ್ಧಿವಂತರೂ, ಧಾರ್ಮಿಕರೂ ಆಗಿ ಬಹುಕಾಲ ಬದುಕುವರು, ಲೋಕಕಲ್ಯಾಣ ಮಾಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುನರ್ಯೇ ಚಕ್ರುಃ ಪಿತರಾ ಯುವಾನಾ ಸನಾ ಯೂಪೇವ ಜರಣಾ ಶಯಾನಾ । ತೇ**
**ವಾಜೋ ವಿಭ್ವಾಁ ಋಭುರಿಂದ್ರವಂತೋ ಮಧುಪ್ಸರಸೋ ನೋಽವಂತು ಯಜ್ಞಮ್ ॥೩॥**

**ಪದಾರ್ಥ:-** [**ಯೇ**] ಯಾರು [**ಜರಣಾ**] ವೃದ್ಧಾಪ್ಯಪಡೆದು [**ಶಯಾನಾ**] ಶಯನ ಮಾಡುವವರಾಗಿ [**ಸನಾ**] ಉತ್ತಮ ಸೇವೆಯಿಂದ [**ಪಿತರಾ**] ತಂದೆ-ತಾಯಿಯರ [**ಯುವಾನಾ**] ಯುವಕರು [**ಯೂಪೇವ**] ಆಧಾರ ಸ್ತಂಬದಂತೆ [**ಪುನಃ**] ಮತ್ತೆ ಸೇವೆಯನ್ನು [**ಚಕ್ರುಃ**] ಮಾಡುವರೋ [**ತೇ**] ಅವರೇ [**ಮಧುಪ್ಸರಸಃ**] ಸುಂದರರೂಪ ಮತ್ತು [**ಇಂದ್ರವಂತಃ**] ಐಶ್ವರ್ಯವನ್ನೂ ಪಡೆದವರಾಗಿ [**ನಃ**] ನಮ್ಮ [**ಯಜ್ಞಂ**] ಅಧ್ಯಾಪನ-ಅಧ್ಯಯನವೆಂಬ ಯಜ್ಞವನ್ನು [**ಅದಂತು**] ರಕ್ಷಣೆ ಮಾಡುವರು. [**ವಿಭ್ವಾ**] ವ್ಯಾಪಕನಾದ ಜಗದೀಶ್ವರನಿಂದ [**ವಾಜಃ**] ಜ್ಞಾನವಂತರೂ [**ಋಭುಃ**] ವಿದ್ಯಾವಂತರೂ ಆಗುವರು.

**ಭಾವಾರ್ಥ:-** ಜನನೀ-ಜನಕರು ತಮ್ಮ ಸಂತಾನವನ್ನು ಬಹುಕಾಲದವರೆಗೆ ಬೋಧಿಸಿ ವಿದ್ಯಾವಂತ ಹಾಗೂ ಗುಣವಂತರಾಗಿ ಮಾಡುವರೋ ಅವರು ಆ ಸಂತಾನದವರಿಂದ ಸೇವೆಗೊಳಗಾಗಿ ವೃದ್ಧಾವಸ್ಥೆಯಲ್ಲೂ ಯುವಕರಂತಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯತ್ ಸಂವತ್ಸಮೃಭವೋ ಗಾಮರಕ್ಷನ್ ಯತ್ ಸಂವತ್ಸಮೃಭವೋ ಮಾ ಅಪಿಂಶನ್ ।**
**ಯತ್ ಸಂವತ್ಸಮಭರನ್ ಭಾಸೋ ಅಸ್ಯಾ-ಸ್ತಾಭಿಃ ಶಮೀಭಿರಮೃತತ್ವಮಾಶುಃ ॥೪॥**

**ಪದಾರ್ಥ:-** [**ಯತ್**] ಯಾವ [**ಋಭವಃ**] ಬುದ್ಧಿವಂತರು [**ಸಂವತ್ಸಂ**] ಹೆತ್ತಕರುವಿನ ರೀತಿಯಲ್ಲಿ ಸಂತಾನಗಳಿಗೆ ರಕ್ಷಣೆಕೊಡುತ್ತಾರೋ [**ಗಾಂ**] ವಾಣಿಯನ್ನು [**ಅರಕ್ಷತ್**] ರಕ್ಷಣೆ ಮಾಡುವರು. [**ಯತ್**] ಯಾವ [**ಋಭವಃ**] ಬುದ್ಧಿವಂತರು [**ಸಂವತ್ಸಂ**] ಪ್ರೀತಿಯಿಂದ ಪಾಲಿಸಿದ ಸಂತಾನಕ್ಕೆ ಸದೃಶವಾಗಿ [**ಮಾಃ**] ಜನನಿಯರನ್ನು [**ಅಪಿಂಶನ್**] ಭರಣ ಪೋಷಣಗಳಿಂದ ಪುಷ್ಟಿಗೊಳಿಸುತ್ತಾರೆ. [**ಯತ್**] ಯಾವ [**ಭಾಸಃ**] ಪ್ರಕಾಶಮಾನ [**ಅಸ್ಯಾಃ**] ಈ ವಿದ್ಯೆಯ [**ಸಂವತ್ಸಂ**] ಪ್ರೀತಿಯಿಂದ ಪೋಷಿಸಿದ ಸಂತಾನದ [**ಅಭರನ್**] ಧಾರಣ-ಪೋಷಣ ಮಾಡುವರು. [**ತಾಭಿಃ**] ಆ ಮಾತಾ-ಪಿತೃಗಳ ಸೇವೆ ವಿದ್ಯಾಪ್ರಾಪ್ತಿಯಿಂದ [**ಶಮೀಭಿಃ**] ಶ್ರೇಷ್ಠಕರ್ಮಗಳಿಂದ [**ಅಮೃತತ್ವಂ**] ಮೋಕ್ಷಭಾವದ ಆನಂದವನ್ನು [**ಆಶುಃ**] ಬೇಗನೆ ಪಡೆಯುವರು.

**ಭಾವಾರ್ಥ:-** ಯಾವ ತಂದೆ ತಾಯಿಯರು ತಮ್ಮ ಸಂತಾನಗಳಿಗೆ ವಿದ್ಯೆ, ಬಲ, ಶಕ್ತಿ, ಗುಣ, ಕರ್ಮ ಹಾಗೂ ಆಚರಣೆ ಇವುಗಳನ್ನು ಕಲಿಸುವರೋ ಅವರು ಅತಿಶಯ ಸುಖವನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ ತ್ರೀನ್ ಕೃಣವಾಮೇತ್ಯಾಹ ।**
**ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ ಪನಯದ್ವಚೋ ವಃ ॥೫॥**

**ಪದಾರ್ಥ:-** **[ಋಭವಃ]** ವಿದ್ಯಾವಂತರು **[ವಃ]** ನಿಮ್ಮ **[ವಚಃ]** ವಚನದ **[ತ್ವಷ್ಟಾ]** ಶಿಕ್ಷಕರು **[ಪನಯತ್]** ಪ್ರಶಂಸಿಸುವರು **[ತತ್]** ಆ ವಚನವು **[ದ್ವಾ]** ಎರಡು **[ಚಮಸಾ]** ಚಮಸಗಳನ್ನು **[ಕರ]** ಮಾಡಬೇಕು **[ಇತಿ]** ಈ ರೀತಿ **[ಜ್ಯೇಷ್ಠಃ]** ಹಿರಿಯನು **[ಆಹ]** ಹೇಳುವನು. **[ಕನೀಯನ್]** ಕಿರಿಯನು **[ತ್ರೀನ್]** ಮೂರನ್ನು **[ಕೃಣವಾಮ]** ಮಾಡೋಣ **[ಇತಿ]** ಹೀಗೆಂದು **[ಆಹ]** ಹೇಳುವನು. **[ಕನಿಷ್ಠಃ]** ಚಿಕ್ಕವನು **[ಚತುರಃ]** ನಾಲ್ಕನ್ನು **[ಕರ]** ಮಾಡೋಣ **[ಇತಿ]** ಈ ರೀತಿ **[ಆಹ]** ಹೇಳುವನು.

**ಭಾವಾರ್ಥ:-** ಬಂಧುಗಳೆಲ್ಲರೂ ವಿದ್ಯಾವಂತರಾಗಿ ಹೀಗೆ ಸಂಭಾಷಿಸುವರು. ಹಿರಿಯನು ಹೇಳಿದಂತೆ ಕಿರಿಯನು ಕಿರಿಯನು ಹೇಳಿದಂತೆ ಹಿರಿಯನು ಮಾಡಬೇಕು. ಚಿಕ್ಕವನು ಹೇಳಿದ ರೀತಿಯಲ್ಲಿ ಹಿರಿಯನು ಆಚರಿಸಬೇಕು. ಈ ಮಂತ್ರದಲ್ಲಿ ಜ್ಯೇಷ್ಠಃ ಕನೀಯಾನ್ ಮತ್ತು ಕನಿಷ್ಠ. ಈ ಪದಗಳು ಕರ್ತೃಪದವಾಗಿದ್ದು ಏಕವಚನದಲ್ಲಿ ಕೃಣವಾಮ ಎಂಬ ಕ್ರಿಯಾಪದವು ಉತ್ತಮಪುರುಷ ಬಹುವಚನದಲ್ಲಿದೆ. ಎಲ್ಲರೂ ಸೇರಿ ಮಾಡಿದರೆ ಕಾರ್ಯ ಕೈಗೆಟಕುತ್ತದೆ ಎಂಬರ್ಥ. ಐದೂ ಬೆರಳು ಸೇರಿದರೆ ಮಾತ್ರ ಕಾರ್ಯ ಸಾಧಕವೆಂಬ ಒಳಾರ್ಥವನ್ನಿಲ್ಲಿ ತಿಳಿದುಕೊಳ್ಳಬೇಕು. ಅಂದರೆ ಉತ್ತಮ, ಮಧ್ಯಮ, ಕನಿಷ್ಠ ಎಲ್ಲವೂ ಕಾರ್ಯಸಿದ್ಧಿಗೆ ಬೇಕು ಎಂದರ್ಥ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸತ್ಯಮೂಚುರ್ನರ ಏವಾ ಹಿ ಚಕ್ರು-ರನು ಸ್ವಧಾಮೃಭವೋ ಜಗ್ಮುರೇತಾಮ್ ।**
**ವಿಭ್ರಾಜಮಾನಾಂಶ್ಚಮಸಾँ ಅಹೇವಾ-ವೇನತ್ತ್ವಷ್ಟಾ ಚತುರೋ ದದೃಶ್ವಾನ್ ॥೬॥**

**ಪದಾರ್ಥ:-** **[ಋಭವಃ]** ಬುದ್ಧಿವಂತರು **[ಏತಾಂ]** ಈ **[ಸ್ವಧಾಂ]** ಅನ್ನವನ್ನು **[ಜಗ್ಮುಃ]** ಪಡೆಯುವರು **[ಅನು ಚಕ್ರುಃ]** ಶಿಷ್ಟರ ಆಚರಣೆಯನ್ನು **[ಅನು, ಚಕ್ರುಃ]** ಅನುಸರಿಸುವರು. **[ಏವಃ]** ಹೀಗೆಯೇ **[ನರಃ]** ಮನುಷ್ಯರು **[ಸತ್ಯಂ]** ಯಥಾರ್ಥವನ್ನು **[ಊಚುಃ]** ಹೇಳುವರು. **[ಹಿ]** ಯಾವುದರಿಂದ **[ತ್ವಷ್ಟಾ]** ರೂಪಕರ್ತೃವು **[ಚತುರಃ]** ನಾಲ್ಕನ್ನು **[ದದೃಶ್ವಾನ್]** ನೋಡುವನಾಗಿ **[ವಿಭ್ರಾಜಮಾನಾನ್]** ಮಿಂಚುತ್ತಲಿರುವ **[ಚಮಸಾನ್]** ಮೇಘಗಳನ್ನು **[ಅಹೇವ]** ದಿನಗಳಂತಿರುವ ನಾಲ್ಕು ಪದಾರ್ಥಗಳನ್ನು **[ಅವೇನತ್]** ಬಯಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ಈ ಪ್ರಪಂಚದಲ್ಲಿ ಕ್ರಮವಾಗಿ ವರ್ತಿಸುತ್ತ ದಿನವು ಹೇಗೆ ವರ್ಷಋತುವನ್ನು ಪಡೆಯುತ್ತದೆಯೋ ಹಾಗೆ ಕ್ರಮವರಿತು ಯಥಾರ್ಥವಾದಿಗಳನುಕರಣೆ ಮಾಡುತ್ತ ಉಪಾಸನೆ, ಜ್ಞಾನಾರ್ಜನೆ, ಸತ್ಯಭಾಷಣ, ಇವುಗಳ ಮೂಲಕ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥವನ್ನು ಸಾಧಿಸಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದ್ವಾದಶ ದ್ಯೂನ್ ಯದಗೋಹ್ಯಸ್ಯಾऽऽತಿಥ್ಯೇ ರಣನ್ನೃಭವಃ ಸಸಂತಃ ।**
**ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ ಧನ್ವಾತಿಷ್ಠನ್ನೋಷಧೀರ್ನಿಮ್ನಮಾಪಃ ॥೭॥**

**ಪದಾರ್ಥ:-** **[ಯತ್]** ಯಾವನು **[ಸಸಂತಃ]** ಮಲಗಿದವನು ಎದ್ದು **[ಋಭವಃ]** ಬುದ್ಧಿವಂತರು ಹೇಗೆ **[ಆಪಃ]** ಜಲವನ್ನು **[ಸಿಂಧೂನ್]** ನದೀ-ಸಮುದ್ರಗಳನ್ನು **[ಧನ್ವ]** ಅಂತರಿಕ್ಷ ಮತ್ತು **[ಓಷಧೀಃ]** ಓಷಧಿಗಳ **[ನಿಮ್ನಂ]** ಕೆಳಭಾಗದಲ್ಲಿ **[ಆ, ಅತಿಷ್ಠತ್]** ನೆಲೆಗೊಳ್ಳುವ ರೀತಿಯಲ್ಲಿ **[ಅಗೋಹ್ಯಸ್ಯ]** ಗೌಪ್ಯವಲ್ಲದ **[ಆತಿಥ್ಯೇ]** ಅತಿಥಿ

ಸತ್ಕಾರದಲ್ಲಿ [ದ್ವಾದಶ] ಹನ್ನೆರಡು [ದ್ಯೂನ್] ದಿನಗಳನ್ನು [ರಣತ್] ಬೋಧಿಸುವನು. [ಸುಕ್ಷೇತ್ರಾ] ಸುಂದರ ಸ್ಥಳಗಳನ್ನು [ಅಕೃಣ್ವನ್] ಮಾಡುವನು ಹಾಗೂ [ಅನಯಂತ] ಸುಖವನ್ನು ಪಡೆದು ಮಂಗಳದಾಯಕನಾಗುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರು ಹೇಗೆ ಮಲಗಿದವರನ್ನು ಜಾಗ್ರತಗೊಳಿಸುವರೋ ಹಾಗೆ ಅವಿದ್ಯಾವಂತರನ್ನು ಉತ್ತಮ ಶಿಕ್ಷಣದಿಂದ ಜಾಗ್ರತಗೊಳಿಸಿ ವಿದ್ಯಾವಂತರನ್ನಾಗಿ ಮಾಡಿ ಸಂತುಷ್ಟಗೊಳಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಥಂ ಯೇ ಚಕ್ರುಃ ಸುವೃತಂ ನರೇಷ್ಠಾಂ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಮ್ ।**
**ತ ಆ ತಕ್ಷಂತ್ವೃಭವೋ ರಯಿಂ ನಃ ಸ್ವವಸಃ ಸ್ವಪಸಃ ಸುಹಸ್ತಾಃ ॥೮॥**

**ಪದಾರ್ಥ:-** [ಯೇ] ಯಾವ [ಋಭವಃ] ಬುದ್ಧಿವಂತರು [ಸುವೃತಂ] ಬಲಿಷ್ಠ ಅಂಗೋಪಾಂಗಗಳೊಂದಿಗೆ [ನರೇಷ್ಠಾಂ] ನರರು ನೆಲೆಸುವ [ರಥಂ] ವಿಮಾನಾದಿ ವಾಹನಗಳನ್ನು [ಚಕ್ರುಃ] ಮಾಡುವರು. [ಯೇ] ಯಾರು [ವಿಶ್ವರೂಪಾಂ] ಸಮಗ್ರಶಾಸ್ತ್ರ ಜ್ಞಾನವಿರುವ [ವಿಶ್ವಜುವಂ] ವೇಗಗತಿಯ [ಧೇನುಂ] ವಾಣಿಯನ್ನು ಪಡೆಯುವರು. [ತೇ] ಅವರೆಲ್ಲರೂ [ಸ್ವವಸಃ] ಉತ್ತಮ ರಕ್ಷಣಾ ಕೆಲಸಗಳಿಂದ ಮತ್ತು [ಸ್ವಪಸಃ] ಶ್ರೇಷ್ಠ ಧರ್ಮ-ಕರ್ಮಗಳಿಂದ [ಸುಹಸ್ತಾಃ] ಕರ್ಮ ಸಾಧಕ ಕರವಂತರಾಗಿ/ಸಿದ್ಧಹಸ್ತರಾಗಿ [ನಃ] ನಮಗೆ [ರಯಿಂ] ಧನವನ್ನು [ಆ, ತಕ್ಷಂತು] ಪ್ರಾಪ್ತಿಗೊಳಿಸಲಿ.

**ಭಾವಾರ್ಥ:-** ಯಾವ ಮನುಷ್ಯರು ಮೊದಲು ಜ್ಞಾನಾಧ್ಯಯನ ಮಾಡಿ ನಂತರ ಅದನ್ನು ಕರ್ಮಕುಶಲತೆಗೊಳಪಡಿಸಿ ಕೊಳ್ಳುವರೋ ಉತ್ತಮ ಆಚಾರವಂತರಾಗುವರೋ ಆತ್ಮಜ್ಞಾನ ಮತ್ತು ಬಾಹ್ಯ ಪ್ರಪಂಚಜ್ಞಾನಗಳ ಉತ್ತಮಾನ್ವೇಷಣೆ ಮಾಡಿ ಶಿಲ್ಪ ವಿದ್ಯಾಕಾರ್ಯವನ್ನು ಮಾಡುವರೋ ಅವರು ಬುದ್ಧಿವಂತರಾಗಿ ಐಶ್ವರ್ಯವನ್ನೂ ಗಳಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಪೋ ಹ್ಯೇಷಾಮಜುಷಂತ ದೇವಾ ಅಭಿ ಕ್ರತ್ವಾ ಮನಸಾ ದೀಧ್ಯಾನಾಃ ।**
**ವಾಜೋ ದೇವಾನಾಮಭವತ್ ಸುಕರ್ಮೇಂದ್ರಸ್ಯ ಋಭುಕ್ಷಾ ವರುಣಸ್ಯ ವಿಭ್ವಾ ॥೯॥**

**ಪದಾರ್ಥ:-** [ಕ್ರತ್ವಾ] ಬುದ್ಧಿಯಿಂದ ಮತ್ತು [ಮನಸಾ] ವಿಜ್ಞಾನದಿಂದ [ದೀಧ್ಯಾನಾಃ] ಪ್ರಕಾಶಮಾನ [ದೇವಾಃ] ವಿದ್ಯಾವಂತರು [ಹಿ] ಯಾವ ಕಾರಣದಿಂದ [ಏಷಾಂ] ಈ ಪದಾರ್ಥಗಳನ್ನು [ಅಪಃ] ವಾಹನಾದಿ ರಚನಾತ್ಮಕ ಕರ್ಮಗಳನ್ನು [ಅಭಿ] [ಜುಷಂತ] ಎಲ್ಲರೀತಿಯಿಂದಲೂ ಕಾರ್ಯಗತಗೊಳಿಸುವರೋ ಮತ್ತು [ಸುಕರ್ಮಾ] ಉತ್ತಮ ಕೆಲಸ ಮಾಡುವವನು [ದೇವಾನಾಂ] ವಿದ್ವಾಂಸರ [ಇಂದ್ರಸ್ಯ] ವಿದ್ಯುದಾದಿಗಳ [ವರುಣಸ್ಯ] ಜಲಾದಿಗಳ [ವಿಭ್ವಾ] ವ್ಯಾಪ್ತಿಯಿಂದ [ವಾಜಃ] ಅನ್ನಾದಿಗಳೊಂದಿಗೆ [ಋಭುಕ್ಷಾಃ] ವೃದ್ಧಿ ಹೊಂದಿದವನು [ಅಭವತ್] ಆಗುವನು.

**ಭಾವಾರ್ಥ:-** ಯಾರು ಈ ಸೃಷ್ಟಿಯ ಪದಾರ್ಥಗಳನ್ನು ಚೆನ್ನಾಗಿ ಪರೀಕ್ಷಿಸಿ ಸಂಯೋಗ, ವಿಭಾಗಗೊಳಿಸುವುದರ ಮೂಲಕ ಶ್ರೇಷ್ಠಪದಾರ್ಥಗಳನ್ನು ತಯಾರಿಸಿ ಕಾರ್ಯಸಿದ್ಧಿ ಮಾಡಿಕೊಳ್ಳುವರೋ ಅವರು ವಿದ್ಯಾವಂತರಲ್ಲೇ ಶ್ರೇಷ್ಠರೆನಿಸಿಕೊಂಡು ಶ್ರೀಮಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೇ ಹರೀ ಮೇಧಯೋಕ್ಥಾ ಮದಂತ ಇಂದ್ರಾಯ ಚಕ್ರುಃ ಸುಯುಜಾ ಯೇ ಅಶ್ವಾ ।**
**ತೇ ರಾಯಸ್ಪೋಷಂ ದ್ರವಿಣಾನ್ಯಸ್ಮೇ ಧತ್ತ ಋಭವಃ ಕ್ಷೇಮಯಂತೋ ನ ಮಿತ್ರಮ್ ॥೧೦॥**

**ಪದಾರ್ಥ:-** **[ಋಭವಃ]** ಬುದ್ಧಿವಂತರೇ! **[ಯೇ]** ಯಾರು **[ಮೇಧಯಾ]** ಮೇಧಾಶಕ್ತಿಯಿಂದ **[ಉಕ್ಥಾ]** ಪ್ರಶಂಸೆಯಿಂದ **[ಮದಂತಃ]** ಸಂತೋಷ ಪಡುವರೋ **[ಇಂದ್ರಾಯ]** ಐಶ್ವರ್ಯಕ್ಕಾಗಿ **[ಹರೀ]** ಅಗ್ನಿ ಮತ್ತು ಜಲ ಶಕ್ತಿಯನ್ನು **[ಅಶ್ವಾ]** ವೇಗಗತಿಯಿಂದ **[ಸುಯುಜಾ]** ಸಂಯೋಜನ **[ಚಕ್ರುಃ]** ಮಾಡುವರು. **[ಯೇ]** ಯಾರು ಈ ವಿದ್ಯೆಯನ್ನು ತಿಳಿದಿರುವರೋ **[ತೇ]** ಅವರು **[ಮಿತ್ರಂ]** ಮಿತ್ರನನ್ನು **[ಕ್ಷೇಮಯಂತಃ]** **[ನ]** ರಕ್ಷಿಸುವವರಿಗೆ ಸಮನಾಗಿ **[ಅಸ್ಮೇ]** ನಮಗೆ **[ರಾಯಃ ಪೋಷಂ]** ಸಂಪತ್ತಿನ ಪುಷ್ಟಿಗಾಗಿ **[ದ್ರವಿಣಾನಿ]** ದ್ರವ್ಯಗಳನ್ನು **[ಧತ್ತ]** ಧಾರಣಮಾಡುವರು.

**ಭಾವಾರ್ಥ:-** ವಿದ್ಯಾವಂತರೇ! ನೀವು ಸೃಷ್ಟಿಯ ಕ್ರಮದಂತೆ ಪದಾರ್ಥ ವಿದ್ಯೆಯನ್ನು ಅರಿತುಕೊಂಡು ಬೇರೆಯವರಿಗೂ ಅದನ್ನು ಕಲಿಸಿ ತಮ್ಮಂತೆ ಅವರನ್ನೂ ಧನಾಢ್ಯರನ್ನಾಗಿ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇದಾಹ್ನಃ ಪೀತಿಮುತ ವೋ ಮದಂ ಧುರ್ನ ಋತೇ ಶ್ರಾಂತಸ್ಯ ಸಖ್ಯಾಯ ದೇವಾಃ ।**
**ತೇ ನೂನಮಸ್ಮೇ ಋಭವೋ ವಸೂನಿ ತೃತೀಯೇ ಅಸ್ಮಿನ್ತ್ಸವನೇ ದಧಾತ ॥೧೧॥**

**ಪದಾರ್ಥ:-** **[ಋಭವಃ]** ಬುದ್ಧಿವಂತರು **[ದೇವಾಃ]** ವಿದ್ಯಾವಂತರು **[ವಃ]** ನಿಮಗೆ **[ಅಹ್ನಃ]** ದಿನದಲ್ಲಿ **[ಪೀತಿಂ]** ಪಾನೀಯವನ್ನು **[ಉತ]** ಮತ್ತು **[ಮದಂ]** ಸಂತೋಷವನ್ನೂ **[ಧುಃ]** ಧಾರಣ ಮಾಡಿಸುವರು. **[ತೇ]** ಅವರು **[ಇದಾ]** ಈಗ **[ಅಂತಸ್ಯ]** ಪುಣ್ಯವಂತನ ಸೇವೆಯ **[ಋತೇ]** ಹೊರತಾಗಿ **[ಸಖ್ಯಾಯ]** **[ನ]** ಸ್ನೇಹತನಕ್ಕೆ ಸಮರ್ಥರಾಗುವುದಿಲ್ಲ. **[ಅಸ್ಮಿನ್]** ಈ **[ತೃತೀಯೇ]** ಮೂರನೆಯ **[ಸವನೇ]** ಶ್ರೇಷ್ಠಕರ್ಮಗಳಲ್ಲಿ **[ಅಸ್ಮೇ]** ನಮಗೆ **[ವಸೂನಿ]** ಧನವನ್ನು **[ನೂನಂ]** ನಿಶ್ಚಯವಾಗಿಯೂ **[ದಧತ]** ಧಾರಣಮಾಡಿಸಿರಿ.

**ಭಾವಾರ್ಥ:-** ಯಾರು ವರ್ತಮಾನ ಸ್ಥಿತಿಯಲ್ಲಿ ಪುರುಷಾರ್ಥ ಸಾಧಕರಾಗುವರೋ ಅವರು ಧನಪತಿಗಳಾಗುವರು. ಯಾರು ವಿದ್ವಾಂಸರ ಸಂಗ ಮಾಡುವುದಿಲ್ಲವೋ ಅವರು ಧನರಹಿತರಾಗಿ ಬಡತನವನ್ನು ಅನುಭವಿಸುವರು.

ಈ ಸೂಕ್ತದಲ್ಲಿ ತಂದೆ-ತಾಯಿ ಹಾಗೂ ಮನುಷ್ಯರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೩೪

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಋಭವೋ ದೇವತಾಃ । ೧ ವಿರಾಟ್ತ್ರಿಷ್ಟುಪ್, ೨ ಭುರಿಕ್ತ್ರಿಷ್ಟುಪ್, ೪-೬ ಭುರಿಕ್ತ್ರಿಷ್ಟುಪ್, ೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩, ೧೧ ಸ್ವರಾಟ್ ಪಂಕ್ತಿಃ । ೫ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಸಂತೋಷದಾಯಕ ಬುದ್ಧಿಯ ವೃದ್ಧಿಯನ್ನು ಕುರಿತು ಹೇಳಲಾಗಿದೆ.

**ಋಭುರ್ವಿಭ್ವಾ ವಾಜ ಇಂದ್ರೋ ನೋ ಅಚ್ಛೇ-ಮಂ ಯಜ್ಞಂ ರತ್ನಧೇಯೋಪ ಯಾತ ।**
**ಇದಾ ಹಿ ವೋ ಧಿಷಣಾ ದೇವ್ಯಹ್ನಾ-ಮಧಾತ್ ಪೀತಿಂ ಸಂ ಮದಾ ಅಗ್ಮತಾ ವಃ ॥೧॥**

**ಪದಾರ್ಥ:-** **[ಮದಾಃ]** ಆನಂದವು **[ವಃ]** ನಿಮಗೆ **[ಸಂ ಅಗ್ಮತ]** ಚೆನ್ನಾಗಿ ಪ್ರಾಪ್ತವಾಗಲಿ. **[ಹಿ]** ನಿಶ್ಚಿತವಾಗಿ **[ದೇವೀ]** ಶ್ರೇಷ್ಠ ಗುಣವತೀ **[ಧಿಷಣಾ]** ಬುದ್ಧಿಯು **[ಅಹ್ನಾಂ]** ಹಗಲಿನಲ್ಲಿ **[ಪೀತಿಂ]** ಪಾನೀಯವನ್ನು **[ಅಧಾತ್]** ದೊರಕಿಸುವಳು. **[ರತ್ನಧೇಯಾ]** ಧನಧಾರಣ ಕ್ರಿಯೆಯಿಂದ **[ಇಮಂ]** ಈ **[ಯಜ್ಞಂ]** ಜ್ಞಾನಯಜ್ಞವನ್ನು **[ಉಪ, ಯಾತ]** ಪಡೆಯಿರಿ. **[ಇದಾ]** ಈಗ **[ವಾಜಃ]** ಜ್ಞಾನವಂತನು **[ಇಂದ್ರಃ]** ಧನವಂತನು **[ಋಭುಃ]** ಬುದ್ಧಿವಂತನು **[ವಿಭ್ವಾ]** ಈಶ್ವರ ಸಹಕಾರದೊಂದಿಗೆ **[ನಃ]** ನಮಗೆ **[ವಃ]** ನಿಮಗೆ **[ಉಚ್ಛ]** ಉತ್ತಮರೀತಿಯಲ್ಲಿ ಪ್ರಾಪ್ತನಾಗಲಿ.

**ಭಾವಾರ್ಥ:-** ಮನುಷ್ಯರೇ! ನಿಮಗೆ ಹೇಗೆ ಸಂತೋಷ ಲಭಿಸುತ್ತದೆಯೋ ಹಾಗೆ ಕಾರ್ಯಗಳ ಮತ್ತು ಬುದ್ಧಿಯ ವೃದ್ಧಿಯನ್ನೂ ಮಾಡಿಕೊಳ್ಳಿರಿ. ವ್ಯಾಪಕನಾದ ಈಶ್ವರೋಪಾಸನೆಯನ್ನೂ ಮಾಡಿರಿ.

ವಿದ್ಯಾವಂತರ ವಿಷಯವನ್ನು ಹೇಳಲಾಗುತ್ತದೆ.

**ವಿದಾನಾಸೋ ಜನ್ಮನೋ ವಾಜರತ್ನಾ ಉತ ಋತುಭಿರ್ಋಭವೋ ಮಾದಯಧ್ವಮ್ ।**
**ಸಂ ವೋ ಮದಾ ಅಗ್ಮತ ಸಂ ಪುರಂಧಿಃ ಸುವೀರಾಮಸ್ಮೇ ರಯಿಮೇರಯಧ್ವಮ್ ॥೨॥**

**ಪದಾರ್ಥ:-** **[ವಾಜರತ್ನಾಃ]** ವಿಜ್ಞಾನರತ್ನವಂತರೇ! **[ಋಭವಃ]** ಬುದ್ಧಿವಂತರೇ! ನೀವು **[ಜನ್ಮನಃ]** ಹುಟ್ಟಿನಿಂದಲೂ **[ವಿದಾನಾಸಃ]** ವಿಜ್ಞಾನವನ್ನರಿಯಲು ಪ್ರಯತ್ನಿಸುವವರು. **[ಋತುಭಿಃ]** ವಿದ್ಯಾವಂತರೊಂದಿಗೆ **[ಮಾದಯಧ್ವಂ]** ಆನಂದವನ್ನನುಭವಿಸಿರಿ. **[ವಃ]** ನಿಮಗೆ **[ಮದಾಃ]** ಆನಂದವು **[ಸಂ]** **[ಅಗ್ಮತ]** ಚೆನ್ನಾಗಿ ಲಭಿಸಲಿ. **[ಉತ]** ಮತ್ತು **[ಪುರಂಧಿಃ]** ನಗರಧಾರಕ ರಾಜ್ಯವೂ ಲಭಿಸಲಿ. **[ಅಸ್ಮೇ]** ನಮಗೆ **[ಸುವೀರಾಂ]** ಶೂರ-ವೀರರಿರುವ ಸೇನೆ ಮತ್ತು **[ರಯಿಂ]** ಸಂಪತ್ತನ್ನು **[ಸಂ, ಆ, ಈರಯಧ್ವಂ]** ಎಲ್ಲಾ ಕಡೆಗಳಿಂದಲೂ ಪ್ರಾಪ್ತಿಗೊಳಿಸಿರಿ.

**ಭಾವಾರ್ಥ:-** ಯಾರು (ದ್ವಿಜನ್ಮ) ವಿದ್ಯಾರೂಪ ಎರಡನೇ ಜನ್ಮ ಪಡೆಯುವರೋ ಅವರು ಅಲ್ಲಿಂದ ಮುಂದೆ ಜ್ಞಾನಾರ್ಜನೆಯಲ್ಲೇ ಯತ್ನಶೀಲರಾಗಿ ವಿದ್ಯಾವಂತರಾಗುವರು, ಯುವಕರಾಗುವರು, ವಿದ್ಯಾವಂತರಾಗಿ ವಿದ್ಯಾವಂತರೊಂದಿಗೆ ಸ್ನೇಹ ಮಾಡಿಕೊಳ್ಳುವರು ಮತ್ತು ಅವಿದ್ಯಾವಂತರ ಏಳಿಗೆಗೆ ಪ್ರಯತ್ನಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಯಂ ವೋ ಯಜ್ಞ ಋಭವೋಽಕಾರಿ ಯಮಾ ಮನುಷ್ವತ್ ಪ್ರದಿವೋ ದಧಿಧ್ವೇ ।**
**ಪ್ರ ವೋಽಚ್ಛಾ ಜುಜುಷಾಣಾಸೋ ಅಸ್ಥು-ರಭೂತ ವಿಶ್ವೇ ಅಗ್ರಿಯೋತ ವಾಜಾಃ ॥೩॥**

**ಪದಾರ್ಥ:-** [ಋಭವಃ] ಬುದ್ಧಿವಂತರೇ! [ಅಯಂ] ಇವನು [ವಃ] ನಿಮ್ಮ [ಯಜ್ಞಃ] ಜ್ಞಾನಯಜ್ಞವನ್ನು [ಅಕಾರಿ] ಮಾಡುವವನು [ಯಂ] ಯಾರನ್ನು [ಮನುಷ್ವತ್] ವಿಚಾರಶೀಲರಂತೆ [ದಧಿಧ್ವೇ] ನೀವು ಧಾರಣ ಮಾಡುವಿರಿ. [ಪ್ರದಿವಃ] ಉತ್ತಮ ಗುಣಗಳನ್ನು ಬಯಸುತ್ತ [ವಃ] ನಿಮ್ಮ [ಅಚ್ಛಾ] ಉತ್ತಮ ಪ್ರಕಾರ [ಆ, ಜುಜುಷಾಣಾಸಃ] ಸೇವೆ ಮಾಡುತ್ತ [ಪ್ರ, ಅಸ್ಥುಃ] ಸ್ಥಿರವಾಗಿ ನೆಲೆಸುವವರು. [ಉತ] ಮತ್ತು [ವಿಶ್ವೇ] ಸಮಗ್ರ [ಅಗ್ರಿಯಾ] ಮೊದಲಿನವರಾಗಿ [ವಾಜಾಃ] ಶ್ರೇಷ್ಠ ಕರ್ಮ ಮತ್ತು ವೇಗಗಳಿರುವವರು [ಅಭೂತ] ಆಗಿರಿ.

**ಭಾವಾರ್ಥ:-** ವಿದ್ಯಾರ್ಥಿಗಳೇ! ನಿಮಗೆ ಯಾರು ವಿದ್ಯಾದಾನ ಮಾಡುವವರೋ ಅವರ ಸೇವೆಯನ್ನು ನಿಷ್ಕಪಟ ಪ್ರೀತಿಯಿಂದ ಮಾಡಿರಿ ಮತ್ತು ಜಿತೇಂದ್ರಿಯರಾಗಿ ಯಥಾರ್ಥ ವಿದ್ಯೆಯನ್ನು ಪಡೆಯಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭೂದು ವೋ ವಿಧತೇ ರತ್ನಧೇಯ-ಮಿದಾ ನರೋ ದಾಶುಷೇ ಮರ್ತ್ಯಾಯ ।**
**ಪಿಬತ ವಾಜಾ ಋಭವೋ ದದೇ ವೋ ಮಹಿ ತೃತೀಯಂ ಸವನಂ ಮದಾಯ ॥೪॥**

**ಪದಾರ್ಥ:-** [ವಾಜಾಃ] ಬುದ್ಧಿವಂತ [ನರಃ] ಸತ್ಕರ್ಮಗಳಲ್ಲಿ ಅಗ್ರಗಾಮೀ [ಋಭವಃ] ವಿಜ್ಞಾನಿಗಳು [ವಃ] ನಿಮ್ಮ [ವಿಧತೇ] ವಿದ್ಯೋಪದೇಶ ಮಾಡುವ ಅಧ್ಯಾಪಕೋಪದೇಶಕರು [ದಾಶುಷೇ] ವಿದ್ಯಾದಾನಿಗಳು [ಮರ್ತ್ಯಾಯ] ಮನುಷ್ಯನಿಗೆ [ರತ್ನಧೇಯಂ] ರತ್ನಭಾಜನವನ್ನು [ಇದಾ] ಈಗ [ಅಭೂತ್] ಆಗುವರು [ಉ] ಮತ್ತು [ವಃ] ನಿಮಗೆ [ಮದಾಯ] ಸಂತೋಷಕ್ಕಾಗಿ [ಮಹೀ] ಮಹತ್ತರ [ತೃತೀಯಾಂ] ಮೂರು ಸಂಖ್ಯೆ ಪೂರ್ಣಗೊಳಿಸುವ [ಸವನಂ] ಸುಖೈಶ್ವರ್ಯಗಳನ್ನು [ದದೇ] ಕೊಡುವೆನು. [ಪಿಬತ] ಸೇವಿಸಿರಿ.

**ಭಾವಾರ್ಥ:-** ಮನುಷ್ಯರೇ! ಯಾರಿಂದ ನೀವು ವಿದ್ಯಾಗ್ರಹಣ ಮಾಡುವಿರೋ ಅವರಿಗೆ ರತ್ನವನ್ನು ಕೊಡಿರಿ. ಅದರಿಂದ ಉಭಯತರಿಗೂ ವಿದ್ಯೆ ಐಶ್ವರ್ಯಗಳ ಅಭಿವೃದ್ಧಿಯಾಗುತ್ತದೆ.

ಗೃಹಸ್ಥ ಧರ್ಮದ ವಿಷಯವನ್ನು ಹೇಳಲಾಗುತ್ತದೆ.

**ಆ ವಾಜಾ ಯಾತೋಪ ನ ಋಭುಕ್ಷಾ ಮಹೋ ನರೋ ದ್ರವಿಣಸೋ ಗೃಣಾನಾಃ ।**
**ಆ ವಃ ಪೀತಯೋಽಭಿಪಿತ್ವೇ ಅಹ್ನಾ-ಮಿಮಾ ಅಸ್ತಂ ನವಸ್ವ ಇವ ಗ್ಮನ್ ॥೫॥**

**ಪದಾರ್ಥ:-** [ಋಭುಕ್ಷಾಃ] ಉತ್ತಮ ಗುಣದಿಂದ ವೃದ್ಧಿ ಹೊಂದಿದವರು [ವಾಜಾಃ] ಬ್ರಹ್ಮಚರ್ಯ ಪಡೆದು [ಮಹಃ] ಆದರಾರ್ಹ [ನಃ] ನಮ್ಮ [ಉಪ, ಆ, ಯಾತ] ಸಮೀಪಕ್ಕೆ ಆಗಮಿಸಿರಿ. [ಅಹ್ನಾಂ] ಹಗಲಿನ [ಅಭಿಪಿತ್ವೇ] ಪ್ರಾಪ್ತಿಗಾಗಿ [ಇಮಾಃ] ಈ [ಪೀತಯಃ] ಪಾನೀಯವು [ಅಸ್ತಂ, ನವಸ್ವ ಇವ] ಹೊಸ ಮನೆ ಪಡೆದು ಸುಖಪಡುವ ರೀತಿಯಲ್ಲಿ [ವಃ] ನಿಮಗೆ [ಆ, ಗ್ಮನ್] ಲಭಿಸಲಿ.

**ಭಾವಾರ್ಥ:-** ಮನುಷ್ಯರು ಪ್ರತಿದಿನವೂ "ನಮಗೆ ಯಥಾರ್ಥ ಬೋಧಿಸುವ ವಿದ್ಯಾವಂತನು ಲಭಿಸಲಿ" ಎಂದು ಇಚ್ಛಿಸಬೇಕು. ಹೇಗೆ ಹೊಸ ಗೃಹಸ್ಥಾಶ್ರಮಿಗಳು ಗೃಹಸುಖವನ್ನು ಅನುಭವಿಸುವರೋ ಹಾಗೆ ಸ್ತ್ರೀ-ಪುರುಷರು ಗಾರ್ಹಸ್ಥ್ಯ ಕೃತ್ಯಗಳನ್ನೂ ಸೇವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನಪಾತಃ ಶವಸೋ ಯಾತನೋ-ಪೇಮಂ ಯಜ್ಞಂ ನಮಸಾ ಹೂಯಮಾನಾಃ ।**
**ಸಜೋಷಸಃ ಸೂರಯೋ ಯಸ್ಯ ಚ ಸ್ಥ ಮಧ್ವಃ ಪಾತ ರತ್ನಧಾ ಇಂದ್ರವಂತಃ ॥೬॥**

**ಪದಾರ್ಥ:-** **[ಹೂಯಮಾನಾಃ]** ಅಸೂಯೆ ಪಡುತ್ತ **[ಶವಸಃ]** ಬಲಿಷ್ಠರು **[ನಪಾತಃ]** ಪತನವಾಗದ **[ಸಜೋಷಸಃ]** ಸಮಾನ ಪ್ರೀತಿಯ ಸೇವನೆ ಮಾಡುವವರು **[ರತ್ನಧಾಃ]** ಧನಧಾರಕರಾಗಿ **[ಇಂದ್ರವಂತಃ]** ಶ್ರೀಮಂತರಾಗಿ **[ಸೂರಯಃ]** ವಿದ್ವಾಂಸರು **[ನಮಸ್ಯಾ]** ಸತ್ಕಾರದಿಂದ **[ಇಮಾಂ]** ಈ **[ಯಜ್ಞಂ]** ವಿದ್ಯಾಗ್ರಹಣ ಯಜ್ಞವನ್ನು **[ಉಪ, ಆ, ಯಾತನ]** ಉಪಕ್ರಮಿಸುವವರಾಗಿರಿ. **[ಮಧ್ವಃ]** ಮಧುರ ಗುಣಪಡೆದವರು **[ಸ್ಥ]** ಆಗಿರಿ. **[ಪಾತ]** ರಕ್ಷಣೆ ಮಾಡಿರಿ.

**ಭಾವಾರ್ಥ:-** ಮನುಷ್ಯರು ಪರಸ್ಪರ ಸ್ನೇಹಬೆಳೆಸಿ ಶರೀರಬಲ ಆತ್ಮಬಲವನ್ನು ಹೆಚ್ಚಿಸಿಕೊಳ್ಳಬೇಕು. ವಿದ್ಯಾಧನವನ್ನು ಸಂಪಾದಿಸಿಕೊಂಡು ಅದರ ರಕ್ಷಣೆ ಮಾಡಬೇಕು. ಅದನ್ನು ಎಲ್ಲರಿಗೂ ದಾನ ಮಾಡಿ ಎಲ್ಲರನ್ನೂ ಸುಖಿಗಳನ್ನಾಗಿ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಜೋಷಾ ಇಂದ್ರ ವರುಣೇನ ಸೋಮಂ ಸಜೋಷಾಃ ಪಾಹಿ ಗಿರ್ವಣೋ ಮರುದ್ಭಿಃ ।**
**ಅಗ್ರೇಪಾಭಿರ್ಋತುಪಾಭಿಃ ಸಜೋಷಾ ಗ್ನಾಸ್ಪತ್ನೀಭೀ ರತ್ನಧಾಭಿಃ ಸಜೋಷಾಃ ॥೭॥**

**ಪದಾರ್ಥ:-** **[ಗಿರ್ವಣಃ]** ಸ್ತುತಿ ಮಾಡಲಾದ **[ಇಂದ್ರ]** ಐಶ್ವರ್ಯದಾಯಕರಾದ ನೀವು **[ವರುಣೇನ]** ಪುರುಷಾರ್ಥದಿಂದ **[ಸಜೋಷಾಃ]** ಸಮಾನ ಪ್ರೀತಿಯುಳ್ಳವರಾಗಿ **[ಸೋಮಂ]** ಸಂಪತ್ತನ್ನು **[ಪಾಹಿ]** ರಕ್ಷಿಸಿರಿ. **[ಅಗ್ರೇಪಾಭಿಃ]** ಮೊದಲ ರಕ್ಷಕರಾದ **[ಮರುದ್ಭಿಃ]** ಮನುಷ್ಯರೊಂದಿಗೆ **[ಸಜೋಷಾಃ]** ಸಮಾನ ಪ್ರೀತಿಸುವವರಾಗಿರಿ. **[ರತ್ನಧಾಭಿಃ]** ದ್ರವ್ಯಧಾರಕರಾದ **[ಗ್ನಾಸ್ಪತ್ನೀಭಿಃ]** ಪತಿ-ಪತ್ನಿಯರೊಂದಿಗೆ **[ಸಜೋಷಾಃ]** ಸಮಾನ ಪ್ರೀತಿಯೊಂದಿಗೆ ಐಶ್ವರ್ಯ ರಕ್ಷಣೆ ಮಾಡಿರಿ. **[ಋತುಪಾಭಿಃ]** ಋತುಮಾನಗಳಲ್ಲಿ ರಕ್ಷಕರೊಂದಿಗೆ **[ಸಜೋಷಾಃ]** ಸಮಾನ ಪ್ರೀತಿ ಪಡೆಯಿರಿ.

**ಭಾವಾರ್ಥ:-** ಮನುಷ್ಯರೇ! ನೀವು ಶ್ರೇಷ್ಠ ಪುರುಷರೊಂದಿಗೆ ಸೇರಿ ಸಂಪತ್ತನ್ನು ಸಂರಕ್ಷಿಸಿರಿ. ಯಾರು ನಾಶವಾಗುವ ಮೊದಲೇ ರಕ್ಷಣೆ ಮಾಡುವವರೋ ಯಾರ ಸತಿಯು ಪತಿವ್ರತೆಯಾಗಿರುವಳೋ ಅವರಿಬ್ಬರೊಂದಿಗೆ ಪ್ರೀತಿ, ಸುಖ, ದುಃಖ, ಲಾಭ, ನಷ್ಟಗಳನ್ನೆಲ್ಲ ಅನುಭವಿಸುತ್ತ ಪ್ರೀತಿಪಾತ್ರರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಜೋಷಸ ಆದಿತ್ಯೈರ್ಮಾದಯಧ್ವಂ ಸಜೋಷಸ ಋಭವಃ ಪರ್ವತೇಭಿಃ ।**
**ಸಜೋಷಸೋ ದೈವ್ಯೇನಾ ಸವಿತ್ರಾ ಸಜೋಷಸಃ ಸಿಂಧುಭಿಃ ರತ್ನಧೇಭಿಃ ॥೮॥**

**ಪದಾರ್ಥ:-** **[ಋಭವಃ]** ಬುದ್ಧಿವಂತರಾದ ನೀವು **[ಆದಿತ್ಯೈಃ]** ಬ್ರಹ್ಮಚರ್ಯದಿಂದ ವಿದ್ಯಾಗ್ರಹಣ ಮಾಡಿದವರೊಂದಿಗೆ **[ಸಜೋಷಾಃ]** ಸಮಾನ, ಗುಣ-ಕರ್ಮ-ಸ್ವಭಾವಗಳ ಸೇವಕರಾಗಿರಿ. **[ಪರ್ವತೇಭಿಃ]** ಮೇಘಗಳೊಂದಿಗೆ **[ಸಜೋಷಾಃ]** ಸಮಾನ ಧರ್ಮಿಗಳಾಗಿರಿ. **[ದೈವ್ಯೇನ]** ರೂಪವಂತ **[ಸವಿತ್ರಾ]** ಮಿಂಚಿನೊಂದಿಗೆ **[ಸಜೋಷಾಃ]** ಸಮಾನರಾಗಿರಿ. **[ರತ್ನಧೇಭಿಃ]** ರತ್ನಧಾರಕ **[ಸಿಂಧುಭಿಃ]** ಸಾಗರದೊಂದಿಗೆ **[ಸಜೋಷಾಃ]** ಸಮನಾಗಿರಿ. **[ಮಾದಯಧ್ವಂ]** ಆನಂದವನ್ನನುಭವಿಸಿರಿ.

**ಭಾವಾರ್ಥ:-** ಯಾರು ಪರಿಪೂರ್ಣ ವಿದ್ಯಾವಂತರೊಂದಿಗೆ ಸೇರಿ ಪದಾರ್ಥವಿಜ್ಞಾನವನ್ನು ಗ್ರಹಣ ಮಾಡುವವರೋ ಅವರು ಜಲ-ಸ್ಥಳ- ಅಂತರಿಕ್ಷಗಳಲ್ಲಿ ಸಂಚರಿಸುವಂತಹ ವಾಹನಗಳನ್ನು ತಯಾರಿಸಿಕೊಂಡು ಮೇಘ ಮಂಡಲವನ್ನೂ ದಾಟಿ ಹೋಗಲು ಸಮುದ್ರವನ್ನು ದಾಟಿಹೋಗಲು, ಸಮರ್ಥರಾಗಿ ಸರ್ವತ್ರ ವಿಹರಿಸುವವರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೇ ಅಶ್ವಿನಾ ಯೇ ಪಿತರಾ ಯ ಊತೀ ಧೇನುಂ ತತಕ್ಷುರ್ಋಭವೋ ಯೇ ಅಶ್ವಾ ।**
**ಯೇ ಅಂಸತ್ರಾ ಯ ಋಧಗ್ರೋದಸೀ ಯೇ ವಿಭ್ವೋ ನರಃ ಸ್ವಪತ್ಯಾನಿ ಚಕ್ರುಃ ॥೯॥**

**ಪದಾರ್ಥ:-** **[ಯೇ]** ಯಾವ **[ಋಭವಃ]** ಬುದ್ಧಿವಂತರು **[ಅಶ್ವಿನಾ]** ಸರ್ವವಿಧ ವಿದ್ಯೆಯಲ್ಲಿ ವ್ಯಾಪ್ತರು. **[ಯೇ]** ಯಾರು **[ಪಿತರಾ]** ಪಾಲಕರೋ, **[ಯೇ]** ಯಾರು **[ಅಶ್ವಾ]** ವೇಗಗತಿಯಿಂದ ಅಧೋಭಾಗಕ್ಕೆ ಪ್ರಾಪ್ತವಾಗುವ ಎರಡು ವಸ್ತುಗಳೋ **[ಯೇ]** ಯಾರು **[ಅಂಸತ್ರಾ]** ಪ್ರಯಾಣಾದಿಗಳ ರಕ್ಷಕರೋ, **[ಯೇ]** ಯಾರು **[ರೋದಸೀ]** ಭೂಮ್ಯಂತರಿಕ್ಷ ವ್ಯಾಪಕರೋ **[ಯೇ]** ಯಾರು **[ವಿಭ್ವಃ]** ಸಮಗ್ರ ವಿದ್ಯೆಯಲ್ಲಿ ವ್ಯಾಪಕರೋ **[ನರಃ]** ಅಂತಹ ಮನುಷ್ಯರು **[ಯೇ]** ಯಾರು **[ಊತಿ]** ರಕ್ಷಣೆಯೊಂದಿಗೆ **[ಧೇನುಂ]** ಸುಶಿಕ್ಷಿತ ನುಡಿಯನ್ನು **[ತತಕ್ಷುಃ]** ವಿಸ್ತರಿಸುವರೋ **[ಸ್ವಪತ್ಯಾನಿ]** ವಿದ್ಯಾವಂತ ಸಂತಾನವನ್ನು **[ಋಧಕ್]** ಯಥಾರ್ಥಭಾವದಿಂದ **[ಚಕ್ರುಃ]** ವೃದ್ಧಿಪಡಿಸುವರೋ ಅವರು ಅದೃಷ್ಟಶಾಲಿಗಳು.

**ಭಾವಾರ್ಥ:-** ಯಾರು ಸತ್ಪುರುಷಕ ಸಂಗ, ವೃದ್ಧರ ಸೇವೆ, ತನ್ನ ಬಳಿಗೆ ಬಂದವರ ರಕ್ಷಣೆ, ತನ್ನ ಸಂತಾನದ ಏಳಿಗೆ ಇವುಗಳನ್ನೆಲ್ಲ ನಿರಂತರ ಮಾಡುವವರೋ ಅವರು ಅತಿಶಯಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೋ ಗೋಮಂತಂ ವಾಜವಂತಂ ಸುವೀರಂ ರಯಿಂ ಧತ್ಥ ವಸುಮಂತಂ ಪುರುಕ್ಷುಮ್ ।**
**ತೇ ಅಗ್ರೇಪಾ ಋಭವೋ ಮಂದಸಾನಾ ಅಸ್ಮೇ ಧತ್ತ ಯೇ ಚ ರಾತಿಂ ಗೃಣಂತಿ ॥೧೦॥**

**ಪದಾರ್ಥ:-** **[ಋಭವಃ]** ವಿದ್ವಾಂಸರೇ! **[ಯೇ]** ಯಾರು **[ಗೋಮಂತಂ]** ಗೋಧನರನ್ನು **[ವಾಜವಂತಂ]** ವಿಜ್ಞಾನಧನರನ್ನು **[ವಸುಮಂತಂ]** ಶ್ರೀಮಂತರನ್ನು **[ಪುರುಕ್ಷುಂ]** ಬಹುಧನ-ಧಾನ್ಯವಂತರನ್ನು **[ಸುವೀರಂ]** ಶ್ರೇಷ್ಠವೀರರನ್ನು ಪಡೆದುಕೊಳ್ಳುವರೋ **[ರಯಿಂ]** ಅವರು ಧನವನ್ನು ಪಡೆಯುವರು. **[ಯೇ]** ಯಾರು **[ಅಗ್ರೇಪಾಃ]** ಮೊದಲ ರಕ್ಷಕರೋ ಅವರು **[ಮಂದಸಾನಾಃ]** ಸಂತೋಷ ಪಡುವವರಾಗಿ **[ಅಸ್ಮೇ]** ನಮಗಾಗಿ **[ರಾತಿಂ]** ದಾನದ **[ಗೃಣಂತಿ]** ಸ್ತುತಿ ಮಾಡುವರು. **[ತೇ]** ಅವರು **[ಧತ್ತ]** ಸುಖಧರಿಸುವರು. **[ಧತ್ತ]** ನಮಗೂ ಧಾರಣ ಮಾಡಿಸುವರು.

**ಭಾವಾರ್ಥ:-** ವಿದ್ವಾಂಸರೇ! ನೀವು ಯಾರಿಗಾಗಿ ಸಿದ್ಧಪದಾರ್ಥಗಳನ್ನು ಬಳಸಿ ಸುಖ ಸಾಮಗ್ರಿಗಳನ್ನು ತಯಾರಿಸಿಕೊಡುತ್ತೀರೋ ಅವರು ನಿಮ್ಮನ್ನು ಪ್ರಶಂಸೆ ಮಾಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಾಪಾಭೂತ ನ ವೋऽತೀತೃಷಾಮಾ-ನಿಃ ಶಸ್ತಾ ಋಭವೋ ಯಜ್ಞೇ ಅಸ್ಮಿನ್ ।**
**ಸಮಿಂದ್ರೇಣ ಮದಥ ಸಂ ಮರುದ್ಭಿಃ ಸಂ ರಾಜಭಿಃ ರತ್ನಧೇಯಾಯ ದೇವಾಃ ॥೧೧॥**

**ಪದಾರ್ಥ:-** [**ದೇವಾಃ**] ವಿದ್ಯಾವಂತರು [**ಋಭವಃ**] ಬುದ್ಧಿವಂತರು [**ಅನಿಃ ಶಸ್ತಾಃ**] ನಿರಂತರ ಪ್ರಶಂಸೆ ಪಡೆಯುವವರು [**ನ**] [**ಅಪ, ಅಭೂತ್**] ತಿರಸ ತರಾಗುವುದಿಲ್ಲ. [**ಅಸ್ಮಿನ್**] ಈ [**ಯಜ್ಞೇ**] ರಾಜ್ಯಶಾಸನ ರೂಪ ಯಜ್ಞದಲ್ಲಿ [**ವಃ**] ನಿಮಗೆ [**ನ**] [**ಅತಿ ತೃಷಾಮ**] ಅತಿ ತೃಷೆಯುಳ್ಳವರನ್ನಾಗಿ ಮಾಡುವುದಿಲ್ಲ. [**ಇಂದ್ರೇಣ**] ಐಶ್ವರ್ಯದೊಂದಿಗೆ [**ಸಂ, ಮದಥ**] ನೀವು ಸಂತುಷ್ಟರಾಗಿರಿ. [**ಮರುದ್ಭಿಃ**] ಮನುಷ್ಯರೊಂದಿಗೆ [**ಸಂ**] ಆನಂದಿಸಿರಿ. [**ರಾಜಭಿಃ**] ರಾಜರೊಂದಿಗೆ [**ರತ್ನಧೇಯಾಯ**] ರತ್ನಧಾರಕ ಬೊಕ್ಕಸಕ್ಕಾಗಿ [**ಸಂ**] ಆನಂದಿಸಿರಿ.

**ಭಾವಾರ್ಥ:-** ಯಾರು ಲೋಭರಹಿತರಾಗಿ, ರಾಜ-ಪ್ರಜೆಗಳೊಂದಿಗೆ ಸೇರಿ ಗೃಹಸ್ಥಾಶ್ರಮ ವ್ಯವಹಾರಗಳನ್ನು ವೃದ್ಧಿಪಡಿಸುವರೋ ಅವರು ಎಂದೂ ತಿರಸ ತರಾಗುವುದಿಲ್ಲ.

ಈ ಸೂಕ್ತದಲ್ಲಿ ಮೇಧಾವಿಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೩೫

ಮಂತ್ರಸಂಖ್ಯೆ ೯ । ವಾಮದೇವ ಋಷಿಃ । ಋಭವೋದೇವತಾ । ೧, ೩, ೪, ೬, ೭, ೯ ನಿಚೃತ್ರಿಷ್ಟುಪ್, ೮ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಭುರಿಕ್ಪಂಕ್ತಿಃ, ೫ ಸ್ವರಾಟ್‌ಪಂಕ್ತಿಃ ಛಂದಃ । ಪಂಚಮಃ ಸ್ವರಃ ।

ಕ್ರಿಯಾಶೀಲರ ಹಿರಿಮೆಯನ್ನಿಲ್ಲಿ ಹೇಳಿದೆ.

**ಇಹೋಪ ಯಾತ ಶವಸೋ ನಪಾತಃ ಸೌಧನ್ವನಾ ಋಭವೋ ಮಾಪ ಭೂತ ।**
**ಅಸ್ಮಿನ್ ಹಿ ವಃ ಸವನೇ ರತ್ನಧೇಯಂ ಗಮಂತ್ವಿಂದ್ರಮನು ವೋ ಮದಾಸಃ ॥೧॥**

**ಪದಾರ್ಥ:-** [**ಶವಸಃ**] ಬಲಿಷ್ಠ [**ನಪಾತಃ**] ಪತನರಹಿತ [**ಸಾಧನ್ವನಾಃ**] ಸುಂದರ ಧನುಸ್ಸಿಗೆ ಸಂಬಂಧಿಸಿದ [**ಋಭವಃ**] ಬುದ್ಧಿವಂತನೇ! ನೀನು [**ಇಹ**] ಇಲ್ಲಿಗೆ [**ಉಪ, ಯಾತ**] ಸಮೀಪಕ್ಕಾಗಮಿಸು. [**ವಃ**] ನಿಮ್ಮ [**ಅಸ್ಮಿನ್**] ಈ [**ಸವನೇ**] ಕ್ರಿಯಾತ್ಮಕ ವ್ಯವಹಾರದಲ್ಲಿ [**ಹಿ**] ಯಾವ ಕಾರಣದಿಂದ [**ವಃ**] ನಿಮ್ಮ [**ಮದಾಸಃ**] ಸಂತುಷ್ಟನಾದ [**ರತ್ನಧೇಯಂ**] ಧನಧಾರಕ [**ಇಂದ್ರಂ**] ಪರಮೈಶ್ವರ್ಯಸಂಪನ್ನನ [**ಅನು, ಗಮಂತು**] ಸಮೀಪಕ್ಕೆ ಹೋಗಿರಿ. [**ಮಾ**] [**ಅಪ, ಭೂತ್**] ಅವಮಾನಿತರಾಗದಿರು.

**ಭಾವಾರ್ಥ:-** ಯಾರು ಉತ್ಸಾಹದಿಂದ ಕಾರ್ಯ ಮಗ್ನರಾಗುವರೋ ಅವರು ಎಲ್ಲ ಕಡೆಗಳಲ್ಲೂ ಗೌರವ ಪಡೆದು ಧನ ಸಂಪನ್ನರಾಗುವರು. ಯಾರು ಸೋಮಾರಿಗಳೋ ಅವರು ಬಡತನಾವೃತರಾಗಿ ತಿರಸ ತರಾಗುವರು.

ಯಾರು ಸುಖಿಗಳನ್ನು ಎಂಬ ವಿಷಯವನ್ನು ಹೇಳಲಾಗುತ್ತದೆ.

**ಆಗನ್ನೃಭೂಣಾಮಿಹ ರತ್ನಧೇಯ-ಮಭೂತ್ ಸೋಮಸ್ಯ ಸುಷುತಸ್ಯ ಪೀತಿಃ ।**
**ಸುಕೃತ್ಯಯಾ ಯತ್ ಸ್ವಪಸ್ಯಯಾ ಚ ಏಕಂ ವಿಚಕ್ರ ಚಮಸಂ ಚತುರ್ಧಾ ।।೨।।**

**ಪದಾರ್ಥ:-** **[ಸುಕೃತ್ಯಯಾ]** ಉತ್ತಮ ಕೆಲಸಗಳಿಂದ **[ಸ್ವಪಸ್ಯಯಾ]** ತನ್ನ ಕರ್ಮಾಚರಣೆಯಿಂದ **[ಯತ್]** ಯಾವುದಾದರು **[ಏಕಂ]** ಒಂದು **[ಚಮಸಂ]** ಮೇಘಸದೃಶ ಗರ್ಜಿಸುವ ರಥವನ್ನು **[ಚತುರ್ಧಾ]** ನಾಲ್ಕೂಕಡೆಗೆ ಮೇಲೆ-ಕೆಳಗೆ-ಅಡ್ಡ-ಉದ್ದ ಚಲಿಸುವಂತಹದ್ದನ್ನು **[ವಿಚಕ್ರ]** ತಯಾರಿಸುವರು. **[ಸುಷುತಸ್ಯ]** ಉತ್ತಮ ರೀತಿಯಿಂದ ತಯಾರಿಸಿದ **[ಸೋಮಸ್ಯ]** ಸಂಪತ್ತಿನ **[ಪೀತಿಃ]** ಸ್ವೀಕಾರವು **[ಅಭೂತ್]** ಆಗಲಿ. **[ಇಹ]** ಇಲ್ಲಿ **[ಋಭೂಣಾಂ]** ಬುದ್ಧಿವಂತರ **[ರತ್ನಧೇಯಂ]** ರತ್ನಧಾರಕರು **[ಆ][ಗಮನ್]** ಆಗಮಿಸುವರು. **[ಚ]** ಮತ್ತು ಕಾರ್ಯ ಸಾಧಿಸುವರು.

**ಭಾವಾರ್ಥ:-** ಯಾರು ಉತ್ತಮ ಕರಕುಶಲತೆಯಿಂದ ಸರ್ವತ್ರ ಚಲಿಸುವ ರಥವನ್ನು ರಚಿಸಿಕೊಂಡು ಪಯಣಿಸುವರೋ ಅವರು ವಿಪುಲ ಅನ್ನಪಾನ ಅಸಂಖ್ಯಧನಗಳಿಸಿ ಸುಖಿಗಳಾಗುವರು.

ಪುರುಷಾರ್ಥ ಸಾಧನೆಯ ವಿಷಯವನ್ನು ಹೇಳಿದೆ.

**ವ್ಯಕೃಣೋತ ಚಮಸಂ ಚತುರ್ಧಾ ಸಖೇ ವಿ ಶಿಕ್ಷೇತ್ಯಬ್ರವೀತ ।**
**ಅಥೈತ ವಾಜಾ ಅಮೃತಸ್ಯ ಪಂಥಾಂ ಗಣಂ ದೇವಾನಾಮೃಭವಃ ಸುಹಸ್ತಾಃ ।।೩।।**

**ಪದಾರ್ಥ:-** **[ಸಖೇ]** ಮಿತ್ರನೇ! **[ಶಿಕ್ಷ]** ಶಿಕ್ಷಣ ನೀಡು. **[ವಾಜಾಃ]** ವಿಜ್ಞಾನಸಂಪನ್ನ **[ಸುಹಸ್ತಾಃ]** ಕರಕುಶಲಿಗಳಾದ **[ಋಭವಃ]** ಬುದ್ಧಿವಂತರು **[ಚಮಸಂ]** ಕಾರ್ಯವನ್ನು **[ಚತುರ್ಧಾ]** ನಾಲ್ಕು ಬಗೆಯಿಂದ **[ವಿ]** **[ಅಕೃಣೋತ್]** ವಿಶೇಷ ರೀತಿಯಲ್ಲಿ ಮಾಡುವರು. **[ಅಥ]** ಆಮೇಲೆ **[ಇತಿ]** ಈ ರೀತಿ **[ದೇವಾನಾಂ]** ವಿದ್ಯಾವಂತರ **[ಗಣಂ]** ಸಮೂಹವನ್ನು **[ಅಮೃತಸ್ಯ]** ನಾಶರಹಿತ **[ಪಂಥಾಂ]** ಮಾರ್ಗವನ್ನು **[ಐತ್]** ಪಡೆದುಕೊಳ್ಳುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪರಮೇಶ್ವರನು ಮನುಷ್ಯರಿಗೆ ನಾಲ್ಕು ಬಗೆಯ ಪುರುಷಾರ್ಥವನ್ನು ಕೊಟ್ಟಿರುವನು. ಯಾರು ಪರಸ್ಪರ ಮಿತ್ರರಾಗಿ ಕಾರ್ಯನಿರ್ವಹಿಸುವರೋ ಅವರು ಧರ್ಮ-ಅರ್ಥ-ಕಾಮ ಮತ್ತು ಮೋಕ್ಷಗಳೆಂಬ ನಾಲ್ಕೂ ಪುರುಷಾರ್ಥವನ್ನು ಸಾಧಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಿಂಮಯಃ ಸ್ವಿಚ್ಚಮಸ ಏಷ ಆಸ ಯಂ ಕಾವ್ಯೇನ ಚತುರೋ ವಿಚಕ್ರ ।**
**ಅಥಾ ಸುನುಧ್ವಂ ಸವನಂ ಮದಾಯ ಪಾತ ಋಭವೋ ಮಧುನಃ ಸೋಮ್ಯಸ್ಯ ।।೪।।**

**ಪದಾರ್ಥ:-** **[ಋಭವಃ]** ಬುದ್ಧಿವಂತರೇ! **[ಏಷಃ]** ಈ **[ಚಮಸಃ]** ಯಜ್ಞಪಾತ್ರವು **[ಸ್ವಿತ್]** ಯಾವುದು **[ಕಿಂಮಯಃ]** ಯಾವುದನ್ನೋ ಎಸೆಯುತ್ತ **[ಆಸ]** ಇದೆ. **[ಯಂ]** ಯಾವುದನ್ನು **[ಕಾವ್ಯೇನ]** ಕವಿಕರ್ಮದಿಂದ **[ಚತುರಃ]** ನಾಲ್ಕುಭಾಗ **[ವಿಚಕ್ರೇ]** ಮಾಡಿರುವುದು **[ಮದಾಯ]** ಆನಂದಕ್ಕೆ **[ಮಧುನಃ]** ಜ್ಞಾನದಿಂದ ಉಂಟಾದ **[ಸೋಮಸ್ಯ]** ಸಂಪತ್ತಿನಲ್ಲಿ ಶ್ರೇಷ್ಠ **[ಸವನಂ]** ಕಾರ್ಯ ಸಾಧಿಸುವವನಿಗೆ **[ಸುನುದ್ಧಂ]** ತಯಾರಿಸಿರಿ. **[ಅಥ]** ಆಮೇಲೆ **[ಪಾತ]** ರಕ್ಷಣೆ ಮಾಡಿರಿ.

**ಭಾವಾರ್ಥ:-** ಕಾರ್ಯದ ಸಾಧನವು ಏಕೆ ಮತ್ತು ಹೇಗೆ ತಯಾರಿಸಲಾಗುವುದು ಎಂದು ಪ್ರಶ್ನೆ. ಯಾವ, ಯಾವುದು ವಿದ್ಯೆ ಮತ್ತು ಯುಕ್ತಿಯಿಂದ ತಯಾರಿಸಲಾದ ಸಾಧನವು ಕಾರ್ಯಸಾಧಕವಾಗಿರುತ್ತದೆ ಎಂದು ಉತ್ತರ.

ಯುವಾವಸ್ಥೆಯಲ್ಲಿ ವಿವಾಹದ ವಿಷಯವನ್ನು ಹೇಳಲಾಗುತ್ತದೆ.

**ಶಚ್ಯಾಕರ್ತ ಪಿತರಾ ಯುವಾನಾ ಶಚ್ಯಾಕರ್ತ ಚಮಸಂ ದೇವಪಾನಮ್ ।**
**ಶಚ್ಯಾ ಹರೀ ಧನುತರಾವತಷ್ಟೇಂದ್ರವಾಹಾವೃಭವೋ ವಾಜರತ್ನಾಃ ॥೫॥**

**ಪದಾರ್ಥ:-** **[ವಾಜರತ್ನಾಃ]** ಅನ್ನ-ಸುವರ್ಣಾದಿ ಪದಾರ್ಥಗಳಿರುವ **[ಋಭವಃ]** ಬುದ್ಧಿವಂತರೇ! ನೀವು **[ಶಚ್ಯಾ]** ಬುದ್ಧಿವಂತಿಕೆಯಿಂದ **[ಯುವಾನಾ]** ಯುವಾವಸ್ಥೆ ಪಡೆದ **[ಪಿತರಾ]** ಜ್ಞಾನವಂತ ಅಧ್ಯಾಪಕ ಉಪದೇಶಕರನ್ನು **[ಅಕರ್ತ]** ನಿರ್ಮಿಸಿರಿ. **[ಶಚ್ಯಾ]** ಕರ್ಮದಿಂದ **[ದೇವಪಾನಂ]** ವಿದ್ಯಾವಂತರು ಪಾನಮಾಡುವಂತಹ **[ಚಮಸಂ]** ಪಾನಪಾತ್ರೆಯನ್ನು **[ಅಕರ್ತ]** ನಿರ್ಮಿಸಿರಿ. **[ಶಚ್ಯಾ]** ವಾಣಿಯಿಂದ **[ಧನುತರೌ]** ಶೀಘ್ರ ತಲುಪಿಸಲು ಮತ್ತು **[ಇಂದ್ರವಾಹೌ]** ಐಶ್ವರ್ಯ ಪ್ರಾಪ್ತಿಗೊಳಿಸುವ **[ಹರೀ]** ವಿದ್ಯುತ್-ವಾಯುಗಳನ್ನು **[ಅತಷ್ಟ]** ನಿರ್ಮಾಣ ಮಾಡಿರಿ.

**ಭಾವಾರ್ಥ:-** ವಿದ್ಯಾವಂತರೇ! ನೀವು ನಿಮ್ಮ ಸಂತಾನವನ್ನು ಅವರು ಯುವಾವಸ್ಥೆ ಪಡೆಯುವ ಮೊದಲೇ ಸಮಗ್ರ ಜ್ಞಾನ ವಿಜ್ಞಾನವನ್ನು ಕಲಿಸಿರಿ. ಯುವಾವಸ್ಥೆಗೆ ಪದಾರ್ಪಣ ಮಾಡಿದ ಮೇಲೆಯೇ ಅವರು ಪರಸ್ಪರ ಪ್ರೀತಿಸಿ ಅನುಮತಿ ಪಡೆದು ಸ್ವಯಂವರ ವಿವಾಹವಾಗಿ ಸದಾ ಸಂತುಷ್ಟರಾಗುವಂತೆ ಮಾಡಿರಿ.

ವಿದ್ಯಾವಂತರ ವಿಷಯವನ್ನು ಹೇಳಲಾಗುತ್ತದೆ.

**ಯೋ ವಃ ಸುನೋತ್ಯಭಿಪಿತ್ವೇ ಅಹ್ನಾಂ ತೀವ್ರಂ ವಾಜಾಸಃ ಸವನಂ ಮದಾಯ ।**
**ತಸ್ಮೈ ರಯಿಮೃಭವಃ ಸರ್ವವೀರ-ಮಾ ತಕ್ಷತ ವೃಷಣೋ ಮಂದಸಾನಾಃ ॥೬॥**

**ಪದಾರ್ಥ:-** **[ವೃಷಣಃ]** ಬಲಿಷ್ಠ **[ವಾಜಸಃ]** ವಿಜ್ಞಾನವಂತ **[ಋಭವಃ]** ಬುದ್ಧಿವಂತರೇ! **[ಮಂದಸಾನಃ]** ಇಚ್ಛಾಯುಕ್ತರಾದ ನೀವು **[ಯಃ]** ಯಾವನು **[ವಃ]** ನಿಮಗೆ **[ಅಹ್ನಾಂ]** ಹಗಲಿನಲ್ಲಿ **[ಅಭಿಪಿತ್ವೇ]** ಅಭೀಷ್ಟ ಸಿದ್ಧಿಗೆ **[ಮದಾಯ]** ನಿತ್ಯತುಷ್ಟಿಗೆ **[ತೀವ್ರಂ]** ಪ್ರಖರವಾದ **[ಸವನಂ]** ಸಂಪತ್ತನ್ನು **[ಸುನೋತಿ]** ಉತ್ಪಾದಿಸುವನೋ **[ತಸ್ಮೈ]** ಅವನಿಗೆ **[ಸರ್ವವಿಪಂ]** ಸರ್ವಸಾಧಕ **[ರಯಿಂ]** ಧನವನ್ನು **[ಆ, ತಕ್ಷತೇ]** ಸಿದ್ಧಪಡಿಸಿರಿ.

**ಭಾವಾರ್ಥ:-** ವಿದ್ಯಾವಂತರೇ! ಯಾರು ನಿಮ್ಮ ಸೇವೆಗಯ್ಯುವರೋ, ನಿಮ್ಮ ಆಜ್ಞೆ ಪಾಲಿಸುವರೋ ಅವರಿಗೆ ಸಮಗ್ರ ವಿದ್ಯೆಯನ್ನು ಹೇಳಿಕೊಟ್ಟು ಐಶ್ವರ್ಯವಂತರನ್ನಾಗಿ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರಾತಃ ಸುತಮಪಿಬೋ ಹರ್ಯಶ್ವ ಮಾಧ್ಯಂದಿನಂ ಸವನಂ ಕೇವಲಂ ತೇ ।**
**ಸಮೃಭುಭಿಃ ಪಿಬಸ್ವ ರತ್ನಧೇಭಿಃ ಸಖೀಁರ್ಯಾ ಇಂದ್ರ ಚಕೃಷೇ ಸುಕೃತ್ಯಾ ॥೭॥**

**ಪದಾರ್ಥ:-** **[ಹರ್ಯಶ್ವ]** ವೇಗವಾಗಿ ಚಲಿಸುವ ಅಶ್ವಗಳಿರುವ **[ಇಂದ್ರ]** ಧನದಾತೃ ರಾಜನೇ! **[ಸುಕೃತ್ಯಾ]** ನೀನು ಉತ್ತಮ ಕಾರ್ಯಗಳಿಂದ **[ಯಾನ್]** ಯಾವ **[ಸಖೀನ್]** ಮಿತ್ರರನ್ನು **[ಚಕೃಷೇ]** ಸಂಪಾದಿಸಿರುವೆಯೋ **[ರತ್ನಧೇಭಿಃ]** ಧನಧಾರಕರಾದ **[ಋಭುಭಿಃ]** ಬುದ್ಧಿವಂತರೊಂದಿಗೆ **[ಪ್ರಾತಃ]** ಬೆಳಗಿನ ಸಮಯದಲ್ಲಿ **[ಸುತಂ]** ತಯಾರಿಸಿದ **[ಮಾಧ್ಯದಿನಂ]** ದಿನದ ಮಧ್ಯಭಾಗದಲ್ಲಿ ತಯಾರಿಸಿದ ಭೋಜನಾದಿಗಳನ್ನು **[ಕೇವಲಂ]** ಮಾತ್ರ **[ಸವನಂ]** ಸಂಸ್ಕಾರ ಪೂರ್ಣ ಪಾನೀಯವನ್ನು **[ಅಪಿಬಃ]** ಪಾನ ಮಾಡು. **[ಸಂ]** **[ಪಿಬಸ್ವ]** ಚೆನ್ನಾಗಿ ಪಾನಮಾಡು. **[ತೇ]** ನಿನಗೆ ಕಲ್ಯಾಣವಾಗಲಿ.

**ಭಾವಾರ್ಥ:-** ಯಾರು ವಿದ್ಯಾವಂತರ ಸಂಗ ಬೆಳೆಸಿ ಬೆಳಿಗ್ಗೆ, ಮಧ್ಯಾಹ್ನ, ಸಂಜೆ ತ್ರಿಕಾಲದಲ್ಲಿ ಉತ್ತಮ ಕರ್ಮಾನುಷ್ಠಾನ ಮಾಡುವರೋ ಅವರು ಎಲ್ಲರ ಪ್ರೀತಿಗೆ ಪಾತ್ರರಾಗಿ ಭಾಗ್ಯಶಾಲಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೇ ದೇವಾಸೋ ಅಭವತಾ ಸುಕೃತ್ಯಾ ಶ್ಯೇನಾ ಇವೇದಧಿ ದಿವಿ ನಿಷೇದ ।**
**ತೇ ರತ್ನಂ ಧಾತ ಶವಸೋ ನಪಾತಃ ಸೌಧನ್ವನಾ ಅಭವತಾಮೃತಾಸಃ ॥೮॥**

**ಪದಾರ್ಥ:-** **[ಯೇ]** ಯಾವ **[ದೇವಾಸಃ]** ವಿದ್ಯಾವಂತರು **[ಸುಕೃತ್ಯಾ]** ಉತ್ತಮ ಕಾರ್ಯಗಳಿಂದ **[ಅಭವತ್]** ಯುಕ್ತರಾಗಿರುವರೋ **[ಶ್ಯೇನಾ ಇವ]** ವಾಜಪಕ್ಷಿಯಂತೆ ಪುರುಷಾರ್ಥಿಗಳಾಗಿ **[ದಿವಿ]** ಅಂತರಿಕ್ಷದಲ್ಲಿ **[ಅಧಿ]** **[ನಿಷೇದ]** ನೆಲೆಸುವರೋ **[ತೇ, ಇತ್]** ಅವರೇ **[ಶವಸಃ]** ಬಲಿಷ್ಠರಾಗಿ **[ನಪಾತಃ]** ಧರ್ಮಭ್ರಷ್ಟರಾಗದೇ **[ಸೌಧನ್ವನಾಃ]** ಶ್ರೇಷ್ಠಕರ್ಮಗಳಿಂದ ವಾತಾವರಣ ಶುಚಿಗೊಳಿಸುವವರ ಸಂತಾನವಾಗಿ **[ರತ್ನಂ]** ಸಂಪತ್ತಿನ **[ಧಾತ]** ಧಾರಕರಾಗುವರು. **[ಅಮೃತಾಸಃ]** ಮೋಕ್ಷಸುಖವನ್ನೂ **[ಅಭವತ್]** ಪಡೆಯುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ವಾಜಪಕ್ಷಿಯಂತೆ, ಆಕಾಶದಲ್ಲಿ ಸಂಚರಿಸುವ ವಿಮಾನಾದಿಗಳ ಮೂಲಕ ಅಂತರಿಕ್ಷದಲ್ಲಿ ಸಂಚರಿಸುವರೋ ಧರ್ಮಾಚರಣೆ ಮಾಡುವುದರ ಮೂಲಕ ದಿವ್ಯಗುಣ ಸಂಪನ್ನರಾಗುವರೋ, ಅನ್ಯರನ್ನೂ ತನ್ನಂತೆ ಸಂಪನ್ನರಾಗಿಸುವರೋ, ಅವರು ಇಹದಲ್ಲಿ ಸುಖ-ಭೋಗ ಅನುಭವಿಸಿ ಕೊನೆಯಲ್ಲಿ ಮೋಕ್ಷ ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯತ್ತೃತೀಯಂ ಸವನಂ ರತ್ನಧೇಯ-ಮಕೃಣುಧ್ವಂ ಸ್ವಪಸ್ಯಾ ಸುಹಸ್ತಾಃ ।**
**ತದೃಭವಃ ಪರಿಷಿಕ್ತಂ ವ ಏತತ್ ಸಂ ಮದೇಭಿರಿಂದ್ರಿಯೇಭಿಃ ಪಿಬಧ್ವಮ್ ॥೯॥**

**ಪದಾರ್ಥ:-** **[ಸುಹಸ್ತಾಃ]** ಧರ್ಮ-ಕರ್ಮದಲ್ಲಿ ಸಿದ್ಧ ಹಸ್ತರಾದ **[ಋಭವ]** ವಿದ್ಯಾವಂತರು **[ಯತ್]** ಯಾವ **[ವಃ]** ನಿಮಗೆ **[ಏತತ್]** ಈ **[ಪರಿಷಿಕ್ತಃ]** ಶ್ರೇಷ್ಠ ಪದಾರ್ಥಗಳೊಂದಿಗೆ ಸಂಯೋಜಿಸಲಾದ **[ತತ್]** ಅದನ್ನು **[ಮದೇಭಿಃ]** ಆನಂದದೊಂದಿಗೆ **[ಇಂದ್ರಿಯೇಭಿಃ]** ಚಕ್ಷುರಾದಿ ಇಂದ್ರಿಯಗಳೊಂದಿಗೆ **[ಸ್ವಪಸ್ಯಾ]** ಧರ್ಮ-ಕರ್ಮಗಳ ಇಚ್ಛೆಯೊಂದಿಗೆ **[ಸಂ, ಪಿಬಧ್ವಂ]** ಉತ್ತಮವಾಗಿ ಸೇವಿಸಿರಿ. **[ರತ್ನಧೇಯಂ]** ರತ್ನಧಾರಕ **[ತೃತೀಯಂ]** ಮೂರನೆಯ ಜೀವನದ ಭಾಗದವರೆಗೂ **[ಸವನಂ]** ಸಂಪತ್ತನ್ನು ಪಡೆದು **[ಕೃಣುಧ್ವಂ]** ಉತ್ತಮ ಕರ್ಮಗಳನ್ನು ಮಾಡಿರಿ.

**ಭಾವಾರ್ಥ:-** ಮನುಷ್ಯರೇ! ನೀವು ಕೌಮಾರ-ಯೌವ್ವನ-ವಾರ್ಧಕ್ಯಾದಿ ಮೂರು ಅವಸ್ಥೆಯಲ್ಲಿ ಕ್ರಮವಾಗಿ ವಿದ್ಯಾಭ್ಯಾಸ, ಗಾರ್ಹಸ್ಥ್ಯ-ನ್ಯಾಯಾಚರಣೆಗಳನ್ನು ಅನುಷ್ಠಾನ ಮಾಡುವವರಾಗಿ ಸಕಲೈಶ್ವರ್ಯ ಸುಖಗಳನ್ನು ಪಡೆಯುವವರಾಗಿರಿ.

ಈ ಸೂಕ್ತದಲ್ಲಿ ವಿದ್ಯಾವಂತರ ಕಾರ್ಯಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೩೬

ಮಂತ್ರಸಂಖ್ಯೆ ೯ । ವಾಮದೇವ ಋಷಿಃ । ಋಭವೋ ದೇವತಾ । ೧, ೬, ೮ ಸ್ವರಾಟ್ತ್ರಿಷ್ಟುಪ್, ೯ ನಿಚೃತ್ತ್ರಿಷ್ಟುಪ್ ।

ಧೈವತಃ ಸ್ವರಃ । ೨-೫ ವಿರಾಡ್ಜಗತೀ, ೭ ಜಗತೀ ಛಂದಃ । ನಿಷಾದಃ ಸ್ವರಃ.

ಇಲ್ಲಿ ಭೂ-ಜಲ-ಅಂತರಿಕ್ಷ ಯಾನದ ಕುರಿತು ಹೇಳಿದೆ.

**ಅನಶ್ವೋ ಜಾತೋ ಅನಭೀಶುರುಕ್ಥ್ಯೋ೩ (ಓ) ೩ ರಥಸ್ತ್ರಿಚಕ್ರಃ ಪರಿ ವರ್ತತೇ ರಜಃ ।**
**ಮಹತ್ತದ್ವೋ ದೇವ್ಯಸ್ಯ ಪ್ರವಾಚನಂ ದ್ಯಾಮೃಭವಃ ಪೃಥಿವೀಂ ಯಚ್ಚ ಪುಷ್ಯಥ ॥೧॥**

**ಪದಾರ್ಥ:-** **[ಋಭವಃ]** ಬುದ್ಧಿವಂತರೇ! **[ವಃ]** ನಿಮಗೆ **[ಅನಶ್ವಃ]** ಅಶ್ವರಹಿತ **[ಅನಭೀಷುಃ]** ಪ್ರತಿಗ್ರಹರಹಿತ **[ಉಕ್ಥಃ]** ಪ್ರಶಂಸಾರ್ಹ **[ತ್ರಿಚಕ್ರಃ]** ಮೂರು ಗಾಲಿಗಳ **[ರಥಃ]** ವಾಹನ ವಿಶೇಷ ಪಡೆದವನು. **[ಜಾತಃ]** ಉತ್ಪನ್ನನಾದವನು **[ಯತ್]** ಯಾವ **[ಮಹತ್]** ಮಹತ್ವಪೂರಿತ **[ರಜಃ]** ಲೋಕ ಸಮೂಹದ **[ಪರಿ]** ಸುತ್ತಲೂ **[ವರ್ತತೇ]** ಇರುವನೋ **[ತತ್]** ಅವನು **[ದೇವ್ಯಸ್ಯ]** ವಿದ್ಯಾವಂತರ ಕರ್ಮಗಳ **[ಪ್ರವಾಚನಂ]** ಉಪದೇಶ ಪಡೆದವನು. **[ದ್ಯಾಂ]** ಬೆಳಕನ್ನು **[ಪೃಥಿವೀಂ, ಚ]** ಭೂಮಿಯನ್ನು **[ಪುಷ್ಯಥ]** ಪುಷ್ಟೀಕರಿಸಿರಿ.

**ಭಾವಾರ್ಥ:-** ಮನುಷ್ಯರೇ! ನೀವು ಬಹುವಿಧ ಪ್ರಾಣ ಶಕ್ತಿಯಿಂದ ಚಲಿಸದ ಯಂತ್ರ ಶಕ್ತಿಯಿಂದ ಚಲಿಸುವ ವಾಹನಗಳನ್ನು ಭೂಮ್ಯಂತರಿಕ್ಷ ಜಲಗಳಲ್ಲಿ ಸಂಚಲಿಸುವವರಾಗಿ ಅತುಲೈಶ್ವರ್ಯಗಳಿಸಿ ಸುಖಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಥಂ ಯೇ ಚಕ್ರುಃ ಸುವೃತಂ ಸುಚೇತಸೋಽವಿಹ್ವರಂತಂ ಮನಸಸ್ಪರಿ ಧ್ಯಯಾ । ತಾँ ಊ**
**ನ್ವ (ಅ) ೧ ಸ್ಯ ಸವನಸ್ಯ ಪೀತಯ ಆ ವೋ ವಾಜಾ ಋಭವೋ ವೇದಯಾಮಸಿ ॥೨॥**

**ಪದಾರ್ಥ:-** [**ವಾಜಾಃ**] ಕರಕುಶಲ ಕರ್ಮಿಗಳಾದ [**ಋಭವಃ**] ಬುದ್ಧಿವಂತರು [**ಯೇ**] ಯಾವ [**ವಃ**] ನಿಮಗೆ [**ಅಸ್ಯ**] ಈ [**ಸವನಸ್ಯ**] ಶಿಲ್ಪ ಕಾರ್ಯದ [**ಪೀತಯೇ**] ತೃಪ್ತಿಗಾಗಿ [**ಸುಚೇತಸಃ**] ಉತ್ತಮ ಜ್ಞಾನವಂತರು [**ಮನಸಃ**] ಜ್ಞಾನದಿಂದ [**ಧ್ಯಯಾ**] ಧ್ಯಾನದಿಂದ [**ಅವಿಹ್ವರಂತಂ**] ಕುಟಿಲಗತಿಯಿಲ್ಲದೆ [**ಸುವೃತಂ**] ಶ್ರೇಷ್ಠ ಅಂಗೋಪಾಂಗಗಳೊಂದಿಗೆ [**ರಥಂ**] ವಿಮಾನಾದಿ ವಾಹನಗಳನ್ನು [**ಪರಿ, ಚಕ್ರುಃ**] ತಯಾರಿಸಿರುವರು. [**ಆ, ವೇದಯಾಮಸಿ**] ಅದನ್ನು ನೀವು ತಿಳಿದಿರುವಿರಿ. [**ತಾನ್**] ಅವುಗಳನ್ನು [**ನು**] [**ಉ**] ನೀವು ಶೀಘ್ರ ಗ್ರಹಣ ಮಾಡಿರಿ.

**ಭಾವಾರ್ಥ:-** ಬುದ್ಧಿವಂತರೇ! ಯಾರು ಉತ್ತಮ ರೀತಿಯ ವಾಹನ ತಯಾರಿಸಿ ಅದನ್ನು ಬಳಸುವ ಶಿಲ್ಪಿಗಳೋ ಅವರನ್ನು ನೀವು ಶೀಘ್ರಗ್ರಹಣ ಮಾಡಿ ಗೌರವಿಸಿ ಶಿಲ್ಪವಿದ್ಯೆಯ ಅಭಿವೃದ್ಧಿಗೊಳಿಸಿರಿ.

ವೃದ್ಧರ ಸತ್ಕಾರದ ವಿಷಯವನ್ನು ಹೇಳಲಾಗುತ್ತದೆ.

**ತದ್ವೋ ವಾಜಾ ಋಭವಃ ಸುಪ್ರವಾಚನಂ ದೇವೇಷು ವಿಭ್ವೋ ಅಭವನ್ಮಹಿತ್ವನಮ್ ।**
**ಜಿವ್ರೀ ಯತ್ ಸಂತಾ ಪಿತರಾ ಸನಾಜುರಾ ಪುನರ್ಯುವಾನಾ ಚರಥಾಯ ತಕ್ಷಥ ॥೩॥**

**ಪದಾರ್ಥ:-** [**ವಾಜಾಃ**] ಅನ್ನಾದಿಗಳಿಂದ ಸಮೃದ್ಧರಾದ [**ಋಭವಃ**] ಬುದ್ಧಿವಂತರೇ! [**ವಿಭ್ವಃ**] ಸಕಲ ವಿದ್ಯಾ ವ್ಯಾಪಕ [**ಯತ್**] ಯಾವ [**ವಃ**] ನಿಮ್ಮನ್ನು [**ದೇವೇಷು**] ವಿದ್ವಾಂಸರಲ್ಲಿ [**ಮಹಿತ್ವನಂ**] ಪ್ರತಿಷ್ಠೆಯನ್ನು [**ಸುಪ್ರವಾಚನಂ**] ಉತ್ತಮ ಪ್ರವಚನವನ್ನು [**ಅಭವತ್**] ಮಾಡುವೆವು. [**ತತ್**] ಅದನ್ನು ಪಡೆದು [**ಜವ್ರೀ**] ಜೀವಿಸುತ್ತ [**ಸಂತಾ**] ಇರುವವರು [**ಸನಾಜುರಾ**] ವೃದ್ಧಾವಸ್ಥೆಯನ್ನು ಪಡೆದ [**ಪಿತರಾ**] ಜನನೀ-ಜನಕರು [**ಚರಥಾಯ**] ಚಲಿಸಲು -ಭಕ್ಷಿಸಲು [**ಪುನಃ**] ಮತ್ತೆ ಯುವಾವಸ್ಥೆಯನ್ನು [**ತಕ್ಷಥ**] ಪಡೆಯುವಂತೆ ಮಾಡಿರಿ.

**ಭಾವಾರ್ಥ:-** ಬುದ್ಧಿವಂತರಾದ ನೀವು ವಿದ್ಯಾರ್ಜನೆ ಮಾಡಿ ಜ್ಞಾನ ವೃದ್ಧರಾಗಿರುವುದರಿಂದ ಯುವಾವಸ್ಥೆಯಲ್ಲಿದ್ದರೂ ವೃದ್ಧರು ಅಂದರೆ ಹಿರಿಯರೆನಿಸಿಕೊಂಡು ಸತ್ಕಾರಾರ್ಹರಾಗುವಿರಿ.

ಯಾರು ಪ್ರಶಂಸಾರ್ಹರು ಎಂಬ ವಿಷಯವನ್ನು ಹೇಳಲಾಗುತ್ತದೆ.

**ಏಕಂ ವಿ ಚಕ್ರ ಚಮಸಂ ಚತುರ್ವಯಂ ನಿಶ್ಚರ್ಮಣೋ ಗಾಮರಿಣೀತ ಧೀತಿಭಿಃ ।**
**ಅಥಾ ದೇವೇಷ್ವಮೃತತ್ವಮಾನಶ ಶ್ರುಷ್ಟೀ ವಾಜಾ ಋಭವಸ್ತದ್ವ ಉಕ್ಥ್ಯಮ್ ॥೪॥**

**ಪದಾರ್ಥ:-** [**ವಾಜಾಃ**] ಐಶ್ವರ್ಯವಂತರಾದ [**ಋಭವಃ**] ಬುದ್ಧಿವಂತರೇ! [**ತತ್**] ಆ [**ವಃ**] ನೀವು [**ಉಕ್ಥ್ಯಂ**] ಪ್ರಶಂಸಾರ್ಹ ಕರ್ಮದ [**ಶ್ರುಷ್ಟೀ**] ಶೀಘ್ರಗತಿಯ [**ಧೀತಿಭಿಃ**] ಬೆರಳುಗಳಂತೆ ಕಡಿತ ನಿವಾರಿಸುವಿಕೆಯಿಂದ [**ಚರ್ಮಣಃ**] ತ್ವಚೆಯ [**ಗಾಂ**] ಭೂಮಿಯನ್ನು [**ಅರಿಣೀತ**] ಪಡೆಯಿರಿ. [**ಅಥ**] ಅನಂತರ [**ದೇವೇಷು**] ವಿದ್ವಾಂಸರಲ್ಲಿ [**ಅಮೃತತ್ವಂ**] ಮೋಕ್ಷಸುಖವನ್ನು [**ಆನಶ**] ಪ್ರಾಪ್ತಿಗೊಳಿಸಿರಿ. [**ಏಕಂ**] ಒಬ್ಬೊಂಟಿಗ [**ಚಮಸಂ**] ಮೇಘದಂತೆ ವಿಭಜಿಸಿದ [**ಚತುರ್ವಯಂ**] ನಾವು ನಾಲ್ವರು [**ಉ, ನಿ, ಚಕ್ರ**] ನಾವು ಮಾಡಿದಂತೆ ನೀವು ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಪ್ರಶಂಸಾರ್ಹ ಕರ್ಮಗಳನ್ನು ಮಾಡುವರೋ ಅವರು ವ್ಯಾವಹಾರಿಕ ಮತ್ತು ಪಾರಮಾರ್ಥಿಕ ಸುಖ ಪಡೆದು ಪಂಡಿತರಲ್ಲೇ ಪ್ರಶಂಸೆಗೆ ಪಾತ್ರರಾಗುವರು.

ವಿದ್ಯಾವಂತರ ವಿಷಯವನ್ನು ಹೇಳಲಾಗುತ್ತದೆ.

**ಋಭುತೋ ರಯಿಃ ಪ್ರಥಮಶ್ರವಸ್ತಮೋ ವಾಜಶ್ರುತಾಸೋ ಯಮಜೀಜನನ್ನರಃ ।**
**ವಿಭ್ವತಷ್ಟೋ ವಿದಥೇಷು ಪ್ರವಾಚ್ಯೋ ಯಂ ದೇವಾಸೋಽವಥಾ ಸ ವಿಚರ್ಷಣಿಃ ॥೫॥**

**ಪದಾರ್ಥ:-** [**ದೇವಾಸಃ**] ವಿದ್ಯಾವಂತರೇ! [**ವಾಜಶ್ರುತಾಸಃ**] ವಿಜ್ಞಾನವನ್ನು ಕೇಳಿಸಿಕೊಳ್ಳುವ [**ನರಃ**] ಮನುಷ್ಯನು [**ಯಂ**] ಯಾರನ್ನು [**ಅಜೀಜನತ್**] ಉತ್ಪಾದಿಸುವನೋ [**ಸಃ**] ಅವನು [**ವಿಭ್ವತಷ್ಟಃ**] ವ್ಯಾಪಕ ಪದಾರ್ಥಗಳನ್ನರಿಯದವನು [**ವಿದಥೇಷು**] ತಿಳಿಯಲರ್ಹ ವ್ಯವಹಾರಗಳಲ್ಲಿ [**ಪ್ರವಾಚ್ಯಃ**] ಪ್ರವಚನ ಯೋಗ್ಯವಾಗುವುದರಿಂದ [**ಋಭುತಃ**] ಬುದ್ಧಿವಂತರ ದೆಸೆಯಿಂದ [**ಪ್ರಥಮಶ್ರವಸ್ತಮಃ**] ಮೊದಲು ಕೇಳಿಸಿಕೊಂಡವನು [**ರಯಿಃ**] ಧನ ಪಡೆಯುವನು. [**ಯಂ**] ಯಾರನ್ನು [**ಅವಥ**] ನೀವು ರಕ್ಷಿಸಿರುವಿರೋ [**ವಿಚರ್ಷಣಿಃ**] ನೋಡಲರ್ಹ ಎಲ್ಲಾ ಪದಾರ್ಥಗಳನ್ನೂ ನೋಡುವವನು.

**ಭಾವಾರ್ಥ:-** ವಿದ್ಯಾವಂತರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿ ಅವರನ್ನೂ ವಿದ್ಯಾವಂತರನ್ನಾಗಿ ಮಾಡಬೇಕು. ಅದರಿಂದ ಪದಾರ್ಥ ವಿದ್ಯಾರಹಿತರೂ ಪದಾರ್ಥ ವಿದ್ಯೆಬಲ್ಲವರಾಗುವರು. ಧನ ಪಡೆದು ಸುಖಿಗಳಾಗುವರು ಅಂತಹ ವಿದ್ಯಾವಂತರೇ ಶ್ರೇಷ್ಠರೆನಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ವಾಜ್ಯರ್ವಾ ಸ ಋಷಿರ್ವಚಸ್ಯಯಾ ಸ ಶೂರೋ ಅಸ್ತಾ ಪೃತನಾಸು ದುಷ್ಟರಃ । ಸ**
**ರಾಯಸ್ಪೋಷಂ ಸ ಸುವೀರ್ಯಂ ದಧೇ ಯಂ ವಾಜೋ ವಿಭ್ವಾ ಋಭವೋ ಯಮಾವಿಷುಃ ॥೬॥**

**ಪದಾರ್ಥ:-** [**ಋಭವಃ**] ಬುದ್ಧಿವಂತರು [**ವಿಭ್ವಾ**] ವ್ಯಾಪಕ ಪದಾರ್ಥದಿಂದ [**ಯಂ**] ಯಾರನ್ನು [**ಆವಿಷುಃ**] ವಿದ್ಯಾವಂತರನ್ನಾಗಿ ಮಾಡುವರೋ [**ಯಂ**] ಯಾರನ್ನು [**ವಾಜಃ**] ವಿಜ್ಞಾನಧಾರಕನನ್ನಾಗಿಸುವರೋ [**ಸಃ**] ಅವನು [**ವಚಸ್ಯಯಾ**] ಪ್ರಶಂಸೆಯೊಂದಿಗೆ [**ಅರ್ವಾ**] ಉತ್ತಮಗುಣ ಪಡೆದುಕೊಳ್ಳುವನು. [**ವಾಜೀ**] ವಿಜ್ಞಾನವಂತನಾದ [**ಸಃ**] ಅವನು [**ಋಷಿಃ**] ವೇದಾರ್ಥಬಲ್ಲವನಾಗುವನು. [**ಸಃ**] ಅವನು [**ಪೃತನಾಸು**] ಶತ್ರುಸೇನೆಗಳಲ್ಲಿ [**ದುಷ್ಟರಃ**] ದುಃಖದಾಟುವವನು. [**ಶೂರಃ**] ವೀರಪುರುಷನು. [**ಅಸ್ತಾ**] ಶತ್ರುಗಳನ್ನು ದೂರಕ್ಕಟ್ಟುವವನು. [**ಸಃ**] ಅವನು [**ರಾಯಃ**] ಧನವನ್ನು [**ಪೋಷ**] ಪುಷ್ಟಿಕರಿಸುವವನು. [**ಸಃ**] ಅವನು [**ಸುವೀರ್ಯಂ**] ಉತ್ತಮ ಬಲಪರಾಕ್ರಮಗಳನ್ನು [**ದಧೇ**] ಧಾರಣ ಮಾಡುವನು.

**ಭಾವಾರ್ಥ:-** ಯಾರು ವಿದ್ಯಾವಂತರ ಸಂಗದಿಂದ ಉತ್ತಮ ಗುಣಗಳನ್ನು ಪಡೆಯುವರೋ ಅವರು ಪ್ರಶಂಸಿತರಾಗುವರು. ಶತ್ರುಗಳಿಂದ ಅಭೇದ್ಯರಾಗುವರು. ಧನಾಢ್ಯರೂ ಪರಾಕ್ರಮಿಗಳೂ ಆಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶ್ರೇಷ್ಠಂ ವಃ ಪೇಶೋ ಅಧಿ ಧಾಯಿ ದರ್ಶತಂ ಸ್ತೋಮೋ ವಾಜಾ ಋಭವಸ್ತಂ ಜುಜುಷ್ಟನ ।**
**ಧೀರಾಸೋ ಹಿ ಷ್ಠಾ ಕವಯೋ ವಿಪಶ್ಚಿತ-ಸ್ತಾನ್ ವ ಏನಾ ಬ್ರಹ್ಮಣಾ ವೇದಯಾಮಸಿ ॥೭॥**

**ಪದಾರ್ಥ:-** [**ವಾಜಾಃ**] ಉತ್ತಮ ಸ್ವಭಾವದ [**ಋಭವಃ**] ಬುದ್ಧಿವಂತರೇ! [**ವಃ**] ನಿಮ್ಮ [**ಶ್ರೇಷ್ಠಂ**] ಶ್ರೇಷ್ಠವಾದ [**ದರ್ಶತಂ**] ದರ್ಶನ ಯೋಗ್ಯ [**ಪೇಶಂ**] ಸುಂದರ ರೂಪವು [**ಸ್ತೋಮಃ**] ಪ್ರಶಂಸೆಯು [**ಅಧಿ**] ಧಾರಣ ಮಾಡಲಾಗಿದೆಯೋ [**ಹ**] ಯಾವ ಕಾರಣದಿಂದ [**ಧೀರಾಸಃ**] ವಿಚಾರಶೀಲಯೋಗಿಗಳು [**ಕವಯಃ**]

ಬಹುಶಾಸ್ತ್ರಬಲ್ಲವರು [ವಿಪಶ್ಚಿತಃ] ಸತ್ಯಾಸತ್ಯ ವಿಮರ್ಶಕರು [ವಃ] ನಿಮ್ಮನ್ನು [ಏನಾ] ಈ [ಬ್ರಹ್ಮಣಾ] ವೇದದಿಂದ [ಆ, ವೇದಯಾಮಸಿ] ತಿಳಿದುಕೊಳ್ಳುವರು. [ತಂ] ಅವನನ್ನು [ತಾನ್] ಅವರನ್ನು [ಜುಜುಷ್ಟನ] ಸೇವಿಸುವವನಾಗು, [ಸ್ಥ] ಪ್ರೀತಿಪಾತ್ರನಾಗಿರು.

**ಭಾವಾರ್ಥ:-** ವಿದ್ಯಾರ್ಥಿಗಳು ಶ್ರೇಷ್ಠ ಅಧ್ಯಾಪಕರ ಯಾಥಾರ್ಥೋಪದೇಶಕರ ಸೇವೆ ಮಾಡಿ ಅವರಿಂದ ವಿದ್ಯೆಯನ್ನು ಪಡೆದು ವಿದ್ಯಾವಂತರೂ ಲಕ್ಷ್ಮೀವಂತರೂ ಆಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೂಯಮಸ್ಮಭ್ಯಂ ಧಿಷಣಾಭ್ಯಸ್ಪರಿ ವಿದ್ವಾಂಸೋ ವಿಶ್ವಾ ನರ್ಯಾಣಿ ಭೋಜನಾ ।**
**ದ್ಯುಮಂತಂ ವಾಜಂ ವೃಷಶುಷ್ಮಮುತ್ತಮ-ಮಾ ನೋ ರಯಿಮೃಭವಸ್ತಕ್ಷತಾ ವಯಃ ॥೮॥**

**ಪದಾರ್ಥ:-** [ವಿದ್ವಾಂಸಃ] ವಿದ್ಯಾವಂತರಾದ [ಋಭವಃ] ಬುದ್ಧಿಜೀವಿಗಳೇ! [ಯೂಯಂ] ನೀವು [ಅಸ್ಮಭ್ಯಂ] ನಮಗೆ [ಧಿಷಣಾಭ್ಯಃ] ಬುದ್ಧಿಶಕ್ತಿಯಿಂದ [ವಿಶ್ವಾ] ಸಮಗ್ರ [ನರ್ಯಾಣಿ] ಮನುಷ್ಯರಿಗೆ ಹಿತಕಾರಕ [ಭೋಜನಾ] ಅನ್ನ, ಪಾಲನೆಗಳ [ದ್ಯುಮಂತಂ] ಶೋಭೆಯನ್ನು [ವೃಷಶುಷ್ಮಂ] ಬಲಿಷ್ಠರ ಬಲವನ್ನು [ಉತ್ತಮಂ] [ವಾಜಂ] ಶ್ರೇಷ್ಠ ವಿಜ್ಞಾನವನ್ನೂ [ರಯಿಂ] ಸಂಪತ್ತನ್ನು [ನಃ] ನಮಗೆ [ವಯಃ] ಆಯುಸ್ಸನ್ನೂ [ಆತಕ್ಷತ] ವಿಸ್ತರಿಸಿರಿ. [ಪರಿ, ಆ] ಎಲ್ಲಾ ರೀತಿಯಿಂದಲೂ ಅಭಿವೃದ್ಧಿಗೊಳಿಸಿರಿ.

**ಭಾವಾರ್ಥ:-** ಯಾವ ವಿದ್ವಾಂಸರು ಪತನ-ಪಾತನಾದಿಗಳಿಂದ ಮನುಷ್ಯರ ಬುದ್ಧಿಶಕ್ತಿಯನ್ನು ಬೆಳೆಸುವರೋ ಅವರೇ ಎಲ್ಲರ ಹಿತೈಷಿಗಳೆಂದು ತಿಳಿಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಹ ಪ್ರಜಾಮಿಹ ರಯಿಂ ರರಾಣಾ ಇಹ ಶ್ರವೋ ವೀರವತ್ತಕ್ಷತಾ ನಃ ।**
**ಯೇನ ವಯಂ ಚಿತಯೇಮಾತ್ಯನ್ಯಾನ್ ತಂ ವಾಜಂ ಚಿತ್ರಮೃಭವೋ ದದಾ ನಃ ॥೯॥**

**ಪದಾರ್ಥ:-** [ಋಭವಃ] ಬುದ್ಧಿವಂತರೇ! ನೀವು [ಇಹ] ಈ ಜಗತ್ತಿನಲ್ಲಿ [ನಃ] ನಮಗೆ [ಪ್ರಜಾಂ] ಉತ್ತಮಸಂತಾನವನ್ನು [ಇಹ] ಇಲ್ಲಿ ಸಂಪತ್ತನ್ನು [ಇಹ] ಇಲ್ಲಿ [ವೀರವತ್] ಶೌರ್ಯವನ್ನು [ಶ್ರವಃ] ಅನ್ನವನ್ನು [ರರಾಣಃ] ಕೊಡುವವರಾಗಿ [ತಕ್ಷತ] ಪ್ರಾಪ್ತಿಗೊಳಿಸಿರಿ. [ಯೇನ] ಯಾವುದರಿಂದ [ವಯಂ] ನಾವು [ಅನ್ಯಾನ್] ಬೇರೆಯವರನ್ನು [ಅತಿ, ಚಿತಯೇಮ] ಉತ್ತಮ ರೀತಿಯ ಜ್ಞಾನವಂತರನ್ನಾಗಿ ಮಾಡಬಹುದು. [ತಂ] ಆ [ಚಿತ್ರಂ] ಅದ್ಭುತವಾದ [ವಾಜಂ] ವಿಜ್ಞಾನವನ್ನು [ನಃ] ನಮಗೆ [ದದಾ] ಕೊಡಿರಿ.

**ಭಾವಾರ್ಥ:-** ಜನಸಾಮಾನ್ಯರು, ವಿದ್ಯಾವಂತರನ್ನು ಸಂಧಿಸಿದಾಗ ಅವರಿಂದ ವಿಜ್ಞಾನ, ಸತ್ಯಶ್ರವಣ, ಧನ, ಪ್ರಜೆ, ಶೂರವೀರ ಸೈನ್ಯ ಇವುಗಳನ್ನೆಲ್ಲ ಪ್ರಾರ್ಥಿಸಿ ಪಡೆದುಕೊಳ್ಳಬೇಕು ಹಾಗೂ ತಾವು ಪಡೆದದ್ದನ್ನು ಅನ್ಯರಿಗೂ ನಿಂತರ ಬೋಧಿಸಿ ಅವರನ್ನೂ ವಿಚಕ್ಷಣರನ್ನಾಗಿ ಮಾಡಬೇಕು.

ಈ ಸೂಕ್ತದಲ್ಲಿ ವಿಪಶ್ಚಿತರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಮುವತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೩೭

ಮಂತ್ರಸಂಖ್ಯೆ ೮ । ವಾಮದೇವ ಋಷಿಃ । ಋಭವೋ ದೇವತಾ । ೧ ವಿರಾಟ್ತ್ರಿಷ್ಟುಪ್, ೨ ತ್ರಿಷ್ಟುಪ್, ೩-೮ ನಿಚೃತ್ತ್ರಿಷ್ಟುಪ್। ಧೈವತಃ ಸ್ವರಃ । ೪ ಪಂಕ್ತಿಃ । ಪಂಚಮಃ ಸ್ವರಃ । ೫, ೭ ಅನುಷ್ಟುಪ್, ೬ ನಿಚೃದನುಷ್ಟುಪ್ ಛಂದಃ । ಋಷಭಃ ಸ್ವರಃ.

ವಿದ್ವಾಂಸರ ಗುಣವರ್ಣನೆ ಮಾಡಲಾಗಿದೆ.

**ಉಪ ನೋ ವಾಜಾ ಅಧ್ವರಮೃಭುಕ್ಷಾ ದೇವಾ ಯಾತ ಪಥಿಭಿರ್ದೇವಯಾನೈಃ । ಯಥಾ**
**ಯಜ್ಞಂ ಮನುಷೋ ವಿಕ್ಷ್ವಾ (ಆ) ಸು ದಧಿಧ್ವೇ ರಣ್ವಾಃ ಸುದಿನೇಷ್ವಹ್ನಾಮ್ ॥೧॥**

**ಪದಾರ್ಥ:-** **[ಋಭುಕ್ಷಾಃ]** ಅತಿಶಯ **[ವಾಜಾಃ]** ವಿಜ್ಞಾನವಂತರಾದ **[ದೇವಾಃ]** ವಿದ್ವಾಂಸರೇ! ನೀವು **[ಯಥಾ]** ಹೇಗೆ **[ರಣ್ವಾಃ]** ಸುಂದರ **[ಮನುಷಃ]** ವಿಚಾರಶೀಲರೋ **[ಅಹ್ನಾಂ]** ದಿನಗಳಲ್ಲೇ **[ಸುದಿನೇಷು]** ಉತ್ತಮದಿನಗಳಲ್ಲಿ **[ಆಸು]** ಈ **[ವಿಕ್ಷು]** ಪ್ರಜೆಗಳಲ್ಲಿ **[ಯಜ್ಞಂ]** ದೋಷರಹಿತ ವ್ಯವಹಾರವನ್ನು **[ದಧಿಧ್ವೇ]** ಧಾರಣ ಮಾಡಿರಿ. **[ದೇವಯಾನೈಃ]** ವಿದ್ಯಾವಂತರು ಚಲಿಸುವಂತಹ **[ಪಥಿಭಿಃ]** ಮಾರ್ಗಗಳಿಂದ **[ನಃ]** ನಮ್ಮನ್ನು **[ಅಧ್ವರಂ]** ಅಹಿಂಸಾಮಯ ಯಜ್ಞವನ್ನು **[ಉಪ, ಯಾತ]** ಪ್ರಾಪ್ತಿಗೊಳಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಧಾರ್ಮಿಕ ವಿದ್ವಾಂಸರು ಅನುಸರಿಸುವ ವಿಧಿ-ವಿಧಾನಗಳನ್ನು ತಮ್ಮ ಆಚರಣೆಯಲ್ಲಿ ತರುವರೋ ಅವರು ಪ್ರಜೆಗಳ ಹಿತಸಾಧಿಸಲು ಸಮರ್ಥರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೇ ವೋ ಹೃದೇ ಮನಸೇ ಸಂತು ಯಜ್ಞಾ ಜುಷ್ಟಾಸೋ ಅದ್ಯ ಘೃತನಿರ್ಣಿಜೋ ಗುಃ ।**
**ಪ್ರ ವಃ ಸುತಾಸೋ ಹರಯಂತ ಪೂರ್ಣಾಃ ಕ್ರತ್ವೇ ದಕ್ಷಾಯ ಹರ್ಷಯಂತ ಪೀತಾಃ ॥೨॥**

**ಪದಾರ್ಥ:-** **[ತೇ]** ಅವರು **[ಹೃದೇ]** ಹೃದಯದಲ್ಲಿ **[ಮನಸೇ]** ಅಂತಃಕರಣದಲ್ಲಿ **[ಅದ್ಯ]** ಈದಿನ **[ವಃ]** ನಿಮ್ಮ **[ಘೃತನಿರ್ಣಿಜಃ]** ಜಲದಿಂದ ಶುದ್ಧೀಕರಿಸಿದ **[ಜುಷ್ಟಾಸಃ]** ವಿದ್ವಾಂಸರಿಂದ ಸೇವಿಸಲಾದ **[ಯಜ್ಞಾಃ]** ಸತ್ಯಾಚರಣಾದಿ ವ್ಯವಹಾರಗಳನ್ನು **[ಸಂತು]** ಪ್ರಾಪ್ತಿಗೊಳಿಸಲಿ. **[ಸುತಾಸಃ]** ತಯಾರಿಸಲಾದ **[ವಃ]** ನಿಮ್ಮನ್ನು **[ಗುಃ]** ಪಡೆಯಲಿ **[ಪ್ರ, ಹರಯಂತ]** ಇಚ್ಛಿಸಲಿ. **[ಕ್ರತ್ವೇ]** ಬುದ್ಧಿಮತ್ತೆಗೆ **[ದಕ್ಷಾಯ]** ಚತುರತೆಗೆ **[ಪೂರ್ಣಾಃ]** ಪರಿಪೂರ್ಣ **[ಪೀತಾಃ]** ಪಾಲನೆ ಮಾಡಿದವರಾಗಿ **[ಹರ್ಷಯಂತ]** ಪ್ರಸನ್ನರಾಗಿರಿ.

**ಭಾವಾರ್ಥ:-** ಮನುಷ್ಯರೇ! ಯಾವುದರಿಂದ ನಿಮ್ಮ ಪಾವಿತ್ರ್ಯ, ಬುದ್ಧಿ, ಚಾತುರ್ಯ, ವೃದ್ಧಿಯಾಗುವುದೋ ನೀವು ಅಂತಹ ಕಾರ್ಯಗಳನ್ನು ಮಾಡಿರಿ. ಮದ್ಯಪಾನ, ಮಾಂಸಾಹಾರಗಳನ್ನು ತ್ಯಜಿಸಿರಿ. ಉತ್ತಮ ಪದಾರ್ಥಗಳನ್ನು ಸೇವಿಸುತ್ತ ಜ್ಞಾನಾಭಿವೃದ್ಧಿ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ರ್ಯುದಾಯಂ ದೇವಹಿತಂ ಯಥಾ ವಃ ಸ್ತೋಮೋ ವಾಜಾ ಋಭುಕ್ಷಣೋ ದದೇ ವಃ ।**
**ಜುಹ್ವೇ ಮನುಷ್ವದುಪರಾಸು ವಿಕ್ಷು ಯುಷ್ಮೇ ಸಚಾ ಬೃಹದ್ದಿವೇಷು ಸೋಮಮ್ ॥೩॥**

**ಪದಾರ್ಥ:-** **[ವಾಜಾಃ]** ಅನ್ನ ಹಾಗೂ ವಿಜ್ಞಾನವಂತರು **[ಋಭುಕ್ಷಣಃ]** ಶ್ರೇಷ್ಠ ಜನರೇ! **[ಯಥಾ]** ಹೇಗೆ **[ವಃ]** ನಿಮ್ಮ **[ಸ್ತೋಮಃ]** ಪ್ರಶಂಸೆಯು ಸುಖವನ್ನು **[ದದೇ]** ಕೊಡುತ್ತದೆ. **[ಮನುಷ್ಯತ್]** ವಿದ್ವಾಂಸರಂತೆ **[ವಃ]** ನಿಮ್ಮನ್ನು **[ಉಪರಾಸು]** ಶ್ರೇಷ್ಠರಾದ **[ವಿಕ್ಷು]** ಪ್ರಜೆಗಳಲ್ಲಿ **[ಸಚಾ]** ನೈಜತೆಯಿಂದ **[ಬೃಹದ್ದಿವೇಷು]** ಮಹತ್ತರ ದಿವ್ಯ ಪದಾರ್ಥಗಳಲ್ಲಿ **[ತ್ರು ್ಯದಾಯಂ]** ಮನ, ಮಾತು, ಕೃತಿಗಳಲ್ಲಿ **[ದೇವಹಿತಂ]** ವಿದ್ಯಾವಂತರಿಗೆ ಹಿತಕಾರಕ **[ಸೋಮಂ]** ಸಂಪತ್ತನ್ನು **[ಜುಹ್ವೇ]** ಸಿದ್ಧಪಡಿಸುವೆನು, **[ಯುಷ್ಮೇ]** ನಿಮಗೆ ಕೊಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ವಿದ್ವಾಂಸರು ನಿಮಗೆ ಸುಖ ನೀಡುವರು ಮತ್ತು ನಿಮ್ಮ ಹಿತಚಿಂತಿಸುವರು. ಅದೇ ರೀತಿ ನೀವೂ ಅವರಿಗೆ ಸುಖದಾಯಕರೂ ಹಿತಚಿಂತಕರೂ ಆಗಿರಿ.

ರಾಜಪುರುಷರ ವಿಷಯವನ್ನು ಹೇಳಲಾಗುತ್ತದೆ.

**ಪೀವೋಅಶ್ವಾಃ ಶುಚದ್ರಥಾ ಹಿ ಭೂತಾ-ಯಃಶಿಪ್ರಾ ವಾಜಿನಃ ಸುನಿಷ್ಕಾಃ ।**
**ಇಂದ್ರಸ್ಯ ಸೂನೋ ಶವಸೋ ನಪಾತೋಽನು ವಶ್ಚೇತ್ಯಗ್ರಿಯಂ ಮದಾಯ ॥೪॥**

**ಪದಾರ್ಥ:-** **[ಪೀವೋ ಅಶ್ವಾಃ]** ದಷ್ಟ-ಪುಷ್ಟ ಅಶ್ವಗಳು **[ಶುಚದ್ರಥಾಃ]** ಪವಿತ್ರ ವಾಹನಗಳು **[ಸುನಿಷ್ಕಾಃ]** ಸುವರ್ಣಾಭರಣಗಳು ಇವುಗಳಿರುವ **[ವಾಜಿನಃ]** ಗತಿಶೀಲ ಜನರು **[ಹಿ]** ಯಾವ ಕಾರಣದಿಂದ **[ಭೂತ್]** ಜಯಶೀಲರಾಗುವರು. **[ನಪಾತಃ]** ಅಧಃಪತನವಾಗದವರು **[ಶವಾಸಃ]** ಬಲವಂತರು **[ಇಂದ್ರಸ್ಯ]** ರಾಜನ **[ಸೂನೋ]** ಮಗನು **[ಮದಾಯ]** ಆನಂದಕ್ಕಾಗಿ **[ಅಗ್ರಿಯಂ]** ಮೊದಲಸ್ಥಾನದಲ್ಲಿರುವ **[ವಃ]** ನಿಮ್ಮ **[ಅನು, ಚೇತಿ]** ಸುಖವು ಅರಿಯಲಾಗುತ್ತದೆ.

**ಭಾವಾರ್ಥ:-** ರಾಜಪುರುಷರೇ! ನೀವು ನಿಮ್ಮ ಬಲವನ್ನು ವಿಸ್ತರಿಸಿರಿ. ಸೇನಾಂಗಗಳನ್ನು ಬಲಪಡಿಸಿರಿ. ಧನಾಢ್ಯರಾಗಿರಿ, ಆನಂದವನ್ನು ಹೆಚ್ಚಿಸಿಕೊಳ್ಳಿರಿ. ಉತ್ತಮ ಕೆಲಸ ಮಾಡಿರಿ. ಅದರಿಂದ ಶತ್ರುಗಳು ನಿಮ್ಮತ್ತ ಕಣ್ಣೆತ್ತಿಯೂ ನೋಡಲಾರರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಋಭುಮೃಭುಕ್ಷಣೋ ರಯಿಂ ವಾಜೇ ವಾಜಿಂತಮಂ ಯುಜಮ್ ।**
**ಇಂದ್ರಸ್ವಂತಂ ಹವಾಮಹೇ ಸದಾಸಾತಮಮಶ್ವಿನಮ್ ॥೫॥**

**ಪದಾರ್ಥ:-** **[ಋಭುಕ್ಷಣಃ]** ಹಿರಿಯ ವಿದ್ವಾಂಸರೇ! **[ವಾಜೇ]** ಸಂಗ್ರಾಮದಲ್ಲಿ **[ಋಭುಂ]** ಬುದ್ಧಿಯನ್ನು **[ವಾಜಿಂತಮಂ]** ಅಶ್ವಯುಕ್ತ **[ಯುಜಂ]** ಸಮಾಧಾನ ಪಡಿಸುವ **[ಇಂದ್ರಸ್ವಂತಂ]** ಧನಿಕ ಸ್ವಾಮಿಯೊಂದಿಗೆ **[ಮದಾಸಾತಮಂ]** ವಿಭಾಗಿಸಲರ್ಹವಾದುದನ್ನು **[ಅಶ್ವಿನಂ]** ಅಶ್ವಾದಿಯುಕ್ತನನ್ನು **[ರಯಿಂ]** ಧನವನ್ನು **[ಹವಾಮಹೇ]** ಗ್ರಹಣ ಮಾಡುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ನೀವು ಪರಸ್ಪರ ಬಲವರ್ಧನೆ ಮಾಡಿಕೊಂಡು ಸಂಗ್ರಾಮಗಳನ್ನು ಜಯಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸೇದೃಭವೋ ಯಮವಥ ಯೂಯಮಿಂದ್ರಶ್ಚ ಮರ್ತ್ಯಮ್ ।**

**ಸ ಧೀಭಿರಸ್ತು ಸನಿತಾ ಮೇಧಸಾತಾ ಸೋ ಅರ್ವತಾ ॥೬॥**

**ಪದಾರ್ಥ:-** **[ಋಭವಃ]** ಬುದ್ಧಿವಂತರೇ! **[ಯೂಯಂ]** ನೀವು **[ಯಂ]** ಯಾವ **[ಮರ್ತ್ಯಂ]** ಮನುಷ್ಯನನ್ನು **[ಅವಥ]** ರಕ್ಷಿಸುತ್ತಿರುವಿರೋ. **[ಇಂದ್ರಃ]** ರಾಜನು **[ಚ]** ಇನ್ನೂ ರಕ್ಷಿಸುವವನು **[ಸಃ]** ಅವನು **[ಇತ್]** ಅದನ್ನೇ **[ಧೀಭಿಃ]** ಬುದ್ಧಿಯಿಂದ **[ಸಃ]** ಅವನು **[ಸವಿತಾ]** ಸತ್ಯಾಸತ್ಯಗಳ ವಿಭಾಜಕನು **[ಸಃ]** **[ಅವತಾ]** ಅಶ್ವಾದಿಗಳಿಂದ **[ಮೇಧಸಾತಾ]** ಸಂಗ್ರಾಮದಲ್ಲಿ ವಿಜಯಶೀಲನು **[ಅಸ್ತು]** ಆಗಲಿ.

**ಭಾವಾರ್ಥ:-** ರಾಜ ಮತ್ತು ರಾಜಸೇವಕರೇ! ನಿಮ್ಮ ಅಧ್ಯಕ್ಷನು ಬುದ್ಧಿವಂತನೂ ರಕ್ಷಕನೂ ಆಗಿದ್ದರೆ ನಿಮ್ಮ ವಿಜಯ ಸುಲಭವಾಗಿ ಆಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿ ನೋ ವಾಜಾ ಋಭುಕ್ಷಣಃ ಪಥಶ್ಚಿತನ ಯಷ್ಟವೇ ।**

**ಅಸ್ಮಭ್ಯಂ ಸೂರಯಃ ಸ್ತುತಾ ವಿಶ್ವಾ ಆಶಾಸ್ತರೀಷಣಿ ॥೭॥**

**ಪದಾರ್ಥ:-** **[ವಾಜಾಃ]** ಪ್ರಶಂಸಿತ **[ಋಭುಕ್ಷಣಃ]** ಅತಿಶಯ **[ಸ್ತುತಾಃ]** ಸ್ತುತಿಸಲ್ಪಟ್ಟ **[ಸೂರಯಃ]** ವಿದ್ವಾಂಸರೇ! ನೀನು **[ಅಸ್ಮಭ್ಯಂ]** ನಮ್ಮನ್ನು **[ಯಷ್ಟವೇ]** ಸೇರಲು **[ಪಥಃ]** ಮಾರ್ಗವನ್ನು **[ವಿ, ಚಿತನ]** ತಿಳಿದುಕೊ **[ತರೀಷಣಿ]** ದುಃಖ ಪಾರುಮಾಡಲು ಸಮರ್ಥನಾಗಿ **[ನಃ]** ನಮ್ಮ **[ವಿಶ್ವಾಃ]** ಸಮಗ್ರ **[ಆಶಾಃ]** ಇಚ್ಛೆಗಳು ಪೂರ್ಣಗೊಳ್ಳಲಿ.

**ಭಾವಾರ್ಥ:-** ಯಾರು ಬಾಲ್ಯಾವಸ್ಥೆಯಿಂದಲೇ ವಿದ್ವಾಂಸರಿಂದ ಉತ್ತಮ ಶಿಕ್ಷಣ ಪಡೆಯುವರೋ, ಅವರ ಸಮಗ್ರ ಇಷ್ಟಾರ್ಥವು ಪೂರ್ಣಗೊಳ್ಳುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಂ ನೋ ವಾಜಾ ಋಭುಕ್ಷಣ ಇಂದ್ರ ನಾಸತ್ಯಾ ರಯಿಮ್ ।**

**ಸಮಶ್ವಂ ಚರ್ಷಣಿಭ್ಯ ಆ ಪುರು ಶಸ್ತ ಮಘತ್ತಯೇ ॥೮॥**

**ಪದಾರ್ಥ:-** **[ವಾಜಾಃ]** ದಾನಿಗಳೇ! **[ಋಭುಕ್ಷಣ]** ದೊಡ್ಡವರಾದ ನೀವು **[ನಾಸತ್ಯಾ]** ಅಸತ್ಯಾಚಾರ ರಹಿತರಾಗಿ **[ನಃ]** ನಮಗೆ **[ಚರ್ಷಣಿಭ್ಯಃ]** ಮನುಷ್ಯರಿಗಾಗಿ **[ಮಘತ್ತಯೇ]** ಶ್ರೇಷ್ಠಧನ ಪ್ರಾಪ್ತಿಗಾಗಿ **[ತಂ]** ಆ **[ಅಶ್ವಂ]** ಅತಿಶಯ **[ರಯಿಂ]** ಧನವನ್ನು **[ಪುರು]** ಬಹಳ **[ಸಂ]** **[ಆ]** ಗ್ರಹಣ ಮಾಡಿಸಿರಿ. **[ಶಸ್ತ]** ಸ್ತವನ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ರಾಜ ಹಾಗೂ ರಾಜಪುರುಷರಿಂದ ಧನವೃದ್ಧಿಯನ್ನು ಮಾಡಿಸಬೇಕು. ಅದರಿಂದ ಬಹುವಿಧ ಸುಖ ಲಭಿಸುವುದು.

ಈ ಸೂಕ್ತದಲ್ಲಿ ವಿದ್ವಾಂಸರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೩೮

ಮಂತ್ರಸಂಖ್ಯೆ ೧೦ । ವಾಮದೇವ ಋಷಿಃ । ೧ ದ್ಯಾವಾ ಪೃಥಿವ್ಯೌ ದೇವತೇ । ೩-೧೦ ದಧಿಕ್ರಾವಾ, ೧, ೪ ವಿರಾಟ್ಪಂಕ್ತಿಃ, ೬ ಭುರಿಕ್ಪಂಕ್ತಿಃ । ಪಂಚಮಃ ಸ್ವರಃ । ೨, ೩ ತ್ರಿಷ್ಟುಪ್, ೫, ೮-೧೦ ನಿಚೃತ್ ತ್ರಿಷ್ಟುಪ್, ೭ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ರಾಜನ ಕರ್ತವ್ಯವನ್ನಿಲ್ಲಿ ಹೇಳಿದೆ.

**ಉತೋ ಹಿ ವಾಂ ದಾತ್ರಾ ಸಂತಿ ಪೂರ್ವಾ ಯಾ ಪೂರುಭ್ಯಸ್ತ್ರಸದಸ್ಯುರ್ನಿತೋಶೇ ।**
**ಕ್ಷೇತ್ರಾಸಾಂ ದದಥುರುರ್ವರಾಸಾಂ ಘನಂ ದಸ್ಯುಭ್ಯೋ ಅಭಿಭೂತಿಮುಗ್ರಮ್ ॥೧॥**

**ಪದಾರ್ಥ:-** [ತ್ರಸದಸ್ಯುಃ] ದಸ್ಯುಗಳನ್ನು ನಡುಗಿಸುವ [ಹಿ] ಯಾವ ಕಾರಣದಿಂದ [ವಾಂ] ನೀವಿಬ್ಬರೂ [ಸಂತಿ] ಇರುವಿರೋ [ಪೂರುಭ್ಯಃ] ಬಹು ಜನರಿಂದ [ಯಾ] ಯಾವ [ಪೂರ್ವಾ] ಮೊದಲಿನ [ದತ್ರಾ] ದಾನಿಗಳಾದ ನೀವಿಬ್ಬರು [ನಿತೋಶೇ] ಸಂಹರಿಸುವಲ್ಲಿ [ಕ್ಷೇತ್ರಾಸಾಂ] ಕ್ಷೇತ್ರಗಳ ವಿಂಗಡಣೆಯ [ಉರ್ವರಾಸಾಂ] ಬಹುಪದಾರ್ಥ ಭೂಮಿಯನ್ನು ಸೇವಿಸುವವನಿಗೆ [ದದಥುಃ] ಕೊಡುವಿರಿ [ಉತೋ] ಮತ್ತು [ದಸ್ಯುಭ್ಯಃ] ದುಃಸಾಹಸೀ ಚೋರರಿಗೆ [ಉಗ್ರಂ] ಕಠಿಣ [ಅಭಿಭೂತಿಂ] ಪರಾಜಯವನ್ನು ಕೊಡುತ್ತೀಯೆ [ಧನಂ] ಆದ್ದರಿಂದ ನಿಮಗೆ ಸತ್ಕಾರಧನ ಕೊಡುವೆವು.

**ಭಾವಾರ್ಥ:-** ರಾಜ ಮತ್ತು ಸೈನಿಕರೇ! ನೀವು ಸುಶಿಕ್ಷಿತ ಸೇವಕರನ್ನು ನೇಮಿಸಿಕೊಂಡು ದುಷ್ಟರನ್ನು ನಾಶಗೊಳಿಸಿ ವಿಜಯಿಯಾಗಿರಿ. ನ್ಯಾಯದಿಂದ ರಾಜ್ಯಪಾಲನೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ವಾಜಿನಂ ಪುರುನಿಷ್ಷಿಧ್ವಾನಂ ದಧಿಕ್ರಾಮು ದದಥುರ್ವಿಶ್ವಕೃಷ್ಟಿಮ್ । ಋಜಿಪ್ಯಂ**
**ಶ್ಯೇನಂ ಪ್ರುಷಿತಪ್ಸುಮಾಶುಂ ಚರ್ಕೃತ್ಯಮರ್ಯೋ ನೃಪತಿಂ ನ ಶೂರಮ್ ॥೨॥**

**ಪದಾರ್ಥ:-** [ಅರ್ಯಃ] ಸ್ವಾಮಿಯು [ಶೂರಂ] ಪರಾಕ್ರಮಿಯಾದ [ನೃಪತಿಂ] ರಾಜನಿಗೆ [ನ] ಸಮನಾಗಿ [ವಾಜಿನಂ] ವೇಗಯುಕ್ತ [ಪುರುನಿಷ್ಷಿಧ್ವಾನಂ] ಬಹುಶತ್ರುಗಳನ್ನು ನಿರೋಧಿಸುವ [ದಧಿಕ್ರಾಂ] ಅತಿಶಯಧಾರಣ ಮಾಡುವ [ವಿಶ್ವಕೃಷ್ಟೀಂ] ಎಲ್ಲರನ್ನೂ ಜಯಿಸುವ [ಉತ] ಮತ್ತು [ಉ] ವೇಗಗತಿಯುಳ್ಳ [ಋಜಿಪ್ಯಂ] ಸರಳರನ್ನು ಪಾಲಿಸುವ [ಪ್ರುಷಿತಪ್ಸುಂ] ಶ್ರೇಷ್ಠ ಪದಾರ್ಥವನ್ನು ಸೇವಿಸುವ [ಶ್ಯೇನಂ] ವಾಜಪಕ್ಷಿಯಂತೆ ಶೀಘ್ರ ಚಲಿಸುವ [ಚರ್ಕೃತ್ಯಂ] ನಿರಂತರ ಗತಿಯ [ಆಶುಂ] ವೇಗದಿಂದ ಮಾರ್ಗಕ್ರಮಿಸುವ ರಥವನ್ನು [ದದಥುಃ] ಕೊಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜರುಗಳು ಶಿಲ್ಪ ವಿದ್ಯೆಯಿಂದ ತಯಾರಿಸಿದ ಹಸ್ತ್ಯಶ್ವರಥಪಾದಾತಿಗಳೆಂಬ ನಾಲ್ಕೂ ಸೇನಾಂಗಗಳಿರುವ ಬೃಹದ್ಬಲವನ್ನು ಪಡೆದು ತಮ್ಮ ಕಾರ್ಯದಲ್ಲಿ ಪ್ರವರ್ತರಾದರೆ ಅವರಿಗೆ ಎಂದೂ ಪರಾಜಯವಿರುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಂ ಸೀಮನು ಪ್ರವತೇವ ದ್ರವಂತಂ ವಿಶ್ವಃ ಪೂರುರ್ಮದತಿ ಹರ್ಷಮಾಣಃ ।**
**ಪಡ್ಭಿರ್ಗೃಧ್ಯಂತಂ ಮೇಧಯುಂ ನ ಶೂರಂ ರಥತುರಂ ವಾತಮಿವ ಧ್ರಜಂತಮ್ ॥೩॥**

**ಪದಾರ್ಥ:-** **[ಯಂ]** ಯಾರನ್ನು **[ಸೀಂ]** ಎಲ್ಲಾಕಡೆಗಳಿಂದ **[ಪ್ರವತೇವ]** ತಗ್ಗುಸ್ಥಳದಂತೆ **[ದ್ರವಂತೆ]** ಹರಿಯುತ್ತಿರುವುದನ್ನು **[ಅನು]** ಅನುಸರಿಸಿ **[ವಿಶ್ವ]** ಎಲ್ಲಾ **[ಹರ್ಷಮಾಣಃ]** ಹರ್ಷಗೊಳ್ಳುತ್ತ **[ಪುರು]** ಮನುಷ್ಯ ಮಾತ್ರನು **[ಮದತಿ]** ಆನಂದಿಸುವವನು. **[ಮೇಧಯುಂ]** ಹಿಂಸೆಯನ್ನು ಬಯಸುತ್ತ **[ಶೂರಂ]** **[ನ]** ವೀರ ಪುರುಷನಿಗೆ ಸಮನಾಗಿ **[ದ್ರಜಂತಂ]** ಚಲಿಸುತ್ತ **[ವಾತಮಿವ]** ಗಾಳಿಯಂತೆ **[ರಥತುರಂ]** ರಥದ ಮೂಲಕ ಶೀಘ್ರ ಚಲಿಸುವವನು **[ಪಡ್ಭಿಃ]** ಕಾಲುಗಳಿಂದ **[ಗೃಧ್ನಂತಂ]** ಅಭಿಕಾಂಕ್ಷೀ ಶತ್ರುವನ್ನು ಹನನಮಾಡಲು ಸಮರ್ಥನಾಗುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನ ರಾಜ್ಯದಲ್ಲಿ ತಗ್ಗು ಪ್ರದೇಶದಲ್ಲಿ ನೀರು ಸೇರುವಂತೆ ಎಲ್ಲಾ ಬಗೆಯ ಗುಣಗಳೂ ಏಕತ್ರ ಸೇರುತ್ತವೆಯೋ ಅವನ ಹತ್ತಿರ ಯೋಗ್ಯಪುರುಷರು ನೆಲೆಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಃ ಸ್ಮಾರುಂಧಾನೋ ಗಧ್ಯಾ ಸಮತ್ಸು ಸನುತರಶ್ಚರತಿ ಗೋಷು ಗಚ್ಛನ್ ।**
**ಆವಿರ್ಋಜೀಕೋ ವಿದಥಾ ನಿಚಿಕ್ಯ-ತ್ತಿರೋ ಅರತಿಂ ಪರ್ಯಾಪ ಆಯೋಃ ॥೪॥**

**ಪದಾರ್ಥ:-** **[ಯಃ]** ಯಾವನು **[ಸನುತರಃ]** ಸನಾತನ ವಿದ್ಯಾಸಂಪನ್ನ **[ಸಮತ್ಸು]** ಸಂಗ್ರಾಮಗಳಲ್ಲಿ **[ಗಧ್ಯಾಂ]** ಸಂಧಿಸಿದ **[ಆರುಂಧಾನಾಃ]** ಎಲ್ಲಾ ಕಡೆಗಳಿಂದಲೂ ಶತ್ರುಗಳನ್ನು ತಡೆಯುತ್ತ **[ಆವಿಯರ್ಋಜೀಕಃ]** ಕಪಟರಹಿತ ಸ್ವಭಾವದವನು **[ಗೋಷು]** ಭೂಮಿಗಳಲ್ಲಿ **[ಗಚ್ಛನ್]** ಚಲಿಸುತ್ತ **[ನಿಚಿಕ್ಯತ್]** ನೋಡುತ್ತಿರುವ ಶತ್ರುವನ್ನು **[ತಿರಃ]** ತಿರಸ್ಕರಿಸಿ **[ಅರತಿಂ]** ದುಃಖ ನಿವಾರಿಸಿ **[ಪರಿ, ಚರತಿ]** ಸುತ್ತುವನೋ **[ಆಪಃ]** ನೀರಿನಂತೆ **[ಆಯೋಃ]** ಆಯುಸ್ಸಿನ **[ವಿದಥಾ]** ವಿಜ್ಞಾನದಂತಿರುವನೋ **[ಸ್ಮ]** ಅವನನ್ನೇ ಅಧಿಕಾರಿಯಾಗಿರಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನೇ! ನಿನ್ನ ರಾಜ್ಯದಲ್ಲಿ ಯಾವನು ಶಾಂತಿ ನೆಲೆಗೊಳಿಸಲು, ಶತ್ರುಗಳನ್ನು ಭಯಭೀತರನ್ನಾಗಿಸಲು, ಸಮರ್ಥನೋ ಮತ್ತು ಬಲಿಷ್ಠನೂ ಕೀರ್ತಿವಂತನೂ ಆಗಿರುವನೋ ಅವನನ್ನೇ ಶತ್ರುನಿವಾರಣೆಯ ಕಾರ್ಯದಲ್ಲಿ ನಿಯಮಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮೈ ನಂ ವಸ್ತ್ರಮಥಿಂ ನ ತಾಯು-ಮನು ಕ್ರೋಶಂತಿ ಕ್ಷಿತಯೋ ಭರೇಷು ।**
**ನೀಚಾಯಮಾನಂ ಜಸುರಿಂ ನ ಶ್ಯೇನಂ ಶ್ರವಶ್ಚಾಚ್ಛಾ ಪಶುಮಚ್ಚ ಯೂಥಮ್ ॥೫॥**

**ಪದಾರ್ಥ:-** **[ಕ್ಷಿತಯಃ]** ಮನುಷ್ಯರು **[ಭರೇಷು]** ಸಂಗ್ರಾಮಗಳಲ್ಲಿ **[ಏನಂ]** ಈ ರಾಜ್ಯವನ್ನು **[ವಸ್ರಮತಿಂ]** ವಸ್ತ್ರಗಳನ್ನು ಮಥಿಸುವ **[ತಾಯುಂ]** **[ನ]** ಕಳ್ಳರ ರೀತಿಯಿಂದ **[ಅನು, ಕ್ರೋಶಂತಿ]** ಹಿಂದಿನಿಂದ ಅಳುವರೋ **[ಜಸುರಿಂ]** ಪ್ರಯತ್ನಿಸುತ್ತ **[ಶ್ಯೇನಂ]** **[ನ]** ವಾಜಪಕ್ಷಿಗೆ ಸಮನಾಗಿ **[ನೀಚಾ]** ನೀಚಕರ್ಮವನ್ನು **[ಆಯಮಾನಂ]** ಅನುಸರಿಸುವವನನ್ನು ಮತ್ತು **[ಪಶುಮತ್]** ಪಶುಮಂತ **[ಶ್ರವಃ]** ಅನ್ನವನ್ನು **[ಚ]** ಹಾಗೂ **[ಅಚ್ಛ]** ಉತ್ತಮ ರೀತಿಯ **[ಯೂಥಂ ಚ]** ಸಮೂಹವನ್ನು ಹಿಂಬಾಲಿಸಿ ರೋದನ ಮಾಡುವರೋ ಅವರು **[ಉತ, ಸ್ಮ]** ಶೀಘ್ರನಾಶವಾಗುವರು.

(ಮಂಡಲ ೪, ಸೂಕ್ತ ೩೮, ಮಂತ್ರ ೫)

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನು ಪ್ರಜಾಪಾಲನೆ ಮಾಡದೇ ತೆರಿಗೆ ವಸೂಲು ಮಾಡುವನೋ, ಯಾವನ ಪ್ರಜೆಗಳಿಗೆ ದುಷ್ಟರು ಪೀಡಿಸುವರೋ, ಯಾವ ರಾಜನು, ತಾನೇ ನೀಚಕರ್ಮ ಮಾಡುವನೋ, ವಾಜಪಕ್ಷಿಯಂತೆ ಹಿಂಸಕನೋ, ಪಶುಗಳಂತೆ ಮೂರ್ಖನೋ, ಯಾವನ ಸೇನೆಯು ಕಳ್ಳರಂತೆ ವರ್ತಿಸುವುದೋ ಅಂತಹ ರಾಜನು ಬಹುಬೇಗ ವಿನಾಶಗೊಳ್ಳುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮಾಸು ಪ್ರಥಮಃ ಸರಿಷ್ಯನ್ನಿ ವೇವೇತಿ ಶ್ರೇಣಿಭಿಃ ರಥಾನಾಮ್ ।**
**ಸ್ರಜಂ ಕೃಣ್ವಾನೋ ಜನ್ಯೋ ನ ಶುಭ್ವಾ ರೇಣುಂ ರೇರಿಹತ್ ಕಿರಣಂ ದದಶ್ವಾನ್ ॥೬॥**

**ಪದಾರ್ಥ:-** **[ಆಸು]** ಈ ಸೇನೆಗಳಲ್ಲಿ **[ರಥಾನಾಂ]** ರಥಗಳ **[ಶ್ರೇಣಿಭಿಃ]** ಸಾಲುಗಳಿಂದ **[ಸ್ರಜಂ]** ಮಾಲೆಯ ರೀತಿಯಲ್ಲಿ **[ಕೃಣ್ವಾನಾಃ]** ಸೇನೆಯ ರಚನೆಯನ್ನು ಮಾಡುತ್ತ **[ಪ್ರಥಮಃ]** ಮೊದಲು **[ಸರಿಷ್ಯನ್]** ಚಲಿಸುವವನಾಗಿ **[ನಿ, ವೇವೇತಿ]** ಗಮನಿಸುವವನು **[ಉತ]** ಮತ್ತು **[ಶುಭ್ವಾ]** ಶೋಭಿತ **[ಜನ್ಯಃ]** ಉತ್ಪನ್ನವಾದವನ **[ನ]** ಸದೃಶ **[ಕಿರಣಂ]** ಜ್ಯೋತಿಯನ್ನು **[ದದಶ್ವಾನ್]** ಕೊಡುವ ವಾಯುವಿನಂತೆ **[ರೇಣುಂ]** ಧೂಳಿಯನ್ನು **[ರೇರಿಹತ್]** ಹಾರಿಸುವವನು **[ಸ್ಮ]** ಅಂತಹ ರಾಜನೇ ಸರ್ವತ್ರ ಅಭಿವೃದ್ಧಿಗೊಳ್ಳುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಯಾರು ನ್ಯಾಯಮಾರ್ಗದಿಂದ ಪ್ರಜಾಪಾಲನೆ ಮಾಡುವನೋ, ಸೇನಾರಚನ ಕುಶಲನಾಗಿ ಯುದ್ಧದಲ್ಲಿ ಅಗ್ರಗಾಮಿಯೋ, ಯಾವಾಗಲೂ ವಿಜಯಶೀಲನೂ, ಚತುರನೂ, ಧಾರ್ಮಿಕನೂ ಉತ್ತಮರ ಸಹಾಯಪಡೆದವನೂ ಆಗಿರುವನೋ ಅವನೇ ಯಶಸ್ವೀ ರಾಜನಾಗಿ ಮಹಾರಾಜನೆನಿಸಿಕೊಳ್ಳುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಯ ವಾಜೀ ಸಹುರಿರ್ಋತಾವಾ ಶುಶ್ರೂಷಮಾಣಸ್ತನ್ವಾ ಸಮರ್ಯೇ ।**
**ತುರಂ ಯತೀಷು ತುರಯನ್ನೃಜಿಪ್ಯೋಽಧಿ ಭ್ರುವೋಃ ಕಿರತೇ ರೇಣುಮೃಂಜನ್ ॥೭॥**

**ಪದಾರ್ಥ:-** **[ಸ್ಯಃ]** ಅವನು **[ವಾಜೀ]** ವಿಜ್ಞಾನವಂತನು **[ಸಹೂರಿಃ]** ಸಹನಶೀಲನು **[ಋತಾವಾ]** ಸತ್ಯಾಚರಣೆಯಿಂದ ಕೂಡಿದವನು **[ಯತೀಷು]** ಪ್ರಯತ್ನಗಳಲ್ಲಿ **[ತುರಂ]** ಶೀಘ್ರಗತಿಯವನನ್ನು **[ತುರಯನ್]** ತ್ವರೆಗೊಳಿಸುವವನೂ **[ಉತ]** ಹಾಗೂ **[ಋಜಿಷ್ಯಃ]** ಸರಳ ಸ್ವಭಾವದವನೂ **[ತನ್ವಾ]** ಶರೀರದಿಂದ **[ಶುಶ್ರೂಷಮಾಣಃ]** ಸೇವೆ ಮಾಡುವವನೂ **[ಋಂಜನ್]** ಪ್ರಸಿದ್ಧಿ ಪಡೆದವನೂ **[ಸಮರ್ಯೇ]** ಸಂಗ್ರಾಮದಲ್ಲಿ **[ಭ್ರುವೋಃ]** ಹುಬ್ಬುಗಳ **[ರೇಣುಂ]** ಧೂಳೀಕಣವನ್ನು **[ಅಧಿ, ಕಿರತೇ]** ಹಾರಿಸುವವನೋ ಅವನು ವಿಜಯಿಯಾಗುವನು.

**ಭಾವಾರ್ಥ:-** ಯಾವನು, ವಿದ್ಯಾವಂತನೂ, ಎಲ್ಲವನ್ನೂ ಸಹಿಸಿಕೊಳ್ಳುವವನೂ, ಸತ್ಯಸೇವಕನೂ, ಕುಶಲ ಸೇವೆ ಹಾಗೂ ಸರಳ ಸ್ವಭಾವ ಇರುವವನೂ ಆಗಿರುವನೋ ಅವನೇ ರಾಜನಾಗಲು ಅರ್ಹನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮಾಸ್ಯ ತನ್ಯತೋರಿವ ದ್ಯೋ-ರ್ಋಘಾಯತೋ ಅಭಿಯುಜೋ ಭಯಂತೇ ।**
**ಯದಾ ಸಹಸ್ರಮಭಿ ಷೀಮಯೋಧೀ-ದ್ದುರ್ವರ್ತುರ್ಸ್ಮಾ ಭವತಿ ಭೀಮ ಋಂಜನ್ ॥೮॥**

**ಪದಾರ್ಥ:-** [ಸ್ಮ] ಅವನೇ [ಭೀಮಃ] ಭಯಂಕರನು [ಋಂಜನ್] ವಿಜಯಗಳಿಸುವವನು [ಭವತಿ] ಆಗುವನು. [ಯದಾ] ಯಾವಾಗ [ಸಹಸ್ರಂ] ಅಸಂಖ್ಯ [ಷೀಂ] ಜನರೊಂದಿಗೆ [ಅಭಿ, ಅಯೋಧೀತ] ಯುದ್ಧ ಮಾಡುವನೋ [ಅಸ್ಯ, ಸ್ಮ] ಇವನೇ [ದುರ್ವರ್ತುಃ] ದುಃಖದಿಂದ ಇದ್ದು [ಋಘಾಯತಃ] ಹಿಂಸೆ ಮಾಡುತ್ತ [ಉತ] ಮತ್ತು [ಅಭಿಯುಜಃ] ಆಕ್ರಮಣ ಮಾಡುವವನಿಗೆ [ದ್ಯೋಃ] ಪ್ರಕಾಶಮಾನ [ತನ್ಯತೋರಿವ] ಮಿಂಚಿಗೆ ಸದೃಶ [ಭಯಂತೇ] ಭಯವನ್ನುಂಟುಮಾಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನು ಮಿಂಚಿನಂತೆ ದುಷ್ಟರಿಗೆ ಭಯೋತ್ಪಾದಕನಾಗಿ ಧಾರ್ಮಿಕರಿಗೆ ಆಶ್ರಯದಾತನಾಗಿ ಅಸಂಖ್ಯಾತ ವೀರಪುರುಷರೊಂದಿಗೆ ಯುದ್ಧಮಾಡುವ ಸಾಮರ್ಥ್ಯ ಪಡೆದಿರುವನೋ ಅವನೆದುರು ದುಷ್ಟರು ಮರೆಯಾಗಿ ಬಿಡುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮಾಸ್ಯ ಪನಯಂತಿ ಜನಾ ಜೂತಿಂ ಕೃಷ್ಟಿಪ್ರೋ ಅಭಿಭೂತಿಮಾಶೋಃ ।**
**ಉತೈನಮಾಹುಃ ಸಮಿಥೇ ವಿಯಂತಃ ಪರಾ ದಧಿಕ್ರಾ ಅಸರತ್ಸಹಸ್ರೈಃ ॥೯॥**

**ಪದಾರ್ಥ:-** [ಜನಾಃ] ಪ್ರಜಾಜನರು [ಅಸ್ಯ] ಈ [ಕೃಷ್ಟಿಪ್ರಃ] ಗುಪ್ತಚರರ ಮೂಲಕ ಪಾಲನೆ ಮಾಡುವವನು [ಆಶೋಃ] ಸಮಗ್ರ ವಿದ್ಯಾವ್ಯಾಪ್ತ ರಾಜನು ಸಂಗ್ರಾಮದಲ್ಲಿ [ಅಭಿಭೂತಿಂ] ತಿರಸ್ಕಾರವನ್ನು [ಜೂತಿಂ] ನ್ಯಾಯವೇಗದ [ಉತ] ವಿತರ್ಕದೊಂದಿಗೆ [ಪನಯಂತಿ] ವ್ಯವಹರಿಸುತ್ತಾನೆ. [ಉತ] ಮತ್ತು [ಏನಂ] ಇವನನ್ನು [ಸಮಿಥೇ] ಸಂಗ್ರಾಮದಲ್ಲಿ [ವಿಯಂತಃ] ವಿಶೇಷ ರೀತಿಯಲ್ಲಿ ಎದುರಿಸುತ್ತಾ [ಆಹುಃ] ಹೇಳುವರು. [ದಧಿಕ್ರಾಃ] ಧಾರಕನೊಂದಿಗೆ ಚಲಿಸುವವನು [ಸಹಸ್ರೈಃ] ಅಸಂಖ್ಯರೊಂದಿಗೆ [ಪರಾ, ಅಸರತ್] ಮುಂದೆ ನಡೆಯುವವನು [ಸ್ಮ] ಅವನೇ ಗೆಲ್ಲುವನು.

**ಭಾವಾರ್ಥ:-** ಯಾವ ರಾಜನು ಪ್ರಜಾಪಾಲನೆಯಲ್ಲಿ ತತ್ಪರನಾಗಿ ಪ್ರಜೆಗಳ ಎಲ್ಲಾ ಕಾರ್ಯಗಳನ್ನೂ ಸಿದ್ಧಪಡಿಸುವನೋ ಆ ರಾಜನನ್ನೇ ವಿದ್ಯಾವಂತರು ಪ್ರಶಂಸೆ ಮಾಡುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ।**
**ಸಹಸ್ರಸಾಃ ಶತಸಾ ವಾಜ್ಯರ್ವಾ ಪೃಣುಕ್ತು ಮಧ್ವಾ ಸಮಿಮಾ ವಚಾಂಸಿ ॥೧೦॥**

**ಪದಾರ್ಥ:-** [ಶವಸಾ] ಬಲದಿಂದ [ಸೂರ್ಯ ಇವ] ಸೂರ್ಯನಂತೆ [ದಧಿಕ್ರಾಃ] ಧಾರಕರೊಂದಿಗೆ ಬರುವವನು [ಪಂಚ] ಐದು [ಕೃಷ್ಟೀಃ] ಮನುಷ್ಯರನ್ನು [ಜ್ಯೋತಿಷಾ] ಪ್ರಕಾಶಮಾನ ಸೂರ್ಯನಂತೆ [ಅಪಃ]

ನೀರನ್ನು ಹೇಗೋ ಹಾಗೆ **[ಆತತಾನ]** ವಿಸ್ತೃತಗೊಳಿಸುವನು. **[ಸಹಸ್ರಸಾ]** ಸಾವಿರಾರು ಜನರನ್ನು ವಿಭಾಗಿಸುವವನು **[ಶತಸಾ]** ನೂರಾರು ವಿಭಾಜಕನು **[ಅರ್ವಾ]** ಶೀಘ್ರ ಚಲಿಸುವ **[ವಾಜೀ]** ವೇಗವಂತನು **[ಮಧ್ವಾ]** ಶುದ್ಧ ದ್ರವ್ಯದೊಂದಿಗೆ **[ಇಮಾ]** ಈ **[ವಚಾಂಸಿ]** ವಚನಗಳ **[ಸಂ, ಪೃಣಕ್ತು]** ಸಂಬಂಧಗೊಳಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನು ಸೂರ್ಯಪ್ರಕಾಶದಂತೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ಪತಿತರೆಂಬ ಐದೂ ಬಗೆಯ ಪ್ರಜೆಗಳನ್ನು ನ್ಯಾಯಮಾರ್ಗದಿಂದ ಪಾಲನೆ ಮಾಡುವನೋ ಅವನು ಅಸಂಖ್ಯಾನಂದ ಅನುಭವಿಸುವನು.

ಈ ಸೂಕ್ತದಲ್ಲಿ ರಾಜಧರ್ಮದ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೩೯

ಮಂತ್ರಸಂಖ್ಯೆ ೬ । ವಾಮದೇವ ಋಷಿಃ । ದಧಿಕ್ರಾ ದೇವತಾಃ । ೧, ೩, ೫ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೪ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೬ ಅನುಷ್ಟುಪ್ ಛಂದಃ । ಋಷಭಃ ಸ್ವರಃ.

ಪ್ರಶಂಸಾರ್ಹ ರಾಜನ ಗುಣಗಳನ್ನಿಲ್ಲಿ ಹೇಳಲಾಗಿದೆ.

**ಆಶುಂ ದಧಿಕ್ರಾಂ ತಮು ನು ಷ್ಟವಾಮ ದಿವಸ್ಪೃಥಿವ್ಯಾ ಉತ ಚರ್ಕಿರಾಮ ।**
**ಉಚ್ಛಂತೀರ್ಮಾಮುಷಸಃ ಸೂದಯ-ಂತ್ವತಿ ವಿಶ್ವಾನಿ ದುರಿತಾನಿ ಪರ್ಷನ್ ॥೧॥**

**ಪದಾರ್ಥ:-** **[ದಿವಃ]** ಅಂತರಿಕ್ಷ **[ಪೃಥಿವ್ಯಾಃ]** ಮತ್ತು ಭೂಮಿಯ ಮಧ್ಯೆ **[ತಂ]** ಆ **[ಆಶುಂ]** ಶೀಘ್ರಗಾಮೀ **[ದಧಿಕ್ರಾಂ]** ಧಾರಕನನ್ನು **[ನು]** ತರ್ಕ ವಿತರ್ಕದೊಂದಿಗೆ **[ಸ್ತವಾಮ]** ಸ್ತುತಿಸೋಣ **[ಉತ]** ಮತ್ತು **[ಉ]** ಶತ್ರುಗಳನ್ನೂ **[ಚರ್ಕಿರಾಮ]** ನಿರಸ್ತಗೊಳಿಸೋಣ **[ಮಾಂ]** ನನ್ನನ್ನು **[ಪರ್ಷನ್]** ಪುಷ್ಟೀಕರಿಸಿರಿ. **[ಉಚ್ಛಂತೀಃ]** ಅವರ ಸೇವೆ ಮಾಡುತ್ತ **[ಉಷಸಃ]** ಬೆಳಗಿನ ಸಮಯವು **[ವಿಶ್ವಾನಿ]** ಸಮಸ್ತ **[ದುರಿತಾನಿ]** ದುಷ್ಟಾಚರಣೆಗಳನ್ನು **[ಪ್ರತಿ, ಸೂರಯಂತು]** ಅತ್ಯಂತ ದೂರೀಕರಿಸಲಿ.

**ಭಾವಾರ್ಥ:-** ಯಾವ ರಾಜನು ಪ್ರಜೆಗಳ ದುಃಖವನ್ನು ದೂರೀಕರಿಸಿ ಉಷಃಕಾಲವು ಅಂಧಕಾರವನ್ನು ನಾಶಗೊಳಿಸುವಂತೆ ಅನ್ಯಾಯ ದೌರ್ಜನ್ಯವನ್ನು ನಾಶಗೊಳಿಸುವನೋ ಅವನೇ ಪ್ರಶಂಸಾರ್ಹನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹ ಶ್ಚರ್ಕರ್ಮ್ಯರ್ವತಃ ಕ್ರತುಪ್ರಾ ದಧಿಕ್ರಾವ್ಣಃ ಪುರುವಾರಸ್ಯ ವೃಷ್ಣಃ ।**
**ಯಂ ಪೂರುಭ್ಯೋ ದೀದಿವಾಂಸಂ ನಾಗ್ನಿಂ ದದಥುರ್ಮಿತ್ರಾವರುಣಾ ತತುರಿಮ್ ॥೨॥**

**ಪದಾರ್ಥ:-** **[ಮಿತ್ರಾವರುಣಾ]** ಪ್ರಾಣಾಪಾನಗಳಂತಿರುವ ಸಭಾ-ಸೇನಾ ನಾಯಕರಿಬ್ಬರೂ **[ಪೂರುಭ್ಯಃ]** ಬಹುಜನರಿಂದ **[ಯಂ]** ಯಾವ **[ತತುರಿ]** ತ್ವರೆಗೊಳಿಸುತ್ತ **[ದೀದಿವಾಂಸಂ]** ಪ್ರಕಾಶಮಾನ **[ಅಗ್ನಿಂ]** **[ನ]** ಅಗ್ನಿಗೆ

ಸಮನಾಗಿ **[ದದಥು]** ಕೊಡುವರೋ **[ಪುರುವಾರಸ್ಯ]** ಬಹುಜನ ಶ್ರೇಷ್ಠ ಪುರುಷರಿಂದ ಸ್ವೀಕರಿಸಲಾದ **[ದಧಿಕ್ರಾವ್ಣಃ]** ವಿದ್ಯಾಧಾರಕರನ್ನು ಬಯಸಲು **[ಧೃಷ್ಣುಃ]** ಸುಖವರ್ಷಕನ **[ಕ್ರತುಪ್ರಾಃ]** ಬುದ್ಧಿಯನ್ನು ಪೂರ್ಣಗೊಳಿಸುವವನು **[ಮಹಃ]** ಮಹತ್ತರ **[ಅರ್ವತಃ]** ಅಶ್ವಕಾರ್ಯಕ್ಕೆ ಸಮನಾದ ಕಾರ್ಯವನ್ನು **[ಚಕರ್ಮ]** ಮಾಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನು ಬುದ್ಧಿವಂತರನ್ನೂ ಮತ್ತು ಬುದ್ಧಿವಂತಿಕೆಯ ಸಲಹೆ ಕೊಡುವವರನ್ನೂ ಧಾರಣ ಮಾಡಿರುವನೋ ಅವನು ಪ್ರತಾಪಿಯಾಗಿ ಶೀಘ್ರ ಕಾರ್ಯ ಸಾಧಕನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೋ ಅಶ್ವಸ್ಯ ದಧಿಕ್ರಾವ್ಣೋ ಅಕಾರೀತ್ ಸಮಿದ್ಧೇ ಅಗ್ನಾ ಉಷಸೋ ವ್ಯುಷ್ಟೌ ।**
**ಅನಾಗಸಂ ತಮದಿತಿಃ ಕೃಣೋತು ಸ ಮಿತ್ರೇಣ ವರುಣೇನಾ ಸಜೋಷಾಃ ॥೩॥**

**ಪದಾರ್ಥ:-** [ಯಃ] ಯಾವನು **[ಧಧಿಕ್ರಾವ್ಣಃ]** ಧಾರಕರನ್ನು ಕ್ರಮಗೊಳಿಸುವವನು **[ಅಶ್ವಸ್ಯ]** ಪದಾರ್ಥ ವಿದ್ಯಾ ವ್ಯಾಪಕನು **[ಉಷಸಃ]** ಪ್ರಾತಃಕಾಲದ **[ವ್ಯುಷ್ಟೌ]** ಸೇವೆಯಲ್ಲಿ **[ಸಮಿದ್ಧೇ]** ಪ್ರಜ್ವಲಿಸುವ **[ಅಗ್ನೌ]** ಅಗ್ನಿಯಲ್ಲಿ **[ಅನಾಗಸಂ]** ನಿರಪರಾಧಿಯನ್ನಾಗಿ **[ಅಕಾರೀತ್]** ಮಾಡುವನೋ **[ತಂ]** ಅವನನ್ನು **[ಅದಿತಿಃ]** ಜನನೀಜನಕರು **[ಕೃಣೋತು]** ನಿರಪರಾಧಿ ಮಾಡಲಿ. **[ಸಃ]** ಅವನೂ **[ಮಿತ್ರೇಣ]** ಗೆಳೆಯನಾದ **[ವರುಣೇನ]** ಶ್ರೇಷ್ಠನೊಂದಿಗೆ **[ಸಜೋಷಾಃ]** ಸಮಾನ ಪ್ರೀತಿಯುಳ್ಳವನಾಗಲಿ.

**ಭಾವಾರ್ಥ:-** ಮನುಷ್ಯರೇ! ಯಾವನು ಅಗ್ನಿಶಕ್ತಿಯಲ್ಲಿ ಜವಾದಿಶಕ್ತಿಗಳ ಸಂಯೋಜನೆ ಮಾಡಲು ತಿಳಿದಿರುವನೋ ಮತ್ತು ಸಜ್ಜನರೊಂದಿಗೆ ಸ್ನೇಹ ಬೆಳೆಸಿ ಬೆಳಗಿನ ಸಮಯದಲ್ಲೇ ಎಷ್ಟು ಉತ್ತಮ ಕರ್ಮ ಮಾಡುವನೋ ಅವನು ಸದೈವ ಪ್ರೀತಿಪಾತ್ರನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಧಿಕ್ರಾವ್ಣ ಇಷ ಊರ್ಜೋ ಮಹೋ ಯ-ದಮನ್ಮಹಿ ಮರುತಾಂ ನಾಮ ಭದ್ರಮ್ ।**
**ಸ್ವಸ್ತಯೇ ವರುಣಂ ಮಿತ್ರಮಗ್ನಿಂ ಹವಾಮಹ ಇಂದ್ರಂ ವಜ್ರಬಾಹುಮ್ ॥೪॥**

**ಪದಾರ್ಥ:-** [ಸ್ವಸ್ತಯೇ] ಸುಖಕ್ಕಾಗಿ **[ಯತ್]** ಯಾವ **[ಮಹತ್]** ಅತಿದೊಡ್ಡ **[ದಧಿಕ್ರಾವ್ಣಃ]** ಧಾರಕನನ್ನೂ ಅಲ್ಲಾಡಿಸುವವನು. [ಇಷಃ] ಅನ್ನಾದಿಗಳ [ಊರ್ಜಃ] ಪರಾಕ್ರಮದ **[ಮರುತಾಂ]** ಮತ್ತು ಮನುಷ್ಯರ **[ಭದ್ರಂ]** **[ನಾಮ]** ಕಲ್ಯಾಣಕರ ಹೆಸರನ್ನು **[ಅಮನ್ಮಹಿ]** ತಿಳಿದಿರುವವನು. **[ವರುಣಂ]** ಜಲದಂತೆ ಶೀತ್ಯಾದಿ ಗುಣಗಳನ್ನು ಹೊಂದಿ **[ಮಿತ್ರಂ]** ಪ್ರಾಣಪ್ರಿಯ **[ಅಗ್ನಿಂ]** ಅಗ್ನಿಯಂತೆ ಗುಣ ಪ್ರಕಾಶಕ **[ವಜ್ರಬಾಹುಂ]** ಬಲಿಷ್ಠ ತೋಳು ಬಲವಿರುವ **[ಇಂದ್ರಂ]** ಐಶ್ವರ್ಯವಂತನನ್ನು **[ಹವಾಮಹೇ]** ಪ್ರಶಂಸೆಮಾಡೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವನು ಅನ್ನಾದಿ ಪದಾರ್ಥಗಳನ್ನು ಸಂಸ್ಕರಿಸಿ ಭೋಜನ ಸಮಯ ರೀತಿಗಳನ್ನರಿತು ತಾನೂ ಆಚರಿಸಿ ಅನ್ಯರಿಗೂ ಉಪದೇಶಿಸುವನೋ, ಮತ್ತೆ

ರಾಜನೊಂದಿಗೆ ವಿರೋಧ ಮಾಡಿಕೊಳ್ಳದೆ ಪ್ರಜೆಗಳೊಂದಿಗೆ ಪ್ರೀತಿಪೂರ್ವಕ ವ್ಯವಹರಿಸುವನೋ ಅವನೇ ಪ್ರಶಂಸಾರ್ಹನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಮಿವೇದುಭಯೇ ವಿ ಹ್ವಯಂತ ಉದೀರಾಣಾ ಯಜ್ಞಮುಪಪ್ರಯಂತಃ ।**
**ದಧಿಕ್ರಾಮು ಸೂದನಂ ಮರ್ತ್ಯಾಯ ದದಥುರ್ಮಿತ್ರಾವರುಣಾ ನೋ ಅಶ್ವಮ್ ॥೫॥**

**ಪದಾರ್ಥ:-** **[ಮಿತ್ರಾವರುಣಾ]** ಪ್ರಾಣೋದಾನಗಳಂತಿರುವ ರಾಜ ಮತ್ತು ಮಂತ್ರಿಗಳು **[ಊದೀರಾಣಾಃ]** ಉತ್ತಮವಾದ **[ಯಜ್ಞಂ]** ನ್ಯಾಯ ವ್ಯವಹಾರವನ್ನು **[ಉಪಪ್ರಯಂತಃ]** ಮಾಡುವವರಾಗಿ **[ಉಭಯೇ]** ಇಬ್ಬರೂ **[ಮರ್ತ್ಯಾಯ]** ಮನುಷ್ಯರಾದ **[ನಃ]** ನಮಗೆ **[ದಧಿಕ್ರಾಂ]** ನ್ಯಾಯಧಾರಕನನ್ನು ಇಚ್ಛಿಸುವ **[ಸೂದೇನುಂ]** ರಕ್ಷಣೆಯನ್ನು **[ಅಶ್ವಂ]** ಶೀಘ್ರಗತಿ ಬೋಧೆಯನ್ನು **[ವಿ, ಹ್ವಯಂತೇ]** ವಿಶೇಷ ರೀತಿಯ ಪ್ರಶಂಸೆ ಮಾಡುವರು. **[ದದಥುಃ]** ನೀವೂ ಮಾಡಿರಿ. **[ಇಂದ್ರಮಿವ]** ಮಿಂಚಿನಂತೆ **[ಇತ್, ಉ]** ಕೃತಜ್ಞರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ರಾಜನು ಪ್ರಜಾಪಾಲನೆ ಪಕ್ಷಪಾತರಹಿತ ನ್ಯಾಯ ಹಾಗೂ ಧರ್ಮಾಚರಣೆ ಮಾಡುವನೋ ಅವನು ಶತ್ರುರಹಿತನಾಗಿ ಎಲ್ಲರ ಪ್ರೀತಿಗೆ ಪಾತ್ರನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।**
**ಸುರಭಿ ನೋ ಮುಖಾ ಕರತ್ ಪ್ರ ಣ ಆಯೂಂಷಿ ತಾರಿಷತ್ ॥೬॥**

**ಪದಾರ್ಥ:-** **[ನಃ]** ನಮ್ಮ **[ಮುಖಾ]** ಮುಖಾದಿ ಇಂದ್ರಿಯಗಳಿಗೆ **[ಸುರಭಿ]** ಸುಗಂಧಾದಿ ದ್ರವ್ಯಗಳನ್ನು **[ಕರತ್]** ದೊರಕಿಸು ಮತ್ತು **[ನಃ]** ನಮ್ಮ **[ಆಯೂಂಷಿ]** ಆಯುಸ್ಸನ್ನು **[ಪ್ರ, ತಾರಿಷತ್]** ಹೆಚ್ಚಿಸು. **[ದಧಿಕ್ರಾವ್ಣಃ]** ಧರ್ಮಧಾರಕ ಧರ್ಮಾಚರಣೆ ಮಾಡುವವನು **[ಅಶ್ವಸ್ಯ]** ಉತ್ತಮಗುಣಗಳಿಂದ ವ್ಯಾಪ್ತ **[ವಾಜಿನಃ]** ವಿಜ್ಞಾನವಂತನು **[ಜಿಷ್ಣೋಃ]** ಜಯಶೀಲ ರಾಜನ **[ಅಕಾರಿಷಂ]** ಆಜ್ಞಾಪಾಲನೆ ಮಾಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜನು ಸುಗಂಧ ದ್ರವ್ಯಗಳನ್ನು ಹೋಮ ಮಾಡಿ ವಾಯು ವೃಷ್ಟಿ ಜಲಾದಿಗಳನ್ನು ಪರಿಶುದ್ಧಗೊಳಿಸಿ ರೋಗನಿವಾರಣೆ ಮಾಡಬೇಕು. ಪ್ರಜೆಗಳ ಆಯುಸನ್ನೂ ಹೆಚ್ಚಿಸಬೇಕು. ಪುತ್ರವತ್ ಪ್ರಜಾಪಾಲನೆ ಮಾಡಬೇಕು. ಅದರಿಂದ ಪ್ರಜೆಗಳೂ ರಾಜನನ್ನು ತಂದೆಗೆ ಸಮನಾಗಿ ಗೌರವಿಸುವರು.

ಈ ಸೂಕ್ತದಲ್ಲಿ ರಾಜ ಪ್ರಜೆಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮುವತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೪೦

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ೧-೪ ದಧಿಕ್ರಾವಾ, ೫ ಸೂರ್ಯೋ ದೇವತಾ, ೧ ನಿಚೃತ್ ತ್ರಿಷ್ಟುಪ್, ೨ ತ್ರಿಷ್ಟುಪ್, ೩ ಸ್ವರಾಟ್ತ್ರಿಷ್ಟುಪ್, ೪ ಭುರಿಕ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೫ ನಿಚೃಜ್ಜಗತೀ ಛಂದಃ । ನಿಷಾದಃ ಸ್ವರಃ.

ರಾಜನ ಗುಣಗಳನ್ನು ಇಲ್ಲಿ ಹೇಳಲಾಗಿದೆ.

**ದಧಿಕ್ರಾವ್ಣ ಇದು ನು ಚರ್ಕಿರಾಮ ವಿಶ್ವಾ ಇನ್ಮಾಮುಷಸಃ ಸೂದಯಂತು ।**
**ಅಪಾಮಗ್ನೇರುಷಸಃ ಸೂರ್ಯಸ್ಯ ಬೃಹಸ್ಪತೇರಾಂಗಿರಸಸ್ಯ ಜಿಷ್ಣೋಃ ॥೧॥**

**ಪದಾರ್ಥ:-** [**ವಿಶ್ವಾ**] ಸಮಗ್ರ [**ಉಷಸಃ**] ಉಷಃಕಾಲವು [**ದಧಿಕ್ರಾವ್ಣಃ**] ವಾಯ್ವಾದಿ ಕಾರಣ ಪ್ರಪಂಚವನ್ನು [**ಮಾ**] ನನ್ನನ್ನು [**ಸೂದಯಂತು**] ಮಳೆಗರೆದು ಬೆಳೆಸಲಿ. [**ಇತ್, ಉ**] ಅದೇ ರೀತಿ ನಾವೂ [**ಚರ್ಕಿರಾಮ**] ಪ್ರಜೆಗಳನ್ನು ಕಾರ್ಯಮಗ್ನಗೊಳಿಸೋಣ. [**ಉಷಸಃ**] ಉಷಃಕಾಲವು [**ಅಪಾಂ**] ನೀರನ್ನು [**ಅಗ್ನೇಃ**] ಮಿಂಚಿನ [**ಸೂರ್ಯಸ್ಯ**] ಸೂರ್ಯನ, [**ಬೃಹಸ್ಪತೇ**] ಬೃಹದ್ರಕ್ಷಕನ [**ಆಂಗಿರಸಸ್ಯ**] ಪ್ರಾಣದಿಂದ ಉತ್ಪನ್ನವಾದ [**ಜಿಷ್ಣೋಃ**] ಜಯಶೀಲ ರಾಜನ ದೋಷಗಳನ್ನು ಪ್ರಕಟಿಸುವ ರೀತಿಯಲ್ಲಿ [**ಇತ್**] ಉತ್ತಮ ಕರ್ಮಗಳಲ್ಲಿ [**ನು**] ತತ್ಪರಗೊಳಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ರಾಜ ಹಾಗೂ ರಾಜ ಪುರುಷರೇ! ಪ್ರಾತಃಕಾಲವು ಹೇಗೆ ಎಲ್ಲರಿಗೂ ಚೈತನ್ಯ ನೀಡುತ್ತದೆಯೋ ಹಾಗೆ ನೀವು ಎಲ್ಲಾ ಪ್ರಜೆಗಳನ್ನು ಚೈತನ್ಯ ಸಂಪನ್ನರನ್ನಾಗಿ ಮಾಡಿರಿ. ಉಷಃಕಾಲದಿಂದಾಗಿ ಸೂರ್ಯನು, ಸೂರ್ಯನಿಂದಾಗಿ ವಿದ್ಯುತ್, ವಿದ್ಯುತ್ತಿನಿಂದಾಗಿ ವಾಯು ಮುಂತಾದ ಪ್ರಕೃತಿ ಕಾರಣಗಳು. ಅದಕ್ಕೆ ಅಧಿಷ್ಠಾತೃವು ಪರಮಾತ್ಮನು. ಅದೇ ರೀತಿ ಪ್ರಜಾಪಾಲನೆಗಾಗಿ ಅಧಿಕಾರಿವರ್ಗ, ಅಧಿಕಾರಿಗಳಿಗಾಗಿ ಅಧ್ಯಕ್ಷ, ಅಧ್ಯಕ್ಷರಿಗಾಗಿ ಪ್ರಧಾನಿ, ಪ್ರಧಾನಿಗಾಗಿ ರಾಜ ಅಧಿಷ್ಠಾತೃವಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸತ್ವಾ ಭರಿಷೋ ಗವಿಷೋ ದುವನ್ಯಸ-ಚ್ಛ್ರವಸ್ಯಾದಿಷ ಉಷಸಸ್ತುರಣ್ಯಸತ್ ।**
**ಸತ್ಯೋ ದ್ರವೋ ದ್ರವರಃ ಪತಂಗರೋ ದಧಿಕ್ರಾವೇಷಮೂರ್ಜಂ ಸ್ವರ್ಜನತ್ ॥೨॥**

**ಪದಾರ್ಥ:-** [**ಸತ್ವಾ**] ಪ್ರಾಪ್ತಿಗೊಳಿಸುವವನು [**ಭರಿಷಃ**] ಧಾರಣ-ಪೋಷಣೆ ಮಾಡುವವನು [**ಗವಿಷಃ**] ಗೋ ಮುಂತಾದ ಪ್ರಾಣಿಗಳ [**ದುಸ್ಯತ್**] ಸೇವೆಗಯ್ಯಲು ಇಚ್ಛಿಸುವನು. [**ಇಷಃ**] ಇಚ್ಛೆಗಳನ್ನು ಮತ್ತು [**ಉಷಸಃ**] ಪ್ರಾತಃಕಾಲವನ್ನೂ [**ತುರಣ್ಯಸತ್**] ವೇಗಗತಿಯವರನ್ನಾಗಿಸುತ್ತ [**ಶ್ರವಸ್ಯತ್**] ಶ್ರವಣೇಚ್ಛೆ ಮಾಡುವನು. [**ಸತ್ಯಃ**] ಅತಿಶ್ರೇಷ್ಠ [**ದ್ರವಃ**] ಸ್ನೇಹಿತ [**ದ್ರವರಃ**] ದ್ರವ ಪದಾರ್ಥಗಳಲ್ಲಿ ರಮಿಸುವವನು [**ಪತಂಗರಃ**] ಅಗ್ನಿಯಲ್ಲಿ ರಮಿಸುವವನು ಆದ [**ದಧಿಕ್ರಾವಾ**] ಧಾರಕ ಪುರುಷನು [**ಇಷಂ**] ಅನ್ನವನ್ನೂ [**ಊರ್ಜಂ**] ಪರಾಕ್ರಮವನ್ನೂ ಹಾಗೂ [**ಸ್ವಃ**] ಸುಖವನ್ನೂ [**ಕರತ್**] ದೊರಕಿಸಿಕೊಡುವನು.

**ಭಾವಾರ್ಥ:-** ಯಾವ ರಾಜನು ಪ್ರಜೆಗಳೊಂದಿಗೆ ನ್ಯಾಯದಿಂದ ವ್ಯವಹರಿಸುವನೋ ಸತ್ಯವಾದಿ ಜಿತೇಂದ್ರಿಯ ಪ್ರಜೆಗಳ ಸುಖೇಚ್ಛು ಆಗಿರುವನೋ ಅವನೇ ಉತ್ತಮ ರೀತಿಯಿಂದ ಪ್ರಜಾಪಾಲನೆ ಮಾಡಲು ಸಮರ್ಥನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಮಾಸ್ಯ ದ್ರವತಸ್ತುರಣ್ಯತಃ ಪರ್ಣಂ ನ ವೇರನು ವಾತಿ ಪ್ರಗರ್ಧಿನಃ ।**
**ಶ್ಯೇನಸ್ಯೇವ ಧ್ರಜತೋ ಅಂಕಸಂ ಪರಿ ದಧಿಕ್ರಾವ್ಣಃ ಸಹೋರ್ಜಾ ತರಿತ್ರತಃ ॥೩॥**

**ಪದಾರ್ಥ:-** **[ಅಂಕಸಂ]** ಲಕ್ಷಣವಂತನಾಗಿ **[ಧ್ರಜತಃ]** ವೇಗವಾಗಿ ಚಲಿಸುತ್ತ **[ಪ್ರಗರ್ಧಿನಃ]** ಅತಿಶಯ ಲೋಭಿಯು **[ಶ್ಯೇನಸ್ಯೇವ]** ವಾಜಪಕ್ಷಿಯಂತೆ **[ಊರ್ಜಾ]** ಪರಾಕ್ರಮದಿಂದ **[ತರಿತ್ರತಃ]** ಮಾರ್ಗವನ್ನೂ ದಾಟಿ **[ದಧಿಕ್ರಾವ್ಣಃ]** ಧಾರಕರಿಗೂ ಧಾರಕ **[ವಾಯುಃ]** ವಾಯುವು **[ಅಸ್ಯ, ಉತ್]** ಹಾಗೂ ಅವನ ವೇಗದಿಂದ **[ದ್ರವತಃ]** ಓಡಲು ಹಾಗೂ **[ತುರಣ್ಯತಃ]** ಶೀಘ್ರಗತಿಯು **[ಪರ್ಣಂ]** **[ನ]** ಪ್ರಜಾಪಾಲನೆಗೆ ಸದೃಶವಾಗಿ **[ವೇಃ]** ವಾಜಪಕ್ಷಿಯಂತೆ **[ಸ್ಮ]** ಪ್ರಜಾಪಾಲನೆಗೆ ಸಮರ್ಥನಾಗುವನು. **[ಪರೀ]** **[ಅನು, ಯಾತಿ]** ಎಲ್ಲ ರೀತಿಯಿಂದ ಅನುಸರಿಸಿ ನಡೆಯುವನು **[ಸಹ]** ಮಂತ್ರ್ಯಾದಿಗಳು ಸಹಕರಿಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಜರೇ! ಯಾವ ರಾಜನ ಸೇನೆಯು ವಾಜಪಕ್ಷಿಯಂತೆ ಪರಾಕ್ರಮಿಯೋ ಅದರ ಸಹಕಾರ ಪಡೆದು ಪ್ರಜಾಪಾಲನೆ ಮಾಡುತ್ತ ಶತ್ರುಗಳನ್ನು ಸಂಹರಿಸಿ, ಶಿಷ್ಟರನ್ನು ರಕ್ಷಿಸುವನೋ ಅವನೇ ಬಲಿಷ್ಠ ರಾಜನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ ।**
**ಕ್ರತುಂ ದಧಿಕ್ರಾ ಅನು ಸಂತವೀತ್ವತ್ ಪಥಾಮಂಕಾಂಸ್ಯನ್ವಾಪನೀಫಣತ್ ॥೪॥**

**ಪದಾರ್ಥ:-** **[ವಾಜೀ]** ವೇಗಯುಕ್ತ **[ಗ್ರೀವಾಯಾಂ]** ಕಂಠದೇಶದಲ್ಲಿ **[ಅಪಿಕಕ್ಷೇ]** ಕಂಕಳು ದೇಶದಲ್ಲಿ **[ಆಸನಿ]** ಮುಖದಲ್ಲಿ **[ಬದ್ಧಃ]** ಕಟ್ಟಲಾದ **[ದಧಿಕ್ರಾಃ]** ಧಾರಣ ಯೋಗ್ಯವಾದುದನ್ನು ಧರಿಸಿದವನು **[ಕ್ಷಿಪಣಿಂ]** ತ್ವರೆ ಮಾಡುವವನನ್ನು **[ಅನು, ತುರಣ್ಯತಿ]** ಬೇಗ ನಡೆಸುವನು. **[ಉತ]** ಮತ್ತು **[ಸಂತವೀತ್ವತ್]** ಅತಿಶಯ ಬಲಿಷ್ಠನಾಗಿ **[ಪಥಾಂ]** ಮಾರ್ಗದ **[ಅಂಕಾಂಸಿ]** ಚಿಹ್ನೆಗಳನ್ನು **[ಕ್ರತುಂ]** ಬುದ್ಧಿ, ಕರ್ಮದ **[ಅನು]** ಅನುಸರಿಸಿ **[ಆಪನೀಫಣತ್]** ಪ್ರಾಪ್ತನಾಗುವನು. **[ಸ್ಯಃ]** ಅವನು ಕಾರ್ಯದಲ್ಲಿ ನಿಯೋಜಿಸಲು ಯೋಗ್ಯನು.

**ಭಾವಾರ್ಥ:-** ಮನುಷ್ಯರೇ! ಥಡೀ - ಕಡಿವಾಣಾದಿಗಳಿಂದ ಅಲಂಕರಿಸಿದ ಅಶ್ವವು ಹೇಗೆ ವೇಗವಾಗಿ ಚಲಿಸುತ್ತದೆಯೋ ಅದೇ ರೀತಿ ನೀವು ಅಗ್ನ್ಯಾದಿ ಇಂಧನಗಳಿಂದ ಸಜ್ಜೀಕರಿಸಿದ ವಾಹನದಿಂದ ಶೀಘ್ರಚಲಿಸುವವರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹಂಸಃ ಶುಚಿಷದ್ವಸುರಂತರಿಕ್ಷಸ-ದ್ಧೋತಾ ವೇದಿಷದತಿಥಿರ್ದುರೋಣಸತ್ ।**
**ನೃಷದ್ವರಸದೃತಸದ್ವ್ಯೋಮಸ-ದಬ್ಜಾ ಗೋಜಾ ಋತಜಾ ಅದ್ರಿಜಾ ಋತಮ್ ॥೫॥**

**ಪದಾರ್ಥ:-** **[ಶುಚಿಸತ್]** ಪಾವಿತ್ರ್ಯದಲ್ಲಿರುವ **[ವಸುಃ]** ಶರೀರಾದಿಗಳಲ್ಲಿರಲು **[ಅಂತರಿಕ್ಷಸತ್]** ಅಂತರಿಕ್ಷದಲ್ಲಿರಲು **[ಹೋತಾ]** ದಾನ-ಪ್ರತಿಗ್ರಹಮಾಡಲು **[ವೇದಿಷತ್]** ವೇದಿಕೆಯಲ್ಲಿರುವವನು **[ಅತಿಥಿಃ]** ನಿಶ್ಚಿತ(ದಿನ) ತಿಥಿ ಇಲ್ಲದವನು **[ದುರೋಣಸತ್]** ಮನೆಯಲ್ಲಿ **[ನೃಷತ್]** ಮನುಷ್ಯರಲ್ಲಿ **[ವರಸತ್]** ಶ್ರೇಷ್ಠರಲ್ಲಿ **[ವ್ಯೋಮಸತ್]** ಗಗನದಲ್ಲಿ **[ಋತಸತ್]** ಸತ್ಯದಲ್ಲಿ **[ಅಬ್ಜಾಃ]** ನೀರಿನಲ್ಲಿ ಜನಿಸಿದ **[ಗೋಜಾಃ]** ಭೂಮಿಯಲ್ಲಿ ಜನಿಸಿದ **[ಋತಜಾಃ]** ಸತ್ಯ ಪದಾರ್ಥದಲ್ಲಿ ಜನಿಸಿದ **[ಅದ್ರಿಜಾಃ]** ಪರ್ವತದಲ್ಲಿ ಜನಿಸಿದ **[ಹಂಸಃ]** ಪಾಪನಾಶಕನು **[ಋತಂ]** ಸತ್ಯಾಚರಣೆ ಮಾಡುವವನು.

**ಭಾವಾರ್ಥ:-** ಯಾವ ಜೀವರು ಉತ್ತಮ ಗುಣಕರ್ಮ ಸ್ವಭಾವಗಳೊಂದಿಗೆ ಭಗವಂತನ ಆಜ್ಞಾನುಸಾರ ವರ್ತಿಸುವರೋ ಅವರು ಭಗವಂತನೊಂದಿಗೆ ಆನಂದವನ್ನನುಭವಿಸುವರು.

ಈ ಸೂಕ್ತದಲ್ಲಿ ರಾಜ ಪ್ರಜೆಗಳ ಕೃತ್ಯವನ್ನು ವರ್ಣಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೪೧

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಇಂದ್ರಾ ವರುಣೌ ದೇವತೇ । ೧, ೫, ೬, ೧೧ ತ್ರಿಷ್ಟುಪ್, ೨, ೪ ನಿಚೃತ್ತ್ರಿಷ್ಟುಪ್, ೩, ೭ ವಿರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೭ ಪಂಕ್ತಿಃ, ೮, ೧೦ ಸ್ವರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಅಧ್ಯಾಪಕೋಪದೇಶಕರ ಗುಣವರ್ಣನೆ ಮಾಡಲಾಗಿದೆ.

**ಇಂದ್ರಾ ಕೋ ವಾಂ ವರುಣಾ ಸುಮ್ನಮಾಪ ಸ್ತೋಮೋ ಹವಿಷ್ಮಾ ಅಮೃತೋ ನ ಹೋತಾ ।**
**ಯೋ ವಾಂ ಹೃದಿ ಕ್ರತುಮಾ ಅಸ್ಮದುಕ್ತಃ ಪಸ್ಪರ್ಶದಿಂದ್ರಾವರುಣಾ ನಮಸ್ವಾನ್ ॥೧॥**

**ಪದಾರ್ಥ:-** **[ಇಂದ್ರ]** ಐಶ್ವರ್ಯಯುಕ್ತ **[ವರುಣಾ]** ಶ್ರೇಷ್ಠಾಚರಣೆ ಮಾಡುವ ಅಧ್ಯಾಪಕೋಪದೇಶಕರು **[ವಾಂ]** ನಿಮ್ಮಿಬ್ಬರನ್ನು **[ಕಃ]** ಯಾವ **[ಸೋಮಃ]** ಪ್ರಶಂಸೆ **[ಸುಮ್ನಂ]** ಸುಖವನ್ನು **[ಹವಿಷ್ಮಾನ್]** ಬಹು ಪದಾರ್ಥ ಉಳ್ಳವನು. **[ಅಮೃತಃ]** ನಾಶರಹಿತನು **[ಹೋತಾ]** ದಾನಶೀಲನು **[ನ]** ಅವನಿಗೆ ಸಮಾನನು **[ಯಃ]** ಯಾವನು **[ಅಸ್ಮತ್]** ನಮ್ಮಿಂದ **[ಉಕ್ತಃ]** ಹೇಳಲ್ಪಟ್ಟವನು **[ನಮಸ್ವಾನ್]** ಅನ್ನವಂತನು **[ಕ್ರತುಮಾನ್]** ಬುದ್ಧಿವಂತನು **[ವಾಂ]** ನಿಮ್ಮಿಬ್ಬರನ್ನು **[ಹೃದಿ]** ಹೃದಯದಲ್ಲಿ **[ಪಸ್ಪರ್ಶತ್]** ಸ್ಪರ್ಶ ಮಾಡಲಿ.

**ಭಾವಾರ್ಥ:-** ಅಧ್ಯಾಪಕೋಪದೇಶಕರೇ! ಯಾವನು ದಾನಿಯಂತೆ ಪುರುಷಾರ್ಥ ಸಾಧಕನೂ, ಬುದ್ಧಿವಂತನೂ, ನಮ್ರನೂ, ಶಾಂತನೂ, ಸತ್ಕಾರಾರ್ಹನೂ ತಂದೆ-ತಾಯಿಯರಿಂದ ಉತ್ತಮ ಸಂಸ್ಕಾರ ಪಡೆದವನೂ ಆಗಿರುವನೋ ಅವನಿಗೆ ನೀವು ಪಾಠ-ಉಪದೇಶ ಮಾಡಿ ಅವನನ್ನು ಲಕ್ಷ್ಮೀವಂತನನ್ನಾಗಿ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಾ ಹ ಯೋ ವರುಣಾ ಚಕ್ರ ಆಪೀ ದೇವೌ ಮರ್ತಃ ಸಖ್ಯಾಯ ಪ್ರಯಸ್ವಾನ್ ।**
**ಸ ಹಂತಿ ವೃತ್ರಾ ಸಮಿಥೇಷು ಶತ್ರೂ-ನವೋಭಿರ್ವಾ ಮಹದ್ಭಿಃ ಸ ಪ್ರ ಶೃಣ್ವೇ ॥೨॥**

**ಪದಾರ್ಥ:-** [ಇಂದ್ರಾ] ಐಶ್ವರ್ಯವಂತ [ವರುಣಾ] ಶ್ರೇಷ್ಠ [ಆಪೀ] ಸಮಗ್ರ ವಿದ್ಯೆಯಲ್ಲಿ ವ್ಯಾಪ್ತರಾದ [ದೇವೌ] ವಿದ್ಯಾಂತರಾದ ನೀವು [ಯಃ] ಯಾವನು [ಪ್ರಯಸ್ವಾನ್] ಪ್ರಯತ್ನಶೀಲನು [ವೃತ್ರಃ] ಮನುಷ್ಯನು [ಸಖ್ಯಾಯ] ಸ್ನೇಹಕ್ಕಾಗಿ [ಪ್ರ, ಚಕ್ರೇ] ಪ್ರಯತ್ನಿಸುವನೋ [ಸಃ, ಹ] ಅವನೇ [ಅಪೋಭಿಃ] ರಕ್ಷಣಾದಿಗಳೊಂದಿಗೆ [ವಾ] ಅಥವಾ [ಸಃ] ಅವನು [ಮಹದ್ಭಿಃ] ಮಹಾಶಯರೊಂದಿಗೆ [ಸಮಿಥೇಷು] ಸಂಗ್ರಾಮಗಳಲ್ಲಿ [ವೃತ್ರಾ] ಶತ್ರು ಸೇನೆ ಮತ್ತು [ಶತ್ರೂನ್] ಶತ್ರುಗಳನ್ನು [ಹಂತಿ] ನಾಶಗೊಳಿಸುವನು. [ಶೃಣ್ವೇ] ಅವನ ಯಶಸ್ಸನ್ನು ಕೇಳುವೆನು.

**ಭಾವಾರ್ಥ:-** ನ್ಯಾಯಕಾರಕರೇ! ನೀವೆಲ್ಲ ಜನರನ್ನು ಗೌರವಿಸುವವರು, ಶತ್ರುವಿಜಯೀ ಮಹಾಶಯರು, ನಿಮ್ಮೆಲ್ಲರ ಸ್ನೇಹದಿಂದ ಪ್ರೀತಿಕಾರಕರೂ, ವಿಜಯಿಗಳೂ ಆಗಿ ನಿಮ್ಮನ್ನು ಗೌರವಿಸುತ್ತೇವೆ.

ರಾಜಪುರುಷರ ಗುಣವರ್ಣನೆ ಮಾಡಲಾಗುತ್ತದೆ.

**ಇಂದ್ರಾ ಹ ರತ್ನಂ ವರುಣಾ ಧೇಷ್ಠೇ-ತ್ಥಾ ನೃಭ್ಯಃ ಶಶಮಾನೇಭ್ಯಸ್ತಾ ।**
**ಯದೀ ಸಖಾಯಾ ಸಖ್ಯಾಯ ಸೋಮ್ಯೈಃ ಸುತೇಭಿಃ ಸುಪ್ರಯಸಾ ಮಾದಯೈತೇ ॥೩॥**

**ಪದಾರ್ಥ:-** [ದೇಷ್ಠಾ] ಧಾರಕ ಜನರೇ! [ಇಂದ್ರಾ] ರಾಜ ಮತ್ತು [ವರುಣಾ] ಉತ್ತಮ ಗುಣಯುಕ್ತ ಪ್ರಧಾನಿಯೇ! [ಯದಿ] ಒಂದು ವೇಳೆ ನೀವು [ಶಶಮಾನೇಭ್ಯಃ] ಪ್ರಶಂಸೆ ಮಾಡುವ [ನೃಭ್ಯಃ] ಮನುಷ್ಯರಿಗೆ [ಹ] ಅವರಿಗೆ [ರತ್ನಂ] ಧನಾದಿಗಳನ್ನು ಕೊಟ್ಟರೆ [ತಾ] ಅವರಿಬ್ಬರು [ಸಖಾಯಾ] ಪರಸ್ಪರ ಮಿತ್ರರಾಗಿ [ಸಖ್ಯಾಯ] ಗೆಳೆತನಕ್ಕೆ [ಸುಪ್ರಯಸಾ] ಅತಿಶಯ ಪ್ರಯತ್ನದಿಂದ [ಸುತೇಭಿಃ] ತಯಾರಿಸಿದ [ಸೋಮ್ಯೈಃ] ಓಷಧಿರಸಗಳಿಂದ [ಮಾದಯೈತೇ] ಸುಖ ಪಡೆಯುವರು. [ಇದ್ಧಾ] ಈ ರೀತಿ ನಿಶ್ಚಯವಾಗಿಯೂ ಆನಂದಿಸುವರು.

**ಭಾವಾರ್ಥ:-** ಯಾವ ರಾಜ-ಪ್ರಧಾನಿಗಳು ಉತ್ತಮ ಗುಣವಂತರಿಗೆ ಐಶ್ವರ್ಯಾದಿಗಳನ್ನು ಕೊಡುವರೋ ಅವರೂ ಸಹ ಐಶ್ವರ್ಯವನ್ನು ಪಡೆದು ಆನಂದಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಾ ಯುವಂ ವರುಣಾ ದಿದ್ಯುಮಸ್ಮಿನ್ನೋಜಿಷ್ಠಮುಗ್ರಾ ನಿ ವಧಿಷ್ಟಂ ವಜ್ರಮ್।**
**ಯೋ ನೋ ದುರೇವೋ ವೃಕತಿರ್ದಭೀತಿ-ಸ್ತಸ್ಮಿನ್ಮಿಮಾಥಾಮಭಿಭೂತ್ಯೋಜಃ ॥೪॥**

**ಪದಾರ್ಥ:-** [ಇಂದ್ರ] ಶತ್ರುಸಂಹಾರಕ ಮತ್ತು [ವರುಣಾ] ಶ್ರೇಷ್ಠರಾದ ರಾಜ ಮಂತ್ರಿಗಳೇ! [ಉಗ್ರಾ] ತೇಜಸ್ವೀ [ಯುವಾಂ] ನೀವಿಬ್ಬರೂ [ಅಸ್ಮಿನ್] ಈ ರಾಜ್ಯದಲ್ಲಿ [ಓಜಿಷ್ಠಂ] ಪರಾಕ್ರಮಿಗಳಾಗಿ [ದಿದ್ಯುಂ] ವಿದ್ಯಾನ್ಯಾಯಗಳಿಂದ ಪ್ರಸಿದ್ಧರಾಗಿ [ವಜ್ರಂ] ಆಯುಧಧರಿಸಿ [ನಿ, ವಧಿಷ್ಟಂ] ಶತ್ರುಸಂಹಾರ ಮಾಡಿರಿ. [ಯಃ] ಯಾವನು [ದುರೇವಃ] ದುಃಖ ಸಾಧ್ಯ [ವೃಕತಿಃ] ತೋಳಗಳಂತೆ ಶತ್ರುನಾಶಕನೋ [ದಭೀತಿಃ] ಹಿಂಸಕನು [ನಃ] ನಮಗೆ [ಅಭಿಭೂತಿಃ] ತಿರಸ್ಕಾರ ಮಾಡುವವನೋ [ಓಜಃ] ಪರಾಕ್ರಮಿಯೋ ಅವನನ್ನು [ಮಿಮಾಥಾಂ] ನಿರ್ಮಾಣ ಮಾಡಿರಿ. [ತಸ್ಮಿನ್] ಅವನಲ್ಲಿ ನಂಬಿಕೆ ಇಡಿರಿ.

**ಭಾವಾರ್ಥ:-** ಯಾವ, ರಾಜ-ಮಂತ್ರಿಗಳು ವಿದ್ಯೆ, ಸತ್ಯಾಚರಣೆ, ಜಿತೇಂದ್ರಿಯತ್ವ ಮುಂತಾದ ಗುಣಗಳನ್ನು ಪಡೆದು ಅತಿಶಯ ಬಲಿಷ್ಠರಾಗಿ ಶತ್ರು ಸಂಹಾರ ಮಾಡುತ್ತ ಪ್ರಜಾಪಾಲನೆ ಮಾಡುವರೋ ಅವರು ಕಪಟಕ್ಕೊಳಗಾಗದೆ ನಿರಂತರ ರಾಜ್ಯಸುಖ ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಾ ಯುವಂ ವರುಣಾ ಭೂತಮಸ್ಯಾ ಧಿಯಃ ಪ್ರೇತಾರಾ ವೃಷಭೇವ ಧೇನೋಃ ।**
**ಸಾ ನೋ ದುಹೀಯದ್ಯವಸೇವ ಗತ್ವೀ ಸಹಸ್ರಧಾರಾ ಪಯಸಾ ಮಹೀ ಗೌಃ ॥೫॥**

**ಪದಾರ್ಥ:-** [**ಇಂದ್ರಾ**] ವಿದ್ಯೈಶ್ವರ್ಯ ಸಂಪನ್ನ [**ವರುಣಾ**] ಶ್ರೇಷ್ಠ ಗುಣಗಳಿರುವ [**ಪ್ರೇತಾರಾ**] ಪ್ರಾಪ್ತರಾಗುವ [**ಯುವಾಂ**] ರಾಜ-ಮಂತ್ರಿಗಳಾದ ನೀವಿಬ್ಬರು [**ಅಸ್ಯಾಃ**] ಈ [**ಧಿಯಃ**] ಬುದ್ಧಿಯ [**ಧೇನೋಃ**] ಗೋ ಸಂಬಂಧ [**ವೃಷಭೇವ**] ವೃಷಭದಂತೆ/ಗೂಳಿಯಂತೆ [**ಭೂತಂ**] ಹಿಂದೆ ಕಳೆದು ಹೋದ ವಿಷಯ ಮರು ಪಡೆಯಿರಿ. [**ಸಾ**] ಅವಳು [**ಸಹಸ್ರಧಾರಾ**] ಸಾವಿರಾರು ಧಾರೆಗಳಲ್ಲಿ ಪ್ರವಹಿಸುವ ವಾಣಿಯು [**ಮಹೀ**] ಅತಿಶಯ ಚಲಿಸುವ [**ಗೌಃ**] ಗೋವು [**ಪಯಸಾ**] ಹಾಲಿನಿಂದ [**ಯವಸೇವ**] ಹೊಟ್ಟು ಮುಂತಾದ ಮೇವುಗಳಂತೆ [**ನಃ**] ನಮ್ಮನ್ನು [**ಗತ್ವೀ**] ಪ್ರಾಪ್ತರಾಗಿ [**ದುಹೀಯಾತ್**] ಪೂರ್ಣರನ್ನಾಗಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಧ್ಯಾಪಕೋಪದೇಶಕರೇ! ನೀವು ಎಲ್ಲರಿಗೂ ಉತ ಷ್ಟ ವಿದ್ಯೋಪದೇಶ ಮಾಡಿರಿ. ಅದರಿಂದವರು ಮನೋರಥವನ್ನು ಪರಿಪೂರ್ಣಗೊಳಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತೋಕೇ ಹಿತೇ ತನಯ ಉರ್ವರಾಸು ಸೂರೋ ದೃಶೀಕೇ ವೃಷಣಶ್ಚ ಪೌಂಸ್ಯೇ ।**
**ಇಂದ್ರಾ ನೋ ಅತ್ರ ವರುಣಾ ಸ್ಯಾತಾ-ಮವೋಭಿರ್ದಸ್ಮಾ ಪರಿತಕ್ಮ್ಯಾಯಾಮ್ ॥೬॥**

**ಪದಾರ್ಥ:-** [**ಇಂದ್ರಾ**] [**ವರುಣಾ**] ಶ್ರೇಷ್ಠ ರಾಜ-ಪ್ರಧಾನರೇ! ನೀವಿಬ್ಬರೂ [**ಅತ್ರ**] ಈ ಪ್ರಜೆಗಳಲ್ಲಿ [**ಪರಿತಕ್ಮ್ಯಾಯಾಂ**] ಸುತ್ತಲೂ ಅಶ್ವದಶರಕ್ಷಣೆ ಇರುವ ರಾಜ್ಯದಲ್ಲಿ [**ಚ**] ಮತ್ತು [**ಉರ್ವರಾಸು**] ಭೂಮಿಗಳಲ್ಲಿ [**ಸೂರಃ**] ಸೂರ್ಯನಿಗೆ ಸದೃಶರಾಗಿ [**ಹಿತೇ**] ಹಿತಸಾಧಿಸುವ [**ತೋಕೇ**] ಉತ್ಪನ್ನನಾದ [**ತನಯೇ**] ಕುಮಾರನಿಗೆ [**ದೃಶೀಕೇ**] ದರ್ಶನಯೋಗ್ಯ [**ಪೌಂಸ್ಯೇ**] ಪುರುಷಾರ್ಥಕ್ಕೆ ಕಾರಣರಾದ [**ನಃ**] ನಮ್ಮನ್ನು [**ವೃಷಣಃ**] ಬಲಿಷ್ಠರನ್ನಾಗಿ ಮಾಡಿರಿ. [**ಅವೋಭಿಃ**] ರಕ್ಷಣಾದಿಗಳಿಂದ [**ದಸ್ಮಾ**] ದುಃಖನಾಶಕರು [**ಸ್ಯಾತಾಂ**] ಆಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಬ್ರಹ್ಮಾಂಡದಲ್ಲಿ ಹೇಗೆ ಸೂರ್ಯನೋ ಹಾಗೆ ರಾಜ್ಯದಲ್ಲಿ ರಾಜಪುರುಷರು ಎಲ್ಲರಿಗೂ ತಂದೆಯಂತಿರುವರು. ದುಷ್ಟಶಕ್ತಿಗಳ ನಿವಾರಣೆ ಮಾಡಿ ನ್ಯಾಯ ಮಾರ್ಗದಿಂದ ಪ್ರಜೆಗಳ ಪಾಲನೆ ಮಾಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯುವಾಮಿದ್ಧ್ಯವಸೇ ಪೂರ್ವ್ಯಾಯ ಪರಿ ಪ್ರಭೂತೀ ಗವಿಷಃ ಸ್ವಾಪೀ ।**
**ವೃಣೀಮಹೇ ಸಖ್ಯಾಯ ಪ್ರಿಯಾಯ ಶೂರಾ ಮಂಹಿಷ್ಠಾ ಪಿತರೇವ ಶಂಭೂ ॥೭॥**

**ಪದಾರ್ಥ:-** [**ಯುವಾಂ**] [**ಹಿ**] ನಿಮ್ಮಿಬ್ಬರನ್ನೂ [**ಪೂರ್ವ್ಯಾಯ**] ಹಿಂದಿನ ರಾಜರು ಮಾಡಿರುವ [**ಅವಸೇ**] ರಕ್ಷಣಾದಿಗಳಿಗೆ [**ಇತ್**] ಅದಕ್ಕೆ [**ಪ್ರಭೂತೀ**] ಸಮರ್ಥ [**ಸ್ವಾಪೀ**] ಶಯನಮಾಡುತ್ತಿರುವ [**ಶೂರಾ**] ವೀರರಾದ [**ಮಂಹಿಷ್ಠಾ**] ಮಹಿಮಾನ್ವಿತ [**ಪಿತರೇವ**] ಜನನೀಜನಕರಂತೆ [**ಶಂಭೂ**] ಸುಖಭಾವುಕರಾಗಿ [**ಪ್ರಿಯಾಯ**] ಪ್ರೀತಿಪಾತ್ರನಾದ [**ಸಖ್ಯಾಯ**] ಗೆಳೆತನಕ್ಕಾಗಿ [**ಗವಿಷಃ**] ಗೋವುಗಳನ್ನು ಬಯಸುವವನಿಗೆ [**ಪರಿ, ವೃಣೀಮಹೇ**] ನಾವು ಸ್ವೀಕರಿಸುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಪ್ರಜೆಗಳೇ! ಯಾವನು ಪ್ರಜೆಗಳನ್ನು ತಂದೆ ಮಕ್ಕಳನ್ನು ನೋಡಿಕೊಳ್ಳುವಂತೆ ನೋಡಿಕೊಳ್ಳುವನೋ ನೀವು ಅಂತಹ ರಾಜನನ್ನೇ ಪಡೆದುಕೊಳ್ಳಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಾ ವಾಂ ಧಿಯೋಽವಸೇ ವಾಜಯಂತೀ-ರಾಜಿಂ ನ ಜಗ್ಮುರ್ಯುವಯೂಃ ಸುದಾನೂ ।**
**ಶ್ರಿಯೇ ನ ಗಾವ ಉಪ ಸೋಮಮಸ್ಥು-ರಿಂದ್ರಂ ಗಿರೋ ವರುಣಂ ಮೇ ಮನೀಷಾಃ ॥೮॥**

**ಪದಾರ್ಥ:-** **[ಮೇ]** ನನ್ನ **[ಗಿರಃ]** ಮಾತುಗಳು **[ಮನೀಷಾ]** ಬುದ್ಧಿಯು **[ಶ್ರಿಯೇ]** ಧನಕ್ಕಾಗಿ **[ಗಾವಃ]** **[ನ]** ಗೋವುಗಳಿಗೆ ಸಮನಾದ **[ಸೋಮಂ]** ವನಸ್ಪತಿ ರಸವನ್ನು **[ಇಂದ್ರಂ]** ಸುಖದಾಯಕ **[ವರುಣಂ]** ಶ್ರೇಷ್ಠವ್ಯಕ್ತಿಯ **[ಉಪ, ತಸ್ಥುಃ]** ಸಮೀಪವರ್ತಿಗಳಾಗುವರು. **[ವಾಂ]** ನಿಮ್ಮಿಬ್ಬರ **[ಧಿಯಃ]** ಬುದ್ಧಿಕರ್ಮವನ್ನು **[ಅವಸೇ]** ರಕ್ಷಣೆ ಮಾಡಲು **[ವಾಜಯಂತೀಃ]** ತಿಳಿದವಳಾಗಿ **[ಆಜಂ]** **[ನ]** ಸಂಗ್ರಾಮದ ರೀತಿಯಲ್ಲಿ **[ಸುದಾನೂ]** ಶ್ರೇಷ್ಠ ದಾನಿಗಳನ್ನು **[ಯುವಯಾಃ]** ನಿಮ್ಮಿಬ್ಬರನ್ನೂ ಇಚ್ಛಿಸುವವರಿಗೆ **[ಜಗ್ಮುಃ]** ಸಮೀಪವರ್ತಿಗಳಾಗುವರೋ **[ತಾ]** ಅವರನ್ನು ರಕ್ಷಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ವಿದ್ಯಾವತೀ ತಾಯಿಯು ತನ್ನ ಸಂತಾನವನ್ನು ಸಂಸ್ಕಾರ, ಶಿಕ್ಷಣ, ಆಹಾರಾದಿಗಳನ್ನು ನೀಡಿ ಸುಖಿಗಳನ್ನಾಗಿ ಮಾಡುವಳೋ ಅದೇ ರೀತಿ ರಾಜನು ತನ್ನ ಪ್ರಜೆಗಳ ಪಾಲನೆ ಪೋಷಣೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಮಾ ಇಂದ್ರಂ ವರುಣಂ ಮೇ ಮನೀಷಾ ಅಗ್ಮನ್ನುಪ ದ್ರವಿಣಮಿಚ್ಛಮಾನಾಃ ।**
**ಉಪೇಮಸ್ಥುರ್ಜೋಷ್ಟಾರ ಇವ ವಸ್ವೋ ರಘ್ವೀರಿವ ಶ್ರವಸೋ ಭಿಕ್ಷಮಾಣಾಃ ॥೯॥**

**ಪದಾರ್ಥ:-** **[ಇಮಾಃ]** ಈ ಕುಮಾರಿಯರು **[ಮೇ]** ನನ್ನ **[ಮನೀಷಾ]** ಬುದ್ಧಿಗೆ ಸದೃಶ **[ಇಂದ್ರಂ]** ಸಂಪತ್ತನ್ನು **[ದ್ರವಿಣಂ]** ಧನ-ಯಶವನ್ನು **[ವರುಣಂ]** ಶ್ರೇಷ್ಠ ಸ್ವಭಾವವನ್ನು **[ಇಚ್ಛಮಾನಾಃ]** ಬಯಸುವವರಾಗಿ **[ಅಗ್ಮನ್]** ಪ್ರಾಪ್ತರಾಗುವರು. **[ಜೋಷ್ಟಾರ ಇವ]** ಸೇವೆ ಮಾಡುವ ಪುರುಷರಂತೆ **[ವಸ್ವಃ]** ಧನದ **[ಉಪ, ಅಸ್ಥುಃ]** ಸಮೀಪದಲ್ಲಿರುವರು **[ಈಂ]** ಮತ್ತು **[ಶ್ರವಸಃ]** ಅನ್ನದ **[ರಘ್ವೀರಿವ]** ಸಣ್ಣ ಮಕ್ಕಳಂತೆ **[ಭಿಕ್ಷಮಾಣಾಃ]** ಯಾಚನೆ ಮಾಡುತ್ತಲಿರುವ **[ಉಪ]** ಸಮೀಪವರ್ತಿಗಳೇ ಶ್ರೇಷ್ಠ ಕನ್ಯೆಯರಾಗುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜನೇ! ಕನ್ಯೆಯರು ಬ್ರಹ್ಮಚರ್ಯಾಶ್ರಮದಲ್ಲಿ ವಿದ್ಯಾರ್ಜನೆ ಮಾಡಿ ವಿದ್ಯಾವತಿಯರಾಗಿ ತನಗನುಕೂಲಕರನಾದ ಪತಿಯನ್ನು ವರಿಸಿ ಹೇಗೆ ಆನಂದಿತರಾಗುವರೋ ಹಾಗೆ ಪ್ರಜೆಗಳೊಂದಿಗೆ ರಾಜ, ರಾಜನೊಂದಿಗೆ ಪ್ರಜೆ ನಿರಂತರ ಆನಂದಿತರಾಗಿರಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಶ್ವ್ಯಸ್ಯ ತ್ಮನಾ ರಥ್ಯಸ್ಯ ಪುಷ್ಟೇ-ರ್ನಿತ್ಯಸ್ಯ ರಾಯಃ ಪತಯಃ ಸ್ಯಾಮ ।**
**ತಾ ಚಕ್ರಾಣಾ ಊತಿಭಿರ್ನವ್ಯಸೀಭಿ-ರಸ್ಮತ್ರಾ ರಾಯೋ ನಿಯುತಃ ಸಚಂತಾಮ್ ॥೧೦॥**

**ಪದಾರ್ಥ:-** **[ತಾ]** ಅವರು **[ಚಕ್ರಾಣೌ]** ಕಾರ್ಯಮಾಡುವವರಿಬ್ಬರು **[ನವ್ಯಸೀಭಿಃ]** ಹೊಸತಾದ **[ಊತಿಭಿಃ]** ರಕ್ಷಣಾದಿ ಕ್ರಿಯೆಗಳಿಂದ **[ಅಸ್ಮತ್ರಾ]** ನಮ್ಮಲ್ಲಿರುವ **[ರಾಯಃ]** ಧನ ಸಂಬಂಧ ಪಡೆದು **[ನಿಯುತಃ]** ನಿಶ್ಚಯವಾಗಿ **[ಸಚಂತಾಂ]** ಸಂಬದ್ಧರಾಗುವರೋ ಹಾಗೆ ನಾವು **[ತ್ಮನಾ]** ಆತ್ಮದಿಂದ **[ಅಶ್ವ್ಯಸ್ಯ]** ಶೀಘ್ರಗತಿಯಲ್ಲಿ ಉತ್ಪನ್ನ **[ರಥ್ಯಸ್ಯ]** ರಮಣಯೋಗ್ಯವಾಹನದ **[ಪುಷ್ಟೇಃ]** ಪುಷ್ಟಿಯಲ್ಲಿ **[ನಿತ್ಯಸ್ಯ]** ಶಾಶ್ವತ **[ರಾಯಃ]** ಧನದ **[ಪತಯಃ]** ಒಡೆಯರು **[ಸ್ಯಾಮ]** ಆಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಕಾರ್ಯಮಗ್ನಪುರುಷರು ಹೇಗೆ ಸಂಪತ್ತನ್ನು ಪಡೆಯುವರೋ ಹಾಗೆ ನಾವೂ ಸಂಪೂರ್ಣ ಆನಂದವನ್ನು ಪಡೆಯಲು ಇಚ್ಛಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನೋ ಬೃಹಂತಾ ಬೃಹತೀಭಿರೂತೀ ಇಂದ್ರ ಯಾತಂ ವರುಣ ವಾಜಸಾತೌ ।**
**ಯದ್ದಿದ್ಯವಃ ಪೃತನಾಸು ಪ್ರಕ್ರೀಳಾನ್ ತಸ್ಯ ವಾಂ ಸ್ಯಾಮ ಸನಿತಾರ ಆಜೇಃ ॥೧೧॥**

**ಪದಾರ್ಥ:-** **[ಇಂದ್ರ]** ರಾಜನೇ! **[ವರುಣ]** ಸೇನೇಶನೇ! **[ಬೃಹಂತಾ]** ಶ್ರೇಷ್ಠಗುಣವಂತರಾದ ನೀವಿಬ್ಬರು **[ಬೃಹತೀಭಿಃ]** ಶ್ರೇಷ್ಠವಾದ **[ಊತೀ]** ರಕ್ಷಣಾದಿಗಳಿಂದ **[ವಾಜಸಾತೌ]** ಸಂಗ್ರಾಮದಲ್ಲಿ **[ನಃ]** ನಮಗೆ **[ಆ, ಯಾತಂ]** ಎಲ್ಲಾ ರೀತಿಯಿಂದಲೂ ಪ್ರಾಪ್ತರಾಗಿರಿ. **[ಯತ್]** ಯಾವ **[ದಿದ್ಯವಃ]** ತೇಜಸ್ವಿಯೋ **[ತಸ್ಯ]** ಅದರ **[ಆಜೇಃ]** ಸಂಗ್ರಾಮದ **[ಸನಿತಾರಃ]** ವಿಭಾಗಿಸುವ ನಾವು **[ಪೃತನಾಸು]** ಸೇನೆಗಳಲ್ಲಿ **[ವಾಂ]** ನಿಮ್ಮಿಬ್ಬರನ್ನು **[ಸ್ಯಾಮ]** ಪಡೆಯುವವರಾಗುತ್ತೇವೆ.

**ಭಾವಾರ್ಥ:-** ರಾಜನೇ! ನಾವು ಹೇಗೆ ನಿನ್ನೊಂದಿಗೆ ಪ್ರೀತಿಯಿಂದ ವರ್ತಿಸುವೆವೋ ನೀನೂ ನಮ್ಮೊಂದಿಗೆ ಹಾಗೆ ವರ್ತಿಸು.

ಈ ಸೂಕ್ತದಲ್ಲಿ ಅಧ್ಯಾಪಕೋಪದೇಶಕ ರಾಜ ಪ್ರಜೆ ಹಾಗೂ ಮಂತ್ರಿ ಇವರೆಲ್ಲರ ಕೃತ್ಯಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ನಲವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೪೨

ಮಂತ್ರಸಂಖ್ಯೆ ೧೦ । ವಾಮದೇವ ಋಷಿಃ, ತ್ರಸದಸ್ಯುಃ ಪೌರುಕುತ್ಸ ಋಷಿಃ । ೧-೬ ಆತ್ಮಾ ೭-೧೦ ಇಂದ್ರಾವರುಣೌ ದೇವತೇ । ೧-೬, ೯ ನಿಚೃತ್ತ್ರಿಷ್ಟುಪ್, ೭ ವಿರಾಟ್ತ್ರಿಷ್ಟುಪ್, ೮ ಭುರಿಕ್ತ್ರಿಷ್ಟುಪ್, ೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೫ ನಿಚೃತ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈಶ್ವರನ ವಿಷಯವನ್ನು ಇಲ್ಲಿ ಹೇಳಲಾಗಿದೆ.

**ಮಮ ದ್ವಿತಾ ರಾಷ್ಟ್ರಂ ಕ್ಷತ್ರಿಯಸ್ಯ ವಿಶ್ವಾಯೋರ್ವಿಶ್ವೇ ಅಮೃತಾ ಯಥಾ ನಃ ।**
**ಕ್ರತುಂ ಸಚಂತೇ ವರುಣಸ್ಯ ದೇವಾ ರಾಜಾಮಿ ಕೃಷ್ಟೇರುಪಮಸ್ಯ ವವ್ರೇಃ ॥೧॥**

**ಪದಾರ್ಥ:-** [**ಯಥಾ**] ಹೇಗೆ [**ಮಮ**] ನನ್ನ [**ವಿಶ್ವಾಯೋಃ**] ಸಂಪೂರ್ಣ ಆಯುಸ್ಸಿನ [**ಕ್ಷತ್ರಿಯ**] ಕ್ಷತ್ರಿಯನ [**ದ್ವಿತಾ**] ಇಮ್ಮಡಿ ಇರುವುದು [**ವಿಶ್ವಾ**] ಸಮಗ್ರ [**ಅಮೃತಾಃ**] ನಾಶರಹಿತರಾದ [**ನಃ**] ನಮ್ಮ [**ರಾಷ್ಟ್ರಂ**] ರಾಜ್ಯವನ್ನು [**ಕ್ರತುಂ**] ಬುದ್ಧಿಯನ್ನು [**ಸಚಂತೇ**] ಸುಸಂಗತಗೊಳಿಸುವರು. [**ವರುಣಸ್ಯ**] ಶ್ರೇಷ್ಠ [**ಕೃಷ್ಟೇಃ**] ಆಕರ್ಷಿಸುವ [**ಉಪಮಸ್ಯ**] ಉಪಮೆ ಇರುವ [**ವವ್ರೇಃ**] ಸ್ವೀಕಾರಾರ್ಹ ಬುದ್ಧಿಯನ್ನು [**ದೇವಾಃ**] ಪ್ರಕಾಶಮಾನರು ಸೇರುವಂತೆ [**ರಾಜಾಮಿ**] ಶೋಭಿಸುವೆನು.

**ಭಾವಾರ್ಥ:-** ಮನುಷ್ಯರೇ! ಪ್ರಪಂಚದಲ್ಲಿ ಸ್ವ, ಸ್ವಾಮಿ, ಎಂಬ ಎರಡೇ ಪದಾರ್ಥಗಳಿವೆ. ಯಾವ ರಾಜ್ಯದಲ್ಲಿ ದೀರ್ಘಕಾಲ ಬದುಕಿದ್ದು ನ್ಯಾಯವಂತರೂ ಧಾರ್ಮಿಕರೂ ಆದ ಮಂತ್ರಿಗಳು ಎಲ್ಲಾ ರೀತಿಯ ಗುಣ ಗ್ರಹಣ ಮಾಡಿ ಉಪಮೆಯಾಗಿರುವರೋ ಅಲ್ಲಿರುವ ಸಜ್ಜನರು ಸುಖವನ್ನು ಅತಿಶಯವಾಗಿ ಅನುಭವಿಸುವರು.

ಪುನಃ ಆದೇ ವಿಷಯವನ್ನು ಹೇಳಲಾಗುತ್ತದೆ.

**ಅಹಂ ರಾಜಾ ವರುಣೋ ಮಹ್ಯಂ ತಾ-ನ್ಯಸುರ್ಯಾಣಿ ಪ್ರಥಮಾ ಧಾರಯಂತ ।**
**ಕ್ರತುಂ ಸಚಂತೇ ವರುಣಸ್ಯ ದೇವಾ ರಾಜಾಮಿ ಕೃಷ್ಟೇರುಪಮಸ್ಯ ವವ್ರೇಃ ॥೨॥**

**ಪದಾರ್ಥ:-** [**ವರುಣಃ**] ಉತ್ತಮ ವ್ಯವಸ್ಥಾಪಕ [**ರಾಜಾ**] ರಾಜನಾದ [**ಅಹಂ**] ಜಗದೀಶ್ವರನು [**ವರುಣಸ್ಯ**] ಉತ್ತಮ ಸಂಬಂಧದಲ್ಲಿ [**ವವ್ರೇಃ**] ಸ್ವೀಕಾರಾರ್ಹ [**ಕೃಷ್ಟೇಃ**] ಮನುಷ್ಯ ಸಂಬಂಧದಲ್ಲಿ [**ಉಪಮಸ್ಯ**] ಉಪಮೆಯಾದ ಜಗತ್ತಿನ [**ರಾಜಾಮಿ**] ಪ್ರಕಾಶಕನಾಗುವೆನು. [**ಮಹ್ಯಂ**] ನನಗೆ [**ದೇವಾಃ**] ವಿದ್ಯಾವಂತರು [**ಪ್ರಥಮಾ**] ಅನಾದಿಯಾಗಿರುವ [**ಅಸುರ್ಯಾಣಿ**] ಮೇಘಾದಿ ಗುರುತು / ಚಿಹ್ನೆ [**ತಾನಿ**] ಅವುಗಳನ್ನು [**ಧಾರಯಂತ**] ಧಾರಣ ಮಾಡುವರು [**ಕ್ರತುಂ**] ಬುದ್ಧಿಯನ್ನು [**ಸಚಂತೇ**] ಪಡೆಯುವರು.

**ಭಾವಾರ್ಥ:-** ಯಾವನು ಸರ್ವತ್ರ ವ್ಯಾಪ್ತನೂ ಬುದ್ಧಿ-ಧನದಾಯಕನೂ ಜಗದೊಡೆಯನೂ ಆಗಿರುವನೋ ಅವನನ್ನೇ ಭಜಿಸಿದರೆ ಸಕಲ ಸುಖಾನುಭವಿಗಳಾಗಬಹುದು.

ಪುನಃ ಆದೇ ವಿಷಯವನ್ನು ಹೇಳಲಾಗುತ್ತದೆ.

**ಅಹಮಿಂದ್ರೋ ವರುಣಸ್ತೇ ಮಹಿತ್ವೋ-ರ್ವೀ ಗಭೀರೇ ರಜಸೀ ಸುಮೇಕೇ ।**
**ತ್ವಷ್ಟೇವ ವಿಶ್ವಾ ಭುವನಾನಿ ವಿದ್ವಾನ್ ತ್ಸಮೈರಯಂ ರೋದಸೀ ಧಾರಯಂ ಚ ॥೩॥**

**ಪದಾರ್ಥ:-** [**ಇಂದ್ರಃ**] ಧನವಂತನು [**ವರುಣಃ**] ಶ್ರೇಷ್ಠನೂ ಆದ [**ಅಹಂ**] ಅಹಂಪದ ವಾಚ್ಯ ಭಗವಂತನು [**ವಿದ್ವಾನ್**] ಸಕಲ ವಿದ್ಯೆಯನ್ನು ಬಲ್ಲವನು. [**ತ್ವಷ್ಟೇವ**] ಶಿಲ್ಪಿಯಂತೆ [**ಗಭೀರೇ**] ವಿಸ್ತೃತವಾದ [**ಸುಮೇಕೇ**] ಉತ್ತಮವಾಗಿ ರಚಿಸಿ ವಿಸ್ತಾರಗೊಳಿಸಲಾದ [**ರಜಸೀ**] ಸೂರ್ಯ-ಭೂಮಿಗಳನ್ನು [**ಮಹಿತ್ವಾ**] ಮಹಿಮಾನ್ವಿತಗೊಳಿಸಿ [**ತೇ**] ಅವೆರಡನ್ನು [**ಉರ್ವೀ**] ಬಹುಪದಾರ್ಥಧಾರಕ [**ರೋದಸೀ**] ಭೂಲೋಕ, ಸೂರ್ಯಮಂಡಲಗಳನ್ನು ರಚಿಸಿ [**ವಿಶ್ವಾ**] ಸಮಸ್ತ [**ಭುವನಾನಿ**] ಲೋಕಗಳನ್ನು [**ಸಂ**] [**ಐರಯಂ**] ಒಂದಾಗಲು ಪ್ರೇರಣೆ ನೀಡಿರುವೆನು. [**ಧಾರಯಂ, ಚ**] ಅವುಗಳೆರಡನ್ನು ಧಾರಣ ಮಾಡಿರುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಚತುರನಾದ ಪಂಡಿತನು, ವಿದ್ಯಾವಂತ ಶಿಲ್ಪಿಯು ವಿಧ ವಿಧ ವಸ್ತುಗಳನ್ನು ತಯಾರಿಸುವರೋ ಹಾಗೆ ಪರಮೇಶ್ವರನು ಈ ವಿಚಿತ್ರ ಹಾಗೂ ಅದ್ಭುತ ಬ್ರಹ್ಮಾಂಡವನ್ನು

ರಚಿಸಿರುವನು. ಮತ್ತು ಅದನ್ನು ತಾನೇ ಧಾರಣ ಮಾಡಿರುವನು. ಅಂತಹ ಸಾಮರ್ಥ್ಯವು ಬೇರೆ ಯಾವ ಜೀವಾತ್ಮನಿಗೂ ಇರುವುದಿಲ್ಲ. ಆದರೆ ನಾನು ರಚಿಸಿದ ಬ್ರಹ್ಮಾಂಡದ ಅತ್ಯಲ್ಪ ವಸ್ತುವನ್ನು ಪಡೆದು ತಮ್ಮ-ತಮ್ಮ ಬುದ್ಧಿಗನುಗುಣವಾಗಿ ಯತ್ಕಿಂಚಿತ್ ರಚಿಸಿ ಹೆಮ್ಮೆ ಪಡುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಹಮಪೋ ಅಪಿನ್ವಮುಕ್ಷಮಾಣಾ ಧಾರಯಂ ದಿವಂ ಸದನ ಋತಸ್ಯ ।**

**ಋತೇನ ಪುತ್ರೋ ಅದಿತೇರ್ಋತಾವೋ-ತ ತ್ರಿಧಾತು ಪ್ರಥಯದ್ವಿ ಭೂಮ ॥೪॥**

**ಪದಾರ್ಥ:-** [**ಅಹಂ**] ಪರಮಾತ್ಮನು [**ಋತಸ್ಯ**] ಪ್ರಕೃತಿಯ [**ಸದನೇ**] ಮನೆ-ಪ್ರಪಂಚದಲ್ಲಿ [**ದಿವಂ**] ಬೆಳಕನ್ನು [**ಉಕ್ಷಮಾಣಾಃ**] ಪ್ರಸರಿಸುತ್ತ [**ಅಪಃ**] ಅಂತರಿಕ್ಷದ [**ಅಪಿನ್ವನ್**] ಪುಷ್ಟೀಕರಿಸುವೆನು. [**ಋತೇನ**] ಸತ್ಯ ಕಾರಣದಿಂದ [**ಅದಿತೇಃ**] ಅಖಂಡ ಅಂತರಿಕ್ಷದ [**ಋತಾವಾ**] ಸತ್ಯಯುಕ್ತ [**ಪುತ್ರಃ**] ಪುತ್ರನಂತಿರುವವನು [**ಉತ**] ನಿಶ್ಚಯವಾಗಿಯೂ [**ಭೂಮ**] ಬಹುವಿಧ [**ತ್ರಿಧಾತು**] ಸತ್ವ, ರಜ, ತಮೋ ರೂಪ ಸಮಗ್ರ ಜಗತ್ತನ್ನು [**ವಿ, ಪ್ರಥಯತ್**] ವಿವಿಧ ರೀತಿಯಿಂದ ಪ್ರಕಟಗೊಳಿಸಿ [**ಧಾರಯಂ**] ಧಾರಣ ಮಾಡಿರುವೆನು.

**ಭಾವಾರ್ಥ:-** ಮನುಷ್ಯರೇ! ಪರಮಾತ್ಮನ ಹೊರತು ಈ ಪ್ರಪಂಚಧಾರಕನು ಬೇರೊಬ್ಬನಿಲ್ಲ. ಹೇಗೆ ಗುಣತ್ರಯಗಳು ಕಾರಣವೋ ಅದೇ ರೀತಿ ಈ ಕಾರ್ಯಪ್ರಪಂಚವೂ ಆಗಿರುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಾಂ ನರಃ ಸ್ವಶ್ವಾ ವಾಜಯಂತೋ ಮಾಂ ವೃತಾಃ ಸಮರಣೇ ಹವಂತೇ ।**

**ಕೃಣೋಮ್ಯಾಜಿಂ ಮಘವಾಹಮಿಂದ್ರ ಇಯರ್ಮಿ ರೇಣುಮಭಿಭೂತ್ಯೋಜಾಃ ॥೫॥**

**ಪದಾರ್ಥ:-** [**ಸ್ವಶ್ವಾಃ**] ಉತ್ತಮ ಶಕ್ತಿ ಇರುವ [**ಮಾಂ**] ನನ್ನನ್ನು [**ವಾಜಯಂತಃ**] ತಿಳಿದವರಾಗಿ [**ವೃತಾಃ**] ಸ್ವೀಕರಿಸಿದ [**ನರಃ**] ಮನುಷ್ಯರು [**ಸಮರಣೇ**] ಸಂಗ್ರಾಮದಲ್ಲಿ [**ಮಾಂ**] ನನ್ನನ್ನು [**ಹವಂತೇ**] ಸ್ವೀಕರಿಸುವರು. [**ಮಘವಾ**] ಶ್ರೇಷ್ಠ ಧನವಂತ [**ಇಂದ್ರಃ**] ತೇಜಸ್ವೀ [**ಅಭಿಭೂತ್ಯೋಜಾಃ**] ದುಷ್ಟರನ್ನು ಸೋಲಿಸುವ ಸಾಮರ್ಥ್ಯವಿರುವ [**ಅಹಂ**] ನಾನು ಪರಮಾತ್ಮನು [**ಆಜಂ**] ಸಂಗ್ರಾಮವನ್ನು [**ಕೃಣೋಮಿ**] ಮಾಡುವೆನು. [**ರೇಣುಂ**] ಧೂಳಿಯನ್ನು [**ಇಯರ್ಮಿ**] ಪ್ರಾಪ್ತಿಗೊಳಿಸುವೆನು.

**ಭಾವಾರ್ಥ:-** ಮನುಷ್ಯರೇ! ಯಾವನು ಎಲ್ಲಾ ಪದಾರ್ಥಗಳಲ್ಲೂ ಇರುವವನಾಗಿ ಎಲ್ಲರ ಅಂತರ್ಯಾಮಿಯಾ ಆಗಿದ್ದು ಸರ್ವಶಕ್ತನೂ ಆಗಿರುವನೋ, ಅಂತಹ ಪರಮಾತ್ಮನ ಸಂಗ್ರಾಮದಲ್ಲಿ ನಾವು ಪ್ರಾರ್ಥನೆ ಮಾಡಿಕೊಳ್ಳಬೇಕು. ಆ ಪರಮಾತ್ಮನನ್ನು ಜಯಿಸಲು ನಾನು ಪ್ರಯತ್ನಿಸುವೆನು. ಯಾರು ಧರ್ಮಮಾರ್ಗದಿಂದ ಸಂಸಾರ ಸಂಗ್ರಾಮವನ್ನು ಜಯಿಸುವರೋ ಅವರಿಗೆ ಪರಮಾತ್ಮನ ಸಹಾಯವಿದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಹಂ ತಾ ವಿಶ್ವಾ ಚಕರಂ ನಕಿರ್ಮಾ ದೈವ್ಯಂ ಸಹೋ ವರತೇ ಅಪ್ರತೀತಮ್ ।**

**ಯನ್ಮಾ ಸೋಮಾಸೋ ಮಮದನ್ಯದುಕ್ಥೋ-ಭೇ ಭಯೇತೇ ರಜಸೀ ಅಪಾರೇ ॥೬॥**

(ಮಂಡಲ ೪, ಸೂಕ್ತ ೪೨, ಮಂತ್ರ ೬)

**ಪದಾರ್ಥ:-** **[ಅಹಂ]** ನಾನು ಅಂದರೆ ಪರಮಾತ್ಮನು **[ತಾ]** ಆ **[ವಿಶ್ವಾ]** ಎಲ್ಲಾ ಕಾರ್ಯವನ್ನು **[ಅಚಕ್ರಂ]** ಮಾಡಿರುವೆನು ಮತ್ತು ನಿರಂತರ ಮಾಡುತ್ತಲಿರುವೆನು. **[ಯತ್]** ಯಾವ **[ದೈವ್ಯಂ]** ವಿದ್ವಾವಂತರಿಗೆ ಪ್ರಿಯವಾದ **[ಮಾ]** ನನಗೆ **[ಅಪ್ರತೀತಂ]** ತಿಳಿಯದೇ ಇರುವ **[ಸಹಃ]** ಬಲವನ್ನು **[ವರತೇ]** ವರಿಸುವನೋ **[ಯತ್]** ಯಾವನು **[ಮಾ]** ನನ್ನನ್ನು ಸೇವಿಸುವನೋ **[ಸೋಮಾಸಃ]** ಅಂತಹ ಐಶ್ವರ್ಯವಂತನು **[ಮಮದನ್]** ಪ್ರಸನ್ನಚಿತ್ತನಾಗಿ **[ಉಕ್ಥಾ]** ನನ್ನಿಂದ ಪ್ರಶಂಸೆಗೆ ಯೋಗ್ಯನಾಗಿ **[ಉಭೇ]** ಜೀವಾತ್ಮ-ಪರಮಾತ್ಮರಿಬ್ಬರೂ **[ಅಪಾರೇ]** ಮಿತಿಯೇ ಇಲ್ಲದ **[ರಜಸೀ]** ಸೂರ್ಯಲೋಕ ಭೂಮಿ ಲೋಕಗಳೆರಡನ್ನು **[ಭಯತೇ]** ನಡುಗಿಸುವರು. **[ನಕಿಃ]** ನನಗೆ ಸದೃಶರೂ ಬೇರೆ ಯಾರೂ ಇರುವುದಿಲ್ಲ.

**ಭಾವಾರ್ಥ:-** ಮನುಷ್ಯರೇ! ಪ್ರತ್ಯಕ್ಷಾಪ್ರತ್ಯಕ್ಷ ಈ ಎರಡೂ ಪದಾರ್ಥಗಳು ನನ್ನಿಂದಲೇ ಸೃಷ್ಟಿಯಾಗಿವೆ. ಯಾರು ನನ್ನ ಅನಂತಬಲವನ್ನು ಪಡೆದು ನನ್ನಲ್ಲೇ ಸೇರುವರೋ ಅವರು ಸಂಪೂರ್ಣ ಆನಂದಿತರಾಗುವರು. ನನ್ನ ಭಯದಿಂದಲೇ ಎಲ್ಲರೂ ಸಹಚಾರೀ ಜೀವಗಳೂ ಭಯಭೀತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿದುಷ್ಟೇ ವಿಶ್ವಾ ಭುವನಾನಿ ತಸ್ಯ ತಾ ಪ್ರ ಬ್ರವೀಷಿ ವರುಣಾಯ ವೇಧಃ ।**
**ತ್ವಂ ವೃತ್ರಾಣಿ ಶೃಣ್ವಿಷೇ ಜಘನ್ವಾನ್ ತ್ವಂ ವೃತಾಁ ಅರಿಣಾ ಇಂದ್ರ ಸಿಂಧೂನ್ ॥೭॥**

**ಪದಾರ್ಥ:-** **[ವೇಧಃ]** ಅತಿಶಯ ವಿದ್ಯಾವಂತ **[ಇಂದ್ರಃ]** ಜಗದೀಶ್ವರನು **[ತ್ವಂ]** ನೀನು **[ವರುಣಾಯ]** ಶ್ರೇಷ್ಠ ಜನರಿಗಾಗಿ **[ಪ್ರ ಬ್ರವೀಷಿ]** ವೇದ ರೂಪಜ್ಞಾನ ರಾಶಿಯನ್ನು ಉಪದೇಶಿಸಿರುವೆ. **[ತಸ್ಯ]** ಅಂತಹ **[ತೇ]** ನಿನ್ನ **[ತಾಃ]** ಆ **[ವಿಶ್ವಾ]** ಸಂಪೂರ್ಣ **[ಭುವನಾನಿ]** ಲೋಕಗಳನ್ನು **[ವಿದುಃ]** ಅಂತಹ ವಿದ್ವಾಂಸರು ತಿಳಿಯುವರು. **[ತ್ವಂ]** ನೀನು **[ವೃತ್ರಾಣಿ]** ಸಂಪತ್ತನ್ನು **[ಶೃಣ್ವಿಷೇ]** ಶ್ರವಣಮಾಡಿಸುವೆ. **[ಸಿಂಧೂನ್]** ಸಮುದ್ರ ನದಿಗಳನ್ನು **[ವೃತಾನ್]** ಪಡೆದವರಿಗೆ **[ಅರಿಣಾಃ]** ಪ್ರಾಪ್ತನಾಗುವೆ. ಅನ್ಯರಿಗೆ **[ಜಘನ್ವಾನ್]** ವಿನಾಶಕಾರಿಯೂ ಆಗಿರುವೆ.

**ಭಾವಾರ್ಥ:-** ಪರಮಾತ್ಮನೇ! ನೀನು ನಮ್ಮ ಮೇಲೆ ಅನುಗ್ರಹ ಮಾಡಿ ಯಾವ ಕಾರಣದಿಂದ ಸಮಗ್ರ ವೇದಜ್ಞಾನವನ್ನು ಉಪದೇಶಿಸಿರುವೆಯೋ, ಯಾವುದರಿಂದ ನಾವೆಲ್ಲರೂ ದೋಹನ ಮಾಡಿ ಮಳೆಗರೆಯುವುದರ ಮೂಲಕ ರಕ್ಷಿಸಲ್ಪಟ್ಟಿರುವೆಯೋ, ಅಂತಹ ನಿನ್ನನ್ನೇ ನಿರಂತರ ಉಪಾಸನೆ ಮಾಡುತ್ತೇವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾಕಮತ್ರ ಪಿತರಸ್ತ ಆಸನ್ ತ್ಸಪ್ತ ಋಷಯೋ ದೌರ್ಗಹೇ ಬಧ್ಯಮಾನೇ ।**
**ತ ಆಯಜಂತ ತ್ರಸದಸ್ಯುಮಸ್ಯಾ ಇಂದ್ರಂ ನ ವೃತ್ರತುರಮರ್ಧದೇವಮ್ ॥೮॥**

**ಪದಾರ್ಥ:-** **[ಅತ್ರ]** ಈ ಜಗತ್ತಿನಲ್ಲಿ **[ಅಸ್ಮಾಕಂ]** ನಮ್ಮ **[ಸಪ್ತ]** ಆರು ಋತುಗಳೂ ಮತ್ತು ವಾಯು ಹೀಗೆ ಏಳು **[ಋಷಯಃ]** ಋಷಿಗಳು **[ಪಿತರಃ]** ಪಾಲಕರು **[ಆಸನ್]** ಆಗಿರುವರು. **[ತೇ]** ಅವರು **[ದೌರ್ಗಹೇ]** ಅತ್ಯಂತ ಗಹನವಾದ **[ಬಧ್ಯಮಾನೇ]** ಬಾಧಿಸುವುದರಲ್ಲಿ **[ವೃತ್ರತುರಂ]** ಮೇಘವನ್ನು ತ್ವರೆಗೊಳಿಸುವವರು. **[ಅರ್ಧದೇವಂ]** ಪರಮಾತ್ಮನ ಅರ್ಧಭಾಗವಾದ ಜಗತ್ತಿನ **[ಇಂದ್ರಂ]** **[ನ]** ಸೂರ್ಯನಿಗೆ ಸದೃಶವಾಗಿ **[ಅಸ್ಯಾಃ]** ಈ ಸೃಷ್ಟಿಯಲ್ಲಿ

[ತ್ರಸದಸ್ಯುಂ] ತೊಂದರೆ ಕೊಡುವವರನ್ನು ಅಂದರೆ ಯಾರಿಂದ ಭಯಭೀತರಾಗುತ್ತೇವೆಯೋ ಅಂತಹವರನ್ನು [ಆ, ಅಯಜಂತ] ಸೇರಿಕೊಳ್ಳುವರು. [ತೇ] ಅವರು ನಮಗೆ ಸುಖಕಾರಕರಾಗಲಿ.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಎಲ್ಲರ ರಕ್ಷಣೆಗಾಗಿ ಋತುಮಾನಾದಿಯಾಗಿ ಎಲ್ಲಾ ಪದಾರ್ಥಗಳನ್ನು ಸೃಷ್ಟಿಸಿರುವನು. ಅವನನ್ನು ಉಪಾಸನೇ ಮಾಡಿ ಅಸಾಧ್ಯವಾದ ದುಃಖವನ್ನು ಜಯಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುರುಕುತ್ಸಾನೀ ಹಿ ವಾಮದಾಶ-ದ್ಧವ್ಯೇಭಿರಿಂದ್ರಾವರುಣಾ ನಮೋಭಿಃ ।**
**ಅಥಾ ರಾಜಾನಂ ತ್ರಸದಸ್ಯುಮಸ್ಯಾ ವೃತ್ರಹಣಂ ದದಥುರರ್ಧದೇವಮ್ ॥೯॥**

**ಪದಾರ್ಥ:-** [ಇಂದ್ರಾವರುಣಾ] ವಾಯು-ವಿದ್ಯುತ್‌ನಂತಿರುವ [ಪುರುಕುತ್ಸಾನಿ] ಬಹುನಿಂದಿತ ಕರ್ಮಗಳು [ಹವ್ಯೇಭಿಃ] ಗ್ರಹಣಯೋಗ್ಯ [ನಮೇಭಿಃ] ಅನ್ನಾದಿಗಳಿಂದ [ಅದಾಶತ್] ವೃಷ್ಟಿಯು ಕೊಡುತ್ತದೆ. [ಅಥಾ] ಆಮೇಲೆ [ಅಸ್ಯಾಃ] ಈ ಭೂಮಿಯ [ವೃತ್ರಹಣಂ] ಮೇಘನಾಶಕನನ್ನು [ಅರ್ಧದೇವಂ] ಜಗತ್ತಿನ ಅರ್ಧಭಾಗವಾದ ಸೂರ್ಯನಿಗೆ ಸದೃಶ [ತ್ರಸದಸ್ಯುಂ] ಭಯೋತ್ಪಾದಕನನ್ನು [ರಾಜಾನಂ] ಅವನನ್ನು ತಡೆಯುವ ರಾಜನನ್ನೂ [ವಾಂ] ನಿಮ್ಮಿಬ್ಬರಿಗೂ [ದಧಥುಃ] ಧಾರಣ ಮಾಡಿಸಿರುವನು. [ಹಿ] ಅದನ್ನು ನೀವು ತಿಳಿಯಿರಿ.

**ಭಾವಾರ್ಥ:-** ಮನುಷ್ಯರೇ! ಯಾವನ ಅನುಗ್ರಹದಿಂದ ಭೂಮಿಯು ಆಹಾರವತಿಯಾಗಿರುವಳೋ ಸೂರ್ಯನು ಪ್ರಕಟನಾಗಿರುವನೋ ಅಂತಹ ಜಗದೀಶ್ವರನ ಉಪಾಸನೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಾಯಾ ವಯಂ ಸಸವಾಂಸೋ ಮದೇಮ ಹವ್ಯೇನ ದೇವಾ ಯವಸೇನ ಗಾವಃ ।**
**ತಾಂ ಧೇನುಮಿಂದ್ರಾವರುಣಾ ಯುವಂ ನೋ ವಿಶ್ವಾಹಾ ಧತ್ತಮನಪಸ್ಫುರಂತೀಮ್ ॥೧೦॥**

**ಪದಾರ್ಥ:-** [ಹವ್ಯೇನ] ಹವನ ಯೋಗ್ಯ ಪದಾರ್ಥಗಳಿಂದ [ದೇವಾಃ] ವಿದ್ವಾಂಸರು [ಯವಸೇನ] ಧಾನ್ಯಗಳಿಂದ [ಗಾವಃ] ಹಸುಗಳು/ಪ್ರಾಣಿಗಳು [ರಾಯಾ] ಧನದಿಂದ [ವಯಂ] ನಾವೂ [ಸಸವಾಂಸಃ] ನಿದ್ರಿಸುವವರಂತೆ [ಮದೇಮ] ಆನಂದಿಸುವೆವು [ಇಂದ್ರಾವರುಣಾ] ಅಧ್ಯಾಪಕೋಪದೇಶಕರಿಬ್ಬರು [ಯುವಂ] ನೀವು [ವಿಶ್ವಾಹಾ] ಯಾವಾಗಲು [ಅನಪಸ್ಫುರಂತೀಂ] ನಿಶ್ಚಯಬುದ್ಧಿಯನ್ನುತ್ಪಾದಿಸುವ [ತಾಂ, ಧೇನುಂ] ಸಮಗ್ರ ಮನೋರಥವನ್ನು ಪೂರ್ಣಗೊಳಿಸುವ ಆ ವಾಣಿಯನ್ನು/ವಿದ್ಯೆಯನ್ನು [ನಃ] ನಮಗೆ [ಧತ್ತ] ಧಾರಣ ಮಾಡಿಸಿರಿ.

**ಭಾವಾರ್ಥ:-** ವಿದ್ಯಾವಂತರೇ! ನಮಗೆ ನೀವು ಸಮಗ್ರ ಪದಾರ್ಥ ವಿಜ್ಞಾನವನ್ನು ಬೋಧಿಸಿರಿ ಅದರಿಂದ ನಾವು ಸದಾ ಆನಂದಿತರಾಗಬಹುದು.

ಈ ಸೂಕ್ತದಲ್ಲಿ ರಾಜ ಮತ್ತು ಪರಮಾತ್ಮನ ಈಶ್ವರೋಪಾಸನೆಯ ವಿಚಾರವನ್ನು ಹೇಳಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ . ಸಂಗತವಾಗಿರುತ್ತದೆ.

**ನಲವತ್ತೆರಡನೆಯ ಸೂಕ್ತ ಸಮಾಪ್ತ**

## ಸೂಕ್ತ ೪೩

ಮಂತ್ರಸಂಖ್ಯೆ ೭ । ಪುರುಮೀಳ್ಹಾಜಮೀಳ್ಹೌ ಸೌಹೋತ್ರೌ ಋಷಿಃ । ಅಶ್ವಿನೌ ದೇವತೇ । ೧ ನಿಚೃತ್ತ್ರಿಷ್ಟುಪ್, ೨, ೩, ೫-೭ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪ ಸ್ವರಾಟ್ಪಂಕ್ತಿ ಛಂದಃ । ಪಂಚಮಃ ಸ್ವರಃ.

ಇಲ್ಲಿ ಅಧ್ಯಾಪಕ-ಬೋಧಕರ ವಿಷಯವನ್ನು ಹೇಳಲಾಗಿದೆ.

**ಕ ಉ ಶ್ರವತ್ ಕತಮೋ ಯಜ್ಞಿಯಾನಾಂ ವಂದಾರು ದೇವಃ ಕತಮೋ ಜುಷಾತೇ ।**
**ಕಸ್ಯೇಮಾಂ ದೇವೀಮಮೃತೇಷು ಪ್ರೇಷ್ಠಾಂ ಹೃದಿ ಶ್ರೇಷಾಮ ಸುಷ್ಟುತಿಂ ಸುಹವ್ಯಾಮ್ ॥೧॥**

**ಪದಾರ್ಥ:-** **[ಕಃ]** ಯಾವನು **[ಉ]** ಮತ್ತು **[ಕತಮಃ]** ಎಷ್ಟನೆಯವನು **[ದೇವಃ]** ವಿದ್ಯಾವಂತನು? **[ಯಜ್ಞಿಯಾನಾಂ]** ಯಜ್ಞಸಾಧಕರ **[ವಂದಾರು]** ವಂದಿಸುವ ಸ್ವಭಾವದವನನ್ನು **[ಶ್ರವತ್]** ಕೇಳಿಸಿಕೊಳ್ಳುವನು. **[ಕತಮಃ]** ಎಷ್ಟನೆಯವನು **[ಜುಷಾತೇ]** ಸೇವಿಸುವನು. **[ಕಸ್ಯ]** ಯಾವನ **[ಹೃದಿ]** ಹೃದಯದಲ್ಲಿ **[ಇಮಾಂ]** ಈ **[ಪ್ರೇಷ್ಠಾಂ]** ಪ್ರಿಯತರವಾದ **[ಸುಷ್ಟುತಿಂ]** ಉತ್ತಮ ಪ್ರಶಂಸಾಯುಕ್ತ **[ಸುಹವ್ಯಾಂ]** ಗ್ರಹಣ ಯೋಗ್ಯ **[ಅಮೃತೇಷು]** ಮರಣರಹಿತರಲ್ಲಿ **[ದೇವೀಂ]** ಪ್ರಕಾಶಮಾನ ವಿದ್ಯೆಯನ್ನು **[ಶ್ರೇಷಾಮ]** ಕೇಳಿಸಿಕೊಳ್ಳುವೆವು?

**ಭಾವಾರ್ಥ:-** ವಿದ್ವಾಂಸರೇ! ಈ ಜಗತ್ತಿನಲ್ಲಿ ಯಾರು ಯಾಜ್ಞಿಕರು? ಯಾವುದು ಯಜ್ಞ? ಯಾವನು ವಿದ್ವಾಂಸನು? ಯಾವಳು ವಿದ್ಯಾವತೀ? ಯಾವುದು ಅಮೃತ? ಯಾವನು ಸೇವನೆಗೆ ಮತ್ತು ಕೇಳಿಸಿಕೊಳ್ಳಲು ಯೋಗ್ಯನು? ಈ ರೀತಿ ಈ ಮಂತ್ರದಲ್ಲಿ ಪ್ರಶ್ನೆಗಳಿವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೋ ಮೃಳಾತಿ ಕತಮ ಆಗಮಿಷ್ಠೋ ದೇವಾನಾಮು ಕತಮಃ ಶಂಭವಿಷ್ಠಃ ।**
**ರಥಂ ಕಮಾಹುರ್ದ್ರವದಶ್ವಮಾಶುಂ ಯಂ ಸೂರ್ಯಸ್ಯ ದುಹಿತಾವೃಣೀತ ॥೨॥**

**ಪದಾರ್ಥ:-** **[ಕಃ]** ಯಾವನು **[ದೇವಾನಾಂ]** ಪೃಥಿವ್ಯಾದಿಗಳಲ್ಲಿ **[ಮೃಳಾತಿ]** ಸುಖದಾಯಕನು? **[ಕತಮಃ]** ಎಷ್ಟನೆಯವನು **[ಆಗಮಿಷ್ಠಃ]** ಆಗಮಿಸುವವನು? **[ಉ]** ಮತ್ತು **[ಕತಮಃ]** ಎಷ್ಟನೆಯವನು **[ಶಂಭವಿಷ್ಠಃ]** ಕಲ್ಯಾಣಕಾರಕನು? **[ಕಂ]** ಯಾರನ್ನು **[ದ್ರವದಶ್ವಂ]** ವೇಗಗತಿಯ ಅಶ್ವವನ್ನು ಪಡೆದು **[ಆಶುಂ]** ಶೀಘ್ರಗಾಮಿ **[ರಥಂ]** ಆ ವಾಹನವಂತನೆಂದು **[ಆಹುಃ]** ಹೇಳುವರು. **[ಯಂ]** ಯಾರನ್ನು **[ಸೂರ್ಯಸ್ಯ]** ಸೂರ್ಯನ **[ದುಹಿತಾ]** ಮಗಳಂತೆ **[ಅವೃಣೀತ]** ಸ್ವೀಕರಿಸುವರು.

**ಭಾವಾರ್ಥ:-** ವಿದ್ಯಾವಂತರೇ! ನಾವು ನಿರಂತರ ಸುಖಕಾರಕ ಪದಾರ್ಥಗಳನ್ನು ಜಲವಿದ್ಯುತ್, ಅಗ್ನಿವಿದ್ಯುತ್ ಬಳಸಲಾದ ವಾಹನಗಳನ್ನೂ ತಿಳಿದಿರುವೆವು. ತದ್ವಿಷಯಕ ಜ್ಞಾನವೇ ಹಿಂದಿನ ಮತ್ತು ಈ ಮಂತ್ರದಲ್ಲಿ ಕೇಳಲಾದ ಪ್ರಶ್ನೆಗಳಿಗೆ ಉತ್ತರವಾಗಿದೆ. ಯಾವನು ಅಧ್ಯಾಪಕನಿಂದ ವಿದ್ಯೆ ಪಡೆಯುವನು, ವಾಯುವಿನಂತೆ ವಿದ್ಯೆಯನ್ನು ಸೇವಿಸುವವನು, ಪತಿವ್ರತೆ ಸ್ತ್ರೀಯು ಪತಿಯನ್ನು ವರಿಸುವಳು, ಯಾವನು ಪರೋಪಕಾರಿಯೋ, ವಿದ್ಯುದತಿಶಯೇನ ಆಗಮಿಸುವವಳು, ಪರಮೇಶ್ವರನೇ ಅತಿಶಯ ಕಲ್ಯಾಣಕಾರಕನು, ಜಲಶಕ್ತಿ ಮುಂತಾದ ಇಂಧನದಿಂದ ಚಾಲನೆಯಾಗುವ ವಿಮಾನಾದಿಯಾನಗಳು ಪ್ರಶಂಸನೀಯವಾಗುತ್ತವೆ ಎಂಬುದನ್ನು ಇಲ್ಲಿ ಉತ್ತರವಾಗಿ ಹೇಳಲಾಗಿದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಕ್ಷೂ ಹಿ ಷ್ಮಾ ಗಚ್ಛಥ ಈವತೋ ದ್ಯೂನಿಂದ್ರೋ ನ ಶಕ್ತಿಂ ಪರಿತಕ್ಮ್ಯಾಯಾಮ್ ।**
**ದಿವ ಆಜಾತಾ ದಿವ್ಯಾ ಸುಪರ್ಣಾ ಕಯಾ ಶಚೀನಾಂ ಭವಥಃ ಶಚಿಷ್ಠಾ ॥೩॥**

**ಪದಾರ್ಥ:-** **[ದಿವ್ಯಾ]** ಶುದ್ಧವ್ಯವಹಾರದಲ್ಲಿ ಉತ್ಪನ್ನವಾದ **[ಸುಪರ್ಣಾಃ]** ಉತ್ತಮ ಪರಿಪಾಲಕ **[ದಿವಃ]** ವಿದ್ಯಾಪ್ರಕಾಶಕ **[ಆಜಾತಾ]** ಸರ್ವಥಾ ಉತ್ಪನ್ನರಾದ **[ಶಚಿಷ್ಠಾ]** ಅತಿಶಯ ಬುದ್ಧಿವಂತರು **[ಇಂದ್ರಃ]** ಮಿಂಚು **[ಈವತಃ]** ಸರ್ವತ್ರಗತಿಮತ್ **[ದ್ಯೂತ್]** ಬೆಳಕನ್ನು **[ನ]** ಪ್ರಸರಿಸುವರೀತಿಯಲ್ಲಿ **[ಪರಿತಕ್ಮ್ಯಾಯಾಂ]** ವ್ಯಂಗ್ಯ ಮಾಡುವವರಿರುವಂತಹ ಸೃಷ್ಟಿಯಲ್ಲಿ **[ಶಕ್ತಿಂ]** ಸಾಮರ್ಥ್ಯವನ್ನು **[ಗಚ್ಛಥಃ]** **[ಹಿ]** ನಿಶ್ಚಿತವಾಗಿಯೂ ಪಡೆದುಕೊಳ್ಳುವಿರಿ. **[ಕಯಾ, ಸ್ಮಾ]** ಯಾವಳಿಂದಲೋ **[ಶಚೀನಾಂ]** ಬುದ್ಧಿ ಅಥವಾ ವಾಣಿಯರಿಂದ **[ಮಕ್ಷು]** ಶೀಘ್ರವಾಗಿ **[ಭವಥಃ]** ಸೇವಿಸುವವರಾಗುತ್ತೀರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಮಿಂಚಿನಂತಹ ಸಾಮರ್ಥ್ಯ ಪಡೆದಿರುವರೋ ಅವರು ಬುದ್ಧಿವಂತರಾಗಿ ಈ ಜಗತ್ತಿನಲ್ಲಿ ಅತಿಶಯ ಸಂಪತ್ತನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಾ ವಾಂ ಭೂದುಪಮಾತಿಃ ಕಯಾ ನ ಆಶ್ವಿನಾ ಗಮಥೋ ಹೂಯಮಾನಾ ।**
**ಕೋ ವಾಂ ಮಹಶ್ಚಿತ್ತ್ಯಜಸೋ ಅಭೀಕ ಉರುಷ್ಯತಂ ಮಾಧ್ವೀ ದಸ್ರಾ ನ ಊತೀ ॥೪॥**

**ಪದಾರ್ಥ:-** **[ಹೂಯಮಾನಾ]** ಆ ಮಂತ್ರಣ ಪಡೆದವರು. **[ಮಾಧ್ವೀ]** ಮದುರಾದಿ ಗುಣಸಂಪನ್ನರು **[ದಸ್ರಾ]** ದುಃಖನಾಶಕರು. **[ಅಶ್ವಿನಾ]** ವಿದ್ಯಾವಂತ ಅಧ್ಯಾಪಕೋಪದೇಶಕರಾದ **[ವಾಂ]** ನಿಮ್ಮಿಬ್ಬರನ್ನು **[ಕಾ]** ಯಾವಳು **[ಉಪಮಾತಿಃ]** ಉಪಮಾನಳು **[ಭೂತಃ]** ಆಗುವಳು. **[ಕಃ]** ಯಾವನು **[ವಾಂ]** ನಿಮ್ಮಿಬ್ಬರನ್ನು **[ಅಭೀಕೇ]** ಸಮೀಪದಲ್ಲಿ **[ಮಹಃ]** **[ಚಿತ್]** ಮಹತ್ತರ **[ತ್ಯಜಸಃ]** ತ್ಯಾಜ್ಯ ವ್ಯವಹಾರವು? **[ಕಯಾ]** ಯಾವ ರೀತಿಯಿಂದ **[ನಃ]** ನಮ್ಮನ್ನು **[ಆಗಮಥಃ]** ಸಮೀಪಿಸುವಿರಿ? **[ಊತೀ]** ರಕ್ಷಣಾದಿಗಳಿಂದ **[ನಃ]** ನಮ್ಮ **[ಉರುಷ್ಯತಂ]** ಸೇವೆಗೈಯ್ಯುತ್ತೀರಿ?

**ಭಾವಾರ್ಥ:-** ಅಧ್ಯಾಪಕೋಪದೇಶಕರೇ! ನೀವಿಬ್ಬರು ನಮ್ಮೆಲ್ಲರನ್ನೂ ಶ್ರೇಷ್ಠ ವಿದ್ಯಾವಂತರನ್ನಾಗಿ ಮಾಡಿರಿ ಮತ್ತು ನಮ್ಮ ದುಃಖಗಳನ್ನು ದೂರ ಮಾಡಿರಿ ಅಂದರೇ ನೀವು ಶ್ರೇಷ್ಠ ಉಪಮಾನವಾಗುವಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉರು ವಾಂ ರಥಃ ಪರಿ ನಕ್ಷತಿ ದ್ಯಾಮಾ ಯತ್ ಸಮುದ್ರಾದಭಿ ವರ್ತತೇ ವಾಮ್ ।**
**ಮಧ್ವಾ ಮಾಧ್ವೀ ಮಧು ವಾಂ ಪ್ರುಷಾಯನ್ ಯತ್ಸೀಂ ವಾಂ ಪೃಕ್ಷೋ ಭುರಜಂತ ಪಕ್ವಾಃ ॥೫॥**

**ಪದಾರ್ಥ:-** **[ವಾಂ]** ನಿಮ್ಮಿಬ್ಬರ **[ರಥಃ]** ವಾಹನವು **[ದ್ಯಾಂ]** ಆಕಾಶವನ್ನು **[ಊರು]** ಅತಿಶಯ **[ಪರಿ, ನಕ್ಷತಿ]** ಸುತ್ತುವರಿದು ವ್ಯಾಪ್ತವಾಗುತ್ತದೆ? **[ಯತ್]** ಯಾವ **[ವಾಂ]** ನಿಮ್ಮಿಬ್ಬರನ್ನು **[ಸುಮುದ್ರಾತ್]** ಅಂತರಿಕ್ಷ ಅಥವಾ ಜಲಾಶಯದಿಂದ **[ಅಭಿಸ ಆ, ವರ್ತತೇ]** ಅಭಿಮುಖವಾಗಿ ಬರುತ್ತದೆ? **[ವಾಂ]** ನಿಮ್ಮಿಬ್ಬರನ್ನು

[ಮಾಧ್ವೀ] ಮಧುರ ನೀತಿಯಿಂದ [ಮಧ್ವಾ] ಮಧುರ ಗುಣದಿಂದ [ಮಧು] ಮಧುರ ಕರ್ಮದಿಂದ [ಸೀಂ] ಎಲ್ಲ ಕಡೆಗಳಿಂದಲೂ [ಭುರಜಂತ] ಪ್ರಾಪ್ತವಾಗುತ್ತದೆ? [ಯತ್] ಯಾವ [ಪೃಕ್ಷಃ] ಸಂಬಂಧಿಕರು [ಪಕ್ವಾಃ] ಪರಿಪೂರ್ಣಜ್ಞಾನವಂತರು [ವಾಂ] ನಿಮ್ಮಿಬ್ಬರನ್ನು [ಪೃಷಾಯನ್] ಸಮೀಪಿಸುವರು?

**ಭಾವಾರ್ಥ:-** ಮನುಷ್ಯರೇ! ಯಾರು ನಿಮ್ಮನ್ನು ವಿದ್ಯಾವಂತರನ್ನಾಗಿ ಮಾಡುವರೋ ಅವರ ಸೇವೆಯನ್ನು ನೀವು ನಿರಂತರ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಿಂಧುರ್ಹ ವಾಂ ರಸಯಾ ಸಿಂಚದಶ್ವಾನ್ ಘೃಣಾ ವಯೋಽರುಷಾಸಃ ಪರಿ ಗ್ಮನ್ ।**
**ತದೂಷು ವಾಮಜಿರಂ ಚೇತಿ ಯಾನಂ ಯೇನ ಪತೀ ಭವಥಃ ಸೂರ್ಯಾಯಾಃ ॥೬॥**

**ಪದಾರ್ಥ:-** [ಸಿಂಧುಃ] ನದೀ ಅಥವಾ ಸಮುದ್ರವು [ರಸಯಾ] ರಸಾದಿಗಳಿಂದ [ಉ] ಹಾಗೂ [ವಾಂ] ನಿಮ್ಮಿಬ್ಬರನ್ನು [ಸಿಂಚತ್] ಸೇಚನ ಮಾಡುತ್ತದೆ. [ವಯಃ] ವ್ಯಾಪಕನು [ಘೃಣಾ] ಬೆಳಗುತ್ತಿರುವ [ಅರುಷಾಸಃ] ಕೆಂಪುಬಣ್ಣದ ಪದಾರ್ಥವು [ಅಶ್ವಾನ್] ಶೀಘ್ರಗತಿಯ ಅಗ್ನ್ಯಾದಿಗಳನ್ನು [ಅಜರಂ] ಪಡೆಯಲರ್ಹವಾದುದನ್ನು [ಸು, ಚೇತಿ] ಚೆನ್ನಾಗಿ ತಿಳಿದುಕೊಳ್ಳುವನು [ಯಾನಂ] ವಾಹನವನ್ನು ಪಡೆದು [ಸೂರ್ಯ್ಯಾಯಾಃ] ಸೂರ್ಯಕಾಂತಿಯುಕ್ತ ಪ್ರಾತಃಕಾಲದ [ಪತೀ] ಪಾಲಕನು [ಭವಥಃ] ಆಗುವಿರಿ. [ಹ] ತಿಳಿಯಿರಿ.

**ಭಾವಾರ್ಥ:-** ಆಚಾರ್ಯೋಪದೇಶಕರೇ! ಹೇಗೆ ಉತ್ತಮ ಜಲಾದಿಗಳ ಸೇಚನೆಯಿಂದ ವೃಕ್ಷಗಳು ಹಾಗೂ ಬೆಳೆಗಳು ಚೆನ್ನಾಗಿ ಬೆಳೆದು ಫಲಕೊಡುತ್ತವೆಯೋ, ಅದೇ ರೀತಿ ನೀವು ಸಹ ವಿದ್ಯಾರ್ಥಿಗಳಿಗೆ ಉತ್ತಮ ವಿದ್ಯಾಸೇಚನ ಮಾಡಿರಿ. ಅವರೂ ಚೆನ್ನಾಗಿ ಬೆಳೆದು ಸುಖಫಲವನ್ನು ಪಡೆಯುವಂತಾಗಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಹೇಹ ಯದ್ವಾಂ ಸಮನಾ ಪಪೃಕ್ಷೇ ಸೇಯಮಸ್ಮೇ ಸುಮತಿರ್ವಾಜರತ್ನಾ ।**
**ಉರುಷ್ಯತಂ ಜರಿತಾರಂ ಯುವಂ ಹ ಶ್ರಿತಃ ಕಾಮೋ ನಾಸತ್ಯಾ ಯುವದ್ರಿಕ್ ॥೭॥**

**ಪದಾರ್ಥ:-** [ವಾಜರತ್ನಾ] ಬೋಧನಧನರೇ! [ನಾಸತ್ಯಾ] ಅಸತ್ಯಾಚರಣ ರಹಿತರಾದ [ಸಮನಾ] ಸಮಾನ ಮನಸ್ಕರಾದ [ಯತ್] ಯಾವ [ಸುಮತಿಃ] ಉತ್ತಮ ಬುದ್ಧಿಯ [ವಾಂ] ನಿಮ್ಮಿಬ್ಬರನ್ನು [ಪಪೃಕ್ಷೇ] ಸಂಬಂಧಿತವಾಗುತ್ತದೆಯೋ [ಸಾ, ಇಯಂ] ಅಂತಹ ಇವಳು [ಇಹೇಹ] ಈ ಜಗತ್ತಿನಲ್ಲಿ [ಅಸ್ಮೇ] ನಮಗೆ ಸೇವೆ ಮಾಡಲಿ. [ಯುವಂ] ನೀವಿಬ್ಬರು [ಹ] ನಿಶ್ಚಯವಾಗಿ [ಜರಿತಾರಂ] ಸ್ತಾವಕನನ್ನು [ಉರುಷ್ಯತಂ] ಸೇವೆ ಮಾಡಿರಿ. [ಯುವದ್ರಿಕ್] ನಿಮ್ಮಲ್ಲಿ ನೆಲೆಸಿರುವ [ಶ್ರಿಯಃ] ಶ್ರೀಯು [ಕಾಮಃ] ಇಚ್ಛೆಯನ್ನು ಸೇವಿಸಲಿ.

**ಭಾವಾರ್ಥ:-** ಆಚಾರ್ಯೋಪದೇಶಕರೇ! ಈ ಜಗತ್ತಿನಲ್ಲಿ ಯಾವ ವಿದ್ಯೆ ಬುದ್ಧಿಯು ನಿಮಗೆ ಲಭಿಸಿದೆಯೋ ಅದನ್ನು ಎಲ್ಲರಿಗೂ ಕೊಡಿರಿ. ಹೇಗೆ ನೀವು ನಿಮ್ಮ ಹಿತವನ್ನು ಬಯಸುವಿರೋ ಅದೇ ರೀತಿ ಎಲ್ಲರ ಹಿತವನ್ನು ಬಯಸಿರಿ.

ಈ ಸೂಕ್ತದಲ್ಲಿ ಉಪಾಧ್ಯಾಯ ಬೋಧಕರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೪೪

ಮಂತ್ರಸಂಖ್ಯೆ ೭ । ಪುರುಮೀಢಾಜಮೀಢಾ ಸೌಹೋತ್ರಾವೃಷೀ । ಅಶ್ವಿನೌ ದೇವತೇ । ೧, ೩, ೬, ೭ ನಿಚೃತ್ತ್ರಿಷ್ಟುಪ್, ೨ ತ್ರಿಷ್ಟುಪ್, ೫ ವಿರಾಟ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೪ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಶಿಲ್ಪವಿದ್ಯೆಯ ವಿಷಯವನ್ನು ಇಲ್ಲಿ ಹೇಳಿದೆ.

**ತಂ ವಾಂ ರಥಂ ವಯಮದ್ಯಾ ಹುವೇಮ ಪೃಥುಜ್ರಯಮಶ್ವಿನಾ ಸಂಗತಿಂ ಗೋಃ ।**
**ಯಃ ಸೂರ್ಯಾಂ ವಹತಿ ವಂಧುರಾಯು-ರ್ಗಿರ್ವಾಹಸಂ ಪುರುತಮಂ ವಸೂಯುಮ್ ॥೧॥**

**ಪದಾರ್ಥ:-** **[ಅಶ್ವಿನಾ]** ಅಧ್ಯಾಪಕೋಪದೇಶಕರೇ! **[ವಯಂ]** ನಾವು **[ಅದ್ಯಾ]** ಈ ದಿನ **[ವಾಂ]** ನಿಮ್ಮಿಬ್ಬರನ್ನು **[ಪೃಥುಜ್ರಯಂ]** ವಿಸ್ತೀರ್ಣ ಹಾಗೂ ಬಹುವೇಗದ **[ತಂ]** ಆ **[ರಥಂ]** ವಾಹನವನ್ನು **[ಹುವೇಮ]** ಗ್ರಹಣ ಮಾಡುತ್ತೇವೆ. **[ಗೋಃ]** ಪೃಥ್ವಿಯ **[ಸಂಗತಿ]** ಯೋಗವನ್ನು ಮಾಡಿರಿ. **[ಯಃ]** ಯಾವನು **[ಬಂಧುರಾಯುಃ]** ಅಲ್ಪವಯಸ್ಕನು **[ಸೂರ್ಯಾಂ]** ಸೂರ್ಯನ ತೇಜಸ್ಸನ್ನು **[ವಹತಿ]** ಪಡೆಯುವನೋ, **[ಪುರುತಮಂ]** ಬಹುಜನರಿಗೆ ಗ್ಲಾನಿ ಮಾಡಲು **[ನಿರ್ವಾಹಸಂ]** ಮಾತು ನಿರ್ವಹಿಸಲು **[ವಸೂಯುಂ]** ದ್ರವ್ಯ ಬಯಸುವವನು ಗ್ರಹಣಮಾಡಲಿ.

**ಭಾವಾರ್ಥ:-** ಅಗ್ನಿ ಜಲೇಂಧನಗಳಿರುವ ಶಿಲ್ಪವಿದ್ಯೆಯಿಂದ ಸಾಧಿಸಲಾದ ರಥವನ್ನು ಯಾವನು ತಯಾರಿಸುವನೋ, ಅವನು ತನ್ನಂತೆಯೇ ಎಲ್ಲರನ್ನು ಸಂತೋಷಪಡಿಸುತ್ತಾನೆ.

ಅಧ್ಯೋಪಕೋಪದೇಶಕರ ವಿಷಯವನ್ನು ಹೇಳಲಾಗುತ್ತದೆ.

**ಯುವಂ ಶ್ರಿಯಮಶ್ವಿನಾ ದೇವತಾ ತಾಂ ದಿವೋ ನಪಾತಾ ವನಥಃ ಶಚೀಭಿಃ ।**
**ಯುವೋರ್ವಪುರಭಿ ಪೃಕ್ಷಃ ಸಚಂತೇ ವಹಂತಿ ಯತ್ ಕಕುಹಾಸೋ ರಥೇ ವಾಮ್ ॥೨॥**

**ಪದಾರ್ಥ:-** **[ದಿವ್ಯಃ]** ಅನುಭವಿಸಲರ್ಹ ಸುಖದ **[ನಪಾತಾ]** ಪತನರಹಿತ **[ದೇವತಾ]** ದಿವ್ಯ ಗುಣ ಸಂಪನ್ನ **[ಅಶ್ವಿನಾ]** ಅಧ್ಯಾಪಕೋಪದೇಶಕರಾದ **[ಯುವಂ]** ನೀವಿಬ್ಬರು **[ಶಚೀಭಿಃ]** ಬುದ್ಧಿವಂತಿಕೆಯಿಂದ **[ತಾಂ]** ಆ **[ಶ್ರಿಯಂ]** ಸಂಪತ್ತನ್ನು **[ವನಥಃ]** ಪಡೆಯಿರಿ. **[ಯತ್]** ಯಾವುದನ್ನು **[ವಾಂ]** ನೀವಿಬ್ಬರು **[ರಥೇ]** ರಥದಲ್ಲಿ **[ಯುವೋಃ]** ನಿಮ್ಮಿಬ್ಬರ **[ಪೃಕ್ಷಃ]** ಸಂಬಂಧೀ **[ವಪುಃ]** ಶರೀರವನ್ನು **[ಅಭಿ]** ಸಮ್ಮುಖವಾಗಿ **[ಸಚಂತೇ]** ಸಂಬಂಧಗೊಳಿಸುತ್ತ **[ಕಕುಹಾಸಃ]** ಎಲ್ಲಾ ದಿಕ್ಕುಗಳನ್ನೂ **[ವಹಂತಿ]** ತಲುಪುತ್ತದೆ.

**ಭಾವಾರ್ಥ:-** ಯಾವ ವಿದ್ವಾಂಸರು ಬುದ್ಧಿವಂತರಾಗಿ ಅನ್ಯರನ್ನೂ ಬುದ್ಧಿವಂತರನ್ನಾಗಿಸುವರೋ, ಅವರು ತಮ್ಮ ಕೀರ್ತಿಯನ್ನು ಸರ್ವತ್ರ ಪ್ರಸರಿಸಿಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೋ ವಾಮದ್ಯಾ ಕರತೇ ರಾತಹವ್ಯ ಊತಯೇ ವಾ ಸುತಪೇಯಾಯ ವಾರ್ಕೈಃ ।**
**ಋತಸ್ಯ ವಾ ವನುಷೇ ಪೂರ್ವ್ಯಾಯ ನಮೋ ಯೇಮಾನೋ ಅಶ್ವಿನಾ ವವರ್ತತ್ ॥೩॥**

**ಪದಾರ್ಥ:-** **[ಅಶ್ವಿನಾ]** ಆಚಾರ್ಯೋಪದೇಶಕರೇ! **[ಅದ್ಯಾ]** ಈ ದಿನ **[ವಾಂ]** ನಿಮ್ಮಿಬ್ಬರನ್ನು **[ಕಃ]** ಯಾವನು **[ರಾತಹವ್ಯಃ]** ದಾನಯೋಗ್ಯವನ್ನು ದಾನ ಮಾಡುತ್ತ **[ಊತಯೇ]** ರಕ್ಷಣಾದಿಗಳಿಗೆ **[ವಾ]** ಅಥವಾ **[ಸುತಪೇಯಾಯ]** ತಯಾರಿಸಿದ ಪಾನಯೋಗ್ಯರಸಕ್ಕಾಗಿ **[ಕರತೇ]** ಪ್ರಯತ್ನ ಮಾಡುವರೋ **[ವಾ]** ಅಥವಾ **[ಅರ್ಕೈಃ]** ಸತ್ಕರಿಸುವನೋ **[ವಾ]** ಅಥವಾ **[ಋತಸ್ಯ]** ಸತ್ಯಸಂಬಂಧದ **[ಪೂರ್ವ್ಯಾಯ]** ಪ್ರಾಚೀನ ಜನರಲ್ಲಿ ಚತುರನಿಗೆ **[ನಮಃ]** ಅನ್ನದಾನ ಮಾಡುವನೋ **[ಆ, ವವರ್ತತ್]** ಅನುಕೂಲಕರ ವರ್ತಿಸುವನೋ **[ಯೇಮಾನಃ]** ನಿಯಮಪಾಲಿಸುವನು. **[ವನುಷೇ]** ಅವರಿಬ್ಬರಿಂದ ವಿದ್ಯೆಯನ್ನು ಯಾಚಿಸುವನು.

**ಭಾವಾರ್ಥ:-** ಆಚಾರ್ಯೋಪದೇಶಕರೇ! ನೀವಿಬ್ಬರೂ ನಿಮ್ಮನ್ನು ಗೌರವಿಸುವವರಿಗೆ ಉತ್ತಮ ಶಿಕ್ಷಣ ನೀಡಿ ಸಭಾಯೋಗ್ಯರನ್ನಾಗಿ ಮಾಡಿರಿ. ಯಾರು ವಿದ್ಯಾಗ್ರಹಣ ಮಾಡಿರುವರೋ ಅವರನ್ನು ನೀವೂ ಸತ್ಕರಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹಿರಣ್ಯಯೇನ ಪುರುಭೂ ರಥೇನೇ-ಮಂ ಯಜ್ಞಂ ನಾಸತ್ಯೋಪ ಯಾತಮ್ ।**
**ಪಿಬಾಥ ಇನ್ಮಧುನಃ ಸೋಮ್ಯಸ್ಯ ದಧಥೋ ರತ್ನಂ ವಿಧತೇ ಜನಾಯ ॥೪॥**

**ಪದಾರ್ಥ:-** **[ಪುರುಭೂಃ]** ಬಹುಜನರನ್ನು ಬಯಸುವವರು **[ನಾಸತ್ಯಾ]** ಸತ್ಯಾಚರಣೆ ಮಾಡುವವರೂ ಆದ ಅಧ್ಯಾಪಕೋಪದೇಶಕರೇ! ನೀವೂ **[ಹಿರಣ್ಯಯೇನ]** ಹಿರಣ್ಯಾದಿಗಳಿಂದ ಶೋಭಿತ **[ರಥೇನ]** ರಥದಿಂದ **[ಇಮಂ]** ಈ **[ಯಜ್ಞಂ]** ಜ್ಞಾನಯಜ್ಞವನ್ನು **[ಉಪ, ಆಯಾತಂ]** ಸಮೀಪಿಸಿರಿ. **[ಮಧುನಃ]** ಮಧುರಾದಿ ಗುಣಯುಕ್ತ **[ಸೋಮಸ್ಯ]** ಸೋಮರಸದ **[ಪಿಬಾಥಃ]** ಪಾನ ಮಾಡಿರಿ. **[ವಿಧತೇ]** ಪುರುಷಾರ್ಥ ಸಾಧಿಸುತ್ತ **[ಜನಾಯ]** ಮನುಷ್ಯನಿಗೆ **[ರತ್ನಂ]** ಧನವನ್ನು **[ದಧಥಃ]** ಧಾರಣ ಮಾಡಿಸಿರಿ. **[ಇತ್]** ಸುಖಿಗಳನ್ನಾಗಿ ಮಾಡಿರಿ.

**ಭಾವಾರ್ಥ:-** ಯಾರು ಶಿಲ್ಪವಿದ್ಯೆಯ ಪ್ರಚಾರ ಮಾಡುವರೋ ಅವರು ಪ್ರಪಂಚದಲ್ಲಿ ಸುಖಿಗಳಾಗುವರು.

ಪ್ರಜಾಧರ್ಮವನ್ನು ಹೇಳಲಾಗುತ್ತದೆ.

**ಆ ನೋ ಯಾತಂ ದಿವೋ ಅಚ್ಛಾ ಪೃಥಿವ್ಯಾ ಹಿರಣ್ಯಯೇನ ಸುವೃತಾ ರಥೇನ । ಮಾ**
**ವಾಮನ್ಯೇ ನಿ ಯಮನ್ ದೇವಯಂತಃ ಸಂ ಯದ್ದದೇ ನಾಭಿಃ ಪೂರ್ವ್ಯಾ ವಾಮ್ ॥೫॥**

**ಪದಾರ್ಥ:-** **[ಪೂರ್ವ್ಯಾ]** ಪ್ರಾಚೀನ ವಿದ್ಯೆಯಲ್ಲಿ ಪ್ರಸಿದ್ಧರಾದ ರಾಜ ಮತ್ತು ಮಂತ್ರಿಗಳೇ! **[ವಾಂ]** ನಿಮ್ಮಿಬ್ಬರ **[ಸುವೃತಾ]** ಉತ್ತಮಾಚರಣೆಯಿಂದ **[ಹಿರಣ್ಯಯೇನ]** ತೇಜೋಮಯವಾದ **[ರಥೇನ]** ವಾಹನದಿಂದ **[ಪೃಥಿವ್ಯಾಃ]** ಭೂಮಿಯ **[ದಿವಃ]** ಕಾಮನೆಮಾಡುತ್ತ **[ನಃ]** ನಮ್ಮನ್ನು **[ಅಚ್ಛ]** ಉತ್ತಮ ರೀತಿಯಲ್ಲಿ **[ಆ, ಯಾತಂ]** ಸಮೀಪಿಸಿರಿ. **[ಅನ್ಯೇ]** ಬೇರೆಯವರೂ **[ದೇವಯಂತಃ]** ಕಾಮನೆ ಮಾಡುತ್ತ **[ವಾಂ]** ನಿಮ್ಮಿಬ್ಬರನ್ನು **[ಮಾ]** **[ನಿ, ಯಮನ್]** ತಡೆಯದಿರಲಿ. **[ಯತ್]** ಯಾವುದನ್ನು ನಾನು **[ನಾಭಿಃ]** ನಾಭಿಯಂತಿರುವ ನಿಮ್ಮಿಬ್ಬರಿಗೆ **[ಸಂ, ದಧೇ]** ಕೊಡುವೆನೋ ಅದನ್ನು ಸ್ವೀಕರಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರಜೆಗಳು ರಾಜ ಮತ್ತು ರಾಜಪುರುಷರೊಂದಿಗೆ ಸದಾ ಸಂಗ ಮಾಡಬೇಕು. ಅದರೊಂದಿಗೆ ಸುಖ-ದುಃಖಗಳನ್ನು ಅನುಭವಿಸಬೇಕು.

ರಾಜ-ಪ್ರಜೆಗಳ ವಿಷಯವನ್ನು ಹೇಳಲಾಗುತ್ತದೆ.

**ನೂ ನೋ ರಯಿಂ ಪುರುವೀರಂ ಬೃಹಂತಂ ದಸ್ರಾ ಮಿಮಾಥಾಮುಭಯೇಷ್ವಸ್ಮೇ ।**
**ನರೋ ಯದ್ವಾಮಶ್ವಿನಾ ಸ್ತೋಮಮಾವನ್ ತ್ಸಧಸ್ತುತಿಮಾಜಮೀಳ್ಹಾಸೋ ಅಗ್ಮನ್ ॥೬॥**

**ಪದಾರ್ಥ:-** **[ದಸ್ರಾ]** ದುಃಖನಾಶಕರಾದ **[ಅಶ್ವಿನಾ]** ಸೂರ್ಯಚಂದ್ರರಂತೆ ಶ್ರೇಷ್ಠಗುಣ ಸಂಪನ್ನ **[ಯತ್]** ಯಾವ **[ಆಜಮೀಳಾಸಃ]** ಪ್ರಾಣವಿದ್ಯೆಯನ್ನರಿತವರ ಸಂತಾನವಾದ **[ನರಃ]** ನಾಯಕ ಜನರು **[ವಾಂ]** ನಿಮ್ಮಿಬ್ಬರನ್ನು **[ಸದಸ್ತುತಿಂ]** ಜೊತೆಗೆ ಕೀರ್ತಿವಂತರನ್ನಾಗಿ **[ಅಗ್ಮನ್]** ಮಾಡುವರೋ, **[ಸ್ತೋಮಂ]** ಪ್ರಶಂಸೆಯನ್ನು **[ಆವನ್]** ಮಾಡುವರೋ, **[ಬೃಹಂತಂ]** ಬೃಹತ್ತಾದ **[ರಯಿಂ]** ಧನವನ್ನು **[ಮಿಮಾಥಾಂ]** ದಾರಣ ಮಾಡಿರುವಿರೋ **[ಉಭಯೇಷ್ಟ]** ಇಬ್ಬರಿಗೂ **[ಅಸ್ಮೇ]** ನಮಗೂ ಸಂಪತ್ತನ್ನು **[ನು]** ಶೀಘ್ರವೃದ್ಧಿಪಡಿಸಿರಿ.

**ಭಾವಾರ್ಥ:-** ರಾಜ ಮತ್ತು ಮಂತ್ರಿಗಳೇ! ನೀವಿಬ್ಬರೂ ಸೂರ್ಯಚಂದ್ರರಂತೆ ನಮ್ಮೊಂದಿಗೆ ವರ್ತಿಸಿರಿ ಮತ್ತು ಬಹುಸಂಪತ್ತನ್ನು ಅನುಗ್ರಹಿಸಿರಿ. ಅದರಿಂದ ನಾವೆಲ್ಲರೂ ಲಕ್ಷ್ಮೀವಂತರಾಗುವೆವು.

ವಿದ್ಯೆಯ ವಿಷಯವನ್ನು ಹೇಳಲಾಗುತ್ತದೆ.

**ಇಹೇಹ ಯದ್ವಾಂ ಸಮನಾ ಪಪೃಕ್ಷೇ ಸೇಯಮಸ್ಮೇ ಸುಮತಿರ್ವಾಜರತ್ನಾ ।**
**ಉರುಷ್ಯತಂ ಜರಿತಾರಂ ಯುವಂ ಹ ಶ್ರಿತಃ ಕಾಮೋ ನಾಸತ್ಯಾ ಯುವದ್ರಿಕ್ ॥೭॥**

**ಪದಾರ್ಥ:-** **[ನಾಸತ್ಯಾ]** ಧರ್ಮಾತ್ಮರಾದ ಆಚಾರ್ಯೋಪದೇಶಕರೇ! **[ಇಹೇಹ]** ಈ ಪ್ರಪಂಚದಲ್ಲಿ **[ವಾಂ]** ನಿಮ್ಮಿಬ್ಬರ **[ಯತ್]** ಯಾವ **[ಸಮನಾ]** ಶಾಂತಿಗುಣಯುಕ್ತ **[ವಾಜರತ್ನಾ]** ವಿಜ್ಞಾನಧನದ ಸಿದ್ಧಿ ಮಾಡುವಂತಹ **[ಸುಮತಿಂ]** ಉತ್ತಮ ಬುದ್ಧಿಯಿದೆಯೋ **[ಸಾ]** ಆ **[ಇಯಂ]** ಬುದ್ಧಿಯು **[ಅಸ್ಮೇ]** ನಮಗೆ **[ಪಪೃಕ್ಷೇ]** ಬೋಧಿಸಿರಿ. **[ಯುವದ್ರಿಕ್]** ನಿಮ್ಮಿಬ್ಬರಿಗೆ ಲಭಿಸುವ **[ಕಾಮಃ]** ಮನೋರಥವು **[ಜರಿತಾರಂ]** ವಿದ್ಯೆಯ ಸ್ತುತಿ ಮಾಡುವವನಿಗೆ **[ಶ್ರಿತಃ]** ಆಶ್ರಿತವಾಗಿದೆ. **[ಹ]** ಅದನ್ನೇ **[ಯುವಂ]** ನೀವು **[ಉರುಷ್ಯತಾಂ]** ಸೇವಿಸಿರಿ.

**ಭಾವಾರ್ಥ:-** ಮನುಷ್ಯರು ಯಾವಾಗಲೂ ಯಥಾರ್ಥೋಪದೇಶ ಮಾಡುವವರಿಂದ ವಿದ್ಯಾಗ್ರಹಣ ಮಾಡಬೇಕು. ಸತ್ಯವನ್ನು ಬಯಸಬೇಕು. ಅದರಿಂದ ಅವರ ಸಂಪೂರ್ಣ ಮನೋರಥ ನೆರವೇರುತ್ತದೆ.

ಈ ಸೂಕ್ತದಲ್ಲಿ ಅಧ್ಯಾಪಕೋಪದೇಶಕರ, ರಾಜ ಮಂತ್ರಿಗಳ ಮತ್ತು ಸಜ್ಜನರ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ನಲವತ್ತನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೪೫

ಮಂತ್ರಸಂಖ್ಯೆ ೭ । ವಾಮದೇವ ಋಷಿಃ । ಅಶ್ವಿನಾ ದೇವತೇ । ೧, ೩, ೪ ಜಗತೀ, ೫ ನಿಚೃಜ್ಜಗತೀ, ೬ ವಿರಾಡ್ಜಗತೀ ಛಂದಃ । ನಿಷಾದಃ ಸ್ವರಃ । ೨ ಭುರಿಕ್ ತ್ರಿಷ್ಟುಪ್, ೭ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಸೂರ್ಯ-ಭೂಮಿ-ಚಂದ್ರರ ಗತಿಯ ವಿಷಯವನ್ನು ಹೇಳಿದೆ.

**ಏಷ ಸ್ಯ ಭಾನುರುದಿಯರ್ತಿ ಯುಜ್ಯತೇ ರಥಃ ಪರಿಜ್ಮಾ ದಿವೋ ಅಸ್ಯ ಸಾನವಿ । ಪೃಕ್ಷಾಸೋ**
**ಅಸ್ಮಿನ್ ಮಿಥುನಾ ಅಧಿ ತ್ರಯೋ ದೃತಿಸ್ತುರೀಯೋ ಮಧುನೋ ವಿ ರಪ್ಶತೇ ॥೧॥**

**ಪದಾರ್ಥ:-** [ಏಷ ಸ್ಯಃ] ಈ ಅವನು [ಪರಿಜ್ಮಾ] ಎಲ್ಲ ಕಡೆಯಿಂದ ಭೂಮಿಯಲ್ಲಿ ಚಲಿಸುವವನು [ಭಾನುಃ] ಸೂರ್ಯನು [ಉತ್] ಮೇಲ್ಭಾಗದಲ್ಲಿ [ಇಯರ್ತಿ] ಇರುವನು. [ಅಸ್ಯ] ಇವನ [ಸಾನವಿ] ಆಕಾಶದೇಶದಲ್ಲಿ [ರಥಃ] ರಥವು [ಯುಜ್ಯತೇ] ಜೋಡಿಸಲಾಗುತ್ತದೆ. [ಅಸ್ಮಿನ್] ಇದರಲ್ಲಿ [ತ್ರಯಃ] ಗಾಳಿ, ನೀರು, ವಿದ್ಯುತ್‍ಗಳೆಂಬ ಮೂರು [ಪೃಕ್ಷಾಸಃ] ಸಂಬಂಧ ಪಡೆದು [ಮಿಥುನಾಃ] ಎರಡೆರಡು ಜೊತೆಯಾಗಿ ಪ್ರಕಾಶಮಯವಾಗುತ್ತವೆ. [ಮಧುನಃ] ಮಧುರಗುಣಯುಕ್ತ [ತುರೀಯಃ] ನಾಲ್ಕನೆಯ [ದೃತಿಃ] ಮೇಘವು [ದಿವಃ] ಪ್ರಶಂಸಾರ್ಹ ಅಂತರಿಕ್ಷದಲ್ಲಿ [ಅಧಿ] [ವಿ, ರಪ್ಶತೇ] ವಿಶೇಷ ರೀತಿಯಿಂದ ಶೋಭಿತವಾಗುತ್ತದೆ.

**ಭಾವಾರ್ಥ:-** ಮನುಷ್ಯರೇ! ತೇಜೋಮಯ ಸೂರ್ಯನು ಬ್ರಹ್ಮಾಂಡದ ಮಧ್ಯದಲ್ಲಿ ವಿರಾಜಿಸಿರುವನು. ಇವನ ಸುತ್ತಲೂ ಭೂಮಿ ಮತ್ತು ಚಂದ್ರರು ಜೊತೆ-ಜೊತೆಯಾಗಿ ಸುತ್ತುತ್ತವೆ. ಇದರ ಪ್ರಭಾವದಿಂದಲೇ ವೃಷ್ಟಿಯಾಗುತ್ತದೆ. ಈ ಕಾಲಚಕ್ರವನ್ನು ನೀವೆಲ್ಲರೂ ತಿಳಿಯಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉದ್ವಾಂ ಪೃಕ್ಷಾಸೋ ಮಧುಮಂತ ಈರತೇ ರಥಾ ಅಶ್ವಾಸ ಉಷಸೋ ವ್ಯುಷ್ಟಿಷು ।**
**ಅಪೋರ್ಣುವಂತಸ್ತಮ ಆ ಪರೀವೃತಂ ಸ್ವ (ಅ) ೧ ರ್ಣ ಶುಕ್ರಂ ತನ್ವಂತ ಆ ರಜಃ ॥೨॥**

**ಪದಾರ್ಥ:-** [ಮಧುಮಂತಃ] ಮಧುರಾದಿ ಪದಾರ್ಥಸಂಪನ್ನ [ಪೃಕ್ಷಾಸಃ] ಆಸೇಚನ ಸಮರ್ಥ [ಉಷಾಸಃ] ಪ್ರಭಾತಕಾಲವು [ತಮಃ] ರಾತ್ರಿಯನ್ನು [ಅಪೋರ್ಣುವಂತಃ] ಕವಳಿಸುತ್ತ [ವ್ಯುಷ್ಟಿಷಃ] ಬಹುವಿಧ ಸೇವೆಗಳಲ್ಲಿ [ರಥಾಃ] ವಾಹನಗಳನ್ನು [ಅಶ್ವಾಸಃ] ಕುದುರೆಗಳ ರೀತಿಯಲ್ಲಿ [ಆ, ಪರೀವೃತಂ] ಎಲ್ಲೆಲ್ಲೂ ಆವರಿಸಿರುವ [ಸ್ವಃ] [ನ] ಸೂರ್ಯನಿಗೆ ಸದೃಶವಾಗಿ [ಶುಕ್ರಂ] ಪರಿಶುದ್ಧ [ಆ, ರಜಃ] ಲೋಕಲೋಕಾಂತರಕ್ಕೆ [ತನ್ವಂತಃ] ವಿಸ್ತಾರಗೊಳ್ಳುತ್ತ ಸೂರ್ಯಕಿರಣಗಳು [ವಾಂ] ನಿಮ್ಮಿಬ್ಬರನ್ನೂ [ಉತ್, ಈರತೇ] ಕಂಪನಗೊಳಿಸುತ್ತವೆ. ಇದನ್ನು ನೀವರಿಯಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಎಲ್ಲಾ ಲೋಕಗಳೂ ಸೂರ್ಯನ ಸುತ್ತಲೂ ಸುತ್ತುತ್ತವೆ. ಸೂರ್ಯನ ಕಿರಣಗಳು ಭೂಮಿಯ ಅರ್ಧಭಾಗಕ್ಕೆ ತಲುಪಿ ಅಂಧಕಾರವನ್ನು ನಾಶಮಾಡುತ್ತದೆ. ಅದೇರೀತಿ ವಿದ್ಯಾವಂತರು ವಿದ್ಯಾದಾನ ಮಾಡಿ ಅವಿದ್ಯೆಯನ್ನು ನಾಶಮಾಡುತ್ತಾರೆ.

ಸೇನಾಧಿಪತಿ-ಯೋದ್ಧರ ವಿಷಯವನ್ನು ಹೇಳಲಾಗುತ್ತದೆ.

**ಮಧ್ವಃ ಪಿಬತಂ ಮಧುಪೇಭಿರಾಸಭಿ-ರುತ ಪ್ರಿಯಂ ಮಧುನೇ ಯುಂಜಾಥಾಂ ರಥಮ್ ।**
**ಆ ವರ್ತನಿಂ ಮಧುನಾ ಜಿನ್ವಥಸ್ಪಥೋ ದೃತಿಂ ವಹೇಥೇ ಮಧುಮಂತಮಶ್ವಿನಾ ॥೩॥**

**ಪದಾರ್ಥ:-** [ಅಶ್ವಿನಾ] ಸೇನೇಶ ಮತ್ತು ಯೋದ್ಧರು [ಮಧುಪೇಭಿಃ] ಮಧುರ ರಸಪಾನ ಮಾಡುವವರೊಂದಿಗೆ [ಆಸಭಿಃ] ಬಾಯಿಯಿಂದ [ಮಧ್ವಃ] ಮಧುರಾದಿ ಗುಣಗಳಿರುವ [ಪ್ರಿಯಂ] ಮನೋಹರರಸವನ್ನು [ಪಿಬಂತಂ] ನೀವು ಸೇವಿಸಿರಿ. [ಉತ] ಮತ್ತು [ಮಧುನೇ] ತಿಳಿದಿರುವ ಮಾರ್ಗದಲ್ಲಿ [ರಥಂ] ವಾಹನವನ್ನು [ಯುಂಜಾಥಾಂ] ಸಂಯೋಜಿಸಿರಿ. [ಮಧುನಾ] ಮಾಧುರ್ಯ ಪದಾರ್ಥದಿಂದ [ವರ್ತನಿಂ] ಚಲಿಸುವ ಮಾರ್ಗವನ್ನು [ಆ, ಜಿನ್ವಥಃ] ಅನುವರ್ತಿಸಿರಿ. [ಪಥಃ] ಮಾರ್ಗವನ್ನು ಪಡೆದವರಾಗಿ [ಮಧುಮಂತಂ] ಮಧುರಗುಣವಿರುವ [ದೃತಿಂ] ಮೇಘವನ್ನು [ವಹೇಥೇಃ] ಧಾರಣಮಾಡಿರಿ.

**ಭಾವಾರ್ಥ:-** ಸೇನಾಪತಿ ಮತ್ತು ಸೈನಿಕರೇ! ಸೇನಾ ಯೋದ್ಧರೊಂದಿಗೆ ನೀವು ಉತ್ತಮ ಭೋಜನ ಸೇವಿಸಿ ಉತ್ತಮ ವಾಹನಗಳಲ್ಲಿ ಸತ್ಪಥದಲ್ಲಿ ಚಲಿಸಿರಿ. ಬಲವೃದ್ಧಿಪಡಿಸಿಕೊಂಡು ಧನವಂತರಾಗಿರಿ. ಹೇಗೆ ಅಗ್ನಿ ವಾಯು ಮೇಘಗಳು ಮಳೆಸುರಿಸಿ ಎಲ್ಲರನ್ನೂ ಸುಖದಲ್ಲಿರಿಸುತ್ತವೆಯೋ ಹಾಗೆ ನೀವೂ ಪ್ರಜೆಗಳನ್ನು ಸುಖದಲ್ಲಿರಿಸಿರಿ.

ರಾಜಪುರುಷರ ವಿಷಯವನ್ನು ಹೇಳಲಾಗುತ್ತದೆ.

**ಹಂಸಾಸೋ ಯೇ ವಾಂ ಮಧುಮಂತೋ ಅಸ್ರಿಧೋ ಹಿರಣ್ಯಪರ್ಣಾ ಉಹುವ ಉಷರ್ಬುಧಃ।**
**ಉದಪ್ರುತೋ ಮಂದಿನೋ ಮಂದಿನಿಸ್ಪೃಶೋ ಮಧ್ವೋ ನ ಮಕ್ಷಃ ಸವನಾನಿ ಗಚ್ಛಥಃ ॥೪॥**

**ಪದಾರ್ಥ:-** **[ವಾಂ]** ನಿಮ್ಮಿಬ್ಬರ **[ಯೇ]** ಯಾವ **[ಮಧುಮಂತಃ]** ಮಾಧುರ್ಯಯುಕ್ತ ಗಮನದಿಂದ **[ಅಸ್ರಿಧಃ]** ಹಿಂಸೆಗೊಳಗಾಗದ **[ಹಿರಣ್ಯಪರ್ಣಾಃ]** ತೇಜೋಮಯ, ಸುವರ್ಣಾದಿಗಳಿಂದ ತಯಾರಿಸಿದ ರೆಕ್ಕೆಗಳಿರುವ **[ಉಷರ್ಬುಧಃ]** ಸಕಾಲಿಕ ಪ್ರಜ್ಞೆಯಿರುವ **[ಉಹುವಃ]** ಭಾರವಾಹಕ **[ಉದಪ್ರುತಃ]** ನೀರನ್ನು ಚಾಲನೆಗೊಳಿಸುವ **[ಮಂದಿನಃ]** ಆನಂದದಾಯಕ **[ಮಂದಿನಿಸ್ಪೃಶಃ]** ಆನಂದದ ಸ್ಪರ್ಶ ಮಾಡಿಸುವ **[ಮಧ್ವಃ]** ಮಧುರ ಪದಾರ್ಥ ಸಂಬಂಧೀ **[ಮಕ್ಷಃ]** ಮಕ್ಷಿಕ ರಾಜನು **[ನ]** ಅವನಿಗೆ ಸಮಾನ **[ಹಂಸಾಸಃ]** ಹಂಸಗಳಿಗೆ ಸದೃಶ ಶೀಘ್ರಚಲಿಸುವ ಅಶ್ವಗಳಿಂದ **[ಸವನಾನಿ]** ಸಂಪತ್ತುಗಳನ್ನು **[ಗಚ್ಛಥಃ]** ನೀವಿಬ್ಬರೂ ಪಡೆಯಿರಿ.

**ಭಾವಾರ್ಥ:-** ರಾಜಪುರುಷರೇ! ನೀವು ನಿಮ್ಮ ವಾಹನಗಳಲ್ಲಿ ಅಗ್ನಿ-ಜಲಾದಿ ಇಂಧನಗಳನ್ನು ಬಳಸಿಕೊಂಡು ಸಂಚರಿಸುತ್ತ ವೇಗಗತಿಯಿಂದ ನಿಮ್ಮ ಇಚ್ಛಾಪೂರ್ತಿ ಮಾಡಿಕೊಳ್ಳಿರಿ, ಸಿರಿವಂತರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ವಧ್ವರಾಸೋ ಮಧುಮಂತೋ ಅಗ್ನಯ ಉಸ್ರಾ ಜರಂತೇ ಪ್ರತಿ ವಸ್ತೋರಶ್ವಿನಾ ।**
**ಯನ್ನಿಕ್ತಹಸ್ತಸ್ತರಣಿರ್ವಿಚಕ್ಷಣಃ ಸೋಮಂ ಸುಷಾವ ಮಧುಮಂತಮದ್ರಿಭಿಃ ॥೫॥**

**ಪದಾರ್ಥ:-** **[ಅಶ್ವಿನಾ]** ರಾಜ ಮತ್ತು ಪ್ರಧಾನಿಯವರೇ! ನೀವು **[ಪ್ರತಿ, ವಸ್ತೋಃ]** ಪ್ರತಿದಿನದ **[ಸ್ವಧ್ವರಾಸಃ]** ಕ್ರಿಯಾಸಿದ್ಧಿಯಿರುವವರು. **[ಮಧುಮಂತಃ]** ಮಧುರಾದಿ ಗುಣಗಳೊಂದಿಗೆ **[ಅಗ್ನಯಃ]** ಅಗ್ನಿಗಳ **[ಉಸ್ರಾ]** ಕಿರಣಗಳ **[ಜರಂತೇ]** ಪ್ರಶಂಸೆ ಮಾಡಿರಿ. **[ಯತ್]** ಯಾವ **[ನಿಕ್ತಹಸ್ತಃ]** ಶುದ್ಧಹಸ್ತನಾದ **[ತರಣಿಃ]** ದುಃಖನಾಶಕನು **[ವಿಚಕ್ಷಣಃ]** ಬುದ್ಧಿವಂತನು **[ಅದ್ರಿಭಿಃ]** ಮೇಘಗಳಿಂದ **[ಮಧುಮಂತಂ]** ಮಧುರಗುಣಯುಕ್ತ **[ಸೋಮಂ]** ವನಸ್ಪತಿರಸವನ್ನು **[ಸುಷಾವ]** ತಯಾರಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ವಿದ್ವಾಂಸರ ಸಂಗದಿಂದ ಅಗ್ನ್ಯಾದಿ ವಿದ್ಯೆಗಳನ್ನು ಸೋಮಲತಾದಿ ಪದಾರ್ಥ ಜ್ಞಾನವನ್ನು ಸಂಪಾದಿಸಿಕೊಂಡು ಉತ್ತಮ ರೀತಿಯಲ್ಲಿ ಪ್ರಯೋಗಿಸಿ ನಿಮ್ಮ ಇಷ್ಟಾರ್ಥವನ್ನು ಸಾಧಿಸಿಕೊಳ್ಳಿರಿ.

ಅಗ್ನಿ ಜಲಶಕ್ತಿಯ ವಿಸ್ತಾರದ ವಿಷಯವನ್ನು ಹೇಳಲಾಗುತ್ತದೆ.

**ಆಕೇನಿಪಾಸೋ ಅಹಭಿರ್ದವಿಧ್ವತಃ ಸ್ವ (ಅ) ೧ ರ್ಣ ಶುಕ್ರಂ ತನ್ವಂತ ಆ ರಜಃ ।**
**ಸೂರಶ್ಚಿದಶ್ವಾನ್ ಯುಯುಜಾನ ಈಯತೇ ವಿಶ್ವಾ ಅನು ಸ್ವಧಯಾ ಚೇತಥಸ್ಪಥಃ ॥೬॥**

**ಪದಾರ್ಥ:-** **[ಅಹಭಿಃ]** ದಿನಗಳಿಂದ **[ದವಿಧ್ವತಃ]** ಪದಾರ್ಥನಾಶಗೊಳಿಸುತ್ತ **[ಆಕೇನಿಪಾತಃ]** ಸಮೀಪವರ್ತಿಯಾಗಿ ಪಾಲನೆ ಮಾಡುವ ಕಿರಣಗಳು **[ಶುಕ್ರಂ]** ನೀರನ್ನು **[ರಜಃ]** ಮತ್ತು ಲೋಕವನ್ನು **[ಆ, ತನ್ವತಃ]** ವಿಸ್ತರಿಸುತ್ತ **[ಸ್ವಃ][ನ]** ಸೂರ್ಯನಿಗೆ ಸಮನಾಗಿ **[ಸೂರಃ]** **[ಚಿತ್]** ಸೂರ್ಯನೂ **[ಅಶ್ವಾನ್]** ಕಿರಣಗಳನ್ನು **[ಯುಯುಜಾನಃ]** ಸಂಯೋಜಿಸಿ **[ಈ ಯತೇ]** ಪ್ರಾಪ್ತನಾಗುವ ರೀತಿಯಲ್ಲಿ **[ಸ್ವಧಯಾ]** ಅನ್ನಾದಿಗಳಿಂದ **[ವಿಶ್ವಾನ್]** ಸಮಗ್ರ ಪದಾರ್ಥಗಳನ್ನು **[ಪಥಃ]** ಮಾರ್ಗಗಳನ್ನು **[ಅನು, ಚೇತಥಃ]** ಅನುಕೂಲಕರಗೊಳಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ನೀವು ಕಿರಣಗಳನ್ನು ಸೂರ್ಯನು ವಿಸ್ತರಿಸುವಂತೆ ನಿಮ್ಮ ವಾಹನಗಳಲ್ಲಿ ಅಗ್ನಿ-ಜಲ ಶಕ್ತಿಯನ್ನು ವಿಸ್ತರಿಸಿರಿ. ಅದರಿಂದ ಜಲ-ಸ್ಥಳ-ಆಕಾಶಗಳಲ್ಲಿ ಸಂಚರಿಸಿ ಸುಖಿಗಳಾಗಿರಿ.

ವಿಮಾನ ವಿದ್ಯೆಯ ವಿಷಯವನ್ನು ಹೇಳಲಾಗುತ್ತದೆ.

**ಪ್ರ ವಾಮವೋಚಮಶ್ವಿನಾ ಧಿಯಂಧಾ ರಥಃ ಸ್ವಶ್ವೋ ಅಜರೋ ಯೋ ಅಸ್ತಿ ।**
**ಯೇನ ಸದ್ಯಃ ಪರಿ ರಜಾಂಸಿ ಯಾಥೋ ಹವಿಷ್ಮಂತಂ ತರಣಿಂ ಭೋಜಮಚ್ಛ ॥೭॥**

**ಪದಾರ್ಥ:-** **[ಅಶ್ವಿನಾ]** ಅಧ್ಯಾಪಕೋಪದೇಶಕರೇ! **[ಯಃ]** ಯಾವನು **[ಸ್ವಶ್ವಃ]** ಉತ್ತಮಾಶ್ವಗಳಿಂದೊಡಗೂಡಿದ **[ಅಜರಃ]** ಮುಪ್ಪಿಲ್ಲದ **[ರಥಃ]** ರಥವು **[ಅಸ್ತಿ]** ಇರುವವನೋ **[ಧಿಯಂಧಾಃ]** ಅವನ ವಿದ್ಯಾಧಾರಕ ನಾನು **[ವಾಂ]** ನಿಮ್ಮಿಬ್ಬರನ್ನು **[ಪ, ಅವೋಚಂ]** ಉತ್ತಮ ರೀತಿಯಿಂದ ಉಪದೇಶಿಸುವೆನು. **[ಯೇನ]** ಯಾವುದರಿಂದ **[ಹವಿಷ್ಮಂತಂ]** ಬಹು ಸಾಮಗ್ರಿಗಳಿರುವ **[ತರಣಿಂ]** ತಾರಣ ಮಾಡುವ **[ಭೋಜಂ]** ಭಕ್ಷಣೆಗರ್ಹವಾದ ಪದಾರ್ಥಗಳನ್ನು **[ರಜಾಂಸಿ]** ಲೋಕಗಳನ್ನೂ **[ಸದ್ಯಃ]** ಬೇಗನೇ **[ಅಚ್ಛ]** ಉತ್ತಮ ರೀತಿಯಲ್ಲಿ **[ಪರಿ, ಯಾಥಃ]** ಎಲ್ಲಾ ಕಡೆಗಳಿಂದಲೂ ಪಡೆಯುವಿರಿ.

**ಭಾವಾರ್ಥ:-** ಮನುಷ್ಯರೇ! ವಿದ್ಯಾವಂತರಾದ ನಾವು ನಿಮಗೆ ಯಾವ ವಿದ್ಯೆಯನ್ನು ಕಳಿಸಿರುವೆವೋ ಆ ವಿದ್ಯೆಯಿಂದ ನೀವು ವಿಮಾನಾದಿ ವಾಹನಗಳನ್ನು ತಯಾರಿಸಿಕೊಂಡು ಶೀಘ್ರಗಮನಾಗಮನ ಮಾಡುವುದರ ಮೂಲಕ ಬಹುಭೋಗವಸ್ತುಗಳನ್ನು ಗಳಿಸಿರಿ.

ಈ ಸೂಕ್ತದಲ್ಲಿ ಸೂರ್ಯ ಹಾಗೂ ಅಶ್ವಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೈದನೆಯ ಸೂಕ್ತ ಸಮಾಪ್ತ**

## ಪಂಚಮೋಽನುವಾಕಃ ಸೂಕ್ತ (४೬-೫೮)

### ಸೂಕ್ತ ४೬

ಮಂತ್ರಸಂಖ್ಯೆ ೭ । ವಾಮದೇವ ಋಷಿಃ । ಇಂದ್ರ ವಾಯೂ ದೇವತೇ । ೧ ವಿರಾಡ್ಗಾಯತ್ರೀ, ೨, ೩, ೫-೭ ಗಾಯತ್ರೀ, ४ ನಿಚೃದ್ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ವಿದ್ವಾಂಸರ ವಿಷಯವನ್ನು ಇಲ್ಲಿ ಹೇಳಿದೆ.

**ಅಗ್ರಂ ಪಿಬಾ ಮಧೂನಾಂ ಸುತಂ ವಾಯೋ ದಿವಿಷ್ಟಿಷು । ತ್ವಂ ಹಿ ಪೂರ್ವಪಾ ಅಸಿ ॥೧॥**

**ಪದಾರ್ಥ:-** **[ವಾಯೋ]** ವಾಯುವಿನಂತೆ ಬಲಿಷ್ಠ **[ಹಿ]** ಯಾವ ಕಾರಣದಿಂದ **[ತಂ]** ನೀನು **[ದಿವಿಷ್ಟಿಷು]** ಶ್ರೇಷ್ಠಕ್ರಿಯೆಗಳಲ್ಲಿ **[ಪೂರ್ವಪಾಃ]** ಮೊದಲೇ ಇರುವವರನ್ನು ಪಾಲನೆ ಮಾಡುವವನು **[ಅಸಿ]** ಆಗಿರುವೆ. **[ಮಧೂನಾಂ]** ಮಧುರ ರಸಗಳಲ್ಲಿ **[ಅಗ್ರಂ]** ಶ್ರೇಷ್ಠವಾದ **[ಸುತಂ]** ತಯಾರಿಸಿದ ರಸವನ್ನು **[ಪಿಬ]** ಪಾನಮಾಡು.

**ಭಾವಾರ್ಥ:-** ವಿದ್ವಾಂಸನೇ! ನೀನು ಸನಾತನ ವಿದ್ಯೆಯನ್ನು ರಕ್ಷಣೆ ಮಾಡಿ ಎಲ್ಲರಿಗೂ ಕೊಡುತ್ತೀಯೆ, ಆದ್ದರಿಂದ ಕ್ರಿಯಾಚರಣೆಯಲ್ಲಿ ಪ್ರಮುಖನಾಗಿರುವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶತೇನಾ ನೋ ಅಭಿಷ್ಟಿಭಿ-ರ್ನಿಯುತ್ವಾ ಇಂದ್ರಸಾರಥಿಃ । ವಾಯೋ ಸುತಸ್ಯ ತೃಂಪತಮ್ ॥೨॥**

**ಪದಾರ್ಥ:-** **[ವಾಯೋ]** ವಾಯುವಿನಂತಿರುವ ಅಧ್ಯಾಪಕೋಪದೇಶಕರೇ! **[ಅಭಿಷ್ಟಿಭಿಃ]** ಅಭೀಷ್ಟಕ್ರಿಯಾಕಲಾಪ ಗಳಿಂದ **[ಇಂದ್ರಸಾರಥಿಃ]** ಮಿಂಚಿನಂತಹ ಸಾರಥಿ ಇರುವವನು **[ನಿಯುತ್ವಾನ್]** ಬಲಿಷ್ಠನಾದ ವಾಯುವು **[ಶತೇನಾ]** ಅಸಂಖ್ಯಾತ ಕಾರ್ಯಗಳಿಂದ **[ನಃ]** ನಮ್ಮನ್ನು ಸಂತೃಪ್ತಿಪಡಿಸುವಂತೆ **[ಸುತಸ್ಯ]** ಉತ್ಪಾದಿಸಿದ ಕ್ರಿಯಾಕಲಾಪದ ಸಂಬಂಧದಲ್ಲಿ **[ತೃಂಪತಾಂ]** ನೀವಿಬ್ಬರೂ ಸಂತೃಪ್ತರಾಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಗಾಳಿ ಮತ್ತು ಮಿಂಚುಗಳು ಪರಸ್ಪರ ಸೇರಿ ಅನೇಕ ರೀತಿಯ ಕ್ರಿಯಾಕಲಾಪಗಳನ್ನು ಉತ್ಪಾದಿಸುತ್ತವೆ. ಅದೇ ರೀತಿ ನೀವು ಭೂಮಿ ಮತ್ತು ಜಲಗಳಿಂದಲೂ ಅನೇಕರೀತಿಯ ಕಾರ್ಯವನ್ನು ಸಿದ್ಧಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ವಾಂ ಸಹಸ್ರಂ ಹರಯ ಇಂದ್ರವಾಯೂ ಅಭಿ ಪ್ರಯಃ । ವಹಂತು ಸೋಮಪೀತಯೇ ॥೩॥**

**ಪದಾರ್ಥ:-** **[ಇಂದ್ರವಾಯೂ]** ಸೂರ್ಯ ಮತ್ತು ಗಾಳಿ **[ಹರಯಃ]** ಹರಣಶೀಲ ಮನುಷ್ಯ **[ವಾಂ]** ನಿಮ್ಮಿಬ್ಬರನ್ನು **[ಸೋಮಪೀತಯೇ]** ಸೋಮರಸಪಾನ ಮಾಡಲು **[ಸಹಸ್ರಂ]** ಅಸಂಖ್ಯ **[ಪ್ರಯಃ]** ಮನೋಹರ ಭಾವವನ್ನು **[ಆ, ವಹಂತು]** ಪಡೆದುಕೊಳ್ಳಿರಿ. **[ಅಭಿ]** ಎಲ್ಲ ರೀತಿಯ ಬೋಧನೆ ನೀಡಿರಿ.

**ಭಾವಾರ್ಥ:-** ಮನುಷ್ಯರೇ! ವಿದ್ಯಾವಂತರು ನಿಮ್ಮನ್ನು ಶಿಕ್ಷಣ ನೀಡಿ ವಿದ್ವಾಂಸರನ್ನಾಗಿ ಮಾಡುವರು. ನೀವು ನಿರಂತರ ಅವರ ಸೇವೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಥಂ ಹಿರಣ್ಯವಂಧುರ-ಮಿಂದ್ರವಾಯೂ ಸ್ವಧ್ವರಮ್ । ಆ ಹಿ ಸ್ಥಾಥೋ ದಿವಿಸ್ಪೃಶಮ್ ॥೪॥**

**ಪದಾರ್ಥ:-** **[ಇಂದ್ರವಾಯೂ]** ಮಿಂಚು ಮತ್ತು ವಾಯುವಿನಂತಿರುವ ಶಿಲ್ಪವಿದ್ಯಾ ಬೋಧಕೋಪದೇಶಕರೇ! ನೀವಿಬ್ಬರೂ **[ಸ್ವಧ್ವರಂ]** ನಷ್ಟವಾಗದ ಉತ್ತಮಕ್ರಿಯೆಯನ್ನು **[ಹಿರಣ್ಯಬಂಧುರಂ]** ಸುವರ್ಣಬಂಧವಿರುವ **[ದಿವಿಸ್ಪೃಶಂ]** ಆಕಾಶದಲ್ಲಿ ಚಲಿಸುವ **[ರಥಂ]** ರಮಣೀಯ ವಾಹನವನ್ನು **[ಹಿ]** ಅದನ್ನೇ **[ಆ, ಸ್ಥಾಥಃ]** ಆರೋಹಣ ಮಾಡಿರಿ.

**ಭಾವಾರ್ಥ:-** ಆಚಾರ್ಯೋಪದೇಶಕ ಜನರು ಪ್ರೀತಿಯಿಂದ ಸುವರ್ಣ ಖಚಿತ ರಥವನ್ನೇರಿ ವಿದ್ಯಾರ್ಥಿಗಳಿಗೆ ನಿರಂತರ ಬೋಧಿಸುತ್ತ ಪದಾರ್ಥವಿಜ್ಞಾನಿಗಳನ್ನಾಗಿಸಬೇಕು. ಅಂದರೆ ಅವರು ಅಂತರಿಕ್ಷಾದಿಗಳಲ್ಲಿ ಸಂಚರಿಸಲು ಸಮರ್ಥರಾಗುವರು.

ರಾಜ ಮಂತ್ರಿಗಳ ವಿಷಯವನ್ನು ಹೇಳಲಾಗುತ್ತದೆ.

**ರಥೇನ ಪೃಥುಪಾಜಸಾ ದಾಶ್ವಾಂಸಮುಪ ಗಚ್ಛತಮ್ । ಇಂದ್ರವಾಯೂ ಇಹಾ ಗತಮ್ ॥೫॥**

**ಪದಾರ್ಥ:-** [ಇಂದ್ರವಾಯೂ] ಮಿಂಚುಗಾಳಿಗಳಂತೆ ಪ್ರತಾಪಿಗಳಾದ ರಾಜ ಸೇನಾಪತಿಗಳಿಬ್ಬರೂ [ಪೃಥುಪಾಜಸಾ] ವಿಸ್ತೃತ ಬಲವುಳ್ಳವರಾಗಿ [ರಥೇನ] ರಮಣೀಯ ವಾಹನದಿಂದ [ಇಹ] ಈ ಸಂಗ್ರಾಮದಲ್ಲಿ [ಆ, ಗತಂ] ಆಗಮಿಸಿರಿ. [ದಾಶ್ವಾಂಸಂ] ದಾತೃಗಳ [ಉಪ, ಗಚ್ಛತಂ] ಸಮೀಪಕ್ಕೆ ಹೋಗಿರಿ.

**ಭಾವಾರ್ಥ:-** ಗಾಳಿ ಮಿಂಚುಗಳಂತೆ ರಾಜ-ಮಂತ್ರಿಗಳೂ ಪ್ರತಾಪಿಗಳಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರವಾಯೂ ಅಯಂ ಸುತ-ಸ್ತಂ ದೇವೇಭಿಃ ಸಜೋಷಸಾ । ಪಿಬತಂ ದಾಶುಷೋ ಗೃಹೇ ॥೬॥**

**ಪದಾರ್ಥ:-** [ಸಜೋಷಸಾ] ಸಮಾನ ಇಚ್ಛೆಯುಳ್ಳವರಾದ [ಇಂದ್ರವಾಯೂ] ಗಾಳಿಸೂರ್ಯರಂತಿರುವ ರಾಜ ಮಂತ್ರಿಗಳು [ಅಯಂ] ಈ [ದಾಶುಷಃ] ದಾತೃಗಳ [ಗೃಹೇ] ಮನೆಯಲ್ಲಿ [ಸುತಃ] ತಯಾರಿಸಿದ [ತಂ] ಅದನ್ನು [ದೇವೇಭಿಃ] ವಿದ್ವಾಂಸರೊಂದಿಗೆ [ಪಿಬತಂ] ಪಾನಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಗಾಳಿ ಸೂರ್ಯರು ಹೇಗೆ ಎಲ್ಲರಿಗೂ ಉಪಕಾರಿಗಳೋ ಹಾಗೆ ರಾಜ ಮಂತ್ರಿಗಳೂ ಎಲ್ಲರಿಗೆ ಉಪಕಾರಿಗಳಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಹ ಪ್ರಯಾಣಮಸ್ತು ವಾ-ಮಿಂದ್ರವಾಯೂ ವಿಮೋಚನಮ್ । ಇಹ ವಾಂ ಸೋಮಪೀತಯೇ ॥೭॥**

**ಪದಾರ್ಥ:-** [ಇಂದ್ರವಾಯೂ] ಪೂರ್ವೋಕ್ತ ರಾಜ ಮಂತ್ರಿಗಳೇ! [ಇಹ] ಇಲ್ಲಿ [ವಾಂ] ನಿಮ್ಮಿಬ್ಬರ [ಪ್ರಯಾಣಂ] ಪ್ರವಾಸವು [ಅಸ್ತು] ಆಗಲಿ. [ಇಹ] ಇಲ್ಲಿ [ವಾಂ] ನಿಮ್ಮಿಬ್ಬರನ್ನು [ಸೋಮಪೀತಯೇ] ಸೋಮಪಾನ ಮಾಡಲು [ವಿಮೋಚನಂ] ಬಿಟ್ಟಿರುವೆವು.

**ಭಾವಾರ್ಥ:-** ಮನುಷ್ಯರೇ! ನಿಮ್ಮೆಲ್ಲರನ್ನೂ ಕಾರ್ಯಸಿದ್ಧಿ ಮಾಡುವುದಕ್ಕೆ ಬಿಡಲಾಗಿದೆ. ನಿಮ್ಮ ಕೆಲಸವನ್ನು ರಾಜನು ಒಪ್ಪಿಕೊಳ್ಳಲಿ.

ಈ ಸೂಕ್ತದಲ್ಲಿ ಮಿಂಚು ಗಾಳಿಗಳ ಗುಣವರ್ಣನೆ ಮಾಡಲಾಗಿದೆ. ಆದ್ದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆಯೆಂದು ಭಾವಿಸಬೇಕು.

**ನಲವತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೪೭

ಮಂತ್ರಸಂಖ್ಯೆ ೪ । ವಾಮದೇವ ಋಷಿಃ । ೧ ವಾಯುಃ, ೨-೪ ಇಂದ್ರ ವಾಯೂ ದೇವತೇ । ೧, ೩ ಅನುಷ್ಟುಪ್, ೪ ನಿಚೃದನುಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೨ ಭುರಿಗನುಷ್ಟುಪ್ ಛಂದಃ । ಋಷಭಃ ಸ್ವರಃ.

ವಿದ್ವಾಂಸರ ವಿಷಯವನ್ನು ಇಲ್ಲಿ ಹೇಳಲಾಗಿದೆ.

**ವಾಯೋ ಶುಕ್ರೋ ಅಯಾಮಿ ತೇ ಮಧ್ವೋ ಅಗ್ರಂ ದಿವಿಷ್ಟಿಷು ।**
**ಆ ಯಾಹಿ ಸೋಮಪೀತಯೇ ಸ್ಪಾರ್ಹೋ ದೇವ ನಿಯುತ್ವತಾ ॥೧॥**

**ಪದಾರ್ಥ:-** [ದೇವ] ವಿದ್ಯಾವಂತ [ವಾಯೋ] ವಾಯುವಿನಂತಿರುವ [ಸ್ಪಾರ್ಹಃ] ಬಯಸಲರ್ಹ [ಶುಕ್ರಃ] ಶುದ್ಧ ಸ್ವಭಾವದ [ದಿವಿಷ್ಟಿಷು] ಪ್ರಕಾಶ ರೂಪಕ್ರಿಯೆಗಳಲ್ಲಿ [ನಿಯುತ್ವತಾ] ಸಮರ್ಥ ರಾಜನೊಂದಿಗೆ [ಸೋಮಪೀತಯೇ] ಸೋಮಪಾನ ಮಾಡಲು [ತೇ] ನಿನ್ನ [ಮಧ್ವಃ] ಮಧುರ ರಸದ [ಅಗ್ರಂ] ಅಗ್ರಭಾಗವನ್ನು [ಅಯಾಮಿ] ಸಮೀಪಿಸುವೆನು. [ಆ, ಯಾಹಿ] ನೀನೂ ಬಾ.

**ಭಾವಾರ್ಥ:-** ಯಾರು ಗಾಳಿಯಂತೆ ಎಲ್ಲ ಕಡೆಗೂ ವಿಹರಿಸುವರೋ ಅವರು ಎಲ್ಲೆಲ್ಲೂ ಅಪೇಕ್ಷಿಸುವವರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಶ್ಚ ವಾಯುವೇಷಾಂ ಸೋಮಾನಾಂ ಪೀತಿಮರ್ಹಥಃ ।**
**ಯುವಾಂ ಹಿ ಯಂತೀಂದವೋ ನಿಮ್ನಮಾಪೋ ನ ಸಧ್ರ್ಯಕ್ ॥೨॥**

**ಪದಾರ್ಥ:-** [ವಾಯೋ] ಬಲಿಷ್ಠನೇ! ನೀನು [ಚ] ಮತ್ತು [ಇಂದ್ರಃ] ಐಶ್ವರ್ಯವಂತನು [ಯುವಾಂ] ನೀವಿಬ್ಬರೂ [ಆಪಃ] ನೀರು [ನಿಮ್ನಃ] ತಗ್ಗು ಪ್ರದೇಶದಲ್ಲಿ [ನ] ಹರಿಯುವ ರೀತಿಯಲ್ಲಿ [ಇಂದವಃ] ಸಂಗತಿಸಿ ಸತ್ಕರಿಸಲರ್ಹನು. [ಸಧ್ರ್ಯಕ್] ಜೊತೆ ಜೊತೆಯಲ್ಲೇ ಸತ್ಕರಿಸುವವನು. [ಯಂತಿ] ಎಲ್ಲರೂ ಲಭಿಸುವರೋ [ಹಿ] ಅದೇರೀತಿ ನೀವಿಬ್ಬರೂ [ಏಷಾಂ] ಈ [ಸೋಮಾನಾಂ] ಓಷಧಿರಸದ [ಪೀತಿಂ] ಪಾನ ಮಾಡಲು [ಅರ್ಹಥಃ] ಸಮರ್ಥರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಹೇಗೆ ಯಜ್ಞಗಳು ನೀರನ್ನು ಉತ್ಪಾದಿಸುತ್ತವೆಯೋ ಹಾಗೆ ವಿದ್ವಾಂಸರು ವಿದ್ಯಾ ವ್ಯವಹಾರವನ್ನು ಸಿದ್ಧಿಗೊಳಿಸುವರು.

ರಾಜಪುರುಷರ ವಿಷಯವನ್ನು ಹೇಳಲಾಗುತ್ತದೆ.

**ವಾಯವಿಂದ್ರಶ್ಚ ಶುಷ್ಮಿಣಾ ಸರಥಂ ಶವಸಸ್ಪತೀ ।**
**ನಿಯುತ್ವಂತಾ ನ ಊತಯ ಆ ಯಾತಂ ಸೋಮಪೀತಯೇ ॥೩॥**

**ಪದಾರ್ಥ:-** [**ಶುಷ್ಮಿಣಾ**] ಬಲಿಷ್ಠನು [**ಶವಸಃ**] ಬಲದಿಂದ [**ಪತೀ**] ಪಾಲನೆ ಮಾಡುವವನು [**ನಿಯುತ್ವಂತಾ**] ಸ್ವಾಮೀ ಸಮರ್ಥನು [**ವಾಯೋ**] ಅತಿಶಯ ಬಲಪಡೆದು [**ಇಂದ್ರಃ ಚ**] ಮತ್ತು ರಾಜನು [**ನಃ**] ನಮ್ಮ [**ಊತಯೇ**] ರಕ್ಷಣಾದಿಗಳಿಗೆ [**ಸೋಮಪೀತಯೇ**] ಧನಪಾಲನೆಗೆ [**ಸರಥಂ**] ಸಮಾನರಥವನ್ನು [**ಆ, ಯಾತಂ**] ಪಡೆಯುವರು.

**ಭಾವಾರ್ಥ:-** ಮನುಷ್ಯರೇ! ರಾಜನ ಅಧಿಕಾರಿ ವರ್ಗದವರು ಬಲವರ್ಧಕರೂ ಸಾಮರ್ಥ್ಯವಂತರೂ ಆಗಿರಬೇಕು. ನಿಮ್ಮೆಲ್ಲರ ರಕ್ಷಣೆ ಮಾಡುವವರೂ ಆಗಿರಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಾ ವಾಂ ಸಂತಿ ಪುರುಸ್ಪೃಹೋ ನಿಯುತೋ ದಾಶುಷೇ ನರಾ ।**
**ಅಸ್ಮೇ ತಾ ಯಜ್ಞವಾಹಸೇ-ಂದ್ರವಾಯೂ ನಿ ಯಚ್ಛತಮ್ ॥೪॥**

**ಪದಾರ್ಥ:-** [**ಯಜ್ಞವಾಹಸಾ**] ಯಜ್ಞವನ್ನು ಮಾಡುವವನು [**ನರಾ**] ಮನುಷ್ಯನು [**ಇಂದ್ರವಾಯಾ**] ಧನಿಕ, ವಿದ್ಯಾವಂತ, ರಾಜ, ಮಂತ್ರಿ [**ವಾಂ**] ಹೀಗೆ ಎರಡು ಜೊತೆಗಳು [**ಯಾಃ**] ಯಾವ [**ನಿಯುತಃ**] ನಿಶ್ಚಿತ [**ಪುರುಸ್ಪೃಹಃ**] ಬಹು ಜನರು ಬಯಸುವ ಕಾರ್ಯ [**ದಾಶುಷೇ**] ದಾತೃವಿಗೆ [**ಸಂತಿ**] ಇವೆಯೋ [**ತಾಃ**] ಆ ಕಾರ್ಯಗಳನ್ನು [**ಅಸ್ಮೇ**] ನಮಗೆ [**ನಿ**] [**ಯಚ್ಛತಾಂ**] ಕೊಡುವವರಾಗಲಿ.

**ಭಾವಾರ್ಥ:-** ರಾಜ ಮತ್ತು ಮಂತ್ರಿಗಳೇ! ನೀವು ನಮ್ಮ ಪ್ರಜೆಗಳೆಲ್ಲರ ಇಚ್ಛೆಯನ್ನು ಪೂರ್ಣಗೊಳಿಸಿರಿ. ಅದರಿಂದ ನಾವು ನಿಮ್ಮ ಮನೋರಥವನ್ನೂ ಪೂರ್ಣಗೊಳಿಸುವೆವು.

ಈ ಸೂಕ್ತದಲ್ಲಿ ವಿದ್ಯಾವಂತರ ರಾಜ-ಮಂತ್ರಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ನಲವತ್ತೇಳನೆಯ ಸೂಕ್ತ ಸಮಾಪ್ತ**

## ಸೂಕ್ತ ೪೮

ಮಂತ್ರಸಂಖ್ಯೆ ೫ । ವಾಮದೇವ ಋಷಿಃ । ವಾಯು ದೇವತಾ । ೧ ನಿಚೃದನುಷ್ಟುಪ್, ೨ ಅನುಷ್ಟುಪ್,

೩-೫ ಭುರಿಗನುಷ್ಟುಪ್ ಛಂದಃ । ಗಾಂಧಾರಃ ಸ್ವರಃ.

ರಾಜನ ಕರ್ತವ್ಯವನ್ನು ಇಲ್ಲಿ ಹೇಳಿದೆ.

**ವಿಹಿ ಹೋತ್ರಾ ಅವೀತಾ ವಿಪೋ ನ ರಾಯೋ ಅರ್ಯಃ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥೧॥**

**ಪದಾರ್ಥ:-** [**ವಾಯೋ**] ವಿದ್ಯಾವಂತನೇ! [**ವಿಪಃ**] ಬುದ್ಧಿವಂತನೇ! ನೀನು [**ಅರ್ಯಃ**] ವೈಶ್ಯನ [**ರಾಯಃ**] [**ನ**] ಸಂಪತ್ತಿಗೆ ಸಮನಾಗಿ [**ಅವೀತಾಃ**] ನಾಶರಹಿತ ಕಾರ್ಯಗಳನ್ನು [**ಹೋತ್ರಾಃ**] ಗ್ರಹಣ ಮಾಡಿ [**ವೀಹಿ**]

ವ್ಯಾಪ್ತನಾಗು. **[ಸುತಸ್ಯ]** ಸಿದ್ಧಪಡಿಸಿದ ಸೋಮರಸದ **[ಪೀತಯೇ]** ಪಾನ ಮಾಡುವುದಕ್ಕೆ **[ಚಂದ್ರೇಣ]** ಸುವರ್ಣ ಮಯ **[ರಥೇನ]** ರಥದಿಂದ **[ಆ, ಯಾಹಿ]** ಆಗಮಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ವೈಶ್ಯರು ಹೇಗೆ ಪ್ರೀತಿಯಿಂದ ಧನರಕ್ಷಣೆ ಮಾಡುವರೋ ಹಾಗೆ ನಿನ್ನ ಅಧಿಕಾರಿಗಳು ನಿರಂತರ ಪ್ರಜೆಗಳನ್ನು ಸೇವಿಸಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನಿರ್ಯುವಾಣೋ ಅಶಸ್ತೀ-ರ್ನಿಯುತ್ವಾ ಇಂದ್ರಸಾರಥಿಃ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥೨॥**

**ಪದಾರ್ಥ:-** **[ವಾಯೋ]** ವಾಯುವಿನಂತಿರುವ ರಾಜನೇ! ನೀನು **[ನಿಯುತ್ವಾನ್]** ನಿಯಮಿತ ಗಮನ ಮಾಡುವ ವಾಯುವಿನ **[ಇಂದ್ರ ಸಾರಥಿಃ]** ಸೂರ್ಯನ ಸಾರಥಿಯಂತೆ **[ಚಂದ್ರೇಣ]** ಸುವರ್ಣಮಯ **[ರಥೇನ]** ರಥದಿಂದ **[ಸುತಸ್ಯ]** ಸಾರಭೂತವಾದುದರ **[ಪೀತಯೇ]** ಪಾಲನೆ ಮಾಡುವುದಕ್ಕೆ **[ಆ, ಯಾಹಿ]** ಆಗಮಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ವಾಯುವು ಅಗ್ನಿಯನ್ನು ವೃದ್ಧಿ ಪಡಿಸುತ್ತ ಬೇಗನೇ ಚಲಿಸುತ್ತದೆಯೋ ಹಾಗೆ ನ್ಯಾಯಪಾಲಕ ರಾಜನು ಪ್ರಜೆಗಳಿಂದ ಬುದ್ಧಿಪಡೆದುಕೊಳ್ಳುವನು. ಮತ್ತು ಶತ್ರುರಹಿತನಾಗಿ ಎಲ್ಲರ ಪ್ರೀತಿಗೆ ಪಾತ್ರನಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅನು ಕೃಷ್ಣೇ ವಸುಧಿತೀ ಯೇಮಾತೇ ವಿಶ್ವಪೇಶಸಾ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥೩॥**

**ಪದಾರ್ಥ:-** **[ವಾಯೋ]** ರಾಜನೇ! **[ವಿಶ್ವಪೇಶಸಾ]** ಸಮಗ್ರ ರೂಪದಿಂದ **[ಕೃಷ್ಣೇ]** ಆಕರ್ಷಿಸಲಾದ **[ವಸುಧಿತೀ]** ಸಮಗ್ರಲೋಕ ಧಾರಕ ಭೂಮ್ಯಂತರಿಕ್ಷಗಳು **[ಅನು, ಯೇಮಾತೇ]** ನಿಯಮಯುಕ್ತವಾಗಿ ಚಲಿಸುತ್ತವೆ. ಹಾಗೇ **[ಸುತಸ್ಯ]** ಸಾರಭೂತವಾದುದರ **[ಪೀತಯೇ]** ರಕ್ಷಣೆ ಮಾಡುವುದಕ್ಕೆ **[ಚಂದ್ರೇಣ]** ಸುವರ್ಣಮಯ **[ರಥೇನ]** ರಥದಿಂದ **[ಆ, ಯಾಹಿ]** ಆಗಮಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಬಹುಫಲದಾಯಕ ಭೂಮಿ ಸೂರ್ಯರು ಹೇಗೆ ನಿಯಮಪೂರ್ವಕ ಚಲಿಸುವರೋ ಹಾಗೇ ನೀನು ವಿದ್ಯಾವಿನಯಗಳೊಂದಿಗೆ ನಿಯತವಾಗಿ ವರ್ತಿಸುವವನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಹಂತು ತ್ವಾ ಮನೋಯುಜೋ ಯುಕ್ತಾಸೋ ನವತಿರ್ನವ ।**
**ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯ ಪೀತಯೇ ॥೪॥**

**ಪದಾರ್ಥ:-** [**ವಾಯೋ**] ರಾಜನೇ! [**ಮನೋಯುಜಃ**] ಮನಸ್ಸಿಗೆ ಬ್ರಹ್ಮನಯೋಗ ಮಾಡಿಸುವ [**ಯುಕ್ತಾಸಃ**] ಯೌಗಿಕ ಕ್ರಿಯೆಯಿಂದ [**ನವ**] [**ನವತಿಃ**] ತೊಂಬತ್ತೊಂಬತ್ತು ಸಂಖ್ಯೆಯ ನಾಡಿಗಳಂತೆ [**ತ್ವಾ**] ನಿನ್ನನ್ನು [**ವಹಂತು**] ಪ್ರಾಪ್ತಗೊಳಿಸಲಿ. ನೀನು [**ಸುತಸ್ಯ**] ಹಿಂಡಿತೆಗೆದ ಸೋಮರಸದಂತೆ ಸತ್ವಯುಕ್ತವಾದುದರ [**ಪೀತಯೇ**] ಪಾಲನೆ ಮಾಡುವುದಕ್ಕೆ [**ಚಂದ್ರೇಣ**] ಸುವರ್ಣಮಯ [**ರಥೇನ**] ರಥದಿಂದ [**ಆ, ಯಾಹಿ**] ಆಗಮಿಸು.

**ಭಾವಾರ್ಥ:-** ರಾಜನೇ! ಶ್ರೇಷ್ಠ ವಿದ್ವಾಂಸರು ನಿನಗೆ ಸಹಾಯಕರಾಗಿದ್ದರೆ ನೀನು ಏನೇನು ಬಯಸುವಿಯೋ ಅವೆಲ್ಲ ಸಿದ್ಧವಾಗುತ್ತವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಾಯೋ ಶತಂ ಹರೀಣಾಂ ಯುವಸ್ವ ಪೋಷ್ಯಾಣಾಮ್ ।**
**ಉತ ವಾ ತೇ ಸಹಸ್ರಿಣೋ ರಥ ಆ ಯಾತು ಪಾಜಸಾ ॥೫॥**

**ಪದಾರ್ಥ:-** [**ವಾಯೋ**] ರಾಜನೇ! ನೀನು [**ಪೋಷ್ಯಾಣಾಂ**] ಪೋಷಣೆಗೆ ಯೋಗ್ಯವಾದ [**ಹರೀಣಾಂ**] ಮನುಷ್ಯರ [**ಶತಂ**] ನೂರನ್ನು [**ಯುವಸ್ವ**] ಕಾರ್ಯದಲ್ಲಿ ತೊಡಗಿಸು. [**ಉತ, ವಾ**] ಅಥವಾ [**ಸಹಸ್ರಿಣಃ**] ಅಸಂಖ್ಯರನ್ನು ಧನ ಸಂಪನ್ನರನ್ನಾಗಿಸು. [**ತೇ**] ನಿನ್ನ [**ಪಾಜಸಾ**] ಬಲದಿಂದ [**ರಥಃ**] ರಥದ ಮೂಲಕ [**ಆ, ಯಾತು**] ಆಗಮಿಸು.

**ಭಾವಾರ್ಥ:-** ರಾಜನೇ! ನೀನು ರಾಜ್ಯ ಶಾಸನ ಮಾಡಲು ಬಯಸುವುದಾದರೆ ಉತ್ತಮ ಸಹಾಯಕರನ್ನು ನಿಯಮಿಸಿಕೋ.

ಈ ಸೂಕ್ತದಲ್ಲಿ ರಾಜ ಗುಣದ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ನಲವತ್ತೆಂಟನೆಯ ಸೂಕ್ತ ಸಮಾಪ್ತ**

## ಸೂಕ್ತ ೪೯

ಮಂತ್ರಸಂಖ್ಯೆ ೬ । ವಾಮದೇವ ಋಷಿಃ । ಇಂದ್ರಾ ಬೃಹಸ್ಪತೀ ದೇವತೇ । ೧ ನಿಚೃದ್ಗಾಯತ್ರೀ, ೨-೬ ಗಾಯತ್ರೀ ಛಂದಃ। ಷಡ್ಜಃ ಸ್ವರಃ.

ಉತ ಷ್ಟ ಭಕ್ಷ್ಯ-ಪಾನ ಯೋಗ್ಯ ಪದಾರ್ಥದ ವಿಷಯವನ್ನು ಹೇಳಿದೆ.

**ಇದಂ ವಾಮಾಸ್ಯೇ ಹವಿಃ ಪ್ರಿಯಮಿಂದ್ರಾಬೃಹಸ್ಪತೀ । ಉಕ್ಥಂ ಮದಶ್ಚ ಶಸ್ಯತೇ ॥೧॥**

**ಪದಾರ್ಥ:-** [**ಇಂದ್ರಾಬೃಹಸ್ಪತೀ**] ಮಿಂಚು ಮತ್ತು ಸೂರ್ಯನಂತಿರುವ ರಾಜ ಮತ್ತು ಅಮಾತ್ಯರು [**ವಾಂ**] ನಿಮ್ಮಿಬ್ಬರ [**ಆಸ್ಯೇ**] ಬಾಯಿಯಲ್ಲಿ [**ಇದಂ**] ಈ [**ಪ್ರಿಯಂ**] ಪ್ರಿಯವಾದ [**ಉಕ್ಥಂ**] ಪ್ರಶಂಸಾರ್ಹ [**ಮದಃ**] ಆನಂದಕಾರಕ [**ಹವಿಃ ಚ**] ಭಕ್ಷ್ಯಯೋಗ್ಯ ವಸ್ತುವನ್ನು [**ಶಸ್ಯತೇ**] ಶಂಸನ ಮಾಡಲಾಗುತ್ತದೆ.

**ಭಾವಾರ್ಥ:-** ಹೇಗೆ ಉತ್ತಮಾನ್ನ ಭಕ್ಷಿಸುವೆವೋ ಹಾಗೆ ಉತ್ತಮ ರಸದ ಸೇವನೆಯನ್ನೂ ಮಾಡಬೇಕು.

ರಾಜ-ವಿದ್ವಾಂಸರ ವಿಷಯವನ್ನು ಹೇಳಲಾಗುತ್ತದೆ.

**ಅಯಂ ವಾಂ ಪರಿ ಷಿಚ್ಯತೇ ಸೋಮ ಇಂದ್ರಾಬೃಹಸ್ಪತೀ । ಚಾರುರ್ಮದಾಯ ಪೀತಯೇ ॥೨॥**

**ಪದಾರ್ಥ:-** [ಇಂದ್ರಾಬೃಹಸ್ಪತೀ] ರಾಜ ಮತ್ತು ವಿದ್ವಾಂಸರು [ವಾಂ] ನಿಮ್ಮಿಬ್ಬರ ಮುಖದಲ್ಲಿ [ಮದಾಯ] ಸಂತೋಷಕ್ಕಾಗಿ [ಪೀತಯೇ] ಪಾನ ಮಾಡಲು [ಚಾರುಃ] ಅತ್ಯುತ್ತಮ [ಸೋಮಃ] ಓಷಧಿರಸವನ್ನು [ಅಯಂ] ಈ [ಪರಿ] ಎಲ್ಲಾ ರೀತಿಯಿಂದ [ಸಿಚ್ಯತೇ] ಸಿಂಪಡಿಸಲಾಗುತ್ತದೆ.

**ಭಾವಾರ್ಥ:-** ಹೇಗೆ ಸಂಸ್ಕರಿಸಿದ ಅನ್ನ ಸೇವಿಸಲಾಗುತ್ತದೆಯೋ ಹಾಗೆಯೇ ಸಂಸ್ಕರಿಸಿದ ರಸ ಸೇವನೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ನ ಇಂದ್ರಾಬೃಹಸ್ಪತೀ ಗೃಹಮಿಂದ್ರಶ್ಚ ಗಚ್ಛತಮ್ । ಸೋಮಪಾ ಸೋಮಪೀತಯೇ ॥೩॥**

**ಪದಾರ್ಥ:-** [ಸೋಮಪಾ] ಸೋಮರಸ ಪಾನಮಾಡುವವರು [ಇಂದ್ರಾಬೃಹಸ್ಪತೀ] ರಾಜ ಮತ್ತು ಅಧ್ಯಾಪಕರಿಬ್ಬರೂ [ನಃ] ನಮ್ಮ [ಗೃಹಂ] ಮನೆಗೆ [ಸೋಮಪೀತಯೇ] ಸೋಮಪಾನ ಮಾಡಲು [ಆ, ಗಚ್ಛತಂ] ಆಗಮಿಸಲಿ. [ಇಂದ್ರಃ] ಐಶ್ವರ್ಯವಂತನೂ [ಚ] ಆಗಮಿಸಲಿ.

**ಭಾವಾರ್ಥ:-** ರಾಜ, ಮಂತ್ರಿ, ವಿದ್ವಾಂಸರೇ! ನಾವು ಹೇಗೆ ನಿಮ್ಮನ್ನು ಆಹ್ವಾನಿಸಿ ಅನ್ನಾದಿಗಳಿಂದ ಸತ್ಕರಿಸುವೆವೋ ನೀವು ಹಾಗೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮೇ ಇಂದ್ರಾಬೃಹಸ್ಪತೀ ರಯಿಂ ಧತ್ತಂ ಶತಗ್ವಿನಮ್ । ಅಶ್ವಾವಂತಂ ಸಹಸ್ರಿಣಮ್ ॥೪॥**

**ಪದಾರ್ಥ:-** [ಇಂದ್ರಾ ಬೃಹಸ್ಪತೀ] ಮಿಂಚು ಸೂರ್ಯನಂತಿರುವ ರಾಜ ಮತ್ತು ಅಮಾತ್ಯರೇ! ನೀವು [ಅಸ್ಮೆ] ನಮಗೆ [ಶತಗ್ವಿನಂ] ಅಸಂಖ್ಯ ಗೋವುಗಳನ್ನು ಮತ್ತು [ಅಶ್ವಾವಂತಂ] ಉತ್ತಮ ಅಶ್ವವಿರುವವರನ್ನು [ಸಹಸ್ರಿಣಂ] ಮಿತಿಯಿಲ್ಲದಷ್ಟು [ರಯಿಂ] ಸಂಪತ್ತನ್ನು [ಧತ್ತ] ಧಾರಣ ಮಾಡಿಸಿರಿ.

**ಭಾವಾರ್ಥ:-** ರಾಜರು ತಮ್ಮ ಪ್ರಜೆಗಳಿಗೆ ಧನ-ವಿದ್ಯೆಗಳನ್ನು ಧಾರಣ ಮಾಡಿಸಿದರೆ ಅವರು ಪ್ರಶಂಸಾರ್ಹರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಾಬೃಹಸ್ಪತೀ ವಯಂ ಸುತೇ ಗೀರ್ಭಿರ್ಹವಾಮಹೇ । ಅಸ್ಯ ಸೋಮಸ್ಯ ಪೀತಯೇ ॥೫॥**

**ಪದಾರ್ಥ:-** [ಇಂದ್ರಾಬೃಹಸ್ಪತೀ] ಅಧ್ಯಾಪಕೋಪದೇಶಕರೇ! [ವಯಂ] ನಾವು [ಗೀರ್ಭಿಃ] ವಚನಗಳಿಂದ [ಅಸ್ಯ] ಈ [ಸೋಮಸ್ಯ] ಸೋಮರಸದ [ಪೀತಯೇ] ಪಾನ ಮಾಡಲು [ಹವಾಮಹೇ] ಕರೆಯುವೆವು. [ಸುತೇ] ರಸ ತಯಾರಾದ ಮೇಲೆ ಸ್ವೀಕರಿಸಿರಿ.

**ಭಾವಾರ್ಥ:-** ರಾಜ ಮತ್ತು ಪ್ರಜೆಗಳು ಪರಸ್ಪರ ಸಹಕಾರದಿಂದ ಅತಿಶಯ ಸಂಪತ್ತನ್ನು ವೃದ್ಧಿಪಡಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸೋಮಮಿಂದ್ರಾಬೃಹಸ್ಪತೀ ಪಿಬತಂ ದಾಶುಷೇ ಗೃಹೇ । ಮಾದಯೇಥಾಂ ತದೋಕಸಾ ॥೬॥**

**ಪದಾರ್ಥ:-** **[ತದೋಕಸಾ]** ಆಸ್ಥಾನ ಪಡೆದವರು **[ಇಂದ್ರಾಬೃಹಸ್ಪತೀ]** ರಾಜ ಮತ್ತು ಅಮಾತ್ಯರು **[ದಾಶುಷಃ]** ದಾನಶೀಲನ **[ಗೃಹೇ]** ಮನೆಯಲ್ಲಿ **[ಸೋಮಂ]** ಸೋಮರಸವನ್ನು **[ಪಿಬತಂ]** ಪಾನ ಮಾಡಬೇಕು; **[ಮಾದಯೇಥಾಂ]** ನಮಗೆ ಆನಂದಗೊಳಿಸಬೇಕು.

**ಭಾವಾರ್ಥ:-** ರಾಜಪುರುಷರು ಸ್ವತಃ ವಿದ್ಯಾವಂತರೂ ಧಾರ್ಮಿಕರೂ ನ್ಯಾಯಪಾಲಕರೂ ಆಗಿ ಆನಂದಿಸಬೇಕು; ಪ್ರಜೆಗಳನ್ನೂ ಸಹ ತಮ್ಮಂತೆಯೇ ಮಾಡಬೇಕು.

ಈ ಸೂಕ್ತದಲ್ಲಿ ರಾಜ ಮತ್ತು ಪ್ರಜೆಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ನಲವತ್ತೊಂಬತ್ತನೆಯ ಸೂಕ್ತ ಸಮಾಪ್ತ**

## ಸೂಕ್ತ ೫೦

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ೧-೯ ಬೃಹಸ್ಪತಿಃ, ೧೦, ೧೧ ಇಂದ್ರಾಬೃಹಸ್ಪತೀ ದೇವತೇ । ೧-೩, ೬, ೭, ೯ ನಿಚೃತ್ರಿಷ್ಟುಪ್, ೫, ೪, ೧೧ ವಿರಾಟ್ತ್ರಿಷ್ಟುಪ್, ೮, ೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ವಿದ್ವಾಂಸರ ಗುಣಗಳನ್ನು ಇಲ್ಲಿ ಹೇಳಲಾಗಿದೆ.

**ಯಸ್ತಸ್ತಂಭ ಸಹಸಾ ವಿ ಜ್ಮೋ ಅಂತಾನ್ ಬೃಹಸ್ಪತಿಸ್ತ್ರಿಷಧಸ್ಥೋ ರವೇಣ ।**
**ತಂ ಪ್ರತ್ನಾಸ ಋಷಯೋ ದೀಧ್ಯಾನಾಃ ಪುರೋ ವಿಪ್ರಾ ದಧಿರೇ ಮಂದ್ರಜಿಹ್ವಮ್ ॥೧॥**

**ಪದಾರ್ಥ:-** **[ತ್ರಿಷಧಸ್ಥಃ]** ಕರ್ಮ, ಜ್ಞಾನ, ಉಪಾಸನೆಗಳೆಂಬ ಮೂರು ಸಮಾನಸ್ಥಾನದಲ್ಲಿರುವ **[ಬೃಹಸ್ಪತಿಃ]** ಮಹತ್ ಪದಾರ್ಥಗಳ ಪಾಲಕ ಸೂರ್ಯನು **[ಸಹಸಾ]** ಬಲದಿಂದ **[ಜ್ಮಃ]** ಭೂಮಿಯ **[ಅಂತಾನ್]** ಸಮೀಪವನ್ನು **[ವಿ, ತಸ್ತಂಭ]** ಸ್ತಂಬನಗೊಳಿಸಿರುವನು. **[ಯಃ]** ಯಾವ ವಿದ್ವಾಂಸನು **[ರವೇಣ]** ಉಪದೇಶದಿಂದ **[ತಂ]** ಅದನ್ನು **[ಮಂದ್ರಜಿಹ್ವಂ]** ಮಧುರ ವಾಗಿಂದ್ರಿಯವಿರುವವನನ್ನು **[ಪುರಃ]** ನಗರಗಳನ್ನು **[ದೀಧ್ಯಾನಾಃ]** ಪ್ರಕಟಗೊಳಿಸುತ್ತ **[ಪ್ರತ್ನಾಸಃ]** ಪ್ರಾಚೀನವಿದ್ಯೆ ಕಲಿತವರ **[ಋಷಯಃ]** ಮಂತ್ರಾರ್ಥ ಬಲ್ಲವರ **[ವಿಪ್ರಾಃ]** ಬುದ್ಧಿವಂತರ **[ದಧಿರೇ]** ಧಾರಣ ಮಾಡಿರುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಸೂರ್ಯನು ಹೇಗೆ ತನ್ನ ಆಕರ್ಷಣ ಶಕ್ತಿಯಿಂದ ಭೂಮಿಯನ್ನು ಭೂಗೋಳಕ್ಕೆ ಸಂಬಂಧಿಸಿದ ಎಲ್ಲಾ ಪದಾರ್ಥಗಳನ್ನು ಧಾರಣ ಮಾಡಿರುವನೋ ಹಾಗೆ ವಿದ್ಯಾವಂತರು ತನ್ನ ಜ್ಞಾನಶಕ್ತಿಯಿಂದ ಎಲ್ಲಾ ಮನುಷ್ಯರನ್ನಾಕರ್ಷಿಸಿ ಅವರ ಅಂತಃಕರಣವನ್ನು ಪ್ರಚೋದಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಧುನೇತಯಃ ಸುಪ್ರಕೇತಂ ಮದಂತೋ ಬೃಹಸ್ಪತೇ ಅಭಿ ಯೇ ನಸ್ತತಸ್ರೇ ।**
**ಪೃಷಂತಂ ಸೃಪ್ರಮದಬ್ಧಮೂರ್ವಂ ಬೃಹಸ್ಪತೇ ರಕ್ಷತಾದಸ್ಯ ಯೋನಿಮ್ ॥೨॥**

**ಪದಾರ್ಥ:-** **[ಬೃಹಸ್ಪತೇ]** ಶ್ರೇಷ್ಠವಾಣಿಯ ಪಾಲಕನೇ! **[ಯೇ]** ಯಾರು **[ಮದಂತಃ]** ಆನಂದವನ್ನು ಕೊಡುತ್ತ **[ಧುನೇತಯಃ]** ಧರ್ಮಾತ್ಮರಿಗೆ ಕಷ್ಟಕೊಡುವವರನ್ನು ನಡುಗಿಸುತ್ತ **[ಸುಪ್ರಕೇತಂ]** ಸೂಕ್ಷ್ಮಬುದ್ಧಿಯವನು **[ಪೃಷಂತಂ]** ವಿದ್ಯಾದಿ ಉತ್ತಮಗುಣಗಳನ್ನೆರೆಯುತ್ತ **[ಸುಪ್ರಂ]** ಉತ್ತಮಗುಣಗಳನ್ನು ಪಡೆದ **[ಅದಬ್ಧಂ]** ದಮನಿಸದ **[ಊರ್ವಂ]** ಹಿಂಸಕರನ್ನು **[ತತಸ್ರೇ]** ನಾಶಗೊಳಿಸುವನು. **[ನಃ]** ನಮ್ಮನ್ನು **[ಅಭಿ]** ಸುತ್ತಲೂ ನಿವಾರಣೆ ಮಾಡು. **[ಬೃಹಸ್ಪತೇ]** ಬೃಹತ್‌ವಸ್ತುಗಳ ಪಾಲಕನೇ! **[ಅಸ್ಯ]** ಈ ವ್ಯವಹಾರದ **[ಯೋನಿಂ]** ಕಾರಣವನ್ನು **[ರಕ್ಷತಾತ್]** ರಕ್ಷಣೆ ಮಾಡು.

**ಭಾವಾರ್ಥ:-** ಮನುಷ್ಯರು ದುಷ್ಟರನ್ನು ದಮನಿಸಿ ಧಾರ್ಮಿಕರನ್ನುದ್ಧರಿಸಿ ಸಾಂಗೋಪಾಂಗ ಜ್ಞಾನರಾಶಿಯನ್ನು ಬೆಳಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬೃಹಸ್ಪತೇ ಯಾ ಪರಮಾ ಪರಾವ-ದತ ಆ ತ ಋತಸ್ಪೃಶೋ ನಿ ಷೇದುಃ ।**
**ತುಭ್ಯಂ ಖಾತಾ ಅವತಾ ಅದ್ರಿದುಗ್ಧಾ ಮಧ್ವಃ ಶ್ಚೋತಂತ್ಯಭಿತೋ ವಿರಪ್ಶಮ್ ॥೩॥**

**ಪದಾರ್ಥ:-** **[ಬೃಹಸ್ಪತೇ]** ಬೃಹತ್ಪಾಲಕನೇ! **[ತೇ]** ನಿನ್ನ **[ಯಾ]** ಯಾವ **[ಪರಮಾ]** ಉತ್ತಮ ನೀತಿಯೋ ಅದರಿಂದ **[ಋತಸ್ಪೃಶಃ]** ಸತ್ಯಸ್ಪರ್ಶಕನಾದ ನಿನ್ನ **[ಅದ್ರಿದುಗ್ಧಾಃ]** ಮೇಘದಿಂದ **[ಖಾತಾಃ]** ಹಳ್ಳಮಾಡಿದ **[ಮಧ್ವಃ]** ಮಧುರಜಲಯುಕ್ತ **[ಅಕ್ತಾಃ]** ರೂಪವು **[ತುಭ್ಯಂ]** ನಿನಗೆ **[ಅಭಿತಃ]** ಎಲ್ಲ ಕಡೆಯಿಂದ **[ಶ್ಚೋತಂತಿ]** ಸಿಂಪಡಿಸುವನು. **[ವಿರಪ್ಶಂ]** ಮಹತ್ ಪ್ರಪಂಚವನ್ನು **[ಆ, ನಿಷೇದುಃ]** ಸರ್ವಥಾ ಸ್ಥಿರಗೊಳಿಸು. **[ಅತಃ]** ಆದ್ದರಿಂದ **[ಪರಾವತ್]** ಗೌರವಿಸು.

**ಭಾವಾರ್ಥ:-** ಮನುಷ್ಯರೇ! ನೀವೆಲ್ಲರೂ ವಿದ್ಯಾವೃದ್ಧರಿಂದ ರಾಜರಿಂದ ಅನಾದಿ ಸಿದ್ಧ ವಿದ್ಯೆ ಮತ್ತು ನೀತಿಗಳನ್ನು ಗ್ರಹಣಮಾಡಿ ಮೇಘವು ಮಳೆಗರೆಯುವಂತೆ ಪ್ರಜೆಗಳಿಗೆ ಸುಖವೆರೆಯಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬೃಹಸ್ಪತಿಃ ಪ್ರಥಮಂ ಜಾಯಮಾನೋ ಮಹೋ ಜ್ಯೋತಿಷಃ ಪರಮೇ ವ್ಯೋಮನ್ ।**
**ಸಪ್ತಾಸ್ಯಸ್ತುವಿಜಾತೋ ರವೇಣ ವಿ ಸಪ್ತರಶ್ಮಿರಧಮತ್ತಮಾಂಸಿ ॥೪॥**

**ಪದಾರ್ಥ:-** **[ಪರಮೇ]** ಶ್ರೇಷ್ಠ **[ವ್ಯೋಮನ್]** ವ್ಯಾಪಕ **[ಮಹಃ]** ಮಹತ್ತರ **[ಜ್ಯೋತಿಷಃ]** ಬೆಳಕು **[ಪ್ರಥಮಂ]** ಮೊದಲು **[ಜಾಯಮಾನಾಃ]** ಜನಿಸಿದ **[ಸಪ್ತಾಸ್ಯಃ]** ಏಳುಕಿರಣ ರೂಪ ಮುಖವಿರುವ **[ತುವಿಜಾತಃ]**

ಬಹು ಪ್ರಸಿದ್ಧ [**ಸಪ್ತರಶ್ಮಿಃ**] ಏಳು ರೀತಿಯ ಕಿರಣಗಳಿರುವ [**ಬೃಹಸ್ಪತಿಃ**] ವಿಸ್ತೃತ ಸೂರ್ಯನು [**ರವೇಣ**] ಗತಿಶಬ್ದದಿಂದ [**ತಮಾಂಸಿ**] ರಾತ್ರಿಗಳನ್ನು [**ವಿ, ಅಧಮತ್**] ನಿವಾರಿಸುವನು.

**ಭಾವಾರ್ಥ:-** ವಿದ್ವಾಂಸರೇ! ಸೂರ್ಯನಲ್ಲಿ ಹೇಗೆ ಏಳು ವಿಧ ತತ್ವಗಳಿವೆಯೋ ಆ ಕಿರಣಗಳ ಮೂಲಕ ಅವನು ಎಲ್ಲಾ ವಿಧ ರಸವನ್ನು ಸೆಳೆದುಕೊಳ್ಳುವನೋ, ಹಾಗೆಯೇ ಐದು ಜ್ಞಾನೇಂದ್ರಿಯಗಳು, ಹಾಗೂ ಮನಸ್ಸು ಆತ್ಮಗಳೆಂಬ ಇಂದ್ರಿಯಗಳ ಮೂಲಕ ವಿದ್ಯೆಯನ್ನು ಗ್ರಹಣ ಮಾಡಿ ಪಾಠನೋಪದೇಶಗಳ ಮೂಲಕ ಅಜ್ಞಾನವೆಂಬ ಕತ್ತಲನ್ನು ನಿವಾರಣೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಸುಷ್ಟುಭಾ ಸ ಋಕ್ವತಾ ಗಣೇನ ವಲಂ ರುರೋಜ ಫಲಿಗಂ ರವೇಣ ।**
**ಬೃಹಸ್ಪತಿರುಸ್ರಿಯಾ ಹವ್ಯಸೂದಃ ಕನಿಕ್ರದದ್ವಾವಶತೀರುದಾಜತ್ ॥೫॥**

**ಪದಾರ್ಥ:-** [**ಸಃ**] ಅವನು [**ಹವ್ಯಸೂದಃ**] ಹವಿಸ್ಸುಗಳನ್ನು ಸೂಕ್ಷ್ಮಗೊಳಿಸುವವನು [**ಕನಿಕ್ರತ್**] ಶುದ್ಧಿಗೊಳಿಸುತ್ತ [**ಬೃಹಸ್ಪತಿಃ**] ಬೃಹತ್ವಸ್ತುಗಳ ಪಾಲಕ ಸೂರ್ಯನು [**ಸುಷ್ಟುಭಾ**] ಪ್ರಶಂಸಿತ [**ಗಣೇನ**] ಕಿರಣ ಸಮೂಹದಿಂದ [**ಫಲಿಗಂ**] ಮೇಘವನ್ನು [**ರುರೋಜ**] ಭಂಗಗೊಳಿಸುವನು. [**ಸಃ**] ಅವನು [**ಋಕ್ವತಾ**] ಉಪದೇಶ ಯೋಗ್ಯ ವಿದ್ಯಾರ್ಥಿ ಸಮೂಹದಿಂದ ಮಾಡಲಾದ [**ರವೇಣ**] ಮಂತ್ರೋಚ್ಚಾರಣೆಯ ಶಬ್ದದಿಂದ [**ವಲಂ**] ಕುಟಿಲ ನೀತಿಯನ್ನು ಭಂಗಗೊಳಿಸಲಿ. [**ಉಸ್ರಿಯಾಃ**] ಭೂಮಿಯಲ್ಲಿರುವ [**ವಾವಶತೀಃ**] ಪ್ರಜೆಗಳನ್ನು [**ಉತ್, ಆಜತ್**] ಪ್ರಾಪ್ತನಾಗುವನು.

**ಭಾವಾರ್ಥ:-** ಸೂರ್ಯನು ಮಳೆಗರೆದು ಎಲ್ಲಾ ಪ್ರಜೆಗಳ ರಕ್ಷಣೆ ಮಾಡುವನು. ಮಿಂಚಿನ ಶಬ್ದದಿಂದ ಎಲ್ಲವನ್ನೂ ಅರಿತುಕೊಳ್ಳುವನು. ಅದೇ ರೀತಿ ವಿದ್ವಾಂಸರು ವಿದ್ಯೆಯ ಉಪದೇಶದಿಂದ ಎಲ್ಲರನ್ನೂ ಸಂತುಷ್ಟಪಡಿಸಬೇಕು ಮತ್ತು ಆತ್ಮಜ್ಞಾನವನ್ನು ಮಾಡಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ ।**
**ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಮ್ ॥೬॥**

**ಪದಾರ್ಥ:-** [**ಬೃಹಸ್ಪತೇ**] ಬೃಹದ್ವಸ್ತುಗಳ ಪಾಲಕನೇ! [**ಯಜ್ಞೈಃ**] ಮೇಳನ ರೂಪ ಕೆಲಸವನ್ನು [**ವಿಶ್ವದೇವಾಯ**] ಸಮಗ್ರ ಪ್ರಪಂಚವನ್ನು ಬೆಳಗಿಸುವ [**ವೃಷ್ಣೇ**] ವೃಷ್ಟಿಕಾರಕ [**ಪಿತ್ರೇ**] ಪಾಲನೆ ಮಾಡುವ ಸೂರ್ಯನಿಗೆ [**ನಮಸಾ**] ಅನ್ನಾದಿಗಳಿಂದ [**ಹವಿರ್ಭಿಃ**] ಗ್ರಹಣಯೋಗ್ಯ ದ್ರವ್ಯಗಳಿಂದ [**ವಿಧೇಮ**] ಕ್ರಿಯಾವಿಧಾನ ಮಾಡೋಣ. [**ಸುಪ್ರಜಾಃ**] ಉತ್ತಮ ಪ್ರಜೆಗಳಿರುವ [**ವೀರವಂತಃ**] ಪರಾಕ್ರಮಿಗಳಾದಿ [**ವಯಂ**] ನಾವು [**ರಯೀಣಾಂ**] ಸಂಪತ್ತಿನ [**ಪತಯಃ**] ಒಡೆಯರು [**ಸ್ಯಾಮ**] ಆಗೋಣ. [**ಏವ**] ಹಾಗೇ ನೀವೂ ಆಗಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ಸೂರ್ಯನು ಹೇಗೆ ಮೇಘಾಲಂಕಾರದಿಂದ ಎಲ್ಲರ ಪಾಲನೆ ಮಾಡುವನೋ, ಅದೇ ರೀತಿ ನಾವೂ ವರ್ತಿಸೋಣ; ಶ್ರೇಷ್ಠ ಪುರುಷರಾಗೋಣ; ರಾಜ್ಯದೊಡೆಯರಾಗೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಇದ್ರಾಜಾ ಪ್ರತಿಜನ್ಯಾನಿ ವಿಶ್ವಾ ಶುಷ್ಮೇಣ ತಸ್ಥಾವಭಿ ವೀರ್ಯೇಣ ।**
**ಬೃಹಸ್ಪತಿಂ ಯಃ ಸುಭೃತಂ ಬಿಭರ್ತಿ ವಲ್ಗೂಯತಿ ವಂದತೇ ಪೂರ್ವಭಾಜಮ್ ॥೭॥**

**ಪದಾರ್ಥ:-** [ಯಃ] ಯಾವನು [ಸುಭೃತಂ] ಉತ್ತಮ ಧಾರಣಮಾಡಲಾದ [ಬೃಹಸ್ಪತಿಂ] ಬೃಹದ್ವಸ್ತುಗಳ ಒಡೆಯ [ಪೂರ್ವಭಾಜಂ] ಪ್ರಾಚೀನರಿಂದ ಸೇವಾಯೋಗ್ಯ ಜ್ಞಾನವನ್ನು [ಬಿಭರ್ತಿ] ಧಾರಣ ಮಾಡುವನೋ, [ವಲ್ಗೂಯತಿ] ಗೌರವಿಸುವನೋ, [ವಂದತೇ] ಬಯಸುವನೋ, [ವೀರ್ಯೇಣ] ಪರಾಕ್ರಮದಿಂದ [ವಿಶ್ವಾ] ಸಮಗ್ರ [ಪ್ರತಿಜನ್ಯಾನಿ] ಪ್ರತ್ಯಕ್ಷ ಜನ್ಯ ಪದಾರ್ಥಗಳ [ಅಭಿ] ಅಭಿಮುಖವಾಗಿ [ತಸ್ಥೌ] ನಿಂತಿರುವನೋ [ಸಃ, ಇತ್] ಅವನೇ [ರಾಜಾ] ರಾಜನಾದ ಜಗದೀಶ್ವರನು.

**ಭಾವಾರ್ಥ:-** ಮನುಷ್ಯರೇ! ಪರಮಾತ್ಮನು ಸಂಪೂರ್ಣ ಜಗತ್ತಿಗೆ ಅಭಿಮುಖವಾಗಿದ್ದು ಎಲ್ಲವನ್ನೂ ಧಾರಣ ಮಾಡಿರುವನು. ಸಮಗ್ರ ವೇದಗಳನ್ನು ಉಪದೇಶ ಮಾಡಿ ಪ್ರಶಂಸಾರ್ಹನಾಗಿರುವನು. ಅವನನ್ನೇ ಎಲ್ಲರೂ ಪ್ರತಿದಿನ ಉಪಾಸನೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಇತ್ ಕ್ಷೇತಿ ಸುಧಿತ ಓಕಸಿ ಸ್ವೇ ತಸ್ಮಾ ಇಳಾ ಪಿನ್ವತೇ ವಿಶ್ವದಾನೀಮ್ ।**
**ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ ॥೮॥**

**ಪದಾರ್ಥ:-** [ಸಃ, ಇತ್] ಅವನೇ [ಸುಧಿತಃ] ಸಂತೃಪ್ತನು. [ಸ್ವೇ] ತನ್ನ [ಓಕಸಿ] ನಿವಾಸ ಸ್ಥಾನದಲ್ಲಿ [ಕ್ಷೇತಿ] ನೆಲೆಸಿರುವನು. [ವಿಶ್ವದಾನೀಂ] ಎಲ್ಲಾ ಕಾಲದಲ್ಲೂ [ತಸ್ಮೈ] ಅವನಿಗೆ [ಇಳಾ] ಪ್ರಶಂಸಾತ್ಮಕ ನುಡಿಯನ್ನು [ಪಿನ್ವತೇ] ಅರ್ಪಿಸುವ/ಸೇವಿಸುವ [ಯಸ್ಮಿನ್] ಯಾವ [ರಜನಿ] ಪ್ರಕಾಶಮಾನ ಪರಮಾತ್ಮನಲ್ಲಿ [ಬ್ರಹ್ಮಾ] ಚತುರ್ವೇದಗಳನ್ನರಿತಿರುವ [ಪೂರ್ವಾ] ಅನಾದಿಯಾದವನು [ಪ್ರಥಮಂ] ಮೊದಲು [ಏತಿ] ಪ್ರಾಪ್ತನಾಗುವನು. [ತಸ್ಮೈ] ಅವನಿಗೆ [ವಿಶಃ] ಪ್ರಜೆಗಳು [ಸ್ವಯಂ ಏಷಾ] ತಾವೇ ಸ್ವತಃ [ನಮಂತೇ] ನಮಿಸುವರು.

**ಭಾವಾರ್ಥ:-** ಮನುಷ್ಯರೇ! ನೀವು ಅನ್ಯವೆಲ್ಲವನ್ನೂ ಬಿಟ್ಟು ಏಕಮಾತ್ರ ಪರಮಾತ್ಮನ ಉಪಾಸನೆ ಮಾಡಿದರೆ ಸಂಪತ್ತು, ರಾಜ್ಯ, ಪ್ರತಿಷ್ಠೆ ಎಲ್ಲವೂ ತಾವಾಗಿಯೇ ಒಲಿದು ನಿಮ್ಮನ್ನು ಸಮೀಪಿಸುವವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಪ್ರತೀತೋ ಜಯತಿ ಸಂ ಧನಾನಿ ಪ್ರತಿಜನ್ಯಾನ್ಯುತ ಯಾ ಸಜನ್ಯಾ ।**
**ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ ॥೯॥**

**ಪದಾರ್ಥ:-** [ಯಃ] ಯಾವನು [ಅಪ್ರತೀತಃ] ಅಪರಾಜಿತನು [ರಾಜಾ] ರಕ್ಷಕನು [ಅವಸೇ] ರಕ್ಷಣೆ ಮಾಡಲು ಬಯಸುತ್ತ [ಬ್ರಹ್ಮಣೇ] ಬ್ರಹ್ಮನಿಗೆ [ವರಿವಃ] ಅರ್ಚಿಸಲು [ಕೃಣೋತಿ] ಪ್ರಯತ್ನಿಸುವನೋ [ತಂ] ಅವನನ್ನು [ದೇವಾಃ] ದಿವ್ಯಗುಣ ಸಂಪನ್ನರು [ಅವಂತಿ] ರಕ್ಷಿಸುವರು. [ಯಾ] ಯಾವ [ಸಜನ್ಯಾ] ಸಮಾನ ಜನ್ಯ

ಪದಾರ್ಥಗಳೊಂದಿಗಿರುವ **[ಉತ್]** ಹಾಗೇ **[ಪ್ರತಿಜನ್ಯಾನಿ]** ಅದನ್ನನುಸರಿಸಿ ಜನ್ಯವಾದ ಧನಾದಿ ಪದಾರ್ಥಗಳ **[ಧನಾನಿ]** ಸಂಪತ್ತುಗಳು **[ಸಂ, ಜಯತಿ]** ಉತ್ತಮ ಜಯಸಾಧಿಸುತ್ತವೆ.

**ಭಾವಾರ್ಥ:-** ಮನುಷ್ಯರೇ! ಯಾವನು ಪರಮಾತ್ಮನ ಉಪಾಸನೆಯನ್ನೇ ಮಾಡುವನೋ ಅಂತಹ ಯಥಾರ್ಥ ಜ್ಞಾನಿಯು ಯಾರಿಂದಲೂ ನಾಶಕ್ಕೊಳಗಾಗದಂತಹ ಸಾಮ್ರಾಜ್ಯ ಸಂಪತ್ತನ್ನು ಪಡೆದು ಸರ್ವದಾ ವಿಜಯಿಯಾಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇಽಸ್ಮಿನ್ ಯಜ್ಞೇ ಮಂದಸಾನಾ ವೃಷಣ್ವಸೂ ।**
**ಆ ವಾಂ ವಿಶಂತ್ವಿಂದವಃ ಸ್ವಾಭುವೋಽ ಸ್ಮೇ ರಯಿಂ ಸರ್ವವೀರಂ ನಿ ಯಚ್ಛತಮ್ ॥೧೦॥**

**ಪದಾರ್ಥ:-** **[ಬೃಹಸ್ಪತೇ]** ಪರಿಪೂರ್ಣ ವಿದ್ವಾಂಸನೇ! **[ಇಂದ್ರಃ, ಚ]** ಐಶ್ವರ್ಯವಂತನೇ! **[ಮಂದಸಾನಾಃ]** ಆನಂದಸಂಪನ್ನನಾಗಿ **[ವೃಷಣ್ವಸು]** ಬಲಿಷ್ಠರಲ್ಲಿ ನೆಲೆಸಿರುವ ನೀನು **[ಅಸ್ಮಿನ್]** ಈ **[ಯಜ್ಞೇ]** ಸೃಷ್ಟಿಯಜ್ಞದಲ್ಲಿ **[ಸೋಮಂ]** ಸೋಮರಸವನ್ನು **[ಪಿಬತಂ]** ಸೇವಿಸುವವರಾಗಿರಿ. **[ಸ್ವಾಭುವಃ]** ತನ್ನಿಂದ ಉತ್ಪನ್ನವಾದ **[ಇಂದವಃ]** ಸಂಪತ್ತುಗಳು **[ವಾಂ]** ನಿಮ್ಮಿಬ್ಬರಿಗೂ **[ಆ, ವಿಶಂತು]** ಲಭಿಸಲಿ. **[ಅಸ್ಮೇ]** ನಮಗೆ **[ಸರ್ವವೀರಂ]** ಎಲ್ಲಾ ಸಾಧಿಸುವ **[ರಯಿಂ]** ಸಿರಿಯನ್ನು **[ನಿ, ಯಚ್ಛತಂ]** ನಿವೀಬ್ಬರೂ ಅನುಗ್ರಹಿಸಿರಿ.

**ಭಾವಾರ್ಥ:-** ಪಾಲಕ ಬೋಧಕರೇ! ನೀವು ಮದಕಾರಕ ವಸ್ತುಗಳನ್ನು ಸೇವಿಸದಿರಿ. ರಾಜ್ಯದ ಪಾಲನೆ ಮತ್ತು ಸತ್ಯದ ಉಪದೇಶವನ್ನು ಮಾಡಿರಿ. ಅದರಿಂದ ಪ್ರಜೆಗಳು ಆನಂದಿಸಲಿ. ಅವರಿಗೆ ಸಿರಿಯನ್ನನುಗ್ರಹಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬೃಹಸ್ಪತ ಇಂದ್ರ ವರ್ಧತಂ ನಃ ಸಚಾ ಸಾ ವಾಂ ಸುಮತಿರ್ಭೂತ್ವಸ್ಮೇ ।**
**ಅವಿಷ್ಟಂ ಧಿಯೋ ಜಿಗೃತಂ ಪುರಂಧೀ-ರ್ಜಜಸ್ತಮರ್ಯೋ ವನುಷಾಮರಾತೀಃ ॥೧೧॥**

**ಪದಾರ್ಥ:-** **[ಬೃಹಸ್ಪತೇ]** ಸಮಗ್ರ ವಿದ್ಯೆಯನ್ನು ಪಡೆದವನೇ! **[ಇಂದ್ರ]** ಐಶ್ವರ್ಯವಂತನೇ! **[ವಾಂ]** ನೀವಿಬ್ಬರೂ **[ಸುಮತಿಃ]** ಬುದ್ಧಿವಂತರು **[ಭೂತು]** ಆಗಿರಿ. **[ಸಾ]** ಆ ಬುದ್ಧಿಯು **[ವನುಷಾಂ]** ವಿಭಾಗಗೊಳಿಸುವ **[ನಃ]** ನಮ್ಮ **[ಸಚಾ]** ಸತ್ಯದೊಂದಿಗಿರುವವರನ್ನು **[ವರ್ಧತಂ]** ವೃದ್ಧಿ ಪಡಿಸಿರಿ. **[ಪುರಂಧೀಃ]** ಬಹು ವಿದ್ಯೆಯ ಧಾರಣ ಮಾಡುವ **[ಧಿಯಃ]** ಬುದ್ಧಿಶಕ್ತಿಗಳನ್ನು **[ಅವಿಷ್ಟಂ]** ಅನುಗ್ರಹಿಸಿರಿ. **[ಜಿಗೃತಂ]** ಉಪದೇಶ ಮಾಡಿರಿ **[ಅಸ್ಮೈ]** ನಮಗೆ ಪ್ರಾಪ್ತರಾಗಿರಿ. **[ಅರ್ಯಃ]** ಒಡೆಯರಾದ ನೀವಿಬ್ಬರೂ **[ಅರಾತೀಃ]** ನಮ್ಮ ಶತ್ರುಗಳನ್ನು **[ಜಜಸ್ತಂ]** ಧ್ವಂಸ ಮಾಡಿರಿ.

**ಭಾವಾರ್ಥ:-** ಮನುಷ್ಯರೇ! ವಿದ್ವಾಂಸರೊಂದಿಗೆ ಯಾವಾಗಲೂ ವಿದ್ಯೆ ಪಡೆಯಲು ಪ್ರಾರ್ಥಿಸಿರಿ. ವಿದ್ಯಾವಂತರೂ ಬುದ್ಧಿವಂತರೂ ಆಗಿರಿ. ಕಷ್ಟಗಳನ್ನು ನಿವಾರಣೆ ಮಾಡಿಕೊಳ್ಳಿರಿ.

ಈ ಸೂಕ್ತದಲ್ಲಿ ರಾಜ, ಪಾಲಕ, ಪ್ರಜೆಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತನೆಯ ಸೂಕ್ತ ಸಮಾಪ್ತ**

## ॥ ಇತಿ ಸಪ್ತಮೋಽಧ್ಯಾಯಃ ॥

# ಅಷ್ಟಮೋಽಧ್ಯಾಯಃ

## ಸೂಕ್ತ ೫೧

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಉಷಾ ದೇವತಾ । ೧, ೫, ೮ ತ್ರಿಷ್ಟುಪ್, ೩ ವಿರಾಟ್ತ್ರಿಷ್ಟುಪ್, ೪, ೬, ૭, ೯, ೧೧ ನಿಚೃತ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಪಂಕ್ತಿಃ, ೧೦ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಅಜ್ಞಾನಾಂಧಕಾರ ನಿವಾರಣೆಯ ಬಗೆಗೆ ಹೇಳಿದೆ.

**ಇದಮು ತ್ಯತ್ ಪುರುತಮಂ ಪುರಸ್ತಾ-ಜ್ಜ್ಯೋತಿಸ್ತಮಸೋ ವಯುನಾವದಸ್ಥಾತ್ ।**
**ನೂನಂ ದಿವೋ ದುಹಿತರೋ ವಿಭಾತೀ-ರ್ಗಾತುಂ ಕೃಣವನ್ನುಷಸೋ ಜನಾಯ ॥೧॥**

**ಪದಾರ್ಥಃ-** [ತ್ಯತ್] ಆ [ಇದಂ] ಈ [ಪುರುತಮಂ] ಬಹುವಿಧ [ಜ್ಯೋತಿಃ] ತೇಜಸ್ಸು [ವಯುನಾವತ್] ಪ್ರಜ್ಞಾನಕ್ಕೆ ಸದೃಶ [ತಮಸಃ] ರಾತ್ರಿಯಲ್ಲಿ [ಪುರಸ್ತಾತ್] ಮೊದಲು [ಅಸ್ಥಾತ್] ಇರುವುದು. [ದಿವಃ] ಪ್ರಕಾಶದ ಸಂಬಂಧದಿಂದ [ವಿಭಾತೀಃ] ಬೆಳಕು ನೀಡುತ್ತ [ದುಹಿತರಃ] ಕನ್ಯೆಯರಂತೆ ಇರುವ [ಉಷಸಃ] ಉಷೆಯು [ಜನಾಯ] ಮನುಷ್ಯರಿಗೆ [ಗಾತುಂ] ಭೂಮಿಯನ್ನು [ಉ] ಉತ ಷ್ಟವಾಗಿ [ನೂನಂ] ನಿಶ್ಚಯವಾಗಿಯೂ [ಕೃಣವತ್] ಮಾಡುವಳು.

**ಭಾವಾರ್ಥಃ-** ಮನುಷ್ಯರೇ! ನೀವು ಉಷಃಕಾಲವು ಕತ್ತಲನ್ನು ನಿವಾರಿಸಿ ಬೆಳಕು ಬೀರುವಂತೆ ಅಜ್ಞಾನವೆಂಬ ಕತ್ತಲನ್ನು ನಿವಾರಿಸಿ ಜ್ಞಾನದ ಬೆಳಕನ್ನು ಚೆಲ್ಲಿರಿ.

ಉಷೆಯ ವಿಷಯವನ್ನು ಹೇಳಲಾಗುತ್ತದೆ.

**ಅಸ್ಥುರು ಚಿತ್ರಾ ಉಷಸಃ ಪುರಸ್ತಾ-ನ್ಮಿತಾ ಇವ ಸ್ವರವೋಽ ಧ್ವರೇಷು ।**
**ವ್ಯೂ ವ್ರಜಸ್ಯ ತಮಸೋ ದ್ವಾರೋ-ಚ್ಛಂತೀರವ್ರಞ್ಛುಚಯಃ ಪಾವಕಾಃ ॥೨॥**

**ಪದಾರ್ಥಃ-** [ಉ] ಯಾವ ಕಾರಣದಿಂದ [ಅಧ್ವರೇಷು] ಗೃಹಸ್ಥಾಶ್ರಮದ ವ್ಯವಹಾರದಲ್ಲಿ [ಶುಚಯಃ] ಪವಿತ್ರ [ಪಾವಕಃ] ಪವಿತ್ರ ಕರ್ಮ ಮಾಡುವ [ಸ್ವರವಃ] ಪ್ರತಾಪಯುಕ್ತ [ಪುರಸ್ತಾತ್] ಮೊದಲಿನಿಂದ [ಮಿತಾಇವ] ಎಲ್ಲವನ್ನು ತಿಳಿದವರಂತಿರುವ [ಉಷಸಃ] ಪ್ರಾತಃಕಾಲದಂತೆ ಕನ್ಯೆಯರು [ವ್ರಜಸ್ಯ] ಪ್ರಾಪ್ತವಾದ [ತಮಸಃ] ಅಂಧಕಾರದ [ದ್ವಾರಾಃ] ಬಾಗಿಲನ್ನು [ವಿ, ಉಚ್ಛಂತೀಃ] ತೆರೆಯುವಳೋ ಎಂಬಂತೆ [ಚಿತ್ರಾಃ] ವಿಚಿತ್ರ ಸ್ವಭಾವದವರಾಗಿ [ಅಸ್ಥುಃ] ಇರುವರು. [ಉ] ಅವರನ್ನೇ [ಅವ್ರನ್] ಸ್ವೀಕರಿಸಿರಿ.

**ಭಾವಾರ್ಥಃ-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವಳು ಯುವತಿ ಮೇಘದಂತೆ ಗಂಭೀರ ಶಬ್ದದವಳು, ಮಿತಭಾಷಿಣಿ, ಪವಿತ್ರಳು, ವಿದ್ಯಾವತಿಯು ಅವಳನ್ನೇ ಮೊದಲು ಪರೀಕ್ಷಿಸಿ ಮದುವೆಯಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಚ್ಛಂತೀರದ್ಯ ಚಿತಯಂತ ಭೋಜಾನ್ ರಾಧೋದೇಯಾಯೋಷಸೋ ಮಘೋನೀಃ ।**
**ಅಚಿತ್ರೇ ಅಂತಃ ಪಣಯಃ ಸಸಂ-ತ್ವಬುಧ್ಯಮಾನಾಸ್ತಮಸೋ ವಿಮಧ್ಯೇ ॥೩॥**

**ಪದಾರ್ಥ:-** [**ತಮಸಃ**] ರಾತ್ರಿಯ [**ಅಚಿತ್ರೇ**] ಆಶ್ಚರ್ಯರಹಿತ [**ವಿಮಧ್ಯೇ**] ವಿಶೇಷಾಂಧಕಾರದಲ್ಲಿ [**ಉಷಸಃ**] ಪ್ರಾತಃಕಾಲದಂತೆ [**ಮಘೋನೀಃ**] ಧನವತೀ ಯುವತಿಯರು [**ಉಚ್ಛಂತೀಃ**] ಉತ್ತಮ ವಸತಿಕೊಡುತ್ತ [**ಅಂತಃ**] ಮಧ್ಯದಲ್ಲಿ [**ಅಬುಧ್ಯಮಾನಾಃ**] ಬೋಧರಹಿತರು [**ಪಣಯಃ**] ಪ್ರಶಂಸಾರ್ಹರು [**ಸಸಂತು**] ಸುಖದಿಂದ ನಿದ್ರಿಸುವರು. [**ರಾಧೋದೇಯಾಯ**] ಹಣ ಕೊಡಲು ಯೋಗ್ಯ ವ್ಯವಹಾರಕ್ಕಾಗಿ [**ಭೋಜಾನ್**] ಪಾಲಕಪತಿಯನ್ನು [**ಅದ್ಯ**] ಇಂದು [**ಚಿತಯಂತಃ**] ಪ್ರಬೋಧಿಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪುರುಷರೇ! ಯಾವ ಕನ್ಯೆಯು ನಿಮಗೆ ಸಮಾನ ವಿದ್ಯಾವತಿಯರೋ ಶುಭ ಗುಣ-ಕರ್ಮ-ಸ್ವಭಾವದವರೋ, ಅವಳನ್ನೇ ಮಡದಿಯಾಗಿ ಸ್ವೀಕಾರ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕುವಿತ್ ಸ ದೇವೀಃ ಸನಯೋ ನವೋ ವಾ ಯಾಮೋ ಬಭೂಯಾದುಷಸೋ ವೋ**
**ಅದ್ಯ । ಯೇನಾ ನವಗ್ವೇ ಅಂಗಿರೇ ದಶಗ್ವೇ ಸಪ್ತಾಸ್ಯೇ ರೇವತೀ ರೇವದೂಷ ॥೪॥**

**ಪದಾರ್ಥ:-** [**ಸಃ**] ಅವನು [**ಕುವಿತ್**] ವಿಪರೀತ [**ಯಾಮಃ**] ಚಲಿಸುವವನು [**ನವ**] ನೂತನ ವಿದ್ಯಾವಸ್ಥೆಯವನು [**ಬಭೂಯಾತ್**] ಆಗಿರಬೇಕು. [**ರೇವತೀಃ**] ಬಹುಧನ ಹಾಗೂ ಶೋಭೆ ಇರುವ [**ಸನಯಃ**] ವಿಭಾಗಿಸುವವಳು [**ದೇವೀಃ**] ದಿವ್ಯಗುಣ ಸಂಪನ್ನಳು [**ಉಷಸಃ**] ಪ್ರಾತಃಕಾಲದಂತೆ [**ವಃ**] ನಿಮಗೆ [**ರೇವತ್**] ಧನವಂತರಾಗುವ ರೀತಿಯಲ್ಲಿ [**ಊಷ**] ನಿರಂತರ ವಸತಿ ಕೊಡುವವಳು [**ವಾ**] ಅಥವಾ [**ಯೇನಾ**] ಯಾವ ಕಾರಣದಿಂದ [**ಅದ್ಯ**] ಈ ದಿನ [**ನವಗ್ವೇ**] ಒಂಬತ್ತು ಹಸುಗಳಿರುವ [**ದಶಗ್ವೇ**] ಹತ್ತು ಧೇನುಗಳಿರುವ [**ಅಂಗಿರೇ**] ಪ್ರಾಣ ಪ್ರಿಯ ಪತಿಗಾಗಿ [**ಸಪ್ತಾಸ್ಯೇ**] ಏಳು ಮುಖಗಳಲ್ಲಿ ಅಂದರೆ ಪಂಚಪ್ರಾಣ ಮನೋ, ಬುದ್ಧಿಗಳಲ್ಲಿ ನೆಲೆಸಿದವಳು. ಅವಳೊಂದಿಗೆ ಗೃಹಸ್ಥಾಶ್ರಮವನ್ನು ಸೇವಿಸಿರಿ.

**ಭಾವಾರ್ಥ:-** ವಿದ್ಯಾವಂತ, ರೂಪವಂತ, ಧನವಂತ, ನವಯುವಕನು ತನಗೆ ಅನುರೂಪಳಾದ ಸತಿಯನ್ನು ಸ್ವೀಕರಿಸಿದರೆ ಅವರ ಗೃಹಸ್ಥ ಜೀವನವು ಸುಖಕರವಾಗುವುದು. ಅದೇರೀತಿ ಯುವತಿಯೂ ಸ್ವಸದೃಶ ಪತಿಯನ್ನು ಬಯಸುವವಳಾಗಿ ಧನ, ವಿದ್ಯಾದಿಗಳ ಅಭಿವೃದ್ಧಿ ಮಾಡುತ್ತಲಿದ್ದರೆ. ಎಲ್ಲರಿಗೂ ಅವರ ಗೃಹಸ್ಥ ಜೀವನ ಉಪಕಾರ ಪ್ರದವಾಗುವುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೂಯಂ ಹಿ ದೇವೀರ್ಋತಯುಗ್ಭಿರಶ್ವೈಃ ಪರಿಪ್ರಯಾಥ ಭುವನಾನಿ ಸದ್ಯಃ ।**
**ಪ್ರಬೋಧಯಂತೀರುಷಸಃ ಸಸಂತಂ ದ್ವಿಪಾಚ್ಚತುಷ್ಪಾಚ್ಚರಥಾಯ ಜೀವಮ್ ॥೫॥**

**ಪದಾರ್ಥ:-** [**ಯೂಯಂ**] ನೀವೆಲ್ಲರೂ [**ಚರಥಾಯ**] ಸಂಚಾರ ಮಾಡುವುದಕ್ಕೆ [**ಸಸಂತಂ**] ಶಯನ ಮಾಡುತ್ತಿರುವ [**ಜೀವಂ**] ಜೀವಾತ್ಮನನ್ನು [**ಪ್ರಬೋಧಯಂತೀಃ**] ಎಚ್ಚರಿಸುವ [**ಉಷಸಃ**] ಪ್ರಾತಃಕಾಲವು [**ದ್ವಿಪಾತ್**] ಎರಡು ಕಾಲಿನ [**ಚತುಷ್ಪಾತ್**] ನಾಲ್ಕು ಕಾಲಿನ ಜೀವಿಗಳನ್ನು ಎಚ್ಚರಿಸುವಂತೆ [**ಸದ್ಯಃ**] ಬೇಗನೇ [**ಭುವನಾನಿ**] ಲೋಕ-ಲೋಕಾಂತರ ಪಡೆಯುವ [**ಹಿ**] ರೀತಿಯಲ್ಲಿ [**ಯತಯುಗ್ಭಿಃ**] ಸತ್ಯ ಸಂಪನ್ನ [**ಅಶ್ವೈಃ**] ಬಲಿಷ್ಠ ಪುರುಷಾರ್ಥ ಸಾಧಕನ್ನೊಂದಿಗೆ [**ದೇವೀಃ**] ದಿವ್ಯಗುಣದ ಸ್ತ್ರೀಯರು [**ಪರಿಪ್ರಿಯಾಥಃ**] ಎಲ್ಲ ರೀತಿಯಿಂದಲೂ ಪ್ರಾಪ್ತರಾಗುವರು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಸ್ನಾತಕನು ತನಗುಣವಾದ ರೂಪವತೀ, ವಿದ್ಯಾವತೀ, ಗುಣವತೀ, ಕನ್ಯೆಯನ್ನು ಪಡೆಯುವನೋ ಅವನು ಉಷಃಕಾಲದಂತೆ ಪ್ರಕಾಶಮಾನನೂ ಪ್ರಬೊಧಕನೂ ಆಗುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕ್ವ ಸ್ವಿದಾಸಾಂ ಕತಮಾ ಪುರಾಣೀ ಯಯಾ ವಿಧಾನಾ ವಿದಧುರ್ಋಭೂಣಾಮ್ ।**

**ಶುಭಂ ಯಚ್ಛುಭ್ರಾ ಉಷಸಶ್ಚರಂತಿ ನ ವಿ ಜ್ಞಾಯಂತೇ ಸದೃಶೀರಜುರ್ಯಾಃ ॥೬॥**

**ಪದಾರ್ಥ:-** [**ಯತ್**] ಯಾವುದು [**ಶುಭ್ರಾಃ**] ಮಿನುಗುವ ವಸ್ತುವಿಗೆ [**ಸದೃಶೀಃ**] ಸಮನಾಗಿ [**ಅಜುರ್ಯಾಃ**] ಜೀರ್ಣವಾಗದ [**ಉಷಸಃ**] ಪ್ರಾತಃಕಾಲದ ವೇಳೆಗಳು [**ಶುಭಂ**] ಕಲ್ಯಾಣವನ್ನು [**ಚರಂತಿ**] ಮಾಡುವರು. [**ಆಸಾಂ**] ಇವರ ಮಧ್ಯದಲ್ಲಿ [**ಕತಮಾ**] ಎಷ್ಟನೆಯವಳು [**ಪುರಾಣೀ**] ಹಳಬಳು [**ಕ್ವ**] ಯಾವುದರಲ್ಲಿ [**ವಿಧಾನಾ**] ಕಾರ್ಯ ವಿಧಿಸುವವಳು [**ಯಯಾ**] ಯಾವಳಿಂದ [**ಋಭೂಣಾಂ**] ಬುದ್ಧಿವಂತರ [**ಸ್ವಿತ್**] [**ವಿದಧುಃ**] ವಿಧಾನ ಮಾಡುವಳು. [**ನ, ವಿಜ್ಞಾಯತೇ**] ಗೊತ್ತಾಗುವುದಿಲ್ಲ.

**ಭಾವಾರ್ಥ:-** ಎಲ್ಲಾ ಪ್ರಾತಃಕಾಲಗಳು ಹೇಗೆ ಸಮಾನವಾಗಿರುತ್ತವೆಯೋ ಹಾಗೆಯೇ ಪತಿಯೊಂದಿಗೆ ಸಮಾನವಾಗಿ ವರ್ತಿಸುವ ಸ್ತ್ರೀಯರು ಪ್ರಶಂಸಾರ್ಹರು. ಅಂತಹ ಸ್ತ್ರೀಯರು ಯುವಾವಸ್ಥೆಯಲ್ಲಿ ತನಗನುರೂಪ ಪತಿಯನ್ನು ಪಡೆದು ಆನಂದಿಸುವರು. ಕನ್ಯಾವಸ್ಥೆಯಲ್ಲಿರುವವರಲ್ಲಿ ಯಾರು ಹಳಬರು, ಯಾರು ಹೊಸಬರು ಎಂಬುದು ತಿಳಿಯುವುದಿಲ್ಲ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಾ ಘಾ ತಾ ಭದ್ರಾ ಉಷಸಃ ಪುರಾಸು-ರಭಿಷ್ಟಿದ್ಯುಮ್ನಾ ಋತಜಾತಸತ್ಯಾಃ ।**

**ಯಾಸ್ವೀಜಾನಃ ಶಶಮಾನ ಉಕ್ಥೈಃ ಸ್ತುವಞ್ಛಂಸನ್ ದ್ರವಿಣಂ ಸದ್ಯ ಆಪ ॥೭॥**

**ಪದಾರ್ಥ:-** [**ಈಜಾನಃ**] ಗಮನಶೀಲ ಮನುಷ್ಯನು [**ಶಶಮಾನಃ**] ಪ್ರಶಂಸೆ ಪಡೆಯುವನು. [**ಉಕ್ಥೈಃ**] ಕಥನ ಯೋಗ್ಯ ಮಾತುಗಳಿಂದ [**ಸ್ತುವನ್**] ಸ್ತುತಿ ಮಾಡುತ್ತ [**ಯಾಸು**] ಯಾರಲ್ಲಿ [**ದ್ರವಿಣಂ**] ಧನ ಅಥವಾ ಯಶವನ್ನು [**ಪುರಾ**] ಮೊದಲು [**ಆಸುಃ**] ಇರುವವು? [**ಸದ್ಯಃ**] ಬೇಗನೇ [**ಆಪ**] ಪಡೆಯುವರು. [**ತಾಃ**] ಅವರು [**ಉಷಸಃ**] ಪ್ರಭಾತ ವೇಳೆಗಳು [**ಭದ್ರಾಃ**] ಕಲ್ಯಾಣಕಾರಕಗಳೋ [**ಪುರಾ**] ಮೊದಲು [**ಆಸುಃ**] ಇರುವರು. [**ಅಭಿಷ್ಟಿದ್ಯುಮ್ನಾ**] ಪ್ರಶಂಸಿತ ಯಶೋಧನರು [**ಋತಜಾತಸತ್ಯಾಃ**] ಸತ್ಯ ವ್ಯವಹಾರಗಳಲ್ಲಿ ಶ್ರೇಷ್ಠಕನ್ಯೆಯರು [**ತಾಃ, ಘ**] ಅವರನ್ನೇ ಗೃಹಸ್ಥಾಶ್ರಮಕ್ಕಾಗಿ ಪಡೆಯಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನೊಂದಿಗೆ ಉಷಃಕಾಲವು ಸದಾ ಸಹಕರಿಸುವ ರೀತಿಯಲ್ಲಿ ಪತಿಯೊಂದಿಗೆ ಸದಾ ಸಹಕರಿಸುವ ಸತಿಯನ್ನು ಯಾರು ಪಡೆದಿರುವರೋ ಅವರ ಗೃಹಸ್ಥಜೀವನವು ಯಶಸ್ವಿಯಾಗುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಾ ಆ ಚರಂತಿ ಸಮನಾ ಪುರಸ್ತಾತ್ ಸಮಾನತಃ ಸಮನಾ ಪಪ್ರಥಾನಾಃ ।**

**ಋತಸ್ಯ ದೇವೀಃ ಸದಸೋ ಬುಧಾನಾ ಗವಾಂ ನ ಸರ್ಗಾ ಉಷಸೋ ಜರಂತೇ ॥೮॥**

**ಪದಾರ್ಥ:-** [ಪುರಸ್ತಾತ್] ಮೊದಲೇ ಪರೀಕ್ಷಿಸಲಾದ [ಸಮಾನತಃ] ಅನುರೂಪ ಪತಿಯರಿಂದ [ಸಮಾನಾ] ಸಮಾನ ಸ್ವಭಾವದ ಕನ್ಯೆಯರು [ಋತಸ್ಯ] ಸತ್ಯಾಚರಣೆ ಮಾಡುವ [ದೇವೀಃ] ವಿದ್ಯಾವತೀ ಸ್ತ್ರೀಯು [ಪ್ರಪಥಾನಾಃ] ಸೌಂದರ್ಯಾದಿ ಗುಣಸಂಪನ್ನರು [ಸದಸಃ] ಶ್ರೇಷ್ಠ ಪುರುಷರನ್ನು [ಬುಧಾನಾಃ] ಜ್ಞಾನದಿಂದ ಎಚ್ಚರಗೊಳಿಸುತ್ತ [ಉಷಸಃ] ಪ್ರಾತಃಕಾಲಕ್ಕೆ [ಸಮನಾ] ಸದೃಶವಾಗಿ [ಗವಾಂ] ಗೋವುಗಳ [ಸರ್ಗಾಃ] [ನ] ಸಮೂಹದಂತೆ [ಆ, ಚರಂತೀ] ಆಚರಿಸುವವಳಾಗಿ [ಜರಂತಿ] ಸ್ತುತಿ ಮಾಡುವರು. [ತಾಃ] ಅವರನ್ನು ವರಿಸಿರಿ.

**ಭಾವಾರ್ಥ:-** ಮನುಷ್ಯರೇ! ಸುಶಿಕ್ಷಿತಳೂ, ರೂಪವತಿಯೂ, ಕಾಂತಿಮತಿಯೂ ಆದ ಕನ್ಯೆಯನ್ನೇ ಯೋಗ್ಯ ರೀತಿಯಿಂದ ವಿವಾಹವಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತಾ ಇನ್ನ್ವೇ (ಏ) ೩ ವ ಸಮನಾ ಸಮಾನೀ-ರಮೀತವರ್ಣಾ ಉಷಸಶ್ಚರಂತಿ ।**
**ಗೂಹಂತೀರಭ್ವಮಸಿತಂ ರುಶದ್ಭಿಃ ಶುಕ್ರಾಸ್ತನೂಭಿಃ ಶುಚಯೋ ರುಚಾನಾಃ ॥೯॥**

**ಪದಾರ್ಥ:-** [ಅಮಿತವರ್ಣಾಃ] ಅತಿಶಯ ರೂಪವತೀ [ಸಮಾನಾ] ಸಮಾನ ಧರ್ಮವತೀ [ಸಮಾನೀಃ] ಸಮಾನ ವಿಚಾರಶೀಲಳೂ [ರುಶದ್ಭಿಃ] ನಾಶಕಾರಕ ಗುಣಗಳಿಂದ [ಅಭ್ವಂ ಬೃಹತ್ ಅಸಿತಂ] ಅಂಧಕಾರವನ್ನು [ಗೂಹಂ ತೀಃ] ಮರೆ ಮಾಡುವವಳನ್ನು [ತನೂಭಿಃ] ಶರೀರದಿಂದ [ಶುಕ್ರಾಃ] ಕಾಂತಿಮತೀ [ಶುಚಯಃ] ಪವಿತ್ರರೂ [ರುಚಾನಾಃ] ಪ್ರೀತಿಸುವವರೂ [ಉಷಸಃ] ಪ್ರಾತಃಕಾಲದಂತೆ [ಚರಂತಿ] ಚಲಿಸುವರೂ [ತಾಃ] ಅಂತಹ [ಇತ್] ಕನ್ಯೆಯರನ್ನೇ [ನು, ಏವ] ಶೀಘ್ರ ಸುಖದಾಯಕರೆಂದು ತಿಳಿಯಿರಿ.

**ಭಾವಾರ್ಥ:-** ಯಾವ ಸ್ತ್ರೀಯರು ಪ್ರಾತಃಕಾಲದಂತೆ ದುಃಖನಾಶಕರೋ ಸುಖದಾಯಕರೋ, ಅವರೇ ಆನಂದಕಾರಕರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ರಯಿಂ ದಿವೋ ದುಹಿತರೋ ವಿಭಾತೀಃ ಪ್ರಜಾವಂತಂ ಯಚ್ಛತಾಸ್ಮಾಸು ದೇವೀಃ ।**
**ಸ್ಯೋನಾದಾ ವಃ ಪ್ರತಿಬುಧ್ಯಮಾನಾಃ ಸುವೀರ್ಯಸ್ಯ ಪತಯಃ ಸ್ಯಾಮ ॥೧೦॥**

**ಪದಾರ್ಥ:-** [ದಿವಃ] ಸೂರ್ಯನ [ವಿಭಾತೀಃ] ಬೆಳಕಿನಿಂದ ಬೆಳಗುವವರು [ದುಹಿತರಃ] ಕನ್ಯೆಯರಂತಿರುವ ಕಿರಣಗಳಂತಿರುವ [ದೇವೀಃ] ವಿದುಷಿಯರು [ಅಸ್ಮಾಸು] ನಮ್ಮವರಲ್ಲಿ [ಸ್ಯೋನಾತ್] ಸುಖದಿಂದ [ಪ್ರಜಾವಂತಂ] ಪ್ರಜೆಗಳೊಂದಿಗಿರುವ [ರಯಿಂ] ಧನವನ್ನು [ಆ, ಯಚ್ಛತ] ಗ್ರಹಣ ಮಾಡಿಸಲಿ. [ವಃ] ನಿಮ್ಮನ್ನು [ಪ್ರತಿಬುಧ್ಯಮಾನಾಃ] ಎಚ್ಚರಗೊಳಿಸುತ್ತ [ಸುವೀರ್ಯಸ್ಯ] ಪರಾಕ್ರಮೀ ಸೇನೆಯ [ಪತಯಃ] ಸ್ವಾಮಿಗಳು [ಸ್ಯಾಮ] ಆಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಕನ್ಯೆಯರು ಪ್ರಾತಃಕಾಲದಂತೆ ಸುಂದರ ಸುಖವನ್ನು ನೀಡುವರೋ, ಅವರೊಂದಿಗೆ ವಿವಾಹವಾಗುವ ಮನುಷ್ಯರು ಸಿರಿವಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತದ್ವೋ ದಿವೋ ದುಹಿತರೋ ವಿಭಾತೀರುಪ ಬ್ರುವ ಉಷಸೋ ಯಜ್ಞಕೇತುಃ ।**

**ವಯಂ ಸ್ಯಾಮ ಯಶಸೋ ಜನೇಷು ತದ್ದ್ಯೌಶ್ಚ ಧತ್ತಾಂ ಪೃಥಿವೀ ಚ ದೇವೀ ॥೧೧॥**

**ಪದಾರ್ಥ:-** **[ವಿಭಾತೀಃ]** ಬೆಳಕು ಮಾಡುತ್ತ **[ದಿವಃ]** ಅಂತರಿಕ್ಷದ **[ದುಹಿತರಃ]** ಕನ್ಯೆಯರಂತಿರುವ **[ಉಷಸಃ]** ಉಷಃಕಾಲದಂತಿರುವ ಯುವತಿಯರು **[ವಃ]** ನಿಮ್ಮ ವಿಷಯವನ್ನು ಹೇಳುವರು. **[ತತ್]** ಅದನ್ನು **[ಯಜ್ಞಕೇತುಃ]** ಯಜ್ಞವನ್ನು ತಿಳಿದವನು **[ಉಪ, ಬ್ರುವೇ]** ನಾನು ಉಪದೇಶಿಸುವೆನು. **[ತತ್]** ಅದನ್ನು **[ದೇವೀ]** ಮಿನುಗುತ್ತಿರುವ **[ದ್ಯೌಃ]** ಮಿಂಚು **[ಚ]** ಮತ್ತು **[ಪೃಥಿವೀ]** ಭೂಮಿಯು **[ಚ]** ಮತ್ತೂ **[ಧತ್ತಾಂ]** ಧಾರಣ ಮಾಡಲಿ. **[ವಯಂ]** ನಾವೆಲ್ಲರೂ **[ಜನೇಷು]** ವಿದ್ವಾಂಸರಲ್ಲಿ **[ಯಶಸಃ]** ಯಶಸ್ವಿಗಳು **[ಸ್ಯಾಮ]** ಆಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಪ್ರೀತಿಪಾತ್ರ ಜನರಿಗೆ ಉಪದೇಶ ಮಾಡಿ ವಿದ್ಯಾಗ್ರಹಣ ಮಾಡಿಸುವರೋ, ಅವರು ಸೂರ್ಯನಂತೆ ಪ್ರಕಾಶಮಾನರಾಗಿ ಭೂಮಿಗೆ ಸದೃಶವಾಗಿ ಪ್ರಜೆಗಳನ್ನೂ ಧಾರಣ ಮಾಡುವರು.

ಈ ಸೂಕ್ತದಲ್ಲಿ ಪ್ರಾತಃಕಾಲ, ಸ್ತ್ರೀ-ಪುರುಷರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತೊಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೫೨

ಮಂತ್ರಸಂಖ್ಯೆ ೭ । ವಾಮದೇವ ಋಷಿಃ । ಉಷಾದೇವತಾ । ೧-೬ ನಿಚೃದ್ಗಾಯತ್ರೀ, ೫, ೭ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಉಷೆಯ ವೈಭವವನ್ನು ಇಲ್ಲಿ ಹೇಳಲಾಗುತ್ತದೆ.

**ಪ್ರತಿ ಷ್ಯಾ ಸೂನರೀ ಜನೀ ವ್ಯುಚ್ಛಂತೀ ಪರಿ ಸ್ವಸುಃ । ದಿವೋ ಅದರ್ಶಿ ದುಹಿತಾ ॥೧॥**

**ಪದಾರ್ಥ:-** **[ದಿವಃ]** ದಿವ್ಯವಾದ **[ಸ್ವಸುಃ]** ಸೋದರಿಯ **[ಜನೀ]** ಜನ್ಮ ನೀಡುವವಳು **[ಸೂನರೀ]** ಉತ್ತಮವಾಗಿ ಕರೆದೊಯ್ಯುವವಳು **[ಪರಿ, ವ್ಯುಚ್ಛಂತೀ]** ಎಲ್ಲಾ ಕಡೆಗಳಿಂದಲೂ ನೆಲೆಕೊಡುವವಳು **[ದುಹಿತಾ]** ಕನ್ಯೆಯಂತಿರುವ ಉಷಃಕಾಲವು **[ಪ್ರತಿ, ಅದರ್ಶಿ]** ಪ್ರತಿದಿನವೂ ಕಾಣಿಸುತ್ತದೆ. **[ಸ್ಯಾ]** ಅವಳು ಎಚ್ಚೆತ್ತವರಿಗೆ ಕಾಣುವವಳು.

**ಭಾವಾರ್ಥ:-** ಯಾರು ಪ್ರತಿದಿನವೂ ಎದ್ದು ಪ್ರಾತಃಕಾಲವನ್ನು ನೋಡುವವರೋ ಅವರೇ ಭಾಗ್ಯವಂತರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಶ್ವೇವ ಚಿತ್ರಾರುಷೀ ಮಾತಾ ಗವಾಮೃತಾವರೀ । ಸಖಾಭೂದಶ್ವಿನೋರುಷಾಃ ॥೨॥**

**ಪದಾರ್ಥ:-** **[ಚಿತ್ರಾ]** ಅದ್ಭುತವಾದ **[ಅರುಷೀ]** ಅರುಣ ವರ್ಣದ **[ಋತಾವರೀ]** ಯಥಾರ್ಥವನ್ನು ಪ್ರಕಟಗೊಳಿಸುವ **[ಉಷಾಃ]** ಉಷಃಕಾಲವು **[ಅಶ್ವೇವ]** ಕುದುರೆಯಂತಿದ್ದು **[ಅಶ್ವಿನೋಃ]** ಸೂರ್ಯಚಂದ್ರರ **[ಸಖಾ]**

ಸ್ನೇಹಿತೆ **[ಅಭೂತ್]** ಆಗಿರುವಳು. **[ಗವಾಂ]** ಕಿರಣಗಳನ್ನು **[ಮಾತಾ]** ತಾಯಿಯಂತೆ ಪಾಲನೆ ಮಾಡುವವಳೂ ಆಗಿರುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರೇ! ತಾಯಿಯಂತೆ, ಸ್ನೇಹಿತೆಯಂತಿರುವ ಉಷಃಕಾಲವನ್ನು ಎಲ್ಲರೂ ಪ್ರತಿದಿನವೂ ಸೇವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉತ ಸಖಾಸ್ಯಶ್ವಿನೋ-ರುತ ಮಾತಾ ಗವಾಮಸಿ । ಉತೋಷೋ ವಸ್ವ ಈಶಿಷೇ ॥೩॥**

**ಪದಾರ್ಥ:-** **[ಉಷಃ]** ಉಷಃಕಾಲದಂತಿರುವ ಯುವತಿ **[ಸಖಾ]** ಸಖಿಯಂತೆ **[ಅಸಿ]** ಇರುವೆ. **[ಉತ]** ಮತ್ತು **[ಅಶ್ವಿನೋಃ]** ಸೂರ್ಯಚಂದ್ರರಂತೆ **[ಅಸಿ]** ಪ್ರಬೋಧಿಸುವವಳು **[ಅಸಿ]** ಆಗಿರುವೆ. **[ಉತ]** ಮತ್ತು **[ಗವಾಂ]** ಕಿರಣಗಳ **[ಮಾತಾ]** ತಾಯಿಯಾಗಿರುವೆ. **[ವಸ್ವಃ]** ಧನದ **[ಈಶಿಷೇ]** ಇಚ್ಛೆ ಮಾಡುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಯುವತಿಯು ಸುಖದಾತ್ರೀ, ಸಖಿಯಂತೆ ಸೇವೆ ಮಾಡುವವಳೂ, ತಾಯಿಯಂತೆ ಪೋಷಿಸುವವಳೂ ಆಗಿದ್ದಾಳೋ ಅವಳೇ ಪ್ರಾತಃಕಾಲದಂತೆ ಸುಖದ ಬೆಳಕು ಚೆಲ್ಲುವಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಾವಯದ್ದ್ವೇಷಸಂ ತ್ವಾ ಚಿಕಿತ್ವಿತ್ ಸೂನೃತಾವರಿ । ಪ್ರತಿಸ್ತೋಮೈರಭುತ್ಸ್ಮಹಿ ॥೪॥**

**ಪದಾರ್ಥ:-** **[ಚಿಕಿತ್ವಾತ್]** ಚಿಕಿತ್ಸಕಳು **[ಸೂನೃತಾವರಿ]** ಸತ್ಯ ನುಡಿಯುವಳೂ **[ಸ್ತೋಮೈಃ]** ಸ್ತುತಿಗಳಿಂದ **[ಯಾವಯದ್ವೇಷಸಂ]** ದ್ವೇಷಿಸುವವರನ್ನು ಪ್ರತ್ಯೇಕಗೊಳಿಸುವವಳೂ **[ತ್ವಾ]** ನಿನಗೆ **[ಪ್ರತಿ, ಅಭುತ್ಸ್ಮಹಿ]** ನಾವು ತಿಳಿದಿರುವೆವು.

**ಭಾವಾರ್ಥ:-** ಯಾವಳು ದ್ವೇಷದ ಮತ್ತು ದ್ವೇಷಕರ ಸಂಗವನ್ನು ಮಾಡುವುದಿಲ್ಲವೋ ಸತ್ಯನುಡಿಯುವಳೋ, ಪ್ರಶಂಸೆ ಪಡೆದವಳೋ ಅವಳೇ ಶ್ರೇಷ್ಠಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರತಿ ಭದ್ರಾ ಅದೃಕ್ಷತ ಗವಾಂ ಸರ್ಗಾ ನ ರಶ್ಮಯಃ । ಓಷಾ ಅಪ್ರಾ ಉರು ಜ್ರಯಃ ॥೫॥**

**ಪದಾರ್ಥ:-** **[ಉರು]** ಬೃಹತ್ **[ಜ್ರಯಃ]** ತೇಜೋಮಂಡಲವನ್ನು **[ರಶ್ಮಯಃ]** **[ನ]** ಕಿರಣಗಳಿಗೆ ಸದೃಶ **[ಭದ್ರಾಃ]** ಕಲ್ಯಾಣಕರವಾಗಿಸುವವಳು. **[ಗವಾಂ]** ಭೂಮಿಯ **[ಸರ್ಗಾಃ]** ಸೃಜಿಸುವವಳು **[ಪ್ರತಿ, ಆದಕ್ಷತ್]** ಪ್ರತಿದಿನವೂ ನೋಡಲ್ಪಡುವವಳು **[ಉಷಾಃ]** ಪ್ರಾತಃಕಾಲವನ್ನು **[ಆ, ಅಪ್ರಾಃ]** ವ್ಯಾಪ್ತಳಾಗುವವಳು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಸ್ತ್ರೀಯು ಕಿರಣಗಳಂತೆ ಉತ್ತಮ ವ್ಯವಹಾರಗಳನ್ನು ಪ್ರಕಟಿಸುವಳೋ ಅವಳು ಕಲ್ಯಾಣಕರಳೂ ಕುಲೋನ್ನತಿಗೊಳಿಸುವವಳೂ ಆಗುವಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಪಪ್ರುಷೀ ವಿಭಾವರಿ ವ್ಯಾವರ್ಜ್ಯೋತಿಷಾ ತಮಃ । ಉಷೋ ಅನು ಸ್ವಧಾಮವ ॥೬॥**

**ಪದಾರ್ಥ:-** [ಉಷಃ] ಪ್ರಭಾತಕಾಲದ ಬೆಳಕು [ವಿಭಾವರೀ] ವಿವಿಧ ರೀತಿಯ ಬೆಳಕಿನಿಂದ ಪ್ರಕಾಶಮಾನಳಾದವಳೂ [ಆಪಪ್ರುಷೀ] ಎಲ್ಲಾ ವಿದ್ಯೆಗಳಲ್ಲೂ ವ್ಯಾಪ್ತಳೂ, [ಜ್ಯೋತಿಷಾ] ಪ್ರಕಾಶದಿಂದ [ತಮಃ] ಅಂಧಕಾರವನ್ನು [ವಿ, ಆವಃ] ಪ್ರತ್ಯೇಕಿಸಿ ರಕ್ಷಿಸುವವಳೂ [ಅನು, ಸ್ವದಾಂ] ಅನ್ನಾದಿಗಳನ್ನು [ಅವ] ರಕ್ಷಿಸುವವಳಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರಾತಃಕಾಲವು ಹೇಗೆ ಅಂಧಕಾರವನ್ನು ನಿವಾರಿಸುತ್ತದೆಯೋ ಹಾಗೆ ವಿದ್ಯಾವತಿ ಸ್ತ್ರೀಯರು ದೋಷಗಳನ್ನು ನಿವಾರಿಸುವಳು ಮತ್ತು ಉತ ಷ್ಟ ಅನ್ನಾದಿಗಳಿಂದ ಎಲ್ಲರ ರಕ್ಷಣೆಮಾಡುವವರೂ ಆಗಿರುವಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ದ್ಯಾಂ ತನೋಷಿ ರಶ್ಮಿಭಿ-ರಾಂತರಿಕ್ಷಮುರು ಪ್ರಿಯಮ್ । ಉಷಃ ಶುಕ್ರೇಣ ಶೋಚಿಷಾ ॥೭॥**

**ಪದಾರ್ಥ:-** [ಉಷಃ] ಪ್ರಾತಃಕಾಲವು [ರಶ್ಮಿಭಿಃ] ಕಿರಣಗಳಿಂದ [ದ್ಯಾಂ] ಬೆಳಕನ್ನು [ಉರು] ವಿಫುಲವಾಗಿ [ಆ, ಅಂತರಿಕ್ಷಂ] ಅಂತರಿಕ್ಷದವರೆಗೂ ಪ್ರಸರಿಸುವಂತೆ [ಶುಕ್ರೇಣ] ಶುದ್ಧವಾದ [ಶೋಚಿಷಾ] ಬೆಳಕಿನಿಂದ [ಪ್ರಿಯಂ] ಸುಂದರ ಪತಿಯನ್ನು [ಆ, ತನೋಷಿ] ವಿಸ್ತರಿಸುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವಳು ವಿದ್ಯಾ-ವಿನಯ-ಸ್ವಭಾವಗಳಿಂದ ತನ್ನ ಪ್ರಿಯತಮನನ್ನು ಎಲ್ಲ ಕಡೆಗಳಲ್ಲೂ ಪ್ರಖ್ಯಾತಿಗೊಳಿಸುವಳೋ ಅವಳೇ ಉತ್ತಮ ಸ್ತ್ರೀ ಎನಿಸಿಕೊಳ್ಳುವಳು.

ಈ ಸೂಕ್ತದಲ್ಲಿ ಪ್ರಾತಃಕಾಲದ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಐವತ್ತೆರಡನೆಯ ಸೂಕ್ತ ಸಮಾಪ್ತ

## ಸೂಕ್ತ ೫೩

ಮಂತ್ರಸಂಖ್ಯೆ ೭ । ವಾಮದೇವ ಋಷಿಃ । ಸವಿತಾ ದೇವತಾ । ೧, ೩, ೬, ೭ ನಿಚೃಜ್ಜಗತೀ, ೨ ವಿರಾಡ್ಜಗತೀ, ೪ ಸ್ವರಾಡ್ಜಗತೀ, ೫ ಜಗತೀ ಛಂದಃ । ನಿಷಾದಃ ಸ್ವರಃ.

ಇಲ್ಲಿ ಸೂರ್ಯ-ಮೇಘಗಳ ವಿಷಯವನ್ನು ಹೇಳಲಾಗಿದೆ.

**ತದ್ದೇವಸ್ಯ ಸವಿತುರ್ವಾರ್ಯಂ ಮಹದ್ ವೃಣೀಮಹೇ ಅಸುರಸ್ಯ ಪ್ರಚೇತಸಃ । ಛರ್ದಿರ್ಯೇನ ದಾಶುಷೇ ಯಚ್ಛತಿ ತ್ಮನಾ ತನ್ನೋ ಮಹಾ ಉದಯಾನ್ ದೇವೋ ಅಕ್ತುಭಿಃ ॥೧॥**

**ಪದಾರ್ಥ:-** [ಸವಿತುಃ] ವೃಷ್ಟ್ಯಾದಿಗಳನ್ನು ಪ್ರಸವಿಸುವ [ದೇವಸ್ಯ] ನಿರಂತರ ಬೆಳಗುತ್ತಿರುವ [ಪ್ರಚೇತಸಃ] ಎಲ್ಲರನ್ನೂ ಉದ್ಬೋಧಿಸುವ [ಅಸುರಸ್ಯ] ಮೇಘದ [ಮಹತ್] ಬೃಹತ್ತಾದ [ವಾರ್ಯಂ] ಸ್ವೀಕಾರಾರ್ಹ ಜಲದ

[ಛರ್ದಿಃ] ಗೃಹದ [ವೃಣೀಮಹೇ] ಸ್ವೀಕಾರ ಮಾಡುವೆವು. [ತತ್] ಅದನ್ನು ಸ್ವೀಕರಿಸಿರಿ. [ಯೇನ] ಯಾವುದರಿಂದ [ತ್ಮನಾ] ವಿದ್ಯಾವಂತರು ಅಂತಃಕರಣದಿಂದ [ದಾಶುಷೇ] ದಾತೃವಿಗೆ [ಯಚ್ಛತಿ] ಕೊಡುವರು. [ತತ್] ಅದನ್ನು [ಮಹತ್] ಮಹಿಮಾನ್ವಿತ [ದೇವಃ] ಬೆಳಗುತ್ತ [ಅಕ್ತುಭಿಃ] ರಾತ್ರಿಗಳಿಂದ [ನಃ] ನಮಗಾಗಿ [ಉತ್, ಆನಯನ್] ಉತ ಪ್ಪಗೊಳಿಸಿರಿ.

**ಭಾವಾರ್ಥ:-** ವಿದ್ಯಾವಂತರು ಸೂರ್ಯ ಹಾಗೂ ಮೇಘಗಳ ವಿದ್ಯೆಯನ್ನು ತಿಳಿದಿರುವರು. ಅವರು ಹಗಲು ರಾತ್ರಿಗಳಲ್ಲಿ ಬೃಹತ್‌ಕಾರ್ಯಗಳನ್ನು ಸಾಧಿಸಿ ಆನಂದಿಸುವರು.

ಇಲ್ಲಿ ಈಶ್ವರನ ಗುಣವರ್ಣನೆಯನ್ನು ಮಾಡಲಾಗಿದೆ.

**ದಿವೋ ಧರ್ತಾ ಭುವನಸ್ಯ ಪ್ರಜಾಪತಿಃ ಪಿಶಂಗಂ ದ್ರಾಪಿಂ ಪ್ರತಿ ಮುಂಚತೇ ಕವಿಃ ।**
**ವಿಚಕ್ಷಣಃ ಪ್ರಥಯನ್ನಾಪೃಣನ್ನು-ರ್ವಜೀಜನತ್ ಸವಿತಾ ಸುಮ್ನಮುಕ್ಥ್ಯಮ್ ॥೨॥**

**ಪದಾರ್ಥ:-** [ದಿವಃ] ಬೆಳಕು [ಭುವನಸ್ಯ] ಪ್ರಪಂಚದ [ಧರ್ತಾ] ಧಾರಕನಾದ [ಪ್ರಜಾಪತಿಃ] ಪ್ರಜಾಪತಿಯು [ಕವಿಃ] ತೇಜೋಮಯವಾಗಿ ಕಾಣುವವನು. [ಪಿಶಂಗಂ] ವಿಚಿತ್ರರೂಪದ [ದ್ರಾಪಿಂ] ಕವಚವನ್ನು [ಪ್ರತಿ, ಮುಂಚತೇ] ಕಳಚುವನು. [ವಿಚಕ್ಷಣಃ] ಮಿಂಚಿನಂತಹ ಬೆಳಕನ್ನು ಕೊಡುವವನು [ಪ್ರಥಯನ್] ವಿಸ್ತರಿಸುವವನು. [ಆಪೃಣನ್] ಎಲ್ಲಾಕಡೆಗಳಲ್ಲೂ ಬೆಳಕನ್ನು ಪೂರ್ಣಗೊಳಿಸುತ್ತ [ಸವಿತಾ] ಸಮಗ್ರ ಜಗತ್ತನ್ನು ಪ್ರಸವಿಸುವವನು. [ಉರು] ಅತಿಶಯ [ಉಕ್ಥ್ಯಂ] ಪ್ರಶಂಸಾರ್ಹ [ಸುಮ್ನಂ] ಸುಖವನ್ನು [ಅಜೀಜನತ್] ಉತ್ಪಾದಿಸಿರುವನು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು ಪ್ರಜೆಗಳ ಧಾರಣ, ಪೋಷಣ, ರಕ್ಷಣೆಗಾಗಿ ಸೂರ್ಯನನ್ನು ಸೃಷ್ಟಿಸಿರುವನು. ಅಂತಹ ಪರಮೇಶ್ವರನ ಉಪಾಸನೆ ಮಾಡಿ ಸುಖಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಪ್ರಾ ರಜಾಂಸಿ ದಿವ್ಯಾನಿ ಪಾರ್ಥಿವಾ ಶ್ಲೋಕಂ ದೇವಃ ಕೃಣುತೇ ಸ್ವಾಯ ಧರ್ಮಣೇ ।**
**ಪ್ರ ಬಾಹೂ ಅಸ್ರಾಕ್ ಸವಿತಾ ಸವೀಮನಿ ನಿವೇಶಯನ್ ಪ್ರಸುವನ್ನಕ್ತುಭಿರ್ಜಗತ್ ॥೩॥**

**ಪದಾರ್ಥ:-** [ಸವಿತಾ] ಸಮಗ್ರವನ್ನು ಸೃಷ್ಟಿಸುವ [ದೇವಃ] ಪ್ರಕಾಶಮಾನನಾದ [ಸವೀಮನಿ] ಬೃಹದೈಶ್ವರ್ಯದಲ್ಲಿ [ಅಕ್ತುಭಿಃ] ರಾತ್ರಿಯೊಂದಿಗೆ [ಜಗತ್] ಜಗತ್ತನ್ನು [ನಿವೇಶಯನ್] ಪ್ರವೇಶಿಸುವನು. [ಪ್ರಸವನ್] ಉತ್ಪಾದನೆಗೊಳಿಸುತ್ತ [ಬಾಹೂ] ತೋಳುಗಳನ್ನು [ಅಸ್ರಾಕ್] ಪ್ರಸರಿಸುವನು. [ಸ್ವಾಯ] ತನಗೆ [ಧರ್ಮಣೇ] ಧರ್ಮೋನ್ನತಿಗಾಗಿ [ಶ್ಲೋಕಂ] ಶ್ಲಾಘ್ಯವಾಣಿಯನ್ನು [ಪ್ರ, ಕೃಣುತೇ] ಉತ್ಪಾದಿಸುವನು. [ದಿವ್ಯಾನಿ] ದಿವ್ಯವಾದ [ಪಾರ್ಥಿವಾ] ಪೃಥಿವಿಯಲ್ಲಿ ಪ್ರಸಿದ್ಧ [ರಜಾಂಸಿ] ಲೋಕಗಳನ್ನು [ಆ, ಅಪ್ರಾಃ] ವ್ಯಾಪಿಸುವನು.

**ಭಾವಾರ್ಥ:-** ಪ್ರಜೆಗಳೇ! ಪರಮೇಶ್ವರನು ಸಮಗ್ರ ಜಗತ್ತಿನಲ್ಲಿ ಅಭಿವ್ಯಾಪ್ತನಾಗಿರುವನು. ಆ ಜಗತ್ತನ್ನು ಸೃಷ್ಟಿಸಿ ಅದರೊಂದಿಗೆ ಧರ್ಮ, ವೇದವಾಣಿಯನ್ನೂ ಪ್ರಚುರ ಪಡಿಸಿರುವನು ಮತ್ತು ಈ ಪ್ರಪಂಚವು ವ್ಯವಸ್ಥಿತವಾಗಿ ವರ್ತಿಸುವಂತೆ ಮಾಡಿರುವನು. ಅವನೇ ಎಲ್ಲವುದಕ್ಕೂ ಅಧಿಪತಿ ಎಂದು ಭಾವಿಸಿ ಉಪಾಸನೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅದಾಭ್ಯೋ ಭುವನಾನಿ ಪ್ರಚಾಕಶ-ದ್ವ್ರತಾನಿ ದೇವಃ ಸವಿತಾಭಿ ರಕ್ಷತೇ ।**
**ಪ್ರಾಸ್ರಾಗ್ಬಾಹೂ ಭುವನಸ್ಯ ಪ್ರಜಾಭ್ಯೋ ಧೃತವ್ರತೋ ಮಹೋ ಅಜ್ಮಸ್ಯ ರಾಜತಿ ॥೪॥**

**ಪದಾರ್ಥ:-** [ಅದಾಭ್ಯಃ] ಎಂದೂ ನಷ್ಟವಾಗದ [ಸವಿತಾ] ಸೂರ್ಯನು [ಧೃತವ್ರತಃ] ವ್ರತಗ್ರಹಣ ಮಾಡಿರುವ [ದೇವಃ] ಸುಂದರ [ಮಹಃ] ಮಹಿಮಾನ್ವಿತ [ಅಜ್ಮಸ್ಯ] ಅಂತರಿಕ್ಷದಲ್ಲಿ ಬಿಡಲಾದ [ಭುವನಸ್ಯ] ಲೋಕದ [ಪ್ರಜಾಭ್ಯಃ] ಪ್ರಜೆಗಳಿಗೆ [ವ್ರತಾನಿ] ವಿವಿಧ ವ್ರತಗಳನ್ನು [ಭುವನಾನಿ] ಲೋಕೋತ್ಪನ್ನ ವಸ್ತುಗಳನ್ನೂ [ಪ್ರ, ಅಸ್ರಾಕ್] ಉತ್ಪಾದಿಸಿರುವನು. [ಬಾಹೂ] ಬಲ-ವೀರ್ಯಗಳನ್ನು [ಪ್ರಚಾಕಶತ್] ಪ್ರಾದುರ್ಭವಿಸಿರುವನು. [ಅಭಿ] [ರಕ್ಷತೇ] ತಾನೇ ಅವುಗಳ ರಕ್ಷಣೆ ಮಾಡುವನು. [ವಿರಾಜತೇ] ರಾರಾಜಿಸುತ್ತಿರುವನು.

**ಭಾವಾರ್ಥ:-** ಮನುಷ್ಯರೇ! ಪರಮಾತ್ಮನು ಪ್ರಜೆಗಳ ಸಂಪೂರ್ಣ ಹಿತಸಾಧಕನು. ಅವನೇ ಒಳಗೂ ಹೊರಗೂ ಸರ್ವತ್ರ ವ್ಯಾಪಕನಾಗಿದ್ದು ಫಲದಾಯಕನಾಗಿರುವನು. ಅವನೇ ನಿರಂತರ ಧ್ಯಾನಿಸಲು ಯೋಗ್ಯನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ರಿರಂತರಿಕ್ಷಂ ಸವಿತಾ ಮಹಿತ್ವನಾ ತ್ರೀ ರಜಾಂಸಿ ಪರಿಭೂಸ್ತ್ರೀಣಿ ರೋಚನಾ ।**
**ತಿಸ್ರೋ ದಿವಃ ಪೃಥಿವೀಸ್ತಿಸ್ರ ಇನ್ವತಿ ತ್ರಿಭಿರ್ವ್ರತೈರಭಿ ನೋ ರಕ್ಷತಿ ತ್ಮನಾ ॥೫॥**

**ಪದಾರ್ಥ:-** [ಪರಿಭೂಃ] ಸರ್ವತ್ರ ನೆಲೆಸಿರುವ [ಸವಿತಾ] ಸೂರ್ಯನು [ಮಹಿತ್ವನಾ] ಮಹಿಮೆಯಿಂದ [ತ್ಮನಾ] ಆತ್ಮನಿಂದ [ಅಂತರಿಕ್ಷಂ] ಅವಿನಾಶೀ ಆಕಾಶವನ್ನು [ತ್ರಿಃ] ಮೂರು ಬಾರಿ [ಇನ್ವತಿ] ವ್ಯಾಪ್ತನಾಗುವನು. [ತ್ರಿಃ] ಮೂರು ರೀತಿಯಿಂದ [ರಜಾಂಸಿ] ಉತ್ತಮ, ಮಧ್ಯಮ, ಕನಿಷ್ಠ, ಲೋಕಗಳನ್ನು ವ್ಯಾಪಿಸುವನು. [ತ್ರೀಣಿ] ಮೂರು ರೀತಿಯ [ರೋಚನಾ] ಮಿಂಚು, ಅಗ್ನಿ, ಸೂರ್ಯಕಿರಣಗಳಿಂದ ವ್ಯಾಪ್ತನಾಗುವನು. [ತಿಸ್ರಃ] ಮೂರು ರೀತಿಯ [ದಿವಃ] ಬೆಳಕು ಮತ್ತು [ತಿಸ್ರ] ಮೂರು ರೀತಿಯ [ಪೃಥಿವೀಃ] ಭೂಮಿಗಳಲ್ಲಿ ವ್ಯಾಪ್ತನಾಗಿರುವನು. [ತ್ರಿಭಿಃ] ಮೂರು ರೀತಿಯ [ವ್ರತೈಃ] ನಿಯಮಗಳಿಂದ [ನಃ] ನಮ್ಮೆಲ್ಲರನ್ನು [ಅಭಿ] [ರಕ್ಷತಿ] ಎಲ್ಲ ಕಡೆಗಳಿಂದಲೂ ರಕ್ಷಿಸುವನು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು, ತ್ರಯಸ್ತ್ರಿಕಗಳಿಂದ ಮೂರು ರೀತಿಯ ಮೂರರ ಸಮುದಾಯದಿಂದ ಜಗತ್ತನ್ನು ಉತ್ತಮ ರೀತಿಯಲ್ಲಿ ರಕ್ಷಿಸುತ್ತಿರುವನು, ಪೋಷಿಸುತ್ತಿರುವನು. ಅದನ್ನರಿತು ಅವನ ಉಪಾಸನೆ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಬೃಹತ್ ಸುಮ್ನಃ ಪ್ರಸವೀತಾ ನಿವೇಶನೋ ಜಗತಃ ಸ್ಥಾತುರುಭಯಸ್ಯ ಯೋ ವಶೀ ।**
**ಸ ನೋ ದೇವಃ ಸವಿತಾ ಶರ್ಮ ಯಚ್ಛ-ತ್ವಸ್ಮೇ ಕ್ಷಯಾಯ ತ್ರಿವರೂಥಮಂಹಸಃ ॥೬॥**

**ಪದಾರ್ಥ:-** [ಯಃ] ಯಾವನು [ನಃ] ನಮಗಾಗಿ [ಬೃಹತ್ ಸುಮ್ನಃ] ಅತಿಶಯ ಸುಖವನ್ನು [ಪ್ರಸವಿತಾ] ಸೃಷ್ಟಿಸಿರುವನೋ [ಜಗತಃ] ಪ್ರಪಂಚದ [ಸ್ಥಾತುಃ] ಸ್ಥಿರೀಕರಣಗೊಳಿಸುವ [ನಿವೇಶನಃ] ನೆಲೆಗೊಳಿಸುವ [ಉಭಯಸ್ಯ]

ಕಾರ್ಯ-ಕಾರಣರೂಪ ಜಗತ್ತಿನ [ವಶೀ] ವಶೀಕರಣ ಮಾಡಿಕೊಂಡು [ದೇವಃ] ದಿವ್ಯಗುಣಯುಕ್ತನಾಗಿ [ಯಚ್ಛತು] ಅಭೀಷ್ಟವನ್ನು ಕೊಡುವವನಾಗಲಿ. [ಸಃ] [ಸವಿತಾ] ಆ ಜಗತ್ಪ್ರಸೂತನು [ಅಸ್ಮೇ] ನಮ್ಮೆಲ್ಲರಿಗೆ [ಕ್ಷಯಾಯ] ನಿವಾಸಕ್ಕಾಗಿ [ಅಂಹಸಃ] ದುಃಖರಹಿತ [ತ್ರಿವರೂಥಂ] ಮೂರು ವಿಧದ [ಶರ್ಮ] ಗೃಹವನ್ನು ಕರುಣಿಸಲಿ.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಸಕಲ ಜಗತ್ತಿನ ನಿಯಾಮಕನು. ಎಲ್ಲಾ ಜೀವಿಗಳಿಗೂ ನಿವಾಸಕೊಟ್ಟವನು. ಅದಕ್ಕಾಗಿ ವಿವಿಧ ಸ್ಥಾನಗಳನ್ನು ಸೃಷ್ಟಿಸಿರುವನು. ಅವನ ಹೊರತು ಬೇರೆ ಯಾರ ಉಪಾಸನೆಯೂ ಸರಿಯಾಗಲಾರದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆಗನ್ ದೇವ ಋತುಭಿರ್ವರ್ಧತು ಕ್ಷಯಂ ದಧಾತು ನಃ ಸವಿತಾ ಸುಪ್ರಜಾಮಿಷಮ್ ।**
**ಸ ನಃ, ಕ್ಷಪಾಭಿರಹಭಿಶ್ಚ ಜಿನ್ವತು ಪ್ರಜಾವಂತಂ ರಯಿಮಸ್ಮೇ ಸಮಿನ್ವತು ॥೭॥**

**ಪದಾರ್ಥ:-** [ಸವಿತಾ] ಜಗತ್ ಪ್ರಸೂತನೂ [ದೇವಃ] ಪ್ರಕಾಶರೂಪನೂ ಆದ ಪರಮಾತ್ಮನು [ಋತುಭಿಃ] ವಸಂತಾದಿ ಋತುಗಳಿಂದ [ನಃ] ನಮ್ಮ [ಕ್ಷಯಂ] ಜೀವನವನ್ನು [ವರ್ಧತು] ವೃದ್ಧಿಪಡಿಸಲಿ. [ಆ, ಅಗನ್] ಎಲ್ಲ ರೀತಿಯಿಂದ ಪ್ರಾಪ್ತನಾಗಲಿ. [ಸುಪ್ರಜಾಂ] ಉತ್ತಮ ಪ್ರಜೆ ಮತ್ತು [ಇಷಂ] ಆಹಾರವನ್ನು [ದಧಾತು] ಧಾರಣ ಮಾಡಿಸಲಿ. [ಸಃ] ಅವನು [ಕ್ಷಪಾಭಿಃ] ರಾತ್ರಿಗಳಿಂದ ಮತ್ತು [ಅಹಭಿಃ] [ಚ] ಹಗಲುಗಳಿಂದಲೂ [ನಃ] ನಮ್ಮನ್ನು [ಜಿನ್ವತು] ಆನಂದಗೊಳಿಸಲಿ. [ಅಸ್ಮೇ] ನಮಗೆ [ಪ್ರಜಾವಂತಂ] ಪ್ರಜಾವಂತರಾಗಿ ಮತ್ತು [ರಯಿಂ] ಧನವಂತರಾಗಿ [ಸಂ ಇನ್ವತು] ಉತ ಷ್ಟರನ್ನಾಗಿ ಮಾಡಲಿ.

**ಭಾವಾರ್ಥ:-** ಮನುಷ್ಯರೇ! ಮನುಷ್ಯರಿಗಾಗಿ ಪರಮಾತ್ಮನು ಹಗಲು ರಾತ್ರಿಗಳನ್ನು ಸಮಗ್ರ ಪ್ರಪಂಚವನ್ನೂ ಅಲ್ಲಿ ನೆಲೆಸಿರುವ ಎಲ್ಲಾ ಪದಾರ್ಥಗಳನ್ನೂ ಮನುಷ್ಯೇತರ ಜೀವಿಗಳನ್ನೂ ಸೃಷ್ಟಿಸಿರುವನು. ಅವುಗಳ ರಕ್ಷಣೆಯನ್ನೂ ಮಾಡಿ ಎಲ್ಲರಿಗೂ ಕೊಟ್ಟು ಎಲ್ಲರನ್ನೂ ಸಂತೃಪ್ತರನ್ನಾಗಿಸುವನು. ನಾವೆಲ್ಲರೂ ಅವನಿಗೆ ಕೃತಜ್ಞರಾಗಿರಬೇಕು.

ಈ ಸೂಕ್ತದಲ್ಲಿ ಪರಮೇಶ್ವರನ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಐವತ್ತಮೂರನೆಯ ಸೂಕ್ತ ಸಮಾಪ್ತ

## ಸೂಕ್ತ ೫೪

ಮಂತ್ರಸಂಖ್ಯೆ ೬ । ವಾಮದೇವ ಋಷಿಃ । ಸವಿತಾ ದೇವತಾ । ೧ ಭುರಿಕ್ತ್ರಿಷ್ಟುಪ್, ೨ ನಿಚೃತ್ತ್ರಿಷ್ಟುಪ್, ೩-೫ ಸ್ವರಾಟ್ತ್ರಿಷ್ಟುಪ್, ೬ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಪರಮೇಶ್ವರನ ಗುಣವರ್ಣನೆಯನ್ನು ಇಲ್ಲಿ ಮಾಡಲಾಗಿದೆ.

**ಅಭೂದ್ದೇವಃ ಸವಿತಾ ವಂದ್ಯೋ ನು ನ ಇದಾನೀಮಹ್ನ ಉಪವಾಚ್ಯೋ ನೃಭಿಃ । ವಿ ಯೋ**
**ರತ್ನಾ ಭಜತಿ ಮಾನವೇಭ್ಯಃ ಶ್ರೇಷ್ಠಂ ನೋ ಅತ್ರ ದ್ರವಿಣಂ ಯಥಾ ದಧತ್ ॥೧॥**

**ಪದಾರ್ಥ:-** [**ಯಃ**] ಯಾವನು [**ಇದಾನೀಂ**] ಈಗ [**ಅಹ್ನಃ**] ಹಗಲಿನಲ್ಲಿ [**ನೃಭಿಃ**] ಮುಖ್ಯಸ್ಥರಿಂದ [**ಉಪವಾಚ್ಯಃ**] ಉಪದೇಶ ಯೋಗ್ಯನಾಗಿ [**ನಃ**] ನಮ್ಮ [**ವಂದ್ಯಃ**] ಪ್ರಶಂಸೆಗೆ ಅರ್ಹ [**ಸವಿತಾ**] ಸಮಗ್ರ ಸಂಪತ್ತು ಮತ್ತು [**ದೇವಃ**] ಉತ್ತಮ ಸುಖ ನೀಡುವವನು [**ಅಭೂತ್**] ಆಗುವನು. [**ನಃ**] ನಮ್ಮ [**ಮಾನವೇಭ್ಯಃ**] ಮನನ ಶೀಲರಿಗೆ [**ರತ್ನಾ**] ರಮಣಯೋಗ್ಯ ಧನವನ್ನು [**ಯಥಾ**] ಹೇಗೆ [**ವಿ, ಭಜತಿ**] ಹಂಚುವನು. [**ಅತ್ರ**] ಇಲ್ಲಿ [**ಶ್ರೇಷ್ಠಂ**] ಉತ್ತಮ [**ದ್ರವಿಣಂ**] ದ್ರವ್ಯಗಳನ್ನು [**ನು**] ಬೇಗನೇ [**ದಧತ್**] ಧಾರಣ ಮಾಡಿಸುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ನತದೃಷ್ಟರೋ ಅವರು ಸಕಲೈಶ್ವರ್ಯ ಪ್ರದಾಯಕ, ಕೀರ್ತಿದಾಯಕ, ವಂದನೀಯ, ಸ್ತುತ್ಯರ್ಹ, ಉಪಾಸಾನಾರ್ಹ, ಉಪದೇಶಕ ಪರಮಾತ್ಮನನ್ನು ಬಿಟ್ಟು ಬೇರೆಯದನ್ನೇ ಭಜಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವೇಭ್ಯೋ ಹಿ ಪ್ರಥಮಂ ಯಜ್ಞಿಯೇಭ್ಯೋಽಮೃತತ್ವಂ ಸುವಸಿ ಭಾಗಮುತ್ತಮಮ್ ।**
**ಆದಿದ್ದಾಮಾನಂ ಸವಿತರ್ವ್ಯೂರ್ಣುಷೇಽನೂಚೀನಾ ಜೀವಿತಾ ಮಾನುಷೇಭ್ಯಃ ॥೨॥**

**ಪದಾರ್ಥ:-** [**ಸವಿತಾ**] ಜಗತ್ತಿನ ಜನ್ಮದಾತಾ ಜಗದೀಶ್ವರನು [**ಹಿ**] ಯಾವ ಕಾರಣದಿಂದ [**ಯಜ್ಞಿಯೇಭ್ಯಃ**] ಯಜ್ಞಾಚರಣೆ ಮಾಡುವ [**ದೇವೇಭ್ಯಃ**] ಶ್ರೇಷ್ಠಕರ್ಮಾನುಷ್ಠಾನ ಮಾಡುವ ಜನರಿಗಾಗಿ [**ಪ್ರಥಮಂ**] ಮೊದಲು [**ಭಾಗಂ**] ಭಜಿಸಲು ಯೋಗ್ಯವಾದ [**ಉತ್ತಮಂ**] ಶ್ರೇಷ್ಠವಾದ [**ಅಮೃತತ್ವಂ**] ಮೋಕ್ಷವನ್ನು [**ಸುವಾಸಿ**] ಪ್ರೇರೇಪಿಸುವನು. [**ಆತ್**] ಆನಂತರ [**ದಾಮಾನಂ**] ದಾನಿಗಳಿಗೆ [**ವಿ, ಊರ್ಣುಷೇ**] ತನ್ನ ವ್ಯಾಪ್ತಿಯನ್ನು ವಿಸ್ತರಿಸುವನು. [**ಅನೂಚೀನಾ**] ಅನುಚರಣರಾಗಿ [**ಜೀವಿತಾ**] ಜೀವಿಸುವವರಿಗೆ [**ಇತ್**] ಅಂತಹ [**ಮಾನುಷೇಭ್ಯಃ**] ಮನುಷ್ಯರಿಗೂ ತನ್ನ ವ್ಯಾಪ್ತಿಯನ್ನು ಕೊಡುವನು.

**ಭಾವಾರ್ಥ:-** ಮನುಷ್ಯರೇ! ಪರಮಾತ್ಮನು ಸತ್ಯಾಚರಣೆಗೆ ಪ್ರೇರಣೆ ನೀಡುವನು. ಮುಕ್ತಿಯನ್ನು ಕರುಣಿಸಿ ಎಲ್ಲರನ್ನೂ ಆನಂದಗೊಳಿಸುವನು. ಆದ್ದರಿಂದ ಅವನನ್ನೇ ಎಲ್ಲರೂ ಭಜಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಚಿತ್ತೀ ಯಚ್ಚಕೃಮಾ ದೈವ್ಯೇ ಜನೇ ದೀನೈರ್ದಕ್ಷೈಃ ಪ್ರಭೂತೀ ಪೂರುಷತ್ವತಾ ।**
**ದೇವೇಷು ಚ ಸವಿತರ್ಮಾನುಷೇಷು ಚ ತ್ವಂ ನೋ ಅತ್ರ ಸುವತಾದನಾಗಸಃ ॥೩॥**

**ಪದಾರ್ಥ:-** [**ಸವಿತಃ**] ಜಗತ್ತಿನ ಸೃಷ್ಟಿಕರ್ತನೇ! [**ಅಚಿತ್ತೀ**] ಅವಿದ್ಯೆಯಿಂದ [**ಪ್ರಭೂತೀ**] ಅತಿಶಯದಿಂದ [**ದೀನೈಃ**] ದುರ್ಬಲರಾದವರಿಂದ [**ದಕ್ಷೈಃ**] ಚತುರರಿಂದ [**ಪೂರುಷತ್ವತಾ**] ಪುರುಷಾರ್ಥಗಳಿಂದ [**ದೈವ್ಯೇ**] ದಿವ್ಯ ಗುಣ ಸಂಪನ್ನರಾದ [**ಜನೇ**] ಜನರಲ್ಲಿ [**ದೇವೇಷು**] [**ಚ**] ವಿದ್ಯಾವಂತರಲ್ಲೂ [**ಮಾನುಷೇಷು**] [**ಚ**] ಅವಿದ್ಯಾವಂತರಲ್ಲೂ ಸಹ [**ಯತ್**] ಯಾವ ಕರ್ಮವನ್ನು [**ಚಕೃಮಾ**] ಸ್ಥಿರಗೊಳಿಸಿರುವೆಯೋ [**ಅತ್ರ**] ಇವುಗಳಲ್ಲಿ [**ನಃ**] ನಮಗೆ [**ಅನಾಗಸಃ**] ಅನಪರಾಧಿಗಳಿಗೆ [**ತಂ**] ನೀನು [**ಸುವತಾತ್**] ಪ್ರೇರಣೆ ನೀಡು.

**ಭಾವಾರ್ಥ:-** ವಿದ್ಯಾವಂತರೇ! ನಾವೆಲ್ಲರೂ ಅವಿದ್ಯೆಯಿಂದಾಗಿ ಅಪರಾಧವೆಸಗುತ್ತೇವೆ. ಅವು ಕ್ಷಮಿಸಲರ್ಹವಾಗಿರುತ್ತವೆ. ಆದ್ದರಿಂದ ನೀವು ಅವರಿಗೆ ಅಧ್ಯಾಪನೋಪದೇಶ ಮಾಡಿ ಕ್ಷಮಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನ ಪ್ರಮಿಯೇ ಸವಿತುರ್ದೈವ್ಯಸ್ಯ ತ-ದ್ಯಥಾ ವಿಶ್ವಂ ಭುವನಂ ಧಾರಯಿಷ್ಯತಿ ।**
**ಯತ್ ಪೃಥಿವ್ಯಾ ವರಿಮನ್ನಾ ಸ್ವಂಗುರಿ-ರ್ವರ್ಷ್ಮನ್ ದಿವಃ ಸುವತಿ ಸತ್ಯಮಸ್ಯ ತತ್ ॥೪॥**

**ಪದಾರ್ಥ:-** **[ವರಿಮನ್]** ಬಹುಗುಣ ಸಂಪನ್ನ **[ವರ್ಷ್ಮ]** ಮಳೆಗರೆಯುವ ಪರಮಾತ್ಮನು **[ಯಥಾ]** ಹೇಗೆ **[ಸವಿತುಃ]** ಸೃಷ್ಟಿಕರ್ತನ **[ದೈವ್ಯಸ್ಯ]** ಶ್ರೇಷ್ಠ ಪದಾರ್ಥಗಳ **[ಯತ್]** ಯಾವ **[ವಿಶ್ವಂ]** ಸಮಗ್ರ **[ಭುವನಂ]** ಲೋಕಗಳನ್ನು **[ಧಾರಯಿಷ್ಯತಿ]** ಧಾರಣ ಮಾಡಿಸುವನು. **[ಪೃಥಿವ್ಯಾಃ]** ಭೂಮಿಗೆ ಸಂಬಂಧಿಸಿದ **[ಸ್ವಂ ಗುರಿಃ]** ಸಿದ್ಧಹಸ್ತ ಪುರುಷನು **[ಅಸ್ಯ]** ಈ **[ದಿವಃ]** ಸುಂದರ ಪದಾರ್ಥಗಳ **[ಯತ್]** **[ಸತ್ಯಂ]** ಯಾವ ಸತ್ಯವೋ **[ತತ್]** **[ಸುವತಿ]** ಅದಕ್ಕೆ ಪ್ರೇರೇಪಿಸುವನು **[ನ]** **[ಪ್ರಮಿಯೇ]** ಮರಣಪ್ರಾಪ್ತಿಯಾಗುವುದಿಲ್ಲ. **[ಆ]** ಅದರಂತೆ ಆಚರಿಸಿರಿ.

**ಭಾವಾರ್ಥ:-** ವಿದ್ಯಾವಂತರೇ! ಬ್ರಹ್ಮನು ಜಗದ್ಧಾರಣ ಮಾಡುವನು. ಸೂರ್ಯ ಮತ್ತು ವಾಯುಗಳಿಂದ ಅದನ್ನು ಧಾರಣ ಮಾಡಿಸುವನು. ವೇದದ ಮೂಲಕ ಆ ರಹಸ್ಯವನ್ನು ಪ್ರಕಟಿಸುವನು. ಅದರ ಉಪಾಸನೆಯನ್ನೇ ಎಲ್ಲರೂ ಮಾಡೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಜ್ಯೇಷ್ಠಾನ್ ಬೃಹದ್ಭ್ಯಃ ಪರ್ವತೇಭ್ಯಃ, ಕ್ಷಯಾಁ ಏಭ್ಯಃ ಸುವಸಿ ಪಸ್ತ್ಯಾವತಃ ।**
**ಯಥಾಯಥಾ ಪತಯಂತೋ ವಿಯೇಮಿರ ಏವೈವ ತಸ್ಥುಃ ಸವಿತಃ ಸವಾಯ ತೇ ॥೫॥**

**ಪದಾರ್ಥ:-** **[ಸವಿತಃ]** ಜಗದೀಶ್ವರನು **[ಯಥಾ-ಯಥಾ]** ಹೇಗೆ ಹೇಗೆ **[ಬೃಹದ್ಭ್ಯಃ]** ದೊಡ್ಡ **[ಏಭ್ಯಃ]** ಈ **[ಪರ್ವತೇಭ್ಯಃ]** ಮೇಘಗಳಿಂದ **[ಪುತ್ಯಾವತಃ]** ಪ್ರಶಂಸಿತ ಗೃಹಗಳಿರುವ **[ಇಂದ್ರ ಜ್ಯೇಷ್ಠಾನ್]** ಮಿಂಚು ಸೂರ್ಯಾದಿಗಳಿರುವ **[ಕ್ಷಯಾನ್]** ನಿವಾಸಗಳನ್ನು **[ಸುವಸಿ]** ಪ್ರೇರೇಪಿಸಿರುವನೋ **[ಪತಯಂತಃ]** ಹಾಗೆ ಅವುಗಳನ್ನು ಪಾಲಿಸುವವನಾಗಿ **[ಏವ]** ಅವನೇ ಎಲ್ಲವನ್ನೂ **[ವಿ, ಯೇಮಿರೇ]** ವಿಶೇಷ ರೀತಿಯಲ್ಲಿ ಕರುಣಿಸುವನು. **[ತೇ]** ನಿಮ್ಮ **[ಸವಾಯ]** **[ಹಿ]** ಸಂಪತ್ತಿಗಾಗಿಯೇ **[ತಸ್ಥು]** ಅವೆಲ್ಲವೂ ಇರುವುವು.

**ಭಾವಾರ್ಥ:-** ಪರಮೇಶ್ವರನು ತನ್ನ ಪ್ರಜೆಗಳಿಗಾಗಿಯೇ ನಿವಾಸಕಾರಣವಾದ ಭೂಮಿ, ಸೂರ್ಯ, ವಾಯು ಮುಂತಾದ ಲೋಕವನ್ನು ನಿರ್ಮಿಸಿರುವನು. ಅವನಿಗೆ ನೀವು ಕೃತಜ್ಞತೆಯನ್ನು ಸಲ್ಲಿಸುತ್ತ ನಿಮ್ಮ ಗೃಹ ಧನಾದಿಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯೇ ತೇ ತ್ರಿರಹನ್ ತ್ಸವಿತಃ ಸವಾಸೋ ದಿವೇದಿವೇ ಸೌಭಗಮಾಸುವಂತಿ ।**
**ಇಂದ್ರೋ ದ್ಯಾವಾಪೃಥಿವೀ ಸಿಂಧುರದ್ಭಿ-ರಾದಿತ್ಯೈರ್ನೋ ಅದಿತಿಃ ಶರ್ಮ ಯಂಸತ್ ॥೬॥**

**ಪದಾರ್ಥ:-** **[ಸವಿತಃ]** ಪರಮಾತ್ಮನು **[ತೇ]** ನಿನ್ನ **[ಯೇ]** ಯಾವ **[ಸವಾಸಃ]** ಉತ್ಪನ್ನ ಪದಾರ್ಥಗಳನ್ನು **[ಅಹನ್]** ಹಗಲಿನಲ್ಲಿ **[ದಿವೇ-ದಿವೇ]** ಪ್ರತಿದಿನವೂ **[ಸೌಭಾಗ್ಯಂ]** ಶ್ರೇಷ್ಠಸಂಪತ್ತನ್ನು **[ತ್ರಿಃ]** ಮೂರು ಬಾರಿ

**[ಆಸುವಂತಿ]** ಉತ್ಪಾದಿಸುವನು **[ಅದ್ಭಿಃ]** ನೀರಿನಿಂದ **[ಆದಿತ್ಯೈಃ]** ಮಾಸಗಳಿಂದ **[ಇಂದ್ರಃ]** ಸೂರ್ಯನು **[ದ್ಯಾವಾಪೃಥಿವೀ]** ಭೂಮಿ ಬೆಳಕು **[ಸಿಂಧುಃ]** ಸಾಗರಗಳನ್ನು ಉತ್ಪಾದಿಸುವರು. **[ಅದಿತಿಃ]** ಅಖಂಡ ಪರಮಾತ್ಮನು **[ನಃ]** ನಮಗೆ **[ಶರ್ಮ]** ಸುಖವನ್ನು **[ಯಂಸತ್]** ಅನುಗ್ರಹಿಸಲಿ.

**ಭಾವಾರ್ಥ:-** ಮನುಷ್ಯರೇ! ಯಾವ ಪರಮಾತ್ಮನ ಸೃಷ್ಟಿಯಲ್ಲಿ ನಾವೆಲ್ಲರೂ ಧನವಂತರಾಗಿರುವೆವೋ, ಅವನ ಸೃಷ್ಟಿಯಲ್ಲಿ ನಮ್ಮ ಬದುಕಿಗೆ ಬೇಕಾದ ರಕ್ಷಣಾದಿ ಪದಾರ್ಥಗಳಿವೆಯೋ ಅವುಗಳನ್ನು ನಾವಿಲ್ಲಿ ಭಜಿಸೋಣ, ನಾಶಗೊಳಿಸದಿರೋಣ.

ಈ ಸೂಕ್ತದಲ್ಲಿ ಈಶ್ವರ ಸೃಷ್ಟಿ, ಅವುಗಳಲ್ಲಿ ಪದಾರ್ಥಗಳ ಗುಣಧರ್ಮಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೫೫

ಮಂತ್ರಸಂಖ್ಯೆ ೧೦ । ವಾಮದೇವ ಋಷಿಃ । ವಿಶ್ವೇದೇವಾ ದೇವತಾಃ । ೧ ತ್ರಿಷ್ಟುಪ್, ೩, ೪ ನಿಚೃತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨, ೫ ಭುರಿಕ್ಪಂಕ್ತಿ, ೬-೭ ಸ್ವರಾಟ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೮, ೯ ವಿರಾಡ್ಗಾಯತ್ರೀ, ೧೦ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಈಶ ಕೃಪೆ ಯಾರ ಮೇಲಾಗುತ್ತದೆ ಎಂಬುದನ್ನು ಹೇಳಲಾಗಿದೆ.

**ಕೋ ವಸ್ತ್ರಾತಾ ವಸವಃ ಕೋ ವರೂತಾ ದ್ಯಾವಾಭೂಮೀ ಅದಿತೇ ತ್ರಾಸೀಥಾಂ ನಃ । ಸಹೀಯಸೋ**
**ವರುಣ ಮಿತ್ರ ಮರ್ತಾತ್ ಕೋ ವೋಽಧ್ವರೇ ವರಿವೋ ಧಾತಿ ದೇವಾಃ ॥೧॥**

**ಪದಾರ್ಥ:-** **[ವರುಣ]** ವಿದ್ಯಾವಂತ ಅಧ್ಯಾಪಕ **[ಮಿತ್ರ]** ಉಪದೇಶಕ **[ಸಹೀಯಸಃ]** ಸಹನಶೀಲ ಬಲಿಷ್ಠ, **[ನಃ]** ನಮ್ಮ **[ವಃ]** ನಿಮ್ಮ **[ಅಧ್ವರೇ]** ಸತ್ಯವ್ಯವಹಾರದಲ್ಲಿ **[ಕಃ]** ಯಾರು **[ಮರ್ತಾತ್]** ಮನುಷ್ಯರಿಂದ **[ವರಿವಃ]** ಸೇವನೆಯನ್ನು **[ಧಾತಿ]** ಧಾರಣ ಮಾಡುವನು, **[ದ್ಯಾವಾಭೂಮಿ]** ಬೆಳಕು ಮತ್ತು ಭೂಮಿಯಂತೆ **[ತ್ರಾಸೀಥಾಂ]** ರಕ್ಷಣೆ ಮಾಡಿರಿ. **[ವಸವಃ]** ವಾಸಮಾಡುವ **[ದೇವಾಃ]** ವಿದ್ವಾಂಸರೇ! **[ವಃ]** ನಿಮ್ಮನ್ನು **[ಕಃ]** ಯಾವನು **[ತ್ರಾತಾ]** ರಕ್ಷಕನು? **[ವರೂತಾ]** ಸ್ವೀಕರಿಸುವನು?

**ಭಾವಾರ್ಥ:-** ಯಾವನು ಪರಮೇಶ್ವರನ ಆಜ್ಞಾಪಾಲಕನು? ಅವನನ್ನೇ ಪರಮೇಶ್ವರನು ಸ್ವೀಕರಿಸುವನು. ಅವನೇ ನಮ್ಮ ಮತ್ತು ನಿಮ್ಮ ರಕ್ಷಕನು. ಅವನೇ ನಮ್ಮಿಂದ ಸೇವೆಮಾಡಿಸಿಕೊಳ್ಳಲು ಅರ್ಹನು. ಅಹಿಂಸೆಯಿಂದ ಎಲ್ಲರ ವಿಜ್ಞಾನದಲ್ಲೂ ಅವನಿರುವನು. ಅವನ ಸೇವೆಯನ್ನೇ ಎಲ್ಲರೂ ಮಾಡಬೇಕು.

ಯಾರು ಸುಖಿಗಳು ಎಂಬ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಯೇ ಧಾಮಾನಿ ಪೂರ್ವ್ಯಾಣ್ಯರ್ಚಾನ್ ವಿ ಯದುಚ್ಛಾನ್ ವಿಯೋತಾರೋ ಅಮೂರಾಃ ।**
**ವಿಧಾತಾರೋ ವಿ ತೇ ದಧುರಜಸ್ರಾ ಋತಧೀತಯೋ ರುರುಚಂತ ದಸ್ಮಾಃ ॥೨॥**

**ಪದಾರ್ಥ:-** [**ಯೇ**] ಯಾರು [**ಪೂರ್ವ್ಯಾಣಿ**] ಹಿಂದಿನವರು ಸಿದ್ಧಪಡಿಸಿದ [**ಧಾಮಾನಿ**] ಜನ್ಮ, ಹೆಸರು, ಸ್ಥಾನಗಳನ್ನು [**ಪ್ರ, ಆರ್ಚಾನ್**] ಉತ್ತಮವಾಗಿ ಗೌರವಿಸುವವರೋ [**ಯತ್**] ಯಾವರು [**ಅಮೂರಾಃ**] ಮೂರ್ಖರಲ್ಲವೋ [**ವಿಯೋತಾರಃ**] ವಿಭಾಗಗೊಳಿಸುವವರೋ [**ವಿ, ಉಚ್ಛನ್**] ಜನ್ಮ, ನಾಮ, ಸ್ಥಾನಗಳ ವಿಚಾರವನ್ನು ನೆಲೆಗೊಳಿಸುವರೋ [**ಅಜಸ್ರಾ**] ಅಹಿಂಸಕ [**ಋತಧೀತಯಃ**] ಸತ್ಯಧಾರಕರೋ [**ವಿಧಾತಾರಃ**] ನಿರ್ಮಾಪಕರೋ [**ದಸ್ಮಾಃ**] ದುಃಖ ದಮನ ಮಾಡುವವರೋ [**ರುರುಚಂತ**] ಸುಶೋಭಿತರಾಗುವರು. [**ತೇ**] ಅವರು [**ವಿ, ದಧುಃ**] ನಿರಂತರ ವಿಧಾನ ಮಾಡುವರು.

**ಭಾವಾರ್ಥ:-** ಯಾರು ಯಥಾರ್ಥ ನುಡಿಯುವವರು, ಎಲ್ಲರಿಗೂ ಸುಖವನ್ನು ಬಯಸುವವರೂ ಆದ ವಿದ್ವಾಂಸರೋ, ಅವರೇ ಎಲ್ಲರಿಗೂ ಸುಖದಾಯಕರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಪಸ್ತ್ಯಾ೩ (ಆ) ೩ ಮದಿತಿಂ ಸಿಂಧುಮರ್ಕೈಃ ಸ್ವಸ್ತಿಮೀಳೇ ಸಖ್ಯಾಯ ದೇವೀಮ್ ।**
**ಉಭೇ ಯಥಾ ನೋ ಅಹನೀ ನಿಪಾತ ಉಷಾಸಾನಕ್ತಾ ಕರತಾಮದಬ್ಧೇ ॥೩॥**

**ಪದಾರ್ಥ:-** [**ಯಥಾ**] ಹೇಗೆ [**ಉಭೇ**] ಇಬ್ಬರೂ [**ಅಹನೀ**] ಹಗಲು ಮತ್ತು ರಾತ್ರಿಗಳು [**ಉಷಾಸಾನಕ್ತಾ**] ಹಗಲು ರಾತ್ರಿಗಳ [**ಅದಬ್ಧೇ**] ದಮನ ಮಾಡದೆ [**ಕರತಾಂ**] ರಚನೆ ಮಾಡಿರುವವರೋ ಹಾಗೆ [**ನಃ**] ನಮ್ಮನ್ನು [**ನಿಪಾತಃ**] ಪಾಲನೆಮಾಡುವುದರಲ್ಲಿ [**ಅರ್ಕೈಃ**] ಮಂತ್ರಗಳಿಂದ [**ಅದಿತಿಂ**] ಖಂಡರಹಿತ [**ಪಸ್ತ್ಯಾಂ**] ಸದನವನ್ನು ಮತ್ತು [**ಸಿಂಧುಂ**] ನದಿಯನ್ನು [**ಸ್ವಸ್ತಿಂ**] ಸುಖವನ್ನು [**ಸಖ್ಯಾಯ**] ಸ್ನೇಹತನಕ್ಕಾಗಿ [**ದೇವೀಂ**] ಸುಶಿಕ್ಷಿತ ವಾಣಿಯನ್ನೂ [**ಪ್ರ ಈಳೇ**] ವಿಶೇಷ ರೀತಿಯಲ್ಲಿ ಬಯಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇಗೆ ಹಗಲು ರಾತ್ರಿಗಳೂ ಜೊತೆಯಾಗಿ ವ್ಯವಹರಿಸುತ್ತವೆಯೋ ಮತ್ತು ಎಲ್ಲರ ವ್ಯವಹಾರಗಳಿಗೆ ಕಾರಣವಾಗಿರುತ್ತವೆಯೋ ಹಾಗೆ ನಾವಿಬ್ಬರೂ ಹಿತ ಬಯಸುವ ಮಿತ್ರನಂತೆ ಸ್ತ್ರೀಪುರುಷರು ಉತ್ತಮ ಗೃಹ ಮತ್ತು ಸುಖಗಳ ಅಭಿವೃದ್ಧಿಗೊಳಿಸುವೆವು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವ್ಯರ್ಯಮಾ ವರುಣಶ್ಚೇತಿ ಪಂಥಾ-ಮಿಷಸ್ಪತಿಃ ಸುವಿತಂ ಗಾತುಮಗ್ನಿಃ ।**
**ಇಂದ್ರಾವಿಷ್ಣೂ ನೃವದು ಷು ಸ್ತವಾನಾ ಶರ್ಮ ನೋ ಯಂತಮಮವದ್ವರೂಥಮ್ ॥೪॥**

**ಪದಾರ್ಥ:-** [**ಅರ್ಯಮಾ**] ನ್ಯಾಯದಾಯಕನು [**ವರುಣಃ**] ಶ್ರೇಷ್ಠಪುರುಷನು [**ಪಂಥಾಂ**] ಧರ್ಮಮಾರ್ಗವನ್ನು [**ವಿ, ಚೇತಿ**] ವಿಶೇಷ ರೀತಿಯಿಂದ ತಿಳಿದಿರುವರು. [**ಗಾತುಂ**] ಭೂಮಿಯನ್ನು [**ಅಗ್ನಿಃ**] ಅಗ್ನಿಯಂತೆ ಇರುವ [**ಇಷಃ**] ಅನ್ನಾದಿಗಳ [**ಪತಿಃ**] ಸ್ವಾಮಿ [**ಸುವಿತಂ**] ಉತ್ಪನ್ನ ವಸ್ತುಗಳನ್ನು ತಿಳಿದಿರುವನು [**ಇಂದ್ರಾವಿಷ್ಣೂ**] ಮಿಂಚುಗಾಳಿಗಳಂತಿರುವ [**ಸ್ತವಾನಾ**] ಪ್ರಶಂಸೆ ಮಾಡುವವರೇ! ನೀವಿಬ್ಬರು [**ನೃವತ್**] ಪ್ರಧಾನ ಪುರುಷರಂತೆ [**ಉ**] ಮತ್ತು [**ನಃ**] ನಮ್ಮ [**ಅಮವತ್**] ಪ್ರಶಂಸಾರ್ಹ [**ಶರ್ಮ**] ಸುಖ ಮತ್ತು [**ವರೂಥಂ**] ಸದನಗಳನ್ನು [**ಸು, ಯಂತಂ**] ಉತ್ತಮವಾಗಿ ಪ್ರಾಪ್ತಿಗೊಳಿಸಿರಿ.

**ಭಾವಾರ್ಥ:-** ಮನುಷ್ಯರೇ! ನ್ಯಾಯಕಾರಕ ವಿದ್ವಾಂಸರು ಹೇಗೆ ಅಧರ್ಮ ಮಾರ್ಗ ತ್ಯಜಿಸಿ ಧರ್ಮ ಮಾರ್ಗವನ್ನು ಅನುಸರಿಸುವರೋ ಹಾಗೇ ನೀವೂ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ಪರ್ವತಸ್ಯ ಮರುತಾಮವಾಂಸಿ ದೇವಸ್ಯ ತ್ರಾತುರವ್ರಿ ಭಗಸ್ಯ ।**
**ಪಾತ್ ಪತಿರ್ಜನ್ಯಾದಂಹಸೋ ನೋ ಮಿತ್ರೋ ಮಿತ್ರಿಯಾದುತ ನ ಉರುಷ್ಯೇತ್ ॥೫॥**

**ಪದಾರ್ಥ:-** **[ಪರ್ವತಸ್ಯ]** ಮೇಘದ **[ದೇವಸ್ಯ]** ಸುಖಪಡೆಯುವವನ **[ಭಗಸ್ಯ]** ಸಂಪತ್ತಿನ **[ತ್ರಾತುಃ]** ರಕ್ಷಕನ ಮತ್ತು **[ಮರುತಾಂ]** ಮನುಷ್ಯರ **[ಅವಾಂಸಿ]** ರಕ್ಷಣೆಗಳನ್ನು **[ಆ, ಅವ್ರಿ]** ಸ್ವೀಕರಿಸುವೆನು. **[ಪತಿಃ]** ಸ್ವಾಮಿಯಾದ ನಾನು **[ನಃ]** ನಮ್ಮ **[ಜನ್ಯಾತ್]** ಉತ್ಪನ್ನವಾಗುವ **[ಅಂಹಸಃ]** ಅಪರಾಧದಿಂದ **[ಪಾತ್]** ರಕ್ಷಣೆ ಮಾಡು. **[ನಃ]** ನಮ್ಮನ್ನು **[ಉತ]** ಆದರೂ **[ಮಿತ್ರಿಯಾತ್]** ಸ್ನೇಹಭಾವದಿಂದ **[ಉರುಷ್ಯೇತ್]** ಸೇವನೆ ಮಾಡು.

**ಭಾವಾರ್ಥ:-** ಮನುಷ್ಯನು ಯಥಾರ್ಥ ತಿಳಿದವನು ಹಾಗೂ ಅದನ್ನು ಆಚರಿಸುವವನನ್ನು ಇಚ್ಛಿಸಬೇಕು. ತಾನೂ ಯಥಾರ್ಥಜ್ಞಾನವನ್ನು ತಿಳಿದು ಅದನ್ನು ಆಚರಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ರೋದಸೀ ಅಹಿನಾ ಬುಧ್ನ್ಯೇನ ಸ್ತುವೀತ ದೇವೀ ಅಪ್ಯೇಭಿರಿಷ್ಟೈಃ । ಸಮುದ್ರಂ**
**ನ ಸಂಚರಣೇ ಸನಿಷ್ಯವೋ ಘರ್ಮಸ್ವರಸೋ ನದ್ಯೋ (ಓ) ೩ ಅಪ ವ್ರನ್ ॥೬॥**

**ಪದಾರ್ಥ:-** **[ಧರ್ಮಸ್ವರಸಃ]** ಧರ್ಮಾಚರಣೆಯಲ್ಲಿ ರಸಮಯನಾದ ನೀನು **[ಇಷ್ಟೈಃ]** ಪಡೆಯಲರ್ಹವಾದ **[ಅಪ್ಯೇಭಿಃ]** ಜಲೋತ್ಪನ್ನ ಪದಾರ್ಥಗಳೊಂದಿಗೆ **[ಸನಿಷ್ಯವಃ]** ವಿಭಾಗಗೊಳಿಸುವ **[ನದ್ಯಃ]** ನದಿಗಳು **[ಸಂಚರಣೇ]** ಗಮನ ಮಾರ್ಗದಲ್ಲಿ **[ಸಮುದ್ರಂ]** **[ನ]** ಸಮುದ್ರವನ್ನು ಹೇಗೋ ಹಾಗೆ **[ಅಪ, ವ್ರನ್]** ಸುತ್ತುವರಿಯುವರು. **[ಬುಧ್ನ್ಯೇನ]** ಅಂತರಿಕ್ಷದಲ್ಲುಂಟಾದ **[ಅಹಿನಾ]** ಮೋಡದೊಂದಿಗೆ **[ದೇವೀ]** ಪ್ರಕಾಶಮಾನವಾದ **[ರೋದಸೀ]** ನಭೋಂತರಿಕ್ಷಗಳನ್ನು **[ನೂ]** **[ಸ್ತುವೀತ]** ಶೀಘ್ರ ಪ್ರಶಂಸೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮೇಘೋತ್ಪನ್ನ ನೀರಿನಿಂದ ನದಿಗಳು ತುಂಬಿ ಹೇಗೆ ಸಮುದ್ರಕ್ಕೆ ನೀರನ್ನೊದಗಿಸುತ್ತವೆಯೋ, ಹಾಗೆ ನೀವು ವಿದ್ಯೆಯೆಂಬ ಬೆಳಕನ್ನು ಪಡೆದು ಎಲ್ಲಾ ವಿಧವಾದ ಜ್ಞಾನಯಜ್ಞವನ್ನು ವೃದ್ಧಿಪಡಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವೈರ್ನೋ ದೇವ್ಯದಿತಿರ್ನಿ ಪಾತು ದೇವಸ್ತ್ರಾತಾ ತ್ರಾಯತಾಮಪ್ರಯುಚ್ಛನ್ ।**
**ನಹಿ ಮಿತ್ರಸ್ಯ ವರುಣಸ್ಯ ಧಾಸಿ-ಮರ್ಹಾಮಸಿ ಪ್ರಮಿಯಂ ಸಾನ್ವಗ್ನೇಃ ॥೭॥**

(ಮಂಡಲ ೪, ಸೂಕ್ತ ೫೫, ಮಂತ್ರ ೭)

**ಪದಾರ್ಥ:-** **[ವರುಣಸ್ಯ]** ಶ್ರೇಷ್ಠ ಪುರುಷನ **[ಮಿತ್ರಸ್ಯ]** ಗೆಳೆಯನ **[ಅಗ್ನೇಃ]** ಮತ್ತು ಅಗ್ನಿಯ **[ಸಾನು]** ಶಿಖರ ಮತ್ತು **[ಧಾಸಿಂ]** ಅನ್ನವನ್ನು **[ಪ್ರಮೀಯಂ]** ನಾಶಮಾಡಲು **[ನಹಿ]** **[ಅರ್ಹಾಮಸಿ]** ಯೋಗ್ಯನಾಗುವುದಿಲ್ಲ. **[ದೇವೈಃ]** ದಿವ್ಯಗುಣಸಂಪನ್ನ ಪೃಥಿವ್ಯಾದಿಗಳೊಂದಿಗೆ **[ದೇವೀ]** ಪ್ರಕಾಶಮಾನಳಾದ **[ಅದಿತಿಃ]** ಅಖಂಡಿತ ಜ್ಞಾನವತಿಯು **[ನಃ]** ನಮ್ಮೆಲ್ಲರನ್ನು **[ನಿ, ಪಾತು]** ರಕ್ಷಣೆ ಮಾಡಲಿ. **[ಅಪ್ರಯುಚ್ಛನ್]** ಪ್ರಮಾದವೆಸಗದೆ **[ತ್ರಾತಾ]** ರಕ್ಷಕನು **[ದೇವಃ]** ತಂದೆಯಂತೆ **[ತ್ರಾಯತಾಂ]** ನಮ್ಮನ್ನು ರಕ್ಷಿಸಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರತಿಯೊಬ್ಬ ಮನುಷ್ಯನು ಯಾವುದೇ ಸಜ್ಜನರ ಯಾವುದೇ ವಸ್ತುವನ್ನಾಗಲೀ ನಾಶಮಾಡಬಾರದು. ನಾಶಕಾರಕ ಪದಾರ್ಥಗಳನ್ನೂ ಸೇವಿಸಬಾರದು. ವಿದ್ಯಾವಂತರಿಂದ ಜನನೀ ಜನಕರಿಂದ ನಿರಂತರ ವಿದ್ಯಾಗ್ರಹಣ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿರೀಶೇ ವಸವ್ಯಸ್ಯಾ-ಗ್ನಿರ್ಮಹಃ ಸೌಭಗಸ್ಯ । ತಾನ್ಯಸ್ಮಭ್ಯಂ ರಾಸತೇ ॥೮॥**

**ಪದಾರ್ಥ:-** **[ಅಗ್ನಿಃ]** ಅಗ್ನಿಯಂತಿರುವ ಪುರುಷಾರ್ಥಿಯು **[ವಸವ್ಯಸ್ಯ]** ಶ್ರೇಷ್ಠಧನದ **[ಅಗ್ನಿಃ]** ಅಗ್ನಿಯು **[ಮಹಃ]** **[ಸೌಭಗಸ್ಯ]** ಅತಿಶಯ ಐಶ್ವರ್ಯಕ್ಕಾಗಿ **[ಈಶೇ]** ಇಚ್ಛೆ ಮಾಡುವನು. **[ತಾನಿ]** ಅವುಗಳನ್ನು **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ರಾಸತೇ]** ಕೊಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ವಾಂಸರೇ! ವಿದ್ಯೆಯಿಂದ ವಶಪಡಿಸಿಕೊಂಡ ಅಗ್ನಿಯು ಹೇಗೆ ನಮ್ಮ ಕಾರ್ಯವನ್ನು ಸಾಧಿಸಿ ಸಿರಿವಂತರನ್ನಾಗಿಸುವನೋ, ಅದೇರೀತಿ ಸೇವೆಗೊಳಗಾಗುವ ನೀವು ವಿದ್ಯೋಪದೇಶಗಳಿಂದ ಎಲ್ಲರ ಐಶ್ವರ್ಯವನ್ನು ಸಿದ್ಧಿಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಷೋ ಮಘೋನ್ಯಾ ವಹ ಸೂನೃತೇ ವಾರ್ಯಾ ಪುರು । ಅಸ್ಮಭ್ಯಂ ವಾಜಿನೀವತಿ ॥೯॥**

**ಪದಾರ್ಥ:-** **[ಉಷಃ]** ಬೆಳಗಿನ ಸಮಯದಂತಿರುವ **[ಸೂನೃತೇ]** ಸತ್ಯವಂತನು **[ಮಘೋನಿ]** ಶ್ರೇಷ್ಠ ಧನಸಂಪನ್ನ **[ವಾಜಿನೀವತಿ]** ವಿದ್ಯಾವತಿ ಸ್ತ್ರೀಯೇ! ನೀನು **[ಅಸ್ಮಭ್ಯಂ]** ನಮ್ಮೆಲ್ಲರಿಗೆ **[ಪುರು]** **[ವಾರ್ಯಂ]** ಬಹಳಷ್ಟು ವರಿಸಲು ಯೋಗ್ಯವಾದ ವಸ್ತುಗಳನ್ನು **[ಆವಃ]** ಪ್ರಾಪ್ತಿಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರಾತಃಕಾಲವು ಹೇಗೆ ಎಲ್ಲರಿಗೂ ಪ್ರಿಯಕರವೋ ಅದೇ ರೀತಿ ವಿದ್ಯಾವತೀ ವನಿತೆಯು ಎಲ್ಲರಿಗೂ ಪ್ರಿಯಕರಳಾಗುವಳು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತತ್ಸು ನಃ ಸವಿತಾ ಭಗೋ ವರುಣೋ ಮಿತ್ರೋ ಅರ್ಯಮಾ ।**
**ಇಂದ್ರೋ ನೋ ರಾಧಸಾ ಗಮತ್ ॥೧೦॥**

**ಪದಾರ್ಥ:-** [**ಸವಿತಾ**] ಸೂರ್ಯನು [**ಭಗಃ**] ಸೇವನಯೋಗ್ಯ ಪದಾರ್ಥಗಳು [**ವರುಣಃ**] ಉದಾನ ವಾಯುವು [**ಮಿತ್ರಃ**] ಪ್ರಾಣವಾಯುವು [**ಅರ್ಯಮಾ**] ನ್ಯಾಯಕಾರಕನು [**ತತ್**] [**ರಾಧಸಾ**] ಆ ಧನದಿಂದ [**ನಃ**] ನಮ್ಮೆಲ್ಲರನ್ನೂ [**ಆ, ಗಮತ್**] ಎಲ್ಲ ಕಡೆಗಳಿಂದಲೂ ಸಮೀಪಿಸಲಿ. [**ಇಂದ್ರಃ**] ಮಿಂಚು/ಬೆಳಕು [**ನಃ**] ನಮ್ಮೆಲ್ಲರಿಗೆ [**ಸು**] ಉತ್ತಮ ರೀತಿಯಲ್ಲಿ ಪ್ರಾಪ್ತವಾಗಲಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯ, ವಾಯು, ಪ್ರಾಣಾದಿಗಳು ಮತ್ತು ಬೆಳಕು ಹೇಗೆ ನಮಗೆ ನಿಯತವಾಗಿ ಪ್ರಾಪ್ತವಾಗುತ್ತದೆಯೋ ಅದೇ ರೀತಿಯಲ್ಲಿ ಅಧ್ಯಾಪಕೋಪದೇಶಕರೇ! ನೀವೂ ನಿಯತವಾಗಿ ನಮಗೆ ಪ್ರಾಪ್ತರಾಗಿರಿ.

ಈ ಸೂಕ್ತದಲ್ಲಿ ವಿದ್ಯಾವಂತರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

**ಐವತ್ತೈದನೆಯ ಸೂಕ್ತ ಸಮಾಪ್ತ**

## ಸೂಕ್ತ ೫೬

ಮಂತ್ರಸಂಖ್ಯೆ ೭ । ವಾಮದೇವ ಋಷಿಃ । ದ್ಯಾವಾ ಪೃಥಿವೀ ದೇವತೇ । ೧, ೨ ತ್ರಿಷ್ಟುಪ್, ೪ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೫ ನಿಚೃದ್ಗಾಯತ್ರೀ, ೬ ವಿರಾಡ್ಗಾಯತ್ರೀ, ೭ ಗಾಯತ್ರೀ ಛಂದಃ । ಷಡ್ಜಃ ಸ್ವರಃ.

ಇಲ್ಲಿ ಸೂರ್ಯ-ಭೂಮಿಗಳ ವಿಷಯವನ್ನು ಹೇಳಿದೆ.

**ಮಹೀ ದ್ಯಾವಾಪೃಥಿವೀ ಇಹ ಜ್ಯೇಷ್ಠೇ ರುಚಾ ಭವತಾಂ ಶುಚಯದ್ಭಿರರ್ಕೈಃ ।**
**ಯತ್ ಸೀಂ ವರಿಷ್ಠೇ ಬೃಹತೀ ವಿಮಿನ್ವನ್ ರುವದ್ಧೋಕ್ಷಾ ಪಪ್ರಥಾನೇಭಿರೇವೈಃ ॥೧॥**

**ಪದಾರ್ಥ:-** [**ಯತ್**] ಯಾವನು [**ವಿಮಿನ್ವನ್**] ವಿಶೇಷವಾಗಿ ಎರಚುವವನಾಗಿ [**ರುವನ್**] ಶಬ್ದಾಯಮಾನನಾಗುವನು. [**ಹ**] ಅವನೇ [**ಉಕ್ಷಾ**] ಸೂರ್ಯನಂತೆ [**ಇಹ**] ಇಲ್ಲಿ [**ಸೀಂ**] ಎಲ್ಲ ಕಡೆಗಳಿಂದ [**ಏವೈಃ**] ಸುಖಸಾಧಕ ಗುಣಯುಕ್ತನು [**ಶುಚಯದ್ಭಿಃ**] ಪವಿತ್ರಗೊಳಿಸುತ್ತ [**ಅರ್ಕೈಃ**] ಸೇವಾರ್ಹ [**ಪಪ್ರಥಾನೇಭಿಃ**] ಅತಿಶಯ ವಿಸ್ತೃತ [**ಏವೈಃ**] ಸುಖಸಾಧಕ ಗುಣಗಳಿಂದ [**ವರಿಷ್ಠೇ**] ಶ್ರೇಷ್ಠವಾದ [**ಬೃಹತೀ**] ಬೃಹತ್ತಾದ [**ಮಹೀ**] ಮಹಿಮಾನ್ವಿತ [**ಜ್ಯೇಷ್ಠೇ**] ಹಿರಿಯರಲ್ಲಿ [**ರುಚಾ**] ರುಚಿಕರ [**ದ್ಯಾವಾ ಪೃಥಿವೀ**] ಸೂರ್ಯ ಭೂಮಿಗಳು [**ಭವತಾಂ**] ಆಗಲಿ.

**ಭಾವಾರ್ಥ:-** ಮನುಷ್ಯರು ಭೂಮಿಯಾದಿಯಾಗಿ ಸೂರ್ಯನವರೆಗಿನ ಎಲ್ಲಾ ಪದಾರ್ಥಗಳನ್ನು ತಿಳಿದಿರುವರು. ಅವುಗಳ ಸದುಪಯೋಗ ಮಾಡಿ ಧನವಂತರಾಗಿ ಎಲ್ಲರಿಗೂ ಸುಖನೀಡಲಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ದೇವೀ ದೇವೇಭಿರ್ಯಜತೇ ಯಜತ್ರೈ-ರಮಿನತೀ ತಸ್ಥತುರುಕ್ಷಮಾಣೇ ।**
**ಋತಾವರೀ ಅದ್ರುಹಾ ದೇವಪುತ್ರೇ ಯಜ್ಞಸ್ಯ ನೇತ್ರೀ ಶುಚಯದ್ಭಿರರ್ಕೈಃ ॥೨॥**

**ಪದಾರ್ಥ:-** [**ಅರ್ಕೈಃ**] ಸತ್ಕಾರಾರ್ಹ [**ಶುಚಯದ್ಭಿಃ**] ಪವಿತ್ರಗೊಳಿಸುವ [**ಯಜತ್ರೈಃ**] ಸಂಗತಿಕರಣ ಯೋಗ್ಯ [**ದೇವಭಿಃ**] ಶ್ರೇಷ್ಠ ಗುಣಸಂಪನ್ನ ವಿದ್ವಾಂಸರಿಂದ [**ದೇವೀ**] ಪ್ರಕಾಶಮಾನ [**ಅಮಿನತೀ**] ಅಹಿಂಸಕ [**ಋತಾವರೀ**] ಸತ್ಯಮಯ [**ಅದ್ರುಹಾ**] ದ್ರೋಹರಹಿತ [**ದೇವಪುತ್ರೇ**] ವಿದ್ಯಾವಂತ ಸಂತತಿ ಇರುವವರ [**ಯಜ್ಞಸ್ಯ**] ಸಂಗತ ವ್ಯವಹಾರಗಳ [**ನೇತ್ರೀ**] ಮುನ್ನಡೆಸುವವಳು [**ಉಕ್ಷಮಾಣೇ**] ಎಲ್ಲಿ ಜೀವಿಗಳಿಗೂ ಸುಖವೆರೆಯುತ್ತ [**ಯಜತೇ**] ಮಿಲನಯೋಗ್ಯ ಸೂರ್ಯ, ಭೂಮಿಗಳು [**ತಸ್ಥತುಃ**] ಸ್ಥಿರಗೊಳ್ಳುವವು.

**ಭಾವಾರ್ಥ:-** ಯಾರು ಪೃಥಿವಿಯಿಂದ ಪ್ರಧಾನದವರೆಗೆ ಎಲ್ಲ ಸೃಷ್ಟಿಯಲ್ಲಿನ ಪದಾರ್ಥಗಳನ್ನು ಅವುಗಳ ಗುಣ-ಕರ್ಮ-ಸ್ವಭಾವಗಳನ್ನು ಯಥಾವತ್ ಅರಿತು, ತಮ್ಮ ಕಾರ್ಯಗಳನ್ನು ಸಾಧಿಸುವರೋ ಅವರು ಸದಾ ಭಾಗ್ಯವಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಇತ್ಸ್ವಪಾ ಭುವನೇಷ್ವಾಸ ಯ ಇಮೇ ದ್ಯಾವಾಪೃಥಿವೀ ಜಜಾನ ।**
**ಉರ್ವೀ ಗಭೀರೇ ರಜಸೀ ಸುಮೇಕೇ ಅವಂಶೇ ಧೀರಃ ಶಚ್ಯಾ ಸಮೈರತ್ ॥೩॥**

**ಪದಾರ್ಥ:-** [**ಯಃ**] ಯಾವನು [**ಸ್ವಪಾ**] ಶ್ರೇಷ್ಠ ಕರ್ಮ ಮಾಡುವವನು [**ಧೀರಃ**] ಧೀರ ಜಗದೀಶ್ವರನು [**ಭುವನೇಷು**] ಲೋಕಗಳಲ್ಲಿ [**ಆಸ**] ವಿದ್ಯಮಾನನಾಗಿರುವನು. [**ಇಮೇ**] ಈ [**ಉರ್ವೀ**] ಬಹು ಪದಾರ್ಥಗಳಿರುವ [**ಗಭೀರೇ**] ಗಂಭೀರ ಗುಣಯುಕ್ತ [**ರಜಸೀ**] ರಜೋಗುಣಗಳಿಂದ ರಚಿತವಾದ [**ಸುಮೇಕೇ**] ಪರಸ್ಪರ ಒಂದುಗೂಡಿರುವ [**ಅವಂಶೇ**] ಅಂತರಿಕ್ಷದಲ್ಲಿರುವ [**ದ್ಯಾವಾಪೃಥಿವೀ**] ಸೂರ್ಯ ಮತ್ತು ಭೂಮಿಗಳನ್ನು [**ಜಜಾನ**] ಸೃಷ್ಟಿಸಿದವನು. [**ಶಚ್ಯಾ**] ಬುದ್ಧಿಯಿಂದ [**ಸಮ್, ಇರತ**] ಕ್ರಮಕ್ಕನುಗುಣವಾಗಿ ಚಾಲನೆ ಮಾಡುವನು. [**ಸಃ, ಇತ್**] ಅವನೇ ಉಪಾಸನಾ ಯೋಗ್ಯನು.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಆಕಾಶದಲ್ಲಿ ಅಸಂಖ್ಯ ಭೂಮಿಗಳನ್ನು ರಚಿಸಿರುವನು ಮತ್ತು ಸುವ್ಯವಸ್ಥಿತವಾಗಿ ಅವುಗಳನ್ನು ನಡೆಸುವನು. ಅವನೇ ಸದಾ ಉಪಾಸನೆಗೆ ಯೋಗ್ಯನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನೂ ರೋದಸೀ ಬೃಹದ್ಭಿರ್ನೋ ವರೂಥೈಃ ಪತ್ನೀವದ್ಭಿರಿಷಯಂತೀ ಸಜೋಷಾಃ ।**
**ಉರೂಚೀ ವಿಶ್ವೇ ಯಜತೇ ನಿ ಪಾತಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೪॥**

**ಪದಾರ್ಥ:-** [**ಸಜೋಷಾಃ**] ಸಮಾನ ಪ್ರೀತಿಯನ್ನು ಮಾಡುವವನು [**ಧಿಯಾ**] ಬೌದ್ಧಿಕ ಕಾರ್ಯದಿಂದ [**ಇಷಯಂತೀ**] ಸುಖದ ಪ್ರಾಪ್ತಿಗೊಳಿಸುತ್ತ [**ಉರೂಚೀ**] ಬಹುಜನರಿಂದ ಗೌರವಿಸಲ್ಪಟ್ಟವಳು [**ವಿಶ್ವೇ**] ಅಂತರಿಕ್ಷದಲ್ಲಿ [**ಯಜತೇ**] ಮಿಲನಯೋಗ್ಯ [**ಬೃಹದ್ಭಿಃ**] ಮಹತ್ತರ [**ಪತ್ನೀವದ್ಭಿಃ**] ಬಹುಸ್ತ್ರೀಯರೊಂದಿಗೆ ಇರುವ [**ವರೂಥೈಃ**] ಉತ್ತಮ ಸದನಗಳೊಂದಿಗಿರುವ [**ರೋದಸೀ**] ಭೂಮಿ ಸೂರ್ಯರು [**ನಃ**] ನಮ್ಮೆಲ್ಲರ [**ನಿ**] [**ಪಾತಂ**] ಅತಿಶಯ ಪಾಲನೆ ಮಾಡುವರು. [**ರಥ್ಯಃ**] ರಥಾದಿಗಳೊಂದಿಗಿರುವ [**ಸದಾಸಾಃ**] ಸೇವಕರೊಂದಿಗಿರುವವರು [**ನು**] [**ಸ್ಯಾಮ**] ಬೇಗನೇ ಆಗೋಣ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಅನೇಕ ಮತ್ತು ಅತಿ ದೊಡ್ಡ ಪದಾರ್ಥಗಳೊಂದಿಗಿರುವ ಮಿಂಚು ಮತ್ತು ಭೂಮಿ ಇವುಗಳನ್ನು ತಿಳಿದಿರುವರೋ ಅವರು ಬೇಗನೇ ಶ್ರೀಮಂತರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ವಾಂ ಮಹಿ ದ್ಯವೀ ಅಭ್ಯು-ಪಸ್ತುತಿಂ ಭರಾಮಹೇ । ಶುಚೀ ಉಪ ಪ್ರಶಸ್ತಯೇ ॥೫॥**

**ಪದಾರ್ಥ:-** [ಪ್ರಶಸ್ತಯೇ] ಪ್ರಶಂಸಿತ [ಶುಚೀ] ಪವಿತ್ರವಾದ [ಮಹಿ] ಮಹಿಮಾನ್ವಿತ [ದ್ಯವೀ] ಬೆಳಕನ್ನು [ಅಭಿ, ಉಪ, ಪ್ರ ಭರಾಮಹೇ] ಎಲ್ಲ ಕಡೆಗಳಿಂದಲೂ ಉತ್ತಮ ರೀತಿಯಲ್ಲಿ ಧಾರಣ ಮಾಡುವರು. [ವಾಂ] ನೀವಿಬ್ಬರೂ [ಉಪಸ್ತುತಿಂ] ಯೋಗ್ಯಪ್ರಶಂಸೆ ಮಾಡುವಿರಿ.

**ಭಾವಾರ್ಥ:-** ಯಾರಿಂದ ಮನುಷ್ಯರು ಶಿಲ್ಪವಿದ್ಯಾದಿಗಳನ್ನು ಪಡೆದಿರುವರೋ ಅವರನ್ನು ಯೋಗ್ಯ ರೀತಿಯಲ್ಲಿ ಗೌರವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪುನಾನೇ ತನ್ವಾ ಮಿಥಃ ಸ್ವೇನ ದಕ್ಷೇಣ ರಾಜಥಃ । ಊಹ್ಯಾಥೇ ಸನಾದೃತಮ್ ॥೬॥**

**ಪದಾರ್ಥ:-** [ಸ್ವೇನ] ತನ್ನ [ದಕ್ಷೇಣ] ಬಲಿಷ್ಠ [ತನ್ವಾ] ಶರೀರದಿಂದ [ಪುನಾನೇ] ಪವಿತ್ರಗೊಳಿಸುವ ಭೂಮಿ ಸೂರ್ಯರನ್ನು ತಿಳಿದುಕೊಂಡು [ಮಿಥಃ] ಪರಸ್ಪರ [ರಾಜಥ] ಶೋಭೆಯಿಂದ ಮೆರೆಯುವರು. [ಸನಾತ್] ಸನಾತನದಿಂದ [ಋತಂ] ಸತ್ಯವನ್ನು [ಊಹಯಾಥೇ] ಊಹಿಸುವರು.

**ಭಾವಾರ್ಥ:-** ಯಾರು ಶಿಲ್ಪವಿದ್ಯಾನಿಪುಣರೋ ಅವರ ಸತ್ಕಾರವನ್ನು ರಾಜಾದಿಗಳು ಯಥಾಯೋಗ್ಯ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಹೀ ಮಿತ್ರಸ್ಯ ಸಾಧಥ-ಸ್ತರಂತೀ ಪಿಪ್ರತೀ ಋತಮ್ । ಪರಿ ಯಜ್ಞಂ ನಿ ಷೇದಥುಃ ॥೭॥**

**ಪದಾರ್ಥ:-** [ತರಂತೀ] ದುಃಖವನ್ನು ದಾಟಿಸುವ [ಪಿಪ್ರತೀ] ಆನಂದಗೊಳಿಸುವ [ಮಹೀ] ಬೃಹತ್ ಸೂರ್ಯ ಮತ್ತು ಭೂಮಿ [ಋತಂ] ಸತ್ಯಕಾರಣ ರೂಪ [ಯಜ್ಞಂ] ಸಂಗತಿಗೊಳಿಸುವ ಕ್ರಿಯೆಯನ್ನು [ಪರಿ] ಎಲ್ಲ ರೀತಿಯಿಂದ [ನಿ, ಸೇದಥುಃ] ಸಿದ್ಧ ಪಡಿಸುವರು. [ಮಿತ್ರಸ್ಯ] ಸ್ನೇಹಿತನ ಕಾರ್ಯವನ್ನು [ಸಾಧಥಃ] ಸಿದ್ಧಗೊಳಿಸುವರು.

**ಭಾವಾರ್ಥ:-** ಮನುಷ್ಯರು ಎಲ್ಲವುದಕ್ಕೂ ಆಧಾರಭೂತವಾದ ಸೂರ್ಯ ಭೂಮಿಗಳ ಸಾಮರ್ಥ್ಯವನ್ನು ತಿಳಿದು ಅವುಗಳಿಂದ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು.

ಈ ಸೂಕ್ತದಲ್ಲಿ ಸೂರ್ಯ ಭೂಮಿಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಐವತ್ತಾರನೆಯ ಸೂಕ್ತ ಸಮಾಪ್ತ**

## ಸೂಕ್ತ ೫೭

ಮಂತ್ರಸಂಖ್ಯೆ ೮ । ವಾಮದೇವ ಋಷಿಃ । ೧-೩ ಕ್ಷೇತ್ರಪತಿಃ, ೪ ಶುನಃ, ೫, ೮ ಶುನಾಸೀರೌ, ೬-೭ ಸೀತಾ ದೇವತಾ, ೧, ೪, ೬, ೭ ಅನುಷ್ಟುಪ್ ಛಂದಃ । ಗಾಂಧಾರ ಸ್ವರಃ । ೨, ೩, ೮ ತ್ರಿಷ್ಟುಪ್ ಛಂದಃ, ಧೈವತಃ ಸ್ವರಃ । ೫ ಪುರ ಉಷ್ಣಿಕ್ ಛಂದಃ । ಋಷಭಃ ಸ್ವರಃ.

ಇಲ್ಲಿ ಕೃಷಿಯ ವಿಷಯವನ್ನು ಹೇಳಲಾಗಿದೆ.

**ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ ।**
**ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀದೃಶೇ ॥೧॥**

**ಪದಾರ್ಥ:-** [ಕ್ಷೇತ್ರಸ್ಯ] ಆಹಾರೋತ್ಪಾದಕ ಭೂಮಿಯ [ಪತಿನಾ] ಸ್ವಾಮಿಯ [ವಯಂ] ನಾವು [ಹಿತೇನೇವ] ಹಿತಸಾಧಕ ಸೇನೆಯ ರೀತಿಯಲ್ಲಿ [ಗಾಂ] ಭೂಮಿಯನ್ನು [ಅಶ್ವಂ] ಕುದುರೆಯನ್ನು [ಪೋಷಯಿತ್ನು] ಪುಷ್ಟಿಕಾರಕ ದ್ರವ್ಯವನ್ನು [ಜಯಾಮಸಿ] ಜಯಿಸುತ್ತೇವೆ. [ಸಃ] ಅವನು [ಈದೃಶೇ] ಇಂತಹ [ನಃ] ನಮಗೆ [ಆ, ಮೃಳಾತಿ] ಸುಖಕೊಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಸುಶಿಕ್ಷಿತ, ಪ್ರಜಾನುರಕ್ತ ಸೇನೆಯಿಂದ ವೀರ ಪುರುಷರು ಹೇಗೆ ವಿಜಯ ಸಾಧಿಸುವರೋ, ಹಾಗೆ ಕೃಷಿಕಾರ್ಯದಲ್ಲಿ ಕುಶಲರು ಸಂಪತ್ತನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।**
**ಮಧುಶ್ಚುತಂ ಘೃತಮಿವ ಸುಪೂತ-ಮೃತಸ್ಯ ನಃ ಪತಯೋ ಮೃಳಯಂತು ॥೨॥**

**ಪದಾರ್ಥ:-** [ಕ್ಷೇತ್ರಸ್ಯ] ಹೊಲದ [ಪತೇ] ಒಡೆಯನೇ! [ಋತಸ್ಯ] ಸತ್ಯದ [ಪತಯಃ] ಒಡೆಯರು [ಘೃತಮಿವ] ಆಜ್ಯದಂತೆ [ಮಧುಚ್ಯುತಂ] ಮಧುರಗುಣಯುಕ್ತ [ಸುಪೂತಂ] ಪವಿತ್ರ ವಿಜ್ಞಾನವಂತನನ್ನು [ನಃ] ನಮ್ಮನ್ನು [ಮೃಳಯಂತು] ಸುಖನೀಡಲಿ. [ಧೇನುರಿವ] ಗೋವಿನಂತೆ [ಮಧುಮಂತಂ] ಮಧುರ ಗುಣವಿರುವ [ಊರ್ಮಿಂ] ಜಲಧಾರೆಯನ್ನು [ಪಯಃ] ಹಾಲನ್ನು [ಅಸ್ಮಾಸು] ನಮ್ಮೆಲ್ಲರಲ್ಲೂ [ಧುಕ್ಷ್ವ] ಪೂರ್ಣಗೊಳಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಉತ್ತಮ ಕೃಷಿಕರು ಕೃಷಿಮಾಡಿ ಎಲ್ಲರಿಗೂ ಶುದ್ಧಆಹಾರವನ್ನು ಒದಗಿಸುವರೋ, ಅದೇ ರೀತಿ ರೈತರನ್ನು ಎಲ್ಲರೂ ಉತ್ತಮರೀತಿಯಲ್ಲಿ ರಕ್ಷಣೆ ಮಾಡಿ ಸಂತೃಪ್ತಿಗೊಳಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಮಧುಮತೀರೋಷಧೀರ್ದ್ಯಾವ ಆಪೋ ಮಧುಮನ್ನೋ ಭವತ್ವಂತರಿಕ್ಷಮ್ ।**
**ಕ್ಷೇತ್ರಸ್ಯ ಪತಿರ್ಮಧುಮಾನ್ನೋ ಅಸ್ತ್ವ-ರಿಷ್ಯಂತೋ ಅನ್ವೇನಂ ಚರೇಮ ॥೩॥**

**ಪದಾರ್ಥ:-** [ನಃ] ನಮಗೆ **[ಓಷಧಿಃ]** ಯವಾದಿ ಓಷಧಿಧಾನ್ಯಗಳು **[ದ್ಯಾವಃ]** ಬೆಳಕು **[ಆಪಃ]** ನೀರು **[ಮಧುಮತೀಃ]** ಮಧುರ ಗುಣಗಳಿರುವವುಗಳಾಗಲಿ. **[ಅಂತರಿಕ್ಷಂ]** ಆಕಾಶವನ್ನು **[ಮಧುಮತ್]** ಮಾಧುರ್ಯ ಗುಣವಿರುವಂತೆ **[ಭವತು]** ಆಗಲಿ. **[ಕ್ಷೇತ್ರಸ್ಯ]** ಹೊಲದ **[ಪತಿಃ]** ಒಡೆಯನು **[ನಃ]** ನಮಗೆ **[ಮಧುಮಾನ್]** ಮಧುರ ಗುಣದವನು **[ಅಸ್ತು]** ಆಗಲಿ. **[ಅರಿಷ್ಯಂತಃ]** ಅಹಿಂಸಕರಾದ ನಾವು **[ಏನಂ]** ಇವನನ್ನು **[ಅನು, ಚರೇಮ]** ಅನುಕೂಲಕರರಾಗಿ ವರ್ತಿಸೋಣ.

**ಭಾವಾರ್ಥ:-** ಮನುಷ್ಯರೇ! ರೈತರು ಹೇಗೆ ನಮಗೆ ಉತ್ತಮ ಪದಾರ್ಥ ವಿತರಿಸಲು ಬಯಸುವರೋ ಹಾಗೇ ನೀವೂ ರೈತರಿಗೆ ಹಿತಚಿಂತಕರಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ವಾಹಾಃ ಶುನಂ ನರಃ ಶುನಂ ಕೃಷತು ಲಾಂಗಲಮ್ ।**
**ಶುನಂ ವರತ್ರಾ ಬಧ್ಯಂತಾಂ ಶುನಮಷ್ಟ್ರಾಮುದಿಂಗಯ ॥೪॥**

**ಪದಾರ್ಥ:-** **[ವಾಹಾಃ]** ಎತ್ತು ಮುಂತಾದ ಪಶುಗಳು **[ಶುನಂ]** ಸುಖಿಗಳಾಗಲಿ. **[ನರಃ]** ಕೃಷೀವಲನು **[ಶುನಂ]** ಸುಖ ಪಡಿಸಲಿ. **[ಲಾಂಗಲಂ]** ನೇಗಿಲಿನ ಅವಯವ **[ಶುನಂ]** ಸುಖವಾಗುವ ರೀತಿಯಲ್ಲಿ **[ಕರ್ಷತು]** ಉಳಲಿ. **[ವರತ್ರಾಃ]** ಎತ್ತಿನ ಹಗ್ಗವು **[ಶುನಂ]** ಸುಖಪೂರ್ವಕವಾಗಿ **[ಬಧ್ಯಂತಾಂ]** ಕಟ್ಟಲ್ಪಡಲಿ. **[ಅಷ್ಟ್ರಾಂ]** ಕೃಷಿ ಸಾಧನದ ಅವಯವವನ್ನು **[ಶುನಂ]** ಸುಖಪೂರ್ವಕ **[ಉತ್, ಇಂಗಯ]** ಮೇಲಕ್ಕೆ ಚಲಿಸು.

**ಭಾವಾರ್ಥ:-** ರೈತರು ಉತ್ತಮ ನೇಗಿಲಾದಿ ಸಾಮಗ್ರಿಗಳನ್ನು ಎತ್ತು, ಬೀಜಾದಿಗಳನ್ನು ಸಂಗ್ರಹಿಸಿಕೊಂಡು ಹೊಲವನ್ನು ಉತ್ತಮವಾಗಿ ಉಳಬೇಕು. ಅವುಗಳಲ್ಲಿ ಉತ್ತಮ ಆಹಾರವನ್ನು ಬೆಳೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಾಸೀರಾವಿಮಾಂ ವಾಚಂ ಜುಷೇಥಾಂ ಯದ್ದಿವಿ ಚಕ್ರಥುಃ ಪಯಃ ।**
**ತೇನೇಮಾಮುಪ ಸಿಂಚತಮ್ ॥೫॥**

**ಪದಾರ್ಥ:-** **[ಶುನಾಸೀರಾ]** ಭೂಸ್ವಾಮಿ ಮತ್ತು ಸೇವಕರಿಬ್ಬರೂ **[ಯತ್]** ಯಾವ **[ಇಮಾಂ]** ಈ ಕೃಷಿ ವಿದ್ಯೆಯ ಪ್ರಕಾಶಕಳನ್ನು **[ವಾಚಂ]** ಅವಳ ನುಡಿಯನ್ನು **[ಪಯಃ]** ಜಲವನ್ನು **[ದಿವಿ]** ಬೆಳಕಿನಲ್ಲಿ **[ಚಕ್ರಥುಃ]** ಮಾಡುವರು. **[ಜುಷೇಥಾಂ]** ಅದನ್ನು ಸೇವಿಸಿರಿ. **[ತೇನ]** ಅದರಿಂದ **[ಇಮಾಂ]** ಈ ಭೂಮಿಯನ್ನು **[ಉಪ, ಸಿಂಚತಂ]** ನೀರೆರೆದು ಬೆಳೆಸಿರಿ.

**ಭಾವಾರ್ಥ:-** ಕೃಷಿಕರು ಮೊದಲು ಕೃಷಿವಿದ್ಯೆಯನ್ನು ಕಲಿಯಬೇಕು. ನಂತರ ಯೋಗ್ಯರೀತಿಯಲ್ಲಿ ಕೃಷಿ ಮಾಡಿ ಧನಧಾನ್ಯಗಳನ್ನು ಪಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅರ್ವಾಚೀ ಸುಭಗೇ ಭವ ಸೀತೇ ವಂದಾಮಹೇ ತ್ವಾ ।**
**ಯಥಾ ನಃ ಸುಭಗಾಸಸಿ ಯಥಾ ನಃ ಸುಫಲಾಸಸಿ ॥೬॥**

**ಪದಾರ್ಥ:-** [ಸುಭಗೇ] ಐಶ್ವರ್ಯ ವೃದ್ಧಿಪಡಿಸುವವಳು. [ಯಥಾ] ಹೇಗೆ [ಅರ್ವಾಚೀ] ಭೂಮಿಯೊಳಗೆ ಚಲಿಸುವ [ಸೀತೇ] ಭೂಮಿ ಉಳುವ ಲೋಹದ ಸಾಧನವು [ಭವ] ಆಗು. [ಸುಭಗಾ] ಸೌಭಾಗ್ಯವತಿಯಂತೆ ನೀನು [ನಃ] ನಮ್ಮವಳು [ಅಸಸಿ] ಆಗಿರುವೆ. [ಸುಫಲ] ಉತ್ತಮ ಫಲವತಿಯೂ [ಅಸಸಿ] ಆಗಿರುವೆ. [ತ್ವಾ] ನಿನ್ನನ್ನು [ವಂದಾ ಮಹೇ] ನಮಿಸುವೆವು/ಬಯಸುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಉತ್ತಮ ಕೃಷಿ ಮಾಡಲಾದ ಭೂಮಿಯು ಉತ್ತಮ ದವಸಧಾನ್ಯಗಳನ್ನು ಉತ್ಪಾದಿಸುತ್ತದೆಯೋ, ಅದೇ ರೀತಿ ಬ್ರಹ್ಮಚರ್ಯದಲ್ಲಿ ವಿದ್ಯೆಯನ್ನು ಪಡೆದವನು, ಉತ್ತಮ ಸಂತಾನವನ್ನು ಪಡೆಯುವನು. ಹೇಗೆ ಭೂಮಿ ರಾಜ್ಯವು ಐಶ್ವರ್ಯಕಾರಕವೋ ಅದೇರೀತಿ ಪ್ರೇಮರಾಜ್ಯವು ವಂಶವೃದ್ಧಿಕರವೂ, ವಂಶೋದ್ಧಾರಕ ಸಂತಾನಕಾರಕವಾಗಿರುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಂದ್ರಃ ಸೀತಾಂ ನಿ ಗೃಹ್ಣಾತು ತಾಂ ಪೂಷಾನು ಯಚ್ಛತು ।**
**ಸಾ ನಃ ಪಯಸ್ವತೀ ದುಹಾ-ಮುತ್ತರಾಮುತ್ತರಾಂ ಸಮಾಮ್ ॥೭॥**

**ಪದಾರ್ಥ:-** [ಪಯಸ್ವತೀ] ನೀರಿನ ಸೌಲಭ್ಯವಿರುವ ಭೂಮಿಯು [ನಃ] ನಮಗೆ [ಅನು, ಯಚ್ಛತು] ಅನುಗ್ರಹಿಸು. [ಸಾ] ಅವಳು [ಸೀತಾಂ] ಕೃಷಿನೇಗಿಲಿನ ಅವಯವವನ್ನು [ಇಂದ್ರಃ] ಭೂಮಿಧಾರಕನು [ನಿ, ಗೃಹ್ಣಾತು] ಸ್ವೀಕರಿಸಲಿ [ತಾಂ] ಅದನ್ನು [ದುಹಾಂ] ಪರಿಪೂರ್ಣಗೊಳಿಸುವವಳು [ಉತ್ತರಾಮುತ್ತರಾಂ] ಮತ್ತೆ ಮತ್ತೆ [ಸಮಾಂ] ಭೂಮಿ ಬಗೆಯುವ ಲೋಹಮಯ ವಸ್ತುವನ್ನು [ಪೂಷಾ] ಪುಷ್ಟಿಗೊಳಿಸುವವನು ಕೊಡಲಿ.

**ಭಾವಾರ್ಥ:-** ಕೃಷಿಕರೆಲ್ಲರೂ ಕರ್ಷಕನ ಅನುಕರಣೆ ಮಾಡಿ ಕ್ಷೇತ್ರೋತ್ಪನ್ನಗಳನ್ನು ವೃದ್ಧಿಪಡಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಂ ನಃ ಫಾಲಾ ವಿ ಕೃಷಂತು ಭೂಮಿಂ ಶುನಂ ಕೀನಾಶಾ ಅಭಿ ಯಂತು ವಾಹೈಃ ।**
**ಶುನಂ ಪರ್ಜನ್ಯೋ ಮಧುನಾ ಪಯೋಭಿಃ ಶುನಾಸೀರಾ ಶುನಮಸ್ಮಾಸು ಧತ್ತಮ್ ॥೮॥**

**ಪದಾರ್ಥ:-** [ಫಾಲಾಃ] ಭೂಮಿ ಭೇದಿಸುವ ಲೋಹಮಯವಸ್ತುಗಳು [ವಾಹೈಃ] ನೇಗಿಲೆಳೆಯುವ ಎತ್ತು ಮುಂತಾದ ಪ್ರಾಣಿಗಳಿಂದ [ನಃ] ನಮಗೆ [ಭೂಮಿಂ] ಭೂಮಿಯನ್ನು [ಶುನಂ] ಸುಖಪೂರ್ವಕ [ವಿ, ಕೃಷಂತು] ಕರ್ಷಿಸಲಿ. [ಕೀನಾಶಾಃ] ಕೃಷಿಕರು [ಶುನಂ] ಸುಖವನ್ನು [ಅಭಿ, ಯಂತು] ಪಡೆಯಲಿ. [ಪರ್ಜನ್ಯಃ] ಮೇಘವು [ಮಧುನಾ] ಮಾಧುರ್ಯದಿಂದ [ಪಯೋಭಿಃ] ನೀರುಗಳಿಂದ [ಶುನಂ] ಸುಖಗರೆಯಲಿ. [ಶುನಾಸೀರಾ] ಭೂಸ್ವಾಮಿ ಮತ್ತು ಕರ್ಷಕ ಇಬ್ಬರೂ [ಅಸ್ಮಾಸು] ನಮ್ಮೆಲ್ಲರಲ್ಲಿ [ಶುನಂ] ಸುಖವನ್ನು [ಧತ್ತಂ] ಧಾರಣ ಮಾಡಿಸಲಿ.

**ಭಾವಾರ್ಥ:-** ಕೃಷಿ ಮಾಡುವ ಮನುಷ್ಯರು ಉತ್ತಮ ಕೃಷಿ ಸಾಮಗ್ರಿಗಳನ್ನು ತಯಾರಿಸಿಕೊಂಡು ಭೂಮಿಯನ್ನು ಹದಗೊಳಿಸಿ ಉತ್ತು ಬೆಳೆಸಿ ಸುಖ ಪಡುವರೋ ಅದೇ ರೀತಿ ರಾಜಾದಿಗಳು ತಮ್ಮ ಕೆಲಸ ಮಾಡಿ ಸುಖಿಗಳಾಗಬೇಕು.

ಈ ಸೂಕ್ತದಲ್ಲಿ ಕೃಷಿ ಕರ್ಮದ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ.

ಐವತ್ತೇಳನೆಯ ಸೂಕ್ತ ಸಮಾಪ್ತ

## ಸೂಕ್ತ ೫೮

ಮಂತ್ರಸಂಖ್ಯೆ ೧೧ । ವಾಮದೇವ ಋಷಿಃ । ಅಗ್ನಿಃ, ಸೂರ್ಯೋ ವಾಽಪೋವಾ ಗಾವೋ ವಾ ಘೃತಂ ವಾ ದೇವತಾಃ । ೧ ನಿಚೃತ್ತ್ರಿಷ್ಟುಪ್, ೩, ೮-೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೪ ಅನುಷ್ಟುಪ್, ೬, ೭ ನಿಚೃದನುಷ್ಟುಪ್ ಛಂದಃ । ೧೧ ಸ್ವರಾಟ್ ತ್ರಿಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೫ ನಿಚೃದುಷ್ಣಿಕ್ ಛಂದಃ । ಋಷಭಃ ಸ್ವರಃ.

ಮೇಘದ ವಿಷಯವನ್ನು ಇಲ್ಲಿ ಹೇಳಿದೆ.

**ಸಮುದ್ರಾದೂರ್ಮಿರ್ಮಧುಮಾಁ ಉದಾರ-ದುಪಾಂಶುನಾ ಸಮಮೃತತ್ವಮಾನಟ್ ।**
**ಘೃತಸ್ಯ ನಾಮ ಗುಹ್ಯಂ ಯದಸ್ತಿ ಜಿಹ್ವಾ ದೇವಾನಾಮಮೃತಸ್ಯ ನಾಭಿಃ ॥೧॥**

**ಪದಾರ್ಥಃ-** [ಅಂಶುನಾ] ಸೂರ್ಯನಿಂದ [ಸಮುದ್ರಾತ್] ಸಮುದ್ರದಿಂದ [ಮಧುಮಾನ್] ಮಧುರಗುಣವಿರುವ [ಊರ್ಮಿಃ] ಜಲಸಮೂಹವನ್ನು [ಉಪ, ಉತ್, ಆರಾತ್] ಉತ್ತಮವಾಗಿ ಮೇಲೆ ಸೆಳೆಯಲ್ಪಡುತ್ತದೆ. [ಅಮೃತತ್ವಂ] ಅಮೃತತನವನ್ನು [ಸಂ, ಆನಟ್] ಮಾಧುರ್ಯಗೊಳಿಸುತ್ತಾನೆ. [ಯತ್] ಯಾವ [ಘೃತಸ್ಯ] ಜಲದ [ಗುಹ್ಯಂ] ಗುಪ್ತವಾದ [ನಾಮ] ಹೆಸರು [ಅಸ್ತಿ] ಇದೆಯೋ [ಅಮೃತಸ್ಯ] ಅಮೃತದ ಕಾರಣವಾದ [ನಾಭಿಃ] ನಾಭಿಗೆ ಸದೃಶವಾದ [ದೇವಾನಾಂ] ಶ್ರೇಷ್ಠಗುಣಗಳ [ಜಿಹ್ವಾ] ರಸನೇಂದ್ರಿಯವಿದೆಯೋ ಅದು ತಿಳಿಯುತ್ತದೆ.

**ಭಾವಾರ್ಥಃ-** ಮನುಷ್ಯರೇ! ಸೂರ್ಯನ ಪ್ರಭಾವದಿಂದ ವಾಯುವಿನ ಮೂಲಕ ಎಷ್ಟು ಸಮುದ್ರದ ನೀರು ಮೋಡವನ್ನು ಸೇರಿಕೊಳ್ಳುತ್ತದೆಯೋ, ಅದು ಈಶ್ವರನ ಸೃಷ್ಟಿಯ ನಿಯಮದಂತೆ ಮಧುರಾದಿ ಗುಣಗಳನ್ನು ಪಡೆದು ಮಳೆಗರೆದು ಅದು ಅಮೃತಮಯವಾಗುತ್ತದೆ.

ವೇದಜ್ಞಾನದ ಯಥಾರ್ಥತೆಯ ವಿಷಯವನ್ನು ಹೇಳಲಾಗುತ್ತದೆ.

**ವಯಂ ನಾಮ ಪ್ರ ಬ್ರವಾಮಾ ಘೃತಸ್ಯಾ-ಸ್ಮಿನ್ ಯಜ್ಞೇ ಧಾರಯಾಮಾ ನಮೋಭಿಃ ।**
**ಉಪ ಬ್ರಹ್ಮಾ ಶೃಣವಚ್ಛಸ್ಯಮಾನಂ ಚತುಃಶೃಂಗೋಽವಮೀದ್ಗೌರ ಏತತ್ ॥೨॥**

**ಪದಾರ್ಥಃ-** [ಚತುಃ ಶೃಂಗಃ] ನಾಲ್ಕು ವೇದಗಳೆಂಬ ಶೃಂಗಗಳಿರುವ [ಬ್ರಹ್ಮಾ] ಚತುರ್ವೇದ ಬ್ರಹ್ಮನು [ಶಸ್ಯಮಾನಂ] ಪ್ರಶಂಸಾರ್ಹ ಜ್ಞಾನವನ್ನು [ಉಪ, ಶೃಣವತ್] ಎಲ್ಲರಿಗಾಗಿ ಉಪದೇಶಿಸಿರುವನು. [ಗೌರಃ] ವೇದಜ್ಞಾನದಲ್ಲಿ ರಮಿಸುವವನು. [ಅವಮೀತ್] ಅದನ್ನು ಅನ್ಯರಿಗೆ ಬೋಧಿಸುವನು. [ಏತತ್] ಈ [ಘೃತಸ್ಯ] ಜ್ಞಾನ ಜಲದ [ನಾಮ] ಹೆಸರನ್ನು [ವಯಂ] ನಾವೂ [ಪ್ರ, ಬ್ರವಾಮ] ಉಪದೇಶಿಸೋಣ. [ಅಸ್ಮಿನ್] ಈ [ಯಜ್ಞೇ] ಜ್ಞಾನಯಜ್ಞದಲ್ಲಿ [ನಮೋಭಿಃ] ಅನ್ನಾದಿ ಪದಾರ್ಥಗಳನ್ನು [ಧಾರಯೇಮ] ಪಡೆದುಕೊಳ್ಳೋಣ.

**ಭಾವಾರ್ಥಃ-** ಮನುಷ್ಯರೇ! ನಾಲ್ಕು ವೇದ ಬಲ್ಲವನು ಹೇಗೆ ಯಥಾರ್ಥವನ್ನು ಉಪದೇಶಿಸುವನೋ, ಯಾವುದರ ಅರ್ಥಸುನಿಶ್ಚಯವಾಗಿರುವುದೋ ನಾವೂ ಅದನ್ನು ಉಪದೇಶ ಮಾಡೋಣ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ ।**
**ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾ ಆ ವಿವೇಶ ॥೩॥**

**ಪದಾರ್ಥ:-** **[ಮಹಃ]** ಮಹಿಮಾನ್ವಿತ **[ದೇವಃ]** ಸ್ವಯಂಪ್ರಕಾಶನಾದ ಪರಮಾತ್ಮನು **[ಮರ್ತ್ಯಾನ್]** ಮನುಷ್ಯರನ್ನು ಕುರಿತು **[ಆ, ವಿವೇಶ]** ಸರ್ವರೀತಿಯಲ್ಲಿ ವ್ಯಾಪ್ತನಾಗುವನು. **[ವೃಷಭಃ]** ಸುಖವರ್ಷಕನು **[ತ್ರಿಧಾ]** ಮೂರು ರೀತಿಯಲ್ಲಿ **[ಬದ್ಧಾ]** ಶ್ರದ್ಧಾ, ಸತ್ಯ, ಸಂಗತಿಕರಣಗಳಿಂದ ಕ್ರಿಯೆಗಳಲ್ಲಿ **[ರೋರವೀತಿ]** ನಿರಂತರ ಶಬ್ದಾಯ ಮಾನನಾಗುವನು. **[ಅಸ್ಯ]** ಈ ಪರಮಾತ್ಮನು ಉಪದೇಶಿಸಿದ ಜ್ಞಾನದ **[ದ್ವೇ]** ಎರಡು **[ಶೀರ್ಷೇ]** ಕರ್ಮಕಾಂಡ ಜ್ಞಾನ ಕಾಂಡಗಳೆಂಬ ಎರಡು ಶೀರ್ಷ ಅಥವಾ ತಲೆಗಳು **[ತ್ರಯಃ]** ಮೂರು **[ಪಾದಾಃ]** ಕರ್ಮ, ಜ್ಞಾನ, ಉಪಾಸನೆಗಳೆಂಬ ಮೂರು ಪಾದಗಳು ಅಂದರೆ ದಾರಿಗಳು **[ಚತ್ವಾರಿ]** ನಾಲ್ಕು **[ಶೃಂಗಾಃ]** ಶೃಂಗಗಳ ರೀತಿಯಲ್ಲಿರುವ ಋಕ್, ಯಜುಃ, ಸಾಮ, ಜೀವನಗಳೆಂಬವು ಆಗಿರುತ್ತವೆ. **[ಅಸ್ಯ]** ಇದರ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥದ ಸಪ್ತ ಏಳು **[ಹಸ್ತಾಸಃ]** ಪಂಚ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು. ಅಂತಃಕರಣ ಮತ್ತು ಆತ್ಮ ಎಂಬ ಏಳು ಕರ / ಹಸ್ತಗಳು.

**ಭಾವಾರ್ಥ:-** ಮನುಷ್ಯರೇ! ಪರಮೇಶ್ವರನು ಉಪದೇಶಿಸಿದ ಜ್ಞಾನಯಜ್ಞಕ್ಕೆ ಸುಖಗರೆಯುವ ಶ್ರದ್ಧೆ, ಸತ್ಯ, ಮಿಲನಗಳೆಂಬ ಮೂರು ಬಂಧನಗಳು. ಇವುಗಳ ಮೂಲಕ ಆ ಜ್ಞಾನವು ಕೆಟ್ಟ ರೂಪವಾಗುತ್ತದೆ. ಅಂದರೆ ಪ್ರಾತಃ ಸವನ, ಮಾಧ್ಯದಿನ ಸವನ, ತೃತೀಯ ಸವನಗಳಲ್ಲಿ ಆ ಶಬ್ದಗಳನ್ನು ಉಚ್ಚರಿಸಲಾಗುತ್ತದೆ. ಈ ಜ್ಞಾನವು ಕರ್ಮ ಜ್ಞಾನ ಮತ್ತು ಬ್ರಹ್ಮ ಜ್ಞಾನಗಳೆಂದು ಎರಡು ವಿಧದಲ್ಲಿ ಪರ್ಯವಸಾನವಾಗುತ್ತದೆ. ಕರ್ಮಾನುಷ್ಠಾನ, ಜ್ಞಾನಾರ್ಜನ ಮತ್ತು ಉಪಾಸನೆಗಳೆಂಬ ಮೂರು ಮಾರ್ಗಗಳಿರುತ್ತವೆ. ಇವುಗಳನ್ನು ಆಚರಣೆಗೆ ತರುವುದಕ್ಕೆ ಪಂಚೇಂದ್ರಿಯಗಳು ಅಂತಃಕರಣ ಮತ್ತು ಆತ್ಮಗಳೆಂಬ ಏಳು ಸಾಧನಗಳಿರುತ್ತವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ರಿಧಾ ಹಿತಂ ಪಣಿಭಿರ್ಗುಹ್ಯಮಾನಂ ಗವಿ ದೇವಾಸೋ ಘೃತಮನ್ವವಿಂದನ್ ।**
**ಇಂದ್ರ ಏಕಂ ಸೂರ್ಯ ಏಕಂ ಜಜಾನ ವೇನಾದೇಕಂ ಸ್ವಧಯಾ ನಿಷ್ಟತಕ್ಷುಃ ॥೪॥**

**ಪದಾರ್ಥ:-** **[ದೇವಾಸಃ]** ವಿದ್ವಾಂಸರು **[ಪಣಿಭಿಃ]** ಉತ್ತಮ ಕಾರ್ಯ ಮಾಡುವವರೊಂದಿಗೆ **[ಗವಿ]** ನುಡಿಯಲ್ಲಿ **[ಗುಹ್ಯಮಾನಂ]** ಗುಪ್ತವಾಗಿರಿಸಿರುವ **[ತ್ರಿಧಾ]** ಮೂರು ಬಗೆಯ **[ಹಿತಂ]** ಆಧ್ಯಾತ್ಮಿಕ, ಆಧಿದೈವಿಕ ಆದಿ ಭೌತಿಕಗಳೆಂಬ ಹಿತವನ್ನು **[ಘೃತಂ]** ಘೃತದಂತೆ ಆನಂದದಾಯಕ ವಿಜ್ಞಾನವನ್ನು **[ಅನು, ಅವಿಂದನ್]** ಅನುಕೂಲಕರವಾಗಿ ಪಡೆದಿರುವರು. **[ಸ್ವಾಧಯಾ]** ತನ್ನ ಧಾರಣಾಶಕ್ತಿಯಿಂದ **[ನಿ, ತತಕ್ಷುಃ]** ನಿರಂತರ ವಿಸ್ತಾರಗೊಳಿಸುವರು. **[ಇಂದ್ರಃ]** ಮಿಂಚು **[ವೇನಾತ್]** ಪರಮಾತ್ಮನಿಂದ **[ಏಕಂ]** ಅವ್ಯಕ್ತ ಪ್ರಕೃತಿಯನ್ನು ಮತ್ತು **[ಸೂರ್ಯ]** ಸೂರ್ಯನು, **[ಏಕಂ]** ಒಂದು ತೇಜಸ್ಸನ್ನು **[ಜಜಾನ]** ಉತ್ಪಾದಿಸುವರು. **[ಏಕಂ]** ಅದೇ ರೀತಿ ನೀವು ಒಂದನ್ನು / ಮೋಕ್ಷವನ್ನು ಸಾಧಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಶ್ರೇಷ್ಠ ವಿದ್ವಾಂಸರು ವೇದೋಪದೇಶದಂತ ಉತ್ತಮ ವ್ಯವಹಾರದಲ್ಲಿ ಸುಶಿಕ್ಷಿತ ವಾಣಿ, ಬುದ್ಧಿ ಮತ್ತು ಚೈತನ್ಯಗಳನ್ನು ಪಡೆದು ಪರಮಾತ್ಮಜ್ಞಾನ ಮತ್ತು ಅದರ ಪಾಲನೆ ಮಾಡುವರೋ ಅದೇ ರೀತಿ ನೀವೂ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏತಾ ಅರ್ಷಂತಿ ಹೃದ್ಯಾತ್ ಸಮುದ್ರಾ-ಚ್ಛತವ್ರಜಾ ರಿಪುಣಾ ನಾವಚಕ್ಷೇ ।**

**ಘೃತಸ್ಯ ಧಾರಾ ಅಭಿ ಚಾಕಶೀಮಿ ಹಿರಣ್ಯಯೋ ವೇತಸೋ ಮಧ್ಯ ಆಸಾಮ್ ॥೫॥**

**ಪದಾರ್ಥ:-** [ಆಸಾಂ] ಈ ಜ್ಞಾನಧಾರೆಗಳ [ಮಧ್ಯೆ] ಮಧ್ಯದಲ್ಲಿ [ಹಿರಣ್ಯಯಃ] ತೇಜಸ್ವರೂಪ ಸುವರ್ಣಮಯ [ವೇತಸಃ] ಪರಮಾತ್ಮನು [ಘೃತಸ್ಯ] ಜಲದ [ಏತಾಃ] ಈ [ಶತವ್ರಜಾಃ] ನೂರಾರು ಕವಲುಗಳ [ಧಾರಾಃ] ಧಾರೆಗಳನ್ನು [ಹೃದ್ಯಾತ್] ಹೃದಯಂಗಮ [ಸಮುದ್ರಾತ್] ಅಂತರಿಕ್ಷದಿಂದ [ಅರ್ಷಂತಿ] ಪ್ರಾಪ್ತಿಗೊಳಿಸುವನು. [ಅವಚಕ್ಷೇ] ಉಚ್ಚರಿಸಲು [ಅಭಿ, ಚಾಕಶೀಮಿ] ಪ್ರಕಟಿಸುವನು. [ರಿಪುಣಾ] ಶತ್ರುಗಳೊಂದಿಗೆ [ನ] ಇರಲಾರೆನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ವಾಂಸರೇ! ಆಕಾಶದಿಂದ ಸುರಿದ ಮಳೆಯು ಹೇಗೆ ಸಮಗ್ರ ಪ್ರಪಂಚವನ್ನೇ ಕಾಪಾಡುತ್ತದೆಯೋ ಹಾಗೆ ನಿಮ್ಮಿಂದ ಸುರಿಯುವ ಜ್ಞಾನಧಾರೆಯೂ ಜಗತ್ತಿನ ರಕ್ಷಣೆ ಮಾಡುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸಮ್ಯಕ್ ಸ್ರವಂತಿ ಸರಿತೋ ನ ಧೇನಾ ಅಂತರ್ಹೃದಾ ಮನಸಾ ಪೂಯಮಾನಾಃ ।**

**ಏತೇ ಅರ್ಷಂತ್ಯೂರ್ಮಯೋ ಘೃತಸ್ಯ ಮೃಗಾ ಇವ ಕ್ಷಿಪಣೋರೀಷಮಾಣಾಃ ॥೬॥**

**ಪದಾರ್ಥ:-** [ಅಂತಃ] [ಹೃದಾ] ಅಂತರಾತ್ಮನು ಮತ್ತು [ಮನಸಾ] ಅಂತಃಕರಣದಿಂದ [ಪೂಯಮಾನಾಃ] ಪವಿತ್ರಗೊಳಿಸುತ್ತ [ದೇನಾಃ] ಸುಶಿಕ್ಷಿತ ನುಡಿಯಿಂದ [ಸರಿತಃ] [ನ] ನದಿಗಳಿಗೆ ಸದೃಶ [ಸಮ್ಯಕ್] ಉತ್ತಮ ರೀತಿಯಲ್ಲಿ [ಸ್ರವಂತಿ] ಚಲಿಸುವವಳು. [ಏತೇ] ಈ ವಿದ್ವಾಂಸರು [ಉರ್ಮಯಃ] ಅಲೆಗಳು ಮತ್ತು [ಕ್ಷಿಪಣೋಃ] ಪ್ರೇರಕನಿಂದ [ಮೃಗಾಇವ] ಜಿಂಕೆಗಳಂತೆ [ಈಷಮಾಣಾಃ] ಚಲಿಸುತ್ತ [ಅರ್ಷಂತಿ] ಕೀರ್ತಿಯನ್ನು ಪಡೆಯುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾರು ಸತ್ಯನುಡಿಯುವರೋ ಅವರೇ ಪವಿತ್ರಾತ್ಮರಾಗುವರು, ಜಲದಂತೆ ಶಾಂತ ಸ್ವಭಾವದವರಾಗುವರು. ಬಹುಬೇಗನೇ ಬಯಸಿದ್ದೆಲ್ಲವನ್ನೂ ಪಡೆಯುವರು.

ವಿದ್ವಾಂಸರ ಉಪದೇಶದ ವಿಷಯವನ್ನು ಹೇಳಲಾಗುತ್ತದೆ.

**ಸಿಂಧೋರಿವ ಪ್ರಾಧ್ವನೇ ಶೂಘನಾಸೋ ವಾತಪ್ರಮಿಯಃ ಪತಯಂತಿ ಯಹ್ವಾಃ ।**

**ಘೃತಸ್ಯ ಧಾರಾ ಅರುಷೋ ನ ವಾಜೀ ಕಾಷ್ಠಾ ಭಿಂದನ್ನೂರ್ಮಿಭಿಃ ಪಿನ್ವಮಾನಃ ॥೭॥**

**ಪದಾರ್ಥ:-** [ಪಿನ್ವಮಾನಃ] ಪ್ರಸನ್ನಗೊಳಿಸುವ ಪರಮಾತ್ಮನು [ಶೂಘನಾಸಃ] ಶೀಘ್ರಗಾಮಿನೀ [ಯಹ್ವಾಃ] ವಿಸ್ತೃತವಾದ [ವಾತಪ್ರಮಿಯಃ] ವಾಯುವನ್ನಳೆಯುವ [ಪ್ರಾಧ್ವನೇ] ಪ್ರಕೃಷ್ಟ ಮಾರ್ಗಕ್ಕಾಗಿ [ಸಿಂಧೋರಿವ] ನದಿಗಳಂತೆ [ಪತಂತಿ] ಪತಿಗೆ ಸಮನಾಗಿ ಆಚರಿಸುತ್ತವೆ. [ಅರುಷಃ] ಕೆಂಪುಬಣ್ಣದ [ವಾಜೀ] [ನ] ಕುದುರೆಗೆ ಸದೃಶ [ಘೃತಸ್ಯ] ಜಲದ [ಧಾರಾಃ] ಧಾರೆಗಳು [ಊರ್ಮಿಭಿಃ] ತರಂಗಗಳಿಂದ [ಕಾಷ್ಠಾಃ] ದಿಕ್ಕುಗಳಂತಿರುವ ದಡವನ್ನು [ಭಿಂದನ್] ಭೇದಿಸುತ್ತವೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ನದಿಯ ಪ್ರವಾಹದಂತೆ ಇರುವ ವಿದ್ವಾಂಸರ ಉತ್ತಮ ಉಪದೇಶವು ಪ್ರಚುರವಾಗುತ್ತದೆಯೋ ಕುದುರೆಯಂತೆ ದುಃಖವನ್ನು ಪಾರುಮಾಡುತ್ತದೆಯೋ ಅವರ ಉಪದೇಶವೇ ಶ್ರೇಷ್ಠವಾಗಿರುತ್ತದೆ.

ವಿದ್ಯೆಯ ವಿಷಯವನ್ನು ಹೇಳಲಾಗುತ್ತದೆ.

**ಅಭಿ ಪ್ರವಂತ ಸಮನೇವ ಯೋಷಾಃ ಕಲ್ಯಾಣ್ಯ (ಅ) ೧ಃ ಸ್ಮಯಮಾನಾಸೋ ಅಗ್ನಿಮ್ ।**
**ಘೃತಸ್ಯ ಧಾರಾಃ ಸಮಿಧೋ ನಸಂತ ತಾ ಜುಷಾಣೋ ಹರ್ಯತಿ ಜಾತವೇದಾಃ ॥೮॥**

**ಪದಾರ್ಥ:-** **[ಘೃತಸ್ಯ]** ಮಧುರತೆಯ **[ಧಾರಾಃ]** ಧಾರೆಗಳು ಮತ್ತು **[ಸಮಿಧಃ]** ಸಮಿತ್ತುಗಳು **[ಅಗ್ನಿಂ]** ಅಗ್ನಿಯನ್ನು **[ನಸಂತ]** ಪಡೆದುಕೊಳ್ಳುತ್ತವೆಯೋ ಹಾಗೆ **[ಕಲ್ಯಾಣ್ಯಃ]** ಕಲ್ಯಾಣಕರ **[ಸ್ಮಯಮಾನಾಸಃ]** ಮುಗುಳು ನಗುತ್ತಿರುವ **[ಯೋಷಾಃ]** ಯುವತಿಯರು **[ಸಮನೇವ]** ತುಲ್ಯಮನಸ್ಸಿನ ಪತಿವ್ರತೆಯರಂತೆ **[ಅಭಿಃ, ಪ್ರವಂತ]** ಎದುರಾಗುವರು. **[ತಾಃ]** ಅವರನ್ನು **[ಜುಷಾಣಾಃ]** ಸೇವಿಸುವ **[ಜಾತವೇದಾಃ]** ವಿದ್ಯಾವಂತರು **[ಹರ್ಯತಿ]** ಬಯಸುವರು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಅಗ್ನಿ ಮತ್ತು ಇಂಧನಗಳ ಸಂಯೋಗದಿಂದ ಬೆಳಕುಂಟಾಗುತ್ತದೆಯೋ, ಅದೇರೀತಿ ಅಧ್ಯಾಪಕ ಮತ್ತು ವಿದ್ಯಾರ್ಥಿಗಳ ಸಂಯೋಗದಿಂದ ವಿದ್ಯೆಯು ಬೆಳಗುತ್ತದೆ ಮತ್ತು ಸ್ವಯಂವರ ವಿವಾಹವಾದ ಪತಿ-ಪತ್ನಿಯರು ಪರಸ್ಪರರಿಗೆ ಸುಖ ಬಯಸುವರೋ ಹಾಗೆ ವಿದ್ಯೆಯು ಇಬ್ಬರಿಗೂ ಸುಖ ಬಯಸುತ್ತದೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕನ್ಯಾ ಇವ ವಹತುಮೇತವಾ ಉ ಅಂಜ್ಯಂಜಾನಾ ಅಭಿ ಚಾಕಶೀಮಿ । ಯತ್ರ ಸೋಮಃ**
**ಸೂಯತೇ ಯತ್ರ ಯಜ್ಞೋ ಘೃತಸ್ಯ ಧಾರಾ ಅಭಿ ತತ್ ಪವಂತೇ ॥೯॥**

**ಪದಾರ್ಥ:-** **[ವಹತುಂ]** ಧಾರಕನನ್ನು **[ಏತವೈ]** ಪ್ರಾಪ್ತವಾಗುವ **[ಕನ್ಯಾ ಇವ]** ಯುವತಿಯಂತೆ **[ಅಂಜ]** ಉತ್ತಮ ಲಕ್ಷಣವನ್ನು **[ಅಂಜಾನಾಃ]** ಪ್ರಕಟಿಸುತ್ತ **[ಘೃತಸ್ಯ]** ತೇಜೋಮಯ **[ಧಾರಾಃ]** ವಾಗ್ಝರಿಗಳು **[ಉ]** ಮತ್ತು **[ಯತ್ರ]** ಎಲ್ಲಿ **[ಸೋಮಃ]** ಓಷಧಿ ಸಮೂಹಗಳು **[ಯತ್ರ]** ಎಲ್ಲಿ **[ಯಜ್ಞಃ]** ಜ್ಞಾನಯಜ್ಞವು **[ಸೂಯತೇ]** ನಡೆಯುತ್ತದೆಯೋ **[ತತ್]** ಆ ಕೆಲಸವನ್ನು **[ಅಭಿ, ಪವಂತೇ]** ಪವಿತ್ರಗೊಳಿಸುವನು. **[ಅಭಿ, ಚಾಕಶೀಮಿ]** ಅದನ್ನು ಪ್ರಕಟಿಸುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಹೇಗೆ ಸ್ವಯಂವರ ಮಾಡಿಕೊಳ್ಳುವ ಯುವತಿಯು ತನಗೆ ಅಭಿಲಷಿತ ಪತಿಯನ್ನು ಪಡೆಯುವಳೋ ಮತ್ತು ಅವನನ್ನು ಪಡೆಯಲು ಹಗಲೂ ರಾತ್ರಿ ಯತ್ನಿಸುವಳೋ ಅದೇ ರೀತಿ ಅಧ್ಯಾಪಕೋಪದೇಶಕರು ಅನುರೂಪ ವಿದ್ಯೆಯನ್ನು ಪಡೆಯಲು ಹಗಲೂರಾತ್ರಿಯತ್ನಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಭ್ಯರ್ಷತ ಸುಷ್ಟುತಿಂ ಗವ್ಯಮಾಜಿ-ಮಸ್ಮಾಸು ಭದ್ರಾ ದ್ರವಿಣಾನಿ ಧತ್ತ ।**
**ಇಮಂ ಯಜ್ಞಂ ನಯತ ದೇವತಾ ನೋ ಘೃತಸ್ಯ ಧಾರಾ ಮಧುಮತ್ ಪವಂತೇ ॥೧೦॥**

**ಪದಾರ್ಥ:-** [**ಅಸ್ಮಾಸು**] ನಮ್ಮವರಲ್ಲಿ [**ಆಜಿಂ**] ಪ್ರಸಿದ್ಧ [**ಗವ್ಯಂ**] ವಿದ್ಯೆಗೆ ಹಿತಕಾರಕ [**ಭದ್ರಾ**] ಸೇವನ ಯೋಗ್ಯ [**ದ್ರವಿಣಾನಿ**] ಕೀರ್ತಿಯನ್ನು [**ದತ್ತ**] ಧಾರಣ ಮಾಡಿರಿ [**ದೇವತಾ**] ವಿದ್ಯಾವಂತರು [**ಇಮಂ**] ಈ [**ಯಜ್ಞಂ**] ಜ್ಞಾನಯಜ್ಞವನ್ನು [**ನಃ**] ನಮಗೆ [**ನಯತ್**] ತರಲಿ. [**ಘೃತಸ್ಯ**] ತೇಜೋಮಯ ಜ್ಞಾನದ [**ಧಾರಾಃ**] ಪ್ರವಾಹವು [**ಮಧುಮತ್**] ಜ್ಞಾನಕಾರ್ಯವನ್ನು [**ಪವಂತೇ**] ಪವಿತ್ರಗೊಳಿಸುತ್ತವೆ. [**ಸುಷ್ಮತಿಂ**] ಪ್ರಶಂಸೆಯನ್ನು [**ಅಭಿ, ಅರ್ಷತ**] ಪಡೆಯಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ತಮ್ಮ ಉಪದೇಶದಿಂದ ಎಲ್ಲರನ್ನು ಉತ್ತಮರನ್ನಾಗಿ ಮಾಡುವರೋ ಅವರೇ ಶ್ರೇಷ್ಠರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಧಾಮನ್ ತೇ ವಿಶ್ವಂ ಭುವನಮಧಿ ಶ್ರಿತ-ಮಂತಃ ಸಮುದ್ರೇ ಹೃದ್ಯ (ಅ) ೧ ಂತರಾಯುಷಿ ।**
**ಅಪಾಮನೀಕೇ ಸಮಿಥೇ ಯ ಆಭೃತ-ಸ್ತಮಶ್ಯಾಮ ಮಧುಮಂತಂ ತ ಊರ್ಮಿಮ್ ॥೧೧॥**

**ಪದಾರ್ಥ:-** [**ತೇ**] ನಿನ್ನ [**ಧಾಮನ್**] ಆಧಾನರೂಪ [**ಅಂತಃ**] ಮಧ್ಯೆ [**ಸಮುದ್ರೇ**] ಅಂತರಿಕ್ಷದಲ್ಲಿ [**ಅಂತಃ ಹೃದಿ**] ಹೃದಯ ಮಧ್ಯದಲ್ಲಿ [**ಆಯುಷಿ**] ಜೀವನಾಧಾರ ಪ್ರಾಣದಲ್ಲಿ [**ಅಪಾಂ**] ಪ್ರಾಣಗಳ [**ಅನೀಕೆ**] ಸೇನೆಯಲ್ಲಿ [**ಸಮಿಥೇ**] ಸಂಗ್ರಾಮದಲ್ಲಿ [**ವಿಶ್ವಂ**] ಸಮಗ್ರ [**ಭುವನಂ**] ಜಗತ್ತನ್ನು [**ಅಧಿ**] [**ಶ್ರಿತಂ**] ಮೇಲೆ ಸ್ಥಿತವಾಗಿರುತ್ತದೆಯೋ ಆದೇರೀತಿ [**ಯಃ**] ಯಾವನು [**ತೇ**] ನಿನ್ನ [**ಆಭೃತಃ**] ಧಾರಣ ಮಾಡಲಾಗಿದೆಯೋ [**ತಂ**] ಅವನನ್ನು [**ಮಧುಮಂತಂ**] ಮಾಧುರ್ಯಗುಣದಿಂದ [**ಊರ್ಮಿಂ**] ರಕ್ಷಣಾದಿ ವ್ಯವಹಾರಗಳನ್ನು ಆನಂದಪೂರ್ವಕ [**ಅಶ್ಯಾಮ**] ನಾವು ಪಡೆಯುವೆವು.

**ಭಾವಾರ್ಥ:-** ಮನುಷ್ಯರೇ! ಜಗದೀಶ್ವರನು ಸರ್ವತ್ರ ಅಭಿವ್ಯಾಪ್ತನಾಗಿ ಎಲ್ಲವನ್ನೂ ಧಾರಣ ಮಾಡಿರುವನೋ ಎಲ್ಲವನ್ನೂ ರಕ್ಷಿಸುವನೋ, ಎಲ್ಲರ ಅಂತರ್ಯಾಮಿಯಾಗಿರುವನೋ ಅವನ ಕೃಪೆಯಿಂದ ವಿಜ್ಞಾನವು ಬಹುಕಾಲದಿಂದಲೂ ಬದುಕಿದೆ. ಅದನ್ನು ಪಡೆದು ನಾವು ನಿರಂತರ ಅದರ ಸೇವೆ ಮಾಡೋಣ.

ಈ ಸೂಕ್ತದಲ್ಲಿ ಮೇಘ, ಸೂರ್ಯ, ವಾಣಿ, ಮತ್ತು ವಿದ್ಯಾವಂತರ, ಈಶ್ವರ ಇವರ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ಐವತ್ತೆಂಟನೆಯ ಸೂಕ್ತ ಸಮಾಪ್ತ

# ॥ ಚತುರ್ಥಂ ಮಂಡಲಂ ಸಮಾಪ್ತಮ್ ॥

# ಪಂಚಮಂ ಮಂಡಲಮ್

## ಪ್ರಥಮೋಽನುವಾಕಃ (ಸೂಕ್ತ ೧-೧೪)

### ಸೂಕ್ತ ೧

ಮಂತ್ರಸಂಖ್ಯೆ ೧೨ । ಬುಧಗವಿಷ್ಠಿರಾವಾತ್ರೇಯಾವೃಷೀ । ಅಗ್ನಿರ್ದೇವತಾ । ೧, ೩, ೪, ೬, ೧೧, ೧೨ ನಿಚೃತ್ತ್ರಿಷ್ಟುಪ್, ೨, ೭, ೧೦ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೫ ಭುರಿಕ್ ಪಂಕ್ತಿಃ, ೮ ಸ್ವರಾಟ್ಪಂಕ್ತಿಃ, ೯ ಪಂಕ್ತಿಃ ಛಂದಃ । ಪಂಚಮಃ ಸ್ವರಃ.

ಈ ಮಂತ್ರದಲ್ಲಿ ಉಪದೇಶ್ಯ-ಉಪದೇಶದ ಗುಣವನ್ನು ಹೇಳಲಾಗಿದೆ.

**ಅಬೋಧ್ಯಗ್ನಿಃ ಸಮಿಧಾ ಜನಾನಾಂ ಪ್ರತಿ ಧೇನುಮಿವಾಯತೀಮುಷಾಸಮ್ ।**
**ಯಹ್ವಾ ಇವ ಪ್ರ ವಯಾಮುಜ್ಜಿಹಾನಾಃ ಪ್ರ ಭಾನವಃ ಸಿಸ್ರತೇ ನಾಕಮಚ್ಛ ॥೧॥**

**ಪದಾರ್ಥ:-** [ಸಮಿಧಾ] ಇಂಧನ, ಘೃತಾದಿಗಳಿಂದ [ಅಗ್ನಿಃ] ಅಗ್ನಿಯು [ಅಬೋಧಿ] ಪ್ರಜ್ವಲಿತನಾಗುವನು. [ಭಾನವಃ] ಕಾಂತಿಗಳು / ಬೆಳಕು [ಜನಾನಾಂ] ಮನುಷ್ಯರಿಗೆ [ಆಯಾತೀಂ] ಪ್ರಾಪ್ತವಾಗುತ್ತ [ಧೇನುಮಿವ] ಹಾಲು ಕರೆಯುವ ಹಸುವಿನಂತೆ [ಉಷಾಸಂ] [ಪ್ರತಿ] ಪ್ರಾತಃಕಾಲದಲ್ಲಿ [ಪ್ರ, ಸಿಸ್ರತೇ] ಪ್ರಾಪ್ತವಾಗುತ್ತದೆ. [ವಯಾಂ] ಶಾಖೆಯನ್ನು /ಕೊಂಬೆಯನ್ನು [ಪ್ರ, ಉಜ್ಜಿಹಾನಾಃ] ಉತ್ತಮ ರೀತಿಯಲ್ಲಿ ತ್ಯಜಿಸುತ್ತ [ಯಹ್ವಾ ಇವ] ಹೆಮ್ಮರಗಳಂತೆ [ನಾಕಂ] ದುಃಖರಹಿತ ಅಂತರಿಕ್ಷವನ್ನು [ಅಚ್ಛ] ಉತ್ತಮ ರೀತಿಯಿಂದ ಪ್ರಾಪ್ತವಾಗುತ್ತದೋ ಹಾಗೆಯೇ ಪ್ರಾಪ್ತವಾಗು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರವಿದೆ. ಯಾರು ಅಗ್ನ್ಯಾದಿ ಪದಾರ್ಥಗಳ ವಿದ್ಯೆಯನ್ನು ತಿಳಿದುಕೊಂಡು ತನ್ನ ಕಾರ್ಯಗಳಲ್ಲಿ ಚೆನ್ನಾಗಿ ವಿನಿಯೋಗಿಸಿಕೊಳ್ಳುತ್ತಾರೋ ಅವರು ದುಃಖರಹಿತರಾಗಿ ಹೆಮ್ಮರಗಳಂತೆ ಬೆಳೆಯುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಬೋಧಿ ಹೋತಾ ಯಜಥಾಯ ದೇವಾ-ನೂರ್ಧ್ವೋ ಅಗ್ನಿಃ ಸುಮನಾಃ ಪ್ರಾತರಸ್ಥಾತ್ ।**
**ಸಮಿದ್ಧಸ್ಯ ರುಶದದರ್ಶಿ ಪಾಜೋ ಮಹಾನ್ ದೇವಸ್ತಮಸೋ ನಿರಮೋಚಿ ॥೨॥**

**ಪದಾರ್ಥ:-** [ಸುಮನಾಃ] ಶುದ್ಧ ಮನಸ್ಸಿನ [ಹೋತಾ] ಹೋಮ ಮಾಡುವ ಪುರುಷನು [ಯಜಥಾಯ] ಯಜ್ಞ ಮಾಡುವುದಕ್ಕಾಗಿ [ಊರ್ಧ್ವಃ] ಮೇಲಕ್ಕೇರುವ [ಅಗ್ನಿಃ] ಅಗ್ನಿಯಂತೆ [ದೇವಾನ್] ವಿದ್ಯಾವಂತರನ್ನು / ಶ್ರೇಷ್ಠಗುಣಗಳನ್ನು [ಅಬೋಧಿ] ತಿಳಿಯುವನು. [ಪ್ರಾತಃ] ಬೆಳಗಿನ ಸಮಯದಲ್ಲಿ [ಅಸ್ಥಾತ್] ಸ್ಥಿತಿಗೊಳ್ಳುವವನು [ಸಮಿದ್ಧಸ್ಯ] ಪ್ರಜ್ವಲಿಸುವ ಅಗ್ನಿಯ [ರುಶತ್] ರೂಪಕ್ಕೆ ಸಮನಾಗಿ [ಅದರ್ಶಿ] ಕಾಣಿಸಿಕೊಳ್ಳುವನು ಮತ್ತು [ಮಹಾನ್] ಅತಿಯಾಗಿ [ದೇವಃ] ಪ್ರಕಾಶಮಾನನಾದ ಸೂರ್ಯನು [ಪಾಜಃ] ಬಲವನ್ನು ಪಡೆದು [ತಮಸಃ] ಅಂಧಕಾರದಿಂದ [ನಿಃ] [ಅಮೋಚಿ] ಸಂಪೂರ್ಣ ಬಿಡುಗಡೆಯಾಗುವನು. ಅಂತಹ ಸೂರ್ಯನನ್ನು ನೀವೆಲ್ಲರೂ ಸೇವನೆ ಮಾಡಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾವ ಮನುಷ್ಯರು ಉತ್ತಮ ಆಚರಣೆಯಿಂದ ಅಗ್ನಿಯಂತೆ ಮೇಲಕ್ಕೇರುತ್ತಾರೋ, ಅವರು ಅವಿದ್ಯೆಯಿಂದ ನಿವೃತ್ತರಾಗಿ ಯಶಸ್ವಿಗಳಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯದೀಂ ಗಣಸ್ಯ ರಶನಾಮಜೀಗಃ ಶುಚಿರಂಕ್ತೇ ಶುಚಿಭಿರ್ಗೋಭಿರಗ್ನಿಃ ।**

**ಆದ್ದಕ್ಷಿಣಾ ಯುಜ್ಯತೇ ವಾಜಯಂ-ತ್ಯುತ್ತಾನಾಮೂರ್ಧ್ವೋ ಅಧಯಜ್ಜುಹೂಭಿಃ ॥೩॥**

**ಪದಾರ್ಥ:-** **[ಯತ್]** ಯಾವನು **[ಶುಚಿಭಿಃ]** ಪವಿತ್ರವಾದ **[ಗೋಭಿಃ]** ಕಿರಣಗಳಿಂದ **[ಅಗ್ನಿಃ]** ಅಗ್ನಿಯಂತೆ **[ಗಣಸ್ಯ]** ಸಮೂಹದ **[ರಶನಾಂ]** ಸೂತ್ರವನ್ನೂ **[ಅಜೀಗಃ]** ಗ್ರಹಣಮಾಡುವನು **[ಆತ್]** ಮತ್ತು **[ಶುಚಿಃ]** ಪವಿತ್ರನಾಗಿ **[ಊರ್ಧ್ವಃ]** ಮೇಲೆದ್ದು **[ಅಂಕ್ತೇ]** ಪ್ರಸಿದ್ಧನಾಗುತ್ತಾನೆ. ಅವನು **[ದಕ್ಷಿಣಾ]** ದಕ್ಷಿಣ ದಿಕ್ಕಿನಲ್ಲಿ **[ಯುಜ್ಯತೇ]** ನಿಯೋಜಿಸಲ್ಪಡುತ್ತಾನೆ. **[ವಾಜಯಂತೀ]** ವಿದ್ಯಾವತಿಯು ಪ್ರಾಪ್ತಿಗೊಳಿಸುತ್ತ **[ಉತ್ತಾನಾಂ]** ಮೇಲಕ್ಕೇರುವ ಸಾಮಗ್ರಿಗಳ ಗ್ರಹಣ ಮಾಡುತ್ತಾಳೆ. ಅವಳು **[ಈಂ]** ಪ್ರಾಪ್ತವಾದ **[ಜುಹೂಭಿಃ]** ಪಾನಸಾಧನ ಪಾತ್ರೆಯಿಂದ **[ಅಧಯತ್]** ಪಾನ ಮಾಡುತ್ತಾಳೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಯಾರು ಸಮುದಾಯಕ್ಕೆ ಸಂತೋಷವನ್ನುಂಟು ಮಾಡುತ್ತಾರೋ ಅವರು ಕಿರಣಗಳಿಂದ ಸೂರ್ಯನು ಹೇಗೋ ಹಾಗೆ ಕೀರ್ತಿಯಿಂದ ಬೆಳಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿಮಚ್ಛಾ ದೇವಯತಾಂ ಮನಾಂಸಿ ಚಕ್ಷೂಂಷೀವ ಸೂರ್ಯೇ ಸಂ ಚರಂತಿ । ಯದೀಂ**

**ಸುವಾತೇ ಉಷಸಾ ವಿರೂಪೇ ಶ್ವೇತೋ ವಾಜೀ ಜಾಯತೇ ಅಗ್ರೇ ಅಹ್ನಾಮ್ ॥೪॥**

**ಪದಾರ್ಥ:-** **[ಯತ್]** ಹೇಗೆ **[ಅಹ್ನಾಂ]** ದಿನಗಳ **[ಅಗ್ರೇ]** ಮೊದಲ ಭಾಗದಲ್ಲಿ **[ವಿರೂಪೇ]** ವಿರುದ್ಧ ಸ್ವರೂಪದ **[ಉಷಸಾ]** ರಾತ್ರಿ ಹಗಲುಗಳು **[ಈಂ]** ಪ್ರಾಪ್ತ ಕ್ರಿಯೆಗಳನ್ನು **[ಸುವಾತೇ]** ಹುಟ್ಟುಹಾಕುತ್ತವೆಯೋ ಅವುಗಳಲ್ಲಿ **[ಶ್ವೇತಃ]** ಬಿಳಿವರ್ಣವುಳ್ಳದ್ದು **[ವಾಜೀ]** ಕಾರ್ಯಗಳಿಗೆ ಸೂಚನೆ ಕೊಡಿಸುವವನು ಅಂದರೆ ಹಗಲು **[ಜಾಯತೇ]** ಉಂಟಾಗುತ್ತದೆ. **[ಅಗ್ನಿಂ]** ಅಗ್ನಿಯ **[ದೇವಯಾತಾ]** ಬಯಸುವವರಲ್ಲಿ **[ಸೂರ್ಯೇ]** ಸೂರ್ಯನಲ್ಲಿ **[ಚಕ್ಷೂಂಷೀವ]** ನೇತ್ರಗಳಂತಿರುವ ಪರಮಾತ್ಮನಲ್ಲಿ **[ಮನಾಂಸಿ]** ಅಂತಃಕರಣಗಳು **[ಅಚ್ಛ]** ಉತ್ತಮ ರೀತಿಯಿಂದ **[ಸಂ, ಚರಂತಿ]** ಪ್ರಾಪ್ತವಾಗುತ್ತವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲೈ ಮನುಜರೇ! ಹೇಗೆ ಹಗಲೋ ಹಾಗೆ ವಿದ್ಯಾವಂತರು, ಹೇಗೆ ರಾತ್ರಿಯೋ ಹಾಗೆ ಅವಿದ್ಯಾವಂತರು ಎಂದು ತಿಳಿಯಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಜನಿಷ್ಟ ಹಿ ಜೇನ್ಯೋ ಅಗ್ರೇ ಅಹ್ನಾಂ ಹಿತೋ ಹಿತೇಷ್ವರುಷೋ ವನೇಷು ।**

**ದಮೇದಮೇ ಸಪ್ತ ರತ್ನಾ ದಧಾನೋ ऽಗ್ನಿರ್ಹೋತಾ ನಿ ಷಸಾದಾ ಯಜೀಯಾನ್ ॥೫॥**

**ಪದಾರ್ಥ:-** **[ಅಹ್ನಾಂ]** ಹಗಲುಗಳ **[ಅಗ್ರೇ]** ಮೊದಲ ಭಾಗದಲ್ಲಿ **[ಹಿತೇಷು]** ಸುಖಕಾರಣಗಳಲ್ಲಿ **[ಹಿತಃ]** ಹಿತಕಾರಕನು **[ವನೇಷು]** ಕಾಡುಗಳಲ್ಲಿ **[ಅರುಷಃ]** ಮರ್ಮಸ್ಥಳ ವ್ಯಾಪ್ತಿಯಲ್ಲಿದ್ದ **[ದಮೇದಮೇ]** ಮನೆ-ಮನೆಗಳಲ್ಲಿ

[ಸಪ್ತ] ಏಳು ಕಿರಣಗಳನ್ನು ಮತ್ತು [ರತ್ನಾ] ಧನವನ್ನೂ [ದಧಾನಾಃ] ಧಾರಣ ಮಾಡುತ್ತ [ಜೇನ್ಯಃ] ಜಯಿಸುವವನು [ಅಗ್ನಿಃ] ಅಗ್ನಿಯಂತೆ [ಹೋತಾ] ಸಂಗತಿಕರಣ ಮಾಡುವವನು [ಜನಿಷ್ಟ] ಉತ್ಪನ್ನನಾಗುವವನು ಮತ್ತು ಶ್ರೇಷ್ಠಕರ್ಮಗಳಲ್ಲಿ [ನಿ, ಸಸಾದ] ಪ್ರವೃತ್ತನಾಗುತ್ತಾನೆ. [ಹಿ] ಅವನೇ [ಯಜೀಜನನ್] ಅತಿಯಾಗಿ ಯಜ್ಞ ಮಾಡುವವನಾಗುತ್ತಾನೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ದಿನದಾರಂಭದಲ್ಲಿನ ಪ್ರಭಾತ ಸಮಯವು ಹೇಗೆ ಎಲ್ಲರಿಗೂ ಹಿತಕಾರಿಯಾಗಿರುತ್ತದೆಯೋ, ಹಾಗೆಯೇ ಶ್ರೇಷ್ಠಕರ್ಮಗಳನ್ನು ಮಾಡುವ ಯಜಮಾನನು ಎಲ್ಲರ ಹಿತೈಷಿಯಾಗಿರುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿರ್ಹೋತಾ ನ್ಯಸೀದದ್ಯಜೀಯಾ-ನುಪಸ್ಥೇ ಮಾತುಃ ಸುರಭಾ ಉ ಲೋಕೇ ।**
**ಯುವಾ ಕವಿಃ ಪುರುನಿಃಷ್ಠ ಋತಾವಾ ಧರ್ತಾ ಕೃಷ್ಟೀನಾಮುತ ಮಧ್ಯ ಇದ್ಧಃ ॥೬॥**

**ಪದಾರ್ಥ:-** [ಮಧ್ಯೇ] ಮಧ್ಯಭಾಗದಲ್ಲಿ [ಇದ್ಧಃ] ಪ್ರದೀಪ್ತನಾದ [ಅಗ್ನಿಃ] ಮಿಂಚಿನಂತಿರುವ [ಯಜೀಯಾನ್] ಅತಿಯಾಗಿ ಯಜ್ಞ ಮಾಡುವವನು [ಯುವಾ] ಬಲಿಷ್ಠನು [ಕವಿಃ] ಬುದ್ಧಿವಂತ ವಿದ್ವಾಂಸನು [ಪುರುನಿಷ್ಠಃ] ಬಹುಶ್ರದ್ಧೆ, ಬಹುಸ್ಥಾನವಿರುವವನು [ಋತಾವಾ] ಸತ್ಯದ ವಿಭಾಗ ಹಾಗೂ [ಧರ್ತಾ] ಧಾರಣ ಮಾಡುವವನೂ ಆದ [ಹೋತಾ] ಯಜ್ಞಕರ್ತೃವು [ಸುರಭಾ] ಸುಗಂಧಿತ [ಮಾತಾ] ಮಾತೆಯ [ಉಪಸ್ಥೇ] ಮಡಿಲಿನಲ್ಲಿ [ಲೋಕೇ] ಲೋಕದಲ್ಲಿ [ನಿ, ಅಸೀದತ್] ನಿರಂತರ ನೆಲೆಸುವನು. [ಉ] ಅವನೇ [ಕೃಷ್ಟೀನಾಂ] ಮನುಷ್ಯರ [ಉತ] ಮತ್ತು ಪಶುಗಳ ರಕ್ಷಕನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಹೇಗೆ ತಾಯಿಯಂತಿರುವ ವಾಯುವಿನಲ್ಲಿ ವಿರಾಜಮಾನನಾಗಿರುವನೋ ಹಾಗೂ ಮಿಂಚಿನ ರೂಪದಲ್ಲಿ ಎಲ್ಲರಿಗೂ ಸುಖನೀಡುವನೋ ಹಾಗೆ ಧಾರ್ಮಿಕ ವಿದ್ಯಾವಂತನು ಎಲ್ಲರಿಗೂ ಸಂತೋಷನೀಡಲು ಯೋಗ್ಯನಾಗಿರುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಣು ತ್ಯಂ ವಿಪ್ರಮಧ್ವರೇಷು ಸಾಧು-ಮಗ್ನಿಂ ಹೋತಾರಮೀಳತೇ ನಮೋಭಿಃ**
**ಆ ಯಸ್ತತಾನ ರೋದಸೀ ಋತೇನ ನಿತ್ಯಂ ಮೃಜಂತಿ ವಾಜಿನಂ ಘೃತೇನ ॥೭॥**

**ಪದಾರ್ಥ:-** [ಯಃ] ಯಾವ ಅಗ್ನಿಯು [ನಮೋಭಿಃ] ಅನ್ನಾದಿಗಳಿಂದ [ಋತೇನ] ಸತ್ಯದಿಂದ [ಘೃತೇನ] ಜಲದಿಂದ [ವಾಜಿನಂ] ಗಮನಶೀಲಪದಾರ್ಥವನ್ನು [ರೋದಸೀ] ಅಂತರಿಕ್ಷ ಮತ್ತು ಭೂಮಿಯನ್ನು [ಆ, ತತಾನ] ವಿಸ್ತೃತಗೊಳಿಸುತ್ತಾನೋ ಅಂದರೆ ಭೂಮಿ ಅಂತರಿಕ್ಷಗಳಿಗೆ ತಲುಪಿಸುತ್ತಾನೋ ಅವನಿಗೆ ವಿದ್ಯೆಯಿಂದ [ನಿತ್ಯಂ] ಪ್ರತಿದಿನವೂ [ಮೃಜಂತಿ] ಶುದ್ಧಗೊಳಿಸುತ್ತಾನೆ. [ತ್ಯಂ] ಆ [ಅಗ್ನಿಂ] ಅಗ್ನಿಗೆ ಸದೃಶನಾದ [ಹೋತಾರಂ] ಯಜ್ಞಮಾಡುವವನನ್ನು [ಸಾಧುಂ] ಶೇಷ್ಠನನ್ನು [ವಿಪ್ರಂ] ಬುದ್ಧಿವಂತನ [ಅಧ್ವರೇಷು] ಅಹಿಂಸಾತ್ಮಕ ವ್ಯವಹಾರಗಳಲ್ಲಿ [ನು] ಶೀಘ್ರವಾಗಿ [ಪ್ರ, ಈಳತೇ] ಉತ್ತಮರೀತಿಯ ಸ್ತುತಿಮಾಡುವವರೋ ಅವರು ಸುಖಿಗಳಾಗುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ವಿದ್ಯಾವಂತರು ಅಗ್ನಿಯನ್ನು ತಮ್ಮ ಕಾರ್ಯಗಳಲ್ಲಿ ಸಂಯೋಜಿಸಿಕೊಂಡು ಹೇಗೆ ಧನ-ಧಾನ್ಯ ಸಂಪನ್ನರಾಗುವರೋ, ಹಾಗೆಯೇ ಇವನನ್ನು ವಿದ್ಯಾಕಾರ್ಯದಲ್ಲಿ ಸಂಯೋಜಿಸಿ ಪ್ರತ್ಯಕ್ಷ ವಿದ್ಯಾವಂತರಾಗುವರು.

ಅತಿಥಿಯ ವಿಷಯವನ್ನು ಹೇಳಲಾಗುತ್ತದೆ.

**ಮಾರ್ಜಾಲ್ಯೋ ಮೃಜ್ಯತೇ ಸ್ವೇ ದಮೂನಾಃ ಕವಿಪ್ರಶಸ್ತೋ ಅತಿಥಿಃ ಶಿವೋ ನಃ ।**
**ಸಹಸ್ರಶೃಂಗೋ ವೃಷಭಸ್ತದೋಜಾ ವಿಶ್ವಾ ಅಗ್ನೇ ಸಹಸಾ ಪ್ರಾಸ್ಯನ್ಯಾನ್ ॥೮॥**

**ಪದಾರ್ಥ:-** [ಅಗ್ನೇ] ಅಗ್ನಿಯಂತಿರುವ [ದಮೂನಾಃ] ಜಿತೇಂದ್ರಿಯನು [ಕವಿಪ್ರಶಸ್ತಃ] ವಿದ್ವಾಂಸರಲ್ಲಿ ಪ್ರಸಿದ್ಧನಾದವನು [ಶಿವಃ] ಮಂಗಲದಾಯಕನು [ಅತಿಥಿಃ] ಯಾರನ್ನು ಪಡೆಯಲು ತಿಥ್ಯಾದಿನಿಯಮಗಳಿರುವುದಿಲ್ಲವೋ [ಸಹಸ್ರಶೃಂಗಃ] ಯಾರು ಸಾವಿರ ಶೃಂಗಗಳಂತೆ ತೇಜೋಮಯನೋ, [ವರಿಷ್ಠಃ] ಯಾವನು ಬಲಿಷ್ಠನೋ, ವೃಷ್ಟಿಕಾರಕನೋ [ತದೋಜಾಃ] ಅವನ ಆ ಪರಾಕ್ರಮವು [ಮಾರ್ಜಾಲ್ಯಃ] ಅತ್ಯಂತ ಶುದ್ಧಿಗೊಳಿಸುವ ಅಗ್ನಿಗೆ ಸಮನಾಗಿ [ಸ್ವೇ] ತನ್ನಲ್ಲಿ [ಪ್ರ, ಮೃಜ್ಯತೇ] ಶುದ್ಧಗೊಳ್ಳುತ್ತಾನೆ. [ಸಹಸಾ] ಬಲದಿಂದ [ವಿಶ್ವಾನ್] ಸಂಪೂರ್ಣವಾಗಿ [ನಃ] ನಮ್ಮೆಲ್ಲರನ್ನು [ಅನ್ಯಾನ್] ಅನ್ಯರನ್ನೂ ರಕ್ಷಿಸುತ್ತಾ [ಅಸಿ] ವಿದ್ಯಾಮಾನನಾಗುತ್ತಾನೋ, ಅವನ ಸೇವೆ ಮಾಡಬೇಕು.

**ಭಾವಾರ್ಥ:-** ಯಾರು ಇಂದ್ರಿಯಗಳನ್ನು ದಮನ ಮಾಡಿಕೊಳ್ಳುವ ಸಾಮರ್ಥ್ಯ ಪಡೆದಿರುವರೋ, ಮಂಗಲಾಚರಣೆ ಮಾಡುವರೋ, ಧರ್ಮಿಷ್ಠರೋ, ವಿದ್ಯಾವಂತರೋ, ಎಲ್ಲರಿಗೂ ಪ್ರಿಯವಾದ ಸಾಧನಗಳಲ್ಲಿ ಪ್ರೀತಿ ತೋರುವರೋ ಅವರೇ ಅತಿಥಿಗಳಾಗಲು ಯೋಗ್ಯರು. ಹೇಗೆ ಅಗ್ನಿಯು ಎಲ್ಲವನ್ನೂ ಶುದ್ಧಿಗೊಳಿಸುವವನೋ ಹಾಗೆ ಸಂಪೂರ್ಣ ಪ್ರಪಂಚವನ್ನು ಪವಿತ್ರಗೊಳಿಸುವವನು ಅತಿಥಿಯಾಗಿರುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರ ಸದ್ಯೋ ಅಗ್ನೇ ಅತ್ಯೇಷ್ಯನ್ಯಾ-ನಾವಿರ್ಯಸ್ಮೈ ಚಾರುತಮೋ ಬಭೂಥ ।**
**ಈಳೇನ್ಯೋ ವಪುಷ್ಯೋ ವಿಭಾವಾ ಪ್ರಿಯೋ ವಿಶಾಮತಿಥಿರ್ಮಾನುಷೀಣಾಮ್ ॥೯॥**

**ಪದಾರ್ಥ:-** [ಅಗ್ನೇ] ವಿದ್ಯಾವಂತನೇ! [ಯಸ್ಮೈ] ಯಾವನಿಗೆ ನೀನು [ಆವಿಃ] ಆವಿರ್ಭಾವ [ಬಭೂವ] ವಾಗುತ್ತೀಯೋ ಅವನು [ಈಳೇನ್ಯಃ] ಪ್ರಶಂಸಾರ್ಹ ಧಾರ್ಮಿಕ ಕೆಲಸಗಳನ್ನು ಮಾಡುವವನು [ವಪುಷ್ಯಃ] ರೂಪವಂತನು [ವಿಭಾವಾ] ವಿಶೇಷಕಾಂತಿವಂತನು. [ಚಾರುತಮಃ] ಅತ್ಯಂತ ಸುಶೀಲನೂ ಹಾಗೂ ಸುಂದರನು ಮತ್ತು [ಮಾನುಷೀಣಾಂ] ಮನುಷ್ಯಾದಿ [ವಿಶಾಂ] ಪ್ರಜೆಗಳಿಗೆ [ಪ್ರಿಯಃ] ಬಯಸಲು/ಸೇವೆ ಮಾಡಲು ಯೋಗ್ಯನಾದ [ಅತಿಥಿಃ] ಎಲ್ಲಾಕಡೆಗಳಲ್ಲಿ ಸಂಚರಿಸುವವನು [ಪ್ರ] ಸಮರ್ಥನಾದವನು. ಆದ್ದರಿಂದ [ಅನ್ಯಾನ್] ಮೊದಲು ಉಪದೇಶ ಮಾಡಲ್ಪಟ್ಟವರನ್ನು [ಸದ್ಯಃ] ಸಮಾನ ದಿನದಲ್ಲಿ [ಅತಿ, ಏಷಿ] ಅತಿಕ್ರಮಿಸಿ ಪ್ರಾಪ್ತನಾಗುತ್ತೀಯೆ. ಅಂತಹ ನೀನು ನಮ್ಮೆಲ್ಲರಿಗೆ ಗೌರವಾರ್ಹನು.

**ಭಾವಾರ್ಥ:-** ಯಾರು ಭ್ರಮಣಶೀಲರಾಗಿದ್ದು ತನ್ನಲ್ಲಿಗೆ ಬಂದವರಿಗೆಲ್ಲ ಉಪದೇಶ ಮಾಡುವರೋ ತನ್ನಲ್ಲಿಗೆ ಬಾರದವರನ್ನೂ ಬರುವಂತೆ ಮಾಡುವರೋ, ಉಪದೇಶ ಪಡೆಯಲು ಹಾಗೂ ಎಲ್ಲರ ಹಿತೈಷಿಗಳಾಗಿರುವರೋ ಉತ್ತಮ ವಿದ್ಯಾವಂತರೂ ಯಥಾರ್ಥವಾದಿಗಳೂ ಆಗಿರುವರೋ ಅವರೇ ಅತಿಥಿಗಳಾಗಲು ಅರ್ಹರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತುಭ್ಯಂ ಭರಂತಿ ಕ್ಷಿತಯೋ ಯವಿಷ್ಠ ಬಲಿಮಗ್ನೇ ಅಂತಿತ ಓತ ದೂರಾತ್ ।**
**ಆ ಭಂದಿಷ್ಠಸ್ಯ ಸುಮತಿಂ ಚಿಕಿದ್ಧಿ ಬೃಹತ್ತೇ ಅಗ್ನೇ ಮಹಿ ಶರ್ಮ ಭದ್ರಮ್ ॥೧೦॥**

**ಪದಾರ್ಥ:-** **[ಯವಿಷ್ಠ]** ಯುವಾವಸ್ಥೆಯಲ್ಲಿರುವ **[ಅಗ್ನೇ]** ಅಗ್ನಿಗೆ ಸಮನಾಗಿ ವಿದ್ಯೆಯಿಂದ ವ್ಯಾಪ್ತನಾದ **[ಅಂತಿತಃ]** ಸಮೀಪದಿಂದ **[ಉತ]** ಮತ್ತು **[ದೂರಾತ್]** ದೂರದಿಂದ ಬಂದು ಸತ್ಯೋಪದೇಶವನ್ನು ಮಾಡುತ್ತೀಯೆ. **[ಕ್ಷಿತಯಃ]** ಗೃಹಸ್ಥ ಮನುಷ್ಯರು **[ತುಭ್ಯಂ]** ನಿನಗಾಗಿ **[ಬಲಿಂ]** ಭಕ್ಷಣಯೋಗ್ಯ ಪದಾರ್ಥಗಳನ್ನು **[ಆ, ಭರಂತಿ]** ಧಾರಣ ಮಾಡುವರು. **[ಅಗ್ನೇ]** ಅಗ್ನಿಯಂತೆ ಪವಿತ್ರಕಾರ್ಯ ಮಾಡುವವನೇ! **[ಭಂದಿಷ್ಠಸ್ಯ]** ಶ್ರೇಷ್ಠಾಚರಣ ಮಾಡುವವನ **[ಸುಮತಿಂ]** ಶ್ರೇಷ್ಠ ಬುದ್ಧಿಯನ್ನು **[ಆ, ಚಿಕಿದ್ಧಿ]** ವಿಶೇಷವಾಗಿ ತಿಳಿದುಕೋ ಮತ್ತು **[ತೇ]** ನಿನ್ನ **[ಮಹೀ]** ಸತ್ಕಾರಯೋಗ್ಯವಾದ **[ಬೃಹತ್]** ಹಿರಿದಾದ **[ಭದ್ರಂ]** ಸೇವನಯೋಗ್ಯ ಸುಖದಾತನು **[ಶರ್ಮ]** ಸುಖ/ಮನೆಗಳನ್ನು ಕೊಡುವವನಾಗಲಿ.

**ಭಾವಾರ್ಥ:-** ಅತಿಥಿಗಳು ಧರ್ಮೋಪದೇಶ ಮಾಡುವುದರ ಮೂಲಕ ನಮಗೆ ಪರಮೋಪಕಾರವನ್ನು ಮಾಡುತ್ತಾರೆ. ಆದ್ದರಿಂದ ಅವರು ಅನ್ನ-ಪಾನ-ಸ್ಥಾನ-ಪ್ರಿಯವಚನಾದಿಗಳಿಂದ ಸತ್ಕಾರಾರ್ಹರಾಗಿರುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆದ್ಯ ರಥಂ ಭಾನುಮೋ ಭಾನುಮಂತ-ಮಗ್ನೇ ತಿಷ್ಠ ಯಜತೇಭಿಃ ಸಮಂತಮ್ ।**
**ವಿದ್ವಾನ್ ಪಥೀನಾಮುರ್ವ (ಅ)ಗ್ಂ ಽತರಿಕ್ಷ-ಮೇಹ ದೇವಾನ್ ಹವಿರದ್ಯಾಯ ವಕ್ಷಿ ॥೧೧॥**

**ಪದಾರ್ಥ:-** **[ಭಾನುಮಃ]** ಕಾಂತಿವಂತನು **[ಅಗ್ನೇ]** ಅಗ್ನಿಯಂತೆ ವಿದ್ವಾಂಸನೂ ಆದ ನೀನು **[ಇಹ]** ಇಲ್ಲಿ **[ಅದ್ಯ]** ಈಗ **[ಯಜತೇಭಿಃ]** ಸಂಪ್ರಾಪ್ತ ಅಶ್ವಾದಿಗಳಿಂದ ಕೂಡಿದವನಾಗಿ **[ಸಮಂತಂ]** ಎಲ್ಲ ರೀತಿಯ ದೃಢ ಅವಯವಗಳಿಂದ ಯುಕ್ತನಾಗಿ **[ಭಾನುಮಂತಂ]** ಕಾಂತಿಯುಕ್ತವಾದ **[ರಥಂ]** ವಾಹನವನ್ನು ಆಶ್ರಯಿಸಿ. **[ಆ, ತಿಷ್ಠ]** ಉತ್ತಮ ರೀತಿಯಲ್ಲಿ ವಿರಾಜಮಾನನಾಗು. **[ವಿದ್ವಾನ್]** ವಿದ್ಯಾವಂತನಾದ ನೀನು **[ಪಥೀನಾಂ]** ಮಾರ್ಗಗಳ **[ಉರು]** ವ್ಯಾಪಕವಾದ **[ಅಂತರಿಕ್ಷಂ]** ಅಂತರಿಕ್ಷವನ್ನು **[ಹವಿರದ್ಯಾಯ]** ಭಕ್ಷಣ ಯೋಗ್ಯ ಅನ್ನಾದಿಗಳಿಗಾಗಿ **[ದೇವಾನ್]** ವಿದ್ಯಾವಂತ ಅತಿಥಿಗಳನ್ನು **[ಆ, ವಕ್ಷಿ]** ಉತ್ತಮ ರೀತಿಯಿಂದ ಸಮೀಪಿಸುವೆ. ಆದ್ದರಿಂದ ನಮ್ಮಿಂದ ಸತ್ಕಾರಯೋಗ್ಯನಾಗಿರುವೆ.

**ಭಾವಾರ್ಥ:-** ಗೃಹಸ್ಥರು ದೂರದೇಶದಲ್ಲಿರುವ ಅತಿಥಿಗಳನ್ನು ಉತ್ತಮ ವಾಹನಗಳ ಮೂಲಕ ಉಪದೇಶ ಮಾಡುವುದಕ್ಕಾಗಿ ಕರೆತರಬೇಕು. ಅನ್ನಪಾನಾದಿಗಳಿಂದವರನ್ನು ಸತ್ಕರಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅವೋಚಾಮ ಕವಯೇ ಮೇಧ್ಯಾಯ ವಚೋ ವಂದಾರು ವೃಷಭಾಯ ವೃಷ್ಣೇ ।**
**ಗವಿಷ್ಠಿರೋ ನಮಸಾ ಸ್ತೋಮಮಗ್ನೌ ದಿವೀವ ರುಕ್ಮಮುರುವ್ಯಂಚಮಶ್ರೇತ್ ॥೧೨॥**

**ಪದಾರ್ಥ:-** **[ಗವಿಷ್ಠಿರಃ]** ಸುಶಿಕ್ಷಿತ ವಾಣಿಯನ್ನು ನುಡಿಯುವವನಾದ ನಿನ್ನನ್ನು **[ನಮಸಾ]** ಅನ್ನ-ಸತ್ಕಾರಾದಿಯಿಂದ **[ದಿವೀವ]** ಹೇಗೆ ಸೂರ್ಯನೋ ಹಾಗೆ **[ಅಗ್ನೌ]** ಅಗ್ನಿಯಲ್ಲಿ **[ರುಕ್ಮಂ]** ಪ್ರೀತಿಕಾರಕ ಹಾಗೂ ಪ್ರಕಾಶಕಾರಕವಾದ **[ಉರುವ್ಯಂಚಂ]** ಬಹುವ್ಯಾಪಕ **[ಸ್ತೋಮಂ]** ಪ್ರಶಂಸಾರ್ಹನನ್ನು **[ಅಶ್ರೇತ್]** ಆಶ್ರಯಿಸಬೇಕು. **[ವೃಷ್ಣೇ]** ಸತ್ಯದ ಮಳೆಗರೆಯುವವನು **[ವೃಷಭಾಯ]** ಬಲಿಷ್ಠನೂ **[ಮೇಧ್ಯಾಯ]** ಪವಿತ್ರನೂ ಆದ ಕವಯೋ ವಿದ್ಯಾವಂತನಿಗೆ **[ವಂದಾರು]** ವಂದನಾರ್ಹವಾದ **[ವಚಃ]** ನುಡಿಗಳನ್ನು **[ಅವೋಚಾಮ]** ಉಪದೇಶಿಸೋಣ.

**ಭಾವಾರ್ಥ:-** ಯಾರು ಪವಿತ್ರಾತ್ಮರೂ, ವಿದ್ಯೆಯಲ್ಲಿ ಪ್ರೀತಿ ಉಳ್ಳವರೂ, ಉತ್ತಮ ಕಾರ್ಯಗಳನ್ನು ಮಾಡುವವರೂ, ಶ್ರೇಷ್ಠ ವಿಚಾರವನ್ನು ತಿಳಿಯಬಯಸುವವರೂ ಆಗಿರುತ್ತಾರೋ ಅಂತಹ ಜನರಿಗೇ ಪಂಡಿತರಾದ ಅತಿಥಿಗಳು ಉಪದೇಶ ಮಾಡಬೇಕು. ಅದಕ್ಕನರ್ಹರಾದವರನ್ನು ಸಾಮಾನ್ಯ ಬೋಧನೆಗಳ ಮೂಲಕ ಅರ್ಹರನ್ನಾಗಿ ಮಾಡಬೇಕು.

ಈ ಸೂಕ್ತದಲ್ಲಿ ಉಪದೇಶಕ ಉಪದೇಶ್ಯರ ವಿಚಾರಗಳನ್ನು ತಿಳಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ವಿದ್ಯಾಸಂಗತಿಯಾಗಿರುತ್ತದೆ.

**ಒಂದನೆಯ ಸೂಕ್ತ ಸಮಾಪ್ತ**

## ಸೂಕ್ತ ೨

ಮಂತ್ರಸಂಖ್ಯೆ ೧೨ । ೧, ೩-೮, ೧೦-೧೨ ಕುಮಾರ ಆತ್ರೇಯೋ, ವೃಷೋ ವಾ ಜಾರ ಉಭೌವಾ, ೩, ೯ ವೃಷೋಜಾರಃ ಋಷಿಃ । ಅಗ್ನಿರ್ದೇವತಾ । ೧, ೩, ೪, ೭, ೮ ತ್ರಿಷ್ಟುಪ್, ೫, ೯, ೧೦ ನಿಚೃತ್ತ್ರಿಷ್ಟುಪ್, ೧೧, ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೨ ಸ್ವರಾಟ್ಪಂಕ್ತಿಃ, ೬ ಭುರಿಕ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೧೨ ಭುರಿಗತಿ ಜಗತೀ ಛಂದಃ । ನಿಷಾದಃ ಸ್ವರಃ.

ಈ ಮಂತ್ರದಲ್ಲಿ ಯುವಾವಸ್ಥೆಯಲ್ಲಿ ವಿವಾಹವೆಂಬ ವಿಚಾರವನ್ನು ಹೇಳಲಾಗಿದೆ.

**ಕುಮಾರಂ ಮಾತಾ ಯುವತಿಃ ಸಮುಬ್ಧಂ ಗುಹಾ ಬಿಭರ್ತಿ ನ ದದಾತಿ ಪಿತ್ರೇ ।**
**ಅನೀಕಮಸ್ಯ ನ ಮಿನಜ್ಜನಾಸಃ ಪುರಃ ಪಶ್ಯಂತಿ ನಿಹಿತಮರತೌ ॥೧॥**

**ಪದಾರ್ಥ:-** [**ಯುವತಿಃ**] ವಿವಾಹಯೋಗ್ಯ ವಯಸ್ಸನ್ನು ಪಡೆದನಂತರ ಯಾವಳು ವಿವಾಹವಾಗಿರುವಳೋ ಅಂತಹ ಸ್ತ್ರೀಯು [**ಮಾತಾ**] ತಾಯಿಯು [**ಸಮುಬ್ಧಂ**] ಸಮಾನರೀತಿಯಲ್ಲಿ ಒದಿರುವ [**ಕುಮಾರಂ**] ಮಗನನ್ನು [**ಗುಹಾ**] ಗರ್ಭಾಶಯದಲ್ಲಿ [**ಬಿಭರ್ತಿ**] ಧಾರಣ ಮಾಡುವಳು ಮತ್ತು [**ಪಿತ್ರೇ**] ಆ ಮಗುವಿನ ತಂದೆಗೋಸ್ಕರ [**ನ**] [**ದದಾತಿ**] ಕೊಡುವುದಿಲ್ಲ. [**ಅಸ್ಯ**] ಈ ತಂದೆಯ [**ಅನೀಕಂ**] ಸಮುದಾಯ ಬಲವನ್ನು [**ನ**] [**ಮಿನತ್**] ವಿನಾಶಕನಾಗುವುದಿಲ್ಲ. [**ಅರತೌ**] ರಮಣ ಸಮಯದ ಹೊರತಾದ ಸಮಯದಲ್ಲಿ [**ನಿಹಿತಂ**] ಇರುವ ಅವನಿಗೆ [**ಜನಾಸಃ**] ವಿದ್ಯಾವಂತರು [**ಪುರಃ**] ಮೊದಲು [**ಪಶ್ಯಂತಿ**] ನೋಡುವನೋ ಹಾಗೆ ನೀವೂ ನೋಡಿರಿ.

**ಭಾವಾರ್ಥ:-** ಕುಮಾರ-ಕುಮಾರಿಯರು ಬ್ರಹ್ಮಚರ್ಯಾವಸ್ಥೆಯಲ್ಲಿ ಸಂಪೂರ್ಣ ವಿದ್ಯಾಭ್ಯಾಸ ಮಾಡಿ ಸಂತಾನೋತ್ಪಾದನೆಯ ವಿಧಾನವನ್ನರಿತು ಯೌವ್ವನಾವಸ್ಥೆಪ್ರಾಪ್ತವಾದ ಮೇಲೆ ಸ್ವಯಂವರ ಪದ್ಧತಿಯಂತೆ ವಿವಾಹವಾಗಿ ಸಂತಾನವನ್ನು ಪಡೆಯುವರೋ ಅವರು ಯಾವಾಗಲೂ ಆನಂದವನ್ನನುಭವಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕಮೇತಂ ತ್ವಂ ಯುವತೇ ಕುಮಾರಂ ಪೇಷೀ ಬಿಭರ್ಷಿ ಮಹಿಷೀ ಜಜಾನ ।**
**ಪೂರ್ವೀರ್ಹಿ ಗರ್ಭಃ ಶರದೋ ವವರ್ಧಾ-ಪಶ್ಯಂ ಜಾತಂ ಯದಸೂತ ಮಾತಾ ॥೨॥**

**ಪದಾರ್ಥ:-** **[ಯುವತೇ]** ಬ್ರಹ್ಮಚರ್ಯದಲ್ಲಿ ವಿದ್ಯಾಭ್ಯಾಸ ಮಾಡಿ ಯುವಾವಸ್ಥೆಯನ್ನು ಪಡೆದವಳೇ! **[ಪೇಷೀ]** ಗರ್ಭಾಶಯದಲ್ಲಿ ವೀರ್ಯವನ್ನು ಧಾರಣ ಮಾಡಿಕೊಂಡವಳು **[ಮಹಿಷೀ]** ಮಹಾನ್‌ರೂಪ ಅಂದರೆ ಉತ್ತಮ ಸ್ವಭಾವಾದಿಗಳಿಂದ ಗೌರವಾರ್ಹರಾದವಳು. **[ತ್ವಂ]** ನೀನು **[ಕಂ]** ಯಾವ **[ಏತಂ]** **[ಕುಮಾರಂ]** ಈ ಬಾಲಕನನ್ನು **[ಬಿಭರ್ಷಿ]** ಪಾಲನೆ ಮಾಡುತ್ತಿರುವೆ. **[ಮಾತಾ]** ತಾಯಿಯು **[ಯತ್]** ಯಾರನ್ನು **[ಅಸೂತ]** ಪ್ರಸವಿಸುವಳೋ ಹಾಗೂ **[ಜಾತಂ]** ಜನ್ಮ ಪಡೆದವನನ್ನು **[ಅಪಶ್ಯಂ]** ನಾನು ನೋಡುವೆನೋ ಅವನು **[ಗರ್ಭಃ]** ಗರ್ಭಾಶಯದಲ್ಲಿ ಪಡೆದ **[ಪೂರ್ವೀಃ]** ಹಿಂದಿನ **[ಶರದಃ]** ಶರದ್‌ಋತುವಿನವರೆಗೆ **[ಹಿ]** ನಿರಂತರ **[ವವರ್ಧ]** ಬೆಳೆಯುವನೋ ಆದ್ದರಿಂದ **[ಜಜಾನ]** ಜನಿಸುತ್ತಾನೆ.

**ಭಾವಾರ್ಥ:-** ಎಲೈ ಕನ್ಯೆಯರೇ! ನೀವು ಹದಿನಾರು ವರ್ಷಕ್ಕಿಂತಲೂ ಮೊದಲು ಮದುವೆಯಾಗಬೇಡಿ. ಯುವಕರೇ! ನೀವು ಇಪ್ಪತ್ತೈದು ವರ್ಷಕ್ಕಿಂತ ಮೊದಲು ವಿವಾಹವಾಗಬೇಡಿರಿ. ಈ ರೀತಿ ಕುಮಾರಾವಸ್ಥೆಯಲ್ಲಿ ಬ್ರಹ್ಮಚರ್ಯಪಾಲನೆ ಮಾಡಿ ವಿದ್ಯಾರ್ಜನೆ ಮಾಡಿ ನಂತರ ವಿವಾಹವಾದರೆ ಅವರ ಸಂತತಿಯು ಉತ್ತಮ ರೂಪಗುಣಗಳನ್ನು ಪಡೆದು ಬಹುಕಾಲ ಜೀವಿಸುವವರಾಗುತ್ತಾರೆ. ಹಾಗೂ ಶಿಷ್ಟಜನರ ಗೌರವಕ್ಕೆ ಪಾತ್ರರಾಗುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹಿರಣ್ಯದಂತಂ ಶುಚಿವರ್ಣಮಾರಾತ್ ಕ್ಷೇತ್ರಾದಪಶ್ಯಮಾಯುಧಾ ಮಿಮಾನಮ್ ।**
**ದದಾನೋ ಅಸ್ಮಾ ಅಮೃತಂ ವಿಪೃಕ್ವತ್ ಕಿಂ ಮಾಮನಿಂದ್ರಾಃ ಕೃಣವನ್ನನುಕ್ಥಾಃ ॥೩॥**

**ಪದಾರ್ಥ:-** **[ಕ್ಷೇತ್ರಾತ್]** ಸಂಸ್ಕಾರ ಮಾಡಲ್ಪಟ್ಟ ಮಡದಿಯಿಂದ ಉತ್ಪನ್ನವಾದ **[ಹಿರಣ್ಯದಂತಂ]** ಹಿರಣ್ಯದಂತಿರುವ ಅಥವಾ ತೇಜೋಮಯ ದಂತಗಳಿರುವ **[ಶುಚಿವರ್ಣಂ]** ಪವಿತ್ರ ಸ್ವರೂಪಿಯಾದ ಅತಿಸುಂದರವಾದ **[ಆಯುಧಾ]** ಶಸ್ತ್ರಾಸ್ತ್ರಗಳನ್ನು **[ಮಿಮಾನಂ]** ಧಾರಣೆ ಮಾಡಿರುವವನನ್ನು **[ಆರಾತ್]** ಸಮೀಪದಿಂದ **[ಅಪಶ್ಯಂ]** ನೋಡುವೆನು. ಮತ್ತು **[ಅಸ್ಮೈ]** ಈತನಿಗೆ **[ವಿಪೃಕ್ವತ್]** ವಿಶೇಷವಾಗಿ **[ಅಮೃತಂ]** ಮೋಕ್ಷಮುಖವನ್ನು **[ದದಾನಃ]** ಕೊಡುವೆನು. **[ಮಾಂ]** ನನ್ನನ್ನು **[ಅನಿಂದ್ರಾಃ]** ಐಶ್ವರ್ಯರಹಿತರೂ **[ಅನುಕ್ಥಾಃ]** **[ಅವಿದ್ವಾಂಸಃ]** ಅವಿದ್ಯಾವಂತರೂ **[ಕಿಂ]** **[ಕೃಣವನ್]** ಏನು ಮಾಡಿಯಾರು?

**ಭಾವಾರ್ಥ:-** ವಿದ್ಯಾವಂತರೇ! ಶಾಸ್ತ್ರವಿಹಿತ ಬ್ರಹ್ಮಚರ್ಯಪಾಲಿಸದೇ ಇರುವ ವಿದ್ಯಾರ್ಜನೆ ಮಾಡದೇ ಇರುವ ಯೌವ್ವನಾವಸ್ಥೆಗೆ ಪದಾರ್ಪಣ ಮಾಡಿದ ನಿಮ್ಮ ಸಂತಾನಗಳಿಗೆ ವಿವಾಹ ಮಾಡಬೇಡಿರಿ. ಪರಸ್ಪರ ಪ್ರೀತಿ ಇಲ್ಲದ ಯುವಕ-ಯುವತಿಯರ ವಿವಾಹಬೇಡ. ವಿದ್ಯಾ-ರೂಪ-ಯೌವ್ವನ- ಪರಸ್ಪರ ಪ್ರೀತಿ ಸಂಪನ್ನರಾದ ಕನ್ಯಾ-ಸ್ನಾತಕನ ವಿವಾಹ ಮಾಡಿದರೆ ಪ್ರೀತಿಕರ ಸಂತಾನವನ್ನು ಪಡೆದು ಅತ್ಯಾನಂದಿತರಾಗುವರು. ಈ ರೀತಿಯಿಂದ ಪ್ರಸಿದ್ಧಿಗೆ ಬಂದವರಿಗೆ ಬಡತನವಾಗಲೀ ಮೂರ್ಖತನವಾಗಲೀ ದರಿದ್ರರೂ ಅವಿದ್ಯಾವಂತರೂ ಆಗಲೀ ಏನೂ ಮಾಡಲಾರರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕ್ಷೇತ್ರಾದಪಶ್ಯಂ ಸನುತಶ್ಚರಂತಂ ಸುಮದ್ಯೂಥಂ ನ ಪುರು ಶೋಭಮಾನಮ್ ।**
**ನ ತಾ ಅಗೃಭ್ರನ್ನಜನಿಷ್ಟ ಹಿ ಷಃ ಪಲಿಕ್ನೀರಿದ್ಯುವತಯೋ ಭವಂತಿ ॥೪॥**

**ಪದಾರ್ಥ:-** **[ಕ್ಷೇತ್ರಾತ್]** ಸಂಸ್ಕಾರ ಮಾಡಲಾದ ಸ್ತ್ರೀಯಿಂದ ಉತ್ಪನ್ನನಾದ **[ಚರಂತಂ]** ವ್ಯವಹಾರ ಮಾಡುತ್ತಿರುವ **[ಸುಮತ್]** ನೀನೇ **[ಪುರು]** ಬಹಳಷ್ಟು **[ಶೋಭಮಾನಂ]** **[ನ]** ಶೋಭೆಗೆ ಸಮನಾಗಿ **[ಯೂಥಂ]**

ಸೇನಾಸಮೂಹದ [ನ] ಬಲಿಷ್ಠನನ್ನು [ಸನುತಃ] ಸನಾತನದ ದೆಸೆಯಿಂದ [ಅಪಶ್ಯಂ] ನೋಡುವೆನು. [ಸಃ] ಆ ಸುಖ ಪುರುಷನು [ಅಜನಿಷ್ಟ] ಜನಿಸುವನು ಮತ್ತು ಬ್ರಹ್ಮಚಾರಿಣಿ ಕನ್ಯೆಯರು ಉತ್ತಮ ಗುಣವಂತ ಯುವಾವಸ್ಥೆಯ ಪತಿಯನ್ನು [ಅಗೃಭ್ರನ್] ಗ್ರಹಣ ಮಾಡುವರು. [ತಾಃ] ಅವರು [ಹಿ] ಮಾತ್ರ [ಯುವತಯಃ] ಯುವತಿಯರು ಪುತ್ರಪುತ್ರಿಯರನ್ನು ಅತಿ ಸುಖಸಂಪನ್ನರನ್ನಾಗಿ [ಇತ್] ಮತ್ತು [ಪಲಿಕ್ನೀಃ] ಶ್ವೇತ ಕೇಶಿ, ಅಂದರೆ ವೃದ್ಧಾವಸ್ಥೆಯವರೆಗೂ [ಭವತಿ] ಇರುವವಳಾಗುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ನೀವು ನಿಮ್ಮ ಸಂತಾನವನ್ನು ಬಹುಕಾಲದವರೆಗೆ ಬ್ರಹ್ಮಚರ್ಯದಲ್ಲಿರಿಸಿರಿ. ಧರ್ಮಿಷ್ಠರೂ ಬುದ್ಧಿವಂತರೂ ಚಿರಂಜೀವಿಗಳೂ ಆದ ನೀವು ಅವರಿಗೆ ಅತಿಶಯ ಸುಖನೀಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕೇ ಮೇ ಮರ್ಯಕಂ ವಿ ಯವಂತ ಗೋಭಿ-ರ್ನ ಯೇಷಾಂ ಗೋಪಾ ಅರಣಶ್ಚಿದಾಸ ।**
**ಯಂ ಈಂ ಜಗೃಭುರವ ತೇ ಸೃಜಂ-ತ್ವಾಜಾತಿ ಪಶ್ವ ಉಪ ನಶ್ಚಿಕಿತ್ವಾನ್ ॥೫॥**

**ಪದಾರ್ಥ:-** [ಕೇ] ಯಾರು [ಗೋಪಾಃ] ಗೋವುಗಳ ಪಾಲನೆಮಾಡುವವನು [ಗೋಭಿಃ] [ನ] ಗೋವುಗಳಿಗೆ ಸಮನಾಗಿ [ಮೇ] ನನ್ನ [ಮರ್ಯಕಂ] ಅಲ್ಪಮನುಷ್ಯನನ್ನು [ವಿ, ಯವಂತ] ದೂರು ಮಾಡು ಮಾಡಲಿ ಮತ್ತು [ಯೇಷಾಂ] ಯಾರ [ಚಿತ್] ನಿಶ್ಚಯವಾಗಿ [ಅರಣಃ] ಸೇರುವವನು [ಆಸ] ಆಗುವನು ಮತ್ತು [ಯೇ] ಯಾರು [ಪಶ್ವಃ] ಪಶುಗಳನ್ನು [ಜಗೃಭುಃ] ಗ್ರಹಣ ಮಾಡುವರೋ [ತೇ] ಅವರು [ಆ, ಅಜಾತಿ] ಉತ್ತಮ ಸಂತಾನೋತ್ಪತ್ತಿ ಯಾರ ಕುಲದಲ್ಲಿ ಅವನನ್ನು [ಉಪ, ಸೃಜಂತು] ಉತ್ಪಾದಿಸಲಿ. [ಈಂ] ಯಾವನು ವಿದ್ಯಾಗ್ರಹಣ ಮಾಡುವನೋ ಅವನು [ಅವ] ದುಃಖವನ್ನು ದೂರಗೊಳಿಸಲಿ. [ಚಿಕಿತ್ವಾನ್] ಬುದ್ಧಿವಂತನು ಉತ್ಪಾದಿಸುವನೋ [ನಃ] ಅವನು ನಮ್ಮೆಲ್ಲರ ಹಿತೈಷಿಯಾಗುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಮನುಷ್ಯರು ವಿದ್ಯಾವಂತರನ್ನು ಕೇಳಬೇಕು. ಯಾರು ನಮಗೆ ಕಡಿಮೆ ಜ್ಞಾನವಂತರಾದರೂ ಉತ್ತಮ ಬುದ್ಧಿವಂತರನ್ನಾಗಿ ಮಾಡುವರು? ಅದಕ್ಕೆ ವಿದ್ವಾಂಸರು ಹೀಗೆ ಉತ್ತರಿಸುವರು-ಯಾರು ಯಥಾರ್ಥವಾದಿಗಳಾಗಿರುವರೋ ಅವರೇ ಈ ಕೆಲಸ ಮಾಡುವರು, ಅನ್ಯರಲ್ಲ.

ವಿದ್ಯಾವಂತರ ವಿಚಾರವಿಲ್ಲಿದೆ.

**ವಸಾಂ ರಾಜಾನಂ ವಸತಿಂ ಜನಾನಾ-ಮರಾತಯೋ ನಿ ದಧುರ್ಮರ್ತ್ಯೇಷು ।**
**ಬ್ರಹ್ಮಾಣ್ಯತ್ರೇರವ ತಂ ಸೃಜಂತು ನಿಂದಿತಾರೋ ನಿಂದ್ಯಾಸೋ ಭವಂತು ॥೬॥**

**ಪದಾರ್ಥ:-** [ವಸಾಂ] ವಾಸವಾಗಿರುವ ಪ್ರಾಣಿಗಳು ಮತ್ತು [ಜನಾನಾಂ] ಸಜ್ಜನರಿಗೆ [ರಾಜಾನಂ] ನ್ಯಾಯ ಒದಗಿಸುವವನನ್ನು ಮತ್ತು [ವಸತಿಂ] ವಸತಿಯನ್ನು ಪ್ರಕಲ್ಪಿಸುವರೋ [ತಂ] ಅವನನ್ನು ವಿದ್ಯಾವಂತರು [ಅವ, ಸೃಜಂತು] ತ್ಯಜಿಸದಿರಲಿ. [ನಿಂದಿತಾರಃ] ನಿಂದಿಸುವವರು [ಅರಾತಯಃ] ಅನ್ಯಾಯದಿಂದ ಗ್ರಹಣ ಮಾಡುವವರು [ನಿಂದ್ಯಾಸಃ] ಅಧರ್ಮಾಚರಣೆಯಿಂದ ನಿಂದನೆಗೆ ಯೋಗ್ಯರು ಆದ ಶತ್ರುಜನರು [ಮರ್ತ್ಯೇಷು] ಮರಣಧರ್ಮದ ಮನುಷ್ಯರಲ್ಲಿ [ಬ್ರಹ್ಮಾಣಿ] ಹಿರಿದಾದ ಧನವನ್ನು [ನಿ, ದಧುಃ] ಸ್ಥಾಪನೆಗೊಳಿಸಲಿ. ಅವರು [ಅವೇಃ] ಮೂರು ರೀತಿಯ ದುಃಖದಿಂದ ದೂರವಿದ್ದವರು [ಭವಂತು] ಆಗಲಿ.

**ಭಾವಾರ್ಥ:-** ಮನುಷ್ಯರೇ! ಯಾರು ಕುತ್ಸಿತಕರ್ಮಗಳನ್ನು ಮಾಡುವವರೋ, ಪರದ್ರವ್ಯಾಪಹಾರಕರೋ ದ್ವೇಷಿಗಳೋ, ಅವರನ್ನು ದಂಡಿಸಿ ನಿರ್ಜನ ಪ್ರದೇಶದಲ್ಲಿ ಬಂಧಿಸಿಡಬೇಕು. ಯಾರು ಪ್ರಶಂಸೆ ಮಾಡುವವರೋ, ಧಾರ್ಮಿಕರೋ ಅವರನ್ನು ಸಮೀಪದಲ್ಲಿ ನೆಲೆಗೊಳಿಸಿಕೊಂಡು ಗೌರವಿಸಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾ-ದ್ಯೂಪಾದಮುಂಚೋ ಅಶಮಿಷ್ಟ ಹಿ ಷಃ ।**
**ಏವಾಸ್ಮದಗ್ನೇ ವಿ ಮುಮುಗ್ಧಿ ಪಾಶಾನ್ ಹೋತಶ್ಚಿಕಿತ್ವ ಇಹ ತೂ ನಿಷದ್ಯ ॥೭॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! ನೀನು **[ಸಹಸ್ರಾತ್]** ಅಸಂಖ್ಯಾತವಾದ **[ಯೂಪಾತ್]** ಮಿಶ್ರಿತಾಮಿಶ್ರಿತ ಬಂಧನದಿಂದ **[ನಿದಿತಂ]** ನಿಂದಿತನಾದ **[ಶುನಃಶೇಪಂ]** ಸುಖ ಪಡೆಯಲು ಮತ್ತು ಇಂದ್ರಿಯ ಸುಖಾನುಭವಿಸಲು ಇಚ್ಛಿಸುವವನನ್ನು **[ಚಿತ್]** ಅವನನ್ನೇ **[ಸಮುಂಚಃ]** ತ್ಯಜಿಸಿಬಿಡು. **[ಹಿ]** ಏಕೆಂದರೆ **[ಸಃ]** ಅವನು **[ಅಶಮಿಷ್ಟ]** **[ಏವ]** ಶಾಂತನಾಗುತ್ತಾನೆ. **[ಹೋತಃ]** ಹೋಮ ಮಾಡುವವನು **[ಚಿಕಿತ್ವಾನ್]** ಬುದ್ಧಿವಂತನು **[ಇಹ]** ಇಲ್ಲಿ ಧರ್ಮಯುಕ್ತ ವ್ಯವಹಾರದಲ್ಲಿ **[ನಿಷದ್ಯ]** ಪ್ರವೃತ್ತನಾಗಿ **[ಅಸ್ಮತ್]** ನಮ್ಮೆಲ್ಲರ ದೆಸೆಯಿಂದ **[ಪಾಶಾನ್]** ಸಂಸಾರ ಬಂಧನದಿಂದ **[ತು]** ಪುನಃ **[ವಿ]** **[ಮುಮುಗ್ಧಿ]** ವಿಮೋಚನಗೊಳಿಸು.

**ಭಾವಾರ್ಥ:-** ವಿದ್ಯಾವಂತರು ಎಲ್ಲರನ್ನೂ ಅವಿದ್ಯೆ ಮತ್ತು ಅಧರ್ಮಾಚರಣೆಗಳಿಂದ ಬೇರೆ ಮಾಡಿ ಧಾರ್ಮಿಕರೂ ವಿದ್ಯಾವಂತರೂ ಆಗುವಂತೆ ಮಾಡಿ, ದುಃಖಬಂಧನದಿಂದ ಬಿಡುಗಡೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹೃಣೀಯಮಾನೋ ಅಪ ಹಿ ಮದೈಯೇಃ ಪ್ರ ಮೇ ದೇವಾನಾಂ ವ್ರತಪಾ ಉವಾಚ ।**
**ಇಂದ್ರೋ ವಿದ್ವಾ ಅನು ಹಿತ್ವಾ ಚಚಕ್ಷ ತೇನಾಹಮಗ್ನೇ ಅನುಶಿಷ್ಟ ಆಗಾಮ್ ॥೮॥**

**ಪದಾರ್ಥ:-** **[ಅಗ್ನೇ]** ತ್ರಿದೋಷನಾಶಕನಾದ ನೀನು **[ಹೃಣೀಯಮಾನಃ]** ಕೋಪಿಸಿಕೊಳ್ಳುತ್ತ **[ಹಿ]** ಕೋಪದಿಂದಲೇ **[ಮತ್]** ನನ್ನ ಸಮೀಪದಿಂದ **[ಅಪ, ಐಯ್ಯೇಃ]** ಹೊರಟು ಹೋಗು ಮತ್ತು **[ಹಿ]** ನಿಶ್ಚಯವಾಗಿಯೂ **[ಇಂದ್ರಃ]** ವಿದ್ಯೈಶ್ವರ್ಯಸಂಪನ್ನನಾದ **[ವಿದ್ವಾನ್]** ವಿದ್ಯಾವಂತನಾದ **[ತ್ವಾಂ]** ನಿನ್ನನ್ನು **[ಅನು, ಚಚಕ್ಷ]** ಅನುಕೂಲಕರವಾಗಿ ಹೇಳಲಿ ಮತ್ತು **[ಮೇ]** ನನಗಾಗಿ **[ದೇವಾನಾಂ]** ವಿದ್ಯಾವಂತರಲ್ಲಿ **[ವ್ರತಪಾಃ]** ಸತ್ಯರಕ್ಷಕನಾದ ನೀನು ಸತ್ಯವನ್ನು **[ಪ್ರ, ಉವಾಚ]** ಹೇಳು. **[ತೇನ]** ಅದರಿಂದ **[ಅನುಶಿಷ್ಟಃ]** ಶಿಕ್ಷಣ ಪಡೆದ **[ಅಹಂ]** ನಾನು **[ಪ್ರ, ಆಗಾಂ]** ಸತ್ಯಬೋಧವನ್ನು ಪಡೆಯುವೆನು.

**ಭಾವಾರ್ಥ:-** ಯಾರು ದುಷ್ಟಗುಣ ಸ್ವಭಾವದವರೋ ಅವರನ್ನು ದೂರವಿಟ್ಟು, ಯಾರು ಧರ್ಮಿಷ್ಠರೋ, ಸತ್ಯೋಪದೇಶಕರೋ ಅವರ ಸಂಗಮಾಡಿ ಶ್ರೇಷ್ಠರಾಗಿ ಸುಖವನ್ನು ಪಡೆದುಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿ-ರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।**
**ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥೯॥**

**ಪದಾರ್ಥ:-** **[ಅಗ್ನಿಃ]** ಸೂರ್ಯಾದಿರೂಪದಲ್ಲಿರುವ ಅಗ್ನಿಯು **[ಬೃಹತ್ವಾ]** ಬೃಹತ್ತಾದ **[ಜ್ಯೋತಿಷಾ]** ಬೆಳಕಿನಿಂದ **[ಮಹಿತ್ವಾ]** ಹಿರಿತನದಿಂದ **[ವಿಶ್ವಾನಿ]** ಸಮಗ್ರ ವಸ್ತುಗಳನ್ನು **[ಆವಿಃ]** **[ಕೃಣುತೇ]** ಪ್ರಕಟಗೊಳಿಸುತ್ತಾನೆ. **[ವಿ]** **[ಭಾತಿ]** ವಿಶೇಷ ರೀತಿಯಲ್ಲಿ ಬೆಳಗುತ್ತಾನೆ. **[ಪ್ರ, ಸಹತೇ]** ಅತ್ಯಂತ ಸಹನಶೀಲನಾಗುತ್ತಾನೆ. **[ಶೃಂಗೇ]** ಶೃಂಗದ ನಿಮಿತ್ತ **[ರಕ್ಷಸೇ]** ದುಷ್ಟರಿಂದ ರಕ್ಷಿಸುವುದಕ್ಕೆ **[ವಿನಿಕ್ಷೇ]** ದುಷ್ಟರ ವಿನಾಶಕ್ಕೆ **[ಶಿಶೀತೇ]** ಪ್ರತಾಪಯುಕ್ತನಾಗುತ್ತಾನೆ. ಅದೇರೀತಿ **[ದುರೇವಾಃ]** ದುಷ್ಟಕರ್ಮದ **[ಅದೇವೀಃ]** ಪರಿಶುದ್ಧವಲ್ಲದ **[ಮಾಯಾಃ]** ಕಪಟ ಛಲ ಬುದ್ಧಿಯನ್ನು ವಾರಣ ಮಾಡಿರಿ ಅಂದರೆ ತ್ಯಜಿಸಿರಿ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಸೂರ್ಯನು ಹೇಗೆ ಕತ್ತಲನ್ನು ನಿವಾರಿಸಿ ಬೆಳಕನ್ನು ಸೃಜಿಸುತ್ತಾನೋ ಮತ್ತು ಭಯವನ್ನು ನಿವಾರಿಸುತ್ತಾನೋ, ಹಾಗೆ ವಿದ್ಯಾವಂತರು ಘೋರ ಅಜ್ಞಾನವನ್ನು ನಿವಾರಿಸಿ ವಿದ್ಯಾರೂಪೀ ಸೂರ್ಯನನ್ನು ಉದ್ಗಮಮಾಡಿ ಎಲ್ಲರ ಆತ್ಮವನ್ನು ಪ್ರಕಾಶಿತಗೊಳಿಸುತ್ತಾರೆ.

ಧನುರ್ವೇದ ದೃಷ್ಟಾಂತದಿಂದ ಅವಿದ್ಯಾ ನಿವಾರಣೋಪಾಯವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ.

**ಉತ ಸ್ವಾನಾಸೋ ದಿವಿ ಷಂತ್ವಗ್ನೇ-ಸ್ತಿಗ್ಮಾಯುಧಾ ರಕ್ಷಸೇ ಹಂತವಾ ಉ ।**
**ಮದೇ ಚಿದಸ್ಯ ಪ್ರ ರುಜಂತಿ ಭಾಮಾ ನ ವರಂತೇ ಪರಿಬಾಧೋ ಅದೇವೀಃ ॥೧೦॥**

**ಪದಾರ್ಥ:-** **[ಅಗ್ನೇಃ]** ಅಗ್ನಿಯಿಂದ **[ತಿಗ್ಮಾಯುಧಃ]** ತೀಕ್ಷ್ಣಾಯುಧಯುಕ್ತನಾಗಿ **[ಸ್ವಾನಾಸಃ]** ಉಪದೇಶ ಮಾಡುವವನು **[ದಿವಿ]** ವಿದ್ಯಾಪ್ರಕಾಶನ ಕೆಲಸದಲ್ಲಿ ಇರುವವನು **[ರಕ್ಷಸೇ]** ದುಷ್ಟರ ವಿನಾಶ ಮಾಡುವುದಕ್ಕಾಗಿ **[ಹಂತವೈ]** ಹನನ ಮಾಡಲು ಸಮರ್ಥನಾದವನು **[ಸಂತು]** ಆಗಲಿ. **[ಉತ್]** ಮತ್ತೂ ಸಹ **[ಮದೇ]** ಆನಂದ ಪಡೆಯಲು ಪ್ರವೃತ್ತನಾಗು. **[ಅಸ್ಯ]** ಇವನ **[ಭಾಮಾಃ]** ರೂಪಗಳಿಗೆ **[ನ]** ಸಮನಾಗಿ **[ಪರಿಬಾಧಃ]** ಸುತ್ತ ಮುತ್ತಲಿನ ಬಾಧೆಗಳನ್ನು **[ಅದೇವೀಃ]** ಪ್ರಮಾದರಹಿತ ಕ್ರಿಯೆಗಳು **[ಪ್ರ, ರುಜಂತಿ]** ಎಲ್ಲ ರೀತಿಯಿಂದ ಭಂಗಗೊಳಿಸುತ್ತ **[ವರಂತೇ]** ಸ್ವೀಕರಿಸುವಳು. ಅವುಗಳನ್ನು ನಿವಾರಿಸು.

**ಭಾವಾರ್ಥ:-** ವಿದ್ಯಾವಂತರೇ! ನೀವು ಧನುರ್ವೇದವನ್ನಧ್ಯಯನ ಮಾಡಿ ಅಸ್ತ್ರಗಳ ಪ್ರಯೋಗ ಮಾಡುವಂತಹ ಯುದ್ಧದಲ್ಲಿ ಚತುರರು ಅಗ್ನಿಸಂಬಂಧೀ ಅಸ್ತ್ರಾದಿಗಳಿಂದ ಶತ್ರುಗಳನ್ನು ನಿವಾರಿಸಿಕೊಂಡು ವಿಜಯಿಗಳಾಗುತ್ತೀರೋ ಹಾಗೆ ಸಮಗ್ರ ವಿದ್ಯೆಯ ಅಧ್ಯಯನ ಮತ್ತು ಉಪದೇಶ ಮಾಡುವುದರಿಂದ ಅವಿದ್ಯಾಕೃತ ಪ್ರಮಾದಗಳನ್ನು ನಿವಾರಿಸಿಕೊಂಡು ವಿದ್ಯಾಕೃತ ಶ್ರೇಷ್ಠಗುಣಗಳ ಪ್ರಕಾಶನ ಮಾಡಿರಿ.

ವಿದ್ವದ್ಗುಣಗಳನ್ನಿಲ್ಲಿ ಹೇಳಲಾಗಿದೆ.

**ಏತಂ ತೇ ಸ್ತೋಮಂ ತುವಿಜಾತ ವಿಪ್ರೋ ರಥಂ ನ ಧೀರಃ ಸ್ವಪಾ ಅತಕ್ಷಮ್ ।**
**ಯದೀದಗ್ನೇ ಪ್ರತಿ ತ್ವಂ ದೇವ ಹರ್ಯಾಃ ಸ್ವರ್ವತೀರಪ ಏನಾ ಜಯೇಮ ॥೧೧॥**

**ಪದಾರ್ಥ:-** **[ತುವಿಜಾತ]** ಬಹಳಷ್ಟು ವಿದ್ವಾಂಸರಲ್ಲಿ ಪ್ರಸಿದ್ಧನಾದ **[ಅಗ್ನೇ]** ವಿದ್ಯಾವಂತನೇ! ನಾನು ಹೇಗೆ **[ತೇ]** ನಿನ್ನ **[ಸ್ವಪಾಃ]** ಉತ್ತಮ ಕರ್ಮಾಚರಣೆ ಮಾಡುವವನ **[ಧೀರಃ]** ಕ್ಷಮಾದಿ ಗುಣಗಳಿಂದ ಯುಕ್ತನು ಮತ್ತು **[ತೇ]** ನಿನ್ನ ... ಧ್ಯಾನ ಮಾಡುವವನು **[ವಿಪ್ರಃ]** ಬುದ್ಧಿವಂತ ಮನುಷ್ಯನು **[ನ]** ಅವನಿಗೆ ಸದೃಶನಾಗಿ **[ಏತಂ]** ಈ ಶ್ರೇಷ್ಠಗುಣವನ್ನು ಪ್ರಕಟಿಸುವವನು **[ರಥಂ]** ಸುಂದರ ವಾಹನವನ್ನು **[ಅತಕ್ಷಂ]** ತಯಾರಿಸುವನೋ ಹಾಗೆ **[ತಂ]** ನೀನು ಮಾಡು ಮತ್ತು **[ದೇವ]** ವಿದ್ಯಾದಾನ ಮಾಡುವವನೇ! **[ಯದಿ]** ಒಂದು ವೇಳೆ ನೀನು ವಾಹನ ತಯಾರಿಸಿದರೆ **[ಇತ್]**

ಅದನ್ನು [ಸ್ತೋಮಂ] ಪ್ರಶಂಸಿತ ವ್ಯವಹಾರದಲ್ಲಿ ಬಳಸಿಕೊಂಡು ನಮ್ಮಂತೆ ಸುಖವನ್ನು ಪಡೆಯುವವನಾಗು. [ಏನಾ] ಇದರಿಂದ [ಹರ್ಮ್ಯಾ:] ಬಯಸಲು ಯೋಗ್ಯವಾದ [ಸ್ವರ್ವತೀಃ] ಉತ್ತಮಸುಖಸಂಪನ್ನನಾಗಿ [ಅಪಃ] ಪ್ರಾಣ ಸಹಿತನಾಗಿ [ಪ್ರತಿ, ಜಯೇಮ] ನಾವು ಜಯಿಸುವಂತೆ ನೀನೂ ಜಯಶೀಲನಾಗು.

**ಭಾವಾರ್ಥ:-** ವಿದ್ಯಾವಂತನಾದವನು ಉತ್ತಮ ಕರ್ಮಾಚರಣೆ ಮಾಡುವ ಶುಭಗುಣಗಳಿಂದ ಯುಕ್ತನೂ, ಧ್ಯಾನ ಮಗ್ನನೂ, ಬುದ್ಧಿವಂತನೂ ಆಗಿ ಸುಂದರವಾದ ವಾಹನಗಳನ್ನು ತಯಾರಿಸಿ ಅದನ್ನು ಉತ್ತಮ ಕರ್ಮಗಳಿಂದ ಸುಶೋಭಿತವನ್ನಾಗಿ ಮಾಡಿ ಸುಖಸಂಪನ್ನತೆಯಿಂದ ಕೂಡಿ ಜಯಶೀಲನಾಗಬೇಕು.

ಮತ್ತೆ ವಿದ್ಯಾವಂತರ ಗುಣವನ್ನಿಲ್ಲಿ ತಿಳಿಸಿದೆ.

**ತುವಿಗ್ರೀವೋ ವೃಷಭೋ ವಾವೃಧಾನೋ ऽಶತ್ರ್ವ (ಅ) ೧ ರ್ಯಃ ಸಮಜಾತಿ ವೇದಃ ।**
**ಇತೀಮಮಗ್ನಿಮಮೃತಾ ಅವೋಚನ್ ಬರ್ಹಿಷ್ಮತೇ ಮನವೇ ಶರ್ಮ ಯಂಸದ್ಧವಿಷ್ಮತೇ**
**ಮನವೇ ಶರ್ಮ ಯಂಸತ್ ॥೧೨॥**

**ಪದಾರ್ಥ:-** [ತುವಿಗ್ರೀವಃ] ಬಹುಬಲಶಾಲೀ/ಸುಂದರ ಕತ್ತು ಇರುವ [ವಾವೃಧಾನಃ] ಅತಿಶಯ ಬೆಳವಣಿಗೆ ಹೊಂದುತ್ತ [ವೃಷಭಃ] ಬಲಿಷ್ಠನು [ಅರ್ಯಃ] ಸ್ವಾಮಿಯು [ಅಶತ್ರು] ಶತ್ರುರಹಿತನು [ವೇದಃ] ಧನವನ್ನು [ಸಂ ಅಜಾತಿ] ಉತ್ತಮ ರೀತಿಯಿಂದ ಪ್ರಾಪ್ತಿಗೊಳಿಸು ಮತ್ತು [ಬರ್ಹಿಷ್ಮತೇ] ಜ್ಞಾನದ ವೃದ್ಧಿಯಿಂದ [ಮನವೇ] ಮನುಷ್ಯನಿಗೆ [ಶರ್ಮ] ಸುಖಸದನವನ್ನು [ಯಂಸತ್] ಕೊಡು ಮತ್ತು [ಹವಿಷ್ಮತೇ] ಉತ್ತಮ ಪದಾರ್ಥಗಳಿಂದ ಯುಕ್ತನಾಗಿ [ಮನವೇ] ವಿಚಾರವಂತ ಪುರುಷನಿಗಾಗಿ [ಶರ್ಮ] ಸುಖವನ್ನು [ಯಂಸತ್] ಕೊಡು. [ಇತಿ] ಈ ರೀತಿಯಾಗಿ [ಇಮಂ] [ಅಗ್ನಿಂ] ಈ ಅಗ್ನಿಯನ್ನು [ಅಮೃತಾಃ] ಆತ್ಮಜ್ಞಾನಿಗಳು [ಅವೋಚನ] ಹೇಳಿರುವರು.

**ಭಾವಾರ್ಥ:-** ಎಲ್ಲಾ ವಿದ್ಯಾವಂತರೂ ಎಲ್ಲಾ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣ ನೀಡಿ ವೈರಭಾವವನ್ನು ನಿರಾಕರಣ ಮಾಡಿ ಎಲ್ಲ ರೀತಿಯ ಸುಖವೂ ಲಭಿಸುವಂತೆ ಮಾಡಬೇಕು.

ಈ ಸೂಕ್ತದಲ್ಲಿ ಯುವಾವಸ್ಥೆ ಪಡೆದ ಮೇಲೆಯೇ ವಿವಾಹವಾಗುವುದು ಮತ್ತು ವಿದ್ಯಾವಂತರ ಗುಣಗಳ ವಿವರಣೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿದೆ ಎಂದು ತಿಳಿಯಬೇಕು.

**ಎರಡನೆಯ ಸೂಕ್ತ ಸಮಾಪ್ತ**

## ಸೂಕ್ತ ೩

ಮಂತ್ರಸಂಖ್ಯೆ ೧೨ । ವಸುಶ್ರುತೋ ಆತ್ರೇಯ ಋಷಿಃ । ಅಗ್ನಿರ್ದೇವತಾ । ೧ ನಿಚೃತ್ಪಂಕ್ತಿಃ ಛಂದಃ, ೧೧ ಭುರಿಕ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೩, ೫, ೯, ೧೨ ನಿಚೃತ್ತ್ರಿಷ್ಟುಪ್, ೪, ೧೦ ತ್ರಿಷ್ಟುಪ್, ೬, ೭, ೮ ವಿರಾಟ್ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ರಾಜನ ಕರ್ತವ್ಯ ಹೇಳಲಾಗಿದೆ.

**ತ್ವಮಗ್ನೇ ವರುಣೋ ಜಾಯಸೇ ಯತ್ ತ್ವಂ ಮಿತ್ರೋ ಭವಸಿ ಯತ್ ಸಮಿದ್ಧಃ ।**
**ತ್ವೇ ವಿಶ್ವೇ ಸಹಸಸ್ಪುತ್ರ ದೇವಾ-ಸ್ತ್ವಮಿಂದ್ರೋ ದಾಶುಷೇ ಮರ್ತ್ಯಾಯ ॥೧॥**

**ಪದಾರ್ಥ:-** [ಸಹಸಃ] ಶಕ್ತಿಯ [ಪುತ್ರಃ] ಪಾಲನೆ ಮಾಡುವವನು [ಅಗ್ನೇ] ವಿದ್ಯೆಯನ್ನು ಕಲಿತ ವಿದ್ಯಾವಂತನು [ಯತ್] ಯಾವುದರ [ತ್ವಂ] ನೀನು [ಮಿತಃ] ಗೆಳೆಯನೋ ಮತ್ತು [ಯತ್] ಯಾವುದರಿಂದ [ಸಮಿಧಃ] ಪ್ರಕಾಶಮಾನನೂ [ಭವಸಿ] ಆಗುತ್ತೀಯೋ ಮತ್ತು [ತ್ವಂ] ನೀನು [ವರುಣಃ] ದುಷ್ಟರನ್ನು ದಮನಿಸುವ ಶ್ರೇಷ್ಠನು [ಜಾಯಸೇ] ಆಗುವೆಯೋ ಮತ್ತು [ತ್ವಂ] ನೀನು [ಇಂದ್ರಃ] ಐಶ್ವರ್ಯದಾಯಕನೋ [ದಾಶುಷೇ] ದಾನಯೋಗ್ಯನಾದ [ಮರ್ತ್ಯಾಯ] ಮನುಷ್ಯನಿಗೆ ಧನದಾನಮಾಡುವೆಯೋ ಅಂತಹ [ತ್ವೇ] ನಿನ್ನಲ್ಲಿ [ವಿಶ್ವೇ] ಸಮಗ್ರ [ದೇವಾಃ] ವಿದ್ವಾಂಸರು ಪ್ರಸನ್ನರಾಗುತ್ತಾರೆ.

**ಭಾವಾರ್ಥ:-** ಎಲೈ ರಾಜನೇ! ಯಾವುದರಿಂದ ನೀನು ಗೆಳೆಯನಾಗುತ್ತೀಯೋ ಮತ್ತು ಯಾವುದರಿಂದ ನೀನು ವಿರೋಧಿ ಹಾಗೂ ಉದಾಸೀನನಾಗುತ್ತೀಯೋ ಅವನು ನಿನ್ನೊಂದಿಗೆ ಸದಾ ಸ್ನೇಹಭಾವವನ್ನಿರಿಸಿಕೊಳ್ಳಲಿ. ನೀನೂ ಅವನೊಂದಿಗೆ ಅದೇ ರೀತಿ ವರ್ತಿಸುವವನಾಗು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಮರ್ಯಮಾ ಭವಸಿ ಯತ್ ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**
**ಅಂಜಂತಿ ಮಿತ್ರಂ ಸುಧಿತಂ ನ ಗೋಭಿ-ರ್ಯದ್ದಂಪತೀ ಸಮನಸಾ ಕೃಣೋಷಿ ॥೨॥**

**ಪದಾರ್ಥ:-** [ಸ್ವಧಾವಾನ್] ಉತ್ತಮಾನ್ನಸಂಪನ್ನ ರಾಜನೇ! [ಯತ್] ಯಾವುದರಿಂದ [ತ್ವಂ] ನೀನು [ಕನೀನಾಂ] ಕಾಮನೆ ಮಾಡುವವರ [ಅರ್ಯಮಾ] ನ್ಯಾಯಾಧೀಶನು [ಭವಸಿ] ಆಗಿರುವೆಯೋ [ಗುಹ್ಯಂ] ಗುಟ್ಟಾದ [ನಾಮ] ಹೆಸರನ್ನು [ಬಿಭರ್ಷಿ] ಧಾರಣ ಮಾಡಿರುವೆಯೋ ಮತ್ತು [ಯತ್] ಯಾವನು [ದಂಪತೀ] ವಿವಾಹಿತ ಸ್ತ್ರೀಪುರುಷರನ್ನು [ಸಮನಸಾ] ಸಮಾನ ಮನಸ್ಕರೂ ದೃಢ ಪ್ರೀತಿಯುಳ್ಳವರೂ ಆಗುವಂತೆ [ಕೃಣೋಷಿ] ಮಾಡುತ್ತೀಯೋ, ಅಂತಹ ನಿನ್ನನ್ನು ಎಲ್ಲಾ ವಿದ್ಯಾವಂತರು [ಗೋಭಿಃ] ವಾಣೀ ಆದಿ ಪದಾರ್ಥಗಳಿಂದ [ಸುಧಿತಂ] ಸುಂದರನೂ ಪ್ರಸನ್ನನೂ ಆದ [ಮಿತ್ರಂ] [ನ] ಗೆಳೆಯನಿಗೆ ಸಮಾನವಾಗಿ [ಅಂಜಂತಿ] ಪ್ರಕಟಗೊಳಿಸುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವನು ಪ್ರಜೆಗಳಿಗೆ ಯೋಗ್ಯವಾದ ನ್ಯಾಯವನ್ನು ದೊರಕಿಸಿ ಕೊಡುತ್ತಾನೋ ಹೇಗೆ ಗೆಳೆಯನು - ಗೆಳೆಯನನ್ನು ಪ್ರಸನ್ನಗೊಳಿಸುತ್ತಾನೋ ಹಾಗೆ ರಾಜನು ಪ್ರಜೆಗಳನ್ನು ಪ್ರಸನ್ನಗೊಳಿಸುತ್ತಾನೋ ಅವನೇ ಶ್ರೇಷ್ಠರಾಜನೆನಿಸಿಕೊಳ್ಳುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತವ ಶ್ರಿಯೇ ಮರುತೋ ಮರ್ಜಯಂತ ರುದ್ರ ಯತ್ತೇ ಜನಿಮ ಚಾರುಚಿತ್ರಮ್ ।**
**ಪದಂ ಯದ್ವಿಷ್ಣೋರುಪಮಂ ನಿಧಾಯಿ ತೇನ ಪಾಸಿ ಗುಹ್ಯಂ ನಾಮ ಗೋನಾಮ್ ॥೩॥**

**ಪದಾರ್ಥ:-** [ರುದ್ರ] ದುಷ್ಟರನ್ನು ಅಳಿಸುವವನೇ! [ಮರುತ] ಯಾವ ಮನುಷ್ಯನು [ತವ] ನಿನ್ನ [ಶ್ರಿಯೇ] ಸಂಪತ್ತಿಗಾಗಿ [ಮರ್ಜಯಂತ] ಶುದ್ಧಿಗೊಳಿಸುತ್ತಾನೆಯೋ [ತೇ] ನಿನ್ನ [ಯತ್] ಯಾವ [ಚಾರು] ಸುಂದರವಾದ [ಚಿತ್ರಂ] ಅದ್ಭುತವಾದ [ಪದಂ] ಪಡೆಯಲು ಯೋಗ್ಯವಾದ [ಜನಿಮ] ಜನ್ಮವನ್ನು ಶುದ್ಧಿಗೊಳಿಸುವನೋ ಮತ್ತು [ಯತ್] ಯಾವ ನೀನು [ವಿಷ್ಣೋಃ] ವ್ಯಾಪಕನಾದ ಈಶ್ವರನ [ಉಪಮಂ] ಉಪಮೆಯಾಗಿರುವೆ. [ಗೋನಾಂ] ಇಂದ್ರಿಯಗಳ/ಕಿರಣಗಳ [ಗುಹ್ಯಂ] ಗುಟ್ಟಾದ [ನಾಮ] ಹೆಸರನ್ನು [ನಿಧಾಯಿ] ಧಾರಣ ಮಾಡುತ್ತಿಯೆ. [ತೇನ] ಅದರಿಂದಲೇ ನೀನು ಅವರನ್ನು [ಪಾಸಿ] ಪಾಲನೆ ಮಾಡುತ್ತೀಯೆ. ಹಾಗಾಗಿ ಸತ್ಕಾರಾರ್ಹನಾಗುವೆ.

**ಭಾವಾರ್ಥ:-** ರಾಜನೇ! ನೀನು ಈಶ್ವರನಂತೆ ಪಕ್ಷಪಾತರಹಿತನಾಗಿದ್ದು ಪ್ರಜಾಜನರ ಪಾಲನೆಮಾಡು. ಅದರಿಂದಲೇ ನೀನು ನಿನ್ನ ಜನ್ಮವನ್ನು ಸಾರ್ಥಕಗೊಳಿಸಿಕೋ.

ಈ ಮಂತ್ರದಲ್ಲಿ ಪ್ರಜೆಗಳ ಕೆಲಸ ತಿಳಿಸಿದೆ.

**ತವ ಶ್ರಿಯಾ ಸುದೃಶೋ ದೇವ ದೇವಾಃ ಪುರೂ ದಧಾನಾ ಅಮೃತಂ ಸಪಂತ ।**
**ಹೋತಾರಮಗ್ನಿಂ ಮನುಷೋ ನಿ ಷೇದು-ರ್ದಶಸ್ಯಂತ ಉಶಿಜಃ ಶಂಸಮಾಯೋಃ ॥೪॥**

**ಪದಾರ್ಥ:-** [**ದೇವ**] ದಾನಶೀಲ ರಾಜನೇ! [**ತವ**] ನಿನ್ನ [**ಶ್ರಿಯಾ**] ಸಂಪತ್ತಿನಿಂದ /ಶೋಭೆಯಿಂದ [**ಸುದೃಶಃ**] ಉತ್ತಮ ದರ್ಶನನೂ ಮತ್ತು [**ಪುರು**] [**ಅಮೃತಂ**] ಬಹಳಷ್ಟು ವಿನಾಶರಹಿತ ಪದವಿಯನ್ನೂ [**ದಧಾನಾಃ**] ಧಾರಣ ಮಾಡಿದವನಾಗುವೆ ಮತ್ತು [**ಉಶಿಜಃ**] ಬಯಸುವವನಾಗಿ [**ಆಯೋಃ**] ಜೀವಿತಾವಧಿಯ [**ಶಂಸಂ**] ಹೇಳುವ ಮತ್ತು [**ಹೋತಾರಂ**] ಗ್ರಹಣಮಾಡುವ [**ಅಗ್ನಿಂ**] ಅಗ್ನಿಯನ್ನು [**ದಶಸ್ಯಂತಃ**] ವಿಸ್ತಾರಗೊಳಿಸುತ್ತ [**ದೇವಾಃ**] ವಿದ್ಯಾವಂತ [**ಮನುಷಃ**] ಮನುಷ್ಯನು [**ಸವಂತ**] ಆಕ್ರೋಶ ಮಾಡುವನು ಅಂದರೆ ಕೂಗಿ-ಕೂಗಿ ಅವನ ಉಪದೇಶ ಸಾರುವರು. ಅವರು ಶಾಶ್ವತ ಪದವಿಯನ್ನು [**ನಿ, ಷೇದುಃ**] ಪಡೆಯುವರು.

**ಭಾವಾರ್ಥ:-** ಎಲೈ ಮನುಷ್ಯರೇ! ನೀವು ಯಥಾರ್ಥವಾದಿ ವಿದ್ಯಾವಂತರ ಸಂಗಮಾಡಿ ವಿದ್ಯಾಗ್ರಹಣ ಮಾಡಿರಿ. ರಶ್ಮಿವಂತರಾಗಿರಿ. ಜೀವನದಲ್ಲಿ ಸುಖವನ್ನನುಭವಿಸಿರಿ. ಕೊನೆಯಲ್ಲಿ ಮುಕ್ತಿಯನ್ನು ಪಡೆಯಿರಿ.

ಈ ಮಂತ್ರದಲ್ಲಿ ರಾಜಧರ್ಮ ಹೇಳಿದೆ.

**ನ ತ್ವದ್ಧೋತಾ ಪೂರ್ವೋ ಅಗ್ನೇ ಯಜೀಯಾ-ನ್ನ ಕಾವ್ಯೈಃ ಪರೋ ಅಸ್ತಿ ಸ್ವಧಾವಃ ।**
**ವಿಶಶ್ಚ ಯಸ್ಯಾ ಅತಿಥಿರ್ಭವಾಸಿ ಸ ಯಜ್ಞೇನ ವನವದ್ದೇವ ಮರ್ತಾನ್ ॥೫॥**

**ಪದಾರ್ಥ:-** [**ಸ್ವಧಾವಃ**] ಬಹಳಷ್ಟು ಧನ-ಧಾನ್ಯಗಳಿರುವವನೂ [**ದೇವ**] ಸುಖದಾಯಕನೂ ಆದ [**ಅಗ್ನೇ**] ವಿದ್ಯಾವಂತ ರಾಜನೇ! ನೀನು [**ಯಜ್ಞೇನ**] ಪ್ರಜಾಪಾಲನ ರೂಪ ಯಜ್ಞದಿಂದ [**ಮರ್ತಾನ್**] ಮನುಷ್ಯರನ್ನು [**ವನವತ್**] ಸೇವಿಸುತ್ತೀಯೆ. [**ತ್ವತ್**] ನಿನ್ನ ದೆಸೆಯಿಂದ [**ಪೂರ್ವಃ**] ಹಿಂದಿನ [**ಹೋತಾ**] ದಾನಿಯು [**ಯಜೀಯಾನ್**] ಯಜ್ಞ ಮಾಡುವವನು [**ನ**] [**ಅಸ್ತಿ**] ಬೇರೊಬ್ಬನಿಲ್ಲ. [**ಕಾವ್ಯೈಃ**] ಕವಿಗಳಿಂದ ರಚಿಸಿರುವುದರಲ್ಲಿ [**ನ**] [**ಪರಃ**] ಶ್ರೇಷ್ಠನಾರೂ ಇಲ್ಲ. [**ಯಸ್ಯಾಃ**] ಯಾವ [**ವಿಶಃ**] ಪ್ರಜೆಗಳ [**ಚ**] ಮತ್ತು [**ಅತಿಥಿಃ**] ಆದರಮಾಡಲು ಯೋಗ್ಯನಾದ ನೀನು [**ಭವಾಸಿ**] ಇರುವೆ. [**ಸಃ**] ಅಂತಹ ನೀನು ಪ್ರಜೆಗಳಿಂದ ಸತ್ಕಾರಯೋಗ್ಯನಿರುವೆ.

**ಭಾವಾರ್ಥ:-** ಯಾವ ರಾಜನು ಧರ್ಮದಿಂದ ಪ್ರಜಾಪಾಲನೆ ಮಾಡುವನೋ ಅವನೇ ರಾಜ್ಯವಾಳಲು ಯೋಗ್ಯನು.

ಈ ಮಂತ್ರದಲ್ಲಿ ಪ್ರಜೆಗಳ ವಿಚಾರ ತಿಳಿಸಿದೆ.

**ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯಮಾನಾಃ ।**
**ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥೬॥**

**ಪದಾರ್ಥ:-** [**ಸಹಸಸ್ಪುತ್ರಃ**] ಬಲದ ಪಾಲನೆಮಾಡುವವನಾದ [**ಅಗ್ನೇ**] ಅಗ್ನಿಗೆ ಸದೃಶನಾದ ತೇಜಸ್ವೀ ರಾಜನೇ! [**ತ್ವೋತಾಃ**] ನಿನ್ನಿಂದ ರಕ್ಷಣೆ ಮಾಡಲಾದ [**ವಸೂಯವಃ**] ತನ್ನ ಧನದ ಇಚ್ಛೆ ಮಾಡುವವರು [**ಹವಿಷಾ**] ದಾನದಿಂದ [**ಬುಧ್ಯಮಾನಾಃ**] ಬೋಧೆಯನ್ನು ಪಡೆದುಕೊಂಡು [**ವಯಂ**] ನಾವು ನಿನ್ನಿಂದ ರಕ್ಷಣೆಯ [**ವಯುನಾಮ**] ಯಾಚನೆಮಾಡುತ್ತೇವೆ ಮತ್ತು [**ವಯಂ**] ನಾವು [**ಅಹ್ನಾಂ**] ಹಗಲಿನ [**ವಿದಥೇಷು**] ವಿಶೇಷ ಜ್ಞಾನ ಸಂಬಂಧೀ ವ್ಯವಹಾರಗಳಲ್ಲಿ [**ಸಮರ್ಯೇ**] ಸಂಗ್ರಾಮದಲ್ಲಿ ಪ್ರವೃತ್ತರಾಗುವೆವು ಮತ್ತು [**ವಯಂ**] ನಾವು [**ರಾಯಾ**] ಧನದಿಂದ [**ಮರ್ತಾನ್**] ಮನುಷ್ಯರಿಂದ ಪ್ರಾರ್ಥಿಸಲ್ಪಡುತ್ತೇವೆ.

**ಭಾವಾರ್ಥ:-** ಮನುಷ್ಯರೇ! ನೀನು ವಿದ್ವಾಂಸರಲ್ಲಿ ಶ್ರೇಷ್ಠಗುಣಗಳ ಪ್ರಾರ್ಥನೆ ಮಾಡಿರಿ. ಅಂದರೆ ಪ್ರಜೆಗಳು ಸ್ವತಃ ಧನವಂತರಾಗುತ್ತಾರೆ.

ಈ ಮಂತ್ರದಲ್ಲಿ ಕಳ್ಳತನದ ಅಪರಾಧ ನಿವಾರಣೆ, ಪ್ರಜಾಪಾಲನೆ ರಾಜ ಧರ್ಮವನ್ನು ತಿಳಿಸಲಾಗಿದೆ.

**ಯೋ ನ ಆಗೋ ಅಭ್ಯೇನೋ ಭರಾ-ತ್ಯಧೀದಘಮಘಶಂಸೇ ದಧಾತ ।**
**ಜಹೀ ಚಿಕಿತ್ವೋ ಅಭಿಶಸ್ತಿಮೇತಾ-ಮಗ್ನೇ ಯೋ ನೋ ಮರ್ಚಯತಿ ದ್ವಯೇನ ॥೭॥**

**ಪದಾರ್ಥ:-** [**ಚಿಕಿತ್ವಾನ್**] ವಿಜ್ಞಾನವಂತ [**ಅಗ್ನೇ**] ಅಗ್ನಿಯಂತೆ ಪ್ರತಾಪೀ ಪೃಥ್ವಿಯ ಪಾಲಕನೇ! [**ಯಃ**] ಯಾವ ನೀನು [**ನಃ**] ನಮ್ಮ [**ಆಘಃ**] ಅಪರಾಧ ಮತ್ತು [**ಏನಃ**] ಪಾಪವನ್ನು [**ಅಭಿ, ಭರಾತಿ**] ಸಮ್ಮುಖ ಧಾರಣ ಮಾಡುತ್ತೀಯೆ. [**ಅಘಶಂಸೇ**] ಕಳ್ಳತನದ ಕೆಲಸದಲ್ಲಿ [**ಅಘಂ**] [**ಇತ್**] ಪಾಪವನ್ನೇ [**ಅಧಿ, ದಧಾತ**] ಅಧಿಸ್ಥಾಪನ ಮಾಡುತ್ತಾನೆ ಮತ್ತು [**ಯಃ**] ಯಾವನು [**ದ್ವಯೇನ**] ಪಾಪ-ಅಪರಾಧಗಳಿಂದ ಹಿಂಸೆ ಮಾಡುವನೋ ಅವನನ್ನು ನೀನು [**ಜಹಿ**] ತ್ಯಜಿಸಿಬಿಡು.

**ಭಾವಾರ್ಥ:-** ರಾಜನೇ! ಯಾವನು ಪ್ರಜೆಗಳಿಗೆ ತೊಂದರೆ ಮಾಡುತ್ತಾನೋ ಅವನನ್ನು ದಂಡಿಸು. ಯಾರು ಶ್ರೇಷ್ಠಾಚರಣೆ ಮಾಡುವನೋ ಅವನನ್ನು ಒಪ್ಪಿಕೋ, ಗೌರವಿಸು.

ಈ ಮಂತ್ರದಲ್ಲಿ ರಾಜಧರ್ಮ ಹೇಳಿದೆ.

**ತ್ವಾಮಸ್ಯಾ ವ್ಯುಷಿ ದೇವ ಪೂರ್ವೇ ದೂತಂ ಕೃಣ್ವಾನಾ ಅಯಜಂತ ಹವ್ಯೈಃ ।**
**ಸಂಸ್ಥೇ ಯದಗ್ನ ಈಯಸೇ ರಯೀಣಾಂ ದೇವೋ ಮರ್ತ್ಯೈರ್ವಸುಭಿರಿಧ್ಯಮಾನಃ ॥೮॥**

**ಪದಾರ್ಥ:-** [**ದೇವ**] ಉತ್ತಮ ಗುಣಸಂಪನ್ನನಾದ [**ಅಗ್ನೇ**] ಅಗ್ನಿಗೆ ಸದೃಶನಾಗಿರುವ [**ದೇವಃ**] ವಿದ್ಯಾವಂತನಾದ ನೀನು [**ಯತ್**] ಯಾವುದರಿಂದ [**ಅಸ್ಯಾಃ**] ಈ ಪ್ರಜೆಗಳ ಮಧ್ಯದಲ್ಲಿ [**ಸಂಸ್ಥೇ**] ಉತ್ತಮ ರೀತಿಯಲ್ಲಿ ನೆಲೆಸಿರುವೆ. ಯಾವುದರಲ್ಲೋ ಅದರಲ್ಲಿ [**ರಯೀಣಾಂ**] ಸಂಪತ್ತಿನ ಮಧ್ಯದಲ್ಲಿ [**ವಸುಭಿಃ**] ಧನಾದಿ ಪದಾರ್ಥಗಳಿಂದ ಯುಕ್ತನಾಗಿ [**ಮರ್ತ್ಯೈಃ**] ಮರಣಧರ್ಮಿಗಳಾದ ಮನುಷ್ಯರಿಂದ [**ಇಧ್ಯಮಾನಃ**] ಪ್ರಕಟಗೊಳಿಸಲ್ಪಟ್ಟು [**ಈಯಸೇ**] ಪ್ರಾಪ್ತನಾಗಿ ಪಾಲನೆಮಾಡಲು [**ವ್ಯುಷಿ**] ಪ್ರಜೆಗಳ ಸೇವನ ಮಾಡುವೆ. [**ತ್ವಾಂ**] ಅಂತಹ ನಿನ್ನನ್ನು [**ಹವ್ಯೈಃ**] ಪ್ರಶಂಸಾರ್ಹ ಪದಾರ್ಥಗಳಿಂದ [**ದೂತಂ**] ಶತ್ರುಗಳನ್ನು ಸಂಹರಿಸುವವನು [**ಕೃಣ್ವಾನಾಃ**] ಕೆಲಸ ಮಾಡುತ್ತ [**ಪೂರ್ವೇ**] ಪಾಲನೆ ಮಾಡುವ ವಿದ್ಯಾವಂತರು [**ಅಯಜಂತ**] ಸಂಗತರಾಗಲಿ.

**ಭಾವಾರ್ಥ:-** ರಾಜನೇ! ನೀನು ವಿದ್ಯಾ-ವಿನಯಗಳೊಂದಿಗೆ ನ್ಯಾಯಮಾರ್ಗದಲ್ಲಿ ನಿರಂತರ ಪ್ರಜೆಗಳ ಪಾಲನೆಮಾಡು. ಅದರಿಂದ ನಿನಗೆ ಯಶ, ಧನ, ರಾಜ್ಯದ ಏಳಿಗೆ ಮತ್ತು ಶ್ರೇಷ್ಠತನ ಪ್ರಾಪ್ತವಾಗುತ್ತದೆ.

ಈ ಮಂತ್ರದಲ್ಲಿ ಸಂತಾನ, ಶಿಕ್ಷಣ ವಿಷಯ ರೂಪ ರಾಜಧರ್ಮ ಹೇಳಿದೆ.

**ಅವ ಸ್ಪೃಧಿ ಪಿತರಂ ಯೋಧಿ ವಿದ್ವಾನ್ ಪುತ್ರೋ ಯಸ್ತೇ ಸಹಸಃ ಸೂನ ಊಹೇ ।**
**ಕದಾ ಚಿಕಿತ್ವೋ ಅಭಿ ಚಕ್ಷಸೇ ನೋ ಽಗ್ನೇ ಕದಾ ಋತಚಿದ್ಯಾತಯಾಸೇ ॥೯॥**

**ಪದಾರ್ಥ:-** **[ಸಹಸಃ]** ಬ್ರಹ್ಮಚರ್ಯಬಲಯುಕ್ತ ಪುರುಷನ **[ಸೂನೋ]** ಮಗನು **[ಚಿಕಿತ್ವಃ]** ಬುದ್ಧಿವಂತ **[ಅಗ್ನೇ]** ಅಗ್ನಿಯಂತೆ ತೇಜಸ್ವಿಯೇ! **[ತೇ]** ನಿನಗಾಗಿ ನಾನು **[ಊಹೇ]** ವಿಶೇಷ ರೀತಿಯಿಂದ ಊಹಿಸುವೆನು. **[ಯಃ]** ಯಾವ ನೀನು **[ವಿದ್ವಾನ್]** ವಿದ್ಯಾವಂತನು **[ಪುತ್ರಃ]** ದುಃಖದಿಂದ ರಕ್ಷಿಸುವವನು **[ಪಿತರಂ]** ತನ್ನ ಪಾಲನೆ ಮಾಡುವವನನ್ನು **[ಅವ, ಸ್ಪೃಧಿ]** ಬಯಸುತ್ತ ದುಃಖವನ್ನು **[ಯೋಧಿ]** ದೂರ ಮಾಡಿಕೊ ಹಾಗೂ **[ಋಚಿತ್]** ಸತ್ಯದ ಸಂಚಯ ಮಾಡುವ ನೀನು **[ನಃ]** ನಮ್ಮನ್ನು **[ಕದಾ]** ಯಾವಾಗ **[ಅಭಿ, ಚಕ್ಷಸೇ]** ಉಪದೇಶ ಮಾಡುವೆ. **[ಕದಾ]** ಯಾವಾಗ ಉತ್ತಮ ಕೆಲಸಗಳಲ್ಲಿ **[ಯಾತಯಾಸೇ]** ಪ್ರವೃತ್ತಿಗೊಳಿಸುವೆ.

**ಭಾವಾರ್ಥ:-** ಯಾವ ಬಾಲಕ-ಬಾಲಕಿಯರನ್ನು ತಂದೆ-ತಾಯಿಯರು ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸ ಮಾಡಿಸುವರೋ ಮತ್ತು ಯೌವ್ವನಾವಸ್ಥೆಗೆ ಪದಾರ್ಪಣ ಮಾಡಿದ ಮೇಲೆಯೇ ಮದುವೆ ಮಾಡುವರೋ ಅವರು ಅತ್ಯಂತ ಸುಖಿಗಳಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಭೂರಿ ನಾಮ ವಂದಮಾನೋ ದಧಾತಿ ಪಿತಾ ವಸೋ ಯದಿ ತಜ್ಜೋಷಯಾಸೇ ।**
**ಕುವಿದ್ದೇವಸ್ಯ ಸಹಸಾ ಚಕಾನಃ ಸುಮ್ನಮಗ್ನಿರ್ವನತೇ ವಾವೃಧಾನಃ ॥೧೦॥**

**ಪದಾರ್ಥ:-** **[ವಸೋ]** ನೆಲೆಗೊಂಡಿರುವ ನೀನು **[ವಂದಮಾನಃ]** ಸ್ತುತಿಮಾಡುತ್ತ **[ದೇವಸ್ಯ]** ವಿದ್ಯಾವಂತನ **[ಸಹಸಾ]** ಬಲದಿಂದ **[ಸುಮ್ನಂ]** ಸುಖದ **[ಚಕಾನಃ]** ಕಾಮನೆ ಮಾಡುತ್ತ **[ಅಗ್ನಿಃ]** ಮತ್ತು ಅಗ್ನಿಗೆ ಸದೃಶನಾದ **[ವಾವೃಧಾನಃ]** ನಿರಂತರ ವೃದ್ಧಿಹೊಂದುತ್ತ **[ಪಿತಾ]** ಉತ್ಪಾದಕನು **[ಯದಿ]** ಒಂದು ವೇಳೆ **[ಭೂರಿ]** ಬಹುವಾಗಿ **[ಕುವಿತ್]** ಮಹತ್ತರವಾದ **[ನಾಮ]** ಹೆಸರನ್ನು **[ದಧಾತಿ]** ಧಾರಣ ಮಾಡುತ್ತಾನೆ ಮತ್ತು **[ವನತೇ]** ಸೇವನ ಮಾಡುತ್ತಾನೆ ಮತ್ತು **[ತತ್]** ಅದರ ಸೇವನೆ **[ಜೋಷಯಾಸೇ]** ನೀನು ಮಾಡು.

**ಭಾವಾರ್ಥ:-** ಮಕ್ಕಳೇ! ಯಾವ ನಿಮ್ಮ ತಂದೆ-ತಾಯಂದಿರು ವಿದ್ಯಾರೂಪ ಮರುಜನ್ಮದ ಹೆಸರು ದ್ವಿಜ ಎಂಬುದನ್ನು ಧಾರಣ ಮಾಡಿರುತ್ತಾರೋ ಅವರ ಸೇವನೆಯನ್ನು ನೀವು ನಿರಂತರವಾಗಿ ಮಾಡುವವರಾಗಿರಿ.

ಈ ಮಂತ್ರದಲ್ಲಿ ಕಳ್ಳತನ ಮುಂತಾದ ದೋಷ ನಿವಾರಣೆ, ಮಕ್ಕಳ ಶಿಕ್ಷಣ, ಪ್ರಜಾಧರ್ಮ ವಿಷಯವನ್ನು ಹೇಳಲಾಗಿದೆ.

**ತ್ವಮಂಗ ಜರಿತಾರಂ ಯವಿಷ್ಠ ವಿಶ್ವಾನ್ಯಗ್ನೇ ದುರಿತಾತಿ ಪರ್ಷಿ ।**
**ಸ್ತೇನಾ ಅದೃಶನ್ ರಿಪವೋ ಜನಾಸೋಽಜ್ಞಾತಕೇತಾ ವೃಜಿನಾ ಅಭೂವನ್ ॥೧೧॥**

**ಪದಾರ್ಥ:-** **[ಯವಿಷ್ಠ]** ಅತ್ಯಂತ ಯುವಾವಸ್ಥೆಯಲ್ಲಿರುವ **[ಅಂಗ]** ಗೆಳೆಯನಾದ **[ಅಗ್ನೇ]** ಅಗ್ನಿಗೆ ಸದೃಶನಾಗಿರುವ **[ತ್ವಂ]** ನೀನು **[ಜರಿತಾರಂ]** ವಿದ್ಯಾಗುಣಗಳ ಪ್ರಶಂಸೆ ಮಾಡುವ ಜನಕನ **[ಅತಿ, ಪರ್ಷಿ]** ಅತ್ಯಂತ ಪಾಲನೆ ಮಾಡುತ್ತೀಯೆ. **[ವಿಶ್ವಾನಿ]** ಸಂಪೂರ್ಣ **[ದುರಿತಾ]** ದುಃಖದಾಯಕ ಕರ್ಮವನ್ನು ಅಥವಾ ಕರ್ಮಫಲವನ್ನು ತ್ಯಾಗ ಮಾಡುತ್ತೀಯೆ. **[ಅಜ್ಞಾತಕೇತಾಃ]** ಜ್ಞಾನವಿಲ್ಲದ ಮೂರ್ಖರು **[ವೃಜನಾಃ]** ಪಾಪಾಚರಣೆ ಮಾಡವವರು ವರ್ಜನೆಗೆ ಯೋಗ್ಯರು **[ಸ್ತೇನಾಃ]** ಕಳ್ಳರು **[ರಿಪವಃ]** ಶತ್ರುಗಳೂ **[ಅಭವನ್]** ಆಗುವರು ಮತ್ತು ಯಾರನ್ನು **[ಜನಾಸಃ]** ವಿದ್ಯಾವಂತ ಜನರು **[ಅದೃಶ್ರನ್]** ನೋಡುವರೋ ಅವರನ್ನು ನೀನು ತ್ಯಾಗಮಾಡು.

**ಭಾವಾರ್ಥ:-** ಉತ್ತಮ ಮಕ್ಕಳೇ! ನೀವು ದುರಾಚಾರಗಳನ್ನು ತ್ಯಜಿಸಿರಿ. ತಂದೆ-ತಾಯಿರನ್ನು ಗೌರವಿಸಿರಿ. ಕಳ್ಳತನವನ್ನು ಬಿಟ್ಟು ಪುಣ್ಯವಂತರೂ ಕೀರ್ತಿಮಂತರೂ ಆಗಿರಿ.

ಈ ಮಂತ್ರದಲ್ಲಿ ಪ್ರಜಾಧರ್ಮ ತಿಳಿಸಲಾಗಿದೆ.

**ಇಮೇ ಯಾಮಾಸಸ್ತ್ವದ್ರಿಗಭೂವನ್ ವಸವೇ ವಾ ತದಿದಾಗೋ ಅವಾಚಿ ।**
**ನಾಹಾಯಮಗ್ನಿರಭಿಶಸ್ತಯೇ ನೋ ನ ರೀಷತೇ ವಾವೃಧಾನಃ ಪರಾ ದಾತ್ ॥೧೨॥**

**ಪದಾರ್ಥ:-** **[ಅಯಂ]** ಇವನು **[ಅಗ್ನಿಃ]** ಅಗ್ನಿಯಂತೆ ಇರುವವನು **[ನಃ]** ನಮ್ಮೆಲ್ಲರಿಗೆ **[ಅಭಿಶಸ್ತಯೇ]** ಎಲ್ಲಾರೀತಿಯ ಹಿಂಸೆ ಮಾಡುವುದಕ್ಕೆ **[ನ]** ಪ್ರಚೋದಿಸದಿರಲಿ. **[ಅಹ]** ನಿಶ್ಚಯವಾಗಿಯೂ **[ಪರಾ, ದಾತ್]** ಅದರಿಂದ ದೂರಗೊಳಿಸಲಿ. **[ವಾವೃಧಾನಃ]** ಸತತ ವೃದ್ಧಿಹೊಂದುತ್ತ **[ನ]** **[ರೀಷತೇ]** ಹಿಂಸೆ ಮಾಡುವುದಿಲ್ಲ **[ವಸವೇ]** ಸಂಪತ್ತಿಗಾಗಿ **[ಅವಾಚಿ]** ಹೇಳಲಾಗಿದೆ. **[ವಾ]** ಮತ್ತು **[ತ್ವತ್]** ನಿನ್ನ ಬಗ್ಗೆ ಪ್ರಯತ್ನಶೀಲನಾಗುವನು. **[ಇತ್]** ಎಂದೂ ಹೇಳಲಾಗಿದೆ. ಅದನ್ನು **[ಇಮೇ]** ಯಾವುದು ಅಥವಾ **[ತತ್]** ಅದು **[ಆಗಃ]** ಅಪರಾಧ **[ಯಾಮಾಸಃ]** ಯಮ-ನಿಯಮಗಳಿಂದ ಯುಕ್ತರು ಪಾಠ-ಪ್ರವಚನಗಳಿಂದ ಪವಿತ್ರಗೊಳಿಸುವರೋ ಅವರು **[ಅಭೂವನ್]** ಅನಿಂದಿತರಾಗುತ್ತಾರೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ವಿದ್ಯಾವಂತರು ಯಾರನ್ನೂ ಅಪರಾಧವೆಸಗದೆ ದೂಷಿಸುವುದಿಲ್ಲ. ಅಂತಹವರನ್ನು ಸಂಗದಿಂದ ದೂರ ಮಾಡಬೇಡ.

ಈ ಸೂಕ್ತದಲ್ಲಿ ರಾಜನ ಗುಣ, ಪ್ರಜೆಗಳ ಕಳ್ಳತನ, ಅಪರಾಧ ಮುಂತಾದವುಗಳ ನಿವಾರಣೆಗೆ ಸಂಬಂಧಿಸಿದ ವಿಚಾರವನ್ನು ತಿಳಿಸಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಮೂರನೆಯ ಸೂಕ್ತ ಸಮಾಪ್ತ**

## ಸೂಕ್ತ ೪

ಮಂತ್ರಸಂಖ್ಯೆ ೧೧ । ವಸುಶ್ರುತ ಆತ್ರೇಯಃ ಋಷಿಃ । ಅಗ್ನಿರ್ದೇವತಾ । ೧, ೧೦, ೧೧ ಭುರಿಕ್ಪಂಕ್ತಿಃ, ೪, ೭ ಸ್ವರಾಟ್ ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೨, ೯ ವಿರಾಟ್ ತ್ರಿಷ್ಟುಪ್, ೩, ೬, ೮ ನಿಚೃತ್ತ್ರಿಷ್ಟುಪ್, ೫ ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ.

ಈ ಮಂತ್ರದಲ್ಲಿ ರಾಜನ ವಿಷಯವನ್ನಿಲ್ಲಿ ಹೇಳಿದೆ.

**ತ್ವಾಮಗ್ನೇ ವಸುಪತಿಂ ವಸೂನಾ-ಮಭಿ ಪ್ರ ಮಂದೇ ಅಧ್ವರೇಷು ರಾಜನ್ ।**
**ತ್ವಯಾ ವಾಜಂ ವಾಜಯಂತೋ ಜಯೇಮಾ-ಭಿ ಷ್ಯಾಮ ಪೃತ್ಸುತೀರ್ಮರ್ತ್ಯಾನಾಮ್ ॥೧॥**

**ಪದಾರ್ಥ:-** **[ಅಗ್ನೇ]** ವಿದ್ಯುತ್‌ನಂತೆ ವಿದ್ಯೆಯಿಂದ ವ್ಯಾಪ್ತನಾದ **[ರಾಜನ್]** ಉತ್ತಮ ಗುಣಗಳಿಂದ ಬೆಳಗುತ್ತಿರುವ ರಾಜನೇ! **[ಅಧ್ವರೇಷು]** ಅಹಿಂಸಾತ್ಮಕ ಪ್ರಜಾಪಾಲನ ರೂಪ ನ್ಯಾಯಸಮ್ಮತ ವ್ಯವಹಾರಗಳಲ್ಲಿ **[ವಸೂನಾಂ]** ಸಂಪತ್ತುಗಳ **[ವಸುಪತಿಂ]** ಧನಸ್ವಾಮಿಯನ್ನು **[ತ್ವಾಂ]** ನಿನ್ನನ್ನು **[ಅಭಿ, ಪ್ರ, ಮಂದೇ]** ಎಲ್ಲಾ ಕಡೆಗಳಿಂದಲೂ ಆನಂದವನ್ನು ನೀಡುತ್ತೇನೆ. **[ತ್ವಯಾ]** ಅಧಿಪತಿಯಾದ ನಿನ್ನೊಂದಿಗೆ **[ವಾಜಂ]** ಸಂಗ್ರಾಮವನ್ನು **[ವಾಜಯಂತಃ]** ಮಾಡುತ್ತ/ ಮಾಡಿಸುತ್ತ ನಾವು **[ಮರ್ತ್ಯಾನಾಂ]** ಮರಣಧರ್ಮದ ಶತ್ರುಗಳ **[ಪೃತ್ಸುತೀಃ]** ಸೇನೆಗಳನ್ನು **[ಅಭಿ, ಜಯೇಮ]** ಎಲ್ಲಾ ಕಡೆಗಳಿಂದಲೂ ಜಯಿಸುತ್ತೇವೆ. ಆದ್ದರಿಂದ **[ಸ್ಯಾಮ]** ಧನವಂತರೂ ಕೀರ್ತಿವಂತರೂ ಆಗೋಣ.

**ಭಾವಾರ್ಥ:-** ಯಾವ ರಾಜ್ಯದ ಅಧಿಷ್ಠಾತಾ ಸ್ವಾಮಿಯು ಧಾರ್ಮಿಕನೂ ವಿದ್ಯಾವಂತನೂ ಆಗಿರುವನೋ ಆ ರಾಜ್ಯದ ಪ್ರಜೆಗಳು ಯಾವಾಗಲೂ ವಿಜಯಿಗಳೂ, ರಾಜ್ಯ ಬಲಪಡಿಸುವವರೂ ಮತ್ತು ಅತುಲ ಲಕ್ಷ್ಮೀವಂತರೂ ಆಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಹವ್ಯವಾಳಗ್ನಿರಜರಃ ಪಿತಾ ನೋ ವಿಭುರ್ವಿಭಾವಾ ಸುದೃಶೀಕೋ ಅಸ್ಮೇ ।**
**ಸುಗಾರ್ಹಪತ್ಯಾಃ ಸಮಿಷೋ ದಿದೀ-ಹ್ಯಸ್ಮದ್ರ್ಯ (ಅ) ೧ ಕ್ಸಂ ಮಿಮೀಹಿ ಶ್ರವಾಂಸಿ ॥೨॥**

**ಪದಾರ್ಥ:-** **[ಹವ್ಯವಾಟ್]** ದ್ರವ್ಯಗಳನ್ನು ಸ್ಥಾನದಿಂದ ಸ್ಥಾನಕ್ಕೆ ತಲುಪಿಸುವವನು **[ಸುದೃಶೀಕಃ]** ಉತ್ತಮ ರೀತಿಯಿಂದ ನೋಡಿಕೊಳ್ಳುವವನೂ ಆದ **[ಅಗ್ನಿಃ]** ಪರಿಶುದ್ಧ ಅಗ್ನಿಯಂತೆ **[ವಿಭುಃ]** ಹೇಗೆ ಪರಮಾತ್ಮನು ವ್ಯಾಪಕನೂ ಪಾಲಕನೂ ಪ್ರಕಾಶಮಾನನೂ ಆಗಿರುವನೋ ಅವನಂತೆ **[ವಿಭಾವಾ]** ಅನೇಕ ರೀತಿಯ ಪ್ರಕಾಶ/ ಜ್ಞಾನಯುಕ್ತನು **[ಅಜರಃ]** ವೃದ್ಧಾವಸ್ಥಾರಹಿತನಾಗಿ **[ನಃ]** ನಮ್ಮೆಲ್ಲರ **[ಪಿತಾ]** ಪಾಲಕನಾಗಿದ್ದು **[ಅಸ್ಮೇ]** ನಮ್ಮೆಲ್ಲರಿಗೆ **[ಸುಗಾರ್ಹಪತ್ಯಾಃ]** ಅಗ್ನ್ಯಾದಿ ಪದಾರ್ಥ ಸಮುದಾಯಗಳಿರುವ **[ಇಷಃ]** ಅನ್ನವನ್ನು **[ಸಮ, ದಿದೀಹಿ]** ಉತ್ತಮ ರೀತಿಯಿಂದ ಕೊಡುವವನಾಗು. **[ಅಸ್ಮದ್ರ್ಯಕ್]** ನಮ್ಮೆಲ್ಲರನ್ನು ಆದರಿಸುವವನೂ ತಿಳಿದುಕೊಂಡವನೂ ಆಗಿದ್ದು **[ಶ್ರವಾಂಸಿ]** ಪಠನ-ಪಾಠನ ಕಾರ್ಯಗಳ **[ಸಂ, ಮಿಮೀಹಿ]** ವಿಧಾನ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮಿಂಚಿನಲ್ಲಿ ಮತ್ತು ಭೂಮಿಯಲ್ಲಿ ಪ್ರಸಿದ್ಧನಾದ ಅಗ್ನಿಯು ಹೇಗೆ ಎಲ್ಲರಿಗೂ ಉಪಕಾರ ಮಾಡುತ್ತಾನೋ, ಹೇಗೆ ಪರಮಾತ್ಮನು ಅಸಂಖ್ಯಾತ ಪದಾರ್ಥಗಳನ್ನು ಸೃಷ್ಟಿಸಿ ಪಾಲನ ಮಾಡುತ್ತಾನೋ ಅದೇ ರೀತಿ ರಾಜನೂ ಆಗಬೇಕು.

ಪ್ರಜೆಗಳ ವಿಷಯವನ್ನಿಲ್ಲಿ ಹೇಳಿದೆ.

**ವಿಶಾಂ ಕವಿಂ ವಿಶ್ಪತಿಂ ಮಾನುಷೀಣಾಂ ಶುಚಿಂ ಪಾವಕಂ ಘೃತಪೃಷ್ಠಮಗ್ನಿಮ್ ।**
**ನಿ ಹೋತಾರಂ ವಿಶ್ವವಿದಂ ದಧಿಧ್ವೇ ಸ ದೇವೇಷು ವನತೇ ವಾರ್ಯಾಣಿ ॥೩॥**

**ಪದಾರ್ಥ:-** **[ಘೃತಪೃಷ್ಠಂ]** ನೀರು ಮತ್ತು ಆಜ್ಯವು ಯಾರಿಗೆ ಆಧಾರರೂಪದಲ್ಲಿವೆಯೋ **[ಪಾವಕಂ]** ಯಾವನು ಪವಿತ್ರಗೊಳಿಸುವನೋ ಅಂತಹ **[ಅಗ್ನಿಂ]** ಅಗ್ನಿಯನ್ನು ಮತ್ತು **[ವಿಶ್ವವಿದಂ]** ಪ್ರಪಂಚವನ್ನೇ ಅರಿತವನಂತಿರುವ **[ಮಾನುಷೀಣಾಂ]** ಮನುಷ್ಯರಿಗೆ ಸಂಬಂಧಿಸಿದ **[ವಿಶಾಂ]** ಪ್ರಜೆಗಳ **[ವಿಶ್ಪತಿಂ]** ಪ್ರಜಾಪಾಲಕನನ್ನು ಮತ್ತು **[ಶುಚಿಂ]** ಪವಿತ್ರನೂ **[ಹೋತಾರಂ]** ದಾನಿಯೂ **[ಕವಿಂ]** ಮೇಧಾವಿಯೂ ಆದ ರಾಜನನ್ನು ನೀವು **[ನಿ, ದಧಿಧ್ವೇ]** ಚೆನ್ನಾಗಿ

ಸ್ವೀಕಾರ ಮಾಡಿರಿ. [ಸಃ] ಅವನು [ದೇವೇಷು] ವಿದ್ವಾಂಸರಲ್ಲಿ / ಶ್ರೇಷ್ಠ ಪದಾರ್ಥಗಳಲ್ಲಿ [ವಾರ್ಯಾಣಿ] ಸ್ವೀಕಾರಾರ್ಹವಾದವುಗಳನ್ನು [ವನತೇ] ಸೇವನೆ ಮಾಡುವನು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನಿಯಂತೆ ಪ್ರತಾಪಿಯೂ ಜಗದೀಶ್ವರನಂತೆ ನ್ಯಾಯಮಾಡುವನೂ ಆದ ರಾಜನು ಉತ್ತಮ ಲಕ್ಷಣವಂತನೂ ವಿದ್ಯಾವಂತನೂ ಆಗಿದ್ದರೆ ಅವನು ಚಕ್ರವರ್ತಿಯಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಜುಷಸ್ವಾಗ್ನ ಇಳಯಾ ಸಜೋಷಾ ಯತಮಾನೋ ರಶ್ಮಿಭಿಃ ಸೂರ್ಯಸ್ಯ ।**
**ಜುಷಸ್ವ ನಃ ಸಮಿಧಂ ಜಾತವೇದ ಆ ಚ ದೇವಾನ್ ಹವಿರದ್ಯಾಯ ವಕ್ಷಿ ॥೪॥**

**ಪದಾರ್ಥ:-** [ಜಾತವೇದಃ] ಜ್ಞಾನೋತ್ಪತ್ತಿಯಿಂದ ವಿಶಿಷ್ಟನಾದ [ಅಗ್ನೇ] ದುಷ್ಟರ ನಾಶಮಾಡುವುದಕ್ಕೆ [ಯತಮಾನಃ] ಪ್ರಯತ್ನಿಸುವವನಾಗಿ [ಸಜೋಷಾಃ] ಎಲ್ಲರಲ್ಲೂ ಸಮಾನಪ್ರೀತಿ ತೋರುವ ಅಗ್ನಿಯೇ! ನೀನು [ಸೂರ್ಯಸ್ಯ] ಸೂರ್ಯನ [ರಶ್ಮಿಭಿಃ] ಕಿರಣಗಳಿಗೆ ಸದೃಶನಾಗಿ [ಇಳಯಾ] ಶ್ರೇಷ್ಠವಾಣಿಯಿಂದ [ನಃ] ನಮ್ಮೆಲ್ಲರ [ಸಮಿಧಂ] ಕಟ್ಟಿಗೆಗೆ ಸದೃಶರಾದ ಶತ್ರುಗಳನ್ನು [ಜುಷಸ್ವ] ಸೇವನೆ ಮಾಡು. [ಹವಿರದ್ಯಾಯ] ಭಕ್ಷಣಯೋಗ್ಯ ಪದಾರ್ಥಗಳಿಗೆ [ದೇವಾನ್] ವಿದ್ಯಾವಂತರನ್ನು [ಆ, ವಕ್ಷಿ] ಪ್ರಾಪ್ತಿಗೊಳಿಸು [ಚ] ಮತ್ತು [ಜುಷಸ್ವ] ಅವರ ಸೇವೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ವಾಚಕಲುಪ್ತೋಪಮಾಲಂಕಾರಗಳಿವೆ. ಸೂರ್ಯನ ಬೆಳಕಿನಿಂದ ಎಲ್ಲರೂ ಮಾಡಲು ಯೋಗ್ಯವಾದ ಕರ್ಮಗಳು ಸಿದ್ಧಿಯಾಗುತ್ತವೆಯೋ, ಹಾಗೇ ಯಥಾರ್ಥವಕ್ತಾ ಪುರುಷರಿಂದ ರಾಜನು ಮಾಡಲು ಯೋಗ್ಯವಾದ ಕರ್ಮಗಳು ಅಂದರೆ ನ್ಯಾಯಪೂರ್ವಕ ಪ್ರಜಾಪಾಲನಾದಿ ಕರ್ಮಗಳು ಸಿದ್ಧವಾಗುತ್ತವೆ.

ಇಲ್ಲಿ ರಾಜನ ವಿಷಯ ತಿಳಿಸಲಾಗಿದೆ.

**ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್ ।**
**ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥೫॥**

**ಪದಾರ್ಥ:-** [ಅಗ್ನೇ] ವಿದ್ಯುತ್‌ನಂತೆ ತೇಜಸ್ವೀ ರಾಜನೇ! [ಜುಷ್ಟಃ] ಸೇವಿಸಲ್ಪಟ್ಟ/ಸಂತುಷ್ಟಗೊಳಿಸಲ್ಪಟ್ಟ [ದಮೂನಾಃ] ಶಮ-ದಮಾದಿ ಗುಣಗಳಿಂದ ಕೂಡಿರುವ [ಅತಿಥಿಃ] ಆಕಸ್ಮಿಕವಾಗಿ ಆಗಮಿಸಿರುವ [ದುರೋಣೆ] ಮನೆಗೆ ಬಂದಿರುವವನಿಗೆ [ವಿದ್ವಾನ್] ವಿದ್ಯಾವಂತನಾದ ನೀನು [ನಃ] ನಮಗೆ [ಇಮಂ] ಈ ಪ್ರತ್ಯಕ್ಷ [ಯಜ್ಞಂ] ಅನ್ನಾದಿ ಶ್ರೇಷ್ಠಪದಾರ್ಥಗಳ ದಾನವನ್ನು [ಉಪ, ಯಾಹಿ] ಪ್ರಾಪ್ತಿಗೊಳಿಸು ಮತ್ತು [ಶತ್ರೂಯತಾಂ] ಶತ್ರುಗಳಂತೆ ಆಚರಣೆ ಮಾಡುವವರನ್ನು [ವಿಶ್ವಾಃ] ಸಂಪೂರ್ಣವಾಗಿ [ಅಭಿಯುಜಃ] ಅಭಿಮುಖವಾಗಿ ಬಂದಿರುವ ಶತ್ರುಸೇನೆಗಳ [ವಿಹತ್ಯಾ] ನಾಶಮಾಡಿ [ಭೋಜನಾನಿ] ಪ್ರಜಾಪಾಲನೆ ಮತ್ತು ಭಕ್ಷಣಯೋಗ್ಯ ಅನ್ನಾದಿಗಳನ್ನು [ಆ, ಭರ] ಧಾರಣ ಮಾಡು.

**ಭಾವಾರ್ಥ:-** ಯಾವ ರಾಜನು ದುಷ್ಟರನ್ನು ದಮನ ಮಾಡಿ ನ್ಯಾಯಯುತವಾಗಿ ಪ್ರಜಾಪಾಲನೆ ಮಾಡುತ್ತಾನೋ, ಅವನು ಎಲ್ಲಾ ಪ್ರಜೆಗಳಿಗೂ ಪ್ರಿಯನಾಗುತ್ತಾನೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಧೇನ ದಸ್ಯುಂ ಪ್ರ ಹಿ ಚಾತಯಸ್ವ ವಯಃ ಕೃಣ್ವಾನಸ್ತನ್ವೇ (ಏ) ೩ ಸ್ವಾಯೈ । ಪಿಪರ್ಷಿ**
**ಯತ್ ಸಹಸಸ್ಪುತ್ರ ದೇವಾನ್ ತ್ಸೋ ಅಗ್ನೇ ಪಾಹಿ ನೃತಮ ವಾಜೇ ಅಸ್ಮಾನ್ ॥೬॥**

**ಪದಾರ್ಥ:-** [ಸಹಸಃ ಪುತ್ರಃ] ಬಲಿಷ್ಠನ ಪುತ್ರನಾದ [ನೃತಮ] ಮುಖ್ಯಸ್ಥನಾದ [ಅಗ್ನೇ] ಅಗ್ನಿಯಂತೆ ಪ್ರತಾಪಿಯಾದ ರಾಜನೇ! [ಯತ್] ಯಾವ ನೀನು [ಸ್ವಾಯೈ] ತನ್ನ [ತನ್ವೇ] ಶರೀರಕ್ಕಾಗಿ [ವಯಃ] ಜೀವನವನ್ನು [ಕೃಣ್ವಾನಾ] ಮಾಡುವವನಾಗಿ [ವಧೇನ] ವಧೆಯಿಂದ [ದಸ್ಯುಂ] ಸಾಹಸ ಕರ್ಮಕಾರಿ ಕಳ್ಳನ [ಪ್ರ, ಚಾತಯಸ್ವ] ಅತ್ಯಂತ ನಾಶಮಾಡಿಸು. [ಹಿ] ಅದಕ್ಕಾಗಿ [ಪಿಪರ್ಷಿ] ಪ್ರಯತ್ನ ಮಾಡುತ್ತೀಯೆ. [ಸಃ] ಅಂತಹ ನೀನು [ವಾಜೇ] ಸಂಗ್ರಾಮದಲ್ಲಿ [ಅಸ್ಮಾನ್] ನಮ್ಮನ್ನು [ದೇವಾನ್] ವಿದ್ಯಾವಂತರನ್ನು [ಪಾಹಿ] ರಕ್ಷಿಸು.

**ಭಾವಾರ್ಥ:-** ರಾಜನೇ! ನೀನು ಯಾವಾಗಲೂ ಕಳ್ಳರು, ದರೋಡೆಕೋರರನ್ನು ನಾಶಮಾಡು. ಧಾರ್ಮಿಕರನ್ನು ರಕ್ಷಿಸು. ಶತ್ರುಗಳನ್ನು ಜಯಿಸು.

ಈ ಮಂತ್ರದಲ್ಲಿ ರಾಜ-ಪ್ರಜೆಗಳ ವಿಷಯವಿದೆ.

**ವಯಂ ತೇ ಅಗ್ನ ಉಕ್ಥೈರ್ವಿಧೇಮ ವಯಂ ಹವ್ಯೈಃ ಪಾವಕ ಭದ್ರಶೋಚೇ ।**
**ಅಸ್ಮೇ ರಯಿಂ ವಿಶ್ವವಾರಂ ಸಮಿನ್ವಾ-ಸ್ಮೇ ವಿಶ್ವಾನಿ ದ್ರವಿಣಾನಿ ಧೇಹಿ ॥೭॥**

**ಪದಾರ್ಥ:-** [ಪಾವಕ] ಪವಿತ್ರನಾದ [ಭದ್ರಶೋಚೇ] ಕಲ್ಯಾಣಕರ ವಿಷಯವನ್ನು ಪ್ರಕಟಗೊಳಿಸುವವನಾದ [ಅಗ್ನೇ] ವಿದ್ಯುತ್‌ಸದೃಶನಾದ ರಾಜನೇ! [ವಯಂ] ನಾವು [ತೇ] ನಿನ್ನ [ಉಕ್ಥೈಃ] ಪ್ರಶಂಸಿತ ವಚನಗಳಿಂದ [ವಿಶ್ವಾನಿ] ಸಂಪೂರ್ಣ [ದ್ರವಿಣಾನಿ] ಯಶಸ್ಸನ್ನು [ವಿಧೇಮ] ಸಾಧಿಸುವೆವು. [ಅಸ್ಮೇ] ನಮಗೆ [ಸಂ, ಧೇಹಿ] ಅತಿಯಾಗಿ ಧಾರಣಮಾಡು. [ವಯಂ] ನಾವು [ಹವ್ಯೈಃ] ಆದಾನ-ಪ್ರದಾನಗಳಿಗೆ ಯೋಗ್ಯವಾದವುಗಳಿಂದ ನಿನ್ನ [ವಿಶ್ವವಾರಂ] ಪ್ರತಿ ಉತ್ತಮ ಪದಾರ್ಥಯುಕ್ತರಾಗಿ [ರಯಿಂ] ಸಂಪತ್ತನ್ನು ಪ್ರಾಪ್ತಿಗೊಳಿಸುತ್ತೇವೆ. [ಅಸ್ಮೇ] ನಮ್ಮಲ್ಲಿಗೆ [ಇನ್ವ] ಇದರ ವ್ಯಾಪ್ತಿಗೊಳಪಡಿಸು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಪ್ರಜೆಗಳು ಮತ್ತು ಮಂತ್ರಿಗಳು ಹೇಗೆ ರಾಜ್ಯಲಕ್ಷ್ಮಿಯನ್ನು ವೃದ್ಧಿಪಡಿಸುವರೋ ಹಾಗೆ ರಾಜನು ಅವರ ಧನವನ್ನು ವೃದ್ಧಿಪಡಿಸಬೇಕು. ಈ ರೀತಿ ನ್ಯಾಯಯುತ ಶಾಸನದಿಂದ ತಂದೆ-ಮಕ್ಕಳಂತೆ ವ್ಯವಹರಿಸಿ ಯಶಸ್ವಿಗಳಾಗಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಮ್ ।**
**ವಯಂ ದೇವೇಷು ಸುಕೃತಃ ಸ್ಯಾಮ ಶರ್ಮಣಾ ನಸ್ತ್ರಿವರೂಥೇನ ಪಾಹಿ ॥೮॥**

**ಪದಾರ್ಥ:-** [ಸಹಸಃ ಸೂನೋ] ಬಲಿಷ್ಠನೂ, ದೀರ್ಘಕಾಲ ಬ್ರಹ್ಮಚರ್ಯ ಧಾರಣಮಾಡಿದವನ ಪುತ್ರನೇ! [ತ್ರಿಷಧಸ್ಥ] ಪ್ರಜೆಗಳು, ಸೇವಕರೂ ಮತ್ತು ತನ್ನ ಕುಟುಂಬದವರೂ ಹೀಗೆ ಮೂವರೊಂದಿಗೆ ಪಕ್ಷಪಾತ ರಹಿತನಾಗಿ

ಇರುವವನು [ಅಗ್ನೇ] ಅಗ್ನಿಯಂತೆ ತೇಜಸ್ವಿಯಾಗಿರುವ ರಾಜನೇ! ನೀನು [ಅಸ್ಮಾಕಂ] ನಮ್ಮೆಲ್ಲರ [ಹವ್ಯಂ] ಕೊಡಲು ಯೋಗ್ಯವಾದ ಸುಖವನ್ನು ಮತ್ತು [ಅಧ್ವರಂ] ಪಾಲನೆಯ ರೂಪ ವ್ಯವಹಾರವನ್ನೂ, [ಜುಷಸ್ವ] ಸೇವಿಸುವವನಾಗು. [ತ್ರಿವರೂಥೇನ] ಮಳೆಗಾಲ, ಚಳಿಗಾಲ, ಬೇಸಿಗೆಕಾಲ ಮೂರೂ ಕಾಲಗಳಲ್ಲಿ ಶ್ರೇಷ್ಠವಾದ [ಶರ್ಮಣಾ] ಮನೆಯೊಂದಿಗೆ [ನಃ] ನಮ್ಮೆಲ್ಲರನ್ನು [ಪಾಹಿ] ನಿರಂತರಪಾಲನೆ ಮಾಡು. [ವಯಂ] ನಾವು [ದೇವೇಷು] ವಿದ್ಯಾವಂತರಲ್ಲಿ [ಸುಕೃತಃ] ಧರ್ಮಸಂಬಂಧೀ ಕೆಲಸಗಳನ್ನು ಮಾಡುವವರು [ಸ್ಯಾಮ] ಆಗುವೆವು.

**ಭಾವಾರ್ಥ:-** ರಾಜನೇ! ನೀನು ನಮ್ಮವರ ಪಾಲನೆಯನ್ನು ಯಥಾರ್ಥರೀತಿಯಲ್ಲಿ ಮಾಡು. ನಿನ್ನಿಂದ ರಕ್ಷಣೆ ಪಡೆದ ನಾವೂ ನಿರಂತರ ಧರ್ಮಾಚರಣೆ ಮಾಡುತ್ತ ನಿನ್ನ ಏಳಿಗೆಯನ್ನು ಸಾಧಿಸುತ್ತೇವೆ ಎಂದು ಪ್ರಜೆಗಳು ರಾಜನಲ್ಲಿ ಪ್ರಾರ್ಥನೆ ಮಾಡಿಕೊಳ್ಳಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಿಶ್ವಾನಿ ನೋ ದುರ್ಗಹಾ ಜಾತವೇದಃ ಸಿಂಧುಂ ನ ನಾವಾ ದುರಿತಾತಿ ಪರ್ಷಿ ।**
**ಅಗ್ನೇ ಅತ್ರಿವನ್ನಮಸಾ ಗೃಣಾನೋ (ಽ) ಽಸ್ಮಾಕಂ ಬೋಧ್ಯವಿತಾ ತನೂನಾಮ್ ॥೯॥**

**ಪದಾರ್ಥ:-** [ಅತ್ರಿವತ್] ನಿರಂತರ ಗತಿಯೊಂದಿಗೆ ಕೂಡಿರುವ [ಜಾತವೇದಃ] ವಿದ್ಯಾಸಂಪನ್ನನಾದ [ಅಗ್ನೇ] ಧರ್ಮಿಷ್ಠ ರಾಜನೇ! ನೀನು [ನಾವಾ] ನೌಕೆಯಿಂದ [ಸಿಂಧುಂ] ನದೀ/ಸಾಗರವನ್ನು [ನ] ಹೇಗೋ - ಹಾಗೆ [ನಃ] ನಮ್ಮ [ವಿಶ್ವಾನಿ] ಸಮಸ್ತ [ದುರ್ಗಹಾ] ದುಃಖದಿಂದ ಪಾರಾಗಲು ಯೋಗ್ಯವಾದ [ದುರಿತಾ] ದುಃಖದಿಂದ ಪ್ರಾಪ್ತಿಯಾಗುವಂತಹದ್ದನ್ನೂ [ಅತಿ, ಪರ್ಷಿ] ನಿವಾರಣೆ ಮಾಡು. [ನಮಸಾ] ಗೌರವ/ಅನ್ನಾದಿಗಳೊಂದಿಗೆ [ಗೃಣಾನಃ] ಸ್ತವನ ಮಾಡುತ್ತ [ಅಸ್ಮಾಕಂ] ನಮ್ಮೆಲ್ಲರ [ತನೂನಾಂ] ಶರೀರಗಳನ್ನು [ಅವಿತಾ] ರಕ್ಷಣೆಮಾಡು. [ಬೋಧಿ] ಇದರಿಂದ ನೀನು ನಿರಂತರ ಸೇವಾಯೋಗ್ಯನಾಗುವೆ ಎಂಬುದನ್ನು ತಿಳಿದುಕೋ.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ರಾಜನು, ಅಧ್ಯಾಪಕರು ಮತ್ತು ಉಪದೇಶಕರು ಎಲ್ಲ ಜನರನ್ನೂ ದುಃಖದಿಂದ ಪಾರುಮಾಡುತ್ತಾರೆ. ಆದ್ದರಿಂದಲೇ ಅವರು ವಿಪುಲ ಸುಖವನ್ನು ಅನುಭವಿಸುತ್ತಾರೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಮರ್ತ್ಯಂ ಮರ್ತ್ಯೋ ಜೋಹವೀಮಿ ।**
**ಜಾತವೇದೋ ಯಶೋ ಅಸ್ಮಾಸು ಧೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಮ್ ॥೧೦॥**

**ಪದಾರ್ಥ:-** [ಜಾತವೇದಃ] ವಿಜ್ಞಾನಮಯನಾದ [ಅಗ್ನೇ] ಅಗ್ನಿಯಂತಿರುವ ರಾಜನೇ! [ಯಃ] ಯಾವನು [ಮನ್ಯಮಾನಃ] ತಿಳಿದವನಾಗಿ [ಮರ್ತ್ಯಃ] ಮನುಷ್ಯನಾದ ನಾನು [ಹೃದಾ] ಅಂತಃಕರಣದಿಂದ ಮತ್ತು [ಕೀರಿಣಾ] ಸ್ತುತಿಮಾಡುವವನಿಂದ [ಅಮರ್ತ್ಯಂ] ಮರಣಧರ್ಮರಹಿತನಾದ [ತ್ವಾ] ನಿನ್ನನ್ನು [ಜೋಹವೀಮಿ] ಅತಿಯಾಗಿ ಸೇವೆ ಮಾಡುವೆನು ಮತ್ತು [ಪ್ರಜಾಭಿಃ] ಪಾಲನಾರ್ಹ ಪ್ರಜೆಗಳೊಂದಿಗೆ [ಅಮೃತತ್ವಂ] ಮೋಕ್ಷಭಾವವನ್ನು [ಅಶ್ಯಾಂ] ಅನುಭವಿಸುವೆನು. [ಅಸ್ಮಾಸು] ನಮ್ಮೆಲ್ಲರಲ್ಲಿ [ಯಶಃ] ಕೀರ್ತಿಯನ್ನು [ಧೇಹಿ] ಸ್ಥಾಪನೆಗೊಳಿಸು.

**ಭಾವಾರ್ಥ:-** ಪ್ರಜೆಗಳು ಹೇಗೆ ರಾಜನ ಹಿತ ಬಯಸುವರೋ, ಹಾಗೆ ರಾಜನೂ ಪ್ರಜೆಗಳಿಗೆ ಸುಖ ಬಯಸಬೇಕು. ಹೀಗೆ ಪರಸ್ಪರರು ಅತಿಶಯ ಸುಖ ಪಡೆಯಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಸ್ಮೈ ತ್ವಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಃ ಸ್ಯೋನಮ್ ।**
**ಅಶ್ವಿನಂ ಸ ಪುತ್ರಿಣಂ ವೀರವಂತಂ ಗೋಮಂತಂ ರಯಿಂ ನಶತೇ ಸ್ವಸ್ತಿ ॥೧೧॥**

**ಪದಾರ್ಥ:-** [ಜಾತವೇದಃ] ಬುದ್ಧಿವಂತನಾದ [ಅಗ್ನೇ] ವಿದ್ಯಾವಂತನೇ! [ತ್ವಂ] ನೀನು [ಯಸ್ಮೈ] ಯಾವ [ಸುಕೃತೇ] ಧರ್ಮಾತ್ಮನಿಗೆ [ಸ್ಯೋನಂ] ಸುಖದ ಕಾರಣ [ಲೋಕಂ] ನೋಡಲು ಯೋಗ್ಯವಾದದ್ದನ್ನು [ಕೃಣವಃ] ಮಾಡುವೆ [ಸಃ ಉ] ಅದೇ [ಅಶ್ವಿನಂ] ಉತ್ತಮ ಅಶ್ವಾದಿ ಪದಾರ್ಥಗಳಿಂದ [ಪುತ್ರಿಣಂ] ಉತ್ತಮ ಪುತ್ರರು [ವೀರವಂತಂ] ಬಹಳಷ್ಟು ವೀರರು ಹಾಗೂ [ಗೋಮಂತಂ] ಬಹಳಷ್ಟು ಹಸು ಮುಂತಾದವುಗಳ ಸಹಿತ [ಸ್ವಸ್ತಿ] ಸುಖರೂಪ [ರಯಿಂ] ಧನವನ್ನು [ನಶತೇ] ಪಡೆದುಕೊಳ್ಳುತ್ತೀಯೆ.

**ಭಾವಾರ್ಥ:-** ರಾಜನೇ! ನೀನು ವಿದ್ಯಾ-ವಿನಯಗಳಿಂದ ಪ್ರಜೆಗಳಿಗೆ ಪುತ್ರಾದಿ ಐಶ್ವರ್ಯಯುಕ್ತರನ್ನಾಗಿ ಮಾಡುತ್ತಿಯೆ ಆದ್ದರಿಂದ ಪ್ರಜೆಗಳು ನಿನ್ನನ್ನು ಗೌರವಿಸುತ್ತಾರೆ.

ಈ ಸೂಕ್ತದಲ್ಲಿ ರಾಜ ಮತ್ತು ಪ್ರಜೆಗಳ ಗುಣವರ್ಣನೆಯಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತಿಯಾಗಿರುತ್ತದೆ.

**ನಾಲ್ಕನೆಯ ಸೂಕ್ತ ಸಮಾಪ್ತ**

## ಸೂಕ್ತ ೫

ಮಂತ್ರಸಂಖ್ಯೆ ೧೧ । ವಸುಶ್ರುತ ಆತ್ರೇಯ ಋಷಿಃ । ಆಪ್ರಂದೇವತಾ । ೧, ೫, ೬, ೭, ೯, ೧೦ ಗಾಯತ್ರೀ, ೩, ೮ ನಿಚೃದ್ಗಾಯತ್ರೀ, ೧೧ ವಿರಾಡ್ಗಾಯತ್ರೀ, ೪ ಪಿಪೀಲಿಕಾ ಮಧ್ಯಾ ಗಾಯತ್ರೀ ಛಂದಃ । ಷಡ್ಜಃ ಸ್ವರಃ ।
೨ ಆರ್ಚ್ಯುಷ್ಣಿಕ್ ಛಂದಃ । ಋಷಭಃ ಸ್ವರಃ.

ವಿದ್ಯಾವಂತರ ವಿಷಯವಿಲ್ಲಿ ಹೇಳಿದೆ.

**ಸುಸಮಿದ್ಧಾಯ ಶೋಚಿಷೇ ಘೃತಂ ತೀವ್ರಂ ಜುಹೋತನ । ಅಗ್ನಯೇ ಜಾತವೇದಸೇ ॥೧॥**

**ಪದಾರ್ಥ:-** [ಜಾತವೇದಸೇ] ಉತ್ಪನ್ನ ಪದಾರ್ಥಗಳಲ್ಲಿರುವ [ಸುಸಮಿದ್ಧಾಯ] ದೇದೀಪ್ಯಮಾನನಾದ [ಶೋಚಿಷೇ] ಪವಿತ್ರಗೊಳಿಸುವ [ಅಗ್ನಯೇ] ಅಗ್ನಿಗೆ [ತೀವ್ರಂ] ಶುದ್ಧಗೊಳಿಸಿದ [ಘೃತಂ] ಆಜ್ಯವನ್ನು [ಜುಹೋತನ] ಹೋಮ ಮಾಡಿರಿ.

**ಭಾವಾರ್ಥ:-** ಅಧ್ಯಾಪಕರು ಪವಿತ್ರಾಂತಃಕರಣವಿರುವವರಿಗೆ ವಿದ್ಯೆಯ ಸಂಸ್ಕಾರ ಮಾಡುವರು. ಅವರು ಸೂರ್ಯನಂತೆ ಪ್ರಕಾಶಮಾನರಾಗುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ನರಾಶಂಸಃ ಸುಷೂದತೀ-ಮಂ ಯಜ್ಞಮದಾಭ್ಯಃ । ಕವಿರ್ಹಿ ಮಧುಹಸ್ತ್ಯಃ ॥೨॥**

**ಪದಾರ್ಥ:-** [**ಅದಾಭ್ಯಃ**] ಕಪಟರಹಿತ [**ಮಧುಹಸ್ತ್ಯಃ**] ಮಧುರಹಸ್ತದವರು [**ನರಾಶಂಸಃ**] ಮನುಷ್ಯರಿಂದ ಪ್ರಶಂಸಿತರಾದ [**ಕವಿಃ**] ಬುದ್ಧಿವಂತ ಜನರು [**ಹಿ**] ಯಾವ ಕಾರಣದಿಂದ [**ಇಮಂ**] ಈ [**ಯಜ್ಞಂ**] ವಿದ್ಯಾ ಪ್ರಚಾರವೆಂಬ ಯಜ್ಞವನ್ನು [**ಸುಷೂದತಿ**] ಅಮೃತದಂತೆ ಸೂಸುವರು. ಆದ್ದರಿಂದ ಸಂಪೂರ್ಣ ಸುಖಿಗಳಾಗುವರು.

**ಭಾವಾರ್ಥ:-** ಗೋವು ಹೇಗೆ ಎಲ್ಲರ ಸುಖಕ್ಕಾಗಿ ಹಾಲು ಕೊಡುವುದೋ ಹಾಗೆ ವಿದ್ಯಾವಂತರು ಸತ್ಯ ವಿದ್ಯೆಯ ಉಪದೇಶವನ್ನು ಎಲ್ಲರ ಸುಖಕ್ಕಾಗಿ ಮಾಡುವರು.

ರಾಜನ ವಿಷಯವಿಲ್ಲಿ ಹೇಳಿದೆ.

**ಈಳಿತೋ ಅಗ್ನ ಆ ವಹೇಂದ್ರಂ ಚಿತ್ರಮಿಹ ಪ್ರಿಯಮ್ । ಸುಖೈ ರಥೇಭಿರೂತಯೇ ॥೩॥**

**ಪದಾರ್ಥ:-** [**ಅಗ್ನೇ**] ಆತ್ಮಪ್ರಕಾಶ ಸ್ವರೂಪನೇ! [**ಈಳಿತಃ**] ಪ್ರಶಂಸೆಗೊಳಗಾದ ನೀನು [**ಇಹ**] ಈ ಜಗತ್ತಿನಲ್ಲಿ [**ಸುಖೈಃ**] ಸುಖಕಾರಕ [**ರಥೇಭಿಃ**] ವಾಹನಗಳಿಂದ [**ಊತಯೇ**] ರಕ್ಷಣಾದಿ ಕಾರ್ಯಗಳಿಗೆ [**ಚಿತ್ರಂ**] ಅದ್ಭುತವಾದ [**ಪ್ರಿಯಂ**] ಮನೋಹರವಾದ [**ಇಂದ್ರಂ**] ಸಂಪತ್ತನ್ನು [**ಆ, ವಹ**] ಎಲ್ಲಾರೀತಿಯಿಂದ ಪ್ರಾಪ್ತಗೊಳಿಸು.

**ಭಾವಾರ್ಥ:-** ರಾಜನೇ! ನೀನು ಉತ್ತಮ ಸಂಪತ್ತನ್ನು ಪಡೆದುಕೋ ಮತ್ತು ಅದರಿಂದ ಪ್ರಜೆಗಳ ರಕ್ಷಣೆಗಾಗಿ ಸರ್ವತ್ರ ಸಂಚರಿಸು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಊರ್ಣಮ್ರದಾ ವಿ ಪ್ರಥಸ್ವಾಭ್ಯ (ಅ) ೯ ರ್ಕಾ ಅನೂಷತ । ಭವಾ ನಃ ಶುಭ್ರ ಸಾತಯೇ ॥೪॥**

**ಪದಾರ್ಥ:-** [**ಶುಭ್ರ**] ಶುದ್ಧಾಚರಣೆ ಮಾಡುವ ರಾಜನೇ! ನೀನು [**ಸಾತಯೇ**] ದಾಯ ವಿಭಾಗಕ್ಕಾಗಿ [**ವಿ, ಪ್ರಥಸ್ವ**] ಪ್ರಸಿದ್ಧನಾಗು ಮತ್ತು ಎಲ್ಲರಿಗೂ ಸುಖಕಾರಕ [**ಭವಾ**] ನಾಗು. [**ಊರ್ಣಮ್ರದಾಃ**] ರಕ್ಷಕರೊಂದಿಗೆ ಮರ್ದನ ಮಾಡಲು [**ಅರ್ಕಾಃ**] ಮಂತ್ರಾರ್ಥವನ್ನರಿತ ನೀವು [**ನಃ**] ನಮ್ಮೆಲ್ಲರಿಗೆ [**ಅಭಿ, ಅನೂಷತ್**] ವಿದ್ಯಾವಂತರನ್ನಾಗಿ ಮಾಡು.

**ಭಾವಾರ್ಥ:-** ರಾಜ ಮತ್ತು ರಾಜಪುರುಷರು ವಿಭಾಗ ಮಾಡಿ ತಮ್ಮ ತಮ್ಮ ಅಂಶವನ್ನು ಸ್ವೀಕರಿಸಬೇಕು ಮತ್ತು ಪ್ರಜೆಗಳ ಭಾಗವನ್ನು ಪ್ರಜೆಗಳಿಗೆ ಕೊಡಬೇಕು.

ಗೃಹಸ್ಥಾಶ್ರಮದ ವಿಷಯವಿಲ್ಲಿ ಹೇಳಿದೆ.

**ದೇವೀರ್ದ್ವಾರೋ ವಿ ಶ್ರಯಧ್ವಂ ಸುಪ್ರಾಯಣಾ ನ ಊತಯೇ। ಪ್ರಪ್ರ ಯಜ್ಞಂ ಪೃಣೀತನ ॥೫॥**

**ಪದಾರ್ಥ:-** [**ಸುಪ್ರಾಯಣಾಃ**] ಉತ್ತಮರೀತಿಯಲ್ಲಿ ಗೃಹವನ್ನು ಪ್ರವೇಶ ಮಾಡುವಂತಹ [**ದೇವೀಃ**] ಶ್ರೇಷ್ಠವಾದ [**ದ್ವಾರಃ**] ದ್ವಾರದಂತೆ ಸುಖಕ್ಕೆ ಕಾರಣರಾದ ಸ್ತ್ರೀಯರನ್ನು [**ವಿ, ಶ್ರಯಧ್ವಂ**] ವಿಶೇಷ ರೀತಿಯಲ್ಲಿ ಸೇವನ ಮಾಡಿರಿ. [**ನಃ**] ನಮ್ಮ [**ಊತಯೇ**] ರಕ್ಷಣೆಗೆ [**ಯಜ್ಞಂ**] ಗೃಹಸ್ಥಾಶ್ರಮದ ವ್ಯವಹಾರವನ್ನು [**ಪ್ರಪ್ರ, ಪೃಣೀತನ**] ಪುಷ್ಟಿಗೊಳಿಸಿರಿ.

**ಭಾವಾರ್ಥ:-** ಸಮಾನ ಧರ್ಮದ ಸ್ತ್ರೀ ಪುರುಷರು ಪರಸ್ಪರ ವಿವಾಹವಾದರೆ ಗೃಹಸ್ಥಾಶ್ರಮ ಧರ್ಮವನ್ನು ಪ್ರಾರಂಭಿಸಿದರೆ ಸಂಪೂರ್ಣಸುಖವನ್ನು ಪಡೆದುಕೊಳ್ಳುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸುಪ್ರತೀಕೇ ವಯೋವೃಧಾ ಯಹ್ವೀ ಋತಸ್ಯ ಮಾತರಾ । ದೋಷಾಮುಷಾಸಮೀಮಹೇ ॥೬॥**

**ಪದಾರ್ಥ:-** **[ಸುಪ್ರತೀಕೇ]** ನಂಬಿಕೆ ಇಡಲು **[ವಯೋವೃಧಾಃ]** ಜೀವನವನ್ನು ವೃದ್ಧಿಗೊಳಿಸಲು **[ಯಹ್ವೀ]** ಮಹತ್ತಾದ **[ಋತಸ್ಯ]** ಸತ್ಯದ **[ಮಾತರಾ]** ಗೌರವ ಮಾಡುವವರು **[ದೋಷಾಂ]** ರಾತ್ರಿಯನ್ನು **[ಉಷಾಸಂ]** ಹಗಲನ್ನು **[ಈಮಹೇ]** ಯಾಚಿಸುವೆವು.

**ಭಾವಾರ್ಥ:-** ರಾತ್ರಿ ಹಗಲುಗಳು ಹೇಗೆ ಜೊತೆ ಜೊತೆಯಾಗಿರುತ್ತವೆಯೋ ಹಾಗೆ ವಿವಾಹಿತ ಸ್ತ್ರೀ ಪುರುಷರು ಜೊತೆ ಜೊತೆಯಾಗಿಯೇ ಇರಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ವಾತಸ್ಯ ಪತ್ಮನ್ನೀಳಿತಾ ದೈವ್ಯಾ ಹೋತಾರಾ ಮನುಷಃ । ಇಮಂ ನೋ ಯಜ್ಞಮಾ ಗತಮ್ ॥೭॥**

**ಪದಾರ್ಥ:-** **[ಈಳಿತಾ]** ಪ್ರಶಂಸಿತ **[ದೇವ್ಯಾ]** ಶ್ರೇಷ್ಠಗುಣಗಳಲ್ಲಿ ಉತ್ಪನ್ನವಾದ **[ಹೋತಾರಾ]** ದಾನಿಗಳಾದ ನೀವಿಬ್ಬರು **[ವಾತಸ್ಯ]** ವಾಯುವಿನ **[ಪತ್ಮನ್]** ಗಮನಮಾರ್ಗದಲ್ಲಿ **[ನಃ]** ನಮ್ಮ **[ಇಮಂ]** ಈ **[ಯಜ್ಞಂ]** ಸಂಗತಿ ಕರಣ ವ್ಯವಹಾರವನ್ನು **[ಮನುಷಃ]** ಮನುಷ್ಯರಿಗೆ **[ಆ, ಗತಂ]** ಪ್ರಾಪ್ತವಾಗುವಂತೆ ಮಾಡು.

**ಭಾವಾರ್ಥ:-** ಸ್ತ್ರೀ-ಪುರುಷರೇ! ನೀವು ಧರ್ಮಸಂಬಂಧೀ ವ್ಯವಹಾರವನ್ನು ಮಾಡಿರಿ. ಉತ್ತಮ ಕರ್ಮಗಳನ್ನು ಮಾಡಿ ಪ್ರಶಂಸೆ ಪಡೆಯಿರಿ ಮತ್ತು ಗೃಹಸ್ಥಧರ್ಮವನ್ನು ಸಿದ್ಧಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ । ಬರ್ಹಿಃ ಸೀದಂತ್ವಸ್ರಿಧಃ ॥೮॥**

**ಪದಾರ್ಥ:-** **[ಅಸ್ರಿಧಃ]** ನಾಶಗೊಳಿಸದ **[ಇಳಾ]** ಪ್ರಶಂಸಿತ ವಿದ್ಯೆಯು **[ಸರಸ್ವತೀ]** ಸುಶಿಕ್ಷಿತ ನುಡಿಯು **[ಮಹೀ]** ಭೂಮಿಯು **[ಮಯೋಭುವಃ]** ಸುಖಕಾರಕ **[ತಿಸ್ರಃ]** ಮೂವರು **[ದೇವೀಃ]** ಶ್ರೇಷ್ಠಗುಣವತಿಯರು **[ಬರ್ಹಿಃ]** ಶ್ರೇಷ್ಠ ಗೃಹಸ್ಥಾಶ್ರಮವನ್ನು **[ಸೀದಂತು]** ಪ್ರವೇಶಿಸಲಿ.

**ಭಾವಾರ್ಥ:-** ದಂಪತಿಗಳೇ! ನೀವು ಶ್ರೇಷ್ಠ ಮೂವರು ಸ್ತ್ರೀಯರನ್ನು ಅಂದರೆ ವಿದ್ಯೆ, ಸುಶಿಕ್ಷಿತ ನುಡಿ ಮತ್ತು ಭೂಮಿ ಇವುಗಳನ್ನು ಪಡೆದುಕೊಳ್ಳಿರಿ.

ರಾಜನ ವಿಷಯವಿಲ್ಲಿ ಹೇಳಿದೆ.

**ಶಿವಸ್ತ್ವಷ್ಟರಿಹ ಗಹಿ ವಿಭುಃ ಪೋಷ ಉತ ತ್ಮನಾ । ಯಜ್ಞೇಯಜ್ಞೇ ನ ಉದವ ॥೯॥**

**ಪದಾರ್ಥ:-** **[ತ್ವಷ್ಟಃ]** ದುಃಖನಾಶಕ ರಾಜನೇ! **[ಇಹ]** ಇಲ್ಲಿ **[ಪೋಷ]** ಪೋಷಣಕಾರ್ಯದಲ್ಲಿ **[ವಿಭುಃ]** ವ್ಯಾಪಕ ಪರಮಾತ್ಮನಂತೆ **[ಶಿವಃ]** ಮಂಗಳಕಾರಿಯಾಗಿ **[ತ್ಮನಾ]** ಆತ್ಮಬಲದಿಂದ **[ಯಜ್ಞೇ-ಯಜ್ಞೇ]** ಪ್ರತಿಸಂಗತಿಕರಣ ವ್ಯವಹಾರಗಳಲ್ಲಿ **[ಆ, ಗಹಿ]** ಬರುವವನಾಗು. **[ಉಪ]** ಹಾಗೂ **[ನಃ]** ನಮ್ಮನ್ನು **[ಉತ್, ಅವ]** ಉತ್ತಮ ರೀತಿಯಲ್ಲಿ ರಕ್ಷಣೆ ಮಾಡು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ನೀವೆಲ್ಲರೂ ಪರಮೇಶ್ವರನಂತೆ ವರ್ತಿಸುತ್ತ ಎಲ್ಲರಿಗೂ ಕಲ್ಯಾಣಕರರಾಗಿರಿ.

ವಿದ್ಯಾಗ್ರಹಣ ವಿಷಯವಿಲ್ಲಿ ಹೇಳಿದೆ.

**ಯತ್ರ ವೇತ್ಥ ವನಸ್ಪತೇ ದೇವಾನಾಂ ಗುಹ್ಯಾ ನಾಮಾನಿ । ತತ್ರ ಹವ್ಯಾನಿ ಗಾಮಯ ॥೧೦॥**

**ಪದಾರ್ಥ:-** **[ವನಸ್ಪತೇ]** ವನಪಾಲಕನೇ! ನೀನು **[ಯತ್ರ]** ಯಾವುದರಲ್ಲಿ **[ದೇವಾನಾಂ]** ವಿದ್ಯಾವಂತರ **[ಗುಹ್ಯಾ]** ಗುಪ್ತವಾದ **[ನಾಮಾನಿ]** ಹೆಸರುಗಳನ್ನು **[ವೇತ್ಥ]** ತಿಳಿದಿರುವಿಯೋ **[ತತ್ರ]** ಅಲ್ಲಿ **[ಹವ್ಯಾನಿ]** ಹವನೀಯ ವಸ್ತುಗಳನ್ನು **[ಗಾಮಯ]** ತಲುಪಿಸು.

**ಭಾವಾರ್ಥ:-** ಯಾರು ವಿದ್ಯಾವಂತರ ಹೃದಯದಲ್ಲಿರುವ ಹೆಸರುಗಳನ್ನು ವಿದ್ಯಾಪ್ರಭಾವದಿಂದ ತಿಳಿದುಕೊಳ್ಳುವರೋ ಅವರು ಮನುಷ್ಯರಿಗೆ ಅತಿಶಯ ಸುಖವನ್ನು ಪ್ರಾಪ್ತಿಗೊಳಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ್ವಾಹಾಗ್ನಯೇ ವರುಣಾಯ ಸ್ವಾಹೇಂದ್ರಾಯ ಮರುದ್ಭ್ಯಃ । ಸ್ವಾಹಾ ದೇವೇಭ್ಯೋ ಹವಿಃ ॥೧೧॥**

**ಪದಾರ್ಥ:-** **[ವರುಣಾಯ]** ಶ್ರೇಷ್ಠನಾದ **[ಅಗ್ನಯೇ]** ಅಗ್ನಿ ವಿದ್ಯೆಗಾಗಿ **[ಸ್ವಾಹಾ]** ಸತ್ಯವಾಣಿ, **[ಇಂದ್ರಾಯ]** ಐಶ್ವರ್ಯವಂತನಿಗೆ ಮತ್ತು **[ಮರುದ್ಭ್ಯಃ]** ಮನುಷ್ಯರಿಗೆ **[ಸ್ವಾಹಾ]** ಸತ್ಯನುಡಿಯು, **[ದೇವೇಭ್ಯಃ]** ವಿದ್ಯಾವಂತರಿಗೆ **[ಹವಿಃ]** ದಾನಯೋಗ್ಯ ವಸ್ತುಗಳು **[ಸ್ವಾಹಾ]** ಶ್ರೇಷ್ಠ ಕರ್ಮಗಳು ಲಭಿಸಲಿ.

**ಭಾವಾರ್ಥ:-** ಮನುಷ್ಯರು ಶ್ರೇಷ್ಠವಿದ್ಯೆ ಮತ್ತು ಉತ್ತಮಕರ್ಮಗಳಿಂದ ಅಗ್ನಿವಿದ್ಯೆಯನ್ನು ಗ್ರಹಣ ಮಾಡಬೇಕು. ವಿದ್ವಾಂಸರನ್ನು ಸತ್ಕರಿಸಬೇಕು. ನಿರಂತರ ಮನುಷ್ಯರ ಹಿತವನ್ನು ಸಾಧಿಸಬೇಕು.

ಈ ಸೂಕ್ತದಲ್ಲಿ ವಿದ್ಯಾವಂತರ - ರಾಜನ ಗೃಹಸ್ಥಾಶ್ರಮದ ಪ್ರಜೆಗಳ ಮತ್ತು ವಿದ್ಯಾಗ್ರಹಣದಂತಹ ವಿಚಾರವನ್ನು ಹೇಳಿರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ಐದನೆಯ ಸೂಕ್ತ ಸಮಾಪ್ತ

## ಸೂಕ್ತ ೬

ಮಂತ್ರಸಂಖ್ಯೆ ೧೦ । ವಸುಶ್ರುತ ಆತ್ರೇಯ ಋಷಿಃ । ಅಗ್ನಿರ್ದೇವತಾ । ೧, ೮, ೯ ನಿಚೃತ್ಪಂಕ್ತಿಃ ಛಂದಃ,
೨, ೫ ಪಂಕ್ತಿಃ ಛಂದಃ, ೭ ವಿರಾಡ್ಪಂಕ್ತಿಃ ಛಂದಃ । ಪಂಚಮಃ ಸ್ವರಃ । ೩, ೪ ಸ್ವರಾಡ್ಬೃಹತೀ,
೬, ೧೦ ಭರಿಗ್ಬೃಹತೀ ಛಂದಃ । ಮಧ್ಯಮಃ ಸ್ವರಃ.

ಅಗ್ನಿ ವಿಷಯವಿಲ್ಲಿ ಹೇಳಿದೆ.

**ಅಗ್ನಿಂ ತಂ ಮನ್ಯೇ ಯೋ ವಸು-ರಸ್ತಂ ಯಂ ಯಂತಿ ಧೇನವಃ ।**
**ಅಸ್ತಮರ್ವಂತ ಆಶವೋಽಸ್ತಂ ನಿತ್ಯಾಸೋ ವಾಜಿನ ಇಷಂ ಸ್ತೋತೃಭ್ಯ ಆ ಭರ ॥೧॥**

**ಪದಾರ್ಥ:-** [ಯಃ] ಯಾವ [ವಸು] ಸರ್ವತ್ರ ಇರುವವನು [ಯಂ] ಯಾವನು [ಅಸ್ತಂ] ಪ್ರೇರಣೆ ಪಡೆದು [ಅಗ್ನಿಂ] ಅಗ್ನಿಯನ್ನು [ಧೇನವಃ] ಗೋವುಗಳು [ಅಸ್ತಂ] ಪ್ರೇರಣೆ ನೀಡಿದವನನ್ನು [ಅರ್ವಂತಃ] ಗಮನ ಮಾಡುವವನಾಗಿ [ಆಶವಃ] ಶೀಘ್ರಗತಿಯ [ನಿತ್ಯಾಸಃ] ಅವಿನಾಶಕ [ವಾಜಿನಃ] ವೇಗಯುಕ್ತ [ಅಸ್ತಂ] ಪ್ರೇರಣೆ ಪಡೆದು [ಯಂತಿ] ಪ್ರಾಪ್ತವಾಗುತ್ತದೆಯೋ, [ತಂ] ಅವನನ್ನು [ಮನ್ಯೇ] ಗೌರವಿಸುವನು. [ಸ್ತೋತೃಭ್ಯಃ] ಸ್ತುತಿ ಮಾಡುವವರಿಗೆ [ಇಷಂ] ಅನ್ನವನ್ನು [ಆ, ಭರ] ಪೂರ್ಣಗೊಳಿಸು.

**ಭಾವಾರ್ಥ:-** ಮನುಷ್ಯರೇ! ನೀವು ಒಂದು ವೇಳೆ ಎಲ್ಲಾಕಡೆಗಳಲ್ಲೂ ವ್ಯಾಪ್ತವಾದ ವಿದ್ಯುದ್ರೂಪಾಗ್ನಿಯನ್ನು ನಿಮ್ಮ ಕೆಲಸಗಳಲ್ಲಿ ಉಪಯೋಗಿಸಿಕೊಂಡರೆ ವೇಗಗತಿಯನ್ನು ಪಡೆದು ಎಲ್ಲವನ್ನೂ ಚಾಲನೆಗೊಳಿಸಬಹುದು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸೋ ಅಗ್ನಿರ್ಯೋ ವಸುರ್ಗೃಣೇ ಸಂ ಯಮಾಯಂತಿ ಧೇನವಃ । ಸಮರ್ವಂತೋ**
**ರಘುದ್ರುವಃ ಸಂ ಸುಜಾತಾಸಃ ಸೂರಯ ಇಷಂ ಸ್ತೋತೃಭ್ಯ ಆ ಭರ ॥೨॥**

**ಪದಾರ್ಥ:-** [ಯಃ] ಯಾವನು [ವಸುಃ] ಧನರೂಪನು [ಯಂ] ಯಾವುದನ್ನು [ಧೇನವಃ] ಮಾತುಗಳು [ಸಂ, ಆಯಾಂತಿ] ಉತ್ತಮ ರೀತಿಯಲ್ಲಿ ಪ್ರಾಪ್ತವಾಗುತ್ತವೆ. [ರಘುದ್ರುವಃ] ಅಲ್ಪಗತಿಯ [ಅರ್ವಂತಃ] ವೇಗಗತಿಯ [ಸಂ] ಉತ ಷ್ಟ ರೀತಿಯಲ್ಲಿ ಪ್ರಾಪ್ತವಾದ [ಸುಜಾತಾಸಃ] ಪ್ರಸಿದ್ಧವಾದ [ಸೂರಯಃ] ವಿದ್ಯಾವಂತರು [ಸಂ] ಪ್ರಾಪ್ತವಾಗುತ್ತಲಿರುವರೋ [ಗೃಣೇ] ಅವರನ್ನು ಸ್ತುತಿಸುವೆನು. [ಸಃ] ಆ [ಅಗ್ನಿಃ] ಅಗ್ನಿಯು [ಸ್ತೋತೃಭ್ಯಃ] ಸ್ತವನ ಮಾಡುವವರಿಗೆ [ಹವಂ] ಅನ್ನವನ್ನು [ಆ, ಭರ] ಪೂರ್ಣಗೊಳಿಸುವವನು.

**ಭಾವಾರ್ಥ:-** ಮನುಷ್ಯರೇ! ನೀವು ಅಗ್ನ್ಯಾದಿ ವಿದ್ಯೆಗಳಲ್ಲಿ ಕುಶಲರಾಗಿ ವಿದ್ಯಾವಂತರಿಗೆ ಸಂಪತ್ತಿನ ಪ್ರಾಪ್ತಿಗೊಳಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಅಗ್ನಿರ್ಹಿ ವಾಜಿನಂ ವಿಶೇ ದದಾತಿ ವಿಶ್ವಚರ್ಷಣಿಃ । ಅಗ್ನೀ ರಾಯೇ ಸ್ವಾಭುವಂ ಸ**
**ಪ್ರೀತೋ ಯಾತಿ ವಾರ್ಯ-ಮಿಷಂ ಸ್ತೋತೃಭ್ಯ ಆ ಭರ ॥೩॥**

**ಪದಾರ್ಥ:-** [ವಿಶ್ವಚರ್ಷಣಿಃ] ಪ್ರಪಂಚವನ್ನು ಬೆಳಗಿಸುವ [ಅಗ್ನಿಃ] ಅಗ್ನಿಯು [ಹಿ] ಯಾವ ಕಾರಣದಿಂದ [ವಿಶೇ] ಪ್ರಜೆಗಳಿಗೆ [ವಾಜಿನಂ] ವೇಗವಂತನನ್ನು [ದದಾತಿ] ಕೊಡುತ್ತಾನೆ. [ಅಗ್ನಿಃ] ಅಗ್ನಿಯು [ರಾಯೇ] ಧನಕ್ಕಾಗಿ [ಸ್ವಾಭುವಂ] ಸ್ವಯಂ ಉತ್ಪನ್ನನಾದವನನ್ನು [ಯಾತಿ] ಪಡೆದುಕೊಳ್ಳುವನು [ಸಃ] ಅವನು [ಪ್ರೀತಃ] ಸಂತುಷ್ಟನಾಗಿ [ಸ್ತೋತೃಭ್ಯಃ] ಸ್ತವನ ಮಾಡುವವರಿಗೆ [ವಾರ್ಯಂ] ಸ್ವೀಕಾರಾರ್ಹವಾದ [ಇಷ] ಅನ್ನವನ್ನು [ಆ, ಭರಃ] ಪ್ರಾಪ್ತಿಗೊಳಿಸು.

**ಭಾವಾರ್ಥ:-** ಅಗ್ನಿಯನ್ನು ಉತ್ತಮರೀತಿಯಲ್ಲಿ ಬಳಸಿಕೊಂಡರೆ ಅವನು ಸುಖದಾಯಕನಾಗುವನು. ಅದರಿಂದ ಎಲ್ಲರೂ ಸಂಪತ್ತನ್ನು ಬೆಳೆಸಿಕೊಳ್ಳಬೇಕು.

ಅಗ್ನಿ ವಿದ್ಯೆಯನ್ನರಿತ ವಿದ್ಯಾವಂತರ ವಿಷಯವಿಲ್ಲಿದೆ.

**ಆ ತೇ ಅಗ್ನ ಇಧೀಮಹಿ ದ್ಯುಮಂತಂ ದೇವಾಜರಮ್ ।**
**ಯದ್ಧ ಸ್ಯಾ ತೇ ಪನೀಯಸೀ ಸಮಿದ್ದೀದಯತಿ ದ್ಯವೀ-ಷಂ ಸ್ತೋತೃಭ್ಯ ಆ ಭರ ॥೪॥**

**ಪದಾರ್ಥ:-** **[ದೇವಃ]** ಸುಖದಾಯಕ **[ಅಗ್ನೇ]** ವಿದ್ಯಾವಂತನೇ! ನೀನು **[ದ್ಯುಮಂತಂ]** ಪ್ರಕಾಶಮಾನನಾಗಿ **[ಅಜರಂ]** ನಂಜಿಹೋಗದ ಅಗ್ನಿಯನ್ನು ಪ್ರಜ್ವಲಿತಗೊಳಿಸುವೆ. **[ಯತ್]** ಯಾವುದು **[ತೇ]** ನಿನ್ನ **[ಪನೀಯಸೀ]** ಪ್ರಶಂಸಾರ್ಹವಾದ **[ಸಮಿತ್]** **[ಸ್ಯಾ]** ಇಂಧನವಿದೆಯೋ ಅದು **[ತೇ]** ನಿನ್ನ **[ದ್ಯವಿ]** ಪ್ರಕಾಶದಲ್ಲಿ **[ದೀದಯತಿ]** ಪ್ರಜ್ವಲಿಸಲಾಗುತ್ತದೆಯೋ **[ಸ್ತೋತೃಭ್ಯಃ]** ಸ್ತವನ ಮಾಡುವವರಿಗೆ **[ಇಷಂ]** ಅನ್ನಾದಿಗಳನ್ನು **[ಹ]** ನಿಶ್ಚಯವಾಗಿ **[ಆ, ಇಧೀಮಹಿ]** ಕೊಡುತ್ತೇವೆಯೋ ಅವರಿಗೆ **[ಆ, ಭರ]** ನೀನನದನ್ನು ಪೂರ್ಣಗೊಳಿಸು.

**ಭಾವಾರ್ಥ:-** ವಿದ್ಯಾವಂತರೇ! ಯಾವ ಅಗ್ನ್ಯಾದಿಗಳನ್ನು ಅವುಗಳ ವಿದ್ಯೆಯನ್ನು ತಿಳಿದಿರುವಿರೋ, ಯಾವ ವಿದ್ಯೆಯನ್ನು ಪ್ರಯೋಗಿಸಿ ಪ್ರಶಂಸಿತರಾಗಿರುವಿರೋ ಅಂತಹ ವಿದ್ಯೆಯನ್ನು ನಮ್ಮೆಲ್ಲರಿಗೂ ಬೋಧಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಆ ತೇ ಅಗ್ನ ಋಚಾ ಹವಿಃ ಶುಕ್ರಸ್ಯ ಶೋಚಿಷಸ್ಪತೇ । ಸುಶ್ಚಂದ್ರ ದಸ್ಮ ವಿಶ್ಪತೇ ಹವ್ಯವಾಟ್**
**ತುಭ್ಯಂ ಹೂಯತ ಇಷಂ ಸ್ತೋತೃಭ್ಯ ಆ ಭರ ॥೫॥**

**ಪದಾರ್ಥ:-** **[ಶೋಚಿಷಃ]** **[ಪತೇ]** ಬೆಳಕಿನೊಡೆಯನೇ! **[ಸುಶ್ಚಂದ್ರ]** ಸುಂದರ ಸುವರ್ಣವಂತನೇ! **[ದಸ್ಮ]** ದುಃಖನಾಶಕನೇ! **[ವಿಶ್ಪತೇ]** ಪ್ರಜಾಪಾಲಕನೇ! **[ಅಗ್ನೇ]** ವಿದ್ಯಾವಂತ ರಾಜನೇ! **[ಶುಕ್ರಸ್ಯ]** ಪರಿಶುದ್ಧನಾದ **[ತೇ]** ನಿನ್ನ **[ಋಚಾ]** ಪ್ರಶಂಸೆಯಿಂದ **[ಹವಿಃ]** ಹವಿಸ್ಸನ್ನು **[ಆ, ಹೂಯತೇ]** ಉತ ಷ್ಟ ರೀತಿಯಲ್ಲಿ ಕೊಡಲಾಗುತ್ತದೆ. **[ಹವ್ಯವಾಟ್]** ಹವಿಸ್ಸನ್ನು ಹಂಚುವವನು **[ತುಭ್ಯಂ]** ನಿನಗೆ **[ಸ್ತೋತೃಭ್ಯಃ]** ಸ್ತವನ ಮಾಡುವವರಿಗೆ **[ಇಷಂ]** ನೀನು ಅನ್ನವನ್ನು **[ಆ, ಭರ]** ಉತ್ತಮ ರೀತಿಯಲ್ಲಿ ಕೊಡು.

**ಭಾವಾರ್ಥ:-** ಯಾವ ವಿದ್ಯಾವಂತರು ಅಗ್ನ್ಯಾದಿಗಳಿಂದ ಕಾರ್ಯಸಿದ್ಧಿ ಮಾಡಿಕೊಳ್ಳುವರೋ, ಅವರು ಜನರ ಕಾರ್ಯವನ್ನು ಸಾಧಿಸುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಪ್ರೋ ತ್ಯೇ ಅಗ್ನಯೋಽಗ್ನಿಷು ವಿಶ್ವಂ ಪುಷ್ಯಂತಿ ವಾರ್ಯಮ್ ।**
**ತೇ ಹಿನ್ವಿರೇ ತ ಇನ್ವಿರೇ ತ ಇಷಣ್ಯಂತ್ಯಾನುಷ-ಗಿಷಂ ಸ್ತೋತೃಭ್ಯ ಆ ಭರ ॥೬॥**

**ಪದಾರ್ಥ:-** **[ಅಗ್ನಯಃ]** ಅಗ್ನಿಗಳು **[ಅಗ್ನಿಷು]** ಅಗ್ನ್ಯಾದಿ ಪದಾರ್ಥಗಳಲ್ಲಿ ನೆಲೆಸಿರುವ **[ತ್ಯೇ]** ಅವರು **[ವಾರ್ಯಂ]** ಸ್ವೀಕಾರಾರ್ಹ **[ವಿಶ್ವಂ]** ಸಮಗ್ರ ಜಗತ್ತನ್ನು **[ಪ್ರೋ, ಪುಷ್ಯಂತಿ]** ಪರಿಪುಷ್ಟಗೊಳಿಸುವರು. **[ತೇ]** ಅವರು **[ಹಿನ್ವಿರೇ]** ಪದಾರ್ಥಗಳನ್ನು ವೃದ್ಧಿಗೊಳಿಸುವರು. **[ತೇ]** ಅವರು **[ಇನ್ವಿರೇ]** ವ್ಯಾಪ್ತರಾಗುವರು. **[ತೇ]** ಅವರು ಕಾರ್ಯವನ್ನು ಸಾಧಿಸುವರು. ಅವರಿಗೆ **[ಆನುಷಕ್]** ಅನುಕೂಲಕರವಾಗಿ **[ಇಷಣ್ಯಂತಿ]** ಅನ್ನಾದಿಗಳನ್ನು ಬಯಸುವರು. **[ಸ್ತೋತೃಭ್ಯಃ]** ಸ್ತವನ ಮಾಡುವವರಿಗೆ **[ಇಷಂ]** ವಿಜ್ಞಾನವನ್ನು **[ಆ, ಭರ]** ಧಾರಣ ಮಾಡಿಸು.

**ಭಾವಾರ್ಥ:-** ಮನುಷ್ಯರೇ! ಪೃಥಿವ್ಯಾದಿ ಪದಾರ್ಥಗಳಲ್ಲಿ ಅಗ್ನ್ಯಾದಿ ಶಕ್ತಿಗಳಿವೆ. ಅದನ್ನು ತಿಳಿದು ತನ್ಮೂಲಕ ಈಶ್ವರಜ್ಞಾನ ಪಡೆಯಿರಿ.

ಈ ಮಂತ್ರದಲ್ಲಿ ಅಗ್ನಿ ವಿದ್ಯೆಯ ಉಪದೇಶವಿದೆ.

**ತವ ತ್ಯೇ ಅಗ್ನೇ ಅರ್ಚಯೋ ಮಹಿ ವ್ರಾಧಂತ ವಾಜಿನಃ ।**
**ಯೇ ಪತ್ವಭಿಃ ಶಫಾನಾಂ ವ್ರಜಾ ಭುರಂತ ಗೋನಾ-ಮಿಷಂ ಸ್ತೋತೃಭ್ಯ ಆ ಭರ ॥೭॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಯೇ]** ಯಾರು **[ಗೋನಾಂ]** ಗೋವುಗಳ **[ಶಫಾನಾಂ]** ಗೊರಸುಗಳ **[ಪತ್ವಭಿಃ]** ಗಮನದಿಂದ **[ವ್ರಜಾ]** ವೇಗವನ್ನು **[ಭರಂತು]** ಧಾರಣ ಮಾಡುತ್ತಾರೆ. **[ಮಹೀ]** ಮಹತ್ತರ **[ಅರ್ಚಯಃ]** ತೇಜಸ್ಸುಗಳು **[ವಾಜಿನಃ]** ವೇಗವಂತರು **[ವ್ರಾಧಂತಃ]** ವೃದ್ಧಿಹೊಂದುತ್ತಾರೆ. **[ತ್ಯೇ]** ಅವರು **[ತವ]** ಅವರ **[ಸ್ತೋತೃಭ್ಯಃ]** ಸ್ತುತಿಮಾಡುವವರಿಗೆ **[ಇಷಂ]** ಅನ್ನವನ್ನು **[ಆ, ಭರ]** ಪ್ರಾಪ್ತಿಗೊಳಿಸು.

**ಭಾವಾರ್ಥ:-** ಕುದುರೆ ಗೋವುಗಳು ಹೇಗೆ ಗೊರಸುಗಳಿಂದ ವೇಗವಾಗಿ ಚಲಿಸುತ್ತವೆಯೋ, ಹಾಗೆ ಅಗ್ನಿಯ ತೇಜಸ್ಸಿನಿಂದ ದ್ವಿಪಾದಿಗಳು ವೇಗವಾಗಿ ಚಲಿಸುವರು. ಯಾರು ಅಗ್ನ್ಯಾದಿಗಳನ್ನು ತಮ್ಮ ಕಾರ್ಯದಲ್ಲಿ ಸಂಯೋಜಿಸಲು ತಿಳಿದಿರುವರೋ ಅವರು ಎಲ್ಲಾ ರೀತಿಯಿಂದ ವೃದ್ಧಿಹೊಂದುವರು.

ರಾಜನ ವಿಷಯವಿಲ್ಲಿ ಹೇಳಿದೆ.

**ನವಾ ನೋ ಅಗ್ನ ಆ ಭರ ಸ್ತೋತೃಭ್ಯಃ ಸುಕ್ಷಿತೀರಿಷಃ । ತೇ ಸ್ಯಾಮ ಯ**
**ಆನೃಚು-ಸ್ತ್ವಾದೂತಾಸೋ ದಮೇದಮ ಇಷಂ ಸ್ತೋತೃಭ್ಯ ಆ ಭರ ॥೮॥**

**ಪದಾರ್ಥ:-** **[ಅಗ್ನೇ]** ರಾಜನೇ! **[ಯೇ]** ಯಾರು **[ತ್ವಾದೂತಾಸಃ]** ನೀನೇ ದೂತನಾಗಿರುವ ನಾವು **[ಆನೃಚುಃ]** ನಿನ್ನ ಸತ್ಕಾರ ಮಾಡುವೆವು. **[ನಃ]** ನಾವು **[ಸ್ತೋತೃಭ್ಯಃ]** ಧಾರ್ಮಿಕ ವಿದ್ವಾಂಸರಿಗೆ **[ಸುಕ್ಷಿತೀಃ]** ಉತ್ತಮ ಭೂಮಿಗಳನ್ನು **[ನವಾಃ]** ಹೊಸತಾದ **[ಇಷಃ]** ಅನ್ನಾದಿಗಳನ್ನು **[ಆ, ಭರ]** ಪ್ರಾಪ್ತಿಗೊಳಿಸು. **[ತೇ]** ಅವರು **[ಸ್ಯಾಮ]** ನಾವೂ ಉತ್ಸಾಹಿತರಾಗೋಣ. **[ಸ್ತೋತೃಭ್ಯಃ]** ಸಜ್ಜನರಿಗೆ **[ದಮೇದಮೇ]** ಮನೆ ಮನೆಗಳಲ್ಲಿ **[ಇಷಂ]** ಅನ್ನಾದಿಗಳನ್ನು **[ಆ, ಭರ]** ಪ್ರಾಪ್ತಿಗೊಳಿಸು.

**ಭಾವಾರ್ಥ:-** ಯಾವ ರಾಜನು, ಅತುಲೈಶ್ವರ್ಯವನ್ನು ಮತ್ತು ಸೇವಕರನ್ನು ಎಲ್ಲರ ಸುಖಕ್ಕಾಗಿ ಧರಿಸಿರುವನೋ ಅವನೇ ಪ್ರಶಂಸನೀಯನಾಗುವನು ಮತ್ತು ಗುಪ್ತಚರರಿಂದ ಸಮಗ್ರ ರಾಜ್ಯದ ಸಮಾಚಾರ ತಿಳಿದು ಯೋಗ್ಯ ವ್ಯವಸ್ಥೆಯನ್ನು ಮಾಡುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಉಭೇ ಸುಶ್ಚಂದ್ರ ಸರ್ಪಿಷೋ ದರ್ವೀ ಶ್ರೀಣೀಷ ಆಸನಿ । ಉತೋ ನ ಉತ್**
**ಪುಪೂರ್ಯಾ ಉಕ್ಥೇಷು ಶವಸಸ್ಪತ ಇಷಂ ಸ್ತೋತೃಭ್ಯ ಆ ಭರ ॥೯॥**

**ಪದಾರ್ಥ:-** **[ಸುಶ್ಚಂದ್ರ]** ಸುವರ್ಣಾದಿ ಸಂಪತ್ಸಂಪನ್ನನೇ! **[ಶವಸಃ ಪತೇ]** ಸೇನಾಪತಿಯೇ! ನೀನು **[ಉಭೇ]** ಎರಡೂ **[ದರ್ವೀ]** ಪಾಕಸಾಧನಗಳನ್ನು ಅಂದರೆ ಸವುಟುಗಳನ್ನು **[ಆಸನಿ]** ಅಗ್ನಿಯ ಮುಖದಲ್ಲಿ **[ಸರ್ಪಿಷಃ]** ಆಜ್ಯಾದಿಗಳನ್ನು **[ಶ್ರೀಣೀಷ]** ಪಚನಗೊಳಿಸುವೆ. **[ಉತೋ]** ಅದರಿಂದ **[ನಃ]** ನಮ್ಮನ್ನು **[ಉತ್,**

ಪುಪೂರ್ಯಾಃ] ಉತ್ತಮರೀತಿಯಿಂದ ಪಾಲನೆ ಮಾಡು. [ಉಕ್ಥೇಷು] ಪ್ರಶಂಸಾತ್ಮಕ ಧರ್ಮಕರ್ಮಗಳಲ್ಲಿ [ಸ್ತೋತೃಭ್ಯಃ] ಪಠನ-ಪಾಠನ ಮಾಡುವವರಿಗೆ [ಇಷಂ] ಅನ್ನಾದಿಗಳನ್ನು [ಆ, ಭರ] ಪ್ರಾಪ್ತಿಗೊಳಿಸು.

**ಭಾವಾರ್ಥ:-** ಯಾವ ರಾಜನು ಸೇನೆಯ ವೃದ್ಧಿಗೆ ಉತ್ತಮ ಭೋಜನವನ್ನು ಮತ್ತು ಅವರ ಆರೋಗ್ಯಕ್ಕೆ ಉತ್ತಮ ವೈದ್ಯರನ್ನು ವ್ಯವಸ್ಥೆಗೊಳಿಸುವನೋ ಅವನು ಪ್ರಶಂಸಿತನಾಗಿ ರಾಜ್ಯವನ್ನು ವೃದ್ಧಿಪಡಿಸುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಏವಾँ ಅಗ್ನಿ ಮಜುರ್ಯಮು-ರ್ಗೀರ್ಭಿರ್ಯಜ್ಞೇಭಿರಾನುಷಕ್ ।**
**ದಧದಸ್ಮೇ ಸುವೀರ್ಯ-ಮುತ ತ್ಯದಾಶ್ವಶ್ವ್ಯ-ಮಿಷಂ ಸ್ತೋತೃಭ್ಯ ಆ ಭರ ॥೧೦॥**

**ಪದಾರ್ಥ:-** [ಗೀರ್ಭಿಃ] ಮಾತುಗಳಿಂದ [ಯಜ್ಞೇಭಿಃ] ಸಂಗತ ಕರ್ಮಗಳಿಂದ [ಆಶ್ವಶ್ವ್ಯಂ] ಅಶ್ವದಂತೆ ವೇಗಗುಣವನ್ನು [ಸುವೀರ್ಯಂ] ಉತ್ತಮ ಪರಾಕ್ರಮವನ್ನು [ಅಗ್ನಿಂ] ಅಗ್ನಿಯನ್ನು [ಆನುಷಕ್] ಅನುಕೂಲಕರವಾಗಿ [ಅಜುರ್ಯಮುಃ] ಪ್ರೇರಣೆನೀಡಿ ನಿಯಮಬದ್ಧಗೊಳಿಸುವನೋ [ಏವ] ಅವುಗಳನ್ನೇ [ಅಸ್ಮೇ] ನಮಗೆ [ದಧತ್] ಧಾರಣ ಮಾಡಿಸುವನು [ಉತ್] ಮತ್ತು [ತ್ಯತ್] ಆ [ಇಷಂ] ಇಷ್ಟ ವ್ಯವಹಾರವನ್ನು [ಸ್ತೋತೃಭ್ಯಃ] ಸ್ತವನ ಮಾಡುವವರಿಗೆ [ಆ, ಭರ] ಧಾರಣ ಮಾಡಿಸು.

**ಭಾವಾರ್ಥ:-** ಯಾವ ರಾಜನು ಅಗ್ನ್ಯಾದಿ ವಿದ್ಯೆಗಳನ್ನರಿತು ವಿಮಾನಾದಿ ಬಹುವಿಧ ವಾಹನಗಳನ್ನು ತಯಾರಿಸುವನೋ ಅವನನ್ನು ಅನ್ನಾದಿ ಪದಾರ್ಥಗಳಿಂದ ನಿರಂತರ ಗೌರವಿಸು.

ಈ ಸೂಕ್ತದಲ್ಲಿ ಅಗ್ನಿ, ವಿದ್ಯಾವಂತರು ಮತ್ತು ರಾಜನ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

**ಆರನೆಯ ಸೂಕ್ತ ಸಮಾಪ್ತ**

## ಸೂಕ್ತ ೭

ಮಂತ್ರಸಂಖ್ಯೆ ೧೦ । ಆತ್ರೇಯ ಋಷಿಃ । ಅಗ್ನಿರ್ದೇವತಾ । ೧, ೯ ವಿರಾಡನುಷ್ಟುಪ್, ೨ ಅನುಷ್ಟುಪ್, ೩, ೪, ೫, ೮ ನಿಚೃದನುಷ್ಟುಪ್ ಛಂದಃ । ಗಾಂಧಾರಃ ಸ್ವರಃ । ೬, ೭ ಸ್ವರಾಡುಷ್ಣಿಕ್ ಛಂದಃ । ಋಷಭಃ ಸ್ವರಃ । ೧೦ ನಿಚೃದ್ಬೃಹತೀ ಛಂದಃ । ಮಧ್ಯಮಃ ಸ್ವರಃ.

ಈ ಮಂತ್ರದಲ್ಲಿ ಮಿತ್ರಭಾವವನ್ನು ಹೇಳಲಾಗಿದೆ.

**ಸಖಾಯಃ ಸಂ ವಃ ಸಮ್ಯಂಚ-ಮಿಷಂ ಸ್ತೋಮಂ ಚಾಗ್ನಯೇ ।**
**ವರ್ಷಿಷ್ಠಾಯ ಕ್ಷಿತೀನಾ-ಮೂರ್ಜೋ ನಪ್ತ್ರೇ ಸಹಸ್ವತೇ ॥೧॥**

**ಪದಾರ್ಥ:-** [ಸಖಾಯಃ] ಸ್ನೇಹಿತರಾದ ನೀವು [ಕ್ಷಿತೀನಾಂ] ಮನುಷ್ಯರಲ್ಲಿ [ವಃ] ನಿಮಗಾಗಿ [ವರ್ಷಿಷ್ಠಾಯ] ಅತ್ಯಂತ ಶ್ರೇಷ್ಠನಿಗೆ [ಊರ್ಜಃ] ಪರಾಕ್ರಮಯುಕ್ತ [ನಪ್ತ್ರೇ] ಮರಿ ಮಗಳಂತಿರುವ [ಸಹಸ್ವತೇ] ಬಲಿಷ್ಠವಾದ [ಅಗ್ನಯೇ] ಅಗ್ನಿಗೆ [ಸಂಮ್ಯಂಚಂ] ಶ್ರೇಷ್ಠ [ಸ್ತೋಮಂ] ಸ್ತೋತ್ರವನ್ನು [ಇಷಂ] ಅನ್ನಾದಿಗಳನ್ನು [ಚ] ಮತ್ತು [ಸಂ] ಉತ್ತಮ ರೀತಿಯಲ್ಲಿ ಧಾರಣ ಮಾಡುವೆವು.

**ಭಾವಾರ್ಥ:-** ಮನುಷ್ಯರೇ! ನೀವು ಈ ಜಗತ್ತಿನಲ್ಲಿ ಮಿತ್ರಭಾವದೊಂದಿಗೆ ವರ್ತಿಸಿರಿ. ಮನುಷ್ಯರಾದಿಯಾಗಿ ಎಲ್ಲ ಪ್ರಜೆಗಳ ಹಿತಕ್ಕಾಗಿ ಅಗ್ನ್ಯಾದಿ ವಿದ್ಯೆಗಳನ್ನು ಪಡೆಯಿರಿ. ಮತ್ತದನ್ನು ಬೇರೆಯವರಿಗೂ ಬೋಧಿಸಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಕುತ್ರಾ ಚಿದ್ಯಸ್ಯ ಸಮೃತೌ ರಣ್ವಾ ನರೋ ನೃಷದನೇ ।**
**ಅರ್ಹಂತಶ್ಚಿದ್ಯಮಿಂಧತೇ ಸಂಜನಯಂತಿ ಜಂತವಃ ॥೨॥**

**ಪದಾರ್ಥ:-** [ನರಃ] ನಾಯಕರೇ! [ಜಂತವಃ] ಜೀವರಾಶಿಗಳು [ಯಸ್ಯ] ಯಾವನ [ಸಮೃತೌ] ಉತ್ತಮ ಬುದ್ಧಿಯಲ್ಲಿ [ರಣ್ವಾಃ] ರಮಣ ಮಾಡುತ್ತ [ನೃಷದನೇ] ಮನುಷ್ಯರ ಮನೆಯಲ್ಲಿ [ಚಿತ್] ಹಾಗೂ [ಅರ್ಹಂತಃ] ಗೌರವಿಸುತ್ತ [ಯಂ] ಯಾರನ್ನು [ಇಂಧತೇ] ಪ್ರಕಾಶಮಾನಗೊಳಿಸುವರೋ [ಸಂಜನಯಂತಿ] ಬೆಳಕನ್ನು ಉತ್ಪಾದನೆ ಮಾಡುವರೋ [ಚಿತ್] ಹಾಗೂ [ಕುತ್ರಾ] ಅವರು ಎಲ್ಲೋ ಅನಾದರಕ್ಕೆ ಪಾತ್ರರಾಗುವುದಿಲ್ಲ.

**ಭಾವಾರ್ಥ:-** ಯಾವ ಜೀವಿಗಳು ಎಲ್ಲರಿಗೂ ಹಿತವನ್ನೇ ಮಾಡುತ್ತಿರುವರೋ ಅವರು ಯಥಾಶಕ್ತಿ ಪರೋಪಕಾರ ಮಾಡುತ್ತ ಯೋಗ್ಯರೆನಿಸಿಕೊಳ್ಳುವರು.

ವಿದ್ವದ್ವಿಷಯವಿಲ್ಲಿ ಹೇಳಿದೆ.

**ಸಂ ಯದಿಷೋ ವನಾಮಹೇ ಸಂ ಹವ್ಯಾ ಮಾನುಷಾಣಾಮ್ ।**
**ಉತ ದ್ಯುಮ್ನಸ್ಯ ಶವಸ ಋತಸ್ಯ ರಶ್ಮಿಮಾ ದದೇ ॥೩॥**

**ಪದಾರ್ಥ:-** [ಮಾನುಷಾಣಾಂ] ಮನುಷ್ಯರ ಮಧ್ಯದಲ್ಲಿ [ದ್ಯುಮ್ನಸ್ಯ] ಧನದ/ಕೀರ್ತಿಯ [ಋತಸ್ಯ] ಸತ್ಯದ [ಶವಸಾ] ಸೇನೆಯಿಂದ [ಯತ್] ಹೇಗೆ [ಹವ್ಯಾ] ಕೊಡಲು ಯೋಗ್ಯವಾದ [ಇಷಃ] ಅನ್ನಾದಿ ಸಾಮಗ್ರಿಗಳನ್ನು [ಸಂ] [ವನಾಮಹೇ] ಉತ್ತಮ ರೀತಿಯಿಂದ ಸೇವಿಸುವೆವು. [ಉತ] ಅಥವಾ [ರಶ್ಮಿಂ] ಬೆಳಕನ್ನು [ಸಂ, ಆ, ದದೇ] ಗ್ರಹಣ ಮಾಡುವೆನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಮನುಷ್ಯನು ಪಕ್ಷಪಾತರಹಿತ ವ್ಯವಹಾರ ಮಾಡುವನೋ, ಮನುಷ್ಯರ ಆತ್ಮದಲ್ಲಿ ಇರುವ ವಿದ್ಯಾಪ್ರಕಾಶವನ್ನು ಜಾಗೃತಗೊಳಿಸುವನೋ, ಅವನೇ ಎಲ್ಲಾ ರೀತಿಯಿಂದ ಯೋಗ್ಯನೆನಿಸಿಕೊಳ್ಳುವನು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಸ ಸ್ಮಾ ಕೃಣೋತಿ ಕೇತುಮಾ ನಕ್ತಂ ಚಿದ್ದೂರ ಆ ಸತೇ ।**
**ಪಾವಕೋ ಯದ್ವನಸ್ಪತೀನ್ ಪ್ರ ಸ್ಮಾ ಮಿನಾತ್ಯಜರಃ ॥೪॥**

**ಪದಾರ್ಥ:-** [ಯತ್] ಯಾವನು [ಅಜರಃ] ನಾಶರಹಿತನು [ಪಾವಕಃ] ಪವಿತ್ರಗೊಳಿಸುವವನು [ವನಸ್ಪತೀನ್] ವನಪಾಲಕರನ್ನು [ಸ್ಮಾ] ಅವರ ಅನುಕರಣೆಯನ್ನು [ಆ, ಕೃಣೋತಿ] ಮಾಡುವನು [ನಕ್ತಂ] ರಾತ್ರಿಯಲ್ಲಿ [ಚಿತ್] ಹಾಗೂ [ದೂರೇ] ದೂರದೇಶದಲ್ಲಿ [ಸತೇ] ಸತ್ಪುರುಷರಿಗಾಗಿ [ಕೇತುಂ] ಬುದ್ಧಿದಾಯಕನಾಗಿ ತಾನೂ ದೂರದಲ್ಲೇ

ಇದ್ದು [ಸ್ಮಾ] ದುಷ್ಟ-ದೋಷಗಳನ್ನು [ಪ್ರ, ಆ, ಮಿನಾತಿ] ಎಲ್ಲಾ ರೀತಿಯಿಂದ ನಾಶಗೊಳಿಸುವನು [ಸಃ] ಅವನು ಎಲ್ಲರಿಂದಲೂ ಸತ ತನಾಗುವನು.

**ಭಾವಾರ್ಥ:-** ಮನುಷ್ಯರೇ! ವಿದ್ಯಾವಂತರೂ ದೂರದಲ್ಲಿದ್ದರೂ ಅವರು ಹಗಲು-ರಾತ್ರಿ-ಅಗ್ನಿ ವನಸ್ಪತಿಗಳಂತೆ ಪರೋಪಕಾರಿಗಳೇ ಆಗಿರುವರು. ಆದ್ದರಿಂದವರು ಈ ಪ್ರಪಂಚಕ್ಕೆ ಅಲಂಕಾರಪ್ರಾಯರಾಗಿರುವರು.

ವಿದ್ಯಾವಂತರ ವಿಷಯವಿಲ್ಲಿದೆ.

**ಅವ ಸ್ಮ ಯಸ್ಯ ವೇಷಣೇ ಸ್ವೇದಂ ಪಥಿಷು ಜುಹ್ವತಿ ।**
**ಅಭೀಮಹ ಸ್ವಜೇನ್ಯಂ ಭೂಮಾ ಪೃಷ್ಠೇವ ರುರುಹುಃ ॥೫॥**

**ಪದಾರ್ಥ:-** [ಯಸ್ಯ] ಯಾವನ [ವೇಷಣೇ] ವ್ಯಾಪ್ತವ್ಯವಹಾರಗಳ ನಿಮಿತ್ತ [ಪಥಿಷು] ಮಾರ್ಗಗಳಲ್ಲಿ [ಸ್ವೇದಂ] ವೀರ ಜಲವನ್ನು ಅಂದರೆ ಪರಿಶ್ರಮದ ಬೆವರನ್ನು [ಸ್ಮ] ಅದನ್ನೇ [ಅವ, ಜುಹ್ವತಿ] ಅಧೋಮುಖವಾಗಿ ಹರಿಸುವನು. [ಭೂಮಾ] ಭೂಮಿಯ [ಅಹ] ನಿಶ್ಚಿತವಾದ [ಸ್ವಜೇನ್ಯಂ] ತಾನು ಗೆಲ್ಲುವಂತಹ ಸ್ಥಾನವನ್ನು [ಪೃಷ್ಠೇವ] ಬೆನ್ನೆಲುಬಿನಂತೆ [ಅಭಿ, ರುರುಹುಃ] ಅಭಿವೃದ್ಧಿ ಪಡಿಸುವರು. [ಈಂ] ಅದೇರೀತಿ ನೀವೂ ಮಾಡಿರಿ.

**ಭಾವಾರ್ಥ:-** ಯಾವ ಮನುಷ್ಯರು ತನ್ನ ದಾರಿಯಲ್ಲಿ ವ್ಯಾಪ್ತವಾದ ವ್ಯವಹಾರಗಳನ್ನು ತಿಳಿದು ಅದನ್ನು ಸಾಧಿಸುವರೋ ಅವರು ಸುಖವನ್ನು ಪಡೆಯುವರು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ಯಂ ಮರ್ತ್ಯಃ ಪುರುಸ್ಪೃಹಂ ವಿದದ್ವಿಶ್ವಸ್ಯ ಧಾಯಸೇ ।**
**ಪ್ರ ಸ್ವಾದನಂ ಪಿತೂನಾ-ಮಸ್ತತಾತಿಂ ಚಿದಾಯವೇ ॥೬॥**

**ಪದಾರ್ಥ:-** [ಮರ್ತ್ಯಃ] ಮನುಷ್ಯನು [ಆಯವೇ] ಮನುಷ್ಯನಿಗಾಗಿ [ವಿಶ್ವಸ್ಯ] ಪ್ರಪಂಚದ [ಧಾಯಸೇ] ಧಾರಣಕ್ಕಾಗಿ [ಯಂ] ಯಾರನ್ನು [ಪುರುಸ್ಪೃಹಂ] ಬಹುಜನರಿಂದ ಪ್ರಶಂಸೆಗೆ ಯೋಗ್ಯವಾದ [ಪಿತೂನಾಂ] ಆಹಾರ ವಸ್ತುಗಳ [ಸ್ವಾದನಂ] ಸವಿಯನ್ನು [ಅಸ್ತತಾತಿಂ] ಗೃಹಸ್ಥನನ್ನು [ಚಿತ್] ಅದನ್ನೇ [ಪ್ರ, ವಿದತ್] ಪ್ರಾಪ್ತಿಗೊಳಿಸುವನು. ಅಂತಹವನನ್ನು ಪರೋಪಕಾರಕ್ಕಾಗಿ ಧಾರಣಮಾಡಬೇಕು.

**ಭಾವಾರ್ಥ:-** ಮನುಷ್ಯನು ಯಾವ ಯಾವ ಉತ್ತಮ ವಸ್ತು ಮತ್ತು ಜ್ಞಾನವನ್ನು ಪಡೆಯುವನೋ ಅವೆಲ್ಲವನ್ನೂ ಪರೋಪಕಾರಕ್ಕಾಗಿ ಧಾರಣ ಮಾಡಬೇಕು.

ರಾಜನ ವಿಷಯವಿಲ್ಲಿ ಹೇಳಿದೆ.

**ಸ ಹಿ ಷ್ಮಾ ಧನ್ವಾಕ್ಷಿತಂ ದಾತಾ ನ ದಾತ್ಯಾ ಪಶುಃ ।**
**ಹಿರಿಶ್ಮಶ್ರುಃ ಶುಚಿದ-ನ್ನೃಭುರನಿಭೃಷ್ಟತವಿಷಿಃ ॥೭॥**

(ಮಂಡಲ ೫, ಸೂಕ್ತ ೭, ಮಂತ್ರ ೭)

**ಪದಾರ್ಥ:-** **[ಹಿರಿಶ್ಮಶ್ರುಃ]** ಸುವರ್ಣದಂತೆ ಹೊಳೆಯುವ ಗಡ್ಡದ ಕೇಶ **[ಶುಚಿದನ್]** ಶುಚಿಯಾದದಂತ **[ಅನಿಭೃಷ್ಟತವಿಷಿಃ]** ದಗ್ಧವಾಗದ ಸೇನೆ ಯಾರಿಗಿದೆಯೋ ಅಂತಹ **[ಋಭುಃ]** ಮೇಧಾವಿಯು **[ದಾತಾ]** ದಾನಶೀಲನು **[ಪಶುಃ]** **[ನ]** ಪಶುವಿಗೆ ಸದೃಶವಾಗಿ **[ಧನ್ವ]** ಅಂತರಿಕ್ಷ **[ಆಷಿತಂ]** ಎಲ್ಲಾಕಡೆಗಳಿಂದಲೂ ಅವಿನಾಶಿಯು ಹೇಗೋ ಹಾಗೆ **[ಆ, ದಾತಿ]** ಗ್ರಹಣ ಮಾಡುವನು. **[ಸಃ, ಹಿ]** ಅವನೇ ನಿಶ್ಚಿತವಾಗಿ **[ಸ್ಮಾ]** ಸುಖಪೂರ್ವಕ ವೃದ್ಧಿ ಹೊಂದುವನು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾ ಮತ್ತು ಲುಪ್ತೋಪಮಾಲಂಕಾರಗಳಿವೆ. ದಾನಿಯಲ್ಲದವನೂ ಹೇಗೆ ಧಾನ್ಯಗಳನ್ನು ಕಟಾವು ಮಾಡಿಸಿ ಭೂಮಿಯಿಂದ ಬೇರೆಗೊಳಿಸುತ್ತಾನೋ, ಪಶುಗಳು ಹೇಗೆ ತಮ್ಮ ಸುಖಕ್ಕೆ ಗೊರಸುಗಳಿಂದ ಧಾನ್ಯಾದಿಗಳನ್ನು ತುಳಿದು ಸಸ್ಯ/ತೃಣದಿಂದ ಬೇರೆಗೊಳಿಸುತ್ತವೆಯೋ ಅದರಿಂದ ಅನ್ನಗ್ರಹಣ ಮಾಡುವರೋ ಹಾಗೆ ರಾಜಪುರುಷರು ಎಲ್ಲರ ಹಿತಕ್ಕಾಗಿ ದುಷ್ಟರನ್ನು ನಿರಂತರ ಪೀಡಿಸಬೇಕು.

**ಇಲ್ಲಿ ರಾಜಶಾಸನದ ವಿಷಯ ಹೇಳಿದೆ.**

**ಶುಚಿಃ ಷ್ಮ ಯಸ್ಮಾ ಅತ್ರಿವತ್ ಪ್ರ ಸ್ವಧಿತೀವ ರೀಯತೇ ।**
**ಸುಷೂರಸೂತ ಮಾತಾ ಕ್ರಾಣಾ ಯದಾನಶೇ ಭಗಮ್ ॥೮॥**

**ಪದಾರ್ಥ:-** **[ಯತ್]** ಯಾವುದು **[ಶುಚಿಃ]** ಪವಿತ್ರ **[ಕ್ರಾಣಾ]** ಗೊಳಿಸುವವಳಾಗಿ **[ಮಾತಾ]** ಮಾತೆಯು **[ಯಸ್ಮೈ]** ಯಾವನಿಗೆ **[ಸ್ವಧಿತೀವ]** ವಜ್ರಾಯುಧ ಧರಿಸಿದವನಂತೆ **[ಅತ್ರಿವತ್]** ಅವಿದ್ಯಮಾನ ಮೂರರಂತೆ **[ಸುಷೂಃ]** ಉತ್ತಮ ರೀತಿಯಲ್ಲಿ ಉತ್ಪಾದನೆಗೊಳಿಸುವವಳು **[ಅಸೂತ]** ಜನ್ಮಕೊಡುವಳು ಮತ್ತು **[ಪ್ರ, ರೀಯತೇ]** ಸಂಗತಳಾಗುವಳು **[ಸ್ಮ]** ಅವಳೇ **[ಭಗಂ]** ಸಂಪತ್ತನ್ನು **[ಆನಶೇ]** ಪಡೆಯುವಳು.

**ಭಾವಾರ್ಥ:-** ಈ ಮಂತ್ರದಲ್ಲಿ ಉಪಮಾಲಂಕಾರವಿದೆ. ಯಾವ ಜನನೀ ಜನಕರು ಬ್ರಹ್ಮಚರ್ಯವನ್ನಾಚರಿಸಿ ವಿವಾಹವಾಗುವರೋ ಅವರು ಉತ ಷ್ಟ ಸಂತಾನವನ್ನು ಪಡೆದು ಸುಖ-ಐಶ್ವರ್ಯಗಳನ್ನು ಅನುಭವಿಸುವರು.

**ಈ ಮಂತ್ರದಲ್ಲಿ ಅಗ್ನಿ ಪದ ವಾಚ್ಯ ವಿದ್ವದ್ವಿಷಯ ಹೇಳಲಾಗಿದೆ.**

**ಆ ಯಸ್ತೇ ಸರ್ಪಿರಾಸುತೇಽಗ್ನೇ ಶಮಸ್ತಿ ಧಾಯಸೇ ।**
**ಐಷು ದ್ಯುಮ್ನಮುತ ಶ್ರವ ಆ ಚಿತ್ತಂ ಮರ್ತ್ಯೇಷು ಧಾಃ ॥೯॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಯಃ]** ಯಾವನು **[ಧಾಯಸೇ]** ಧಾರಣೆ ಮಾಡುವವನಿಗೆ **[ತೇ]** ನಿನ್ನ **[ಸರ್ಪಿರಾಸುತೇ]** ಘೃತೋತ್ಪನ್ನ ಪದಾರ್ಥಗಳಲ್ಲಿ **[ಶಂ]** ಸುಖವು **[ಅಸ್ತಿ]** ಇದೆಯೋ ಅದನ್ನು ಗ್ರಹಣ ಮಾಡುವನು. **[ಏಷು]** ಈ **[ಮರ್ತ್ಯೇಷು]** ಮನುಷ್ಯರಲ್ಲಿ **[ದ್ಯುಮ್ನಂ]** ಯಶ ಮತ್ತು ಧನವನ್ನು **[ಆ, ಧಾಃ]** ಧಾರಣ ಮಾಡಿಸುವವನಾಗಿ **[ಶ್ರವಃ]** ಅನ್ನವನ್ನು **[ಆ]** ಧಾರಣ ಮಾಡಿಸುವನು **[ಉತ]** ಮತ್ತು **[ಚಿತ್ತಂ]** ಸಂಜ್ಞಾನವನ್ನು **[ಆ]** ಧಾರಣ ಮಾಡಿಸುವನು.

**ಭಾವಾರ್ಥ:-** ಯಾವನು ಯಾರಿಗಾದರೂ ವಿದ್ಯೆ, ಧನ, ಜ್ಞಾನಗಳನ್ನು ಧಾರಣ ಮಾಡಿಸಿದರೆ ಅವನು ಅನ್ಯರಿಗೆ ಉಪಕಾರ ಮಾಡಿ ಅನ್ಯರಿಂದಲೂ ಉಪಕಾರ ಮಾಡಿಸಿಕೊಳ್ಳಲು ಯೋಗ್ಯನಾಗುವನು.

ಈ ಮಂತ್ರದಲ್ಲಿ ಅಗ್ನಿ ಶಬ್ದವಾಚ್ಯ ರಾಜನ ವಿಷಯ ಹೇಳಿದೆ.

**ಇತಿ ಚಿನ್ಮನ್ಯುಮಧ್ರಿಜ-ಸ್ತ್ವಾದಾತಮಾ ಪಶುಂ ದದೇ ।**
**ಆದಗ್ನೇ ಅಪೃಣತೋಽತ್ರಿಃ ಸಾಸಹ್ಯಾದ್ದಸ್ಯೂ-ನಿಷಃ ಸಾಸಹ್ಯಾನ್ನೃನ್ ॥೧೦॥**

**ಪದಾರ್ಥ:-** [**ಅಗ್ನೇ**] ವಿದ್ವಾಂಸನೇ! [**ಅಧ್ರಿಜಃ**] ಧಾರಕರಲ್ಲಿ ಉತ್ಪನ್ನನಾದ ನೀನು [**ಮನ್ಯುಂ**] ಕೋಪವನ್ನು [**ಸಾಸಹ್ಯಾತ್**] ಸಹಿಸಿಕೊಳ್ಳುವವನಾಗು. [**ಅತ್ರಿಃ**] ಪುರುಷಾರ್ಥಿಯಾದ ನೀನು [**ಅಪೃಣತಃ**] ರಕ್ಷಕನಾಗದೆ [**ದಸ್ಯೂನ್**] ದುಷ್ಟಸಾಹಸ ಮಾಡುವವರನ್ನು [**ಸಾಸಹ್ಯಾತ್**] ಅತಿಶಯ ಸಹಿಸಿಕೊಳ್ಳುವವನಾಗು. [**ಆತ್**] ಎಲ್ಲ ಕಡೆಗಳಿಂದಲೂ [**ಇಷಃ**] ಇಚ್ಛೆಯನ್ನು [**ನೃನ್**] ನೀತಿವಂತರನ್ನೂ ಸಹಿಸಿಕೋ. [**ಇತಿ**] ಹೀಗಿರುವವನಾಗಿ [**ಚಿತ್**] ಅದನ್ನೇ [**ತ್ವಾದಾತ್**] ಅನ್ಯರಿಗೂ ದಾನ ಮಾಡಲು ಯೋಗ್ಯನು. [**ಪಶುಂ**] ಪಶುವನ್ನು [**ಆ, ದದೇ**] ನಾನು ಗ್ರಹಣ ಮಾಡುವೆನು.

**ಭಾವಾರ್ಥ:-** ರಾಜಾದಿಗಳು ರೂಪ-ದುಷ್ಟ ವ್ಯಸನಗಳನ್ನು ತ್ಯಜಿಸಿ ದುರ್ಜನರನ್ನು ಜಯಿಸಿ ಶ್ರೇಷ್ಠ ಪುರುಷರಿಗಾಗಿ ಅಪಮಾನವನ್ನೂ ಸಹಿಸಿಕೊಂಡು ಅಖಂಡಿತ ರಾಜ್ಯವನ್ನು ವಿಸ್ತರಿಸಬೇಕು.

ಈ ಸೂಕ್ತದಲ್ಲಿ ಸ್ನೇಹಭಾವ, ವಿದ್ಯಾವಂತರು, ರಾಜ ಮತ್ತು ಅಗ್ನಿ ಇವುಗಳ ಗುಣವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಹಿಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ಏಳನೆಯ ಸೂಕ್ತ ಸಮಾಪ್ತ

## ಸೂಕ್ತ ೮

ಮಂತ್ರಸಂಖ್ಯೆ ೭ । ಆತ್ರೇಯ ಋಷಿಃ । ಅಗ್ನಿರ್ದೇವತಾ । ೧, ೪ ಸ್ವರಾಟ್ತ್ರಿಷ್ಟುಪ್, ೨ ಭುರಿಕ್ತ್ರಿಷ್ಟುಪ್ ಛಂದಃ । ಧೈವತಃ ಸ್ವರಃ । ೩, ೪ ನಿಚೃಜ್ಜಗತೀ, ೬, ೭ ವಿರಾಡ್ಜಗತೀ ಛಂದಃ । ನಿಷಾದಃ ಸ್ವರಃ.

ಈ ಮಂತ್ರದಲ್ಲಿ ಅಗ್ನಿ ಶಬ್ದವಾಚಕ ಗೃಹಸ್ಥಾಶ್ರಮ ವಿಷಯ ಹೇಳಿದೆ.

**ತ್ವಾಮಗ್ನ ಋತಾಯವಃ ಸಮೀಧಿರೇ ಪ್ರತ್ನಂ ಪ್ರತ್ನಾಸ ಊತಯೇ ಸಹಸ್ಕೃತ ।**
**ಪುರುಶ್ಚಂದ್ರಂ ಯಜತಂ ವಿಶ್ವಧಾಯಸಂ ದಮೂನಸಂ ಗೃಹಪತಿಂ ವರೇಣ್ಯಮ್ ॥೧॥**

**ಪದಾರ್ಥ:-** [**ಸಹಸ್ಕೃತ**] ಬಲದಿಂದ ಉತ್ಪಾದಿಸಿದ [**ಅಗ್ನೇ**] ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮಕ್ಕೆ ಪದಾರ್ಪಣ ಮಾಡಿದವನೇ! [**ಪ್ರತ್ನಾಸಃ**] ಪ್ರಾಚೀನ ವಿದ್ಯೆಯನ್ನು ಪಡೆದವನೇ! [**ಋತಾಯವಃ**] ಸತ್ಯವನ್ನು ಬಯಸುವ ನೀನು [**ಊತಯೇ**] ರಕ್ಷಣಾದಿಗಳಿಗೆ [**ಪ್ರತ್ನಂ**] ಪ್ರಾಚೀನವಾದ [**ಪುರುಶ್ಚಂದ್ರಂ**] ಬಹು ಸುವರ್ಣವನ್ನು ಪಡೆದುಕೊಂಡು [**ಯಜತಂ**] ಆದರಾರ್ಹವಾದ [**ವಿಶ್ವಧಾಯಸಂ**] ಎಲ್ಲಾ ವ್ಯವಹಾರ, ಧನವನ್ನು ಧಾರಣಮಾಡಿ [**ದಮೂನಸಂ**] ಇಂದ್ರಿಯ, ಅಂತಃಕರಣಗಳನ್ನು ದಮನಮಾಡುವವನಾಗಿ [**ವರೇಣ್ಯಂ**] ಶ್ರೇಷ್ಠವಾದ [**ಗೃಹಪತಿಂ**] ಗೃಹಸ್ಥ ಧರ್ಮಪಾಲಕನಾಗು. [**ತ್ವಾಂ**] ನಿನ್ನನ್ನು [**ಸಂ, ಈಧಿರೇ**] ಉತ್ತಮ ರೀತಿಯಿಂದ ಪ್ರಕಾಶಿತನನ್ನಾಗಿ ಮಾಡುವೆವು; ನಾವೂ ಅದನ್ನೇ ಮಾಡುತ್ತೇವೆ.

**ಭಾವಾರ್ಥ:-** ಮನುಷ್ಯರೇ! ನೀವೆಲ್ಲರೂ ವಿದ್ಯಾದಾನಾದಿಗಳಿಂದ ನಮ್ಮನ್ನು ವೃದ್ಧಿಪಡಿಸುತ್ತೀರಿ. ಆದ್ದರಿಂದ ನಾವು ನಿಮ್ಮನ್ನು ಗೌರವಿಸುತ್ತೇವೆ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಾಮಗ್ನೇ ಅತಿಥಿಂ ಪೂರ್ವ್ಯಂ ವಿಶಃ ಶೋಚಿಷ್ಕೇಶಂ ಗೃಹಪತಿಂ ನಿ ಷೇದಿರೇ ।**
**ಬೃಹತ್ಕೇತುಂ ಪುರುರೂಪಂ ಧನಸ್ಪೃತಂ ಸುಶರ್ಮಾಣಂ ಸ್ವವಸಂ ಜರದ್ವಿಷಮ್ ॥೨॥**

**ಪದಾರ್ಥ:-** [ಅಗ್ನೇ] ಗೃಹಸ್ಥನೇ! [ವಿಶಃ] ಪ್ರಜೆಗಳೇ! [ಅತಿಥಿಂ] ಸದಾ ಸಂಚರಿಸುವವರಂತೆ ಇರುವ [ಪೂರ್ವ್ಯಂ] ಪ್ರಾಚೀನ ವಿದ್ಯೆಗಳನ್ನು ಪಡೆದ [ಶೋಚಿಷ್ಕೇಶಂ] ನ್ಯಾಯ ವ್ಯವಹಾರದಿಂದ ಬೆಳಗುತ್ತಿರುವ [ಬೃಹತ್ಕೇತುಂ] ಅತಿಶಯ ಬುದ್ಧಿವಂತರಾದ [ಪುರುರೂಪಂ] ಸುಂದರ ಶರೀರ ಪಡೆದ [ಧನಸ್ಪೃತಂ] ಧನವನ್ನು ಇಚ್ಛಿಸುವವರಾಗಿ [ಸುಶರ್ಮಾಣಂ] ಪ್ರಶಂಸಿತ ಗೃಹಗಳಲ್ಲಿ ನೆಲೆಸಿರುವ [ಸ್ವವಸಂ] ರಕ್ಷಣಾದಿ ವಸ್ತುಗಳನ್ನು ಪಡೆದಿರುವ [ಜರದ್ವಿಷಂ] ಶತ್ರುಗಳಿಲ್ಲದಂತೆ [ಗೃಹಪತಿಂ] ಗೃಹಸ್ಥ ಧರ್ಮ ಪಾಲನೆ ಮಾಡುವ [ತ್ವಾಂ] ನಿನ್ನನ್ನು [ನಿ, ಷೇದಿರೇ] ನೆಲೆಗೊಳಿಸುತ್ತೇವೆ.

**ಭಾವಾರ್ಥ:-** ಗೃಹಸ್ಥರು ಸದಾಪ್ರಜಾಪಾಲನ ಮಾಡಬೇಕು. ಅತಿಥಿಸೇವೆ ಮಾಡಬೇಕು. ಗೃಹಪತಿಯಾಗಿ ವಿದ್ಯೆಯ ಪ್ರಚಾರ ಮಾಡಬೇಕು. ಬುದ್ಧಿಯನ್ನು ಬೆಳೆಸಿಕೊಳ್ಳಬೇಕು. ರಾಗದ್ವೇಷಗಳನ್ನು ನಿರಂತರ ತ್ಯಾಗ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಾಮಗ್ನೇ ಮಾನುಷೀರೀಳತೇ ವಿಶೋ ಹೋತ್ರಾವಿದಂ ವಿವಿಚಿಂ ರತ್ನಧಾತಮಮ್ ।**
**ಗುಹಾ ಸಂತಂ ಸುಭಗ ವಿಶ್ವದರ್ಶತಂ ತುವಿಷ್ವಣಸಂ ಸುಯಜಂ ಘೃತಶ್ರಿಯಮ್ ॥೩॥**

**ಪದಾರ್ಥ:-** [ಸುಭಗ] ಶ್ರೇಷ್ಠ ಐಶ್ವರ್ಯಸಂಪನ್ನ [ಅಗ್ನೇ] ಅಗ್ನಿಯಂತಿರುವ [ಮಾನುಷೀ] ಮನುಷ್ಯವರ್ಗಕ್ಕೆ ಸೇರಿದ [ವಿಶಃ] ಪ್ರಜೆಗಳು [ಹೋತ್ರಾವಿದಂ] ಹವನಗುಣಗಳನ್ನರಿತ [ವಿವಿಚಿಂ] ಅದನ್ನು ವಿವೇಕ ಪೂರ್ವಕ ವಿಭಾಗಿಸುವ [ರತ್ನಧಾತಮಂ] ರತ್ನಗಳನ್ನುಧರಿಸಲು [ವಿಶ್ವದರ್ಶತಂ] ಪ್ರಪಂಚಕ್ಕೆ ಬೆಳಕನ್ನು ನೀಡುವ [ತುವಿಷ್ಮಣಸಂ] ಬಹು ಜನರ ಸೇವೆ ಮಾಡುವ [ಸುಯಜಂ] ಶ್ರೇಷ್ಠ ಯಜ್ಞಗಳನ್ನು ಮಾಡುವ [ಘೃತಶ್ರಿಯಂ] ಘೃತವನ್ನಾಶ್ರಯಿಸಿಕೊಂಡ [ಗುಹಾ] ಅಂತಃಕರಣದಲ್ಲಿ [ಸಂತಂ] ವ್ಯಾಪ್ತವಾಗಿರುವ [ತ್ವಾ] ನಿನ್ನನ್ನು [ಈಳತೇ] ಗುಣಗಳಿಂದ ಪ್ರಕಾಶಮಾನಗೊಳಿಸುವಳು.

**ಭಾವಾರ್ಥ:-** ಮನುಜರೇ! ಹೇಗೆ ಮಿಂಚಿನ ರೂಪಾಗ್ನಿಯಿಂದ ಜೀವವು ಜಾಗೃತವಾಗುತ್ತದೆಯೋ ಅದೇ ರೀತಿಯಿಂದ ರಾಜನನ್ನರಿತು ಸುಖಿಗಳಾಗಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಾಮಗ್ನೇ ಧರ್ಣಸಿಂ ವಿಶ್ವಧಾ ವಯಂ ಗೀರ್ಭಿರ್ಗೃಣಂತೋ ನಮಸೋಪ ಸೇದಿಮ ।**
**ಸ ನೋ ಜುಷಸ್ವ ಸಮಿಧಾನೋ ಅಂಗಿರೋ ದೇವೋ ಮರ್ತಸ್ಯ ಯಶಸಾ ಸುದೀತಿಭಿಃ ॥೪॥**

**ಪದಾರ್ಥ:-** [ಅಗ್ನೇ] ವಿದ್ಯಾವಂತನೇ! ನೀನು [ಗೀರ್ಭಿಃ] ಮಾತುಗಳಿಂದ [ಗೃಣಂತಃ] ಸ್ತುತಿಮಾಡುತ್ತ [ವಿಶ್ವಧಾ] ಪ್ರಪಂಚವನ್ನು ಧಾರಣ ಮಾಡಲು [ಧರ್ಣಸಿಂ] ಅನ್ಯಧಾರಕನನ್ನು [ತ್ವಾಂ] ನಿನ್ನನ್ನು [ನಮಸಾ] ಸತ್ಕಾರಕರ್ಮದಿಂದ [ಉಪ, ಸೇದಿಮ] ಸಮೀಪ ಸೇರುವೆವು. [ಅಂಗಿರಃ] ಅವಯವಗಳಲ್ಲಿ ರಮಣ ಮಾಡುತ್ತ [ಸಃ] ಅವನು [ದೇವಃ] ದಾನಶೀಲನು [ಸಮಿಧಾನಃ] ಪ್ರಕಾಶಮಾನನಾದ ನೀನು [ಮರ್ತಸ್ಯ] ಮನುಷ್ಯನ [ಸುದೀತಿಭಿಃ]

ಉತ್ತಮದಾನಗಳಿಂದ **[ಯಶಸಾ]** ಜಲ, ಅನ್ನ, ಧನಗಳಿಂದ **[ನಃ]** ನಮ್ಮನ್ನು **[ಜುಷಸ್ವ]** ಸೇವಿಸುವವನಾಗು. **[ವಯಂ]** ನಾವು ನಿನ್ನ ಸಮೀಪದಲ್ಲಿ ನೆಲೆಸುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಎಲ್ಲರ ಕರ್ತವ್ಯವೆಂದರೆ ಯಾರು ಯಾರನ್ನು ಯಾವಭಾವನೆಯಿಂದ ಸಮೀಪಿಸುವರೋ ಯಾವ ಭಾವದಿಂದ ಸೇವನೆ ಮಾಡುವರೋ ಅವರನ್ನು ಅದೇಭಾವದಿಂದ ಬರಮಾಡಿಕೊಳ್ಳಬೇಕು ಮತ್ತು ಸೇವನೆ ಮಾಡಬೇಕು.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಮಗ್ನೇ ಪುರುರೂಪೋ ವಿಶೇವಿಶೇ ವಯೋ ದಧಾಸಿ ಪ್ರತ್ನಥಾ ಪುರುಷ್ಟುತ ।**
**ಪುರೂಣ್ಯನ್ನಾ ಸಹಸಾ ವಿ ರಾಜಸಿ ತ್ವಿಷಿಃ ಸಾ ತೇ ತಿತ್ವಿಷಾಣಸ್ಯ ನಾಧೃಷೇ ॥೫॥**

**ಪದಾರ್ಥ:-** **[ಪುರುಷ್ಟುತ]** ಬಹುಜನರಿಂದ ಪ್ರಶಂಸಿತನಾದ **[ಅಗ್ನೇ]** ರಾಜನೇ! **[ವಿ, ರಾಜಸಿ]** ನೀನು ವಿಶೇಷರೀತಿಯಿಂದ ಪ್ರಕಾಶಮಾನನಾಗಿರುವೆ. **[ಸಾ]** ಅವಳು **[ತಿತ್ವಿಷಾಣಸ್ಯ]** ಅಗ್ನಿಯಂತೆ ವಿದ್ಯಾಪ್ರಕಾಶಮಾನನಾದ **[ತೇ]** ನಿನ್ನ **[ತ್ವಿಷಿಃ]** ತೇಜಸ್ಸು ಇದೆಯೋ ಅದು **[ಆಧೃಷೇ]** ಎಲ್ಲ ರೀತಿಯ ಧಾರ್ಷ್ಟ್ಯ ಪಡೆಯಲು **[ನ]** ಹೇಗೋ ಹಾಗೆ **[ವಿಶೇ ವಿಶೇ]** ಪ್ರತಿಯೊಬ್ಬ ಪ್ರಜೆಗಾಗಿ **[ಪುರೂಣಿ]** ವಿಪುಲವಾದ **[ಅನ್ನಾ]** ಅನ್ನವನ್ನು ಧಾರಣ ಮಾಡುವಳು **[ತ್ವಂ]** ನೀನು ಪ್ರಜೆಗಳಿಗಾಗಿ **[ಪುರುರೂಪಃ]** ಅತಿಶಯ ರೂಪವಂತನಾಗಿ **[ಪ್ರತ್ನಥಾ]** ಪ್ರಾಚೀನರಂತೆ **[ಸಹಸಾ]** ಬಲದಿಂದ **[ವಯಃ]** ಜೀವನವನ್ನು **[ದಧಾಸಿ]** ಧಾರಣ ಮಾಡಿರುವೆ.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಅಗ್ನಿಯು ಹೇಗೆ ಸಮಗ್ರ ಜಗತ್ತನ್ನೇ ಧಾರಣ ಮಾಡುವನೋ ಹಾಗೆ ನೀವು ಸಮಗ್ರ ವಿದ್ಯೆಯನ್ನು ಧಾರಣ ಮಾಡಿರಿ.

ಪುನಃ ಅದೇ ವಿಷಯವನ್ನು ಹೇಳಲಾಗುತ್ತದೆ.

**ತ್ವಾಮಗ್ನೇ ಸಮಿಧಾನಂ ಯವಿಷ್ಠ್ಯ ದೇವಾ ದೂತಂ ಚಕ್ರಿರೇ ಹವ್ಯವಾಹನಮ್ ।**
**ಉರುಜ್ರಯಸಂ ಘೃತಯೋನಿಮಾಹುತಂ ತ್ವೇಷಂ ಚಕ್ಷುರ್ದಧಿರೇ ಚೋದಯನ್ಮತಿ ॥೬॥**

**ಪದಾರ್ಥ:-** **[ಯವಿಷ್ಠ]** ಯುವಜನರಲ್ಲಿ ಶ್ರೇಷ್ಠನೇ! **[ಅಗ್ನೇ]** ವಿದ್ಯಾವಂತನೇ! **[ದೇವಾಃ]** ಹೇಗೆ ವಿದ್ಯಾವಂತರು **[ಹವ್ಯವಾಹನಂ]** ಗ್ರಹಣಯೋಗ್ಯ ವಾಹನವನ್ನು **[ಉರುಜ್ರಯಸಂ]** ಬಹುವೇಗವಿರುವ **[ಘೃತಯೋನಿಂ]** ಜಲ, ಬೆಳಗುತ್ತಿರುವ ಅಥವಾ ಮನೆಯೇ ಕಾರಣನಾದವನ **[ಆಹುತಂ]** ಶಬ್ದಾಯಮಾನವಾದ **[ತ್ವೇಷಂ]** ಬೆಳಕನ್ನು ಹಾಗೂ **[ಚೋದಯನ್ಮತಿಂ]** ಬುದ್ಧಿಯನ್ನು ಪ್ರೇರೇಪಿಸುವವನ್ನು ಮತ್ತು **[ಚಕ್ಷುಃ]** ಪದಾರ್ಥಗಳ ಗೋಚರಗೊಳಿಸುವ **[ಸಮಿಧಾನಂ]** ಪ್ರಜ್ವಲಿಸುವ ಅಗ್ನಿಯನ್ನು **[ದಧಿರೇ]** ಧಾರಣ ಮಾಡು. **[ದೂತಂ]** ವ್ಯವಹಾರಸಾಧಕ ಕಾರ್ಯವನ್ನು **[ಚಕ್ರಿರೇ]** ಮಾಡುತ್ತಾರೆ. ಅದರಂತೆ **[ತ್ವಾಂ]** ನಿನ್ನನ್ನು ಧಾರಣ ಮಾಡುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರು ವಿದ್ಯಾವಂತರ ಸಂಗ ಮಾಡದೇ ಅಗ್ನಿಯ ಗುಣವನ್ನಾಗಲೀ ಅಗ್ನಿಸಯುಕ್ತ ಪದಾರ್ಥಗಳ ಗುಣವನ್ನಾಗಲೀ ತಿಳಿಯಲು ಸಾಧ್ಯವಿಲ್ಲ.

ವಿದ್ಯಾವಂತರ ವಿಷಯವಿಲ್ಲಿ ಹೇಳಿದೆ.

**ತ್ವಾಮಗ್ನೇ ಪ್ರದಿವ ಆಹುತಂ ಘೃತೈಃ ಸುಮ್ನಾಯವಃ ಸುಷಮಿಧಾ ಸಮೀಧಿರೇ ।**
**ಸ ವಾವೃಧಾನ ಓಷಧೀಭಿರುಕ್ಷಿತೋ (ಽ) ಭಿ ಜ್ರಯಾಂಸಿ ಪಾರ್ಥಿವಾ ವಿ ತಿಷ್ಠಸೇ ॥೭॥**

**ಪದಾರ್ಥ:-** **[ಅಗ್ನೇ]** ವಿದ್ಯಾವಂತನೇ! **[ಸುಮ್ನಾಯವಃ]** ನನ್ನ ಸುಖವನ್ನು ಇಚ್ಛಿಸುವವನು **[ಘೃತೇ]** ಪ್ರಕಾಶಗೊಳಿಸುವ ಸಾಧನಗಳಿಂದ **[ಸುಷಮಿಧಾ]** ಪ್ರಕಾಶಗೊಳಿಸುವ ಇಂಧನದಿಂದ **[ಪ್ರದಿವಃ]** ಪ್ರಕೃಷ್ಟ ಬೆಳಕಿನಿಂದ **[ಆಹುತಂ]** ಗ್ರಹಣ ಮಾಡಿದವನನ್ನು **[ಸಂ, ಈಧಿರೇ]** ಉತ್ತಮ ರೀತಿಯಲ್ಲಿ ಬೆಳಗುಸುತ್ತೀಯೆ. **[ಸಃ]** ಅವನು **[ವಾವೃಧಾನಃ]** ವೃದ್ಧಿಹೊಂದಿದವನಾಗಿ **[ಉಕ್ಷಿತಃ]** ಆಸೇಚನ ಮಾಡುವ ನೀನು **[ಓಷಧೀಭಿಃ]** ಸೋಮಲತೇ/ ಧಾನ್ಯಗಳಿಂದ **[ಪಾರ್ಥಿವಾ]** ಪೃಥ್ವಿಗೆ ಸಂಬಂಧಿಸಿದ ಪದಾರ್ಥಗಳಿಂದ **[ಅಭಿ]** ಎಲ್ಲಾ ಕಡೆಗಳಿಂದ **[ಜ್ರಯಾಂಸಿ]** ವೇಗಯುಕ್ತ ಕರ್ಮಗಳನ್ನು **[ವಿ, ತಿಷ್ಠಸೇ]** ವಿಶೇಷ ರೀತಿಯಲ್ಲಿ ಸ್ಥಿರಗೊಳಿಸುವೆ. **[ತ್ವಾಂ]** ಅಂತಹ ನಿನ್ನನ್ನು ನಾವು ಸುಖದಲ್ಲಿ ಸ್ಥಿರಗೊಳಿಸುವೆವು.

**ಭಾವಾರ್ಥ:-** ಈ ಮಂತ್ರದಲ್ಲಿ ವಾಚಕಲುಪ್ತೋಪಮಾಲಂಕಾರವಿದೆ. ಮನುಷ್ಯರೇ! ವಿದ್ಯಾವಂತರು ಎಲ್ಲಾ ಪದಾರ್ಥಗಳಿಂದಲೂ ವಿದ್ಯುತ್ತನ್ನೂ ಉತ್ಪಾದಿಸುವರೋ ಹಾಗೆಯೇ ಎಲ್ಲಾ ಪದಾರ್ಥಗಳಿಂದಲೂ ಅವುಗಳ ಗುಣವನ್ನೂ ಸ್ವೀಕರಿಸುವರು.

ಈ ಸೂಕ್ತದಲ್ಲಿ ಅಗ್ನಿ ಮತ್ತು ವಿದ್ವಾಂಸರ ಗುಣಗಳ ವರ್ಣನೆ ಇರುವುದರಿಂದ ಈ ಸೂಕ್ತಾರ್ಥವು ಇಂದಿನ ಸೂಕ್ತಾರ್ಥದೊಂದಿಗೆ ಸಂಗತವಾಗಿರುತ್ತದೆ.

ಎಂಟನೆಯ ಸೂಕ್ತ ಸಮಾಪ್ತ

## ಇತಿ ಅಷ್ಟಮೋಽಧ್ಯಾಯಃ

# ॥ ಇತಿ ತೃತೀಯೋಽಷ್ಟಕಃ ॥

# ವಿಪತ್ತುಗಳೆಂಬ ಕಲ್ಲುಬಂಡೆಗಳ ಜಗನ್ನದಿ

ಅಶ್ಮನ್ವತೀ ರೀಯತೇ ಸಂ ರಭಧ್ವ-
ಮುತ್ತಿಷ್ಠತ ಪ್ರ ತರತಾ ಸಖಾಯಃ ।
ಅತ್ರಾ ಜಹಾಮ ಯೇ ಅಸನ್ನಶೇವಾಃ
ಶಿವಾನ್ ವಯಮುತ್ತರೇಮಾಭಿ ವಾಜಾನ್ ॥

(ಋಕ್: ೧೦.೫೩.೮)

'ವಿಪತ್ತುಗಳೆಂಬ ಕಲ್ಲುಬಂಡೆಗಳಿಂದ ತುಂಬಿದ
ಜಗನ್ನದಿಯು ಹರಿಯುತ್ತಿದೆ.
ಮಿತ್ರರೇ! ಒಟ್ಟಾಗಿರಿ! ಏಳಿರಿ!! ದಾಟಿರಿ!!!
ಕೆಟ್ಟದ್ದೆಲ್ಲವನ್ನು ಇಲ್ಲಿಯೇ ಬಿಟ್ಟುಬಿಡೋಣ.
ಒಳ್ಳೆಯದನ್ನು ಮಾತ್ರ ಹಿಡಿದು ಪಾರಾಗೋಣ."



560 010. 080-2312 3141